**ಗಾರುಗಾರು** (ನಾ). ಒಂದು ಅನುಕರಣಧ್ವನಿ: ತಾರೆಗಳ ರೂಪಳಿ ವೃತಿರ್ದವು ಗಾರುಗಾರೆನುತಿರಲು ಖಗಗಳು (ಅರಿಕ. ೧೨೦-೫).

**ಗಾರುಗೆಡು** ‘ ಗಾಱುಂಗೆಡು ’ ನೋ.

**ಗಾರುಗೊಳಿಸು** (ಕ್ರಿ). ಕಷ್ಟಪಡಿಸು; ಸಂಕಟಗೊಳಿಸು: ನಾರಿಯಳ ನಾನೋಪಚಾರದಿಂ ಕರತಂದು ಗಾರುಗೊಳಿಸಲು ದೋಷಿ ದುರ್ಗತಿಯ ಥಾಸಂ (ವಚಹೂ. ೯-೦೮); ವಿಚಿತ್ರ ವಿಮುಖತೆಯೇಕೆ ತೋರುತಿರುವೆ, ಥಕ್ತರನು ಇಂತೇಕೆ ಗಾರುಗೊಳಿಸುತಿಹೆ! (ವಿಶೀಗೀ. ೯೬-೦೨).

[ ಗಾರಂ (<ಗಾಱು) + ಕೊಳ್$_1$ + – ಇಸು$_8$ ]

**ಗಾರುಗೊಳ್ಳು** (ಕ್ರಿ). ಹಿಂಸೆಪಡು; ಸಂಕಟಗೊಳ್ಳು; ಪರಿತಪಿಸು: ಅಗಲಿಕೆಯ ನೋವಿನಿಂದ ಮನಸ್ಸು ಗಾರುಗೊಂಡಿತ್ತು (ಅಲಹೂ. ೭೮). ‘ ಗಾರುಗೊಳಿಸು ’ ಪರಾ.

[ ಗಾರು (<ಗಾಱು) + ಕೊಳ್ಳು$_1$ (<ಕೊಳ್$_1$) ]

**ಗಾರುಡ** (ನಾ). ೧. ಗರುಡನಿಗೆ ಸಂಬಂಧಿಸಿದುದು, — ಸೇರಿದುದು. ೨. ಗರುಡಮಂತ್ರ; ಹಾವುಗಳನ್ನು ವಶಪಡಿಸಿಕೊಳ್ಳುವ ಮಂತ್ರ, — ವಿದ್ಯೆ: ಸೌಂದರಿಮಹಾದೇವಿ ನುಡಿದ ನುಡಿಗಳಂ ಕೋಟಿಪಾವು ಗಾರುಡಮಂ ಕೇಳದಂತೆ ಕೇಳದಿರೆ ಬೇಸತ್ತು (ಧರ್ಮಾಮೃ. ೨-೧೦೨); ಮೇದರೊಳಲ್ಲದೆ ವಂಶಚ್ಛೇದಂ ಗಾರುಡದೊಳಲ್ಲದಹಿತತ್ತ್ವಂ . . . ಇಲ್ಲಾ ನಾಡೊಳ್ (ಕಾವ್ಯಸಾ. ೯೯). ೩. ಗರುಡಮಂತ್ರವನ್ನು ಬಲ್ಲವನು; ಹಾವಾಡಿಗ: ಹಾವು ಸಾಯದು ಕೋಲು ಮುಱಿಯದು ಹಾವು ಹೋಹ ಪರಿ ಇನ್ನೆಂತಯ್ಯಾ ಅದು ಗಾರುಡಂಗಲ್ಲದೆ ಗಾವಿಲಗಂಜದು (ಮೋಳಿಮಾ. ೦೦೯-೪೩೬). ೪. ಕಣ್ಕಟ್ಟು; ಯಕ್ಷಿಣೀವಿದ್ಯೆ; ಇಂದ್ರಜಾಲ: ಹೋರಬೇಡಿದಱೊಡನೆ ಶಸ್ತ್ರದ ಗಾರುಡವು ಗರ್ವಿಸದು (ತೊರರಾ. ೫-೬-೪೪); ಅನಂತಕಾಲ ಎನ್ನ ಒಡಲ ಮಱೆಯೊಳಗೆ ಅಡಗಿರ್ದು ಎನಗೆ ಕಾಣಿಸದೆ ಇದ್ದುದು ಇದೇನು ನಿಮ್ಮ ಗಾರುಡವಯ್ಯ (ಅಖಂಡೇ. ೪-೫); ಇನ್ನು ಪಲ ತೆರನಾದ ಗಾರುಡವನ್ನು ತೋರಿಸಿ . . . ಹೆಣನೆದ್ದು ನಡೆವುದ ತೋರಿದನು ಬಸವ (ಬಿಜ್ಜಪು. ೫೯-೪೪). ೫. ಯಕ್ಷಿಣಿಗಾರ; ಐಂದ್ರಜಾಲಿಕ: ಆತನೊಂದಿನದೋಲಗದೊಳನುವಾತ ಸಮಯದಿ ಬಂದ ಗಾರುಡನೋರ್ವನೆದುರಿನಲಿ (ಬಿಜ್ಜಪು. ೪೦-೦೪). ೬.=ಗಾರುಡಮಣಿ: ಪರಿಪೂರ್ಣೋಜ್ವಲ ಚಂದ್ರಬಿಂಬರುಚಿಯಿಂ ಚಂದ್ರ ಪುಭಾ.ಪು ಷ್ಪ ದಂತರೆನಲ್ ಗಾರುಡ ನೀಲ ಶೋಣಮಣಿ ಹೇಮಚ್ಛಾಯೆಯಿಂದಿರ್ಪ ತಿರ್ಬರೆನಲ್ (ಆದಿಪು. ೧೬-೫). ೭.=ಗಾರುಡಪುರಾಣ: ವಿಷ್ಣು, ಭಾಗವತ, ನಾರದ, ಗಾರುಡ ಈ ನಾಲ್ಕು ಪುರಾಣಗಳು ವೈಷ್ಣವಗಳು (ಭಾರದ. ೦೩೬). [ ಸಂ. ]

**ಗಾರುಡಕ** (ನಾ). ವಂಚನೆ; ಮೋಸ; ಕಪಟ: ಜಾತಿಯಿಲ್ಲದೆ ಬಣಗು ಜನ ರಣಕಾತು ನಿಲುವರೆ ಗಾರುಡಕದಲಿ (ಬಿಜ್ಜಪು. ೬೦-೫೧). [ ಸಂ. ]

**ಗಾರುಡಕರ್ಮ** (ನಾ). ಗರುಡಮಂತ್ರವನ್ನು ಪ್ರಯೋಗಿಸಿ ಹಾವುಗಳನ್ನು ಹಿಡಿಯುವುದು; ಸರ್ಪಗಳನ್ನು ವಶಪಡಿಸಿಕೊಳ್ಳುವ ಕೆಲಸ,- ಮಂತ್ರಮುಗ್ಧವನ್ನಾಗಿ ಮಾಡುವುದು: ಪನ್ನಗಂಗಳು ಮೇಲೆ ಗಾರುಡಕರ್ಮದಿಂದಂ ನುಡಿಯಲಱಿಯದಡೆ (ಬಸಪು. ೪೬-೨೯).

[ ಗಾರುಡ + ಕರ್ಮ ]

**ಗಾರುಡಗೊಡು** (ಕ್ರಿ). ಮಾಯೆಯನ್ನುಂಟುಮಾಡು; ಕಣ್ಣುಕಟ್ಟು ವಿದ್ಯೆಯನ್ನು ತೋರಿಸು: ಕಟ್ಟೆನೆನುತಲಿ ಬಸವ ಗಾರುಡಗೊಟ್ಟು ಬಹುರೂಪಾದ (ಬಿಜ್ಜಪು. ೦೦೪-೬೦). [ ಗಾರುಡ + ಕೊಡು$_1$ ]

**ಗಾರುಡತನ** (ನಾ). ಇಂದ್ರಜಾಲ; ಯಕ್ಷಿಣೀವಿದ್ಯೆ; ಮಾಯಾವಿತನ: “ ಮಾಯೆ=ಇಂದ್ರಜಾಲ, ಗಾರುಡತನ, ಸುಳ್ಳು ” (ಗಂಗಾಮ. ೨೫೫).

[ ಗಾರುಡ + – ತನ ]

**ಗಾರುಡಪುರಾಣ** (ನಾ). ಹದಿನೆಂಟು ಪುರಾಣಗಳಲ್ಲಿ ಒಂದು ಗರುಡಪುರಾಣ: ಬ್ರಹ್ಮಪುರಾಣ . . . ಗಾರುಡಪುರಾಣ ಬ್ರಹ್ಮಾಂಡ; ಪುರಾಣ (ವಿವೇಕ. ೬). [ ಗಾರುಡ + ಪುರಾಣ ]

**ಗಾರುಡಮಂತ್ರ** (ನಾ). ಹಾವನ್ನು ವಶಪಡಿಸಿಕೊಳ್ಳುವ ಹಾಗೂ ಅದರ ವಿಷವನ್ನು ಪರಿಹರಿಸುವ ಮಂತ್ರ: ಗಾರುಡಮಂತ್ರೌಷಧಿಗಳ ಕಾರಣದಿಂ ಬಂದುದಲ್ತು ಮಜ್ಜೀವಂ (ದಶಕು. ೯-೦೦೫); ಗಾರುಡಮಂತ್ರ ಸಿದ್ಧನುದಾತ್ತನೊಬ್ಬನು ಬಂದಕಟಕಟೆನುತ್ತ ಮಱುಗುತ ಸರ್ಪದಷ್ಟದ ಭಾವಮಂ ನೋಡಿ (ಬಸಪು. ೪೬-೩೪).

[ ಗಾರುಡ + ಮಂತ್ರ ]

**ಗಾರುಡಮಣಿ** (ನಾ). ೧. ಒಂದು ಬಗೆಯ ವಿಷಾಪಹಾರಕ ರತ್ನ. ೨. ಪಚ್ಚೆ; ಮರಕತ: ಘನದೂರ್ವಾಸಕ್ತಿಯಂ ಗಾರುಡಮಣಿರುಚಿಯೊಳ್ ದಾವವಿಭ್ರಾಂತಿಯಂ ಕಾಂಚನಭಿತ್ತಿವ್ರಾತದೊಳ್ (ಚಂದ್ರಪು. ೦-೧೪೬); ಗಾರುಡಮಣಿರಚಿತ ಚತುರ್ದ್ವಾರಂ . . . ಸೊಗಯಿಸುಗುಂ (ಪಾರ್ಶ್ವಪು. ೧೬-೬೪). [ ಗಾರುಡ + ಮಣಿ$_3$ ]

**ಗಾರುಡರಕ್ಷೆ** (ನಾ). ಗರುಡಮಣಿಯಿಂದ ಒದಗುವಂಥ ರಕ್ಷಣೆ; ಬಲವಾದ ರಕ್ಷೆ: ಅಭಯ ಗಾರುಡರಕ್ಷೆ ಇಲ್ಲಿ; ಮಲ್ಲಿಗೆ ಜಾಜಿ ಸಂಪಗೆಯ ಕಂಪೂಗೆವ ಮೋಹಬೇಲಿ (ನಡಬಂ. ೪೧).

[ ಗಾರುಡ + ರಕ್ಷೆ ]

**ಗಾರುಡವಾದಿ** (ನಾ).=ಗಾರುಡಿಗ: ಗಾರುಡವಾದಿ ತಾಂತ್ರಿಕರು ತವೆ ನಿವೃತ್ಯಾದಿಗಳ ತತ್ವಂಗಳಲಿ ತಾವಿರುತಿಹರು (ಗಗಕಾ. ೮-೬೬).

[ ಸಂ. ಗಾರುಡವಾದಿನ್ ]

**ಗಾರುಡವಿದ್ಯ** (ನಾ).=ಗಾರುಡಿ ೨: ಚರಿಪ ಜಾತಿಯ ತೋರಿಯಲ್ಲೆಲ್ಲಿರುವ ದಾಗಾ ಶಿವಗೆ ದೋಷಂಬರಿಗೆ ದೋಷೇಂ ತೋರೆ ಗಾರುಡವಿದ್ಯದಿಂ ಬಸವ (ಬಿಜ್ಜಪು. ೫೯-೪೩). [ ಗಾರುಡ + ವಿದ್ಯ ]

**ಗಾರುಡಶಿಲೀಮುಖ** (ನಾ). ಗರುಡಾಸ್ತ್ರ: ಬೀಭತ್ಸು ತುಡುಕಿದಂ ಮುಳಿದಮಂ ಗರಳವಿಶಿಖವನುಗಿದನಾ ನರಂ ಗಾರುಡಶಿಲೀಮುಖವನು (ಜೈಮಿಭಾ. ೧೩-೦೫). [ ಗಾರುಡ + ಶಿಲೀಮುಖ ]

**ಗಾರುಡಿ** (ನಾ). ೧. ಗರುಡಸಂಬಂಧವಾದ ವಿದ್ಯೆ; ಸರ್ಪವಶೀಕರಣ ವಿದ್ಯೆ. ೨ ಯಕ್ಷಿಣೀವಿದ್ಯೆ; ಇಂದ್ರಜಾಲ: ಸೌಂದರ್ಯದ ಮಾಯೆಯನ್ನು ಎಂದರೆ ಅದರ ಗಾರುಡಿಯನ್ನು . . . ವೇದದ ಋಷಿ ಗುರುತಿಸಿ ಹಾಡಿರುವುದನ್ನು ಗಮನಿಸಬಹುದು (ಸೌಂದಸ. ೯೫); ಯಾವ ಗಾರುಡಿಯಿಂದಲೊ . . . ಭಟ್ಟರ ನಿಜವಾದ ಇಂಗಿತ ಕಂಡುಕೊಂಡಳು (ಹೊಸಕ್ಷ. ೫೮); ನುಡಿಯ ಗಾರುಡಿಯಲ್ಲಿ . . . ಯಾವದೋ ಒಂದು ಸೆಳೆತವಿದೆ (ಶರೀಫ. 1 ಕೊದಲಮಾತು). [ ಸಂ. ಗಾರುಡೀ ]

**ಗಾರುಡಿಕ** (ನಾ).=ಗಾರುಡಿಗ ೨. [ ಸಂ. ]

**ಗಾರುಡಿಗ** (ನಾ). ೧. ಗಾರುಡವಿದ್ಯೆಯನ್ನು ಬಲ್ಲವನು: ಹಾವು ಹಿಡಿಯುವ ವಿದ್ಯೆಯನ್ನು ಕಲಿತಿರುವವನು. ೨. ಹಾವು ಕಚ್ಚಿದರೆ ಗುಣಪಡಿಸುವವನು; ವಿಷವೈದ್ಯ: “ ವಿಷವೈದ್ಯೋ ಜಾಂಗುಲಿಕಃ ಈ ೨ ಗಾರುಡಿಗನ ಹೆಸರು ” (ನಾಚಿರಾ. ೯೯); ಗರುಡನಾಭಿಯೆಂಬ ಗಾರುಡಿಗಂ ತತ್ಕನ್ಯಕೆಯಾಯುಷ್ಯಂ ಬರ್ಪಂತೆ ಬಂದು (ಸುಕುಮಾ. ೬-೮ ವ); ನಾಗಮತಮಂತ್ರದಿಂದಾನಾಗಳ್ ವಿಷಮಂ ನಿರಂತರಂ ಸ್ತೋಭಿಸಿ ನಾನಾಗಾರುಡಿಗರ್ಗಸದಳಮಾಗಲ್ ಮಾಟ್ಪೆಂ (ದಶಕು. ೯-೯೩): ಒಡಲೆಂಬ ಹುತ್ತಕ್ಕೆ ನಂಡಿವ ನಾಲಿಗೆ ಸರ್ಪ ಕಡುರೋಷವೆಂಬ ವಿಷವೇಱೆ ಸವಂತೆ ಗಾರುಡಿಗನಂತಕ್ಕು (ಸರ್ವಜ್ಞ. ೫೦೪). ೩. ಯಕ್ಷಿಣಿಗಾರ; ಐಂದ್ರಜಾಲಿಕ: ಮುಂದಿನ ಆಟ ಗಾರುಡಿಗರದು (ಹಾಲಿಮು. ೦೨೦).

[ ಗಾರುಡ + – ಇಗ ]

**ಗಾರುಡಿಗತನ** (ನಾ).=ಗಾರುಡಿ ೧: ಪಣದಾಸೆಗೆ ಈ ಹುಸುವನಾಡುಸಿ ಬೇಡಿಸಿ ಕೂಡಿಸುವ ಗಾರುಡಿಗತನವಂ ಕಂಡೊರೆದ ಜೋಗಿಯ ಜಾಣಂ (ರಾಮಾಶ್ವ. ೧೨೩-೬). [ ಗಾರುಡಿಗ + – ತನ ]

**ಗಾರುಡಿಗಿತ್ತಿ** (ನಾ). ಗಾರುಡವಿದ್ಯೆಯನ್ನು ಬಲ್ಲವಳು ; ಮಂತ್ರವಾದಿನಿ : " ಯಕ್ಷಿಣೀ–ಗಾರುಡಿಗಿತ್ತಿ " (ಕಾಶಕ್ಕ. ೨೬೨). [ ಗಾರುಡಿಗ + – ಇತ್ತಿ ]

**ಗಾರುಡಿಸು** (ಕ್ರಿ). ೧. ಹಾವಿನ ವಿಷ ಇಳಿಯುವಂತೆ ಮಂತ್ರಹಾಕು : ನಭವಂ ವಿಷಂ ಮುಟ್ಟಿತೆಂದು ಗಾರುಡಿಪಂತೆ (ಉದ್ಭ.ಕ. ಜೀ. ೩೦೫-೯). ೨. ಮಂಕು ಕವಿಸು ; ವಶಪಡಿಸಿಕೊಳ್ಳು : ನುಡಿಯನಡಗಿಸು ಕೋಕಿಲನ ಗಾರುಡಿಸು ವಿಷಯವಿಷಾಹಿಯನು (ತೊರವೆ. ೬-೪-೧೮). ೩. ಬುದ್ಧಿ ಹೇಳು ; ಒಳ್ಳೆಯ ಮಾತನಾಡು : ಬಳಿಕವರು ಭೀಮನ ಕರೆದು ಗಾರುಡಿಸಿ ಕೇಳುವನು ಹೃಯೆಂದು (ಕುಮಾ.ಭ. ೬-೩). [ ಗಾರುಡ + – ಇಸು$_3$ ]

**ಗಾರುಡೌಷಧ** (ನಾ). ಗಾರುಡಿಗನ ಔಷಧಿ ; ಸರ್ವವಿಷಹರವಾದ ಮೂಲಿಕೆ : ಗಾರುಡೌಷಧ ಮಂತ್ರತಂತ್ರಕ್ಕೆ ಪರಮಮೃತ್ಯುವದುಳಿಯ ತದ್ವಿಷ ಪರಿಹರಿಸುವುದು (ಬಸವು. ೪೬-೨೬). [ ಗಾರುಡ + ಔಷಧ ]

**ಗಾರುಧ್ವನಿ** (ನಾ). (ಕೂಗಿಕೂಗಿ) ಒಣಗಿಹೋದ ಕಂಠದಿಂದ ಹೊರಡುವ ಕ್ಷೀಣರವ : ಮಗುವಿನ ಗಾರುಧ್ವನಿ ಮುಟ್ಟಿದುದು ಸುಬ್ಬುವಿನ ಕಿವಿಗೆ (ಅವಕಂ. ೨೨೦). [ ಗಾರು (<ಗಾಜು) + ಧ್ವನಿ ]

**ಗಾರುಬೊಕ್ಕೆ** (ನಾ). ಉಷ್ಣಾಧಿಕ್ಯದಿಂದ ಮೈಮೇಲೆ ಏಳುವ ಗುಳ್ಳೆ; ಸೆಕೆಗುಳ್ಳೆ : ಮೈಮೇಲೆಲ್ಲಾ ಗಾರುಬೊಕ್ಕೆ ಎದ್ದಿದೆ (ರೂಢಿ). [ ಗಾರು (<ಗಾಜು) + ಬೊಕ್ಕೆ$_1$ ]

**ಗಾರುಹಪತ್ಯ** (ನಾ). = ಗಾರ್ಹಪತ್ಯ : ಆರುಹಂತಂ, ಗಾರುಹಪತ್ಯಂ (ಭಾಷಾಭೂ. ೦೦೬ ಉದಾ) ; ಆಹವನೀಯ ಗಾರುಹಪತ್ಯ ದಕ್ಷಿಣವಾಯು ಪುರಾದರು ತ್ರಿವೇಣುಕವಾ ರಥಾಗ್ರದಲಿ (ಕುಮಾ.ಭ. ೬-೪). [ <ಸಂ. ಗಾರ್ಹಪತ್ಯ ]

**ಗಾರುಹಸ್ತ** (ನಾ). ಸಂಸಾರಿ ; ಗೃಹಸ್ಥ : ಗಾರುಹಸ್ತರೆನಿಸಿ ಶರಣಗರ್ಘ ವನ್ನವೀಯದವರ ಕಾಲು ಕಯ್ಯನಗಚಿ ತೋರಣದೊಳು ಕಟ್ಟಿ ಸೀಳಿ ನರರ ನಾಜುಸುವರು (ಶಾನಂಜ. ೬-೧೪೬ ರಗಳೆ). [ <ಸಂ. ಗೃಹಸ್ಥ ]

**ಗಾರುಹಸ್ತ್ಯ** (ನಾ). ಗೃಹಸ್ಥಧರ್ಮ ; ಗೃಹಸ್ಥಾಶ್ರಮ : ಬಂಧುರದ ಧನವನು ಗಾರುಹಸ್ತ್ಯದ ಪರಮಧರ್ಮವನಾವ ಬಯಸುವನು (ಕುಮಾ.ಉ. ೩-೩೪). [ <ಸಂ. ಗಾರ್ಹಸ್ತ್ಯ ]

**ಗಾರೆ$_1$** (ನಾ). ಸುಣ್ಣ ಹಾಗೂ ಮರಳನ್ನು ಕಲಸಿ ಅರೆದು ತಯಾರಿಸಿ ಕಟ್ಟಡಗಳಿಗೆ ಉಪಯೋಗಿಸುವ ಮಿಶ್ರಣ ; ಗಚ್ಚು : ಗಾರೆಯನು ಹಾಕಿಸಿ ಚೆಂನಾಗಿ ಕಟಿಸಿ ಜೀರ್ಣೋದ್ಧಾರವ ಮಾಡಿದ (ಶಾಇಇ. IX–II, ೩೨೨-೧೬ ; 1527) ; ಗಾರೆಗೊದವಿಸಿದ ಹೊಸಸುಣ್ಣವೆಂತೆನಲು ಕೀಳ್ಳೆ ರಾಯ ಶಂಭುಗರ್ಚಿಸಿದ ವಾಲುಂಬೋನದೊರೆಗೆ (ವೀಕ್ಷಪು. ೮-೪-೩೦) ; ಗೋಪುರದ ಭಾರವನು ಗಾರೆಯ ರೂಪುದೋಜಿದ ಪ್ರತಿಮೆಯಂದದಿ ಈ ಪರಿಯ ಸಂಸಾರಭಾರವನಾರು ತಾಳುವರು (ಹರಿಸಾ. ೮೨) ; ಇಟ್ಟಿಗೆ ಗಾರೆ ತೇಗ ಶಾರ್ಜಿ ಸಜ್ಜೆ ಸಿಮೆಂಟು ಇತ್ಯಾದಿಗಳನ್ನು ಕುರಿತ ಪಾಂಡಿತ್ಯ ನನಗಿಲ್ಲ (ಹುಗೂಲಿ. ೨). ' ವಜ್ರಗಾರೆ ' ಪರಾ.

**ಗಾರೆಯ ಚಕ್ರ**=ಗಚ್ಚು ಅರೆಯುವ ಗಾಲಿ : ಗಾರೆಯ ಚಕ್ರದಂತೆ ಉರುಳಿಕೊಂಡು ಭೂಮಿಯು ಸೂರ್ಯಪ್ರದಕ್ಷಿಣೆ ಮಾಡುತ್ತಿದ್ದಿದ್ದರೆ . . . ಆಗುತ್ತಿದ್ದುವು (ನ್ಯಕ್ಷ. ೪೩). [ ದೇಶ್ಯ ತಮಿ. ಕಾರೈ ; ತುಳು. ಗಾರೆ ; ತೆಲು. ಗಾರ ]

**ಗಾರೆ$_2$** (ನಾ). ಒಂದು ಬಗೆಯ ಗಿಡ ; ಇಂಗುಳದ ಗಿಡ; " ಇಂಗುದೀ, ತಾಪಸತರುಃ - ೨ ಗಾರೇಗಿಡ ; ಇಂಗಳದ ಗಿಡ " (ಸಿದ್ಧಾಂತಿ. ೧೦೬). [ ದೇಶ್ಯ ತೆಲು. ಗಾರ ]

**ಗಾರೆಕಲ್ಲು** (ನಾ). ಗಾರೆಯನ್ನು ನುಣುಪುಮಾಡಲು ಉಪಯೋಗಿಸುವ ಕಲ್ಲು : ನುಣುಪಾದ ಗಾರೆಕಲ್ಲು (ರೂಢಿ). [ ಗಾರೆ$_1$ + ಕಲ್ಲು(<ಕಲ್$_3$) ]

**ಗಾರೆಕೆಲಸ** (ನಾ). ಗಾರೆಯನ್ನು ಮಾಡುವುದು ; ಗಾರೆಯನ್ನು ಬಳಿಯುವುದು : ಮನೆಗೆ ಗಾರೆಕೆಲಸ ಮಾಡಿಸಬೇಕಾಗಿದೆ (ರೂಢಿ).

**ಗಾರೆಕೆಲಸದವ**=ಗಾರೆಕೆಲಸಮಾಡುವವನು : ಬಡಗಿಯರು ಕಾಮಾಟಿಯರು ಗಾರೆಕೆಲಸದವರು (ಸೌಗಂಧಿ. ೧೩೩-೧೬). [ ಗಾರೆ$_1$ + ಕೆಲಸ ]

**ಗಾರೆಗಾರ** (ನಾ). ಗಚ್ಚುಕೆಲಸ ಮಾಡುವವನು : ಒಳ್ಳೆಯ ಗಾರೆಗಾರರಿಲ್ಲದೆ ಮನೆಯ ಕೆಲಸ ಅಪೂರ್ಣವಾಗಿದೆ (ರೂಢಿ). [ ಗಾರೆ$_1$ + – ಕಾರ$_1$ (<–ಕಾಜ) ]

**ಗಾರೆಮಣೆ** (ನಾ). ಗಾರೆಯನ್ನು ಗೋಡೆಗೆ ಬಳಿಯಲು ಉಪಯೋಗಿಸುವ ಚೌಕವಾಗಿರುವ, ಹಿಡಿಯುಳ್ಳ ಮಣೆ ; ಚಕ್ಕೆ : "ಗಾರೆಕೆಲಸದವನ, ಹಿಡಿಯುರುವ ಚೌಕಹಲಗೆ : ಗಾರೆಮಣೆ " (Hawk. ಇಂಕನ್ನ). [ ಗಾರೆ$_1$ + ಮಣೆ ]

**ಗಾರ್ದಭ** (ನಾ).=ಗಾರ್ದಭ : ಅದನುಪೇಕ್ಷಿಗೆಯ್ಯಿಪ್ಪ ಪ್ರಭುವುಂ ಪ್ರಜೆಗಳುಂ ಮೂಲಿಗನುಂ ಸ್ವಾನ ಗಾರ್ದಭ ಚಾಂಡಳರು . . . ಪಾತಕಕ್ಕೆ ಸಲ್ವರು (ಶಾಇಇ. XX, ೫೦-೩೬ ; 1077). [ P ಇದು 'ಗಾರ್ದಭ'ದ ಅಪಲಿಪಿ ]

**ಗಾರ್ದಭ** (ನಾ). ಕತ್ತೆ ; ರಾಸಭ : ಶುನಕ ಗಾ[ಪಾಠಾಂ. ಗ]ರ್ದಭ ಕೀರ ದರ್ದುರಗ ವನಚರೋಪ್ಪ ಕುರಂಗ (ಬಸವು. ೫೬-೭೩) ; ಕೃಶಾನುವಿನ ಗಾರ್ದಭನ ವೃಷಭನ ಶಿಂಶುಮಾರಕನ . . . ಗುಣವಾ ನರೇಂದ್ರನೊಳರಲು ಬೇಹುದು ಭೂಪ ಕೇಳೆಂದ (ಕುಮಾ.ಉ. ೩-೧೦೪). [ ಸಂ. ]

**ಗಾರ್ಹಪತ್ಯ** (ನಾ). ಯಜ್ಞಯಾಗಗಳಿಗೆ ಸಂಬಂಧಪಟ್ಟ ಅಗ್ನಿತ್ರಯದಲ್ಲಿ ಒಂದು : ಶರೀರ ಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯವೆಂಬ ಪೆಸರಂ ಪಡೆದಗ್ನಿತ್ರಯಗಳೊಳ್ (ಆದಿಪು. ೦೩-೧೬ ವ) ; ಆ ವೇದಿಯ ಯಥೋಚಿತಸ್ಥಾನಂಗಳೊಳ್ ಸುಕೃತವನಿತಾಪತ್ಯಮೆನಿಪ ಗಾರ್ಹಪತ್ಯಮುಮಂ . . . ತೋಱಿ (ಜಗವಿ. ೧೬-೬ ವ) ; ಬಳಿಕ ಗಾರ್ಹಪತ್ಯವು ಪೃಥಿವಿ, ಅಗ್ನಿ, ಅನ್ನ, ಆದಿತ್ಯ–ಇವು ನನ್ನ ತನುಗಳು, ಆದಿತ್ಯನಲ್ಲಿರುವ ಈ ಪುರುಷನೇ ನಾನು (ಬೃಹ್ಮಛಾ. ೨೪೬ ಅಡಿ). [ ಸಂ. ]

**ಗಾರ್ಹಸ್ಥ್ಯ** (ನಾ). ಗೃಹಸ್ಥನಾಗಿರುವಿಕೆ ; ವಿವಾಹಾನಂತರ ಸಂಸಾರಿಯಾಗಿ ಮನೆಯಲ್ಲಿ ವಾಸಮಾಡುವಿಕೆ ; ಗೃಹಸ್ಥಾಶ್ರಮ ; ಎಲ್ಲವೂ ಯೌವನದ ಗಾರ್ಹಸ್ಥ್ಯದ ಚಟುವಟಿಕೆಯಲ್ಲಿ ಸುಖಮುಕ್ತ್ಯಾಯವಾಗುತ್ತದೆ (ಮನೋಣಂ. ೨೩೩) ; ಅವನು ಗಾರ್ಹಸ್ಥ್ಯದಿಂದ ಸಂನ್ಯಾಸಕ್ಕೆ ನಡೆದರೆ ಅರ್ಹನಾಗುವವನು (ಬುದ್ಧ.ಶ. ೮೪). [ ಸಂ. ]

**ಗಾರ್ಹಿಡಕ್ಕೆ** (ನಾ). [ ಸಂಗೀತ ] ಒಂದು ಬಗೆಯ ತಾಳ : ಗಾರ್ಹಿಡಕ್ಕೆ ಎಡಡಕ್ಕೆ . . . ಜಯಾಳಮೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [ ? ]

**ಗಾಲ** (ನಾ). ೧. ಹರಿಯುವುದು ; ಪ್ರವಹಿಸುವುದು. ೨. ಸೋರುವುದು ; ತೊಟ್ಟಿಕ್ಕುವುದು. ೩. ಸೋಸುವುದು. 'ವಸ್ತ್ರಗಾಲ' ಪರಾ. [ ಸಂ. ]

**ಗಾಲವ** (ನಾ). ೧. ಒಂದು ಬಗೆಯ ಗಿಡ ; ಲೋಧ್ರ : " ಗಾಲವಃ . . . ಮಾರ್ಜನಃ –೬ ಲೋಧ್ರಗಿಡದ ಹೆಸರು " (ಸಿದ್ಧಾಂತಿ. ೦೦೪). ೨. ಒಬ್ಬ ಋಷಿಯ ಹೆಸರು : ವಾಮದೇವಾತ್ರಿ ಗಾಲವ ಗುರುವಸಿಷ್ಠ ವಿಶ್ವಾಮಿತ್ರರಂ ಕರೆಸಿ (ಜೈಮಿಭಾ. ೨೦-೩). [ ಸಂ. ]

**ಗಾಲಿ, ಘಾಲಿ** (ನಾ). ಬಂಡಿ ಮೊದಲಾದ ವಾಹನಗಳ ಚಲನೆಗೆ ಮುಖ್ಯ ಸಾಧನವಾದ ಭಾಗ; ಚಕ್ರ; ರಥಾಂಗ: "ಚಕ್ರಂ, ರಥಾಂಗಂ–ಈ ೨ ಗಾಲಿ" (ಹರಿಚ. ೭೩-೨೯೩); "ಗಾಲಿ ಚಕ್ರಂ ರಥಾಂಗಮೆನಿಕ್ಕು" (ಶಬ್ದಮ. ೮೪-೨೪); ವಿಶ್ವಕರ್ಮನಬಿದಿಂಗಳೊಳ್ ರಥದೊಂದು ಗಾಲಿಯಂ ಸಮೆಯಿಸಿ ತಂದು ತೋಱಿದೊಡೆ (ವರ್ಧಮಾ. ೧೪೭-೧೦); ಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ (ಗದಾಯು. ೩-೫೫); ಒಂದೆ ಗಾಲಿಯೊಳ್ ರಥವಂ ನಡೆಯಿಸುವನೆಂಬ ನೀರಿಲ್ಲದೆ ಕೂಟನಡುವೆನೆಂಬ . . . ವೆರ್ಗಾವಿಲನಂ ಪೋಲ್ಕುಂ (ಧರ್ಮಾಮೃ. ೫-೧೦೭); ಶಿಥಿಲವಾದುವು ಗಾಲಿಗಳು ಬಳಿ ರಥಿಕರೀತನ ಬಿಟ್ಟು ಹಾಯ್ದರು (ಕುಮಾವ್ಯಾ. ೩-೨೩). **ಘಾಲಿ:** "ಚಕ್ರಂ, ರಥಾಂಗಂ–ಈ ೨ ಘಾಲಿ" (ನಾಚಿರಾ. ೧೩೪).

**ಗಾಲಿಯಂಗದವಕ್ಕಿ = ಗಾಲಿವಕ್ಕಿ:** ಬಲು ಸ್ಥೂಲ ಕುಚಯುಗಗಳಿಗೆ ಸುಂದರಗಾಲಿಯಂಗದವಕ್ಕಿಗಳು ನಿಜವಾಗಿ ಪೋಲುವವು (ರಘುವಂ. ೦೯೩-೬೩). [ ದೇಶ್ಯ ತಮಿ. ಕಾಲಿ; ತುಳು. ಗಾಲಿ ]

**ಗಾಲಿಕುರ್ಚಿ** (ನಾ). ಗಾಲಿಗಳನ್ನು ಜೋಡಿಸಿರುವ, ನೂಕಲು ಅನುಕೂಲವಾದ ಕುರ್ಚಿ: ರೋಗಿಗಳನ್ನು ಇಲ್ಲಿಂದಲ್ಲಿಗೆ ಕರೆದುಕೊಂಡು ಹೋಗುವುದಕ್ಕಾಗಿ ಉಪಯೋಗಿಸುವ ಗಾಲಿಗಳುಳ್ಳ ಕುರ್ಚಿ; ಗಾಲಿಕುರ್ಚಿ (Bath-chair. ಇಂಕನಿ). [ ಗಾಲಿ + ಕುರ್ಚಿ ]

**ಗಾಲಿಪಲ್** (ನಾ). ಗಾಲಿಯ ಹಲ್ಲು; ಅರೆ; ಚಕ್ರಾರ: ದಿನದಿನಕೆ ಬದಲಿಸುವ ಭಾಗ್ಯನಿವಹವಮದು ಗಾಲಿಪಲ್ಗಳೋಳಿವೊಲಿರ್ಕುಂ (ಸ್ವಪ್ನವಾ.೩).
[ ಗಾಲಿ + ಪಲ್ ]

**ಗಾಲಿವಂಟಿ** (ನಾ). ಕಿವಿಯ ಒಂದು ಆಭರಣ; ಗಾಲಿಯ ಆಕಾರದ ಒಂಟಿ: ಕಿವಿಯಲ್ಲಿ ಗಾಲಿವಂಟಿ, ವಂಟಿಗಳ ಭಾರದಿಂದಾಗಿ ತೂತುಗಳು ಇಳಿಬಿದ್ದಿವೆ (ಪ್ರಳಾಪ. ೮). [ ಗಾಲಿ + ವಂಟಿ ]

**ಗಾಲಿವಕ್ಕಿ** (ನಾ). ಜಕ್ಕವಕ್ಕಿ; ಚಕ್ರವಾಕ; ರಥಾಂಗ: "ಜಕ್ಕವಕ್ಕಿಯೆ ಗಾಲಿವಕ್ಕಿಯೆನಲ್ಕೆ" (ಕರ್ಣಾನಿ. ೬೨); ಅಱಿಕೆವಟ್ಟುಳ್ಳರಲೆ ನೀಳನೈದಲ್ ಮಱುಗಿ ಹೆಱಸಾರೆ ಗಾಲಿವಕ್ಕಿಗಳ್ (ಉದ್ಭದೇ. ೪-೦೦).
[ ಗಾಲಿ + ಪಕ್ಕಿ₁ ]

**ಗಾಲೀಚ, ಗಾಲೀಚೆ** (ನಾ). (ಉಕ) ಚಿತ್ರರಂಜಿತವಾದ ಜಮಖಾನ: ಮೇಲೆ ಸುರಿದ ಸಾಂದ್ರಕಿರಣಗಳು . . . ರೇಸಿಮೆಯ ಪಟದ ಮೇಲೆ ಇರಾಣದ ಗಾಲೀಚಗಳನ್ನು ನಿರ್ಮಿಸುತ್ತಿದ್ದವು (ರಕ್ತಧ್ವ. ೨೬೯). **ಗಾಲೀಚೆ:** ತೋಟದಲ್ಲಿ ಸಪಾಟನೆಲದ ಮೇಲೆ ಯಾವತ್ತು ಕಡೆಗೆ ಹಚ್ಚ ಹಸರು ಗಾಲೀಚೆಗಳನ್ನು ಪಸರಿಸಿ . . . ಕಾಲದಾರಿಗಳನ್ನು ಮಾಡಿದ್ದರು (ಅಶ್ರೇಯ. ೯೯).
[ ←ಪಾರ. ಗಾಲೀಚಹ್; ಹಿಂ. ಗಲೀಚಾ; ಮರಾ. ಗಾಲಿಚಾ ]

**ಗಾಲೀಚೆ** 'ಗಾಲೀಚ' ನೋ.

**ಗಾಲು** 'ಗಾಳು' ನೋ.

**ಗಾಲುಮೇಲು** 'ಗಾಳುಮೇಳು' ನೋ.

**ಗಾಲ್ಮೇಲು** 'ಗಾಳುಮೇಳು' ನೋ.

**ಗಾವ** 'ಗಾಮ' ನೋ.

**ಗಾವಕಾರ** (ನಾ). ಗೌಡ; ಗ್ರಾಮಾಧಿಕಾರಿ. 'ಗಾವಕಾರಿಕೆ' ಪರಾ.
[ ಗಾವ (<ಗಾವು) + – ಕಾರ₁ (< – ಕಾಱ) ]

**ಗಾವಕಾರಿಕೆ** (ನಾ). ಗ್ರಾಮದ ಯಜಮಾನಿಕೆ; ಗೌಡಿಕೆ; ಪಟೇಲಿಕೆ: ವಿಶ್ವಾಮಿತ್ರ ಗೋತ್ರದವಂಗೆ ಸರ್ವಕಲಸದಲು ಸ್ವತಂತ್ರನಾಗಿ ಗಾವಕಾರಿಕೆ ಬಿಜೋರ ಮರ್ಯಾದೆಗಳನು . . . ಗ್ರಾಮಾನುಮತದಿಂದಾ ರಾಜರು ಕೊಟ್ಟರು (ಎಇ. XXVII, ೨೮-೮೩; 12567). [ ಗಾವಕಾರ + – ಇಕೆ ]

**ಗಾವಕೋಸು** (ನಾ). ಗ್ರಾಮದ ಮೂಲೆ; ಊರಿನ ಒಂದು ಕೋಚು: ಗೊಬ್ಬರದ ನಿಮಿತ್ತವಾಗಿ ಊರ ಹೊರಗೆ ಗಾವಕೋಸಿನಲ್ಲಿ ಒಂದು ದೊಡ್ಡತಗ್ಗನ್ನು ತೆಗೆದು (ಕೃಷಿಪ್ರ. ೪೫).
[ ಗಾವ (<ಗಾವು) + ಕೋಸು₂ ]

**ಗಾವಗ** (ನಾ). ಒಬ್ಬುತನ ಹೆಸರು: ಗಾವಗ ಅರಸ ಬೆಳ್ಗಿಱಿಯಂ ದಯೆಗೆಯ್ದು ಆಳುತ್ತಮಿಟ್ಟ (ಎಕ. XII, ತಿಪಟೂ. ೧೦೩-೧೨; 972). [ ? ]

**ಗಾವಗಾನೆ** 'ಗಾಮುಗಾನೆ' ನೋ.

**ಗಾವಟ** 'ಗಾವಟಿ' ನೋ.

**ಗಾವಟಿ, ಗಾಂವಟಿ, ಗಾಂವಠೀ, ಗಾವಟ, ಗಾವಠಿ** (ಗು). ೧. (ಉಕ) ಹಳ್ಳಿಗೆ ಸಂಬಂಧಿಸಿದ; ದೇಶೀಯವಾದ; ನಾಟಿ; ಗ್ರಾಮೀಣ: ಎಲ್ಲಿಯೋ ಗಾವಟಿ ಶಾಲೆಯಲ್ಲಿ ನಾಲ್ಕು ಅಕ್ಷರ ಕಲಿತು ಸಭಾದಲ್ಲಿ ಕೇಳಿದ ಮಾತುಗಳನ್ನು ನನ್ನ ಮುಂದೆ ಹೇಳಿ ಹೆದರಿಸಬೇಕೆಂದು ಮಾಡುತ್ತೀಯಾ? (ಚಿವಠಿ. ೫೫); ಅವರು ಯಾವುದೋ ಗಾವಟಿ ಔಷಧದ ಪ್ರಯೋಗ ಮಾಡಿಕೊಳ್ಳುವರು (ಬೂಧಿ). ೨. ಸರಕಾರಕ್ಕೆ ಸಂಬಂಧವಿಲ್ಲದ; ಖಾಸಗಿ. (ನಾ). ೩. ಕಾಡುಸ್ಥಿತಿಯುಳ್ಳುದು; ಉತ್ತಮವಲ್ಲದುದು. **ಗಾಂವಟಿ:** ೧. ಅದು ಅರ್ಧಕ್ಕರ್ಧ ಎಣ್ಣೆ ಬೆರೆಸಿದ ನಾತಕೊಡುವ ಗಾಂವಟಿ ತುಪ್ಪವಾಗಿತ್ತು (ಜಾರುದಾ. ೩೧೩). ೩. ಮುಂಬಯಿಯಲ್ಲಿ ತಯಾರಾಗುವ ಕಲ್ಲುಸಕ್ಕರೆ, ಚುಮುಚುಮಿಸಕ್ಕರೆ ಗಾಂವಟಿ (ಮುಂಬವ್ಯಾ. ೩೫ ಪ್ರಸ್ತಾವನೆ). **ಗಾಂವಠೀ:** ೧. 'ಗಾಂವಠೀವಕೀಲ' ಪರಾ. **ಗಾವಟ:** ೧. "ಇಲ್ಲಿಯೇ ತಯಾರಾದ" (ಜಾನಕೋ. ೪೭). **ಗಾವಠಿ:** ೨. ಕುಂಭಕರ್ಣನ ತಂದೆ, ಮಕ್ಕಳಿಬ್ಬರನ್ನೂ ಅಪರಾತ್ರಿಯಲ್ಲಿ ಎಬ್ಬಿಸಿ ಬಹುಶಃ ಒಂದು ಗಾವಠಿ ಪಾಠಶಾಲೆಗೇ ಅಟ್ಟುತ್ತಿರಬೇಕು (ಗಾಳಿಪ. ೦೬೩): ಒಬ್ಬ ಅಯ್ಯನವರು ಗಾವಠೀ ಸಾಲೆಯನ್ನು ಹಾಕಿದ್ದರು (ಮೋದಿಮ. ೭). [ ←ಮರಾ. ಗಾಂವಟೀ ]

**ಗಾವಟೆ, ಗಾವಡೆ** (ನಾ). ಒಂದು ಬಗೆಯ ಮರ; ಸಾರಸವೃಕ್ಷ: "ಸಾರಸಮೆನಲ್ಕೆ ಗಾವಟೆ" (ಮಂಗರಾ. ೪೨-೪೦); ಗಾವಟೆ ಬೆಲ್ಲವತ್ತ ವರೆಮಾದಲವಂಬಟೆ ಚಿಳ್ಳ ಚಿಲ್ಲಕಾಯ್ ಮಾವಿನಕಾಯ್ಗಳ್ (ನಳಚಂ. ೪೬೨); ಬೆಲ್ಲವತ್ತ ಕಪಿತ್ಥ ಚಿಕ್ಕಣೆ ಚಿಲ್ಲ ಗುಗ್ಗುಳ ಗೇರು ಗಾವಟೆ . . . ಇಲ್ಲಿ ನೋಡಿವೆ (ತೊರರಾ. ೩-೧-೨೯); ಅಲ್ಲಂ ಮೆಣಸೇಲಕ್ಕಿಯ ನೆಲ್ಲಿಯ ಗಾವಟೆಯು ಭಾಗ್ಯಹೀನರಿಗುಂಟೇ (ನೀತಿಸಾ. ೬೪೭). **ಗಾವಡೆ:** "ಮಹಾಮುನಿಃ– ಗಾವಡೆ, ತುಂಬುರು" (ಓಷಧಿ. ೦೦೭). [ ? ]

**ಗಾವಠಾಣ** 'ಗಾಂವಠಾಣ' ನೋ.

**ಗಾವಠಿ** 'ಗಾವಟಿ' ನೋ.

**ಗಾವಡಿವಾಡ, ಗಾವರಿವಾಡ** (ನಾ). ಒಂದು ಊರಿನ ಹೆಸರು: ಗಾವಡಿವಾಡದ ಮಹಾಜನ (ಅ)ಐವ[ದಿ]ನ್ಬ × [ಕಾ]ಲಂ ಕರ್ಚ್ಚಿ ತುಷ್ಪದ [ತೆ] ಱೆಯ . . . ದಾನಗೊಟ್ಟ (ಸೌಇಇ. XI – 1, ೦೩-೧೦; 869). **ಗಾವರಿವಾಡ:** ಇಟ್ಟಗೆ ಗಾವರಿವಾಡವೆಂಬ ಬಾಡಂಗಳನ್ (ಎಇ. XV, ೩೪೦-೦೮; 1071). [ ಗಾವಡಿ? + ಬಾಡ₁ ]

**ಗಾವಡೆ** 'ಗಾವಟೆ' ನೋ.

**ಗಾವಣ₁** (ನಾ). ನೆಲೆ; ಆಶ್ರಯಸ್ಥಾನ; ಕಾಮಣ; ಮಂಟಪ: ಅಂಬುಜ ಸೌರಭಂ ತನಗೆ ಗಾವಣ ಜೇವಣಮತ್ಯಪೂರ್ವಮಾಸ್ಯಾಂಬುಜ ಗಂಧಮೆಂದೆಱಗಿ ಬಗ್ಗಿಸೆ (ಶಾಂತಿಪು. ೮-೮೭); ವನಮಿಂದು ಶೂನ್ಯಮೆಳವೆಂಡಿರ ಗಾವಣ [ ಪಾಠಾಂ. ಗೋವರ ]ಮಿಂದು ಶೂನ್ಯಂ (ಅರ್ಧನೇ. ೫-೫೨).
[ <ಕಾವಣ ]

**ಗಾವಣ₂** (ನಾ). ಹಳ್ಳಿಯವನು; ಗ್ರಾಮೀಣ ಪ್ರದೇಶದವನು (?): ಗದೆಮುಡೆ ೪ ಬಯಿದೂರ ಗಾವಣರ ಬಟಯ ಬೈಂದೂಱ (ಸೌಇಎ. ೦೯೩೦, ಮಂಗಳೂ. ೫೩೪-೨೩; 1278). [ <ಸಂ. ಗ್ರಾಮೀಣ ? ]

**ಗಾವಣಿಗ**(ನಾ).೧. ಹಳ್ಳಿಗ ; ಗ್ರಾಮೀಣ: "ಸಾದಂ ವೃಷಲನಱ ಕುಂಚಟಿಗನ ವದ್ಯಂ ಗಾವಣಿಗನಂತ್ಯನಱಿಯೆ ಗಂಗಡಿಕಾಱನಕ್ರಮನಭೀರನೆಂದೆನೆ ಮಹಾ ಶೂದ್ರನಕ್ಕುಂ" (ಮಂಗರಾ. ೧೧೦-೬). ೨. ಒಂದು ವಂಶದ ಹೆಸರು : ಕಾಯ್ವರ ಗಣ್ಡಂ ಅಡಿತುರಗತಟ್ಟಸಂಘಟ್ಟಂ ಬಿರುದ ಗಾವಣಿಗ ಶರಭ ಭೇರುಣ್ಡಂ (ಸೌಇಇ. XI-1, ೬೮-೮೦ ; 1045) ; ಅರಿಬಿರುದ ಗಾವಣಿಗ ದಿಶಾಪಟ್ಟ . . . ಬಿರುದ ಗಾವಣಿಗ ಸೂಱೆಕಾರ (ಸೌಇಇ. XI-II, ೧೬೬-೬೯ ; 1125) ; ಗಾವಣಿಗರ ಬಳಿಯ ರಾಜಗುರು ಜಕ್ಕಂಣನಾಯಕ (ಕಇ. I, ೩೫-೬ ; 1398). [ ಗಾವಣ$_{2}$ + – ಇಗ ]

**ಗಾವದ** ' ಗಾವುದ ' ನೋ.

**ಗಾವದಿ, ಗಾವುದಿ** (ಗು). ೧. ಹೆಡ್ಡತನದಿಂದ ಕೂಡಿದ ; ದಡ್ಡತನದ : ಸಾವಂ ತಿಳಿಯದೆ ಬಱಿದೆ ಗಾವದಿ ಕೆಲಸಕ್ಕೆ ಯೋಗ್ಯನಾದಂ ಭಕ್ತಂ (ಹಮ್ಮಿರ. ೬-೪೯). (ನಾ). ೨. ದಡ್ಡ ; ಮೂಢ ; ಮೂರ್ಖ : ಮುನ್ನ ಭವಿನಿಳಯದೊಳು ತಲೆಮಟ್ಟು ದುಡಿದ ಗಾವದಿಯ್ಯೆಸೆ ಭೂಪಾಲ ನಲ್ಲೆಂದನು (ಹಡಕಾ. ೦೦-೩೩). **ಗಾವುದಿ :** ೨. ಗಾವುದಿಯಾದನೊ ಗಂಭೀರದವನೊ ಸಾವಹುಟ್ಟುಗಳ ಗೆದ್ದವನೊ (ಲಿಙ್ಗರಾ. ೪-೨೩).
[ ←ಫಾರ. ಹಿಂ. ಮರಾ. ಗಾವದೀ ]

**ಗಾವದಿಗ** (ನಾ). ಗಾವದಿ ೨ : ಬಲು ಸುಳ್ಳು ಕೂಲಿಕಾಱನು ಗಾವದಿಗ ನೆಂದು ಹಲವು ಬಗೆಯಲಾಡುತಿಹರು (ಅಮುಸಾಂ. ೩-೬೩).
[ ಗಾವದಿ + – ಗ$_{3}$ ]

**ಗಾವದಿತನ** (ನಾ). ಮಂಕುತನ ; ದಡ್ಡತನ (ಸ್ಯಾಂಡರ್).
[ ಗಾವದಿ + – ತನ ]

**ಗಾವನ್ನ** (ನಾ). ೧. ಬಲಿಗಾಗಿ ಹಾಕುವ ಅನ್ನ. ೨. ಕರಗದ ಉತ್ಸವ ಕಾಲದಲ್ಲಿ ಮಾಡುವ ಒಂದು ಸಾಂಪ್ರದಾಯಿಕವಾದ ವಿಧಿ ; ದೇವತೆ ಗಳಿಗೆ ನಾಲ್ಕು ದಿಕ್ಕುಗಳಲ್ಲೂ ಅರಿಸಿನದ ಅನ್ನದಿಂದ ಬಲಿಹಾಕುವ ಕರ್ಮ : (ಎಕಮ್ಯ. IX, ೧೦). [ ಗಾವು + ಅನ್ನ$_{3}$ ]

**ಗಾವಯ್ಯ** (ನಾ). ಒಬ್ಬಾತನ ಹೆಸರು : ಆ ಕಲ್ಲಂ ಬರೆದ ಗಾವಯ್ಯನ ಸೇನಬೋವ ಕಾಮಯ್ಯ (ಎಕ. XII, ತಿಪಟೂ. ೧೦೩-೧೯ ; 372).
[ ಗಾವ (<ಗಾಮ) + ಅಯ್ಯ$_{1}$ ]

**ಗಾವರ** (ನಾ). ೧. ಗದ್ದಲ : ಗಲಾಟೆ; ಅಬ್ಬರ : "ಗಾವರ ಸರ ದನಿ ಸಪ್ಪಳುಲಿಯುಂ ಗಾವಳಿ ಮಿಗೆಯಬ್ಬರಮುಂ ಧ್ವನಿ " (ಕವಿಕಂ. ೦೦೬) ; ಪರಮಮಂಗಳಪಾಠಕರ ಗಾವರದ ಘನಸಂಭ್ರಮದಲ್ಲೆತಹ ಪರಮಶಿವನನು ರಾಜಪುತ್ರರು ಕಂಡರಿದಿರಿನಲಿ (ವಿಭಾಗ. ೪-೧೬-೩). ೨. ಗುಂಜಾರವ ; ಝೇಂಕಾರ : ತಣ್ಪಿಡಿದಲರೂದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ ಗೆಡೆಗೊಳೆ (ಪಂಪಭಾ. ೪-೦೧೧) ; ನುಣ್ಣನಿಯ ಸುಮ್ಮಿಯ ಗಾವರದೊಳ್ ಕೊಡರ್ಚಿದೋಪನಿಗೆ ಪುಳಿಂದಿ ಪಾಡಿದಳ್ (ಲೀಲಾವ. ೮-೩೦) ; ತಾವರೆವೂಗಳೊಳ್ ಪಲವು ತುಂಬಿಯ ಗಾವರಮುಣ್ಮೆ (ನಳಕಂ. ೦೩೬). ' ಗಾವಳಿ ' ಪರಾ. [ ? ]

**ಗಾವರಂಬೊರೆ** (ಕ್ರಿ). ಗಾವರದಿಂದ ಕೂಡು ; ಝೇಂಕರಿಸು : ಪೆಣ್ದುಂಬಿಯ ಗಾವರಂಬೊರೆದು ಪೊಣ್ಮುತಿರ್ದ ಪುಷ್ಪಾಸ್ತ್ರಚಾಪಲತಾ ಜ್ಯಾರವದಂತೆ (ಕಾದಂಪೂ. ೬೫೨). [ ಗಾವರ + ಪೊರೆ$_{2}$ ]

**ಗಾವರದುಂಬಿ** (ನಾ). ಝೇಂಕರಿಸುವ ದುಂಬಿ ; ಮೊರೆಯುತ್ತಿರುವ ಭ್ರಮರ : ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೧೧-೦೦).
[ ಗಾವರ + ತುಂಬಿ$_{1}$ ]

**ಗಾವರಸ** (ನಾ). [ ಸಂಗೀತ ] ಆಲಾಪನೆಯ ಸ್ವಾರಸ್ಯ : ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ – ಗಾವರಸ (ಶಮದ. ೨೮೯ ಪ್ರಯೋ) ; ಗಾವರಸಂ, ಗ್ರಾಮರಸಃ. ಗ್ರಾಮೋನಾಮ ಸರಿಗಮಾದಿ ಸ್ವರಸಮೂಹಃ (ಶಬ್ದಾನು ೨೯೬ ವ್ಯಾಖ್ಯಾ).
[ <ಸಂ. ಗ್ರಾಮರಸ ]

**ಗಾವರಿವಾಡ** ' ಗಾವಡಿವಾಡ ' ನೋ.

**ಗಾವರಿಸು**(ಕ್ರಿ). ೧. ಗದ್ದಲಮಾಡು ; ಸದ್ದುಮಾಡು ; ಅರ್ಭಟಿಸು : (ಕಿ). ೨. ಝೇಂಕಾರಮಾಡು ; ಧ್ವನಿಮಾಡು : ಒಳ್ಪನಾಳ್ದ ಪೆರ್ಗ್ಗೆಱ ಗಳಿನೊಂದಿ ಗಾವರಿಸುತಿಪ್ಪ ಮದಾಳಿಯಿಂ (ಎಇ. XIII, ೩೩೧-೨೬ ; 929) ; ಅರಗಿಳಿಯಾಗಿ ಮಂಗಳಮನೋದುವ ತುಂಬಿಯ ಬಂಬಲಾಗಿ ಗಾವರಿಸುವ (ಪುಷ್ಪಪು. ೧೨-೬೧) ; ಆಸ್ಯಾಬ್ಜಗಂಧಕ್ಕೆ ಮಂಡಳಿಗೊಂಡಾಱಿವಿಂಡು ಗಾವರಿಸದುತೋರಂತೆ ಜಾಣ್ಮೆಕ್ಕು ಪುಂಶ್ಚಳಿಯರ್ . . . ನಿಶಾಂತಾಂತಂಗಳಂ ಪೊರ್ದಿದರ್ (ರಾಜಶೇ. ೧೦-೨೪) ; ತೀಟದ ಕಂಪೆತ್ತಲತ್ತಲ್ ಮೋಹರಿಸಿ ಗಾವರಿಸಿ ತಂಡತಂಡದಿಂ ತೇಂಕುತ್ಯೈತಂದು (ರಾಮಾಶ್ವ. ೫೪-೩).
[ ಗಾವರ + – ಇಸು$_{3}$ ]

**ಗಾವಸಿಂಗ** (ನಾ). ಗ್ರಾಮಸಿಂಹ ; ನಾಯಿ : ತುಂಗಗಜಂಗಳ್ಗಳ್ಕಿ ಮೃಗಂಗಳನಾಯ್ದುಱಿ ತಿಂಬುದಪ್ಪೊಡೆ ಪೆಱತೇಂ ಸಿಂಗಮದಲ್ಲದು ಪೋಗಾ ಸಿಂಗಂ ತಾಂ ಗಾವಸಿಂಗಮೆಂದುದು ನಿನ್ನಂ (ಪಂಚತಂ. ೯೦-೮).
[ ಗಾವ (<ಗಾಮ) + ಸಿಂಗ$_{1}$ ]

**ಗಾವಳ** ' ಕಾವಳ ' ನೋ.

**ಗಾವಳಿ, ಗಾವುಳಿ** (ನಾ). ೧. ಸದ್ದು ; ಗದ್ದಲ ; ಅಬ್ಬರ : "ಗಾವರ ಸರದನಿ ಸಪ್ಪಳುಲಿಯುಂ ಗಾವಳಿ ಮಿಗೆ ಅಬ್ಬರಮುಂ ಧ್ವನಿ " (ಕವಿಕಂ. ೧೧೬) ; ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ ಕೂಡೆ ಕುಣಿದನು (ಕುಮ್ಯಾಅ. ೮-೧೧) ; ಗಾವಳಿಯನೆಬ್ಬಿಸದೆ ಬಿಡೆನು (ಅಂದಿಕಾ. ೩೬-೫). ೨. ದೊಂಬಿ ; ರಂಪ ; ಹಾವಳಿ : ಬಂದ ಗಾವಳಿಗೆ ಹೆದಱ ರಂಜಣಿಗೆ ಯೊಳಡಗಲು (ಹಡಕಾ. ೦೦-೯೩) ; ದಿನಪನಿದಿರಲಿ ತಮದ ಗಾ[ಪಾಠಾಂ. ಹಾ]ವಳಿಯೇ (ನಳಕ. ೪-೮) ; ಕೊಲೆ ಪಾದರಂ ಪುಸಿ ನುಸುಳ್ಪು ವೈರಮಟ್ಟುಳಿ ತೋಹು ಬೆದಱು ಬೆಜ್ಜರ ಕಷ್ಟ ನಿಷ್ಠುರಂ ಗಜಱು ಗಾವಳಿ ವಿವಾದ (ಕೃಮಿಥಾ. ೨-೫). ೩. ಗುಂಪು ; ಸಮೂಹ : ಪುದಿದ ಕುರುಳ್ . . . ಪೂತ ಕಿಂಕಿರಾತದೊಳಿಱಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ (ಶಾಂತಿಪು. ೦೦-೧೧೯) ; ಕರೆದು ತಂದರು ಕವಿದ ಗಾವಳಿಯ ಗಜಬಜದ ಮೊಱೆಕಾಱರಂ (ಸಿದ್ಧರಾ. ೮-೬) ; ಸಂದಣಿಸಿ ಕುರುಭೂಮಿಯಲಿ ತಾ ಮಂದಿ ಬಿಟ್ಟುದು ನಾಡ ಗಾವಳಿ ಬಂದುದಲ್ಲಿಗೆ (ಕುಮ್ಯಾಭೀ. ೦-೩) ; ಅಜಿರಂಗದೊಳು . . . ಗಾವಳಿಯನು ಬಂದು ಪೊಗು ವ ರಾಹುತರ್ (ಕುರಾಸಾಂ. ೧೦-೬೩). ೪. ಕಷ್ಟ ; ತೊಂದರೆ ; ಹಿಂಸೆ : ದೇವರವರ ಮನಸಿನ ಚಿಂತೆಯ ಬಲು ಗಾವಳಿಯನು ಮಿಗೆ ಪಱಿದು ತೀವಿದ ಮುದವ ನಿಮಗೆ ಬೀಱದಿದ್ದೊಡೆ ನಾವಿದ್ದು ಫಲವೇನು (ಕಂಸವಿ. ೦೯-೦೦) ; ಕರುಣಾ ಸಮುದ್ರ ನೀನೆಮ್ಮ ಮುಖವಾಗು ದೇವಾಸುರರ ಬಿನ್ನಪದ ಗಾವಳಿಯ ನೊಂದು ಕ್ಷಣಂ ಸೈರಿಸು (ಛಕ್ಷಿಷ. II, ೬-೩) ; ಗಾವಳಿಯ ಪರಿಹರಿಸು ಜಯಿಸೀ ಭೂವರರನುರೆ ಸಪ್ತವಾರದಲ್ಲಿ ವಸುಧೆಯನು (ಅಧ್ಯಾರಾ. ೧-೮-೦೨). ೫. ರೀವಿ ; ಗತ್ತು : ಆ ವನದೊಳ್ತುಂಬೆಲರೆಡೆಯಾಟದ ಗಾವಳಿ ಪೆಣ್ದುಂಬಿಗಳ ಗಾವರ (ಕುರಾಸಾಂ. ೩-೨೮) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಸವಿ. ೦೫-೦೨) ; ಬೇಱಿವನಾರ್ಪು ಬೇಱಿವನ ಗಾವಳಿ . . . ಎಲ್ಲರುಂ ವಿಮಾಱಿದ ಕೂರ್ಪಿನಪ್ರತಿಮವೀರವಿವಂ ಚಿಕದೇವಭೂವರಂ (ಚಿಕವಿ. ೫-೮೦). **ಗಾವುಳಿ :** ೩. ಬಳಸಿ ತನ್ನೊಡನೊಯ್ಯ ನೊಯ್ಯನೆ ಬರ್ಪ ದೇವರದೊಂದು ಗಾವುಳಿಯನಿನ್ನಿರಿಮೆಂದು . . . ಧಾತ್ರಿಗೆ ಪರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ (ಪಂಪಭಾ. ೩-೬).

**ಗಾವಳಿಮಾಡು** = ಗಲಾಟೆಯನ್ನು ಎಬ್ಬಿಸು ; ಗಲಭೆಮಾಡು : ಈ ಊರಿನವರೆಲ್ಲಾ ಬುದ್ಧಿಯವರನ್ನ ಇಲ್ಲಿಂದ ಬಿಡಿಸಿಕೊಳ್ಳಬೇಕು–ಎನ್ನುತ ಗಾವಳಿಮಾಡುತ್ತ ಇದ್ದಾರೆ, ಮಾಸ್ವಾಮಿ (ವಿಗಡ. ೬೩-೦೫).

[ <ಸಂ. ಕಾಹಲ ]

**ಗಾವಳಿಗ** (ನಾ). ೧. ಗಲಾಟೆಮಾಡುವವನು ; ಗದ್ದಲಮಾಡುವವನು ; **ಗಲಭೆಕಾರ** : ನೀನೀ ಪರಿಯ ಗಾವಳಿಗಂಗೆ ಕೊರ್ತಡೆ [ಪಾಠಾಂ. ಕೌತುಕಗಳನು ಮಾಡಲು, ಕೌಳಿಕವನುಜಗೋತಡೆ] ವುರಳುಗುಟ್ಟದೆ ಮಾಣ್ಬರೇ ಹೇಳೆಂದಳಾ ಸಖಿ (ಪ್ರಭುಲೀ. ೫-೬೫) ; ಕಲುಮರನ ತುಂಬುವೆನು ಹಿಂದಣ ಗಲಬೆಗಲಹದ ಗಾವಳಿಗ[ಪಾಠಾಂ. ಯ]ರೊಳು ಜುಳುಕಿನಾಹವದವನೆ ತಾನೆಂದುಬ್ಬಣವ ಜಡಿದ (ಕೊರಠಾ. ೬-೩೫-೯). ೨. ನಾಡಾಡಿ ; ಸಾಮಾನ್ಯನಾದವನು : ದೇವರುಪಿ ನೀನೆಂದು ಕಾಳಿದೆನು ಮತ್ತೊಬ್ಬ ಗಾವಳಿಗ ಯತಿಯಾಗಲವನ . . . ದಿಗ್ಬಲಿಯ ಚಲ್ಲಿಸುವೆನು (ನವಮೋ. ೨೬-೬೪). [ ಗಾವಳಿ + – ಗ$_2$ ]

**ಗಾವಳಿವಡೆ** (ಕ್ರಿ). ಗುಂಪುಗೂಡು ; ಸಮೂಹವಾಗು : ಸೊರ್ಕಿರುವರಗಿಳಿ ಗಾವಳಿವಡೆದು ಕಾಗೆಗಳೆಣಗುವ ದೇವಿನ ಪಹ್ನಾಸವೆತ್ತಣಿಗುವುದೇ (ಗೀತಗೋ. ೬೬-೫). [ ಗಾವಳಿ + ಪಡೆ$_1$ ]

**ಗಾವಳಿಸು** (ಕ್ರಿ). ಗುಂಪುಗೂಡು : ಉದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ ಗಾ[ ಪಾಠಾಂ. ಬಾ, ಜಾ, ಬಾ ]ವಳಿಸಿ ಧಡಾಳದೊಳ್ ಮೊರೆವುವು (ಅಸಂಕ್ರ. ೧-೬೬ ; ಸೂಕ್ತಿಸು. ೪-೪೪ ನೋ) ; ತೊಲಗಿಂ ಗಾವಳಿಸಿ ಗಲಭೆಗೆಯ್ವೊಡೆ ಕಾವಲ್ತು (ಅಪ್ರತಿ. ೧೨೬-೨೨). [ ಗಾವಳಿ + – ಸು$_1$ ]

**ಗಾವಿತಿ** (ನಾ). **ಗೌಡಿತಿ** : ಕಾಳಬ್ಬೆ ಗಾವಿತಿಗೆ ಗುಜ್ಜಣಂ ಪುಟ್ಟಿ ತಂದೆಗೆ ಪದಿಮ್ನಾರ್ಡಿಯಾಗಿ ಪೆಮ್ಮಾರ್ಡಿ ಗಾವುಣ್ಡನೆಂಬ ಪೆಸರಂ ಪಡೆದು (ಎಕ. VII, ಶಿವಮೊ. ೧೦-೩೨ ; 1085 ?).

[ P ಇದು 'ಗೌಡಿತಿ' ಎಂಬುದರ ಅಪಲಿಖಿತ ]

**ಗಾವಿಲ, ಗಾವಿಳ** (ನಾ). ೧. ಹಳ್ಳಿಯವನು ; ಗ್ರಾಮಪ್ರದೇಶದವನು : ಗ್ರಾಮೀಣ–ಗಾವಿಲ (ಶಮದ. ೨೮೦ (೩) ಪ್ರಯೋ). ೨. ಹಳ್ಳಿಯ ಅಧಿಕಾರಿ ; ಗ್ರಾಮಾಧಿಕಾರಿ ; ಪಟೇಲ ; ಗ್ರಾಮಣಿ : " ಗಾವಿಲನೆಂದು ಗ್ರಾಮಣಿ " (ಕಬ್ಬಿಗ. ೫೬) ; " ಗಾಂಪ ಗ್ರಾಮಾಧಿಪತಿಗಳೊಳು ಗಾವಿಲ ಶಬ್ದ " (ಶಬ್ದಮಂ. ೦೦೮). ೩. ತಿಳುವಳಿಕೆಯಿಲ್ಲದವನು ; ಹೆಡ್ಡ ; ದಡ್ಡ ; ಅನಾಗರಿಕ : " ಎಗ್ಗನೆನೆ ಗಾವಿಲಂ " (ಚಕುನಿ. ೮೨) ; " ಗಾಂಪ ಗಾವಿಲ ಮೋಹೆಗ್ಗಂ ಹೆಡ್ಡನಕ್ಕು " (ಕವಿಕಂ. ೦೬೩) ; ತಲೆಸೂಡಿ ಮುನ್ನೆ ಕಜ್ಜದ ಫಲಮಂ ಬೆಸಗೊಂಡುಮೆ[ ]ವನಲ್ಲಿಂ ಬಟಿಯಂ ತಲೆಯಂ ಕಿರಿಹುಗಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೦೪೪) ; ಬೇವಿನಾರವೆಯನಿಟ್ಟು ಮಾವಿನಪಣ್ಣನಬಿಸುವ ಗಾವಿಲನುಮಂ (ಧರ್ಮಾಮೃ. ೬-೧೬೮) ; ಪೆಣ್ಣುಪೆಣ್ಣೆಂದೇತಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು (ಹದಿಬ. ೫-೭) ; ಗಾವಿಲನ ಧನವು ಘನವಾಗಿ ಬಯ್ಟುಟ್ಟ ಕಾವಿಲೇ ಪೋಕು (ಸರ್ವಜ್ಞ. ೬೮೪). **ಗಾವಿಳ** : ೧. ಬಡವರಿಗೂ ಬಲ್ಲಿದರಿಗೂ ಹುಡುಗರಿಗೂ ಹೆಂಗಸರಿಗೂ ಗಾವಿಳನಿಗೂ ಗಂಡಸಿಗೂ . . . ಸಕಲರಿಗೂ ಸಮವಾದ ಸ್ವಾತಂತ್ರ್ಯ (ಹರಿಜ. ೬೫).

[ <ಪ್ರಾ. ಗಾಮಿಲ್ಲ./ಸಂ. ಗ್ರಾಮೀಣ ]

**ಗಾವಿಲತನ** (ನಾ). ದಡ್ಡತನ ; ಹೆಡ್ಡತನ : ಗಾವಿಲತನದಿಂ ಪೊಕ್ಕೊಡೆ ಸಾವಪ್ಪುದು ಪುಸಿಯೆ ಬರ್ದುಕಿದಂ ಪುಣ್ಯದಿಂ (ಧರ್ಮಾಮೃ. ೬-೫೦) ; ವನಜಸಂಭವ ತನ್ನ ಗಾವಿಲತನವ ನೋಡದೆ ನೀವು ನಿಮ್ಮಯ ಘನತೆಯನು ಮೊಟಿದೀಗ ಕೊಡುವುದು (ಶುಮ್ಮ. ೬೦೩. ಪರಿ. ೩೩೯) ; ವರಶುಭವಿಲ್ಲದ ವಧುಗಳ ಗುರುವಿಕೆಯಂ ಪೇಳ್ವರೇಕೆ ಗಾವಿಲತನದಿಂ (ಹಮ್ಮೀರ. ೨-೩೮).

[ ಗಾವಿಲ + – ತನ ]

**ಗಾವಿಲತ್ವ** (ನಾ). = ಗಾವಿಲತನ : ದೇವಯಿದು ದಲು ಕಾರಣಂ ನಿನಗಾವ ತೆಱದೊಳಗಂಜುವೆಂ ಮುಂ ಗಾವಿಲತ್ವದೊಳೆಂದು ಪಡೆದಾ ಲಾಭವದೆ ಸಾಲ್ಗುಂ (ಸಾನಂದ. ೭-೬೩). [ < ಸಂ. ಗ್ರಾಮೀಣತ್ವ ]

**ಗಾವಿಲನುಡಿ** (ನಾ). ದಡ್ಡತನದ ಮಾತು ; ಮೂಢತನದ ನುಡಿ : ದೈವವೆಂದವನನೀಶಕೃತವೇದಂ ಸ್ವಯಂಭುವೆಂಬಾ ಗಾವಿಲನುಡಿಯು (ಪದ್ಮರಾ. ೦೦-೦೯೩). [ ಗಾವಿಲ + ನುಡಿ$_2$ ]

**ಗಾವಿಲಿ** (ನಾ). ಗಾವಿಲತನವನ್ನು ಹೊಂದಿರುವವಳು ; ದಡ್ಡಳಾದ ಹೆಂಗಸು ; ಹೆಡ್ಡೆ : ಕಂತು ಬಿಲ್ದಿಗೆಯ ಬಟೆಕ್ಕೆ ಕೈದೆಗೆವ ಗಾವಿಲಿ [ ಪಾಠಾಂ. ಲೆ ]ಗೇವುದೋ ಬೇಟದಚ್ಚಿಗಂ (ಲೀಲಾವ. ೧೪-೩೭).

[ ಗಾವಿಲ + – ಇ$_3$ ]

**ಗಾವಿಲಿಕೆ** (ನಾ). = ಗಾವಿಲತನ : ಪೆಱರ ವಿಭವಕ್ಕೆ ಬಯಸುವ ಮಱುಗುವ ಗಾವಿಲಿಕೆಯೇಕೆ (ಅಜಿತ. ೧೦-೪೨) ; ಹೋಮಂಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆನ್ಗಳಂ ಪೊಯ್ದುಕೊಂಡರೆಂಬ ಗಾವಿಲಿಕೆಯಂ ಮಾಡಿ (ಧರ್ಮಾಮೃ. ೦೦-೫೨). [ ಗಾವಿಲ + – ಇಕೆ ]

**ಗಾವಿಳೆ** (ನಾ). = ಗಾವಿಲಿ : ಕಂತು ಬಿಲ್ದಿಗೆಯ ಬಟೆಕ್ಕೆ ಕೈದೆಗೆವ ಗಾವಿಳೆ [ ಪಾಠಾಂ. ಲಿ ] ಗೇವುದೋ ಬೇಟದಚ್ಚಿಗಂ (ಲೀಲಾವ. ೧೪-೩೭).

[ ಗಾವಿಲ + – ಎ$_2$ ]

**ಗಾವಿಳ** ' ಗಾವಿಲ ' ನೋ.

**ಗಾವು** (ನಾ). ಗ್ರಾಮದೇವತೆ ಮೊದಲಾದ ದೇವರುಗಳ ಮುಂದೆ ಪೂಜಾರಿಯು ಬಲಿಗಾಗಿ ಕುರಿಯನ್ನು ಹಲ್ಲಿನಿಂದ ಕಚ್ಚಿ ಕೊಲ್ಲುವುದು. ' ಗಾವುಗುಱಿ', ' ಗಾವುಮರಿ ' ಪರಾ.

**ಗಾವಿನಮರಿ**=ಗ್ರಾಮದೇವತೆಯ ಮುಂದೆ ಪೂಜಾರಿ ಹಲ್ಲಿನಿಂದ ಕಚ್ಚಿ ಕೊಲ್ಲುವ ಕುರಿ : ಗಾವಿನಮರಿ ಅರಚಿಕೊಳ್ಳುವುದನ್ನು ಕೇಳಲಾಗುವುದಿಲ್ಲ (ಕೂಧಿ). **ಗಾವುಕಟ್ಟು** = ಗ್ರಾಮದೇವತೆ ಮೊದಲಾದ ಕ್ಷುದ್ರಶಕ್ತಿಗಳಿಗಾಗಿ ಬಾಯಿಯಲ್ಲಿ ಕಚ್ಚಿ ಕುರಿಯನ್ನು ಬಲಿಕೊಡು : ಇವನು ಕಗ್ಗಲಿಯಮ್ಮನ ಪೂಜಾರಿ. ಊರ ದೊಡ್ಡ ಹಬ್ಬದಲ್ಲಿ ಇವನು ಗಾವು ಕಟ್ಟುತ್ತಾನೆ (ನನ್ನೂರು. ೧೦) ; ಶಕ್ತಿದೇವತೆಗಳ ಆರಾಧನೆಯಲ್ಲಿ ಆವೇಶಗೊಂಡ ಪೂಜಾರಿ ಕುರಿಯ ಕುತ್ತಿಗೆಯನ್ನು ಕಚ್ಚಿ ರಕ್ತಹೀರುವುದು. ಇಡೀ ಆಚರಣೆಗೆ ' ಗಾವುಕಟ್ಟುವುದು ' ಎನ್ನುತ್ತಾರೆ (ನನ್ನೂರು. ಟಿಪ್ಪಣಿ). **ಗಾವುಸಿಗಿ** = ಗಾವಿನ ಮರಿಯನ್ನು ಹಲ್ಲಿನಿಂದ ಕಚ್ಚಿ ಸಿಗಿ, – ಸೀಳು: ಗಾವುಸಿಗಿದಾದ ಮೇಲೆ ಎಲ್ಲರೂ ದೇವರನ್ನು ಹೊರಡಿಸಿಕೊಂಡು ಊರಿಗೆ ಬಂದು ಗುಡಿದುಂಬಿಸುತ್ತಾರೆ (ನನ್ನೂರು. ೬೫).

[ ದೇ॥ ತಮಿ. ಕಾವು; ತೆಲು. ಗಾವು ]

**ಗಾವುಂಡ** ' ಗಾಮುಂಡ ' ನೋ.

**ಗಾವುಂಡಪಂತ** (ನಾ). ಗೌಡನ ಅಧಿಕಾರ,—ಪದವಿ : ಶ್ರೀಕಲಿವಿಟ್ಟರಸರ ಬೆಸದೊಳತೀತನಾದೊಡಾತನ ಗಾವುಣ್ಡಗರಸನ್ನಾರ್ಟ್ಗಾವುಣ್ಡಪಂತಮನಿತ್ತೊಡೆ ಜಕ್ಕಿಯಬ್ಬೆ ನಾಟ್ಗಾವುಣ್ಡಗೆಯ್ಯುತ್ತಿರೆ (ಎಕ. VII, ಶಿಕಾರಿ, ೨೦೯-೦೦ ; 918). [ ಗಾವುಂಡ (<ಗಾಮುಂಡ) + ಪಂತ$_2$ ]

**ಗಾವುಂಡವಸದಿ** (ನಾ). ಒಂದು ಬಸದಿಯ ಹೆಸರು : ವಾಯುವ್ಯದ ಗೋಂಟನಲ್ ಸೋಭನೇಸ್ವರದ ಗಾವುಣ್ಡವಸದಿಯ [ಕೆಯ್ಯ ಮೇ]ರೆಯಲು (ಸೌಇಇ. XX, ೫೫-೫೩ ; 1082).

[ ಗಾವುಂಡ (<ಗಾಮುಂಡ) + ಬಸದಿ ]

**ಗಾವುಂಡವೃತ್ತಿ** (ನಾ). ೧. ಗೌಡಿಕೆಯ ವೃತ್ತಿ, – ಕೆಲಸ : ಕೀಳೂರು ಅಱಿಯೂರು . . . ಹೆನ್ನವುರದ ಗಾವುಣ್ಡವೃತ್ತಿಯುಮಂ . . . ಇತ್ತು

(ಎಳ. VII, ಶಿವಮೊ. ೦೦-೩೦ ; 1085 ?). ೨. ಗೌಡನಿಗೆ ಬಿಟ್ಟಿರುವ ವೃತ್ತಿ,-ಉಂಬಳಿ; ಗ್ರಾಮಾಧಿಕಾರ ನಿರ್ವಹಣೆಗಾಗಿ ಬಿಟ್ಟಿರುವ ಜಮೀನು. [ಗಾವುಂಡ (<ಗಾಮುಂಡ) + ವೃತ್ತಿ₂]

**ಗಾವುಂಡಸುಂಕ** (ನಾ). ತೆರಿಗೆಯಲ್ಲಿ ಗ್ರಾಮಾಧಿಪತಿಯ ಪಾಲು: ಸಿರಿಯಮ್ಮಗಾವುಣ್ಡಂ ಭೋಗೇಶ್ವರ ದೇವರ್ಗ್ಗೆ ತೋಂಟದಲಾದ ಗಾವುಣ್ಡ ಸುಂಕವಂ ಬಿಟ್ಟಂ (ಎಳ. XI, ಚಿತ್ರದು. ೭೮-೩೩ ; 1060) ; ಗಾವುಂಡನಿಗೂ . . . ತೆರಿಗೆಯ ಒಂದು ಭಾಗವನ್ನು 'ಗಾವುಂಡಸುಂಕ' ವೆಂದು ಬಿಟ್ಟು ಕೊಡುತ್ತಿದ್ದರು (ಕಶಾಅ. ೪೩೧). [ಗಾವುಂಡ (<ಗಾಮುಂಡ)+ಸುಂಕ]

**ಗಾವುಂಡಸ್ವಾಮಿ** 'ಗಾಮುಂಡಸಾಮಿ' ನೋ.

**ಗಾವುಂಡಿ, ಗವುಂಡಿ, ಗವುಡಿ₁, ಗೌಂಡಿ₁, ಗೌಡಿ₁, ಗೌವುಂಡಿ** (ನಾ). ೧. ಗಾವುಂಡನ ಹೆಂಡತಿ; ಗ್ರಾಮಾಧಿಕಾರಿಯ ಪತ್ನಿ; ಗೌಡಿತಿ: ಆಪೂರ ಗಾವುಂಡಂ ಜಿನವಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳ್ (ವಡ್ಡಾ. ಆ. ೦೦೦-೩೪) ; ಅತನ ಗಾವುಣ್ಡಿಗರಸರ್ನ್ನಾಟ್ಗಾವುಣ್ಡಿ ಪಂತಮನಿ ತ್ತೊಡೆ (ಎಳ. VII, ಶಿಕಾರಿ. ೩೦೯-೦೦ ; 918) ; ಅವರ ಶ್ರಾವಕಿ ಚನ್ನಿಯಬ್ಬೆ ಗಾ ವು ಣ್ಡಿ (ಎಳ. IX, ಕೊಡಗು. ೩೦-೦೦ ; ಸು. 1050 ?) ; ಕಾಮ ವೃತ್ತಿಯೆಂಬ ಗಾವುಂಡಂಗಂ ಇಪ್ಪದಾನಿಯೆಂಬ ಗಾವುಂಡಿಗಂ ಅಕೃತಪುಣ್ಯ ನೆಂಬ ಮಗಂ ಪುಟ್ಟಲೊಡಂ(ಜೀವಸಂ. ೩೦೦-೩೯ ಪ). **ಗವುಂಡಿ:** ೧. ನಚಿಬ್ಬೆ ಗವುಣ್ಡಿಯ ಮಗ ಅಮ್ಮಣ್ಣಗವುಣ್ಡ ತನ್ನೂರಬಿಮ ಕಣ್ಣು (ಎಳ. VIII, ಸೊರಬ. ೨೩೮-೯ ; 939). **ಗವುಡಿ₁:** ೧. ಸೋಮನಹಳ್ಳಿಯ ಮಾಯಿಂದೆಯ ಬಮ್ಮಗಾವುಣ್ಡಗಂ ಮಾದಿಗವುಡಿಗಂ ಪುಟ್ಟಿದ ಗೋತ್ರ ಪವಿತ್ರ ಸಾಮನ್ತ ಬೀಳೆಯನಾಯಕ (ಎಳ. VI, ಕಡೂರು. ೧೦೪-೭೨ ; 1141 ?) ; ಸೋಮಗೌವುಂಡಂಗಂ ನಾಗವ್ವೆಗವುಡಿಗಂ ಪುಟ್ಟಿದ ಪುತ್ರರು (ಎಳ. VI,ಕಡೂರು. ೩೦-೪೦ ; 1170). ೨. ಊಳಿಗದವಳು; ಸೇವಕಿ; ತೊತ್ತು; ದಾಸಿ: ಅವನು ಅವಳ ಕೂಡ ೧೮ ವರ್ಷ ಸಂಸಾರ ಮಾಡಿದ ಮೇಲೆ, ಅವಳ ಗವುಡಿಯರಲ್ಲಿ ಒಬ್ಬಳಾದ ಆನ್-ಬುಲೀನಳೆಂಬವಳಿಗೆ ಮನ ಸೋತನು (ಇಂಗ್ಲಂಡ. ೧೦೩) ; ಗವುಡಿ ಹಾಡಿಗೆ ತವುಡೇ ತ್ಯಾಗ (ಗಾದೆ). **ಗೌಂಡಿ₁:** ೧. ಕೇತಗವುಣ್ಡಗಂ ಎಚಿಕಲುವೆಗೌಣ್ಡಿಗಂ ಸುಪುತ್ರಃ ಕುಲದೀಪಕಂ ಪುಟ್ಟಿ (ಎಳ. VI, ತರೀಕೆ. ೫೭-೨೩ ; 1097 ?) ; ದೇಕಬ್ಬೆ ಗೌಣ್ಡಿಯುಂ ಕೊಸಿಗವಳ್ಳಿಯ (ದೊಂಕಶಾ. ೧೯೪೦, ಸಿರಸಿ. ೬೨-೦೨ ; ?). **ಗೌಡಿ₁:** ೧. ಬೊಂಮ್ಮಗೌಡಂಗಂ ಮಸಣಗೌಡಿಗಂ ಪುಟ್ಟಿದ ಸು[ಪು]ತ್ರರು (ಎಳ. XII, ಚಿಕ್ಕನಾ. ೧೩-೩೯ ; 1181). ೨. ನನ್ನಂತ ಗೌಡಿಯರು ನಿನ್ನ ಪಾದಪದ್ಮಸಮೀಪದೊಳ್ ಬಿದ್ದಿರುವರು (ಸೌಗಂಧಿ. ೩೪೭-೫) ; ದುಶ್ಶಾಸನನು ಕುರುಳನ್ನು ಹಿಡಿದು ಸಭಾಮಧ್ಯಕ್ಕೆ ಎಳೆದುಕೊಂಡು ಬಂದು ಗೌಡಿಯಂತೆ ಎಣಿಸಿ ಅವಮಾನಪಡಿಸಲು (ಕೃಪಾಅ. ೦೩೬) ; ಈ ಮಾತು ಗೌಡಿಯಿಂದ ಗೌಡಿಗೆ ಹೋಗಿ ಆ ಗೌಡಿಯಿಂದ ರಾಣಿಗೆ ಮುಟ್ಟಿ (ಸಿಡ್ನ.ಕ. VIII, ೩೩) ; ಉಪಚಾರಕ್ಕೂ ಕೆಲಸಕ್ಕೂ ಇಬ್ಬರು ಗೌಡಿಯರು ಬಂದರು (ಹೀರೇಮೂ. ೧೮). **ಗೌವುಂಡಿ:** ೧. ಮಾಚಗೌವುಣ್ಡನಾತನ ಮನೋವಲ್ಲಭೆ ಮಾಚಗೌವುಣ್ಡಿಯ ಮಗಂ ಕಾಳಗಾವುಣ್ಡ (ಎಳ. V, ಬೇಲೂರು. ೨೦೨-೫ ; 1138). [ಗಾವುಂಡ (<ಗಾಮುಂಡ) + - ಇ₂]

**ಗಾವುಂಡಿಕೆ, ಗಉಡಿಕೆ, ಗವುಂಡಿಕೆ, ಗವುಡಿಕೆ, ಗಾವುಂಡಿಗೆ, ಗೌಡಿಕೆ, ಗೌವುಂಡಿಕೆ** (ನಾ). ಗಾವುಂಡನ ಕೆಲಸ; ಗ್ರಾಮಾಧಿಪತ್ಯ: ರಾಜಧಾನಿ ಯಣ್ಣಿಗೆಬೆಯ × × × ರಿಯ ಗಾವುಣ್ಡಿಕೆ × × × ಡೆಯರೆನಿಸಿ (ದೊಂಕಶಾ. ೧೯೨೯, ನವಲಗುಂದ. ೨೦೭-೩೯ ; 1172). **ಗಉಡಿಕೆ:** ಹಾನಗಲ ಲಿಂಗೇಗಉಡರಿಗೆ ಹಾ × × × ಟ್ಟ ಗಉಡಿಕೆ (ಎಳ. IX, ಕೊಡಗು. ೬೩-೬ ; ?). **ಗವುಂಡಿಕೆ:** ಹಲವುಕಾಲಂ ಗವುಂಡಿಕೆಯಂ ಮಾಡುತ್ತಿರ್ದಡವರ (ದೊಂಕಶಾ. ೧೯೪೦, ಸಿರಸಿ. ೬೨-೦೩ ; ?). **ಗವುಡಿಕೆ:** ಆ ಬಲ್ಲಗವುಡ ಕಾಮಗವುಡ ಬೊಂಮ್ಮಗವುಡಂಗಳ ಗವುಡಿಕೆಯ ಪ್ರಸಿದ್ಧ ಸೀಮಾಸಮನ್ವಿತವಹ ಎಸಗೂರ ಕ್ಷೇತ್ರ (ಎಳ. XI, ಚಿತ್ರದು. ೬೨-೪೦ ; 1286). **ಗಾವುಂಡಿಗೆ:** 'ಗಾವುಂಡಿಗೆನಿಲ್' ಪರಾ. **ಗೌಡಿಕೆ:** ಚಂದಿಮಯ್ಯಂ ಕುರಣಿಯ ತಂಮ ಗೌಡಿಕೆಯಂ ಕಲಿಯರ ಮಲ್ಲಿಸೆಟ್ಟಿ ಮಾಱಿಂ ಕೊಂಡು (ಎಳ. VII, ಶಿವಮೊ. ೬೪-೯೭ ; 1112 ?) ; ಶ್ರೀ ಕೇಶವದೇವರಿಗೆ ಗರ್ದ್ದೆ ಮತ್ತರು ಒಂದು ಗೌಡಿಕೆಯನುಳಿಹಿ (ಎಳ. VII, ಶಿಕಾರಿ. ೧೨೩-೭೫ ; 1159) ; ಮಂಚವಿರನ ಗೌಡಿಕೆಯಲು ಮಂಡಳಿಕಬಾರಿಗೆ ಕೊಟ್ಟ ಕೊಡಂಗೆ (ಮೈಆರಿ. ೧೯೨೯, ೪೦-೨೪ ; 1191) ; ಯಾತರ ಗೌಡಿಕೆ ಇದು ಮುಂಟ್ಯಾಳ ಗೌಡಿಕೆ (ಸಿಡ್ನ.ಕ. VI, ೬೨). **ಗೌವುಂಡಿಕೆ:** ತಂಮಪ್ಪ ಗೌಂಡರಿಗೆ ಗೌವುಂಡಿಕೆಯ ದಂಡಿಗೆ ಉಂಬಳಿ ಸರ್ವಮಾನ್ಯವಾಗಿ ಕೊಟ್ಟೆವು (ಎಳ. X, ಶಿಡ್ಲಘ. ೧೫-೦೭ ; 1528).

[ಗಾವುಂಡ (<ಗಾಮುಂಡ) + - ಇಕೆ]

**ಗಾವುಂಡಿಗೆ** 'ಗಾವುಂಡಿಕೆ' ನೋ.

**ಗಾವುಂಡಿಗೆನಿಲ್** (ಕ್ರಿ). ಗೌಡನ ವೃತ್ತಿಯನ್ನು ವಹಿಸಿಕೊಳ್ಳು; ಗೌಡಿಕೆಯನ್ನು ಹೊಂದು: ಆತನಿಂ ಬಳಿಕ ಗಾವುಣ್ಡಿಗೆನಿನ್ದನಾಹವಶೌಣ್ಡಂ ತೊಣ್ಣಂ (ಸೌಇಇ. XI-1, ೪೫-೦೩ ; '80).

[ಗಾವುಂಡಿಗೆ (<ಗಾವುಂಡಿಕೆ) + ನಿಲ್]

**ಗಾವುಂಡಿತಿ, ಗವುಡಿತಿ, ಗೌಡಿತಿ** (ನಾ).=**ಗಾವುಂಡಿ:** ದೇವಿಲನೆಂಬ ಗಾವುಂಡಂಗಂ ಸುದತಿಯೆಂಬ ಗಾವುಂಡಿತಿಗಂ ಧನಶ್ರೀಯೆಂಬ ಮಗಳಾಗಿ ನೀನಾಡುವೆಡೆಯೊಳ್ (ಜಾವುಂಪು. ೨೭-೦೫). **ಗವುಡಿತಿ:** (+). **ಗೌಡಿತಿ:** ಗೌಡಿತಿಯು ಒಳಗಿಂದ ಬಂದವಳೆ (ಹುಟ್ಟಿಹ. ೧೩೯).

[ಗಾವುಂಡ (< ಗಾಮುಂಡ) + - ಇತಿ₁ (< - ಇತ್ರಿ)]

**ಗಾವುಂಡು₁** 'ಗಾಮುಂಡ' ನೋ.

**ಗಾವುಂಡು₂** 'ಗಾಮುಂಡು₃' ನೋ.

**ಗಾವುಂಡುಗೆಯ್** 'ಗಾಮುಂಡಂಗೆಯ್' ನೋ.

**ಗಾವುಂಡುತನ** (ನಾ).=**ಗಾವುಂಡಿಕೆ:** ಕರಿವಿಡಿ ಹಿರೂರಲು ಗಾವುಂಡು ತನಂಗೆಯ್ಯುತ್ತಮಿರೆ (ಎಳ. XII, ತಿಪಟೂ. ೮೧-೭ ; 1114).

[ಗಾವುಂಡು₂ (<ಗಾಮುಂಡು₃) + - ತನ]

**ಗಾವುಗುರಿ** 'ಗಾವುಗುಱಿ' ನೋ.

**ಗಾವುಗುಱಿ, ಗಾವುಗುರಿ** (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿ; ಗಾವುಕಟ್ಟಲು ಸಿದ್ಧವಾದ ಕುರಿ: ಒಡೆವರು ದಿಗ್ಗಜಗಳ ಗಾವ[ ಪು ]ಗುಱಿಯಾಗೆ (ಪೋಹಕ. ೬೨-೪). **ಗಾವುಗುರಿ:** ವೈರಿಯನ್ನು ಕಂಡುಹಿಡಿದು ಅರೆದರೆದು ಕುಡಿದು ಬಿಡುತ್ತೇನೆ, ಗಾವುಗುರಿ ಹಾಯುತ್ತೇನೆ . . . ಅನಂತರ ಈ ಘಟಕ್ಕೇನಾದರೇನಂತೆ (ತುಂಗಭ..೫೫).

[ಗಾವು + ಕುಱಿ₃]

**ಗಾವುದ, ಗಾವುದು** (ನಾ). ದೂರವನ್ನು ಅಳೆಯುವ ಒಂದು ಅಳತೆ; ಎರಡು ಹರಿದಾರಿ; ಸುಮಾರು ಅರುಮೈಲಿ: ಮುನ್ದೆ ನಿನ್ದು ಕೂಱು ತೊಱದು ಮೂವತ್ತು ಗಾವುದ ××× ದೆವಸದೊಳೆಯ್ದಿ (ಸೌಇಇ. XI-1, ೧೧-೦೭ ; 865); ದೇಶದೇಶದ ಪತ್ತೆಂಟು ಗಾವುದದ ಮಾಹೇಶ್ವರರ್ ಕರುಣಿಸಿ ಬಂದು ಮುಂದೆ ನೆರೆದಿರೆ (ಬಸರ. ೬-೪೦) ; ಆ ಸ್ಥಳದ ನಾಲ್ಕೈದು ಗಾವುದದಳತೆಯೊಳಗಾರುಮಂ ಪೊರ್ದಲೀಯದೆ (ಶಬ್ದಾ. ೩-೦೬) ; ವರ ಸುವರ್ಣಸುರತ್ನ ಸರ್ವಾಭರಣಭವನಂಗಳಿಗೆ ಗಾವುದವೆರಡಱಲಿ ಹವಣಿಸಿ ದನಖಿಳಾಂಬರ ಸುವಸ್ತುಗಳ (ತೊರರಾ. ೦-೭-೫) ; ಸಲೆ ಮೂಱು ಗಾವುದ ಪರಿಯಂತ ರಿಪುಗಳ ಬಲವ ಮುಱಿದು ಬೆನ್ನಟ್ಟಿ (ಕಂನವಿ. ೦೭-೫೯). **ಗಾವುದಂ:** ನರರಥಂ ತೂಲ್ದಾ ಕುರುಕ್ಷೇತ್ರದಿಂ ಪಡುವೆಣ್ಗಾವುದು ಪೋಗೆ ಪೋಗಡಿಸುಮೆಂ (ಪಂಪಭಾ. ೧೧-೨೫). [<ಸಂ. ಗವ್ಯೂತ]

**ಗಾವುದಳವಿ** (ನಾ). ಒಂದು ಗಾವುದದ ಅಳತೆ; ಗಾವುದ ಪ್ರಮಾಣ; ಸುಮಾರು ಆರುಮೈಲಿ: ಕಡುಕೋಪದಿಂದ ಪೊಱಮಟ್ಟು ದಡದಡಿಸುತಂ ಗಾವುದಳವಿಯು ಬಟ್ಟೆಯಿಂದೂರ್ಗೆ ನಡೆತಂದು (ಬಸವ. ೧೧-೫೯).
[ ಗಾವುದ + ಅಳವಿ ]

**ಗಾವುದಿ** 'ಗಾವದಿ' ನೋ.

**ಗಾವುದು** 'ಗಾವುದ' ನೋ.

**ಗಾವುಮರಿ** (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿಮರಿ: ಗಾವಿಗೆ ಅರ್ಪಿಸುವ ಮರಿಯನ್ನು 'ಗಾವುಮರಿ' ಎನ್ನುತ್ತಾರೆ (ನನ್ನೂರು. ೮೯೩). [ ಗಾವು + ಮರಿ (<ಮಱಿ) ]

**ಗಾವುಳಿ** 'ಗಾವಳಿ' ನೋ.

**ಗಾವೆ** 'ಗಾವು' ನೋ.

**ಗಾಸಡಿ, ಗಾಸಿಡಿ** (ನಾ). ಗಂಟು; ಮೂಟೆ; ಗದಡಿ: ಗಾಸಡಿಯ (ಗಂಟುಗಳ)ಮೇಲೆ ಧಾರಣೆ ಇರತಕ್ಕ ಜೀನಸುಗಳು (ಮುಂಬವ್ಯಾ. ೧೩೪). **ಗಾಸಿಡಿ**: ತಂಬಾಕಾ ಗಾಸಿಡಿಯಲ್ಲಿ ಮುಂಬಯಿ ೧೪ ಮಣ ತಂಬಾಕ ಇರುತ್ತದೆ (ಮುಂಬವ್ಯಾ. ೧೩೪).
[ ←ಮರಾ. ಗಾಂಸಡೀ ]

**ಗಾಸಿ$_1$, ಘಾಸಿ$_1$** (ನಾ). ತೊಂದರೆ; ಹಿಂಸೆ; ಆಯಾಸ: ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ . . . ಕೋಡದೆ (ಗಿರಿಕ. ೯-೫೮ ವ); ಮಳೆಯು ಚಳಿಯು ಗಾಸಿ ಗಾಳಿ ನಿಲಿಸವೆಮ್ಮನು (ವಿಜಗೀ. ೮೨-೫); ಲಲಿತೆಯು ವಿಕಟಪರಿಸ್ಥಿತಿಯಲ್ಲಿ ಸಿಕ್ಕಿ ಗಾಸಿಯಾಗುತ್ತಿದ್ದಳು (ಪರಿತೀ. ೧೬); ಈ ಮೊನೆಯ ತಿವಿತದಿಂದ ಶಂಭುರಾಯರು ಗಾಸಿಯಾದರು (ಅನ್ನ. ೪೧). **ಘಾಸಿ$_1$**: ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ (ಪಾರ್ಶ್ವಪು. ೯-೨೮ ವ); ಇಂದಿಂದಿರಂಗಳ ಘಾಸಿಯಿಂ ಸ್ಯಂದಮಾನ ಮಕರಂದ ಬಿಂದು ಸಂದೋಹದ ತಂದಲಂ ಸುರಿವುದಱಿಂ (ಧರ್ಮಪು. ೦-೧೦೯ ವ); ಅಹಿತನ ಘಾಸಿಯಿಂದನಿಲಜನನುಗಿದನು ಬಗಿದು ರಿಪುಶರವ (ಕುವ್ಯಾಕ. ೨೦-೨೫). **ಗಾಸಿಮಾಡು, ಘಾಸಿಮಾಡು** = ತೊಂದರೆಗೊಳಿಸು; ಹಿಂಸಿಸು; ಕ್ಲೇಶಕ್ಕೆ ಗುರಿಮಾಡು; ಆಯಾಸಪಡಿಸು: ಕುಲವಳಿಯೆ ದೇಶವ ಗಾಸಿಮಾಡುವುದೈಸೆ (ಸಂಧಪ. ೦೫-೫೯); ಗಾಸಿಮಾಡುವನು ಮಕ್ಕಳನೇನು ಕೆಡಿಕನೊ ಕೂಸಾಟದೊಳು ಕೇಶವನು (ನೇಮಿಸಂ. ೦೫-೧೦೦); ಬಡಕಲಾಗಿ ಸೊರಗಿಹೋದ ಗೋಪಿಯ ದೇಹ ಆಕೆಯನ್ನು ಗಾಸಿಮಾಡಿತು (ಕುಹಕೊ. ೦೦೪); ಘಾಸಿಮಾಡುವ ದೇಹ ಹೇಸಿಕೆಗೆ ನಾನಾಱೆ (ದೀಕ್ಷಾಬೋ. ೮೫-೧೩); ವೈರಿಬಲವನು ಘಾಸಿಮಾಡಿದರೊಗ್ಗಿನಲಿ ಹಮ್ಮೀರ ರಾವುತರು (ಕುವ್ಯಾಛೀ. ೪-೬೨). **ಗಾಸಿಯಾಗು, ಘಾಸಿಯಾಗು**=ತೊಂದರೆಗೊಳ್ಳು; ಕಷ್ಟಪಡು; ಆಯಾಸಪಡು; ಬಳಲು: ಕಿಡಿ ಸೂಸಿ ಸುಯ್ಯುದ್ದ ಗಾಸಿಯಾಗಿ ಮದಗೆಡೆದು ಮದವಳಿದಿರ್ಪ ಮಾತಂಗವ್ರಾತದಿಂ(ಗಿರಿಕ.೯-೨೬ವ); ಭೂಸುರರು ಚೋರರುಗಳಿಂದವೆ ಗಾಸಿಯಾಗಿ (ಕುವ್ಯಾಸ. ಒರಿಇ. ೧೫-೧೪೧); ಈಸು ದಿನಮೆನ್ನೊಡನೆ ಕಾಳೆಗದೊಳಿದಿರಾಗಿ ಗಾಸಿಯಾಗದ ದೈತ್ಯರಿಲ್ಲ (ಚಲಪು. ೨೫-೧೪); ಆಸೆಯಿಂದ ಘಾಸಿಯಾಗಲೇಕಯ್ಯಾ (ಅವಕಂ. ೦೦೬-೪೮೪); ಅಭಿಮನ್ಯುವೀ ದುಶ್ಶಾಸನನ ಮಗನಿಂದ ರಣದಲಿ ಘಾಸಿಯಾದನು (ಕುವ್ಯಾದ್ರೋ. ೮-೫೦); ಅನುಜರು ಘಾಸಿಯಾದರು ಹಿಂದೆ ಭೀಷ್ಮಾದಿಗಳ ಬವರದಲಿ (ಕುವ್ಯಾಕ. ೦-೬೨). **ಗಾಸಿವೀಸಿ** = ಗಾಸಿ$_1$; ನೀಲವ್ವನ ಒಡಲು ಕುದಿದೆದ್ದಿತು; ಮನಸ್ಸು 'ಗಾಸಿವೀಸಿ' ಯಾಯಿತು (ಬರಹಾ. ೧೧೪): ಇಬ್ಬರ ಕೈಯಲ್ಲಿ ಸಿಕ್ಕು ಗಾಸಿವೀಸಿಯಾದಂತೆ (ಸಾಹಿತ್ಯಾಂ. ೪೬).
[ ದೇ. ತಮಿ. ಕಾಚಿ; ತುಳು. ತೆಲು. ಗಾಸಿ ]

**ಗಾಸಿ$_2$, ಗಾಸೆ$_1$** (ನಾ). ೧. ಕುದುರೆಯ ಜೀನಿನ ಮೇಲೆ ಅಲಂಕಾರಕ್ಕಾಗಿ ಹಾಕುವ ವಸ್ತ್ರ: (+). **ಗಾಸೆ$_1$**: ೨. ತೆಳುವಾದ ಹೊದಿಕೆ: ರೇಶಿಮೆಯ ಮೆತ್ತಗಾದ ಗಾಸೆಗಳನ್ನು ಹಾಸಿ (ಮುಂಬುಕ. ೦೮೮).
[ ← ಅರ. ಗಾಶಿಯಾ; ಹಿಂ. ಗಾಸಿಯಾ; ಮರಾ. ಗಾಶಾ ]

**ಗಾಸಿಗೆಯ್, ಗಾಸಿಗೈ** (ಕ್ರಿ). ತೊಂದರೆಯನ್ನುಂಟುಮಾಡು; ಹಿಂಸಿಸು: ಲೇಸುಲೇಸೈ ಕೃಷ್ಣ ನಮ್ಮನು ಗಾಸಿಗೆಯ್ಯುತೆ ಪೋಗುವರೆ (ಅಕ್ರೂಚ. ೯-೬೮); ಮೊಗದೊಳ್ ಮೊಗವಿಟ್ಟು ಮುದ್ದಿಪ ನೆವದಿಂ ಗಾಸಿಗೆಯ್ದಂ (ಚಿಕವಂ. ೬೯-೧೬). **ಗಾಸಿಗೈ**: ಕಟ್ಟಾಸುರದ ಬೇಸಗೆಯೊಳೋಸರಿಸದೆ ಗಾಸಿಗೈದನೆನುತೆಯೆ? (ರಾಮಾಶ್ವ. ೧-೯).
[ ಗಾಸಿ$_1$ + ಕೆಯ್$_1$ ]

**ಗಾಸಿಗೈ** 'ಗಾಸಿಗೆಯ್' ನೋ.

**ಗಾಸಿಗೊಳಿಸು, ಘಾಸಿಗೊಳಿಸು** (ಕ್ರಿ). ತೊಂದರೆಯನ್ನುಂಟುಮಾಡು; ಕ್ಲೇಶಪಡಿಸು; ನೋವನ್ನುಂಟುಮಾಡು: ಆ ಹಾವುಗಳು ನನಗೆ ಅಪ್ಪರೆನಿಸಿದವರನ್ನೆಲ್ಲಾ ಕಡಿದು ಗಾಸಿಗೊಳಿಸಿದುವು (ಹಾಡುಕ. ೦೦೦); ಸುಮ್ಮನೆ ಮನಸ್ಸನ್ನು ಗಾಸಿಗೊಳಿಸಬೇಡಿ (ಕೀಚೋದ. ೫). **ಘಾಸಿಗೊಳಿಸು**: ಯೌವನದ ಗಾಂಭೀರ್ಯ ಘಾಸಿಗೊಳಿಸದೇ ಇದ್ದ ಮುಗ್ಧಸೌಂದರ್ಯ (ಬಕಾಂಗಿ. ೮). [ ಗಾಸಿ$_1$ + ಕೊಳ್$_1$ + – ಇಸು$_3$ ]

**ಗಾಸಿಗೊಳ್ಳು** (ಕ್ರಿ). ತೊಂದರೆಪಡು; ಕ್ಲೇಶಪಡು: ಮನಸ್ಸು ಗಾಸಿಗೊಂಡಿದೆ (ನನ್ನಹೊ. ೩೫). 'ಗಾಸಿಗೊಳಿಸು' ಪರಾ.
[ ಗಾಸಿ$_1$ + ಕೊಳ್ಳು (<ಕೊಳ್$_1$) ]

**ಗಾಸಿಡಿ** 'ಗಾಸಡಿ' ನೋ.

**ಗಾಸಿವಡೆ** (ಕ್ರಿ). ಬಳಲು; ದಣಿ; ಆಯಾಸಗೊಳ್ಳು: ಲೇಸಿನ ವಿಟರ ಮಯುವದಲಿ ಮೋದದೆ ಚೌಶೀತಿ ಬಂಧದೆ ಕೂಡಿ ಗಾಸಿವಡೆದು ಚಂದ್ರಶಾಲೆಯೊಳ್ ತಂಗಾಳಿ ಬೀಸಿದೊಡೆದೆಯನೊಡ್ಡುವರು (ಮೋಹತ. ೦೮-೪೯); ಗಾಸಿವಡೆದ ಮೂಸೆಯಂತೆ ಎಂತು ಬಾಳ್ವೆನಕಟ! (ಕವಿಕಾ. ೮೪-೦೦).
[ ಗಾಸಿ$_1$ + ಪಡೆ$_1$ ]

**ಗಾಸೆ$_1$** 'ಗಾಸಿ$_2$' ನೋ.

**ಗಾಸೆ$_2$** 'ಕಾಸೆ$_1$' ನೋ.

**ಗಾಹ** (ನಾ). ೧. ಮುಳುಗುವಿಕೆ; ಜಳಕ; ಸ್ನಾನ. ೨. ಅಡಗಿಕೊಳ್ಳುವುದು. 'ಅವಗಾಹ' ಪರಾ. ಶಿ. ಆಳ. [ ಸಂ. ]

**ಗಾಹನ** (ನಾ).=ಗಹನ೭: ಮೋಹಮೋಹ ಬಿಡದೆ ಆಹಾರ ಇಂದ್ರಿಯಂಗಳ ಗಾಹನದೊಳಗೆ ಬಿದ್ದು ಅಹಸ್ಸು ಕಳೆವೇನೊ (ಮೋಕ್ಷದೀ. ೩೫-೨). [ ಸಂ. ]

**ಗಾಹಿ** (ನಾ). ಮೋಸಗಾರ; ಕಪಟಿ: ಗಾಹಿ ಕೌಶಿಕನ ಕೃತ್ರಿಮಸರ್ಪದಷ್ಟದಿಂ ನಿದ್ರೆ ತಿಳಿದೇಳುವಂತೆ (ಹಕಾ. ೦೪-೯). [ ಗಾಹು$_2$+ –ಇ$_3$ ]

**ಗಾಹಿಲ** (ನಾ). ಇಲ್ಲದಾಗುವಿಕೆ; ಮರೆಯಾಗುವಿಕೆ; ನಾಶವಾಗುವಿಕೆ. **ಗಾಹಿಲಾಗು**=ಇಲ್ಲವಾಗು; ಮರೆಯಾಗು: ಬಾಹುಮುರಿದಂತಸುರನಾಯಕಗಾಹವದ ರಣಶೂರ ಕೈಬಿಟ್ಟೈದೆ ಗುರುಬಲವೇ ಗಾಹಿಲಾದಂತೂರೆ ಹ್ಯಾಗೆಂದಾಹಗೊಳುವಾಗ ಪರದಿಗ್ವಧು ಮೋಹಕ್ಕೆದಿದ ಬಟ್ಟು ಪದ್ಮಿನಿ ಪದ್ಮಬಾಂಧವನೂ (ಚಿರಾಮಾ. ೨೩೮-೨). [ ←ಮರಾ. ಗಾಹಾಳ್ ]

**ಗಾಹಿಲಂಬಡು** (ಕ್ರಿ). ಕಷ್ಟಪಡು; ತೊಂದರೆಯನ್ನನುಭವಿಸು (?): ದೇಹದೊಳಗಿರಲಾತ್ಮಧರ್ಮದ ನೇಹದಿಂ ಸ್ವರ್ಗಾದಿ ಭೋಗವನಾಹನಲದನ್ಯಾಯ ನಡತೆಯೊಳೊಕ್ಕು ನರಕವನು ಗಾಹಿಲಂಬಡುತಿಹನು (ಬಿಜ್ಜಪು. ೮೫-೪೨). [ ಗಾಹಿಲ? + ಪಡು$_1$ ]

**ಗಾಹಿಸು$_1$** (ಕ್ರಿ). ೧. ಹರಡು; ವ್ಯಾಪಿಸು: ಸೀರೆಯೊಟ್ಟಲು ಗಗನವನು ಗಾಹಿಸಿತು (ಕುವ್ಯಾಸ. ೦೫-೨); ಗಾಹಿಸಿತು ನಿನ್ನಾಜ್ಞೆ ಜಗದಲಿ ಮುಂ:ು ಗೆಸ್ಟಿನಲ (ನಿಘಾಗ. ೧-೧೨-೨೬). ೨. ಮುಳುಗು: ಮೋಹ ಸರ್ವಸ್ವಗಳ ರಾಗಾಬ್ಧಿಯೋ ಬ್ರಹ್ಮ ಗಾಹಿಸದರೊಳಗೆ ನೀಂ ಮುಂಕುತಿಮ್ಮ (ಮಂಕುಕ. ೯೩೨). [ ಗಾಹು$_1$ + – ಇಸು$_3$ ]

**ಗಾಹಿಸು$_2$** (ಕ್ರಿ). **ಮೋಸಮಾಡು ; ವಂಚಿಸು :** ಆಹಾಹ ಹಸನಾಯ್ತು ಕೊಡಿರೇಕೆ ಪಾತ್ರೆಯಂ ಗಾಹಿಸಿಯೆ [ ಪಾಠಾಂ. ಓಹೋಹೊ, ಗಹಗಹಿಸಿ ] ಇಂತು ಕೊಂಡವರುಂಟೆ ಪಾತ್ರೆಯಂ (ತಿರುರ. ದೇ. ೧೩-೮). [ ಗಾಹು$_3$ + – ಇಸು$_3$ ]

**ಗಾಹು$_1$** (ನಾ). ೧. **ಆಳ ; ಅತಿಶಯಂತೆ ; ಆಧಿಕ್ಯ :** ಹೇಳ್ಯೆ ಪಾರ್ಥ ಮೋನದೊಳಿರದಿರೆನ್ನಾಣೆನಲು ಬೆಱಗಿನ ಗರದ ಗಾಹಿನಲದ್ದು ಮೋನ ದೊಳಿದ್ದನಾ ಪಾರ್ಥ (ಕುಮಾ್ಯ.ಕ. ೧೬-೬). ೨. (ಆಳವಾದ) **ತಿಳಿವು ; ಅರಿವು.** ' ಗಾಹುಗೊಳ್ ' ಪರಾ. [ <ಸಂ. ಗಾಹ ]

**ಗಾಹು$_2$** (ನಾ). **ಹಿಡಿತ ; ಪ್ರಭಾವ ; ಕೈವಾಡ :** ಹೂಹೆಗಳು ಹೊಯ್ದಾಡುವೇ ನಿರ್ವಾಹಸೂತ್ರದ ಕುಣಿಕೆಗಾರನ ಗಾಹಿನಲಿ (ಕುಮಾ್ಯ.ಸ. ೯-೯). [ <ಪ್ರಾ. ಗಾಹ./ಸಂ. ಗ್ರಾಹ ]

**ಗಾಹು$_3$** (ನಾ). ೧. **ಮೋಸ ; ಮಾಯೆ ; ವಂಚನೆ ; ಠಕ್ಕು :** " ಕಪಟಂಗಳೆ ಗನ್ನಗಾಹುಗಳ್ " (ಶಬ್ದಮ. ೨೬) ; " ಗಾಹೆನೆ ಕಪಟಕ್ಕೆ ನಾಮಂ " (ಭಾರನಿ. ೩೧) ; ಲೋಲಶ್ಮಶ್ರುಮುಖಂ ತೆಱಂಬೊಳೆವಿನಂ ಗಾಹಿಂಗೆ ಬೀಟ್ಟನ್ನಮಾಭೀಳಾಲೋಕದೆ ಸಾರ್ದು (ಸೂಕ್ತಿಸು. ೩-೩೧) ; ಗಾಹು ಕೊಳ್ಳದ ಭೀಮಪಾರ್ಥರ ಸಾಹಸವನೆಣಿಸುತ (ಕುಮಾ್ಯದ್ರೋ. ೧-೧೨) ; ಮೋಹದಲಿ ಮಾಯಾಪ್ರಪಂಚಿನ ದೇಹಸಿದ್ಧಿಯ ಪಡೆದೆನೆಂಬೀ ಗಾಹಿನಿಂದಲಿ ವಜ್ರಪಿಂಡ ಶರೀರ ಫಲಿಸಿದೊಡೆ (ಪ್ರಭುಲಿ. ೧೯-೩೦). ೨. **ಗುರಿ : ಉದ್ದೇಶ :** ಪೆರ್ದೊಡೆಯಂ ಕಡಿಖಂಡವಚ್ಚಿನಂ ತುಡುಕುವ ಗಾಹು ತಪ್ಪಿದೊಡೆ ಬೆಂಬಿಡದೆಯ್ದುವ . . . ನಾಯ್ಗಳಂ ಪಿಡಿದು (ಸಳಹಂ. ೩೪) ; ಗಾಹು ದೇಱಿಹುದೀ ಜಗದ ವ್ಯಗಾಹಿಗೋಸುಗ ಜನ್ಮವೆಂಬಿವು ಚೋಹವ್ಯಸಲ್ಲದೆ ವಿಚಾರಿಸೆ ಮಗನೆ ನಿನಗೆಂದ (ತೊರರಾ. ೦-೯-೩೬). [ ? ]

**ಗಾಹುಕಂಡಿ** (ನಾ). **ಮೋಸದಿಂದ ನುಸುಳಿಹೋಗುವ ಕಂಡಿ ; ಕಳ್ಳಗಂಡಿ ; ತಪ್ಪಿಸಿಕೊಳ್ಳುವ ಮಾರ್ಗ :** ಈ ಮಾಯೆಯು ಗಾಹು ಕಂಡಿಯೊಳು ನುಸುಳುವ ಮಾಯಾವಾದಿಗಳಂತಲ್ಲ ನೋಡಾ (ಅದವ. ೧೯೬). [ ಗಾಹು$_3$ + ಕಂಡಿ$_1$ ]

**ಗಾಹುಕಾಱ** (ನಾ). **(ಆಳವನ್ನು) ತಿಳಿದವನು ; ಜ್ಞಾನಿ :** ಮೋಹವಿಲ್ಲದೆ ಸಕಲಜೀವಸ್ನೇಹವುಳ್ಳ ವೀರಶೈವದ ಗಾಹುಕಾಱರು ಪರಮಸುಖಿಗಳು ಗಿರಿಜೆ ಕೇಳೆಂದ (ಪ್ರಭುಲಿ. ೨೫-೧೩). [ ಗಾಹು$_1$ + – ಕಾಱ ]

**ಗಾಹುಗತಕ, ಗಾಹುಗದಂಕು** (ನಾ). ೧. **ಮೋಸಗಾರಿಕೆ ; ಕಪಟ ; ಮೋಸ :** ಲಲಿತ ಮಾಯೆಯ ಗಾಹುಗತಕದ ಬಳೆಯುನಳವಡಿಸುವುದು . . . ಎಂದು ಸಾಱಿದರಬ್ಧಿಘೋಷದಲಿ (ಜೀವಂಚ. ೬-೪೬) ; ಗಾಹು ಗತಕದಲೆಮ್ಮ ಶಿಷ್ಯಂಗೀ ಹದನ ವಿರಚಿಸಿದೆ ನಿನ್ನಯ ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮ (ಕುಮಾ್ಯಗ. ೬-೪). ೨. **ಭ್ರಮೆ ; ಭ್ರಾಂತಿ :** ದೇಹವೇ ದೀವಿಗೆಯ ಕಂಬವದಾ ಹಣತೆಯೇ ಬಾಹ್ಯಕರಣ ಗಳೂಹಿಸಲು ಪ್ರಾಣಾದಿವಾಯುವೆ ತೈಲದಂತದಕೆ ಗಾಹುಗತಕದ ಸೂಕ್ಷ್ಮತನುವೇ ಮೂಹುರಿಯದಹ ವರ್ತಿಯಲ್ಲಿಯ ದೇಹಿಯೇ ಚಿದ್ದೀಪವದು ನೀನೆಂದು ನಿಶ್ಚಯಿಸು (ಅಮೃತ. ೩-೬೬). **ಗಾಹುಗದುಕು :** ೧. ಗಾಹುಗದುಕ [ ಪಾಠಾಂ. ದಕ, ದುಕು ] ನುಳಿದೇಱಿದರಶ್ವಾರೋಹಕರಾ ಸಮಯದಲಿ (ಕುರಾಸಾಂ. ೧೨-೮೮). ' ಗನ್ನಗತಕ ' ಪರಾ. [ ಗಾಹು$_3$ + ಗತಕ$_1$ ]

**ಗಾಹುಗದುಕು** ' ಗಾಹುಗತಕ ' ನೋ.

**ಗಾಹುಗಳ್ಳ** (ನಾ). **ವಂಚಿಸುವುದರಲ್ಲಿ ಕದೀಮನಾದ ಕಳ್ಳ ; ಪಕ್ಕಾ ಚೋರ :** ಇಂತೀ ಗಾಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನಡಿದು ಸರ್ವ ಸಂಸಾರದಲ್ಲಿ ಏಳುತ್ತ ಮುಳುಗುತ್ತ . . . ಸುಖಿಗಳೆಂತಪ್ಪರೋ (ಶವಿಚ. I, ೨೩೩ ಕೀಲಾರದ ಭೀಮಣ್ಣನ ವಚನ). [ ಗಾಹು$_3$ + ಕಳ್ಳ$_1$ ]

**ಗಾಹುಗಾತಿ** (ನಾ). **ಮೋಸಗಾತಿ ; ವಂಚಕಿ :** ಬರೆ ಲಗ್ನಂ ಱಶಿ ಸೂನೆ ಗೇಹದ ಕುಜತ್ರಿಂಶಾಂಶದೊಳ್ ರೋಹಿಣೀವರನಲ್ಲಿರ್ದೊಡೆ ಗಾಹುಗಾತಿ (ಜಾತತಿ. ೨೨-೩). [ ಗಾಹು$_3$ + – ಕಾತಿ$_6$ ]

**ಗಾಹುಗೊಳ್** (ಕ್ರಿ). **ಆಳವನ್ನು ತಿಳಿ, — ಕಾಣು, — ಅರಿತುಕೊಳ್ಳು :** ಆಹ ಶಿವಶಿವ ಬಹಳಜನ್ಮವ್ಯೂಹಚಿಂತಿತಯೋಗನಿಷ್ಠರು ಗಾಹುಗೊಳ್ಳದ ಗುರುವ ದೈವವನಕಟ ನಿಂದಿಸುತ (ನಿಭಾಗ. ೭-೦-೧೦). [ ಗಾಹು$_1$ + ಕೊಳ್$_1$ ]

**ಗಾಹುರ** (ನಾ). **ಆತುರ ; ವೇಗ ; ರಭಸ :** ಬೇಹರವುನೆಸಗಿಕೊಳುತಂ ಗಾಹುರದಿಂ ದಾರಿವಿಡಿದು ಬರ್ಪವಸರದೊಳ್ (ಹಾರಾಸ್ಯ. ೦-೪-೨೩). [ ಕಾಹುರ$_1$ ( < ಕಾವರ$_2$ ) ]

**ಗಾಹೆ** (ನಾ). **ಶ್ಲೋಕ ; ಹಾಡು :** ತಮ್ಮಯ್ಯಂ ಪೇಳ್ದ ಗಾಹೆಯಂ ಕಟ್ಟು ಪಂಜರದ ನಡುವಣ ನಾಗವೇದಿಕೆಯೊಳ್ ವಿನೋದದಿಂ ಬರೆದಿಟ್ಟಂ (ಪಂಚತಂ. ೧೯೪-೨೦) ; ಲೇಖಮಂ ಪಾವುಡವುನಭಿಜ್ಞನ ಗಾಹೆಯಂತಿರ ಲೋದಿಸದೆಯುಂ ಶೋಧಿಸದೆಯುಂ (ಅನಂಪು. ೦೩-೯೩ ವ) ; ಗಾಥಾ–ಗಾಹೆ (ಶಮದ. ೨೩೬ ಪ್ರಯೋ) ; ಆ ಹರಿಯ ಪರಮಹಿಮೆಯು . . . ಗಾಹೆ ವೇದಗಳಱಿಯವ್ವೆ (ಸಂಛಷ. ೪-೩೧) ; ಈ ಕಾರಣಗಳಿಂದ ನಾನು ಹೀಗೆ ಮಾಡಿದೆ ಎಂದು, ಅದನ್ನು ಸ್ಪಷ್ಟಪಡಿಸಲು ಈ ಗಾಹೆಗಳನ್ನು ಹೇಳಿತು (ಬುದ್ಧಕ. ೧೩). ' ಗಾದೆ ' ಪರಾ. [ <ಪ್ರಾ. ಗಾಹಾ./ಸಂ. ಗಾಥಾ ]

**ಗಾಳ, ಗಾಣ$_2$** (ನಾ). ೧. **(ಮೀನು ಹಿಡಿಯುವ) ಕೊಕ್ಕೆ, — ಕೊಂಡಿ :** ಖೇಚರಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು (ವರ್ಧಮಾ. ೩೬-೧೧) ; ಗಡಿಯರ ಸಿಂಗಂ ತೊಡರ್ದ್ದರ ಗಾಳಂ (ಸೌಇಇ. XI-II, ೧೩೩-೩೮ ; 1037) ; ಸೂಳೆಯರ್ ಗಾಳದ ಮೀನಂತಳವಟ್ಟಿಯೆ (ಧರ್ಮಾಮೃ. ೨-೬೯) ; ಗಾಳದಲ್ಲಿರುವ ಮಾಂಸವನ್ನು ಭಕ್ಷಿಸುವುದಕ್ಕೆ ಹೋದ ಮತ್ಸ್ಯದೋಪಾದಿಯಲ್ಲಿ (ಕೈಪಾಸ. ೦೩೦) ; ಒಕ್ಕಲಿಗರು ಗಾಳದ ಗಣೆಗಳನ್ನು ತೆಗೆದುಕೊಂಡು ಬಂದು ಹೆಂಗಸರ ಕಡವಿನಲ್ಲಿ ಕೂರುತ್ತಾರೆ (ಬಿಸ್ತಕ. ೧೨). ೨. **(ಅಲಂ) ಕುತಂತ್ರ ; ಹೂಟ :** ಅವನು ಆಕೆಯ ಗಾಳದಲ್ಲಿ ಸಿಕ್ಕಿಬಿದ್ದ (ರೂಢಿ). **ಗಾಣ$_2$:** ೧. ದನುಜರೆರೆಗಳ ಹಾಯ್ಕೆ ಗಾಣದಲನಿಮಿಷರನೀಡಾಡಿ ಕೊಂಡರು ದುರ್ಗವನು ಸುರರ (ಕುಮಾ್ಯಕ. ೬-೦೦) ; ಎಳೆದು ತರಿಸನೆ ತನ್ನ ಬಾಲವ ಕಳುಹಿ ಗಾಣ[ ಪಾಠಾಂ. ಳ ]ದ ಬಲೆಗೆ ಸಿಲುಕಿದ ಮೀನಿನಂದದಲಿ (ತೊರರಾ. ೪-೪-೪೩) ; ಖಳರ ಗಂಟಲ ಗಾಣನೋ ಜಗದೊಳಗೆ ಪ್ರವೀಣನೋ (ಪುರಂದ. ೦-೨೦೩-೦). [ ದೇ ಐ ತುಳು. ಗಾಳ, ಗಾಳೋ ; ತೆಲು. ಗಾಲ, ಗಾಲಾ ; ಪರ್ಜಿ. ಗೇಲ./ಪ್ರಾ. ಗಲಅ ]

**ಗಾಳಕ** (ನಾ). **ಪ್ರೌಢ ; ವ್ಯವಹಾರಚತುರ :** ಸಾತ್ವಿಕನಾದ ಧರ್ಮ ರಾಯನು, ಸಿಟ್ಟಿನ ಸ್ವಭಾವದ ಭೀಮಸೇನನನ್ನೂ–ತೇಜಸ್ವಿಯಾದ ಅರ್ಜುನನನ್ನೂ–ಗಾಳಕರಲ್ಲದ ನಕುಲ ಸಹದೇವರನ್ನೂ ಸಮದೃಷ್ಟಿಯಿಂದ ನೋಡಿ (ಕುಟುಂಬ. ೪೯). [ ←ತೆಲು. ಗಾಳಕು ]

**ಗಾಳಗಟ್ಟಿಗೆ** (ನಾ). **ಮೀನಂ ಹಿಡಿಯುವ ಗಾಳದ ಕಡ್ಡಿ, — ಕೋಲು :** ಇಟ್ಟಣಿಸಿದ ಮೀನನಿಳಿಗೆ ಸಳಿವ ಗಾಳಗಟ್ಟಿಗೆಗಳೊ ದೇವತೆಗಳ ಮುಟ್ಟಿ ತಿವಿವ ಸಬಳಗಳೊಯೆಂದೆನಲಲ್ಲಿ ನಟ್ಟ ಡೆಂಕಣಿಗಳೆಸೆದವು (ಕುರಾಸಾಂ. ೧೬-೧೪). [ ಗಾಳ + ಕಟ್ಟಿಗೆ$_1$ ]

**ಗಾಳಗಾರ** (ನಾ). **ಗಾಳದಿಂದ ಮೀನನ್ನು ಹಿಡಿಯುವವನು ; ಬೆಸ್ತ :** ಗಾಳಗಾರನಾ ಕೊಂಡಿಯೆರೆಯಂ ತಿಂದ ಬಾಳೆಮೀನಂ . . . ಸೋಲಿಸುವ ಮಾಳ್ಕೆಯಿಂದ (ಶ್ರೀರಾಮಾ. ೪೧೪-೨೯೩). [ ಗಾಳ + – ಗಾರ ( < – ಕಾಱ ) ]

**ಗಾಳನ** (ನಾ). ಸೋಸುವುದು ; ಶೋಧನ. ‘ಗಾಳಿಸು’ ಪರಾ. [ ಸಂ. ಗಾಲನ ]

**ಗಾಳಬ್ಬೆ** (ನಾ). ಒಬ್ಬಾಕೆಯ ಹೆಸರು : ಗಜ್ಜವೆಡಙ್ಗ ಶ್ರೀವತ್ ರಾಚೆಯರಸರ ಅರಸಿ ಗಾಳಬ್ಬೆಯರ್ ದೇಗುಲವಂ ಮಾಡಿಸಿ (ಎಕ. V, ಹೊಳೆನ. ೧೪-೧೩ ; ಸು. 960).

[ ಗಾಳ ?+ ಅಬ್ಬೆ$_1$ ]

**ಗಾಳಹಾಕು, ಗಾಣಹಾಕು** (ಕ್ರಿ). ೧. ಮೀನು ಹಿಡಿಯಲು ಗಾಳವನ್ನು ನೀರಿಗೆ ಬಿಡು : ಅವನು ಮೀನು ಹಿಡಿಯಲು ಗಾಳ ಹಾಕಿದ್ದಾನೆ (ರೂಢಿ). ೨. (ಅಲಂ) ಆಸೆ ತೋರಿಸು ; ಮರುಳುಗೊಳಿಸು : ಇಂಥ ಸಮಕಾಲೀನ ಶಬ್ದಗಳನ್ನು ಬಳಸಿ, ಜನರ ಮೆಚ್ಚಿಕೆಗೆ ಗಾಳಹಾಕತೊಡಗಿದರು (ಹುಚ್ಚುಬ. ೧೨೭). **ಗಾಣಹಾಕು :** ೨. ಇದೊಂದು ಆಷಾಢಭೂತಿ, ಹಳ್ಳಿಯವರಿಗೆ ಏನೋ ಗಾಣಹಾಕುವುದಕ್ಕೆ ಬಂದಿದೆ (ಸುವಸಂ. ೧).

[ ಗಾಳ + ಹಾಕು (<ಪಾಯ್ಕು$_1$) ]

**ಗಾಳಿ$_1$, ಘಾಳಿ** (ನಾ). ೧. ಎಲರು ; ವಾಯು ; ಮಾರುತ : “ಗಾಳಿಯೆ ವಾತದೊಳ್” (ಕರ್ಣನಿ. ೩೫) ; “ಗಾಳಿಯೆನೆ ಮಾತರಿಶ್ವಂ” (ಕಶಿರ. ೩೨) ; ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ ಸುಟ್ಟಿದೂದುವ ಗಾಳಿ ಬರ್ಪ ದೇವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು (ಕಾವ್ಯಸಾ. ೭೮ ಕೂರ್ಮ) ; ಗಾಳಿಯೆತ್ತಲು ಘಾಡಿಸುವ ಮೇಘಾಳಿಯೆತ್ತಲು (ಕುಮ್ಯಾಕ. ೧೦-೨೩) ; ಗರುಡನ ಗಟಿಯು ಗಾಳಿಗೆ ಫಣೆಗಳ ಮೊತ್ತ ಮುರಿಗೆಡೆದೋಡುವಂದದಲಿ (ಕಂನವಿ. ೧೫-೧೦೪) ; ಸ್ವಚ್ಛವಾದ ಗಾಳಿ ಬರಲಿಕ್ಕೆ ಮಾರ್ಗವಿರಬೇಕು (ಮುಂಬಯಿ. ೯-೨೫). ೨. ದೆವ್ವ ; ಪಿಶಾಚಿ : ಪೊಡೆದುದು ಗರವತಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೫೬೩) ; ಮಾನಿನಿ ಒಬ್ಬ ಸಂನ್ಯಾಸಿಯ ಕಂಡು ಧೇನಿಸಿ ಕೂಸೆಂದತ್ತ ಬರಲು ಏನು ಗಾಳಿ ಅವರಿಗೆ ಸೋಕಿತೆ ಎಂದು ಪುರಂದರ ವಿಠಲ ತನ್ನೊಳು ನಗುತಿದ್ದನು (ಪುರಂದ. ೧-೧೧೦-೯) : ‘ಆಚಾರ್ರು ಗಾಳಿಯಾಗಿದ್ದಾರೆ !’ ಎಂದು ಜನರಾಡಿಕೊಳ್ಳಲಾರಂಭಿಸಿದರು (ನನ್ನೂರು. ೦೯೬). ೩. ವಾಸನೆ ; ಸುಳಿವು : ನಾಯಿಗಳಿಗೆ ಯಾವುದೋ ಪ್ರಾಣಿಯ ಗಾಳಿ ಸಿಕ್ಕಿದೆಯೆಂದು ಎಲ್ಲರಿಗೂ ಗೊತ್ತಾಯಿತು (ಕಾನೂರು. ೧೪೦). ‘ಗಾಳಿಹಿಡಿ’ ಪರಾ. ೪. (ಅಲಂ) ವ್ಯಗ್ರವಾದಂದು : ಪ್ರತಿಭಾನ ಮನಸ್ಸು ಗಾಳಿಯಾಗಿತ್ತು (ಮೂಲಕಿ. ೧೪೩). ೫. (ಅಲಂ) ಪ್ರಭಾವ ; ವರ್ಚಸ್ಸು : ನಿನಗೆ ಅವರ ಗಾಳಿ ಚೆನ್ನಾಗಿ ಬೀಸಿದೆ (ರೂಢಿ). **ಘಾಳಿ :** ೧. ಮದದಾನೆ ಕಂಭಮಂ ಮುಱಿದು ಘಾಳಿಯಂತೆ ವೇಗಿಯುಂ ಕಲಿಯಂತೆ ನಿಶ್ಶಂಕನುಂ . . . ಆಗಿರ್ಪುದಂ ಕಂಡು (ಧರ್ಮಾಮೃ. ೧೩-೫೫ ಅಡಿಟಿ) ; ಘಾಳಿಯೊಳು ನಿಂದು ಧೂಳಿಯ ಹೊಯ್ಯುತಿದೆ (ಅದವ. ೧೫-೩೨) ; ಘಾ[ಪಾಠಾಂ. ಗಾ]ಳಿ ಬಂದ ಕೈಯಲ್ಲಿ ತೂಱಿಕೊಳ್ಳಿರೊ (ಪುರಂದ. ೨-೨೧ ಪಲ್ಲವಿ) ; ನಿಂದು ಕಣ್ಮುಚ್ಚಿ ಘಾಳಿಯು ಬೀಸುತೇ (ನವಮೋ. ೬-೭).

**ಗಾಳಿಗೆ ತೂರು** = ಉದಾಸೀನ ಮಾಡು ; ಕಡೆಗಣಿಸು ; ಎಸೆದುಬಿಡು : ತಮ್ಮ ಭಾವನೆಯಾದರೋ ಸುಲಭವಾಗಿ ಗಾಳಿಗೆ ತೂರಿಬಿಡತಕ್ಕುದಾಗಿಲ್ಲ (ದೆನ್ನಕೇ. ೦೪೯). **ಗಾಳಿಬಂದಲ್ಲಿ ಕೊಡೆ ಹಿಡಿ**=ಸಮಯಕ್ಕೆ ತಕ್ಕಂತೆ ವರ್ತಿಸು ; ಸಂದರ್ಭೋಚಿತವಾಗಿ ವ್ಯವಹರಿಸು : ಅಂತೂ ಗಾಳಿಬಂದಲ್ಲಿ ಕೊಡೆಹಿಡಿಯುವ ಜಾತಿಯವಳು (ಕೇಮೋದ.೩೫). **ಗಾಳಿಬಂದಾಗ ತೂರಿಕೊ**= ಅವಕಾಶವೊದಗಿದಾಗ ಕಾರ್ಯಸಾಧನೆ ಮಾಡಿಕೊಳ್ಳು : ಈ ಬೆರಳಿನಲ್ಲಿ ಒಂದು ಉಂಗುರ ಇಲ್ಲದಿರುವುದು ಮಾತ್ರ ದೊಡ್ಡ ಕೊರತೆಯೇ ಸರಿ ಎಂದು ಹೇಳಿ ಗಾಳಿಬಂದಾಗಲೇ ತೂರಿಕೊಂಡಳು (ಕೊನಷ್ಟ್ಯ. ೮೩) ; ಗಾಳಿಬಂದಾಗ ತೂರಿಕೊ (ಗಾದೆ). **ಗಾಳಿಯಸೊಡರು**=ನಶ್ವರವಾದುದು : ಸಂಸಾರವೆಂಬುದೊಂದು ಗಾಳಿಯಸೊಡರು ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ (ಬಸವ. ೧೬೪). [ ದೇಶ ತಮಿ. ಕಾಲಿ ; ತುಲು. ಗಾಲಿ, ಗಾಳಿ ; ತೆಲು. ಕೊಲಾ. ಗಾಲಿ ; ನಾಯ್ಕ. ಘಾಳಿ ]

**ಗಾಳಿ$_2$** (ನಾ). ನಿಂದೆ; ಬೈಗುಳು. ‘ಗಾಳಿವಾತ್ಸು$_2$’ ಪರಾ. [<ಸಂ. ಗಾಲಿ]

**ಗಾಳಿಕೂಳ** ‘ಗಾಳಿಗೂಳ’ ನೋ.

**ಗಾಳಿಕೊಡೆ** (ನಾ). ವೈಮಾನಿಕರು ವಿಮಾನದಿಂದ ಭೂಮಿಗೆ ಧುಮುಕಬೇಕಾದ ಸಂದರ್ಭದಲ್ಲಿ ಉಪಯೋಗಿಸುವ ಕೊಡೆ; ಧುಮುಕಂಕೊಡೆ; ಪ್ಯಾರಾಚೂಟು : ಧುಮುಕಿದರೂ ಪ್ರಾಣಕ್ಕೆ ಹಾನಿಯಾಗದಂತೆ ಕೈಯಲ್ಲಿ ಹಿಡಿದುಕೊಳ್ಳಲು ‘ಪೆರಾಚ್ಯೂಟ್’ಗಳೆಂಬ ಗಾಳಿಕೊಡೆಗಳನ್ನು ಉಪಯೋಗಿಸುತ್ತಾರೆ (ವಿಜ್ಞಾವಿ. ೭೯) ; ಆಗಾಗ ಆಕಾಶದಿಂದ ಬೆಳಕಿನ ಗಾಳಿಕೊಡೆ (Parachute)ಗಳನ್ನು ಹಾರಿಸಿ ಅವು ವೈರಿಪಾಳೆಯಗಳನ್ನು ಬೆಳಗುವಂತೆ ಮಾಡುವರು (ಬಾಲಪ್ರ. I, ೫೮೮).

[ ಗಾಳಿ$_1$ + ಕೊಡೆ$_2$ ]

**ಗಾಳಿಕೋವಿ** (ನಾ). “ಗಾಳಿಯ ಬಲದಿಂದ ಹೊಡೆಯುವ ತುಪಾಕಿ ; ಗಾಳಿಕೋವಿ ; ಗಾಳಿಬಂದೂಕು” (Air-gun. ಇಂಕನಿ).

[ ಗಾಳಿ$_1$ + ಕೋವಿ$_1$ ]

**ಗಾಳಿಕೋಳಿ** (ನಾ). ಗಾಳಿ ಬೀಸುವ ದಿಕ್ಕನ್ನು ತೋರಿಸುವುದಕ್ಕಾಗಿ ಎತ್ತರವಾದ ಕಟ್ಟಡಗಳ ಮೇಲೆ ನಿಲ್ಲಿಸಿದ ಸಾಧನ; ವಾಯುದಿಕ್ಸೂಚಿ : ನೆಲದ ಮಟ್ಟದಲ್ಲಿ ಗಾಳಿಯು ಯಾವ ಕಡೆಗೆ ಬೀಸುತ್ತದೆ ಎಂಬುದನ್ನು ಎತ್ತರದಲ್ಲಿ ಹಾರುವ ವೈಮಾನಿಕನಿಗೆ ತಿಳಿಸುವುದಕ್ಕೆ ಕತ್ತಲಲ್ಲಿ ಮಿನುಗುವ ಗಾಳಿಕೋಳಿ (Weather-cock)ಗಳನ್ನು ಇರಿಸುವರು (ಬಾಲಪ್ರ. II, ೮೮೩). [ ಗಾಳಿ$_1$ + ಕೋಳಿ$_1$ (<ಕೋಟಿ$_1$) ]

**ಗಾಳಿಗ** (ನಾ). ೧. ಗಾಳಿಯಲ್ಲಿ ಸಂಚರಿಸುವಂಥದು ; ದೆವ್ವ, ಭೂತ, ಪಿಶಾಚಿ ಮುಂತಾದುವು: ಗಾಳಿಗರುಂ ನೆಲಮುಕ್ಕ ಜಕ್ಕಿಯುಂ ಬೊರ್ಮನುಮೆಂದು ಜೀವವಧೆಗೈದರೆ ಕುತ್ತದ ದುಃಖದಿಂದ ಸಾಸಿರ್ಮಡಿ ದುಃಖಮಂ ಪಡೆವ ನಾರಕ ದುಃಖಮನ್ನೈದದಿರ್ಪರೇ (ಜಾಸ್ವಟೀ. ೨೪-೩). ೨. ಒಬ್ಬಾತನ ಹೆಸರು : ಓಲೆಯ ಚನ್ದಿಗನುಂ ಗಾಳಿಗನುಂ ಮೊದಲಾಗೆ ಅಯ್ನೂರ್ಬ್ಬರುಂ ತುಪ್ಪವನುಟ್ಟಿದೋರ್ (ಸೌಇಇ. XI-i, ೦೨-೧೪ ; 967).

[ ಗಾಳಿ$_1$ + – ಗ$_2$ ]

**ಗಾಳಿಗಂಟು** (ನಾ). ೧. (ಅಲಂ) ಗಾಳಿಯನ್ನು ಬಂಧನಮಾಡುವಂತೆ ಅಸಾಧ್ಯವಾದುದನ್ನು ಮಾಡುವ ಪ್ರಯತ್ನ ; ಅತಿಯಾದ ಸಾಹಸ ; ಅಸಾಧಾರಣ ಕಾರ್ಯ : ಏನೇನೊ ಗಾಳಿಗಂಟು ಮಾಡಿ ನೀರೆರೆದು ಈ ತೋಟ ಬೆಳೆಸಿದ್ದೇನೆ (ಮುಗಮೂ. ೬೦). ೨. (ಅಲಂ) ಮೋಸ ; ವಂಚನೆ : ಗಾಳಿಗಂಟು ಮಾತುಗಳಿಂದ ನಂಟರಂತೆ ತೋರುವ ಕಂಟರಂ (ಸೌಗಂಧಿ. ೦೩೪-೪). [ ಗಾಳಿ$_1$ + ಗಂಟು ]

**ಗಾಳಿಗಿರಣಿ** (ನಾ). ಗಾಳಿಯ ಸಹಾಯದಿಂದ ನಡೆಯುವ ಯಂತ್ರ : ಭೂಮಿ ಇಳಿವೆ ಸಮುದ್ರದ ಮಗ್ಗುಲಲ್ಲಿ ಸದಾ ಬೀಸುತ್ತಿರುವ ಗಾಳಿಗಳಿಂದ ‘ಗಾಳಿಗಿರಣಿ’ (Wind-mill)ಗಳನ್ನು ಮಾಡುತ್ತಾರೆ (ಬಾಲಪ್ರ. I, ೦೦೮) ; ಅಲ್ಲಲ್ಲಿ . . . ಗಾಳಿಗಿರಣಿಗಳಿವೆ (ಅಪೂಜ. ೦೯೦).

[ ಗಾಳಿ$_1$ + ಗಿರಣಿ$_1$ ]

**ಗಾಳಿಗುದುರಾಂಕ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು ; ಚಂದ್ರ ; ಮೃಗಾಂಕ : ಸುಚರಿತ್ರ ನಿಟಿಲನೇತ್ರಾ ಗಾಳಿಗುದುರಾಂಕನೆ [ ನ ] ರೆವೌಳಿ (ನವಮೋ. ೨೩-೦). P ಇದು ಅಶುದ್ಧ ಶಬ್ದ.

[ ಗಾಳಿಗುದುರೆ + ಅಂಕ$_2$ ]

**ಗಾಳಿಗುದುರೆ** (ನಾ). ವಾಯುದೇವನಿಗೆ ವಾಹನವಾದುದು ; ಜಿಂಕೆ ; ಮೃಗ. ‘ಗಾಳಿಗುದುರಾಂಕ’ ಪರಾ.

[ ಗಾಳಿ$_1$ + ಕುದುರೆ ]

**ಗಾಳಿಗುದ್ದು** (ಕ್ರಿ). ೧. ಗಾಳಿಯನ್ನು ಗುದ್ದು,-ತಿವಿ: ತಲೆಯ ಮೇಲೆ ಎಲ್ಲಿಂದೊ ಬಂತೊ ಈ ನಾದ ಗಾಳಿಗುದ್ದಿ. ಗೆಳೆಯ, ನೀವು ವೈಗರದಿ ರೆಂದು, ಛೀ! ನಂಬಬರದ ಸುದ್ದಿ (ಹೃದಸ. ೬೩-೪). ೨. (ಆಲಂ) ಉಪಯೋಗವಿಲ್ಲದ ಕೆಲಸವನ್ನು ಮಾಡು; ನಿರರ್ಥಕವಾದ ಕೃತ್ಯದಲ್ಲಿ ತೊಡಗು: ಇದೇನಾಟ, ಗಾಳಿಗುದ್ದಿ ಮೈನೋಯಿಸಿಕೊಳ್ಳುವುದು (ಕಸಬು. ೬೨); ಈಗಾಗಲೇ ಸರಕಾರದಿಂದ ರದ್ದುಮಾಡುವ ನೋಟೀಸು ಮುನಸೀಪಾಲಿಟಿಯ ಕೈಸೇರಿಹೋಗಿದೆ. ಇಂಥದರಲ್ಲಿ ಗಾಳಿಗುದ್ದುವದರಲ್ಲಿ ಯಾವ ಪುರುಷಾರ್ಥವೂ ಇಲ್ಲ (ಅಶನಾ. ೨೩೨); ಗಾಳಿಗುದ್ದಿ ಮೈನೋಯಿಸಿಕೊಂಡಂತೆ (ಗಾದೆ). [ ಗಾಳಿ$_1$ + ಗುದ್ದು$_1$ (<ಗುರ್ದು$_1$) ]

**ಗಾಳಿಗೂಳ, ಗಾಳಿಕೂಳ** (ನಾ). ೧. ಗಾಳಿಯನ್ನೇ ಆಹಾರವಾಗಿ ಉಳ್ಳ ಪ್ರಾಣಿ; ಎಲರುಣಿಗ; ಹಾವು; ಸರ್ಪ: ಒಂದು ರಾತ್ರಿಯಲಿ ಬೋಧಿಸಿದಳಾ ಖದ್ರು ಗಾಳಿಗೂಳರ್ಗೆ ಸಾಸಿರಫಣೆಗಳೊಪ್ಪದಿರೆ ಶಪಿಸಿದಳ್ (ರುಕ್ಮಾಂಗ. ೧೬-೪); ಗಾಳಿಗೂಳನ ಶತ್ರುವಾಳುವನ ಸನ್ಮಿತ್ರ (ನವಮೋ. ೨೩-೧). ೨. (ಆಲಂ) ಹಾವಿನಂತಿರುವವನು; ಕುಟಿಲ; ವಕ್ರ: ವೇಳೆ ವೃದ್ಧರ ನುಡಿಯ ಕೇಳ್ವನಲ್ಲಂ ನಿನಗೆ ಗಾಳಿಗೂಳರ ಮಾತು ಸೊಗಸು (ಜೀರಮ. ೨-೧). **ಗಾಳಿಕೂಳ**: ೧. ಗಾಳಿಕೂಳನ ಪಗೆಯ ವನಯ್ಕನಣುಗನನಾಳಿದನಣುಗನಾತ್ಮಜನ (ಅಮುಸಾಂ. ೬-೧೧೪).

**ಗಾಳಿಗೂಳನ ಹಗೆ**=ಹಾವಿನ ಶತ್ರು; ಗರುಡ, ನವಿಲು ಮೊದಲಾದುವು: ಗಾಳಿಗೂಳನ ಹಗೆಗೊಳಗಾದ ಶಿಬಿರವ ಕೇಳಿ ನಂದೀಶನೈತರಲು . . . ಹೀಯಾಳಿಸಿ ಬಿಟ್ಟುದಾ ನವಿಲ (ಶೋಹಕ. ೩೮-೩೦).

[ ಗಾಳಿ$_1$ + ಕೂಳ್ (<ಕೂಟು$_1$) + - ಅ$_7$ ]

**ಗಾಳಿಗೂಳ್ಕೊಳ್** (ಕ್ರಿ). ಗಾಳಿಯನ್ನೇ ಆಹಾರವಾಗಿ ತೆಗೆದುಕೊಳ್ಳು; ನಿರಾಹಾರವಾಗಿರು: ಪಲಗಾಲಂ ಗಾಳಿಗೂಳ್ಕೊಂಡಲಸದೆ . . . ಒಂದು ಕಾಲೊಳ್ ಸಲೆ ನಿಂದು (ವೀರಕ. ೧೩೦).

[ ಗಾಳಿ$_1$ + ಕೂಳ್ (<ಕೂಟು$_1$) + ಕೊಳ್$_1$ ]

**ಗಾಳಿಗೊಳ್** (ಕ್ರಿ). ದೆವ್ವ ಮೆಟ್ಟಿದಂತೆ ಆವೇಶಗೊಳ್ಳು; ಪರವಶವಾಗು: ಪಂದಿಯ ಬಟಿಯಂ ತಗುಳ್ದೊಡದು ಗಾಳಿಗೊಂಡೊಂದು ದೆಸೆಗೆವರಿದು (ವಡ್ಡಾರಾ. ೧೬೨-೧೬); ಗಾರ್ದಭಿಯೆಂಬ ದೇವತೆ ಕತ್ತೆಯ ರೂಪಾಗಿ ಗಾಳಿಗೊಂಡಂತೆ ಮಸಗಿ . . . ಪರಿತರೆ (ಬಂಹರಿ. ೬-೧೮ ವ); ಚೆಲ್ವನಪ್ಪ ವಾಜಿಯ ರೂಪನಳವಡಿಸಿ ಗಾ[ ಶಾಕಾಂ. ನಾ ]ಳಿಗೊಂಡು ಮಂದಿಯಂ ತುಳಿವುತ್ತಂ ಬಂದು ಪುರಮಂ ಪುಗೆ (ಪುಣ್ಯಾಸ್ರ. ೫-೬೧ ವ).

[ ಗಾಳಿ$_1$ + ಕೊಳ್$_1$ ]

**ಗಾಳಿಗೋಪುರ, ಘಾಳಿಗೋಪುರ** (ನಾ). ಗಾಳಿಯಂತೆ ಆಕಾರವಿಲ್ಲದ ವಸ್ತುವಿನಿಂದ ಕಟ್ಟುವ ಗೋಪುರ; ಕೈಗೂಡದ ಮನೋರಥ; ಈಡೇರದ ಆಸೆ: ಅದು ದಿಟದನಿರ್ಪುದೋ ಮೇಣ್ ಬರಿಯ ಆಸೆ ಬೀಸಿದ ಗಾಳಿಗೋಪುರವೊ ಎಂಬೊಂದು ಶಂಕೆಯುಯ್ಯಾಲೆಯಲ್ಲಿ ತೊನೆದಪ್ಪುದಯ್ ಶ್ರದ್ಧೆ (ಶ್ರೀರಾಮಾ. ೪೪೬-೪೦); ನನ್ನ ಸಂಕಲ್ಪ ಗಾಳಿಗೋಪುರವಾದಂತಿದೆ (ಹರಿಕೋ. ೬೦); ಗಾಳಿಗೋಪುರ ಕಟ್ಟುವಂತೆ ರಾಜ್ಯರಚನೆಯಲ್ಲಿ ಕೇವಲ ಮಾತಿನಿಂದ ಏನೂ ನಡೆಯುವುದಿಲ್ಲ (ಪ್ರಜಾಪ. ೮೮); ಆದರೆ ವಾಸ್ತವತೆಯ ಅರಿವು ಬಂದಾಗ ತನ್ನ ಕೆಲಸವೆಲ್ಲವೂ ಬರೀ ಗಾಳಿಗೋಪುರವೆಂದು ಅವಳು ನಿಟ್ಟುಸಿರು ಬಿಡುವಳು (ದೂರಸ. ೨೯೦). **ಘಾಳಿಗೋಪುರ**: ಘಾಳಿಗೋಪುರದ ಮುಂದೆ ಧಾಳಿಯಾಡುವಂತೆ ಸುತ್ತ ಧೂಳುಗಳನೆಬ್ಬಿಸಿ (ವಾದಿಕೀ. ೪೦-೨). [ ಗಾಳಿ$_1$ + ಗೋಪುರ ]

**ಗಾಳಿಚೆಂಡು** (ನಾ). ಗಾಳಿಯಲ್ಲಿ ಹಾರುವಂತೆ ರಚಿಸಿರುವ ಚೆಂಡಿನಾಕಾರದ ಹಾರುವ ಸಾಧನ; ಬಲೂನು: ದೊಡ್ಡದೊಂದು ಚೀಲದಲ್ಲಿ, ಬಿಸಿಗಾಳಿಯನ್ನು ತುಂಬಿಸಿ ಅದು ಗಾಳಿಯಲ್ಲಿ ಏರುವಂತೆ ಮಾಡಿ ಅದಕ್ಕೆ ತೂಗಿದ ಒಂದು ಬುಟ್ಟಿಯಲ್ಲಿ ತಾವು ಕುಳಿತು ಆಕಾಶವನ್ನು ಏರಿದರು. 'ಗಾಳಿಚೆಂಡು' (Baloon) ಎಂದು ಇದಕ್ಕೆ ಹೆಸರು (ಬಾಲಶ್ರ. II, ೧೧೨೬).

[ ಗಾಳಿ$_1$ + ಚೆಂಡು (<ಸೆಂಡು) ]

**ಗಾಳಿತುಂಬಿಸು** (ಕ್ರಿ). ೧. ಗಾಳಿ ತುಂಬುವಂತೆ ಮಾಡು. ಸೈಕಲ್ ಚಕ್ರಕ್ಕೆ ಗಾಳಿ ತುಂಬಿಸು (ರೂಢಿ). ೨. (ಆಲಂ) ಪ್ರೇರಿಸು; ಹುರಿದುಂಬಿಸು; ಪ್ರೋತ್ಸಾಹಿಸು: ಕೆಲಸದವಳ ಮೂಲಕ ಬೀಬಿಯನ್ನು ಚೆನ್ನಾಗಿ ಗಾಳಿ ತುಂಬಿಸಿಬಿಟ್ಟಿದ್ದೇನೆ (ಪ್ರೇಮೂಕ್ರ. ೨೩).

[ ಗಾಳಿ$_1$ + ತುಂಬಿಸು ]

**ಗಾಳಿತೇರು** 'ಗಾಳಿದೇರ್' ನೋ.

**ಗಾಳಿದೇರ್, ಗಾಳಿತೇರು** (ನಾ). ವಾಯುಮಂಡಲದಲ್ಲಿ ಚಲಿಸುವ ತೇರು,—ರಥ; ವಿಮಾನ: ಗಾಳಿದೇರೊಳ್ ಬೆಂಗದಿರನಂತೊಪ್ಪೆ ವೈದಿಕನೊರ್ವನೆಯ್ತರುತಿರಲ್ (ಅದ್ಭುತ. ೨೪-೧); ದೂರವೊಯ್ದು ಮರೆಯಾದುದಾ ಬಣ್ಣಬಣ್ಣದ ಗಾಳಿದೇರ್ (ಶ್ರೀರಾಮಾ. ೨೧೬-೧೮೬). **ಗಾಳಿತೇರು**: ಪ್ರೀತಿಯು ಮೊದಲು ಗಾಳಿತೇರಿನಲ್ಲಿಯೂ ಆಮೇಲೆ ಎತ್ತಿನ ಗಾಡಿಯಲ್ಲಿಯೂ ಕೊನೆಗೆ ಹೊರೆಹೊತ್ತೂ ಓಡುವುದೆನ್ನುವಂತೆ ದೊಡ್ಡನು ಅವಸರದಲ್ಲಿಯೇ ಹೊರಟನು (ಕಾಲೂರ. ೪ ಕಥಾಸಾರ).

[ ಗಾಳಿ$_1$ + ತೇರ್$_2$ ]

**ಗಾಳಿಪಟ** (ನಾ). ಕಾಗದ, ಕಡ್ಡಿ, ದಾರಗಳಿಂದ ಮಾಡಿ ಗಾಳಿಯಲ್ಲಿ ಹಾರಿಸುವ ಆಟದ ಪಟ; ಪತಂಗ: ಪಸುರ್ವಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಕಾ. ೧-೪೧); ಪಟಗಾಜನುಚ್ ಸೂತ್ರವಿಡಿದಿದ್ದರಾ ಗಾಳಿಪಟ ಗಗನದೊಳಾಡುವಂತೆ (ಭರಕ. ೨-೪೩).

**ಗಾಳಿಪಟದ ಹಬ್ಬ**=ಆಷಾಢಮಾಸದ ಮೊದಲ ಏಕಾದಶಿಯ ದಿನ ಗಾಳಿಪಟಗಳನ್ನು ಆಡಿಸಿ ಆಚರಿಸುವ ಹಬ್ಬ: ಈ ಸಲ ನಾನು ಗಾಳಿಪಟದ ಹಬ್ಬಕ್ಕೆ ಒಳ್ಳೆಯ ಪತಂಗವನ್ನು ಕಟ್ಟಿದ್ದೇನೆ (ರೂಢಿ).

[ ಗಾಳಿ$_1$ + ಪಟ$_3$ ]

**ಗಾಳಿಪಟಂಬಿಡು** (ಕ್ರಿ). ಗಾಳಿಪಟವನ್ನು ಬಿಡು,—ಹಾರಿಸು: ಕಡೆಗಣ್ಣಳ ರಂಚಿ . . . ಎನಸುಂ ಸೊಗಯಿಸಿದುದು ನರರೂಪದ ಮಿನುಗುವ ಗಾಳಿಪಟಂಬಿಟ್ಟಂಗಜನನುರಾಗದಿ ಪಿಡಿಯುಲ್ಪ ಜ್ ದೊಪ್ಪುವ ರಜ್ಜುವಿದೆಂಬಂತೆ (ಜಯಕಾ.೪-೨೮). [ ಗಾಳಿಪಟ + ಬಿಡು$_1$ ]

**ಗಾಳಿಪೂಜೆ** (ನಾ). ೧. ಶಕ್ತಿದೇವತೆಯ ಪೂಜೆ; ಪ್ರಾಣಿಬಲಿಯನ್ನು ಕೊಡುವ ಮಾರಿ ಪೂಜೆ,—ಕಾಳೀಪೂಜೆ: (+). ೨. ದೆವ್ವಗಳಿಗೆ ಪೂಜೆಮಾಡುವುದು: (+). [ ಗಾಳಿ$_1$ + ಪೂಜೆ$_3$ ]

**ಗಾಳಿಬಂದೂಕು** (ನಾ). ಗಾಳಿಯ ಒತ್ತಡದಿಂದ ಶಬ್ದಮಾಡುವ, ಗುಂಡಿಲ್ಲದ ಬಂದೂಕು,—ಕೋವಿ: ಹೆದರಬ್ಯಾಡ, ಸಣ್ಣಕಾಕಾ, ಇದು ಗಾಳಿಬಂದೂಕು (ನಿರಾಶ. ೬೧). 'ಗಾಳಿಕೋವಿ' ಪರಾ.

[ ಗಾಳಿ$_1$ + ಬಂದೂಕು ]

**ಗಾಳಿಬಡಿ** (ಕ್ರಿ). ೧. ದೆವ್ವ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳಿಂ ಮೆಟ್ಟಿಕೊಳ್ಳು; ದೆವ್ವಹಿಡಿ: ಎದುರು ಮನೆಯ ಹುಡುಗಿಗೆ ಗಾಳಿಬಡಿದಿದೆ (ರೂಢಿ). ೨. (ಆಲಂ) ಆಪತ್ತು ಒದಗು: ನನ್ನ ವಿಷಯಕ್ಕೆ ಬಂದೂನ ಭಯ ಮುರಿದಿತು ಎನ್ನುವಷ್ಟರಲ್ಲಿ ಅವಳಿಗೆ ಮತ್ತೊಂದು ಗಾಳಿಬಡಿದುಕೊಂಡಿತು (ಇಜ್ಯಕ. ೪೩೫).

[ ಗಾಳಿ$_1$ + ಬಡಿ$_1$ ]

**ಗಾಳಿಬಯಲು** (ನಾ). ಆವರಣವಿಲ್ಲದ ಬಯಲು; ಬಟ್ಟಬಯಲು: ಗಾಳಿಬಯಲಿನ ಬೀದಿ ಹೆಜ್ಜೆಮೂಡದ ಹಾದಿಯಲ್ಲಿ ಕುರುಹನು ಕಾಂಬ ಕಣ್ಣುಬರಲಿ (ಗರಿ. ೮೬-೧೦). [ ಗಾಳಿ$_1$ + ಬಯಲು (<ಬಯಲ್) ]

**ಗಾಳಿಬಾಳೆ** (ನಾ). ಒಂದು ಬಗೆಯ ಬಾಳೆ; ಕಪ್ಪುರಬಾಳೆ; ವಾಟ ಬಾಳೆ: ತಾಮ್ರದ ಹರಿವಾಣದಲ್ಲಿ ಎರಡು ಹಣತೆ ಗಾಳಿಬಾಳೆ ಹಣ್ಣುಗಳನ್ನಿರಿಸಿದ (ಜಿಗುಳ. ೯೬). [ ಗಾಳಿ$_1$ + ಬಾಳೆ$_1$ (<ಬಾಟಿ) ]

**ಗಾಳಿಬಿಡಿಸು** (ಕ್ರಿ). ೧. ಪಿಶಾಚಿಯನ್ನು ಬಿಡಿಸು: ಯಾರೋ ಒಬ್ಬ ಮಂತ್ರವಾದಿ ಬಂದು ಆಕೆಗೆ ಗಾಳಿಬಿಡಿಸಿದ (ರೂಢಿ). ೨. (ಆಲಂ) ಶಿಕ್ಷಿಸು; ಬುದ್ಧಿಕಲಿಸು: ಆ ಕಳ್ಳನಿಗೆ ಚೆನ್ನಾಗಿ ಗಾಳಿಬಿಡಿಸಿದರು (ರೂಢಿ). [ ಗಾಳಿ$_1$ + ಬಿಡಿಸು ]

**ಗಾಳಿಬುಡ್ಡೆ** 'ಗಾಳಿಬುರುಂಡೆ' ನೋ.

**ಗಾಳಿಬುರುಡೆ, ಗಾಳಿಬುಡ್ಡೆ** (ನಾ). ೧. ಗಾಳಿಯನ್ನು ತುಂಬುವ ಬುರುಂಡೆ. ೨. (ಆಲಂ) ಸತ್ವಹೀನವಾದುದು: ಅವನದು ಸ್ಥೂಲ ದೇಹ, ಆದರೆ ಬರೀ ಗಾಳಿಬುರುಡೆ (ರೂಢಿ). **ಗಾಳಿಬುಡ್ಡೆ**: ೧. ವಿಭುವೊಬ್ಬನೀ ಗಾಳಿಬುಡ್ಡೆಗಳನೂದುವನು ಹಬೆಗುಳ್ಳೆಯೋ ಸೃಷ್ಟಿ (ಮಂಕುಳ. ೮೩). [ ಗಾಳಿ$_1$ + ಬುರುಡೆ ]

**ಗಾಳಿಮಂಟಪ, ಘಾಳಿಮಂಟಪ** (ನಾ). ೧. ನಾಲ್ಕು ಕಡೆಯೂ ಗಾಳಿ ಬೀಸುವಂತೆ ತೆರೆದಿರುವ ಮಂಟಪ: (ಕ). **ಘಾಳಿಮಂಟಪ**: ೨. ದೇವಸ್ಥಾನದ ಒಂದುಭಾಗ: ಮಹಾಲಕ್ಷ್ಮೀದೇವಿ ಅಂಮನವರಿಗೆ ತಾವೂ ಮಾಡಿಸಿದಂಥಾ ಶೇವೆ . . . ತೆಂಕಣಗೋಪುರ ಆ ಬಾಗಿಲ ವಾಡಗಳು ಅಡಿಗೆಮನೆ ಆ ಮುಂದಣ ಚಪ್ಪರ ವೋಲಗದ ಘಾಳಿಮಂಟಪ (ಸೌಇಇ. IX-ii, ೩೮೩-೧೪ ; 1588). [ ಗಾಳಿ$_1$ + ಮಂಟಪ ]

**ಗಾಳಿಮಳೆ** (ನಾ). ಗಾಳಿಯಿಂದ ಕೂಡಿದ ಮಳೆ; ರಭಸದ ಮಳೆ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜಿರಾವರ್ತಿಮಳೆಯೂ ಸುರಿಯತೊಡಗಿತು (ಚಾಳಿಗಿ. ೭೭). [ ಗಾಳಿ$_1$ + ಮಳೆ (<ಮಟ್) ]

**ಗಾಳಿಮಾತು** 'ಗಾಳಿವಾತು$_1$' ನೋ.

**ಗಾಳಿಮೆಟ್ಟು** (ಕ್ರಿ). = ಗಾಳಿಹಿಡಿ ೧: ಹಾಳುಬಾವಿಯ ಬಳಿಗೆ ಹೋದಾಗ ಅವಳಿಗೆ ಗಾಳಿಮೆಟ್ಟಿಕೊಂಡಿತಂತೆ (ರೂಢಿ). [ ಗಾಳಿ$_1$ + ಮೆಟ್ಟು$_1$ ]

**ಗಾಳಿಯಂತ್ರ** (ನಾ). =ಗಾಳಿಗಿರಣಿ: ಆಮೇಲೆ ಈ ಊರಿನಲ್ಲಿ ಮೊದಲಾಗಿ ನಾನು ಗಾಳಿಯಂತ್ರ(Wind mill)ವನ್ನು ಕಂಡೆ (ಪ್ರವಾಸಿ. ೦೨೬). [ ಗಾಳಿ$_1$ + ಯಂತ್ರ ]

**ಗಾಳಿಯಮ್ಮ** (ನಾ). ಒಂದು ಬಗೆಯ ದನದ ರೋಗ; ದನಗಳ ಕಾಲು ಮತ್ತು ಬಾಯಿಗೆ ಬರುವ ಬೇನೆ: (ಎಕಮ್ಮ. XV, ೩೯). [ ಗಾಳಿ$_1$ + ಅಮ್ಮ$_2$ ]

**ಗಾಳಿಯಿಕ್ಕು** (ಕ್ರಿ). ಗಾಳಿಯನ್ನು ಬೀಸು,—ಹಾಕು: ಬಿಜ್ಜಣಗೆಗೊಂಡು, ಮಹಾರಾಜನಿಗೆ ಮೆಲ್ಲಗೆ ಗಾಳಿಯಿಕ್ಕಲಾರಂಭಿಸುವಳು (ಚಿಟ್ಟಿಅ. ೦೬-೦೬). [ ಗಾಳಿ$_1$ + ಇಕ್ಕು ]

**ಗಾಳಿವಟ್ಟೆ, ಘಾಳಿವಟ್ಟೆ** (ನಾ). ಗಾಳಿ ಸಂಚರಿಸುವ ಹಾದಿ; ವಾಯು ಮಾರ್ಗ; ಆಕಾಶ: "ಆಗಸ . . . ಗಾಳಿವಟ್ಟೆಯೆನಲ್ಕಂದಾಗಳಾಕಾಶವೆಸರದು" (ಕವಿಕಂ. ೯೬); ಭಾಸ್ಕರಂ ಬಟಿಕ ಗಾಳಿವಟ್ಟೆಯಿನಿಳಿದು ಕಡಲ ನೀರ್ವುಗೆ ತಾರೆಗಳ್ ತೋರ್ದುವಂಬರದೊಳು (ಶ್ರೀರಾಮ. ೩ ೩೦). **ಘಾಳಿವಟ್ಟೆ**: "ಮಿಾಂಬಟ್ಟೆಯೆನೆ ಘಾ[ಪಾಠಾಂ. ಗಾ]ಳಿವಟ್ಟೆ" (ಕಬ್ಬಿಕೈ. ೦೦) [ ಗಾಳಿ$_1$ + ಬಟ್ಟೆ$_1$ ]

**ಗಾಳಿವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನು; ದೇವತೆ; ಖಚರ: "ಅಮರ್ದುಣಿಸುಗಳ್ . . . ಗಾಳಿವಟ್ಟೆಗರ್, ಅಚ್ಚರರ್, (ಬೋಳೆಯರ್)—ಈ ೯ ದೇವರ್ಕಳ ಪೆಸರ್" (ಕಶಸಾ. ೨-೧೯); "ಕನಸಿಲ್ಲದ ರಮೆಯಿಕ್ಕದರನುನಯದಿಂ ಗಾಳಿವಟ್ಟೆಗರುಮಚ್ಚರರೆಂದೆನುತಮಂ . . . ದೇವವ್ರಾತಕಮರ್ದ ನಾಮಮಿವಕ್ಕುಂ" (ಕವಿಕಂ. ೩೨); ಏಳಡಿಭೂವರರೇಳಡಿಖೇಚರರ್ ಗಾ[ಪಾಠಾಂ. ಘಾ]ಳಿವಟ್ಟೆಗ ಸುರರಸುರಜಾಲಮಲ್ಲಿಂದ ಸುರೇಂದ್ರರೊಯ್ದರು ನಾಥ ಕೇಳೀವನದ ಮಂಟಪಕೆ (ವರ್ಧಚ. ೦೦-೩೧.) [ ಗಾಳಿವಟ್ಟೆ + –ಗ$_8$ ]

**ಗಾಳಿವಟ್ಟೆದಲೆಯ** (ನಾ). ಆಕಾಶವೇ ತಲೆಯಾಗುಳ್ಳವನು; ವ್ಯೋಮಕೇಶ; ಶಿವ: ಗಾರುಡಧ್ವಜನತಾ ಗಾಳಿವಟ್ಟೆದಲೆಯಾ . . . ವಿರಾಗಾ ಸರಾಗಾ ಜಯ (ಉದ್ಭದೇ. ೬-೨೬). [ ಗಾಳಿವಟ್ಟೆ + ತಲೆ$_1$ + –ಅ$_7$ ]

**ಗಾಳಿವರು** (ಕ್ರಿ). ಗಾಳಿಯಂತೆ ಬರು; ವೇಗವಾಗಿ ಬರು: ಸರ್ವಸ್ವವನ್ನೂ ಕೊಳ್ಳೆಯಿಂದ ಕೊಂಡು ನಿರ್ಮೂಲ ಮಾಡಿಬಿಡಲು ಇಲ್ಲಿಗೆ ಗಾಳಿವರುತ್ತಿರುವನು (ಮಂತ್ರಶ. ೭೩-೨೦). [ ಗಾಳಿ$_1$ + ಬರು$_1$ (<ಬರ್$_1$) ]

**ಗಾಳಿವರ್ತಮಾನ** (ನಾ). "(ನಿಜವೆಂದು ತಿಳಿಯದ) ಕೇಳಿಕೆಯ ಮಾತು; ಗಾಳಿವರ್ತಮಾನ; ಬೀದಿಸುದ್ದಿ" (Hear.say. ಇಂಕನಿ): ಬೇರೆ ಮದುವೆಮಾಡಿಸುವುದಕ್ಕೆ ಪ್ರಯತ್ನಿಸುತ್ತಿದಾಳೆ ಎಂಬುದಾಗಿ ಗಾಳಿವರ್ತಮಾನ ಕೇಳುತ್ತ ಬಂತು (ಮಹಾಗ. ೬೨). [ ಗಾಳಿ$_1$ + ವರ್ತಮಾನ ]

**ಗಾಳಿವಾತು$_1$, ಗಾಳಿಮಾತು** (ನಾ). ಗಾಳಿಯಲ್ಲಿ ಹರಡುವ ವರ್ತಮಾನ; ಸುಳ್ಳುಸುದ್ದಿ: ಜಾಣರ್ ಭಾವಿಸಿ ಬಗೆದು ನೋಡೆ ನೆಲೆಗೊಟ್ಟುಸಿರೆಂಬುದೆ ಗಾಳಿವಾತದಂ ನಂಬುವುದೇ (ಧರ್ಮನಾ. ೩-೮೯); ಗಾಳಿವಾತಲ್ಲವ ಮಟೆಯೆಂದು ತಾಂ ಮುನ್ನ ಕೇಳಿದಂತೊರೆದನಲ್ಲವನು (ಭರತ. ೩೬-೯೪). **ಗಾಳಿಮಾತು**: ಸುಮ್ಮನೆ ಗಾಳಿಮಾತು ನಂಬಿಕೊಂಡು ಮಾತನಾಡಬಾರದು (ರೂಢಿ). [ ಗಾಳಿ$_1$ + ಮಾತು$_1$ ]

**ಗಾಳಿವಾತು$_2$** (ನಾ). ನಿಂದೆ; ಬಯ್ಗಳು: "ಗಾಳಿವಾತು = ಬೈಗುಳ್" (ಕಮದ. ಪರಿ. ೨); "ತಿಟ್ಟೆಂದೊಡಂ ಗಾಳಿವಾತೆಂದೊಡಂ ಬೈಗುಳಕ್ಕುಂ" (ಕಬ್ಬಮಂ. ೩೪); "ಗಾಳಿವಾತೆಂದು ತಿಟ್ಟೆಂದು ಬೈಗುಳ್" (ಕಬ್ಬಿಕೈ. ೮೯). [ ಗಾಳಿ$_2$ + ಮಾತು$_1$ ]

**ಗಾಳಿವಾರ** (ನಾ). (ಉಕ) ಗಾಳಿಪಟ: ಬಾಲಾಗುಸಿಯಿಲ್ಲದೆ ಗಾಳಿವಾರವು ಇರುವ ಬಗೆ ಹೇಗೆ (ಚಿಟ್ಟಿಹೊ. ೦೬). [ ಗಾಳಿ$_1$ + ವಾರ ? ]

**ಗಾಳಿವಿಡಿ** (ಕ್ರಿ). ೧. "ದೆವ್ವಹಿಡಿ" (ಶ್ರಧಾ$_2$) ೨. "ವಾಸನೆ ಹಿಡಿ" (ಶ್ರಧಾ$_2$); ಗಾಳಿವಿಡಿದಳ್ಳೆಂಕಗೊಂಡು . . . ಹಿಂದೆ ಮರಲ್ದಿಕ್ಕಲಂ (ಹಕಳಾ. ೬-೦೦). [ ಗಾಳಿ$_1$ + ಪಿಡಿ$_1$ ]

**ಗಾಳಿವೆಜಗು** (ನಾ). ಗಾಳಿ ಬೀಸುವ ಸ್ಥಳ: ಅಂತು ಮಡಿಪಿ ಶರೀರ ಸಮೇತಂ ನಿರಾದಾನವಿಧಾನದಿಂ ಗಾಳಿವೆಜಗಿನೊಳಿರ್ದಮಳದೀಪಿಕೆಯಂತಿರ್ವರುಮೊಡನದೃಶ್ಯರಾಗಿ ಬಂದು (ಶಾಂತಿಪು. ೬-೮೧ ವ); ಆ ಗಾಳಿವೆಜ[ಪಾಠಾಂ. ಸ]ಗಿನಿಂದಮೆ ಪೋಗಿ ಪರಿಶ್ರಮವಶಾತುರಂ ವಸುದೇವಂ ನಾಗೇಂದ್ರನಂತೆ ಮದಲೀಲಾಗಮನಂ ಕಂಡನೊಂದು ಕಮಳಾಕರಮಂ (ಅರ್ಧನೇ. ೩-೯೪); ಕಿಱಿದು ಬೇಗಮಾ ಗಾಳಿವೆಜಗಿನೊಳೆ ರಥಮಂ ನಿಲಿಸಿ ವಿಸ್ಮಯಂಬಡುತ್ತ (ಪುಷ್ಪಪು. ೩-೧೦೪ ವ). [ ಗಾಳಿ$_1$ + ವೆಜಗು ? ]

**ಗಾಳಿವೇಗ** (ನಾ). ಗಾಳಿಯ ವೇಗ; ವಾಯುವೇಗ: ಗಾಳಿವೇಗದೊಳೆಯ್ದಿ ಕೈಲಾಸಗಿರಿಯ ನಿರಾಲಸ್ಯದಿಂದೇಱಿ . . . ಭೂಲಲನೇಶ ಪೊರ್ದಿದನು (ಭರತ. ೪೪-೬೩). [ ಗಾಳಿ$_1$ + ವೇಗ ]

**ಗಾಳಿಶಂಕೆ** (ನಾ). ದೆವ್ವದ ಭೀತಿ; ಪಿಶಾಚಿಯ ಕಾಟ; ಭೂತಭಯ: (ಕ). [ ಗಾಳಿ$_1$ + ಶಂಕೆ ]

**ಗಾಳಿಸಮಾಚಾರ** (ನಾ).=ಗಾಳಿವರ್ತಮಾನ: "ವದಂತಿ, ಗಾಳಿಸಮಾಚಾರ, ಬೀದಿಸುದ್ದಿ" (Cry. ಇಂಕನಿ). [ ಗಾಳಿ$_1$ + ಸಮಾಚಾರ ]

**ಗಾಳಿಸವಾರಿ** (ನಾ). ಗಾಳಿಯಲ್ಲಿ ಸಂಚಾರಮಾಡುವುದು; ಬಯಲ ತಿರುಗಾಟ; ಶುದ್ಧವಾದ ಗಾಳಿಬೀಸುವ ಕಡೆ ತಿರುಗಾಡುವುದು: ನೀನು ಕುದುರೆಯ ಮೇಲೆ ಗಾಳಿಸವಾರಿ ಹೊರಟರೆ ನಾನೂ ನಿನ್ನ ಪಕ್ಕದಲ್ಲಿ

(ಹರಾಯು. ೨೮-೦೬) ; "ತಾವ್ರುಧಾತುಃ – ಗೈರಿಕ" (ಒಷಧಿ. ೬೭) ; ಒಡಗೂಡಿ ಹೇವು ಗೈ[ಪಾಠಾಂ. ಸೈ]ರಿಕ ಗುಡ ಸೈಂಧವ ಸರ್ಜಸಿಕ್ಥಕಂಗಳ ನಿಂಬಾಗಡುಗೆ ತಿಳತೈಳದಿಂದಂ ಕಿಡಿಸುಗುವುದು ಬಡದ ತೊಡೆದೊಡಧರ ವ್ರಣಮಂ (ಲೋಕೋಪ. ೯-೮೨). ೩. ಕೆಂಪುಬಣ್ಣ ; ಕಾವಿಬಣ್ಣ. 'ಗೈರಿಕಪರಾಗ', 'ಗೈರಿಕವಸನ' ಪರಾ. ೪. ಚಿನ್ನ; ಸುವರ್ಣ: "ಗೈರಿಕಂ ಕರ್ಬುರಂ . . . ಸ್ವರ್ಣಮನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪) : ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳೆೊರಣಪ ಪ್ರಾಸಾದ ಸೌಧ ಹರ್ಮ್ಯಂಗಳಿಂದೆಸೆದುದಾ ದ್ವಾರಾವತಿ (ಭಿಕ್ಷಾಪ. ೨-೩). [ ಸಂ. ]

**ಗೈರಿಕಪರಾಗ** (ನಾ). ಕೆಂಪುಬಣ್ಣದ ಧೂಳು; ಕೆಂಧೂಳು : ಕಾಡಾನೆಗಳ ಕೋಡವೊನೆಯಿನಿೇಡಿಱುವ ಗಿರಿಯ ದರಿಯ ಗೈರಿಕಪರಾಗಮಂ ಸಂಧ್ಯಾರಾಗವಿಷದಿನಾಗಸಕ್ಕೆ ಪಸರಿಸಿಯುಂ (ಚಂದ್ರಪ್ರ. ೮-೪ ವ).
[ ಗೈರಿಕ + ಪರಾಗ ]

**ಗೈರಿಕರುಚಿ** (ನಾ). ಕೆಂಪು ಬಣ್ಣದ ಪ್ರಕಾಶ,–ಕಾಂತಿ : ಗೈರಿಕರುಚಿಯಂತೆ ಮೆಱೆಗುವಮಾಯೆಡೆ ಸೊಬಗಿಂ (ಪಶ್ವಪಂ. ೮೨). [ ಗೈರಿಕ + ರುಚಿ ]

**ಗೈರಿಕವಸನ** (ನಾ). ಕಾವಿ ವಸ್ತ್ರ; ಕಾಷಾಯವಸ್ತ್ರ. 'ಗೈರಿಕವಸನಧಾರಿ' ಪರಾ. [ ಗೈರಿಕ + ವಸನ ]

**ಗೈರಿಕವಸನಧಾರಿ** (ನಾ). ಕಾವಿವಸ್ತ್ರವನ್ನು ಧರಿಸಿದವನು : ಗೈರಿಕವಸನಧಾರಿಗಳಾಗಿ ಪರಿವ್ರಾಜಕರಾಗಿ ಅಲೆಯತೊಡಗಿದರು (ಭಾರರ. ೩೨೧).
[ ಸಂ. ಗೈರಿಕವಸನಧಾರಿನ್ ]

**ಗೈರಿಕೆ** (ನಾ).=ಗೈರಿಕ ೩ : ಎಡಗಾಲಿಂದೆತ್ತಿ ಗೈರಿಕೆ ಧೂಳನು ಒಡನೆ ಕರತಳದೊಳು ತಾವಾಂತು ತೊಡೆದುಕೊಳ್ಳುತ (ಜ್ಞಾನಪ. ೩೭-೧೧೬).
[ ಸಂ. ಗೈರಿಕ ]

**ಗೈರು, ಗೈರ್** (ನಾ). ೧. ಇಲ್ಲದಿರುವುದು. 'ಗೈರುಹಾಜರು' ಪರಾ. ೨. ತಪ್ಪು ; ಅಪರಾಧ ; ಅಯೋಗ್ಯವಾದುದು : ಈ ಪ್ರಕಾರ ಪತ್ರ ಬರಿಯುವ ಪದ್ಧತಿಯು ಬಹಳೇ ಗೈರೆಂದು ನಮಗೆ ತೋರುತ್ತದೆ (ಮುಂಬವ್ಯ. ೮೮). **ಗೈರ್ :** 'ಗೈರ್‌ವಿಲೆ', 'ಗೈರ್‌ಹಾಜರ್' ಪರಾ.
[ ←ಅರ. ಹಿಂ. ಮರಾ. ಗೈರ್ ]

**ಗೈರುಮಾಮೂಲು** (ನಾ). ಬಳಕೆಯಲ್ಲಿಲ್ಲದುದು ; ರೂಢಿಗೆ ವಿರುದ್ಧವಾದುದು : ತೊರೆಯರು . . . ಕುದುರೆ ಸವಾರಿಯ ಮೆರವಣಿಗೆ ಹೋಗುವುದು ಗೈರುಮಾಮೂಲು (ಕಲಿಸ. ೨೦೬).
[ ಗೈರು + ಮಾಮೂಲು ]

**ಗೈರುವಾಜಿಬಿ, ಗೈರವಾಜಬಿ** (ಗು). ಅಯೋಗ್ಯವಾದ ; ಅನುಚಿತವಾದ; ಅನ್ಯಾಯದ: (೬). **ಗೈರವಾಜಬಿ:** ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಕಾಬಿಲೆಯಿಂದ ಕೂಲಂಕಷದರಿಯಾಫ್ತ್ ಮಾಡಿ (ಮಹಾಪಂ. II, ೩೯). [ <ಗೈರು + ವಾಜಿಬಿ ]

**ಗೈರುವಿಲೆ, ಗೈರ್‌ವಿಲೆ** (ನಾ). ಕಳೆದುಹೋಗುವಿಕೆ ; ತಪ್ಪಿಸಿಕೊಂಡು ಹೋಗುವುದು : ಇಟ್ಟ ಸಾಮಾನುಗಳು ಗೈರುವಿಲೆಯಾದರೆ ಮೇಲ್ವಿಚಾರಕರೇ ಜವಾಬ್ದಾರರು (ಪ್ರಪಾಇ. II, ೦೬೦) ; ಯುದ್ಧಕ್ಕೆ ಹೋದ ಲಕ್ಷಾಂತರಸೈನಿಕರ ಪೈಕಿ, ಸಾವಿರಾರು ಜನ ಗೈರುವಿಲೆ ಆಗಿಬಿಟ್ಟಿದ್ದಾರೆ (ವೀರಯೋ. ೯೮). **ಗೈರ್‌ವಿಲೆ :** ನನ್ನ ದುರದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಹುದು (ವಿನೋದ. ೯); ನನ್ನ ಅದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಾರದಷ್ಟೆ (ಹಂಚಿನ. ೨೦). [ ←ಮರಾ. ಗೈರ್‌ವಿಲ್ಹೇ ]

**ಗೈರುಹಾಜರಿ, ಗೈರ್‌ಹಾಜರಿ** (ನಾ) ಹಾಜರಾಗದಿರುವಿಕೆ; ಅನುಪಸ್ಥಿತಿ : ರಾಜನು ತನ್ನ ಗೈರುಹಾಜರಿಯಲ್ಲಿ ಒಬ್ಬ ನ್ಯಾಯಾಧೀಶನನ್ನು ನೇಮಿಸಬಹುದಾಗಿತ್ತು (ಭಾರರ. ೩೬) : ತನ್ನ ಗೈರುಹಾಜರಿಯಲ್ಲಾಗುವ ಅವ್ಯವಸ್ಥೆಯನ್ನು ಸರಿಪಡಿಸಿ ಮನೆ ಸೇರೋಣ (ವಾತ್ಸಲ್ಯ. ೩೬). **ಗೈರ್‌ಹಾಜರಿ :** ಗೊತ್ತಾದ ಸ್ಥಳದಲ್ಲಿಲ್ಲದಿರುವುದು ; 'ಗೈರ್‌ಹಾಜರಿ' (Absence: ಇಂಕನಿ).
[ ಗೈರು + ಹಾಜರಿ ]

**ಗೈರುಹಾಜರು, ಗೈರ್‌ಹಾಜರ್** (ನಾ). ಹಾಜರಾಗದವನು ; ಅನುಪಸ್ಥಿತನು : ನಿನ್ನೆಯ ದಿವಸ ಗೈರುಹಾಜರಾಗಿದ್ದ ತಬಲಾ ಕಿಟ್ಟಯ್ಯ (ಬದುಕ್ಕೆ. ೧೪); ಒಮ್ಮೊಮ್ಮೆ ಇಡೀ ವಾರವೇ ನಾವು ಗೈರುಹಾಜರಾಗುತ್ತಿದ್ದೆವು (ಕಲಿಕ. ೨೨). **ಗೈರ್‌ಹಾಜರ್ :** ಈ ನೌಕರರುಗಳು ಗ್ರಾಮದಿಂದ ಗೈರ್‌ಹಾಜರಾಗಬೇಕಾದರೆ . . . ಡೆಪ್ಯೂಟಿ ಅಮಲ್ದಾರರ ಹುಕುಂ ವಿನಹ ಗೈರ್‌ಹಾಜರಾಗತಕ್ಕದ್ದಲ್ಲವು (ಗ್ರಾಮಾಕ. ೪). [ ಗೈರು + ಹಾಜರು ]

**ಗೈರೇಯ** (ಗುಂ). ೧. ಗಿರಿಯಲ್ಲಿ ಹುಟ್ಟಿದ. (ನಾ). ೨. ಗೈರಿಕ ; ಕಾವಿಕಲ್ಲು : "ಗೈರೇಯಂ, ಅರ್ಥ್ಯಂ, ಗಿರಿಜಂ, ಅಶ್ಮಜಂ, ಶಿಲಾಜಿತು–ಈ ೫ ಶಿಲಾಜತ್ತು" (ಸಿದ್ಧಾಂತಿ. ೨೬೨). [ ಸಂ. ]

**ಗೈಲು** (ನಾ). (?) : ತೈಲತಪ್ತೋದಕದಲಿ ಮಿಂದರಿರ್ವರು ಶೈಲಾತ್ಮಜೆಯ ಕಾಂತನಿಗೆ ಗೈಲ ಪೂಜೆಯ ಮಾಡಿ ಮಹದುಪಚಾರವ ಕೈಲಾಗಿ ನಿಂದೊಡರ್ಚಿದರು (ಮೋಹತ. ೩೧-೩). [ ? ]

**ಗೈಸು** (ಕ್ರಿ). ಮಾಡಿಸು ; ನೆರವೇರಿಸು : ಸಕಲಲೋಕಗಳ ನಾಯಕ ಇವಗೆ ಹೇಯ ಲೌಕಿಕಮಾರ್ಗವನೆ ಬಿಡಿಸಿ ನಿತ್ಯದಲ್ಲಿ ಪ್ರಕಟವನೆ ಗೈಸು ಸದ್ಧರ್ಮಕರ್ಮಗಳ (ಜಗದಾ. ೩೨). [ < ಕೆಯ್ಸು ]

**ಗೊಂಕರು** 'ಗೊಂಕುಳು' ನೋ.

**ಗೊಂಕರುಕಪ್ಪೆ** 'ಗೊಂಕಳುಕಪ್ಪೆ' ನೋ.

**ಗೊಂಕಳಿಕಟ್ಟಿ** 'ಗೊಂಕುಳುಗಟ್ಟಿ' ನೋ.

**ಗೊಂಕಳು** 'ಗೊಂಕುಳು' ನೋ.

**ಗೊಂಕಳುಕಪ್ಪೆ, ಗೊಂಕರುಕಪ್ಪೆ, ಗೋಂಕುರುಕಪ್ಪೆ** (ನಾ). (ಕರ್ಕಶವಾಗಿ ಅರಚುವ ದೊಡ್ಡ ಗಾತ್ರದ ಒರಟುಚರ್ಮದ) ಒಂದು ಬಗೆಯ ಕಪ್ಪೆ; ಮಹಾಮಂಡೂಕ: ಗೊಂಕಳುಕಪ್ಪೆ ದ[ಪ]ಸುಂಬಂ ತತ್ಕ್ರಮದಿಂದಮೆ ದೀಪ್ತದಿನ್ಯಾಗದೊಳ್ ದನಿಗೆಯ್ಯೆ ಮನಸಿದ್ಧಿಯನಾಗಳೆ ಉಂಟುಮಾಡುಗುಂ (ಲೋಕೋಪ. ೦೨-೦೬). **ಗೊಂಕರುಕಪ್ಪೆ :** ಮುಂಗಾರು ಮಳೆಯ ರಾತ್ರಿಗಳಲ್ಲಿ ಗೊಂಕರುಕಪ್ಪೆಗಳ ಕಿರಿಚಾಟ ಬಹಳ (ಕಾಥ). **ಗೋಂಕುರುಕಪ್ಪೆ :** ಅದು ಗಂಡುಹುಲಿ. ಕೆಳಗೆ ನದಿಯ ನೀರಲ್ಲಿ ಕಪ್ಪೆ ಗೋಂಕುರುಕಪ್ಪೆ ದೊಡ್ಡ ಮೀನುಗಳೇನಾದರೂ ಕಾಣಸುತ್ತವೋ ಎಂದು ಹಸಿವೆಯಿಂದ ಹುಡುಕಾಡುತ್ತಿತ್ತು (ಹರಾಪ. ೫೬).
[ ಗೊಂಕಳು (< ಗೊಂಕುಳು) + ಕಪ್ಪೆ₁ ]

**ಗೊಂಕುಳಿಡು** (ಕ್ರಿ). ಕರ್ಕಶವಾದ ದೊಡ್ಡದನಿಯನ್ನು ಮಾಡು ; ಅರುಚು : ಬೆಳರ್ಗಿಂಪಂ ಕಿವಿ ಬೀಱೆ ಸಂಘಟಿಸುತಂ ಬಾಯ್ಬಿಟ್ಟು ಕಣ್ಣೀರ ಬೊಟ್ಟುಳಿಯಂತುರ್ವರೆಯುರ್ವೆ ಗೊಂಕು [ಪಾಠಾಂ. ತ] ಳಿಡುತುಂ ಮಿಳ್ಳಿರ್ದ ಬಾಲಂ ಮಿಯತ್ತ್ರಳ ಸಮ್ಮಾರ್ಜನಿಯಂತೆ ಸಂಚರಿಸೆ ಕೋಪಾಟೋಪದಿಂ ತೊತ್ತಳಿಂದುಳಿಯಲ್ಕೆಟ್ಟರೆ ರಾಸಭಾಕೃತಿಯು ನಾಗಳ್ ರೌದ್ರಮಂ ಬೀಱುತುಂ (ಮಹಾನೇ. ೬-೯) ; (ಪದ್ಯಸಾ. II, ೧೬೯ ನೋ).
[ ಗೊಂಕುಳು + ಇಡು₁ ]

**ಗೊಂಕುಳು, ಗೊಂಕರು, ಗೊಂಕಳು, ಗೋಂಕರು** (ನಾ). ೧. ಕರ್ಕಶವಾದದನಿ ; ದೊಡ್ಡಧ್ವನಿ. 'ಗೊಂಕುಳುಗಟ್ಟಿ' ಪರಾ. **ಗೊಂಕರು :** (ಗು). ೨. ದೊಡ್ಡ ಗಾತ್ರದ. 'ಗೊಂಕರುಕಪ್ಪೆ' ಪರಾ. **ಗೊಂಕಳು:** ೨. 'ಗೊಂಕಳುಕಪ್ಪೆ' ಪರಾ. **ಗೋಂಕುರು:** ೨. 'ಗೋಂಕುರುಕಪ್ಪೆ' ಪರಾ. [ ದೇ.₂ ತುಳು. ಗೋಂಕುರು, ಗೋಂಕ್ರು ]

**ಗೊಂಕುಳುಗಟ್ಟಿ, ಗೊಂಕಳಿಕಟ್ಟಿ** (ನಾ). ಕರ್ಕಶವಾಗಿ ಅರಚುವ ಕತ್ತೆ: ಆ ರಥದೊಳೊಡಂಬಡೆ ಪೂಡಿದ ನಾಲ್ಕುಂ ಗೊಂಕುಳುಗಟ್ಟಿಯುರ (ಹಂಪಭಾ. ೦೨-೭ ವ). **ಗೊಂಕಳಿಕಟ್ಟಿ :** ಅಂತಾ ಸಿಂಹಂ ಮಱುಗುತ್ತಂ

ಬಟ್ಟು ಗೊಂಕಅಕಟ್ರಿಯಂ ಬಯಸಿ ಬಾಯೊಅತ್ತು (ಪಂಡಿತಂ. ೨೦೨-೧೯).
[ ಗೊಂಕುಅು + ಕಟ್ರಿ ]

**ಗೊಂಕೆ**, ಕಂಕೆ, ಗೋಕೆ (ನಾ). ೧. ಕೊರಳು ; ಗೋಣು ; ಕುತ್ತಿಗೆ : "ಗೊಂಕೆ=ಗೋಣ್" (ಕ ಮ ರ. ಪ೦ ೨) ; "ಗೊಂಕೆ ಗೋಣೆಂಬಂ" (ಕರ್ಣಾನಿ. ೨೦); ಕಡುವುುಳಿದದಱ ಗೊಂಕೆಯಂ [ಪಾಠಾಂ. ಗೋಣಂ] ಮುಱಿದೊಡೆ (ವರ್ಧ್ಮಾ. ೦೧೯-೦); ಪಂಕಜಾಕ್ಷನಮುಂಕೆ ಗೊಂಕೆಯಂ ನುಲಿದ ಕಾಗೆಯ ಕನ್ನೆತ್ತರನುಂಡ ನೆಲನೆಲ್ಲಂಕೆಮ್ಮಣ್ಣ ನೆಲನಾಗಿ ಪಾಸಿಸಿದೊಡೆ (ಅರ್ಧನೇ. ೮-೨೨ ವ) ; ಪುರಾಣನಾರಕಕಂಡು ಪರಿತಂದು ಓಡಿದು ಕೊಂಡು ಗೊಂಕೆಯಂ ನುಲಿದು (ಕಶ್ಯ. ೨-೪ ವ) ; ಅವನ ಗೊಂಕೆ ಮುರಿದಿಡುತ್ತೇನೆ (ಮೂರುದಾ. ೫೪). ಕುಂಕೆ : ೨. ಕತ್ತಿನ ಹಿಂಭಾಗ ; ಹೆಕ್ಕತ್ತು ; ಹೆಡಕು : (ಕ). ೩. ಹೆಗಲು : (ಕ). ಗೋಕೆ : ೧. "ಗೋಣ್, ಕತ್ತು" (ಶ್ರ ಭ್ರ). [ ? ]

**ಗೊಂಗಟೆ** 'ಗೊಂಗಡಿ' ನೋ.

**ಗೊಂಗಡಿ**, ಗೊಂಗಟೆ, ಗೊಂಗೊಟೆ (ನಾ). ೧. ಕಂಬಳಿ : ಕಂಗಾಣಿಸದ ಪಾರಿಯ ಪಟ್ಟೆ ಕರ್ಪಣ್ಣ ಗೊಂಗಡಿ ಮುಸುಕಿಟ್ಟುಕೊಂಡು ಅಂಗಡಿ ನೊಡರ್ಗಟ್ಟಿ ದೇಗುಲದೆಡೆಯ ದುಸ್ಸಂಗದಂಪತಿಗಳೊಪ್ಪಿದರು (ಮೋಹತ. ೦೮-೨೩) ; ಆತನನ್ನು ಒಳಕೋಣೆಯ ಒಂದು ಚಾಪೆಯ ಮೇಲೆ ಹಾಸಿದ ಗೊಂಗಡಿಯ ಮೇಲೆ ಮಲಗಿಸಿದಳು (ನಿಷ್ಕಾಮ. ೬೫) ; ಅಂಗಡಿ ಮಾರಿ ಗೊಂಗಡಿ ಹೊದ್ದ(ಗಾದೆ). ೨. ಕಂಬಳಿ ಮೊದಲಾದಂವುಗಳಿಂದ ಮಾಡಿದ, ತಲೆ, ಬೆನ್ನುಗಳನ್ನು ಮುಚ್ಚುವಂತೆ (ಮಳೆಗಾಲದಲ್ಲಿ)ಧರಿಸಿಕೊಳ್ಳುವ ಗೊಪ್ಪೆ : ಕೊಡೆ ಮೇಣಗವ್ವಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾಬಿದಳೆದು . . . ಎಡೆಯಾಡುತಿರ್ದರೂರುಗರು (ಮೋಹತ. ೪-೪೦) ; ದೃಷ್ಟಿ ಹೊಡೆದೀತೆಂದು ಬೆನ್ನುಭುಜಗಳನ್ನು ಮುಚ್ಚಿಕೊಂಡಿರುವ ಅಪ್ಪಟ ಉಣ್ಣೆಯ ಸಣ್ಣ ಗೊಂಗಡಿ (ಸುವಸು. ೫೨). ೩. ಚೆನ್ನಾಗಿರುವ ಮತ್ತು ಉದ್ದವಾಗಿರುವ ಹಣಿಸಹಣ್ಣು : (ಕ). ಗೊಂಗಟೆ : ೧. ಪುರಹರನು ತಾ ಮತ್ತೊಂದು ರೂಪನು ಧರಿಸಿದನು ಬಳಿಕ ಹರಕುಗೊಂಗಟೆ ಪಾದ ರಕ್ಷೆಯು ತೆಅದ ಹಲ್ಲಿನ ದೊಡ್ಡನಡುವಿನ ಭರದ ಗವದಿತನಾದ ಕೈಮೂಗು ವೊಡಸು ದೇಹದಲಿ (ರೇವಣ. ೦-೦೬). ೨. ಬೇಗನೆ ತಾರ ಗೊಂಗಟೆ ಗೊರಗೆ ಕೋಲ್ಲೊಗೆ ಹುದಿಯಡಿಕೆಯಲೆಯಾ (ಅ ಣ ಗ ವಿ. ೩೦-೩೩). ಗೊಂಗೊಟೆ : ೧. ಅಂಬಲಿಯನಿಕ್ಕಿದನು ಕೈ ತೊಳೆಯಂದೊಡೆ ಗೊಂಗೊಟೆಯಲೊರಸಿದಾ ಬೆಂಬಳಿಯ ಸೀಮೆಯಯನು ತೋಱದನಾತ ರೇವಣಗೆ (ರೇವಣಾ. ೧-೨೨).
[ ←ತೆಲು. ಗೊಂಗಡಿ, ಗೊಂಗಳಿ. / ಮರಾ. ಘೊಂಗಡ್, ಘೊಂಗಡೀ, ಘೊಂಗಡೇ ]

**ಗೊಂಗು** (ನಾ). ಒಂದು ಸ್ಥಳದ ಹೆಸರು: ಗುವಳಾಲಂ ಗೊಙ್ಗಂ ವಾಣರಸ ಅಳೆ (ಎಕ. X, ಮುಳಬಾ. ೨೬೩-೦ : ಸು. ೫೬೦). [ <ಕೊಂಗು ]

**ಗೊಂಗೆ** (ನಾ). ಒಂದು ಬಗೆಯ ಪಕ್ಷಿ : (ಕ). [ ? ]

**ಗೊಂಗೊಟೆ** 'ಗೊಂಗಡಿ' ನೋ.

**ಗೊಂಚಲ್**, ಗೊಂಚಲು (ನಾ). ೧. ಕುಚ್ಚು ; ಗುಚ್ಛ ; ಮಂಜರಿ : "ಭೃಶಸಂಭೃತ ನವಮಂಜರಿ ಗೊಂಚಲ್" (ವಸ್ತುಕೋ. ೩೦-೮) : ಬಳಸಿದ ಚೆಂದೊನ್ನ ಮಾಂಗಾಯ ಗೊಂಚಲ್ಗಳ . . . ನಡುವೆ (ಆದಿಪು. ೮-೦೫ ವ) ; ಇನಿವಣ್ಗೊಂಚಲುಂ ಕಂಡರಗಿಳಿಯಂತೆ (ಅದ್ಭುಟ. ೦೦-೦೦೬ ವ). ೨. ಹೂವಿನ ಗುಚ್ಛ: "ತೊಡಂಬೆ, ತೊಡಬೆ . . . ಗೊಂಚಲ್, ಗುಚ್ಛಂ-ಈ ೭ ಪುಷ್ಪಮಂಜರಿ" (ಕಶಸಾ. ೦೦-೦೯೬). ೩. ಸಮೂಹ ; ರಾಶಿ : ಮಿಂಚಿನ ಗೊಂಚಲೆನೆ ಸಂಚಳಿಸಿ ಪೊಳೆವ ರತ್ನಾಭರಣಾಂಗಳ ಪೊಳೆವಂ ಕಂಡು (ಸುಕುಮಾ. ೭-೦೫ ವ) ; ಕೆಂಡೆದೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ವ್ಯಾಘ್ರ ಚರ್ಮಾಂಚಲದೊಳ್ಪಿದೆ ಸಾರೂಪ್ಯದವರು . . . ಎಸೆದಿರ್ದರು (ಹಲಪು. ೨-೨೫). 'ಗೊಂಚಲಿಸು' ಪರಾ. ಗೊಂಚಲು : ೧. "ಗುಚ್ಛಕಃ, ಸ್ತಬಕಃ-ಈ ೨ ಗೊಂಚಲು"(ನಾಚಿರಾ. ೦೦೬) ; "ಗೊಂಚಲುಗಳಾ ವಲ್ಲರಿಯು ಮಂಜರಿಗಳಕ್ಕುಂ" (ಮಂಗರಾ. ೩೨-೪) ; ತಳಿರ ನನೆಯಲರ ಕಾಯ ತನಿವಣ್ಣ . . . ಗೊಂಚಲುಗಳುಮಂ (ಕಾದಂಅ. ೫೨೬); ಮುತ್ತುರತ್ನಗಳ ಗೊಂಚಲು . . . ಓಲಗಶಾಲೆಯ ಸುತ್ತಲೊಪ್ಪಿದುವು (ಕಂಸವಿ. ೮-೦೦) ; ಮೇಜಿನ ಮೇಲೆ ನೀಲಿ ದ್ರಾಕ್ಷಿಹಣ್ಣಿನ ಗೊಂಚಲು ಇಡಲ್ಪಟ್ಟಿತ್ತು (ಮಹಾಕ್ಷಾ. ೦೭). ೩. ನಕ್ಷತ್ರಗಳ ನಡುವೆಯೂ ಇರುವ ಗೊಂಚಲನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ (ಖ್ಯೋತಿವಿ. ೭೪).
[ ದೇ.೫ ತುಳು. ಗೊಂಚಲ್ ]

**ಗೊಂಚಲಿಸು** (ಕ್ರಿ). ಗೊಂಚಲಾಗು ; ಒಟ್ಟಾಗು ; ಸಂದಣಿಸು : ಅಲರ್ಪಲಗೊಂಚಲಂತಲುಗೆ ಮಿಂಚು ಪಿಕಂ ನಲಿವಂತೆ . . . ಗೊಂಚಲಿಸಿ [ಪಾಠಾಂ. ಗೊಂಚಲಿಸಿದನ್ನೆ ಸಿ, ಗೊಂದಣಿಸಿ] ಕೆಂದಳಿರೊಳ್ಗಿಳಿವಿಂದು ಪಾಯ್ದುಂದಂ ಸಲಿಸೆ ಸುರೇಂದ್ರಚಾಪಲತೆ ಬಂದುದು ಕಾರೆಳವಾವಿನಂದದಿಂ (ಅರ್ಧನೇ. ೭-೪೨) ; ಕಂಚಗಾಱರ ಹಸರದಿಂ ಕುಡಿಮಿಂಚುಗಳು ಬಳೆಗಾಱ ವಸರದೆ ಗೊಂಚಲಿಪ ಕರಿಮುಗಿಲುಗಳು (ಹುಳ್ಳಛಾ. ೨-೧೪).
[ ಗೊಂಚಲ್ + - ಇಸು ]

**ಗೊಂಚಲು** 'ಗೊಂಚಲ್' ನೋ.

**ಗೊಂಚಲುಗುಂಡು** (ನಾ). ಗುಂಪುಗುಂಪಾಗಿ ಒಮ್ಮೆಲೆ ಸಿಡಿಯುವ ಗುಂಡು : "ಹಲವು ಸಣ್ಣಸಣ್ಣ ಗುಂಡುಗಳನ್ನು ಚೀಲ, ಪೊ. ಗಳಲ್ಲಿ ಒಟ್ಟಿಗೆ ಇಟ್ಟು ಫಿರಂಗಿಗೆ ಹಾಕಿ ಹೊಡೆಯುವುದರಿಂದ ಸುತ್ತಲೂ ಸಿಡಿಯುವ ಗೊಂಚಲುಗುಂಡು" (Grapeshot. ಇಂಕನಿ).
[ ಗೊಂಚಲು (<ಗೊಂಚಲ್) + ಗುಂಡು ]

**ಗೊಂಚಲುದೀಪ** (ನಾ). ದೀಪಗಳ ಗೊಂಚಲು ; ಒತ್ತೊತ್ತಾಗಿ ಅಳವಡಿಸಿದ ಅನೇಕ ದೀಪಗಳ ಸಮೂಹ : ಅನೇಕ ದೀಪಗಳುಳ್ಳ ಕವಲೊಡೆದ ತೂಗುದೀಪಾಧಾರ: ಗೊಂಚಲುದೀಪ (Chandelier. ಇಂಕನಿ).
[ ಗೊಂಚಲು (<ಗೊಂಚಲ್) + ದೀಪ ]

**ಗೊಂಚಲ್ಮಿಂಚು** (ನಾ). ಕುಚ್ಚುಕಂಚ್ಚಾಗಿರುವ ಮಿಂಚು ; ಮಿಂಚುಗಳ ಗೊಂಚಲು,-ಸಮೂಹ : ಅಂತೇಳ್ಪರ್ಪಾಗಲ್ ಕಲಿಗಲ್ ಕರತಳದಿನೊಱೆ ಗಳೆದು ಕುರುಳ್ಚುವ ಕೈದುಗಳ ಬಳ್ಳಿವೆಳಗಿಂ ಗೊಂಚಲ್ಮಿಂಚುಗಳ್ಸಂ ಚಳಿಸಿದಂತೆಯುಂ (ರಾಜಶೇ. ೦೩-೭೭ ವ).
[ ಗೊಂಚಲ್ + ಮಿಂಚು ]

**ಗೊಂಚಿ**, ಗೊಂಚು, ಗೊಂಚೆ, ಗೊಚ್ಚಿ (ನಾ). ೧. ಗೊಂಚಲು ; ಗುಚ್ಛ : "ಗೊಂಚಿ=ಗೊಂಚಲು" (ಆನಕೋ. ೫೦). ೨. ಗುಂಪು ; ಸಮೂಹ ; ರಾಶಿ : "ಬಂಬಲ್ . . . ಗೊಂಚಿ . . . ಗೊಂದಣ (ಉಂದಲ್)-ಈ ೪೦ ಸಮೂಹಂ" (ಕಶಸಾ. ೦೦-೨೨೨) ; ಸೊಗಸ ಸೈಗೞೆವ ಪಾಠಕರ ಗೊಂಚಿಗಳಿಂದೆ (ಹರಿಮ. ೧೦-೫೦): ತವ ನುಡಿಗೆ ಕವಿಗುಡೆ ಪುಡಿವಡೆದುದೆಲು ಗೊಂಚಿಯವ್ಮೊಡಲ (ಸಂಗ್ರಾಂ. ೧೭೭). ಗೊಂಚು : ೧. ಉರವಣಿಸಿ ಕೃತವರ್ಮನಂಬಿನ ಸರಳ ಸುಂಪುತ ಕಣಿಕಿ ಕೈಕೊಂಡರಿ ಭಟಾಗ್ರಣಿ ಮೆಚ್ಚಲೆಚ್ಚನು ಗೊಂಚಿನಂಬಿನಲಿ (ಕುಮಾರವ್ಯಾ. ೬೦೫. ಪ೦ ೨೯೨) ; ಹಿತ್ತಲೊಳಗೆ ಮುತ್ತಿನ ಗಿಡ ತೋಱಸಿದ ಪಂಟಪಂಟಿಗೆ ಎಂಟುಎಂಟು ಗೊಂಚುಗೊಂಚು ಜೋಲುತಿರಲು ಕಡಿದುಕಡಿದು ರಾಶಿಹಾಕಿದ (ಪುರಂದ. ೩-೦೦೬-೩). ೨. ವಿದ್ಯನಿಪುಣಗೊಂಚಿನಲಿ ಬೆಳಗರಿಯಪಾಹಪಗ್ಯೆಯಲು (ಜಿರಾಮಾ. ೨೫೪-೫೨). ಗೊಂಚೆ : ೧. ಪೊಸಬನದೇೞ್ಗೆ ಕಾರ್ಮುಗಿಲ ಪರ್ಬುಗೆ . . . ಮಿಂಚು ಚಂಪಕ ಪ್ರಸರದ ಗೊಂಚೆ (ಅದ್ಭುಟ. ೯-೩೦). ಗೊಚ್ಚಿ : ೨. "ತಂಡಂ . . . ಗೊಚ್ಚಿಪೊಟ್ಟಲ್ ಪಂಡಿತರಿಂ ಗಡಣವಂಗಡಂ

ಕಿಕ್ಕೆಂದಂ " (ಶವಿಶಂ. ೦೦೬).

[ <ಪ್ರಾ. ಗೊಂಜೀ, ಗೋಥಿಯಾ./ತುಳು. ಗೊಂಟಿ ]

**ಗೊಂಟಿಗಾರ, ಗೊಂಚುಗಾರ** (ನಾ). ಊರಿನ ಮುಖಂಡ, -ಮುಖ್ಯಸ್ಥ : ಊರ ಸಾಹುಕಾರ ಶಿಪ್ಪಣ್ಣನವರು, ಮಠದಯ್ಯನವರು, ಗೊಂಟಿಗಾರರು . . . ಎಲ್ಲರ ಎತ್ತುಗಳೂ ಕಾರುಹುಣ್ಣಿಮೆಯಲ್ಲಿ ಮೆರವಣಿಗೆ ಹೊರಡುತ್ತವೆ (ಪರೀಜ. ೨೬). **ಗೊಂಚುಗಾರ:** ನಮಗ ಜ್ವಾಳ, ನವಣಿ ಕೊಡಿಸು ಗೊಂಚುಗಾರ (ಜುಕೀ. ೧೨). [ ಗೊಂಟಿ + -ಕಾರ$_1$ ( < -ಕಾಱ) ]

**ಗೊಂಚು** 'ಗೊಂಟಿ' ನೋ.

**ಗೊಂಚುಗಾರ** 'ಗೊಂಟಿಗಾರ' ನೋ.

**ಗೊಂಚಿ** 'ಗೊಂಟಿ' ನೋ.

**ಗೊಂಜಿ** (ನಾ). ಒಂದು ಬಗೆಯ ಮರ : ಗೌಜಲ್‌ಮರ . . . ಗೊಂಜಿ . . . ಹೆಣ್ಣುವತ್ತಿ (ಪ್ರುಜಿಗಿ. ೧೮-೩೧೯). [ದೇ.॥ ತೆಲು. ಗೊಂಜಿ ]

**ಗೊಂಜು** 'ಗಂಜು$_1$' ನೋ.

**ಗೊಂಟಿಕೆ, ಗೆಂಟಗೆ, ಗೆಂಟಿಗೆ, ಗೆಂಟುಂಗೆ, ಗೌಂಟಿಕೆ, ಗೌಂಟಿಗೆ, ಗೌಟಿಕೆ** (ನಾ). (ಚೊಚ್ಚಲು ಬಸುರಿಗೆ ಕಟ್ಟುವ) ರಕ್ಷೆ, -ತಾಯಿತ : ಅಂತು ಗರ್ಭ ಚಿಹ್ನಂ ಪ್ರಕಟಿಸಿ ವಿರಾಜಿಸುತ್ತಿರೆ ಸಪ್ತಮಾಸಕ್ಕೆ ಗೊಂಟಿಕೆ[ಪಾಠಾಂ. ಕಂಠಿಕೆ, ಗೌಂಟಿಕೆ]ಯಂ ಕಟ್ಟಿಸಿ ನವಮಾಸಂ ತೀವಿ ಬೆಸಲೆಯಪ್ಪುದುಂ (ಧರ್ಮಾಪ. ೧-೬೨ ವ). **ಗೆಂಟಗೆ :** ಕ್ಷಿತಿಪನ ಕಾಂತೆಗಂ ಸಚಿವಮಾನಿನಿ ಬಂದು . . . ಆಱುದಿಂಗಳೊಳ್ಕಹೋರ್ಜಿತಮುದಮುಣ್ಮೆ ಗೆಂಟಗೆಯನೊಪ್ಪಿರೆ ಮಾಡಿಸಿ ಪೋದಳರ್ಥಿಯಿಂ (ಶ್ರೀಪುವಿ. ೧೬-೧೪೯). **ಗೆಂಟಿಗೆ:** 'ಗೆಂಟಿಗೆಗಟ್ಟು' ಪರಾ. **ಗೆಂಟುಗೆ :** ತನುಭವಲಾಭ ದೌಹದ ನಿಮಿತ್ತದ ಸಂಗತಿ ತಕ್ಕ ನೋಂಪಿ ಮಾಂಗನಸು ಬಯಕೆ ಗೆಂಟುಗೆ[ಪಾಠಾಂ. ಗೌಂಟಿಗೆ]ದ್ವಗುತ್ಸವ ಕಾರಣ ಗರ್ಭಚಿಹ್ನಂ (ಸೂಕ್ತಿಸು. ೬-೧). **ಗೌಂಟಿಕೆ :** ಮೇಲಿನ 'ಧರ್ಮಪ' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಂಟಿಗೆ:** ಮೇಲಿನ 'ಸೂಕ್ತಿಸು' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಟಿಕೆ:** 'ಗೌಟಿಕೆಗಟ್ಟು' ಪರಾ. [ ? ]

**ಗೊಂಟು, ಗೊಂಡಂ$_3$, ಗೊಟ್ಟು$_3$, ಗೋಂಟು, ಗೋಟು$_1$** (ನಾ). ೧. ದಿಕ್ಕು ; ದಿಶೆ : "ಗೊಂಟು, ದೆಸೆ—ಈ ೨ ದಿಕ್ಕು" (ಶಶಸಾ. ೪-೪೦) ; "ಗೊಂಟುಂ ದೆಸೆಯುಂ ಕನ್ನಡದ ದಿಕ್ಕುವೆಸರಹುದು" (ಶವಿಶಂ. ೩೯) ; ಹರ ಕುಳ್ಳಿರ್ದ ಗೊಟಿ[ಪಾಠಾಂ. ಕೊಪ್ಪೆ]ಗೊಂದುಱ ಸತ್ರದಲಿ ಮೆಱೆಯಲೊಂದು . . . ಇಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿದನು (ಸಿದ್ಧಕಾ. ೩-೪೪) ; ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ (ಕಬ್ಬಿಕಾ. ೨೦೫) ; ಎಸೆವ ಕರ್ಬಿನ ತೋಂಟದ ಗೊಂಟನೊಳ್ (ರಾಮಾಶ್ವ. ೦೦೧-೨೦). ೨. ಮೂಲೆ ; ಕೋನ ; ಸಂದಿ : ಪೃಥ್ವಿಯ ಹಸುಂಬೆಯಾಗೆ ಅಷ್ಟಲೋಕ ಪಾಲಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ (ಎಕ. VII, ಶಿಕಾರಿ. ೧೧೮-೩೦ : 1066) ; ದ್ರವ್ಯವ ಬಡ್ಡಿಯ ವ್ಯವಹಾರಕ್ಕೆ ಕೊಟ್ಟು ಮನೆಯ ಗೊಂಟನಲ್ಲಿ ಹೊಯ್ದುಕೊಂಡಿದ್ದನಾದರೆ ಅದು ಎನ್ನರ್ಥವಲ್ಲ ಅನರ್ಥವೆಂಬೆ (ಬಸವ. ೩೪-೪೦) ; ಭಿಕ್ಷುವಂ ಪೊರ್ದಿ ಯಕ್ಷಂ ಮರುಳಾದಂ ವಿಕ್ಕವಗೊರ್ಂಟನೊಳೆ ಮುದುಡಿದರ್ (ಅನಂಪು. ೧-೦೧೨) ; ವಾದಿಗಂ . . . ತನ್ನ ಗೊಂಟನಲ್ಲಿ ಮನೆಯೊಳಡಂಗಿರ್ಪನ್ನೆಗಂ (ಪುಣ್ಯಾಸ್ರ. ೬-೪೪ ವ) ; ಆ ಮನೆಯಾ ಗೊಂಟನೊಳವಳ ಕೆಡಹಿ (ಪ್ರಭುಲಿಂಚ. ೩-೦೧೬). **ಗೊಂಡು$_1$ :** ೨. ಎಲ್ಲರಂ ತಣಪಿ ಕಲಬಲನುಮಂ ನೋಡುತುಂ ಅಲ್ಲಿ ಗೊಂಡಿ[ಪಾಠಾಂ. ಗೊಂಟಿ, ಗೋಂಟಿ]ನೊಳಿರ್ದ ಭಕ್ತನಂ ಕಾಣುತುಂ (ಅನೀರ. ಹ. ೬೫-೨೫). **ಗೊಟ್ಟು$_3$ :** ೨. ಅವನ ಅರ್ಜಿ ಗೊಟ್ಟಕ್ಕೆ ಬಿದ್ದಿದೆ (ಜೂಧಿ). **ಗೋಂಟು :** ೧. "ದೆಸೆ ಗೋಂ[ಪಾಠಾಂ. ಗೊಂ]ಟನಲ್ ದಿಕ್ಕಕ್ಕು" (ಕಬ್ಬಿಕ. ೧೫). ೨. "ಅಣಿಃ, ಅಶ್ರಿಃ, ಕೋಟಿಃ, ಅಶ್ರಃ, ಕೋಣಃ—ಈ ೫ ಗೋಂ[ಪಾಠಾಂ. ಗೋ]ಟು" (ಹಲಾಯು. ೦೨೦-೪೨) ; ನಾಲ್ಕುಂ ಗೋಂಟಿಂಗಂ ಲಿಂಗಮುಂ ತಪೋಧನರುಂ ಕವಿಲೆಯುಂ ಬೆರಸು ಮಾಡಿ ನಿಱಿಸಿದ ಕಿನ್ನರಿಗಲ್ಲ ಗುಡ್ಡೆ ನಾಲ್ಕು (ಸೌಇಇ. XI-II, ೦೧೯-೫೪ ; 948) ; ಬಸದಿಯ ವೈರಿತ್ಯದ ಗೋಂಟಿನ್ದಂ (ಸೌಇಇ. XI-I, ೬೮-೫೨ ; 1045) ; ಶಿವಾಲಯದೊಳಯಿಕೆಯ್ತಂದು ಅಲ್ಲಿ ಸಂಭ್ರಮಿಪ ಶರಣರನೀಕ್ಷಿಸುತ್ತೊಂದು ಗೋಂಟನೊಳು ಕುಳ್ಳಿರ್ದು (ಅನೀರ. ದೇ. ೮೬-೯) ; ತಳಾಱಂ ಮನೆಯೊಳಗಂ ಪೊಕ್ಕು ಗೋಂಟನೊಳಿರ್ದವನಂ ತೆಗೆದುಕೊಂಡು ಪೋಗಿ (ಪುಣ್ಯಾಸ್ರ. ೬-೪೪ ವ). **ಗೋಟು$_1$ :** ೧. ಊರಡೆ ದಡದ ಬಡಗಣ ಮೂಡ್ಣ ಗೋಟನಲ್ಲಿ ಬ್ರಹ್ಮದೇವ ಪಟ್ಟವರ್ಧನರು ಕೊಟ್ಟ ತೆಂಕವಾಗಿಲ ಕುರುಕೆಯೊಂದು (ಸೌಇಇ. IX-I, ೩೩೩-೫೨ ; 1216) ; ನಿನ್ನ ಪುಣ್ಯದ ತೋಟವನು ತಱಿದೊಟ್ಟಿ ನಿಮ್ಮೈವರನು ಯಮಪುರದ ಗೋಟನಲ್ಲಿ ಗುಱಿಮಾಡುವೆನು (ಕುಮಾಗ. ೬-೦೬). ೨. "ಅಶ್ರಿಶ್ರಿಯೆನೆ ಗೋಟು" (ಮಂಗರಾ. ೦೩೦-೨೦) ; ಮೊಱಿನ ಗೋಟಿಗೆ ಬರ್ಪ ಕಿಱುಕುಳ ದೈವಕ್ಕೆ ಕುಱಿಯನಿಕ್ಕಿಹೆವೆಂದು ಸಲಿನಲಿದಾಡುವರು (ಬಸವ. ೫೬೧) ; ಸಿರಿ ಉರಿ ಮಾದೇವಿ ಮೊಱದ ಗೋಟಿಗೊಳಗಾಯಿತ್ತು (ಹರೊಮ್ಮ. ೪೦) ; ಮಾಯಾಮೋಹವೆಂಬ ಹಾಳುಗೇರಿಯ ಗೋಟಿನಲ್ಲಿ ಬಿದ್ದು ಸೂಕರನಂತಿಪ್ಪವರನೆಂತು ಭಕ್ತರೆಂಬೆ (ಸಿದ್ಧೇವ. ೪೨-೦೦೬) ; ಕುಟಿಲವೇಷದ ಗಿರಿಶಂ ಗೋಟನೊಳಿರಲ್ಕೆ ಕಂಡಂ ಭಕ್ತಂ (ಶ್ರೀಪುವಿ. ೯-೪೬). ೩. ಅಂಚು; ದಡಿ: ಒಬ್ಬ ಜರದ ಗೋಟು ಕಟ್ಟಿದ ಅಂಗಿ ಹಾಕಿದ ಸಾಹೇಬ-ಮುಂದೆ ಬಂದು (ಹಜಾರ. ೦೦೨).

**ಗೊಂಟುಗೊಂಟು** (ದ್ವಿರುಕ್ತಿ): ನಿಮಿರ್ದೆಱ ಬಾಱುವ ಪತಾಕೆ ವಿರಾಜಿಪ ಗೊಂಟು ಗೊಂಟನೊಳ್ ಬಳಸಿದ ಕೊತ್ತಳಂ (ಗಿರಿಕ. ೨-೬೯) ; ಶಕ್ರಾದ್ಯರೆಲ್ಲಂ ಕೊರಗುತ್ತುಂ ಗೊಂಟುಗೊಂಟಂ ಪುಗುತಿರೆ (ಕುಸುಮಾ. ೮-೦೪೫).

[ ದೇ.॥ ತುಳು. ಕೋಂಟು ; ಕಾಯ್ಕ್. ಕೋಂಟ./ಹಿಂ. ಮರಾ. ಗೋಟ್ ]

**ಗೊಂಟುಗೊಳ್** (ಕ್ರಿ). ೧. ಮೂಲೆಯನ್ನು ಸೇರು: ದಿನದೊಳ್ ಮೂದೆಱನಾಯ್ತು ಭಾನುವಿನ ತೇಜಂ ಗೊಂಟುಗೊಂಡೆಯ್ದಿದಂತೆನಸುಂ ವಹ್ನಿಯ ತೇಜಮೊಟ್ಟಿದವಿಯೊಳ್ ಮುಟ್ಟಿಗಿತ್ತು (ಕುಸುಮಾ. ೩-೬). ೨. ಅಂಚನ್ನು ಹೊಂದು ; (ಅಲಂಕಾರದ) ದಡಿಯನ್ನು ಹೊಂದು : ಅವಂ ಪೊಱಗುವಮಾಡಿ ರುಗ್ಮಿಕುಳಶೈಳಮಂ ಗೆಲ್ದು ರುಗ್ಮಿ ವಿಸ್ಫುರಿತಮಪ್ಪ ಕೋಂಟೆ ಸಲೆ ಗೊಂಟುಗೊಂಡಿರ್ದುದೆಂಬ ವರ್ಣನೆಗೆ ತಕ್ಕುದೇ ದಲೆ[ನಲಂ] ತರದಂ ಸುತ್ತಿ ದುಗ್ಧವಾರ್ಧಿಗೆಣೆಯಾದಗಟ್ ಸೊಗಯಿಸಿಕುರ್ ಮಚ್ಯಾಂಬುವಿಂ (ಶಾಂತಿಪು. ೯-೦೪೫). [ ಗೊಂಟು + ಕೊಳ್$_1$ ]

**ಗೊಂಟುಗೊಳಿಸು** (ಕ್ರಿ). ಮೂಲೆಗೆ ಸೇರಿಸು : ಕಲೆ ವಿಕ್ಕೆಯ್ದೆ ತಗುಳ್ದು ಗೊಂಟುಗೊಳಿಸುತ್ತುಗ್ರಾಂಧ್ಯವಂ ಕೈರವಾವಳಿಯೊಳ್ ಪೊಕ್ಕು ವಿಕಾಸಲಕ್ಷ್ಮಿಗೆಡೆಮಾಡುತ್ತ . . . ತಣ್ಗದಿರ್ಗಳೆತ್ತಂ ಪರ್ಬಿದತ್ತುರ್ವಿಯೊಳ್ (ಕುಸುಮಾ. ೪-೪೮). [ ಗೊಂಟುಗೊಳ್ + -ಇಸು$_3$ ]

**ಗೊಂಟುವೊಗು** (ಕ್ರಿ). ಮೂಲೆಸೇರು ; ಮೂಲೆಪಾಲಾಗು ; ಮೂಲೆಗುಂಪಾಗು : ಪೆಸರ್ವೆತ್ತ ಹಸ್ತಿನಾಪುರಕಸಮಂ ಕಾಮಾಗಿ ನಾಣ್ಚೆ ಸುರಪುರಂ ಪೋಯ್ತಾಗಸದತ್ತಲ್ ಫಣಿ[ಪತಿ]ಪುರಿ ರಸೆಗಿೞಿದುದು ಗೊಂಟುವೊಕ್ಕುದಳಕಾನಗರಂ (ಶಾಂತೀಶ್ವ. ೦೩-೦೬೨). [ ಗೊಂಟು + ಪೊಗು ]

**ಗೊಂಡ$_1$** 'ಗಾಮುಂಡ' ನೋ.

**ಗೊಂಡ$_2$** 'ಗೋಂಡ' ನೋ.

**ಗೊಂಡ$_3$** (ನಾ). [ಸಂಗೀತ] ಹಾಡುವುದರಲ್ಲಿ ಒಂದು ವಿಶಿಷ್ಟವಾದ ರೀತಿ, -ಕ್ರಮ : ಗತಿ ಸಂಗತಿವಡೆಯ ಗಮಕಂ ಗಾರವಂಬಡೆಯ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ . . . ಬೆಡಂಗುವಡೆಯ ಪಾಡುತ್ತಿರೆಯುಂ (ಶಾಂತೀಶ್ವ. ೧೬-೩೬ ವ). [ ? ]

**ಗೊಂಡರಸ** (ನಾ). ಒಬ್ಬಾತನ ಹೆಸರಂ : ಸ್ವಸ್ತಿಶ್ರೀ ಗೊಣ್ಡರಸರ್ ಪ್ರಿಥಿವೀ ರಾಜ್ಯಂಗೆಯೆ (ಎಕ. VII, ಶಿಕಾರಿ. ೪೩ (b)-೫೨ ; ಹು. 890 ? ).
[ <ಗೋವಿಂದರಸ ? ]

**ಗೊಂಡಲು** (ನಾ). ಒಂದು ಬಗೆಯ ಭೂಮಿ : ಕಲಿದೇವನಿಗೆ ಬಿಟ್ಟ ಧರ್ಮ್ಮಪೂರಿಂ ಪಡುವಲು x ೩ ಹುಣಸೆಯ ಕೆಯಿ ಮತ್ತರು ೨ . . . [ಗೌ]ಡಗಟ್ಟೆಯ ಕೆಳಗಣ ಗೊಂಡಲು ಎರಡು ಸಹಿತ (ಸೌಇಇ. XX, ೨೨೦-೩೮ ; 1283). [ ? ]

**ಗೊಂಡವನ** (ನಾ).=ಗೊಂಡಾರಣ್ಯ ೨ : ಕಡಲ ಮೇಲೆದ್ದಿತ್ತು ಕೂರ್ಮ ದಂತೀ ನೆಲವು ಗೊಂಡವನ ಪ್ರಾಚೀನ ಭೂವಿಭಾಗ (ಅಕಳು. ೩೦೬-೨).
[ ಗೊಂಡ$_2$ (<ಗೋಂಡ) + ವನ ]

**ಗೊಂಡಾರಣ್ಯ** (ನಾ). ೧. ವಿಂಧ್ಯಾದ್ರಿಯ ಬಳಿಯಿರುವ ಅರಣ್ಯ. ೨. ದಟ್ಟವಾದ ಅರಣ್ಯ : ಗೊಂಡಾರಣ್ಯಪ್ರಾಂತ್ಯದಲ್ಲಿ ಒಬ್ಬ ಬ್ರಾಹ್ಮಣನಿದ್ದನು (ನೀತಿಚಿಂ. XI, ೧೮): ಹದಿನಾಲ್ಕು ವರ್ಷಗಳ ತನ್ನ ವನವಾಸದ ಅವಧಿಯಲ್ಲಿ ರಾಮನು ಕೆಲಕಾಲ ಪಂಚವಟಿಯ ಗೊಂಡಾರಣ್ಯದಲ್ಲಿ ವಾಸಮಾಡಿದನು (ರೂಢಿ). [ ಗೊಂಡ2 (<ಗೋಂಡ) + ಅರಣ್ಯ ]

**ಗೊಂಡಾಳೆ** (ನಾ). (ಉಕ) ಅಕ್ಕಿಯಲ್ಲಿ ಹುಳುವಿನಿಂದ ಉಂಟಾಗುವ ಜಡೆ,-ಗಂಟು : ಸಂಡಾಗಿ ಮಾಡ್ಯಾಳ ಗೊಂಡಾಳೆಂತಾ ಚೆಂಡಾಲೆವ್ವ ಬೀಗುತಿ (ಜಾನಗೀ. ೫೧). [ ←ಮರಾ. ಗುಂಡಾಳೆ ]

**ಗೊಂಡಾಳೆಗಟ್ಟು** (ಕ್ರಿ). ಅಕ್ಕಿಯಲ್ಲಿ ಹುಳುವಿನಿಂದ ಜಡೆಗಟ್ಟು,-ಗಂಟುಕಟ್ಟು : ಅಕ್ಕಿ ಗೊಂಡಾಳೆಗಟ್ಟಿದೆ (ರೂಢಿ).
[ ಗೊಂಡಾಳೆ + ಕಟ್ಟು$_1$ ]

**ಗೊಂಡಿ$_1$** (ನಾ). [ಸಂಗೀತ] ಹಾಡುವುದರಲ್ಲಿ ಒಂದು ಕ್ರಮ, – ರೀತಿ : ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ ಗಹಿಗಹಿಕೆ ಗೊಂಡುಂ ಗೊಂಡಿ ಚಡಂ ಬಾಹಟಂ ಲಾಲಂಗಿ . . . ದೆದಂಗುವಡೆಯೆ ಪಾಡುತ್ತಿರೆಯುಂ (ಶಾಂತೀಶ್ವ. ೧೬-೬೭ ವ). [ ? ]

**ಗೊಂಡಿ$_2$** ' ಕೊಂಡೆ$_4$ ' ನೋ.

**ಗೊಂಡು$_1$** ' ಗೊಂಟು ' ನೋ.

**ಗೊಂಡು$_2$** ' ಕೊಂಡೆ$_4$ ' ನೋ.

**ಗೊಂಡೆ** ' ಕೊಂಡೆ$_4$ ' ನೋ.

**ಗೊಂಡೆಕುಚ್ಚು** (ನಾ). ಗೊಂಚಲಾಗಿರುವ ಕುಚ್ಚು : ನೆಕ್ಲದೋವ್ ಬಾಗಿಲು ದಾಟಿದ ಕೂಡಲೇ ಗೊಂಡೆಕುಚ್ಚಿನಂಥ ಕಂಠಾಭರಣ ಧರಿಸಿದ್ದ ಹುಡುಗಿಯೊಬ್ಬಳು ಅವನಿಗೆ ಅಡ್ಡವಾದಳು (ಪುನರು. ೨೬೫) : ಎತ್ತುಗಳಿಗೆ ಗೊಂಡೆಕುಚ್ಚು ಹಾಕಿದ್ದಾರೆ (ರೂಢಿ). [ಗೊಂಡೆ (<ಕೊಂಡೆ$_4$)+ಕುಚ್ಚು$_4$]

**ಗೊಂಡೆಚೌರಿ** (ನಾ). ತುದಿಯಲ್ಲಿ ಗೊಂಡೆಯಿಂದ ಕೂಡಿದ ಚವರಿ : ಹೆಂಡತಿ ನೋಡಿ ಹಲ್ಲನೆ ತೆರವ ಆಕೆ ಗೊಂಡೆಚೌರಿಯ ನೋಡಿ ಬೆರವೇ ಕಂಡಕಂಡಾ ವಿಷಯಕ್ಕೆ ಮನಹರಿವೆ (ಚಿದಾಪ. ೩೦-೨).
[ ಗೊಂಡೆ (<ಕೊಂಡೆ$_4$) + ಚೌರಿ$_1$ (<ಚವರಿ) ]

**ಗೊಂಡೆಜವರಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಪ್ರಕಿಗಿ. ೨೦-೩೬೦).
[ ಗೊಂಡೆಜವರ$_0$ + ಹುಲ್ಲು (<ಪುಲ್) ]

**ಗೊಂಡೆಯ** (ನಾ). ೧. ಗೊಂಚಲು; ಕುಚ್ಚು : ಕೆಲದ ಚವರದ ಗೊಂಡೆಯ ದೊಳೆಸೆವ ಜವ್ವನದ ಶಬರಿಯರು . . . ಹುಲ್ಲೆಗಳನೆಸುತಿರ್ದರು (ಹದಶಾ. ೫-೪೭) : ಕಾವನ ಪೂವಿನ ಗೊಂಡೆಯಗಳನೊರ್ವ ಭಾವಕಿ ವಂಟಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸಸೇವಂತಿಯರಲ ಮಾಱುವಳು (ಅಂಜಚ. ೩-೬೪): ಕಿಱುಪುಲಿಯುಗುರ್ಗಳ್ ಗೊಂಡೆಯದುಡಿ ದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ (ದಕಳು. ೨-೭೩) : ಕಠಾರಿಯ ಹೊಳೆವ ಗೊಂಡೆಯ ಮೆಱೆಯ ಗಂಡಂದವನು ಕೈಕೊಂಡ (ಕುವ್ಯಾಪ. ೬-೪೯). ೨. ಒಂದು ಬಗೆಯ ದುಂಡಗಿರುವ ಗುಚ್ಛದಂತಹ ಆಭರಣ : ನಿಱಿವಿಡಿದುಟ್ಟ ದೂವಟದ ಸೀರೆಯ ಮೇಲೆ ಮೆಱೆದುದು ಹೊನ್ನ ಗೊಂಡೆಯವು (ಭರತ. ೪೦-೫೯). ೩. ರಾಶಿ ; ಸಮೂಹ : (ಶ).
[ <ಕೊಂಡೆ$_4$ ]

**ಗೊಂಡೆಹುಳು** (ನಾ). " ಸಣ್ಣ ಸಸ್ಯಗಳನ್ನು ಹಾಳುಮಾಡುವ, ಚಿಪ್ಪಿಲ್ಲದ ಒಂದು ಬಗೆಯ ಬಸವನ ಹುಳು " (Slug. ಇಂಕನಿ).
[ ಗೊಂಡೆ$_0$ + ಹುಳು2 (<ಪುೞು$_1$) ]

**ಗೊಂಡೆಹೂ** (ನಾ). ದುಂಡಾದ ಒಂದು ಬಗೆಯ ಗುಚ್ಛದಂತಹ ಕೆಂಪು ಹೂವು : ಚೆಂಡುಹೂ, ತುಂಬಿಹೂ, ಗೊಂಡೆಹೂ . . . ಇವುಗಳ ಸಂತೆ ನೆರೆಯಿತು (ಸಾಸಮೂ. ೯೧).
[ ಗೊಂಡೆ (<ಕೊಂಡೆ$_4$) + ಹೂ$_2$ (<ಪೂ$_2$) ]

**ಗೊಂತು** ' ಗೊತ್ತು ' ನೋ.

**ಗೊಂತುಕಂಬಿ**(ನಾ). ದನಗಳ ಹಕ್ಕೆಯಲ್ಲಿ ದನಗಳನ್ನು ಕಟ್ಟಲು ಗೊಂತಿಗೆ ಅಳವಡಿಸಿರುವ ಕಂಬಿ: ಗೊಂತಿನಲ್ಲಿ ದನಕಟ್ಟಲು ಹಾಕಿರುವ (ಜೋಡಿ) ನಿಲುಗಂಬಿ : ಗೊಂತುಕಂಬಿ (Stanchion. ಇಂಕನಿ).
[ ಗೊಂತು (<ಗೊತ್ತು) + ಕಂಬಿ$_1$ ]

**ಗೊಂತುಗಾರ** ' ಗೊತ್ತುಗಾರ ' ನೋ.

**ಗೊಂತುಗೊಳ್** (ಕ್ರಿ). ಸ್ಥಿರವಾಡಿಕೊಳ್ಳು ; ನೆಲೆಗೊಳ್ಳು ; ನೆಲಸು : ಇಂತೊರೆದ ಪದ್ಯೋಧೆ ಮನದೊಳು ಗೊಂತುಗೊಂಡುದು (ಕಂಕದಾ. ೪-೨). [ ಗೊಂತು (<ಗೊತ್ತು) + ಕೊಳ್$_1$ ]

**ಗೊಂತುಮಾಡು** ' ಗೊತ್ತುಮಾಡು ' ನೋ.

**ಗೊಂದಣ** ' ಗೊಂದಳ ' ನೋ.

**ಗೊಂದಣಂಗುಣಿ** (ಕ್ರಿ). ಸಾಮೂಹಿಕ ನೃತ್ಯವನ್ನು ಮಾಡು ; ಮೇಳ ನೃತ್ಯವಾಡು : ಅಳವಿಗಟ್ಟಿದುತ್ಸವದೆ ಗೊಂದಣಂಗುಣಿವ ಗಣಿಕೆಯರ ಪದಪ್ರಚಾರಕ್ಕೆ ಬೆರ್ಚಿ (ಚಂದ್ರಪು. ೧೨-೩೫ ವ).
[ ಗೊಂದಣ (<ಗೊಂದಳ) + ಕುಣಿ$_1$ ]

**ಗೊಂದಣಂಗೂಡು** (ಕ್ರಿ). ಗುಂಪುಗೂಡು ; ಸಮೂಹವಾಗು : ಬಾವು ಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಱಿದು ಮಸಗಿ ದುವ್ವಾಳಿಸುವ ಗೋವಳಗಟ್ಟೆಗೆಯ ಗೊಂದಣಂಗೂಡಿ ಗಗನಂ ಕವಿದಂತೆ . . . ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಿರಿ. ೬-೫೫ ವ). [ ಗೊಂದಣ (<ಗೊಂದಳ) + ಕೂಡು$_1$ ]

**ಗೊಂದಣಂಗೊಳ್, ಗೊಂದಣಗೊಳ್, ಗೊಂದಣೆಗೊಳ್, ಗೊಂದಲ ಗೊಳ್ಳು** (ಕ್ರಿ). ೧.=ಗೊಂದಣಂಗೂಡು : ಒಂದೆಡೆಯೊಳು ಗೊಂದಣಂ ಗೊಂಡು ಜನಗಳು ಕೇಳುವಂತೆ ಮನಸಂದೊರ್ವನೊಂದು ಕಥೆಯಂ ಪೇಳ್ವುದನು ಕೇಳಿ (ಸಮ್ಯಕೌ. ೨-೪೬). **ಗೊಂದಣಗೊಳ್:** ೨. ತಬ್ಬಿಬ್ಬಾಗು ; ಗಲಿಬಿಲಿಗೊಳ್ಳು : ಎಂಬತ್ತುನಾಲ್ಕುಲಕ್ಷಯೋನಿಮುಖ ಜೀವಿಗಳಿಗೆ ಎಂಬತ್ತುನಾಲ್ಕುಲಕ್ಷಾರಾಧನೆ ಒಂದೊಂದಱಾರಾಧನೆಯ ನೊಂದೊಂದಱಿಯದೆ ಗೊಂದಣಗೊಂಡು . . . ಲಯವಾದುದೆಲ್ಲ (ಅಪಚಂ. ೨೮೯-೧೩೦೦). **ಗೊಂದಣೆಗೊಳ್:** ೧. ಮಲ್ಲಿಗೆಯ ಮಕರಂದದೊಡವೆರೆದ ಪರಾಗಮೆಂಬ ಪೊಸಕೆಸರ್ವೆತ್ತೆ ಕರ್ಚಿ ಕಳೆಯಲೆಂದು ಸಂದಣಿಸಿ ಗೊಂದಣೆ[ಗೊ ಳ್ಳ ಲ್ಲ]ಗೊಂಡೈದುತರವಿಂದಾಕರದರವಿಂದಬೃಂದಮರಂದರಸ ದೊಳ್ಮುಳುಂಗಿ (ಜಾಜಕೀ. ೨-೭೬ವ). **ಗೊಂದಲಗೊಳ್ಳು:** ೨. ಆ ಗೋಡೆಯ ಮರೆಯಲ್ಲಿ ನಮ್ಮ ತಯಾರಿ ಮಾಡಿಕೊಂಡು, ಏರಿಹೋಗಿ ದಾರಿಗಾಣದೆ ಗೊಂದಲಗೊಂಡ ವೈರಿಯನ್ನು ಗೆಲ್ಲುವದು (ಅಜನಾ. ೧೧೯) : ಮನಸ್ಸೆಲ್ಲಾ ಗೊಂದಲಗೊಂಡಿತ್ತು (ಕುಮಸಂ. ೧೧೦).
[ ಗೊಂದಣ (<ಗೊಂದಳ) + ಕೊಳ್$_1$ ]

**ಗೊಂದಣಂಮಾಡು** (ಕ್ರಿ). ಸಾಮೂಹಿಕ ನರ್ತನವನ್ನು ಮಾಡು; ಮೇಳ ನರ್ತನವನ್ನು ಮಾಡು: ಅಂತು ದೇವೇಂದ್ರಕರಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರಹಾರಹಾರ ಮುಕ್ತಾಫಳ ಪ್ರತಿಬಿಂಬಿತ ತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂಮಾಡುವಲ್ಲಿ (ಆದಿಪು. ೭-೦೨೫ ವ).

[ ಗೊಂದಣ (<ಗೊಂದಳ) + ಮಾಡು$_1$ ]

**ಗೊಂದಣಗೊಳ್** 'ಗೊಂದಣಂಗೊಳ್' ನೋ.

**ಗೊಂದಣದುಂಬಿ** (ನಾ). ಗುಂಪುಗುಂಪಾಗಿರುವ ದುಂಬಿ; ಹಿಂಡು ಹಿಂಡಾಗಿರುವ ದುಂಬಿ: ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವ ಮೆಯ್ಯೊಳಂ ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್(ಸೂಕ್ತಿಸು. ೬೦-೦೦); ಗೊಂದಣ [ಪಾಠಾಂ. ಳ]ದುಂಬಿ ತುಳಿಯದ ಬಂಧೂಕಂ ಹೆಚ್ಚದ ಹಱಿ ಗಿಳಿ ತುಂಡಿಸದಾಲದ ಪಣ್ಣೆಳವೆಯನುಳಿಯದ ಚೆಂದಳಿರೆನೆಯಿನಿದುಟಿ ಸೊಗಯಿಸಿತಾ ನೃಪಸುತೆಗೆ (ಜಯನೃ. ೩-೪೧).

[ ಗೊಂದಣ (<ಗೊಂದಳ) + ತುಂಬಿ$_1$ ]

**ಗೊಂದಣನುಡಿ** (ನಾ). ಹಲವುಮಾತು; ಬಹಳಮಾತು: ಬಂದರು ಜಯ ಜಯಯೆನುತಾಗ ದಿಕ್ಕುದಿಕ್ಕಿಂದ ನರೋರಗಸುರರು ಗೊಂದಣನುಡಿಯೇನು ಗಂಧಕುಟಿಗಳು ಚೆಲ್ವಿಂದೆರಡಾದುವೆರ್ವರಿಗೆ (ಭರತ. ೮೦-೪೮).

[ ಗೊಂದಣ (<ಗೊಂದಳ) + ನುಡಿ$_2$ ]

**ಗೊಂದಣನೃತ್ಯ** (ನಾ). ಸಾಮೂಹಿಕ ನೃತ್ಯ; ಮೇಳನೃತ್ಯ: ಬಾಳು ಗೊಂದಣನೃತ್ಯ ಉಸಿರುಸಿರು ಕೃತಕೃತ್ಯ ಕನ್ನಡದ ಮಗು ಮಾಣ ಮಾತ್ಯ ಭೃತ್ಯ (ಅರಳು. ೩೦೪-೧೪). [ ಗೊಂದಣ (<ಗೊಂದಳ) + ನೃತ್ಯ ]

**ಗೊಂದಣಪೆಕ್ಕಣ** 'ಗೊಂದಳಪೆಕ್ಕಣ' ನೋ.

**ಗೊಂದಣಬೆಳಗು** (ನಾ). ಕಾಂತಿಯ ಸಮೂಹ: ಅಂತು ಕಿಟ್ಟ ಬಾಳ್ಗಳ ಗೊಂದಣಬೆಳಗುಗಳ ಬಳಗಂಗಳೊಳಾಗಸವಳಯಮೆಲ್ಲಂ ಕು ವ ಳ ಯ ತ ಮಾಗೆ ಬಂದು ತಾಗುವುದುಂ (ಶಾಂತಿಪು. ೪-೨೬ ವ).

[ ಗೊಂದಣ (<ಗೊಂದಳ) + ಬೆಳಗು$_2$ ]

**ಗೊಂದಣವೆಕ್ಕಣ** 'ಗೊಂದಳವೆಕ್ಕಣ' ನೋ.

**ಗೊಂದಣಾಸ್ಥಾನ** (ನಾ). ಗೊಂದಣನೃತ್ಯವು ನಡೆಯುವ ಆಸ್ಥಾನದಲ್ಲಿ ರಂಪವನಂ; ಚೇರಮನೃಪಂ ಬಹಳ ಗೊಂದಣಾ [ಪಾಠಾಂ. ಣ] ಸ್ಥಾನನಾಗಿ ಸೌಂದರಪೆರುಮಾಳೆಯನೋಲೈಸುತ್ತುವಿರೆಯರೆ (ನಂಬಿರ. ೧೬-೧೧೩); ಸರಸ ಗಾಯಕ ಭಾವ ಚಿತ್ರಕ ಪುಣ್ಯ ಪಾಟ[ಠ]ಕ ನವ್ಯನರ್ತನ ನರ್ತಕಿಪ್ರಯುತಂ ಬಹಳ ಗೊಂದಣಾಸ್ಥಾನನಾಗಿ ಕೆಂಪಡರ್ದ ಕಂಗಳಿಂ . . . ಪೆರ್ಮಾಡಿ ರಾಯಂ ಜೊಮ್ಮಣ್ಣನಂ ಕರೆಯಲು (ಜೊಮ್ಮರ. ೧೧೧-೨೦).

[ ಗೊಂದಣ (<ಗೊಂದಳ) + ಆಸ್ಥಾನ ]

**ಗೊಂದಣೆ** 'ಗೊಂದಳ' ನೋ.

**ಗೊಂದಣೆಗೊಳ್** 'ಗೊಂದಣಂಗೊಳ್' ನೋ.

**ಗೊಂದಣಿಸು** 'ಗೊಂದಳಿಸು' ನೋ.

**ಗೊಂದಲ** 'ಗೊಂದಳ' ನೋ.

**ಗೊಂದಲಗೆಡವು** 'ಗೊಂದಲಗೆಡಹಂ' ನೋ.

**ಗೊಂದಲಗೆಡಹು, ಗೊಂದಲಗೆಡವು** (ಕ್ರಿ). ಗೊಂದಲದಲ್ಲಿ ಬೀಳಿಸು; ಪೇಚಿನಲ್ಲಿ ಸಿಕ್ಕಿಸು; ಪೇಚಾಡಿಸು: ಎಂದಿಗೂ ಅತಿ ಶಾಂತಚಿತ್ತನಾಗಿ ಪ್ರವಾಸದ ಸಿದ್ಧತೆಯನ್ನು ಮಾಡುವ ತನಗೆ ಹೀಗೇಕೆ ಒಂದೊಂದೇ ವಿಚಾರ . . . ಬಂದು ಗೊಂದಲಗೆಡಹುತ್ತಿದೆ? (ಹೊಸಕ್ಷ. ೧೬೩). ಗೊಂದಲಗೆಡವು: ಪರಜಾತಿಯ ಹುಡುಗನೊಡನೆ ತಮ್ಮ ಮಗಳು ಲಗ್ನವಾಗಲು ಹೊರಟಿರುವ ಸಂಗತಿಯು ಬಲವಾಗಿ ನೋಯಿಸಿತು . . . ಗೊಂದಲಗೆಡವಿತು (ಆರೋಹಿ. ೧೦೧).

[ ಗೊಂದಲ (<ಗೊಂದಳ) + ಕೆಡಹು (<ಕೆಡವು) ]

**ಗೊಂದಲಗೆಡಿಸು** (ಕ್ರಿ). =ಗೊಂದಲಗೆಡಹಂ: ಸಾವಿರ ಘಟನೆಗಳು, ಸಾವಿರ ಮುಖಗಳು . . . ಅಸಂಬದ್ಧವಾಗಿ ನೆರೆದು ಅವಳನ್ನು ಗೊಂದಲಗೆಡಿಸಿ ಬಿಡುತ್ತಿದ್ದವು (ಹೊಸಕ್ಷ. ೨೦೨).

[ ಗೊಂದಲಗೆಡು + – ಇಸು$_3$ ]

**ಗೊಂದಲಗೆಡು** (ಕ್ರಿ) ತಬ್ಬಿಬ್ಬಾಗಂ; ಗಲಿಬಿಲಿ ಹೊಂದು: ಈ ಸಾರಿಯ ಪಯಣದ ಸಿದ್ಧತೆಯಲ್ಲಿ ಅವನು ಸಾಕಷ್ಟು ಗೊಂದಲಗೆಡುತ್ತಾನೆ (ಹೊಸಕ್ಷ. ೨೮೯); ನಿದ್ದೆಯಿಂದ ಎಚ್ಚೆತ್ತ ಕಣ್ಣು ಈ ನೋಟದಿಂದ ಗೊಂದಲಗೆಡುವುದು ಸ್ವಾಭಾವಿಕ (ಗ್ರಾಮಾಯ. ೧). [ ಗೊಂದಲ (<ಗೊಂದಳ) + ಕೆಡು$_1$ ]

**ಗೊಂದಲಗೊಳ್ಳು** 'ಗೊಂದಣಗೊಳ್' ನೋ.

**ಗೊಂದಲಬಡಕ** (ನಾ). ಗಲಿಬಿಲಿಗೊಂಡವನು: ಸಮಾನಕರ್ತವ್ಯಗಳ ಕರೆ ಒಮ್ಮೆಲೆ ಕೇಳಿಬರಲು ಧರ್ಮಸಂಕಟದಲ್ಲಿ ಸಿಲುಕಿದ ಎಂಥ ಗಟ್ಟಿಗರೂ ಒಂದು ಕ್ಷಣವಾದರೂ ಗೊಂದಲಬಡಕರೂ ಎಬಡರೂ ಆಗುತ್ತಾರೆ (ಕಸಾಕ. ೨೩೭). [ ಗೊಂದಲ (<ಗೊಂದಳ) + ಬಡಕ (<ಬಡಿಕ) ]

**ಗೊಂದಲವೇಳು** (ಕ್ರಿ). ಗಲಿಬಿಲಿಯುಂಟಾಗು; ಗ ಲ ಭೆ ಯಾ ಗು: ಕೂಡಲೇ ಆ ಸ್ವಪ್ನದಲ್ಲಿ ಗೊಂದಲವೆದ್ದಿತು (ಮತಸ. ೮೫).

[ ಗೊಂದಲ (<ಗೊಂದಳ) + ಏಳು$_1$ (<ಎೞ್$_1$) ]

**ಗೊಂದಲಹಾಕು** (ಕ್ರಿ). ೧. ಗಲಾಟೆಮಾಡು; ಗಲಭೆ ಎಬ್ಬಿಸು: ತಾವು ಹೆದರಬೇಡಿರಿ, ನಾವೇನು ಗೊಂದಲಹಾಕುವುದಿಲ್ಲ (ಕುರಿಹಿಂ. ೧೧). ೨. ಗೊಂದಲ ಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಮಾಡು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨).

[ ಗೊಂದಲ (<ಗೊಂದಳ) + ಹಾಕು (<ಪಾಯ್ಚು$_1$) ]

**ಗೊಂದಲಹಾಡು** (ನಾ). ಗೊಂದಲಿಗರಂ ಹಾಡುವ ಹಾಡು; ಜಾತ್ರೆ ಮುಂತಾದ ಕಡೆಗಳಲ್ಲಿ ಪೌರಾಣಿಕ ಕಥೆಗಳನ್ನೊಳಗೊಂಡ, ಅಂಬಾಭವಾನಿಯನ್ನು ಸ್ತುತಿಸುವ ಹಾಡಂ: ಕರ್ನಾಟಕದಲ್ಲಿ ಗೊಂದಲಹಾಡುಗಳನ್ನು ಹಾಡುವ ಗೊಂದಲಿಗರು ಈ ತರದ ಜನರನ್ನು ಹೋಲಬಹುದು (ಕನ್ನಜಾ. ೪ ಪ್ರಸ್ತಾವನೆ).

[ ಗೊಂದಲ (<ಗೊಂದಳ) + ಹಾಡು$_1$ (<ಪಾಡು$_2$) ]

**ಗೊಂದಲಿಗ** (ನಾ). ಗೊಂದಲಸಮಾರಂಭದಲ್ಲಿ ಅಂಬಾಭವಾನಿಯಂ ನಾಮ ಸಂಕೀರ್ತನೆಯನ್ನು ಹೇಳುವವನಂ: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨); ನಮ್ಮಲ್ಲಿ ವಿಶೇಷ ಸಮಾರಂಭಗಳಲ್ಲಿ 'ಹರಕೆಯ ಗೊಂದಲ'ಗಳನ್ನುಹಾಕಿಸುವ ರೂಢಿಯುಂಟು. ಈ ಗೊಂದಲಿಗರೂ ಕೀರ್ತನಕಾರರೇ (ಕಥಕ. ೩); ಗೊಂದಲಿಗರು.–ಇವರೂ ಮಹಾರಾಷ್ಟ್ರರೇ . . . ಸಂಬಾಳ, ಚೌಡಕಿಗಳನ್ನು ಬಾರಿಸುತ್ತ, ಭವಾನಿಯ ಹಾ ಡು ಗ ಳ ನ್ನು ಹಾಡುತ್ತ ಭಿಕ್ಷೆಬೇಡುವವರು (ಕಥಾಗ. ೨೧೦); ಹಾವಾಡಿಗರು, ಗೊಂದಲಿಗರು, ಡೊಂಬರು . . . ಎಲ್ಲರೂ ಸಂದಣಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ? (ಅರಳು. ೩೩೯-೦೧); ಗೊಂದಲಿಗರು ಮನೆಯ ಮುಂದೆ ನಿಂತು ಹಾಡಹತ್ತಿದ್ದಾರೆ (ಮುಂಜುಕ. ೮); ಜೋಗಿ–ಗೊಂದಲಿಗರ ಕಥೆ ದಾಸರ ಆಟ, ಕಿಳ್ಳಿಕೇತರ ಆಟ, ರಾಧಾನ ಆಟ ಇವೇ ಜನರಿಗೆ ಪ್ರೀತಿಯ ಮನೋರಂಜಕ ಸಾಧನಗಳಾಗಿದ್ದುವು (ಅನಜೀ. ೩೦).

[ ಗೊಂದಲ (<ಗೊಂದಳ) + –ಇಗ ]

**ಗೊಂದಲಿಸು** 'ಗೊಂದಳಿಸು' ನೋ.

**ಗೊಂದವಾಡಿ** (ನಾ). ಒಂದು ಸ್ಥಳದ ಹೆಸರು ; P ಈಗಿನ ರಾಯದುರ್ಗ ತಾಲ್ಲೂಕಿನ ಗೋವಿಂದವಾಡಿ: ಗೊಂದವಾಡಿಯ ಪೂಬವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಇ. IV, ೨೦೫-೭ ; 1072).

[ ಗೊಂದ$_0$ + ವಾಡಿ$_1$ (<ಪಾಡಿ$_1$) ]

**ಗೊಂದಳ, ಗೊಂದಣ, ಗೊಂದಣೆ, ಗೊಂದಲ, ಗೋಂಧಳ** (ನಾ). ೧. ಗುಂಪು; ಹಿಂಡು; ಮೊತ್ತ: ಬೆಳಗುವ ಕೈದೀವಿಗೆಗಳ ಬೆಳಗುಂ ತರತರದಿನೊಗೆವ ತಾರಗೆಗಳ ಗೊಂದಳಮುಂ (ಆದಿಪು. ೧೨-೩); ಅನ್ನೀ ಸಾಲೆಯ ಕಂಬದ ಗೊಂದಳಮಂ ನಿಜಿಸುವನ್ನು ಕಂಬದ ರೂಪಿಂ ಪಿನ್ನ ಜನನ್ನಿಜಿಸುವಪೋಲೊನ್ನೆರಡಂ ತಾನೆ ಪಿಡಿದು ನಿಜಿಸಿದನಾತಂ (ಎಇ. IV, ೬೪-೧೪ : 946); ಇಂದ್ರಸ್ತ್ರೀಯರಾನಂದದಿಂ ಗೊಂದಳದೆ ಕುಣಿದು ಲೀಲಾನೃತ್ಯದಿಂ (ಆಜಿಪು. ೫-೪೩); ಗೊಂದಳದಿಂದೆ ನರ್ತಿಸುವ ಶೇಷಜನಂಗಳ ಭಂಗಿ ಲೀಲೆಯಿಂ ಮುಂದಿಡೆ ಭಕ್ತಿಬೋಧಿತಮನಂ ಜಿನರಾಜನ ಮುಂದೆ ತಾನುಮಾನಂದದ ನರ್ತನಕ್ಕೆ ಬಗೆದಂದು ಪುರಂದರನಂದು . . . ನಾಟಕಪೇಟಕಮಂ ನಿಮಿರ್ಚಿದಂ (ವರ್ಧಪು. ೧೪-೫೭); ಪೆರ್ಪುಲಿಯ ಪಿಂಡಿನಂತೆಯುಂ ಕಾಡೆಮ್ಮೆ ಪೋರಿಯ ಹಾರಿಯಂತೆಯುಂ ಪಂದಿಯ ಗೊಂದಳದಂತೆಯುಂ (ಪುಷ್ಪಪು. ೩-೧೨೭ ವ); ಅರಮನೆಗೆ ಪೋಪ ನೃಪರಂದಳದ ಗೊಂದಳ [ಪಾಠಾಂ. ಣ]ದ . . . ಪಾಳೆಯಂ ಕಣ್ಗೆಸೆದುದು (ಚಬಪು. ೧೨-೧೫). ೨. ಗಲಿಬಿಲಿ; ಸಿಕ್ಕು; ಗೋಜು: ಅಂತಿಂತೆಂಬುದಕ್ಕೆ ಉಭಯದ ಗೊಂದಳದವನಲ್ಲ (ಮನುಗುಂ. ೬); ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ ತೇಜಿಯ ಹೇಷಿತದ ವೆಗ್ಗಳೆಯ ಕರಿಗಳ ಬೃಂಹಿತದ ಗೊಂದಳದ ಕಳಕಳರ್ಬಿಯ್ಯ ಕೌರವಸೈನ್ಯಶರಧಿಯಲಿ (ಕುಮಾವ್ಯಾ. ೯-೫೭). ೩. (ಉಕ) ಒಂದು ಬಗೆಯ ಧಾರ್ಮಿಕವಿಧಿ ; P ಮದುವೆಯ ನಂತರ ಅಂಬಾಭವಾನಿಯನ್ನು ಕುರಿತು ನಡೆಸುವ ನರ್ತನ, ಸಾಮೂಹಿಕ ಭಜನೆ, ಪೂಜೆ ಮೊದಲಾದ ಸಮಾರಂಭ; (ಗೊಂದಲ ಸಮಾರಂಭದಲ್ಲಿ) ಗೊಂದಲಿಗರು ಹೇಳುವ ದೇವಿಯ ನಾಮಸಂಕೀರ್ತನೆ. 'ಗೊಂದಲಪೂಜೆ' ಪರಾ. ೪. ಸಾಮೂಹಿಕ ನೃತ್ಯ ; ಮೇಳನೃತ್ಯ : ಹೀಗೆ ಗೊಂದಳ ಎಂದರೆ ಮಂಡಲನೃತ್ಯವೆಂದು ಸ್ಪಷ್ಟವಾಗಿತಿಳಿವುದರಿಂದ Chorus ಎಂಬುದಕ್ಕೆಗೊಂದಳದವರು ಎನ್ನುವುದೇ ನನಗೆ ನೇರೆನಿಸಿತು (ಹಚ್ಚಿರ. VI ಮುನ್ನುಡಿ). **ಗೊಂದಣ:** ೧. "ಗೊಂದಣ ಮನೆ ನಿಕರಕ್ಕೆ ನಾಮಂ" (ಶಮನಿ. ೪೭); ಕೆಂದಳಿರ ಗೊಂದಣದಿಂ ಸಹಕಾರ ಭೂರುಹಾವಳಿ ಕಡು ರಯ್ಯಮಾಗೆ . . . ಬಂದನೊಡಲಿಲ್ಲ ವಸಂತವಲ್ಲಭಂ (ಧರ್ಮಾಮೃ. ೧೧-೧೧೨); ಗಿಳಿಗಳ ಪಿಂಡು ತುಂಬಿಗಳ ಗೊಂದಣಮಂಚೆಗಳೊಡ್ಡರಲ್ದರಲ್ಲಳ ರಜದುರ್ವ ಬಂದೆಳಸಿ ಸಂದಣಿಸುತ್ತಿರೆ (ಚಂದ್ರಪು. ೧೧-೪೭); ಗೊಂದಣದ ದಿವಿಜರರ್ಚಿಪರಲ್ಲಿ ಶೂಲಿಯಂ (ಲಕಿಚಂ. ೨೬-೬೯); ಕಾಳೆಯ್ಯೀಣನ ಪೊಗ್ಗರವಿದೆ ಹುಲ್ಲೆಗಳ ಒಗ್ಗಿದೆ ಪಂದಿಯ ಗೊಂದಣವಿದೆಯೆಂದು ಮುಗ್ಗಿ ಕವಿದರು ಶಬರರು (ಕುಠಾಸಾಂ. ೨೭-೬೦); ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುಱುಹು ಇರುತಿರಲಿಕೆ ಆ ನಿಜಲಿಂಗದ ಸಂಗವನಱಿಯದೆ ಸಂದಿಗೊಂದಿಯಲ್ಲಿ ಹೊಕ್ಕಿಹೆನೆಂಬ ಗೊಂದಣವೇತಕ್ಕೆ (ಮರೇಅ. ೨೭೩-೧೫). ೪. ಕಿನ್ನರಿಯ ಗೊಂದಣದಿಂಚರಂ (ರೇವಣ. ೩೦-೪೫); ಮರ ಕಿತ್ತಿವೆ ಬುಡ-ತಳ ಹಾದಿ ಉಡುಗೆ ಝಳರಝಳ ಕಡಲು ಕುಣಿಯೆ ಗೊಂದಣ ತೆರೆ-ಮುರಿ-ನೊರೆ ಧಂಧಣ (ಕೃದಸ. ೩೭-೧೦); ಗೊಂದಣದಲ್ಲಿ ನಾನಿಕ್ಕಿದ ಹೆಜ್ಜೆ . . . ಅದಕ್ಕೊಂದು ಸಾಮಾನ್ಯತೆಯಿದೆ (ಸಾಹಿವಿ. ೪ ಮುನ್ನುಡಿ). 'ಗೊಂದಣಂಮಾಡು' ಪರಾ. **ಗೊಂದಣೆ:** "ಬಂಬಲ್, ತುಱುಗಲ್ . . . ಗೊಂದಣೆ(ಉಂದಲ್) – ಈ ೪೦ ಸಮೂಹಂ" (ಶಕಸಾ. ೧೦-೨೨೨); "ಗೊಂದಣೆಯೆನಲ್ ಗೊಂಬೆಯನೆ ಸಲ್ಲುಗು ಸಮೂಹದೊಳ್" (ಶಶರ. ೩೪) : ಈಶನಂ ಪೂಜೆಗೆಯ್ದು ಮಣಿವ ಜಲಕನ್ಯಕಾ ಜಲಪುರುಷರ ಗೊಂದಣೆಯುಂ . . . ರಂಜಿಸೆ (ವೃಷವಿ. ೧೧-೪೨ ವ). **ಗೊಂದಲ:** ೩. ಬೊಂಗಲುಡನ ಮಗ ಕಲ್ಲಪ್ಪನ ಕೂಡಿಬಂದು × × × ಹೆಂಡಿರ ಕುಲಕೆ × × ಗೊಂದಲಮಾಡಿಕೊಂಡಲ್ಲಿ (ಮೈಆರಿ. ೧೯೨೯, ೮೨-೦೦ ; 15ನೆಯ ಶತ); ಗೊಂದಲದೊಳು ನೊಂದು ಬೇನೆಯನುಂಡನು ಬಂಧನದೊಳು ಬಳಲಿಹನು (ಇಂಹಾಪ. ೧೦೦-೮೯); ಅಂದು ಮುಂಬಯಿ ನಿಲ್ದಾಣದಲ್ಲಿ ಗೊಂದಲವೇ ಗೊಂದಲ (ಪ್ರಡಸ. ೭೩). 'ಗೊಂದಲಹಾಕು' ಪರಾ. ೫. "ಒಂದು ವಿನೋದಾವಳಿ ಆಟ; ಗೊಂದಲಿಗರಾಟ" (ಜಾನಕೋ. ೫೦). **ಗೋಂಧಳ:** ೩. ಜನರಿಗೆ ಉಪದೇಶವನ್ನು ಮಾಡುವುದಾದರೆ 'ಗೋಂಧಳ ಕೀರ್ತನ'ದಂತಹ ವಸ್ತುಗಳೇ ಇಲ್ಲ. ವರ್ತಮಾನ ಪತ್ರಗಳು ಇವುಗಳ ಮುಂದೆ ಏನು ಮಾಡಲಾಪವು (ಸಿವಧಾ. ೧೩).

**ಗೊಂದಲದಲ್ಲಿ ಬೀಳು** = ತೊಡಕಿನಲ್ಲಿ ಸಿಕ್ಕಿಕೊಳ್ಳು ; ಗಲಿಬಿಲಿಗೊಳಗಾಗು : ಈ ಪ್ರಶ್ನೆಯ ತರಬೇತಿ ಗೊತ್ತಾಗದೆ ಗೊಂದಲದಲ್ಲಿ ಬಿದ್ದ ಪೋನಪ್ಪನಾಯ್ಕರು . . . ಕೇಳಿದರು (ಮೂಕುದಾ. ೨೬೦). **ಗೊಂದಲದವ**= ಅಂಬಾಭವಾನಿಯ ಪ್ರೀತಿಗಾಗಿ ಗೊಂದಲವೆಂಬ ಧಾರ್ಮಿಕ ವಿಧಿಯನ್ನು ನಡೆಸುವವನು: ಗೊಂದಲದವರು ಬಂದು ಚೌಟಿಗಿ ಬಾರಿಸಿಕೊಂಡು 'ಜೇಜೇ' ಅಂತ ಹೇಳ್ತಾರಲ್ಲ, ಕೇಳಿದೀಯೇನು? (ಚಳುಮು. ೮೩). **ಗೊಂದಳಚತುರ್ಮುಖ** = ಸಭೆಗಳಲ್ಲಿ ಮುಖ್ಯನಾದವನು; ಒಂದು ಬಿರುದು : ಶೌಚಾಂಜನೇಯಂ ಗೊಂದಳಚತುರ್ಮುಖಂ ಸಮರಮುಖ ಷಣ್ಮುಖಂ . . . ಅರಸುಗೆಯ್ಯುತ್ತಮಿರೆ (ಎಇ. XVI, ೮೪-೦೨ ; 1067).

[ ?./ತುಳು. ಗೋಂದಳ, ಗೋಂದೋಳು ; ತೆಲು. ಕೊಂದಲ./ ಮರಾ. ಗೋಂದಳಾ, ಗೊಂಧಳ./ಪ್ರಾ. ಗುಂದಲ ಗೋಂದಲ ]

**ಗೊಂದಳಪೂಜೆ** (ನಾ). ತುಳುನಾಡಿನ ವಿಶೇಷವಾಗಿ ಮರಾಟಿಗರೆಂಬ ಜನಾಂಗದಲ್ಲಿ ಪ್ರಚಾರದಲ್ಲಿರುವ ಒಂದು ಬಗೆಯ ದುರ್ಗಾರಾಧನೆ; ಒಳಮನೆಯಲ್ಲಿ ದೇವಿಯ ವಿಗ್ರಹವನ್ನಿಟ್ಟು ಅಲಂಕರಿಸಿ, ಹೊರ ಅಂಗಳದಲ್ಲಿ ಉರಿಯುತ್ತಿರುವ ದೀಪದ ಸುತ್ತಲು ಕೈಯಲ್ಲಿ ದೀವಟಿಗೆಯನ್ನು ಹಿಡಿದುಕೊಂಡು ದೇವಿಯ ಸ್ತೋತ್ರಗಳನ್ನು ಹಾಡುತ್ತ ಕುಣಿಯುತ್ತ ಭಕ್ತರು ಆಚರಿಸುವ ಒಂದು ವಿಶಿಷ್ಟರೀತಿಯ ದುರ್ಗಾಪೂಜೆ : ನಮ್ಮ ತುಳುನಾಡಿನಲ್ಲಿ ಹರಕೆಗಾಗಿಯೂ ಬಳಕೆಗಾಗಿಯೂ ಗೊಂದಳಪೂಜೆ ಎಂದು ಮಾಡಿಸುವುದುಂಟು (ಹಚ್ಚಿರ. VI ಮುನ್ನುಡಿ).

[ ಗೊಂದಳ + ಪೂಜೆ$_2$ ]

**ಗೊಂದಳಪೆಕ್ಕಣ, ಗೊಂದಣಪೆಕ್ಕಣ, ಗೊಂದಣವೆಕ್ಕಣ** (ನಾ). ಗುಂಪಾಗಿ ಮಾಡುವ ನೃತ್ಯ ಮೊದಲಾದ ಪ್ರದರ್ಶನ: ದೇಸೆವಿಲಾಸಮುಂ ಪಡೆಯೆ ಗೊಂದಳಪೆಕ್ಕಣವಾಗಳಾ ನೃಪಾವಾಸದೊಳಾದಿದತ್ತು (ಪಂರಾಮಾ. ೩-೧೦೬). **ಗೊಂದಣಪೆಕ್ಕಣ:** ಗೊಂದಣಪೆಕ್ಕಣ ಕುಣಿವರು; ಗುಡಿಕಟ್ಟುವರು (ಸಾಹಿಸಂ. ೩೬). **ಗೊಂದಣವೆಕ್ಕಣ:** ವಿವಿಧಲಯಂಗಳಿಂ ಕುಣಿವ ಗೊಂದಣ [ಪಾಠಾಂ. ಳ] ವೆಕ್ಕಣಮಾಗಳಂತೆ ಕಟ್ಟುವ ಗುಡಿ ಪೊಯ್ಯುಬದ್ದವಣಂ . . . ಮೆಱೆದುವುತ್ಸವಮಂ ಜನಜನ್ಯಗೇಹದೊಳ್ (ಮಲ್ಲಿಪು. ೧೨-೪); ಓಲಗ ಸಾಲೆಯು ಸಂಗೀತ ಸದನರಂಗದೊಳಚ್ಚರಸಿಯರ ಗೊಂದಣವೆಕ್ಕಣಮ ತೆಕ್ಕನೆ ತೀವೆ (ಅನಂಪು. ೫-೫ ವ); ಗೊಂದಣವೆಕ್ಕಣದಮರೀವೃಂದಂಗಳ ಬಿಳಿಯ ನಿಡಿಯ ಕಣ್ಗಳ ಬೆಳ್ಪಂ ಕೆಂದಳದ ಕೆಂಪುಮಾಂತುವು ಚಂದನ ಸಿಂಧೂರರಸದ ಪೊಸ ಕಾಪ್ಪುರಮಂ (ಪುಷ್ಪಪು. ೦೨-೪೩).

[ ಗೊಂದಳ + ಪೆಕ್ಕಣ ]

**ಗೊಂದಳಿಸು, ಗೊಂದಣಿಸು, ಗೊಂದಲಿಸು** (ಕ್ರಿ). ೧. ಗುಂಪುಗೂಡು; ಒಟ್ಟಾಗು; ದಟ್ಟೈಸು : ಅಂತು ದೇವರ್ ದೇವನೋಲಗಮಾದ ತಂತಮ್ಮಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಲಶಂಗಳಂ ತಂದು

ಗೊಂದಳಿ [ಪಾಠಾಂ. ಣಿ] ಸಿ ಸಂದಣಿಸಿ ನೀಡಿದಾಗಳ್ (ಆದಿಪು. ೬-೮೪ ವ): ತೊಳಪ ದಂತಮರೀಚಿಸಂತತಿ ಪರ್ವಿ ಬಳ್ವಳ ನೀಳ್ದು ಗೊಂದಳಿಸಿ . . . ಸಭಾಂತರಾಳಮನೆಲ್ಲಮಂ ಬೆಳಗೆ ಭೂವಳಯಾಧಿಪಂ ನುಡಿಗುಂ (ಕಾವ್ಯಾವ. ೫೬೯): ಬಾಳಕಂ ನಿಮ್ಮಾಳಾರ ಕೆಯ್ಗೆ ನೆಗೆದು ನಗುತ್ತುಂ ಬಂದನವಳ್ಗೆ ಕುಡುವನೆಂಬುದುಮರಸಿಯರೆಲ್ಲಮೆಮಗೆತಮಗೆಂದು ಗೊಂದಳಿಸಿ ಕರಕಿಸಲಯಂಗಳನಡಸಿ ನೀಡುವುದುಂ (ಅರ್ಥನೇ. ೪-೯೬ ವ); ತರಂತರದಿಂದೆನಿಸಿತ್ತು ಕಣ್ಗೆ ಗೊಂದಳಿಸಿ ಬರುತ್ತುಮಿರ್ಪ ಖಚರೀಜನಮಾಳೆನಭೋಂತರಾಳದೊಳ್ (ವರ್ಧಪು. ೫-೨೬). ೨. ಬಹಳವಾಗು; ಹೆಚ್ಚಾಗು; ಅತಿಶಯಂವಾಗು: ಪಸರಿಸಿ ಪರ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂದೊಸೆದಿನನೇಱುವಂತುದಯಪರ್ಬ್ವತಮಂ (ಎಕ. VII, ಶಿಕಾರಿ. ೧೨೫-೧೪; 1019). ಗೊಂದಣಿಸು: ೧. ಅತಿರಥ ಸಮರಥ ಮಹಾರಥಾರ್ಧರಥರೊಂದೆಪಿಂದೆಯಲ್ಲದೊಂದೊಂದರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್ (ಪಂಪಭಾ. ೧೦-೧೪೬ ವ): ತಮ್ಮನಿಬರೊಂದಾಗಿ ಗೊಂದಣಿಸಿ ನಿಂದ ಪಾಂಡುನಂದನರುಮಂ . . . ಕಂಡು (ಗದಾಯು. ೬-೫೬ ವ); ಮುಂದಣ ಸಾಮಂತರಾಜಪುತ್ರೋತ್ಕರದಿಂ ಗೊಂದಣಿಸಿ ಪರ್ವಿ ರಣದೊಳ್ ನಿಂದಿರ್ಪವನೇಣವಾಹನಂ ಪವಮಾನಂ (ಗಿರಿಕ. ೬-೬೨); ಗೊಂದಣಿಸಿ ನಡೆವ ಮದಕರಿಗಳಿಂ ಹರಿಗಳಿಂ . . . ಪಡೆ ಪಡಪಾದುದು (ಜಲಪು. ೪೮-೨೩). ೨. "ಗೊಂದಣಿಸು–ಸಮೂಹೇ, ಬಾಹುಳ್ಯೇಚ" (ಶಮಧಾ). ೩. ಗದ್ದಲವೆಬ್ಬಿಸು; "ಗಲಾಟೆಮಾಡು" (ಪ್ರಭಕ್ಕ). ಗೊಂದಲಿಸು: ೪. ಕಕ್ಕಾಬಿಕ್ಕಿಯಾಗು; ಗಲಿಬಿಲಿಗೊಳ್ಳು: 'ಪ್ರವಾಸ' ಎಂದರೆ ಎಂದೂ ಗೊಂದಲಿಸದ ತಾನು ಇಂದು ಇಷ್ಟೇಕೆ ಗೊಂದಲಿಸುತ್ತಿದ್ದೇನೆ (ಹೊಸಕ್ಕ. ೧೬೬); ನಿರ್ಮಲೆಯ ಈ ಅನಪೇಕ್ಷಿತ ಸಿಟ್ಟಿನ ಅರ್ಥವಾಗದೇ ಗೊಂದಲಿಸಿದ ವಾಸುದೇವನಿಂದ ಕ್ಷಣಕಾಲ ಮಾತೇ ಹೊರಡಲಿಲ್ಲ (ಮೂರುದಾ. ೨೯೦). [ ಗೊಂದಳ + – ಇಸು$_3$ ]

ಗೊಂದಿ, ಗೊಂದು, ಗೊಂದೆ$_2$ (ನಾ). ಇಡಕು; ಪಂಜಲೆ; ಸಂದು: ಸಿದ್ಧರಾಮಾ ಎಂದು . . . ಅಬ್ಬಿಯೊಳು ಬೆಳಗೆಯ್ಯ ಸಂದಿಯೊಳು ಗೊಂದಿಯೊಳು ಗಬ್ಬರಿಸಿ ತಮತಮಗೆ ಚೀಱ ಕರೆದರು (ಸಿದ್ಧರಾ. ೨-೪೮): ಗೊಂದಿಯೊಳಿಹ ಜನಬಿಂಬಕೆ ಮಂದರದಂದದೆ ಜನಭವನವನೂ ರುಂದ್ರತರದೆ ಸವೆಸಿದ ವಾದಿವಿದ್ಯಾನಂದಯೋಗಿಗೆ ನಮಿಸುವೆನೂ (ಅಂಜಕ.೧-೫೧): ಪುರದ ಬಾಹ್ಯದಲೊಂದು ದೇವಾಲಯದ ಮಧ್ಯದ ಗೊಂದಿಯಲಿ ತಾದ್ರುಪದನೊಱಗಿರೆ (ಸಂಛಶ. ೦೬-೬೯); ದುರ್ಜನರ ಮಂದಿಯಂ ದೆಸೆದೆಸೆಯ ಗೊಂದಿಯಂ ಪೊಗಿಸಿ ಬಲು ಬಂದಿಯಂ ಮಾಡಿ ಜಯವೊಂದಿರ್ದ . . . ನಂದಿಯಂ ಬಲಗೊಂಬೆನು (ಜೀರಮು. ೦-೭). ಗೊಂದು: ಗಿರಿಯ ಸಂದುಗುಹೆಯ ಗೊಂದುಗಳೊಳಗೆ ಅರಸಿಯಿಂದುಮುಖಿಯನಂದುಗಾಣದೆ . . . ಮರುಗುವಾಗ (ಹನುಮ. ೧೦೬); ಸಂದಿನೊಳ್ ಪುದುಕುತುಂ, ಗೊಂದಿನೊಳ್ ನೋಡುತುಂ (ರಾಮಾಶ್ವ. ೦೧೦-೮). ಗೊಂದೆ$_2$: ಬಂದು ಮಾಮರದಡಿಗಳೊಳು ತಮಾಳದ ಗೊಂ [ಪಾಠಾಂ. ಮಂ] ದೆಗಳೊಳಗಡಗಿಸಿದಳು (ಶಾರಾಸಾಂ. ೩೩-೪೬). [ದೇ.॥ ತಮಿ. ಕೊನ್ತು; ತೆಲು. ಗೊಂದಿ. ]

ಗೊಂದು 'ಗೊಂದಿ' ನೋ.

ಗೊಂದೆ$_1$ (ನಾ). ೧. ಎತ್ತು; ಬಸವ; ವೃಷಭ; ನಂದಿ: "ಗೊಂದೆಯ ವೃಷಭಂ" (ಕವಿಕಂ. ೨೩); "ಗೊಂದೆಯನೆ ಶಂಭುವಾಹನಮಕ್ಕು" (ಕಶಕ. ೩೩); ಹೆಟವರದೊಂದು ಗೊಂದೆ [ಪಾಠಾಂ. ಗೋಡೆ] ಮೊದಲಾಗೆ ಪಶುತ್ವನಿಬದ್ಧ ರೂಪಮಂ ತಳೆದ ದುರಾತ್ಮರಿಂದು ಪೆಸರ್ಗೊಂಡಮರ್ಗೋಲಗವೀಯದೆಂದೊಡೆ (ಸಮುಪ. ೧೦-೧೮೮); ಆ ಬಸವಂ ಪಾಯ್ದೊಡೆ ಕೆಸಱೊಳ್ ಬಸವಳಿದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಚಂದ್ರಪು. ೨-೨೯). ೨. ದನ; ಕಾಲ್ನಡೆ; ಪಶು: ಗೊಂದೆಗಳಂ ಕಾಯದ ಗೋವಿಂದಂ ಕಂದುಗೊರಲನಲ್ಲದ ಮಾದೇವಂ . . . ಎಂಬಂದದಿನತಿ ವಿಭ್ರಾಜಿಸಿದುಂ ರಾಜಪ್ರಭರಾಜಸುತಂ (ಜಯುಕಾ. ೨-೬೯): ಹಿಂಡಿಂದೊಡೆದೋಡಿ ಪೋಪ ಗೊಂದೆಯನೊಂದ ಕಂಡು (ಶಾರಾಸಾಂ. ೩೧-೯೦): ಅಂಕಕ್ಕೈದಿದವರು ಗೊಂದೆಗಳ ಕಾಯ್ವರೋ ಮೇಣಾನು ನಿಮಗೆ ತಕ್ಕುದ್ಧಿಯುಸುರುವ ಸೀಕ್ಷಕರ್ತ ಫಡೆಫಡೆಯೆಂದು ಕಿದ್ದಿದಂ ಶಶಿಜಾಲ ಬರುಮಳೆಯನವನೀಶ ಕೋಮಲ ಲತಾಂಗಗಳಿಗೆ (ಜಿಸಮು. ೮-೨೪).

[ ದೇ.॥ ತುಳು. ಗೊಂದೆ; ತೆಲು. ಗೋದ; ಕೊಲಾ. ಕೊಂದಾ. ಕೋಂದ; ಪರ್ಜಿ. ಕೋಂದ; ಗದಬ. ಕೋಂದೆ, ಕೋಂದೇ; ಗೊಂಡಿ. ಕೋಂಡಾ, ಕೋಂದ ]

ಗೊಂದೆ$_2$ 'ಗೊಂದಿ' ನೋ.

ಗೊಂದೆಗೊರವ (ನಾ). ಎತ್ತಿನ ಗೊರವ; ವೃಷಭವಾಹನನಾದ ಈಶ್ವರ: ಗೊಂದೆಗೊರವನ ಸೆಣಸಿ ಗೆಲಿದೆನೆಂಬಹಂಕಾರದಿಂದ ಯನ್ನಿದಿರಿನಲಿ ನಿಂದು ಕಾದುವರೆ ನಿನ್ನಿಂದಲಪ್ಪುದೆ (ನವಮೋ. ೩೨-೬).

[ ಗೊಂದೆ$_1$ + ಗೊರವ ]

ಗೊಂದೆಬೊಂದಿ (ನಾ). ೧. ಎತ್ತಿನ ದೇಹ. ೨. (ಆಲಂ) ಪಶುವಿನಂತಹವನು: ತನ್ನಱಿವಂ ಮಾಱುಗೊಟ್ಟು ಪಸುವಾಟ್ಟ ಗೊಂದೆಬೊಂದಿಗೆ . . . ಬೆಸಲಾದ ಮಡದಿಯಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ಕುಂ (ಶಾಮಾಶ್ವ. ೭೪-೦).

[ ಗೊಂದೆ$_1$ + ಬೊಂದಿ ]

ಗೊಂದೆವಳವಿಗ 'ಗೊಂದೆವಟವಿಗೆಯ' ನೋ.

ಗೊಂದೆವಳವಿಗೆ 'ಗೊಂದೆವಟವಿಗೆ' ನೋ.

ಗೊಂದೆವಳವಿಗೆಯ 'ಗೊಂದೆವಟವಿಗೆಯಂ' ನೋ.

ಗೊಂದೆವಟಯಿಗೆ 'ಗೊಂದೆವಟವಿಗೆ' ನೋ.

ಗೊಂದೆವಟಯಿಗೆಯ 'ಗೊಂದೆವಟವಿಗೆಯಂ' ನೋ.

ಗೊಂದೆವಟವಿಗೆ, ಗೊಂದೆವಳವಿಗೆ, ಗೊಂದೆವಟಯಿಗೆ (ನಾ). ಎತ್ತಿನ ಗುರುತುಳ್ಳ ಬಾವುಟ; ವೃಷಭಧ್ವಜ. 'ಗೊಂದೆವಟವಿಗೆಯ' ಪರಾ. ಗೊಂದೆವಳವಿಗೆ: ಗೊಂದೆವಳವಿಗೆಯವನು ಹೆಕ್ಕಳದಿಂದ ಚಿನ್ನದ ತಟ್ಟೆಯೊಳು ವೀಟಕೆಯ ತರಿಸಿತ್ತು (ಅಜಾಪಿ. ೬-೬). 'ಗೊಂದೆವಳವಿಗೆಯ' ಪರಾ. ಗೊಂದೆವಟಯಿಗೆ: 'ಗೊಂದೆವಟಯಿಗೆಯ' ಪರಾ.

[ ಗೊಂದೆ$_1$ + ಪಟವಿಗೆ ]

ಗೊಂದೆವಟವಿಗೆಯ, ಗೊಂದೆವಳವಿಗ, ಗೊಂದೆವಳವಿಗೆಯ, ಗೊಂದೆವಟಯಿಗೆಯ (ನಾ). ಎತ್ತಿನ ಗುರುತಿನ ಬಾವುಟವುಳ್ಳವನು; ವೃಷಭಧ್ವಜ; ಶಿವ: "ಎಳದೇರ . . . ಗೊಂದೆವಟವಿಗೆಯನೆಣ್ಮಯ್ಯವಂ . . . ಗಂದರಗಿವಿಯನೀಸರಂ ದೇಸಿಗಂ" (ಕಲ್ಯಹುಂ. ೩). ಗೊಂದೆವಳವಿಗ: ಅಮರ್ದನುಂಬರಿಂ ತುಳಿಲ್ಗೊಂಬ ಗೊಂದೆವಳವಿಗ ಗೊರವನೇ . . . ಪೊರೆಗೆಮ್ಮನು (ನವಮೋ. ೩೨-೧). ಗೊಂದೆವಳವಿಗೆಯ: "ಅಂಬಿಕಾಪತಿ ಗೊಂದೆವಳವಿಗೆಯ ಗೊರವನುಂ" (ಕಶಕ. ೩೩). ಗೊಂದೆವಟಯಿಗೆಯ: "ಎಣ್ಮಯ್ಯಂ, ಗೊಂದೆವಟಯಿಗೆಯಂ . . . ಐವೊಗಂ–ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧-೧); "ಗೊಂದೆವಟಯಿಗೆಯ ದೇಸಿಗನೆಂದುಂ ಪೆಣ್ಗೊಡೆಯ ಕಿರ್ಚುಗಣ್ಣನೆನುತ್ತುಂ . . . ಪೇಟ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಕಂ. ೧೬). [ ಗೊಂದೆವಟವಿಗೆ + – ಅ$_7$ ]

ಗೊಂಬಬ್ಬೆ (ನಾ). ಒಬ್ಬಾಕೆಯ ಹೆಸರು: ಪೊಲೆಯಮ್ಮನ ಪೆಣ್ಡತಿ ಗೊಮ್ಮಬ್ಬೆ (ಎಕ. VIII, ಸೊರಬ. ೭೦-೧೫: 938). [ಗೊಂಬೆ$_1$+ಅಬ್ಬೆ$_1$]

ಗೊಂಬುಕ್ಕಿ (ನಾ). ಒಂದು ಸ್ಥಳದ ಹೆಸರು: ನೆಲ್ಲಿವರ ಕಾಳಕನ್ನ ಕಲಿಕಜ್ಜರಾನಿಱಿದೋಡಿಸಿ ಗಾಸ್ಸಿನಾಡಕ್ಕಲಿದೊಱಗಳುಂ ಗೊಂಬುಕ್ಕಿ ಅರಸರುಂ ಪಡೆದುದು (ಎಕ. X ಮಾಲೂರು. ೯೬-೨; ಹು. 750). [ ? ]

**ಗೊಂಬೆ$_1$** (ನಾ). ೧. ಬೊಂಬೆ; ಪ್ರತಿಮೆ; ಪುತ್ಥಳಿ: ಗೊಂಬೆಯವು ತಾವೇತಕಿಲ್ಲವು ಅಪ್ರಯೋಜಕವು ಗೊಂಬೆಯಹ ದೇವರನೆ ಮಾರಿಯೆ ತಂಬಿಗೆಯ ತಪ್ಪಲೆಯ ಕೊಂಡರೆ ಉಂಬದಕೆ ಕುಡಿವದಕೆ ಬಾಹದು (ಹ್ಯಾಸಸಿಂ. ೩೯-೧೪); ಏನು ಬೇಡ, ಗೊಂಬೆ, ತಿಂಡಿ, ಮುದ್ದು ಬೇಡ (ರಾಮಾನ. ೮೬); ಕಣ್ಣನಾಗಿನ ಗೊಂಬೀ ಹಾಂಗ ಎದ್ಯಾಗ ನಟ್ಟಾಂವಾ (ಸಖೀಗೀ. ೪೨-೩೨); ಗೊಂಬೆ ಮಾತನಾಡದು, ರಂಡೆ ಕಾಣಸಿಕ್ಕಳು (ಗಾದೆ). 'ಬೊಂಬೆ' ಪಠಾ. ೨. ಕಣ್ಣಿನ ಗುಡ್ಡೆ: (+). [ ದೇ.? ತುಳು. ಗೊಂಬೆ ]

**ಗೊಂಬೆ$_2$** (ನಾ). ಗುಂಪು; ಸಮೂಹ: " ಜಂಗುಳಿ . . . ಗೊಂಬೆ . . . ಡಾಳಿಗೆಯುಮೆನೆ ಶ್ರೇಣಿಕಾಖ್ಯಂ " (ಅಭಿಕೆ. ೧೬); " ಗೊಂದಣ ತೆರಳ್ಕೆ . . . ಗೊಂಬೆ ಜಂಗುಳಿ . . . ತೊಂಬೆಯೆನೆ ಶ್ರೇಣಿಕಾಖ್ಯಂ " (ಅಭ್ರಮಂ. ೩೩). [ ೯ ಇದು 'ದೊಂಬೆ' ಎಂಬುದರ ಅಪಲಿಖಿತವಿರಬಹುದು. ]

**ಗೊಂಬೆಮದುವೆ** (ನಾ). ಮಕ್ಕಳು ವಿನೋದಕ್ಕಾಗಿ ಬೊಂಬೆಗಳಿಗೆ ಮಾಡುವ ಮದುವೆ ಮತ್ತು ಅಂತಹ ಮದುವೆಯ ಆಟ: ಗೊಂಬೆ ಮದುವೆಯನೊಮ್ಮೆ ಮಾಡಿ, ಚೆನ್ನಿಯಕ್ಕಡಿಯೊಮ್ಮೆ ಹೂಡಿ, ಆಡಿಸುವೆ ಪಲವಾಟವಾಡಿ–ಕಣ್ಣುಮುಚ್ಚಿಕೆಯಲ್ಲದೆ (ಗೀವಿಂ. ೬೧-೧೩).

[ ಗೊಂಬೆ$_1$ + ಮದುವೆ ]

**ಗೊಂಬೆಯಾಟ** (ನಾ). ೧. ಆಟಗಾರರು ದಾರಗಳ ಮೂಲಕ ಬೊಂಬೆಗಳನ್ನು ಕುಣಿಸಿ ತೋರಿಸುವ ಆಟ; ಸೂತ್ರದ ಬೊಂಬೆಯಾಟ: ಜನನಮರಣಗಳ ಸೂತ್ರದಲ್ಲಿ ನಡೆಸಿರುವ ಗೊಂಬೆಯಾಟ (ಮುಕ್ತಕಂ. ೨೪-೦೬); ಕೆಲವು ವಿಗ್ರಹಗಳ ಕೈ ಕತ್ತು ಕಾಲುಗಳ ಸ್ಥಳದಲ್ಲಿ ರಂಧ್ರ ಮಾಡಿರುವದರಿಂದ ಬಹುಶಃ ಸೂತ್ರದ ಗೊಂಬೆಯಾಟವೂ ಪ್ರಚಾರದಲ್ಲಿದ್ದಿತು (ಶಾಕದ. ೧೩). ೨. ಬೊಂಬೆಗಳನ್ನು ಇಟ್ಟುಕೊಂಡು ಮಕ್ಕಳು ಆಡುವ ಆಟ; ಬೊಂಬೆಆಟ: ಮಕ್ಕಳು ಗೊಂಬೆಯಾಟ ಆಡುತ್ತಿವೆ (ರೂಢಿ). [ ಗೊಂಬೆ$_1$ + ಆಟ ]

**ಗೊಂಬೆರಂಭ** (ನಾ). ತೊಗಲುಬೊಂಬೆಯನ್ನು ಕುಣಿಸುವವನು; ಕಿಳ್ಳಿಕೇತ: ಗೊಂಬೇರಂಭರಾದ ರಾಮು, ಸಂಜೀವ, ಗೋವಿಂದ–ಇವರು ಬಂದರಂತೂ ಗೌಡರಿಗೆ ಸಂತೋಷವೋ ಸಂತೋಷ (ಸಸ್ಯೂರು. ೦೧೯).

[ <ಗೊಂಬೆರಾಮ ]

**ಗೊಂಬೆರಾಮ** (ನಾ). = ಗೊಂಬೆರಂಭ: " ಗೊಂಬೆರಂಭರು: ತೊಗಲು ಗೊಂಬೆಯನ್ನು ಕುಣಿಸುವವರು . . . ಗೊಂಬೇರಾಮರು ಎಂದೂ ಇವರನ್ನು ಕರೆಯುತ್ತಾರೆ " (ಸಸ್ಯೂರು. ಟಿಪ್ಪಣಿ).

[ ಗೊಂಬೆ$_1$ + ರಾಮ ]

**ಗೊಂಬೆಹಚ್ಚಡ** (ನಾ). ಬಣ್ಣದ ಚಿತ್ರಗಳಿಂದ ಕೂಡಿದ ಹಚ್ಚಡ; ವರ್ಣಚಿತ್ರಗಳನ್ನೊಳಗೊಂಡ ಹೊದ್ದುಕೊಳ್ಳುವ ಬಟ್ಟೆ: ತಂಗೀ ಮನೇಗ್ಹೋಗಿ ತಂಗಾದೆ ಹೋಗುತವನೆ ತಂಗೀಸಿ ಕೊಡು ಮಳೆದೇವ ಅಣ್ಣಯ್ಯ ಗೊಂಬೆಹಚ್ಚಡವು ಗೊರೆಯಾದೊ ಅಂಬೂ ಕೊಡುವವನೆ ಗೊಂಬೆ ಹಚ್ಚಡದವನೆ ರಂಭೆ ತೊಡೆಮೇಲೆ ಮಲಗಿರುವ ಮಳೆದೇವ ಅಂದಾರದಿಂದ ಕರುಣೀಸು (ಹಳ್ಳಿಯ. ೪೦). [ ಗೊಂಬೆ$_1$ + ಹಚ್ಚಡ (<ವಚ್ಚಡ) ]

**ಗೊಂಯಿ** (ನಾ). ಒಂದು ಅನುಕರಣ ಶಬ್ದ: ಸೊಳ್ಳೆಗಳ ಗೊಂಯಿ ಶಬ್ದದಿಂದ ರಾತ್ರಿ ನಿದ್ದೆಯೇ ಇಲ್ಲ (ರೂಢಿ). 'ಗುಂಯಿ' ಪಠಾ.

**ಗೊಗಲ್** (ನಾ). ಒಂದು ಬಗೆಯ ಔಷಧಿಸಸ್ಯ: ಉಡಿಮರ . . . ಗೊಗಲ್, ಹೆಣ್ಣುಗೊಡ್ಡ (ವೃಕಿಗಿ. ೩೬-೧೦೩೦). [ ? ]

**ಗೊಗ್ಗ** (ನಾ). ೧. ಮೈಲಾರಲಿಂಗನ ಭಕ್ತ: (+). ೨. ಮಕ್ಕಳನ್ನು ಹೆದರಿಸಲು ಕರೆಯುವ ಒಂದು ಕಾಲ್ಪನಿಕ ಭೂತ; ಗುಮ್ಮ: ಗೊಗ್ಗನನ್ನು ಕರೆಯುವೆನೆಂದು ಮಗುವನ್ನು ಹೆದರಿಸಿ ಮಲಗಿಸಿದಳು (ರೂಢಿ). [ <ಗೊರವ ? ]

**ಗೊಗ್ಗಯ್ಯ** (ನಾ). ೧. ಮೈಲಾರಲಿಂಗನ ಭಕ್ತ: (+). ೨. = ಗೊಗ್ಗ೨: ಗೊಗ್ಗಯ್ಯನನ್ನು ಕರೆಯುತ್ತೇನೆ ಎಂದು ಮಕ್ಕಳಿಗೆ ಹೆದರಿಸಬಾರದು (ರೂಢಿ). [ ಗೊಗ್ಗ + ಅಯ್ಯ$_1$ ]

**ಗೊಗ್ಗರ, ಗೊಗ್ಗರು** (ನಾ). ಗಂಟಲು ಒಡೆದು ಧ್ವನಿಯಲ್ಲಿ ಉಂಟಾಗುವ ಒಂದು ಬಗೆಯ ವಿಕಾರ; ಒಡಕುಧ್ವನಿ: ವನಮಾಲಿ ಗೊಗ್ಗರದ ಏರುಧ್ವನಿ ತೆಗೆದು ಕೇಳಿದನು (ಇಪ್ಪಳ. ೪೨೪); ಹದಿನಾಲ್ಕು ವರ್ಷದ ಬಾಲಕನ ಮುಖ ಕೊಂಚ ವಿಕಾರ ಹೊಂದಿದಂತೆ ಧ್ವನಿಯೂ ಗೊಗ್ಗರವಾಗುವುದು (ಶುಕ್ರಮು. ೧೦). ಗೊಗ್ಗರು: 'ಗೊಗ್ಗರುಧ್ವನಿ' ಪಠಾ.

[ <ಗೊಂಕುಱು ? ]

**ಗೊಗ್ಗರು** 'ಗೊಗ್ಗರ' ನೋ.

**ಗೊಗ್ಗರುಧ್ವನಿ** (ನಾ). ಒರಟಾದ ಧ್ವನಿ; ಕರ್ಕಶವಾದ ಸ್ವರ: ಗೊಂಟರು ಕಪ್ಪೆಗಳ ಗೊಟರಿನಂತಹ ಗಡಸು ಗೊಗ್ಗರುಧ್ವನಿ ಕೇಳಿ . . . ಭಯವಾಯಿತು (ಪ್ರಕೃ. ೨೦); ಗೊಗ್ಗರುಧ್ವನಿಯಲ್ಲಿಯೇ ಅವನು ಮತ್ತೆ ಮಾತನಾಡಿದನು (ಬಂಗಾಹೆ. ೬೩). [ ಗೊಗ್ಗರು (<ಗೊಗ್ಗರ) + ಧ್ವನಿ ]

**ಗೊಗ್ಗಿ** (ನಾ). ಒಬ್ಬಾತನ ಹೆಸರು: ಜಗಭಕ್ಷಣ ಚಕ್ರವರ್ತ್ತಿ ಗೊಗ್ಗಿಯ ಸಾಮನ್ತ × × ರ (ಎಕ. II, ೦೫೨-೨; ಶು. ೩೬೦); ಆತಂಗೆ ಚಿಕ್ಕಿಯಣ್ಣಂ ಮಾತೆ[ಗೆ]ಸತ್ಪುತ್ರನಾ ಸುಪುತ್ರಂಗೆ ಸುತಂ ನೂತಗುಣಂ ಗೊಗ್ಗಿ (ಎಕ. XI, ಚಿತ್ರದು. ೬೪-೦೦; ೩೬೮). [ ? ]

**ಗೊಗ್ಗಿಯಪುರ** (ನಾ). ಒಂದು ಊರಿನ ಹೆಸರು: ಗೊಗ್ಗಿಯಪುರದ ಬಾಳಚನು (ಎಕ. XI, ಚಿತ್ರದು. ೫೦-೨೨; ೩೬೮).

[ ಗೊಗ್ಗಿ ? + ಪುರ$_3$ ]

**ಗೊಗ್ಗಿಯಮ್ಮ** (ನಾ). ಒಬ್ಬಾತನ ಹೆಸರು: ಬಿರುದರ ಗಾಳಮುಚ್ಚನಿಯ ಭೊಜಂಗಂ ಶ್ರೀಮತ್ ಗೊಗ್ಗಿಯಮ್ಮ (ಎಕ. XI, ಹೊಳಲ್ಕೆ. ೩೩-೯; ೩೬೫).

[ ಗೊಗ್ಗಿ + ಅಮ್ಮ$_1$ ]

**ಗೊಚ್ಚೆ** 'ಗೊಂಚೆ' ನೋ.

**ಗೊಚ್ಚು** 'ಕೊಚ್ಚು$_4$' ನೋ.

**ಗೊಚ್ಚೆ** 'ಕೊಚ್ಚೆ' ನೋ.

**ಗೊಜಗು$_1$** (ಕ್ರಿ). ಅಸ್ಪಷ್ಟವಾಗಿ ಮಾತನಾಡು; ಮೆಲ್ಲಗೆ ಹೇಳು: ಒಂದಿನಂ ಮುಚ್ಚಂಡೆ ಹಸಿಮಣ್ಣಿನುಂಡೆ ಗುದ್ದುಪೂರು ಪೊಡ್ಡನನು ಸಂತೆಯಲಿ ಕಂಡೆ, ನಾಲಗೆಯ ಸಾಲದುಲಿಯಿಂ ಗೊಜಗಿತಿಂತು ಮೆಲ್ಲನೆಲೆ ತಟ್ಟಣ್ಣ! ನನ್ನೊಳೇ ದಿಂಡೇ ? (ಗೀವಿಂ. ೦೨೦-೨೬). [ ? ]

**ಗೊಜಗು$_2$** (ನಾ). ಅಸ್ಪಷ್ಟವಾಗಿ ಮಾತನಾಡುವಿಕೆ; ಮೆಲ್ಲಗೆ ಹೇಳುವಿಕೆ: (+). [ <ಗೊಜಗು$_1$ ]

**ಗೊಜಗುಟ್ಟು** (ಕ್ರಿ). = ಗೊಜಗು$_1$: ಗೊಜಗುಟ್ಟುತ್ತಿದ್ದು ಬಿದ್ದಿಳಿಗೆ ಪೊಱೆಯಪ್ಪ ಕಡುನುಜುಗು ಮನದಜ್ಞಾನಿ ಜನರೆಲ್ಲ ಓರಿಯರೆ (ಮುದೇಪು ೩೦-೨೫); ಗದ್ಗದಃ ಗೊಜಗುಟ್ಟುವುದಾಗಿ (ಚಾಹಟೀ. ೨-೫-೪೦ ಪ).

[ ಗೊಜಗು$_2$ + ಕುಟ್ಟು$_1$ ]

**ಗೊಜಡು** (ನಾ). ೧. ಹುರುಳಿಲ್ಲದ ಮಾತು: ಮಿಕ್ಕಿನ ವೇದಾಗಮಂಗಳು ಜಡ್ಡು ಗೊಜಡೆಂದು ಅವ ಬಿಟ್ಟು (ಅಂಗಲೀ. ೪೦೯). ೨. ಹುರುಳಿಲ್ಲದ ಮಾತನ್ನಾಡುವ ವ್ಯಕ್ತಿ: ದಾತುಗಾಣಿಸಿ ಕೊಳದ ಮಜಡುಗಳ್ಗೊಜಡುಗಳ್ ಮಾತುಮಾತಿಂಗೆ ಬಾಯಿಬಡಿಕೆಯರ್ (ಷಕಿಂ. ೨-೫೯). [ ? ]

**ಗೊಜರಗಳೆ** (ನಾ). =ಗಜರಗಳೆ: ಅವನ ಗೊಜರಗಳೆ ಯಾವಾಗಲೂ ಇದ್ದದ್ದೇ (ರೂಢಿ). 'ಕಜರಗಳೆ' ಪಠಾ. [ ಗೊಜ ? + ರಗಳೆ ]

**ಗೊಜಬಿಜ** (ನಾ). ಗೊಂದಲ; ಸಿಕ್ಕು: ಗೋಜು: ಏಳೇಳು ನಲವತ್ತೊಂಭತ್ತು . . . ಅಲ್ಲಿಯವರೆಗೆ ನೆನಪಿತ್ತು; ಅಲ್ಲಿಂದ ಮುಂದಕ್ಕೆ ಎಲ್ಲಾ ಗೊಜಬಿಜಯಾಗಿತ್ತು (ಜಾಲಮು. ೦೦). [ <ಗಜಬಿಜ ]

**ಗೊಜ್ಜ** (ನಾ). ಹಿರಿಯಂ ; ಪೂರ್ವಜ (?) : ಕೊಳಗವಂತ್ರ ಸೇ[ವೆ]ಸೊಟಗೆ ಹೇಬಿಂಗೆ ಸೂಜಿಲೆ ಗೊಜ್ಜ ಗೌತಳಿಗಳು ಬಿಟ್ಟ ಆಯ ಚೈತ್ರಕ್ಕೆ ವೀಸ ಪವಿತ್ರಕ್ಕೆ ವೀಸ ಅಂತು ವರುಶಕ್ಕೆ ಪೊಕ್ಕಲಿಂಗೆ ಬೇಳೆ (ಸೌಇಇ. IX-1, ೩೦೭-೪೩ : 1228). [ ? ]

**ಗೊಜ್ಜಗೆ, ಗುಜ್ಜಗೆ₁, ಗುಜ್ಜೆಗೆ, ಗೊಜ್ಜಿಗೆ, ಗೊಜ್ಜುಗೆ** (ನಾ). ೧. ಒಂದು ಬಗೆಯ ಸುವಾಸನೆಯ ಹೂವು ; ಮಲ್ಲಿಗೆ: ಅಳಿಗಳ ಬಳಗಂ ಜಗದ ಮನದೊಡನೆ ಸೇವಂತಿಗೆಗಂ ಗೊಜ್ಜಗೆಗಮಲ್ಲದೇನೆಲಗುಗುಮೇ (ಆದಿಪು. ೧೧-೧೨೩) ; ಸಜ್ಜುಕವನಿಸಿದ ಗೊಜ್ಜ[ಪಾಠಾಂ. ಜ್ಜ]ಗೆಯರಲ ವಿಶ್ರದಿನು ಪಾಶ್ರಯಂಬಡೆದ ಹೇಮತಾಮರಸದ ಪೊಗ್ಗೆಯ ತೋಳ್ಗಟ್ಟುಗಳುಮಂ (ಅಗಿಪು. ೬-೧೬ ವ) ; ಗಗನದೊಳಚ್ಚರಿಯೆನೆ ನೆಗೆದೊಗೆದುದು ಕೆಂಧೂಳಿ ಖಚರಿಯ ಸೋರ್ಮುಡಿಯಿಂದುಗುವಿರವಂತಿಯ ಸಂಪಗೆಯ ಗೊಜ್ಜಗೆಯ ಸುರಯಿಯರಲ ರಜದುರ್ವಿನದಿಂ (ವರ್ಧಪು. ೩-೨೬) ; ದವನದ ಭುವನಿಕೆಗಳಿಂ ಗೊಜ್ಜಗೆಯ ಗುಡಿಗಳಿಂ . . . ತಂಪಿನ ಶಾಯ್ಕನೆಯುಮೆನಿಪ ಲತಾ ಮಂಟಪಮಂ ಕಂಡು (ಶಾಂತೀಶ್ವ. ೧೦-೧೧೬ ವ) ; ಗೊಜ್ಜಗೆ ಬೀಱುಗುಮೆ ಕಂಪನಲರದ ಮುನ್ನಂ (ನೀತಿಮು. I. ೩೯). ೨. "ಇರುವಂತಿಗೆ" (ಶಂಶಭಾ. ಕೋಶ) : ಅಗರುವ ಮೆಚ್ಚು . . . ಪೂತ ಗೊಜ್ಜಗೆಗಳ ಸಿಂದು ರಂಗಳೊಳಗೋಗರಗಂಪನೆ ಬೀಱುತಿರ್ಪ . . . ಸಂಪಗೆಯೊಳ್ಗಲಿಸಿತ್ತು ಬಸಂತ ಮಾಸದೊಳ್ (ಶಂಶಭಾ. ೩-೧೦). **ಗುಜ್ಜಗೆ₁** : ೩. ಸೇವಂತಿಗೆ : "ಗು[ಪಾಠಾಂ. ಗೊ] ಜ್ಜಗೆಯೆನಲ್ ಸೇವಂತಿಗೆಯ ನಾಮಮಕ್ಕು" (ಅಭ್ಯಾಕ್ಷ. ೨೧). **ಗುಜ್ಜೆಗೆ:** ೩. "ಗುಜ್ಜೆಗೆಯೆನೆ ಸಂದೇಹವಿಲ್ಲ ಸೇವಂತಿಗೆಯ ನಾಮವು" (ಶಬ್ದಮಂ. ೨೬). **ಗೊಜ್ಜಿಗೆ:** ೧. ದವನದ ಪಸುರ್ದನೆಯ ಗೊಜ್ಜಿಗೆಯ ಜಾದಿಯ (ರಾಮಾಶ್ವ. ೯೩-೮). ೨. ಮುಡಿಗೆ ಪೊಸ ಮಲ್ಲಿಗೆಯಂ ಗೊಜ್ಜಿಗೆ ಯುಮನೇಱಿಸಿ ಸಲೆ ಬಿಜ್ಜೋದರಿ ದಿವ್ಯಸತಿಯನಾರಾಧಿಸಿದಳ್ (ಲೀಲಾವ. ೧೦-೯). **ಗೊಜ್ಜುಗೆ:** ೧. ಪುಷ್ಪೋತ್ಕರದೊಳ್ ಗೊಜ್ಜುಗೆಯ ಕಂಪನವು ತಳೆದಿರ್ಕುಂ (ಬೋಕೋಶ. ೬-೪೪) ; ಧರಣಿಪನ ಕೀರ್ತಿವಧು ವಿಸ್ಫುರಿತ ನಭಃಕಬರಿಯಲ್ಲಿ ಗೊಜ್ಜು [ಪಾಠಾಂ. ಜ್ಜ]ಗೆಯ ಸರೋತ್ಕರವಾಂತವೊಲೆ ಸಿತಾಭ್ರಂ ನೆರೆದಿರೆ (ರಾಜಶೇ. ೯-೬). ☞ ಈ ಹೂವನ್ನು ಕೆಲವರು ಇರುವಂತಿಗೆಯೆಂದೂ, ಕೆಲವರು ಸೇವಂತಿಗೆಯೆಂದು ಭ್ರಮಿಸಿರುವರು. [ ದೇ.॥ ತಮಿ. ಕೊಟುಜ್ಜಿರಿ ; ತೆಲು. ಗುಜರಿ ]

**ಗೊಜ್ಜಲ** (ನಾ). ಒಂದು ಬಗೆಯ ಮರ : ಗೊಜ್ಜಲ (ಮೊಯಿ).– ಮಧ್ಯಮ ಆಕಾರದ್ದು. ಇಮಾರತಿಗೆ ಬರುತ್ತದೆ (ಕಡಾಗಿ. ೩೯). [ ? ]

**ಗೊಜ್ಜಲು** (ನಾ). ಕೆಸರು ; ಕೊಚ್ಚೆ : ರುಧಿರ ಭಾವಿಯು ಮಜ್ಜ ಹಂಸೆಯು ಅಧಿಕ ವೀರ್ಯವು ಜೊಂಡು ಗೊಜ್ಜಲು ಆದುವೆ ಮೇದಸು ಮಾಂಸ ವೆಂಬುದು (ಜ್ಞಾನಸಿಂ. ೨೮-೨).

[ ಗೊಜ್ಜೆ₁ (<ಕೊಚ್ಚೆ) + – ಅಲು (< – ಅಲ್₂) ]

**ಗೊಜ್ಜಿಕಬ್ಬೆ** (ನಾ). ಒಬ್ಬಾಕೆಯ ಹೆಸರು : ತನ್ನಿಷ್ಟದೈವಂ ಜಿನೇಶ್ವರ ನಾತ್ಮಾಂಬಿಕೆ ಗೊಜ್ಜಿಕಬ್ಬೆ ಜನಕಂ ಗಂಗಾನ್ವಯ ಶ್ರೀವಧೂವರನಪ್ಪಗ್ಗಳ ದೇವನ್ (ಸೌಇಇ. XI-1, ೧೧೧-೧೪; 1071). ☞ಇದು 'ಗೋವಿಂದವ್ವೆ'ಯ ಗ್ರಾಮ್ಯರೂಪವಿರಬಹುದು. [ ಗೊಜ್ಜಿಕ₂ + ಅಬ್ಬೆ₁ ]

**ಗೊಜ್ಜಿಗದೇವ** (ನಾ). ಒಬ್ಬಾತನ ಹೆಸರು ; (ಗೋವಿಂದದೇವನೆಂದು ಪ್ರಖ್ಯಾತನಾದ) ರಾಷ್ಟ್ರಕೂಟವಂಶದ ಒಬ್ಬ ದೊರೆ : ಗೊಜ್ಜಗದೇವಂ ನೆಗಟ್ಟಂ (ಎಇ. XIII ೩೨೯-೩ : 929). [ <ಗೋವಿಂದ + ದೇವ ]

**ಗೊಜ್ಜಿಗೆ** ' ಗೊಜ್ಜಗೆ ' ನೋ.

**ಗೊಜ್ಜು₁** (ಕ್ರಿ). (ಉಕ) ಚಿಮುಕಿಸು ; ಎರಚು ; ಸುರಿ ; ಹೊಯ್ಯು : ವಾರೀಗಿ ಗೆಳತೇರಂ ನೀರ ಮೇಲಾಡುತಲಿ ಮಾರಿಮಾರಿಗೆ ನೀರ ಗೊಜ್ಜುವರ (ಬೋಳಗೀ. ೧೯೧) ; ಇದಿರು–ಮಳೆ ರಭಸವಾಗಿ ಮುಖದಲ್ಲಿ ಕಣ್ಣಲ್ಲಿ ಗೊಜ್ಜುತ್ತಿದೆ (ಹೊಸಕ್ಷ. ೨೦೦) : ತಾಯಿ ಲಗುಬಗೆಯಿಂದ ನೀರು ತಂದು ಅವನ ಮುಖಕ್ಕೆ ನೀರು ಗೊಜ್ಜಹತ್ತಿದಳು (ಇಪ್ಪಳ. ೩೨೩) : ಶಾನುಭೋಗರು ಉಗ್ರವಾಗಿ ಅವಾಚ್ಯಶಬ್ದಗಳಿಂದ ಹೆಂಡತಿಯನ್ನು ಬಯ್ಯುತ್ತ ಸುಡುವ ಸಾರಿನ ಬೋಗೋಣಿಯನ್ನೇ ಹೆಂಡತಿಗೆ ಗೊಜ್ಜಬಿಟ್ಟರು (ರಂಗಓ. ೪೨).

[ <ಕೊಜ್ಜು₂? ]

**ಗೊಜ್ಜು₂** (ನಾ). ೧. ಅನ್ನಕ್ಕೆ ಕಲಸಿಕೊಳ್ಳಲು ಮಾಡಿದ ಒಂದು ಬಗೆಯ ಮೇಲೋಗರ : ಗೊಜ್ಜುಮಜ್ಜಿಗೆ ಪಳದ್ಯ ಸಜ್ಜಾದ ವಸ್ತು ಮಾಜಗನ್ಮಾತೆಯು ಮುದದಿ ಬಡಿಸಿದಳು (ಕಂಜಿಲೋ. ೧೧೬) ; ಗೊಜ್ಜು ತಿನ್ನುವ ದೃಷ್ಟಿಯಿಂದ ನಾವು ಮಾವಿನಕಾಯನ್ನು ನೋಡಿದೆವಾದರೆ ಅದನ್ನು ಸಮಗ್ರಭಾವದಿಂದ ನೋಡೆವು (ನಿಬಂಧ. I ೧೩೩) ; ಈ ಗೊಜ್ಜು, ಈ ಸಾರುಗಳನ್ನು ನಾನು ಉಣದ ಬಹು ದಿನಗಳಾದುವು (ಜಾಹುಕ. ೬೧). ೨. ನೀರು ಸೇರಿಸಿ ಕಲ್ಕದಂತೆ ಮಾಡಿದ ಯಾವುದಾದರೂ ವಸ್ತು : ನಮ್ಮಲ್ಲಿನ ಒಂದು ಕಾರ್ಖಾನೆಯು ಬಿದಿರಿನ ಗೊಜ್ಜನ್ನು (Pulp) ಕಾಗದ ತಯಾರಿಯಲ್ಲಿ ಉಪಯೋಗಿಸುತ್ತಿದೆ (ಬಾಲಪ್ರ. II, ೮೨೩). ೩. ಅಮ್ಲತೆ ; ಹುಳಿ : ಆಕಾಶ ಮುಟ್ಟುವಂತೆ ಬೆಳದಿದ್ದ ಗೊಜ್ಜನ ಮಾವಿನ ಮರದ ಹತ್ತಿರ (ಮಲೆಮ. ೪೩೯).

[ ದೇ.॥ ತಮಿ. ಕೊಚ್ಚು ; ತುಳು. ಗೊಜ್ಜಿ, ಗೊಜ್ಜು ]

**ಗೊಜ್ಜುಗೆ** ' ಗೊಜ್ಜಗೆ ' ನೋ.

**ಗೊಜ್ಜೆ₁** ' ಕೊಚ್ಚೆ ' ನೋ.

**ಗೊಜ್ಜೆ₂** ' ಗುಜ್ಜೆ₁ ' ನೋ.

**ಗೊಜ್ಜೆ₃** (ನಾ). ಒಂದು ಬಗೆಯ ಸುವಾಸನೆಯ ಹೂವು : ತಣ್ಗಂಪಿಂ ದೊಪ್ಪುವುದದಱಿಂದಲರೊಳಗೆ ಗೊಜ್ಜೆ [ಪಾಠಾಂ. ಜ್ಜ]ಗೊಜ್ಜಗೆಯ ವಲಂ (ಆದಿಪು. ೧೦-೨೩೬) ; ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಾಳಿಪದಿಂ . . . ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨-೧೩೬ ವ). 'ಗೊಜ್ಜಗೆ' ಪರಾ.

[ ? ]

**ಗೊಜ್ಜೆಗದಾಜ** (ನಾ). (?) : ಆವಣಾಊರದಮ್ಮೆಯನ ಭೂಮಿ ಅಯ್ದು ಹಣವಿನ ಬಳದೊಳಗೆ ಗೊಜ್ಜೆಗದಾಜ ಒನ್ದು ಹಣವಿನ ಕೆಯ್ಯ ಆವಣಾಊರ ದೇವರ್ಗ್ಗೆ ಬಿಟ್ಟ ನಾಲ್ಕು ಹಣವಿನ ಕೆಯ್ಯ . . . ಸೇವೆ (ಎಕ. VI, ಚಿಕ್ಕಮ. ೬೨-೩೪ : 1068 ? ). [ ? ]

**ಗೊಟಕ್** (ನಾ). ಒಂದು ಅನುಕರಣ ಶಬ್ದ.

ಗೊಟಕ್ ಅನ್ನು, ಗೊಟಕ್ ಎನ್ನು = ಸಾಯಂ ; ಮರಣಹೊಂದಂ : ನನಗೂ ಬಾಣಂತಿಕ್ಷಯ ಬಂದು, ನಾನು ಗೊಟಕ್ ಅಂದರೆ ನೋಡಿದವರು ಏನನ್ನುತ್ತಾರೆ ಹೇಳಿ (ಶಾಯಿಕ. ೪೦) ; ಈಕೆ ಯಾವಾಗ ಗೊಟಕ್ ಅಂತಾಳೋ (ಮಣ್ಣುಹ. ೧) ; ನಾನೇನಾದರೂ ಗೊಟಕ್ ಎನ್ನುವುದಾದರೆ ಆ ಭೂಮಿಯ ಹಕ್ಕು ನಿನ್ನ ಮಕ್ಕಳಿಗೆ ಲಭಿಸುತ್ತದೆ (ಪುಣರು. ೪೬೨).

**ಗೊಟಗುಣಿ** ' ಗೊಟ್ಟುಗುಣಿ ' ನೋ.

**ಗೊಟಗೊಟ** (ನಾ). ಒಂದು ಅನುಕರಣ ಶಬ್ದ : ಬಹಳ ಬಾಯಾರಿದ ಅವನು ಒಂದು ತಂಬಿಗೆ ನೀರನ್ನೆಲ್ಲಾ ಗೊಟಗೊಟಯೆಂದು ಕುಡಿದುಬಿಟ್ಟ (ರೂಢಿ).

**ಗೊಟರ್, ಗೊಟರು₁** (ನಾ). ಒಂದು ಅನುಕರಣ ಶಬ್ದ. 'ಗೊಟರ್ಗುಡು' ಪರಾ. **ಗೊಟರು₁** : ' ಗೊಟರಂಕಪ್ಪೆ ' ಪರಾ.

ಗೊಟರುಹಾಕು=(ಕಪ್ಪೆ ಮುಂತಾದಂವುಗಳು) ಗೊಟರ್ ಗೊಟರ್ ಎಂದು ಶಬ್ದಮಾಡು ; ವಟಗುಟ್ಟು : ಗೊಟರುಹಾಕುವ ಗೊಟರು –ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದೆ ರಾಜಣ್ಣಾ ಎದ್ದು ಕೂತ (ಕೃಕ್ಕ. ೧).

**ಗೊಟರು₁** ' ಗೊಟರ್ ' ನೋ.

**ಗೊಟರು$_2$**, ಗೊಟರೆ (ನಾ). ಕೊರಕಲು ; ತೂತು ; ರಂಧ್ರ ; ಪೊಟರೆ : ನಾನು ಹೋಗುತ್ತಿದ್ದ ಸ್ಥಳ ಕಲ್ಲುಗೊಟರು. ನನ್ನ ಕುದುರೆಯ ಮುಂಗಾಲು ಗೊಟರಿನಲ್ಲಿ ಸಿಕ್ಕಿಕೊಂಡಿತು (ಪ್ರವಾಇ. II, ೮೭). **ಗೊಟರೆ :** ಆ ಚೆಂಡು ಯಾವುದೋ ಗೊಟರೆಯಲ್ಲಿ ಹೋಗಿ ಬಿದ್ದಿದೆ (ರೂಢಿ).
[ <ಸಂ. ಕೋಟರ ]

**ಗೊಟರುಕಪ್ಪೆ** (ನಾ). ಗೊಟರು ಗೊಟರು ಎಂದು ಕಿರುಚುವ ಕಪ್ಪೆ ; **ಗೊಂಕರುಕಪ್ಪೆ** : ಗೊಟರುಹಾಕುವ ಗೊಟರು-ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದ ರಾಜಣ್ಣ ಎದ್ದು ಕೂತ (ಪ್ರಕ್ಕಿ. ೦). [ ಗೊಟರು$_1$ (<ಗೊಟರ್) + ಕಪ್ಪೆ$_1$ ]

**ಗೊಟರೆ** 'ಗೊಟರು$_2$' ನೋ.

**ಗೊಟಗುರ್ಡು** (ಕ್ರಿ). (ಕಪ್ಪೆ ಮುಂತಾದುವುಗಳು) ಗೊಟರುಗೊಟರು ಎಂದು ಶಬ್ದಮಾಡು ; ವಟಗುಟ್ಟು : ನಸುಕಿನ ಹಕ್ಕಿಯ ಚಿಲಿಪಿಲಿಯಿಲ್ಲ ಗೊಟಗುರ್ಡುತಿವೆ ಕಪ್ಪೆ (ಜೀವಂ. ೦೧೭-೬).
[ ಗೊಟರ್ + ಕುಡು$_1$ (<ಕೊಡು$_1$) ]

**ಗೊಟಾಯಿಸು** 'ಕೊಟಾಯಿಸು' ನೋ.

**ಗೊಟಾಳಿ** 'ಘೋಟಾಳಿ' ನೋ.

**ಗೊಟ್ಟ$_1$** 'ಕೊಟ್ಟ$_1$' ನೋ.

**ಗೊಟ್ಟ$_2$** 'ಕೊಟ್ಟೆ$_1$ ನೋ.

**ಗೊಟ್ಟ$_3$** 'ಗೊಂಟು' ನೋ.

**ಗೊಟ್ಟ$_4$** 'ಗೊಡ್ಡು$_1$' ನೋ.

**ಗೊಟ್ಟ$_5$** 'ಕೊಟ್ಟ$_6$' ನೋ.

**ಗೊಟ್ಟ$_6$** 'ಕೊಟ್ಟ$_7$' ನೋ.

**ಗೊಟ್ಟ$_7$** (ನಾ). ಒಂದು ಬಗೆಯ ಔಷಧಿಗಿಡ : "ತನುಚ್ಛಾಯಾ-ಗೊಟ್ಟ, ಪಾಲಿ" (ಒಷಧಿ. ೬೩); ಪಾರ್ವಾಲಿ, ಕೊಡಚಿ, ಗೊಟ್ಟ (ವ್ಯಕಿಗಿ. ೭೯-೦೬೩೩). [ ? ]

**ಗೊಟ್ಟಂಗುಡಿ** (ಕ್ರಿ). (ಗೊಟ್ಟದಲ್ಲಿ ಹಾಕಿದಂತೆ) ಬಲವಂತದಿಂದ ಕುಡಿ; ಅತಿಯಾಗಿ ಕುಡಿ (?) : ಪುಡಿಯೊಳ್ಪೊರಳ್ಚಿಯುಂ ಮೆಯ್ಯಡಗಂ ತಿಱಿತಿಱಿದು ತಿಂದು ಗೊಟ್ಟಂ [ಪಾಠಾಂ. ಲ್ಲಂ] ಗುಡಿದುಂ ನೆತ್ತರನೆಂತುಂ ಹಿಡಿಂಬರಿಪು ತಣಿದನಿಲ್ಲ ದುಶ್ಶಾಸನನಂ (ಗದಾಯು. ೫-೩).
[ ಗೊಟ್ಟ$_1$ (<ಕೊಟ್ಟ$_1$) + ಕುಡಿ$_1$ ]

**ಗೊಟ್ಟಂಗುಡಿಯಿಸು** (ಕ್ರಿ). ಗೊಟ್ಟದ ಮೂಲಕ ಕುಡಿಸು ; ಬಲವಂತವಾಗಿ ಬಾಯಿಗೆ ಹೊಯ್ಯು : ಕರವೆ ಕರಗಿಸಿದ ಕಾಳಾಯಸರಸಮ ನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ (ಅಜಿಪು. ೧೧-೧೦ ವ).
[ ಗೊಟ್ಟ$_1$ (<ಕೊಟ್ಟ$_1$) + ಕುಡಿಯಿಸು ]

**ಗೊಟ್ಟಂಗೊಳ್** (ಕ್ರಿ). (ನೀರು ತುಂಬಿದ) ಮರದ ಪಾತ್ರೆಯನ್ನು ತೆಗೆದುಕೊಳ್ಳು : ಅಂತು ತೇಗಿ ಗೊಟ್ಟಂಗೊಂಡು ಕೈದೊಳೆದು ಗೃಹೀತ ತಾಂಬೂಲನಾಗಿ ಸಂತೋಷಂಬಟ್ಟು (ದಶಕು. ೧೨-೧೩೧ ವ).
[ ಗೊಟ್ಟ$_1$ (<ಕೊಟ್ಟ$_1$) + ಕೊಳ್$_1$ ]

**ಗೊಟ್ಟಂಗೊಱೆ** (ಕ್ರಿ). (ಗೊಟ್ಟದ ಒಳಗಿನ ರಂಧ್ರದಂತೆ) ದೊಡ್ಡ ರಂಧ್ರವಾಗುವ ಹಾಗೆ ಟೊಳ್ಳುಮಾಡು : ಸೀಳ್ದು ಪೋಟ್ಟು ಪರವುವ ಗೊಟ್ಟಂಗೊಱೆವ . . . ಪೆಱವುಮುಗುರ್ವಪ್ಪ ಚಿತ್ರವಿಧ ವಧೆಯಿಂದಂ (ಶಾಂತಿಪು. ೭-೯೦) : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆವುದುಂ (ಸುಕುಮಾ. ೦೧-೮೭ ವ). [ ಗೊಟ್ಟ$_1$ (<ಕೊಟ್ಟ$_1$) + ಕೊಱೆ$_1$ ]

**ಗೊಟ್ಟಕೆರೆ** (ನಾ). ನೀರು ಪೂರ್ತಿಯಾಗಿ ಬತ್ತಿಹೋಗಿರುವ ಕೆರೆ : ಕಟ್ಟವರಿಗೂ ಆಳಿದವರಿಗೂ ಗೊಟ್ಟಕೆರೆ ತವರಮನೆ (ಗಾದೆ).
[ ಗೊಟ್ಟ$_4$ (<ಗೊಡ್ಡು$_1$) + ಕೆರೆ$_2$ (<ಕೆಱೆ) ]

**ಗೊಟ್ಟಕ್ಕಿ** 'ಗೊಟ್ಟಚ್ಚಿ' ನೋ.

**ಗೊಟ್ಟಗುಣಿ$_1$** 'ಗೊಟ್ಟುಗುಣಿ' ನೋ.

**ಗೊಟ್ಟಗುಣಿ$_2$** (ನಾ). (ಉಕ) ನೀರು ಪೂರ್ತಿಯಾಗಿ ಒಣಗಿದ ಕುಳಿ,-ಹೊಂಡ. [ ಗೊಟ್ಟ$_4$ (<ಗೊಡ್ಡು$_1$) + ಕುಣಿ$_2$ (<ಕುಟ್$_2$) ]

**ಗೊಟ್ಟಚ್ಚಿ**, **ಗೊಟ್ಟಕ್ಕಿ**, **ಗೊಟ್ಟಚ್ಚೆ** (ನಾ). ಒಂದು ಬಗೆಯ ಗಿಡ ; ನೆಲಬೇವು : "**ಗೌರಿ ಗೊಟ್ಟಚ್ಚಿ** [ಪಾಠಾಂ. ಕ್ಕಿ, ಚ್ಚೆ] ಪನ್ನಂಗಿಯನೆ ನೆಲಬೇವು": (ಮಂಗರಾ. ೪೪-೪೩). **ಗೊಟ್ಟಕ್ಕಿ :** ಲೊಕ್ಕಿ ಗೊಟ್ಟಕ್ಕಿ ದಿಂಡಂ ಬಿರಬಿಲ್ವಂ ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨) ತುಂಬುರ ಬನ್ನಿ ಗೊಟ್ಟಕ್ಕಿ ದಿಂಡ (ಬುಕ್ಕ್ಯಾಂಗ. ೯-೩೬). **ಗೊಟ್ಟಚ್ಚೆ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.
[ ? ]

**ಗೊಟ್ಟಚ್ಚೆ** 'ಗೊಟ್ಟಚ್ಚಿ' ನೋ.

**ಗೊಟ್ಟವಾಡಿ** (ನಾ). ಒಂದು ಸ್ಥಳದ ಹೆಸರು ; ನಂಜನಗೂಡು ತಾಲ್ಲೂಕಿನ ಈಗಿನ ಗಟ್ಟವಾಡಿ: ಗೊಟ್ಟವಾಡಿಯ ಶಿಲಭಯರ ಹೊಯ್ಸಳಗಾವುಣ್ಡ (ಎಕ. III, ನಂಜನ. ೯೯-೫ ; 898).
[ ಗೊಟ್ಟ$_0$ + ವಾಡಿ$_2$ (<ಪಾಡಿ$_1$) ]

**ಗೊಟ್ಟಾಟ** 'ಗೊಡ್ಡಾಟ' ನೋ.

**ಗೊಟ್ಟಿ$_1$**, ಗೋಷ್ಠಿ (ನಾ). ೧. ಜೊತೆ ; ಒಡನಾಟ ; ಸಾಹಚರ್ಯ : "ಸಂಗತಿಯೊಳಕ್ಕು ಕವಿಜನಪುಂಗವರಿಂ ಗೊಟ್ಟಿ ಗೋಷ್ಠಿಯೆನುತುಂ ಬುವಿಯೊಳ್" (ಕವಿಕಂ. ೨೨೪) : ಕೆಳೆಯುಂ ಗುಱಿಯುಂ ಗೊಟ್ಟಿಯುಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ (ಪಂಪಭಾ. ೨-೫೮) : ಬಸನಿಗಳ ಗೊಟ್ಟಿ ತನಗಾಗಿಸೆ ಸಂತಸದೊದವನುತ್ತಮರ ಗೊಟ್ಟಿ ಕರಂ ಕಸರಿಸಿದರ್ದೆಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ವರ್ಧಪು. ೨-೩೩). ೨. ಕೂಟ; ರತಿಕ್ರೀಡೆ: ಒರ್ವಳ ಮೊಗದ ನುಣ್ಪಂಗಂ ಕಣ್ಣ ಬೆಳ್ಪಿಂಗ ಮೊತ್ತಯಿಟ್ಟು ಗೊಟ್ಟಿಗಿರಲ್ಪೋಗಿ ಪರಿತಂದು (ಲೀಲಾವ. ೨-೧೧೬ ವ). ೩. ಗುಂಪು; ಸಮೂಹ; ಸಭೆ: ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪-೨೯) : ಚಟ್ಟಿಱಿದು ಘಟಮನರ್ಚಿಸಿ ನೆಟ್ಟನೆ ಪೊಸಪೂಗಳಿಂದಮನಿತುಂ ಮಧುವಿಂ ಬೊಟ್ಟಿಟ್ಟು ಮದ್ಯಪಾನದ ಗೊಟ್ಟಿ [ಪಾಠಾಂ. ಗೋಷ್ಠಿ]ಗೆ ಚಷಕಮನೆ ಕೊಂಡು ಕಾಂತೆಯರೆಸೆದರ್ (ಕುಸುಮಾ. ೧೧-೧೫೮); ಹುರುಡಿನ ಮನೆ ಹೋರಟೆಯ ನಿಕೇತನ ಗರುವರ ಗೊಟ್ಟಿ ಗಾವಿಲರ ನೆರವಿಯಿಲ್ಲದ ಗಣಿಕೆಯರಾವಾಸಗಳ್ನಿರುಪಮಮೆನಲೊಪ್ಪುತಿಹವು (ಅಂಜಕ. ೩-೯೩). ೪. ಮಾತುಕತೆ ; ಸರಸಸಲ್ಲಾಪ ; ಹರಟೆ: ಅನ್ನೆಗಂ ಕಾಷ್ಠಕೂಟನೆಂಬ ಬೆಸದವಂ ಪುಳ್ಳಿಯ ಪೊಱೆಯಂ ಪೊತ್ತು ಪೊಟಲ್ಗೆ ಪರ್ಪುಸಂ ಕಂಡಾತನೊಡನೆ ಗೊಟ್ಟಿಯೊಳ್ ಬಂದು (ವಡ್ಡಾರಾ. ೬೬-೨೪) ; ಕಣ್ಣಱಿದು ಗೊಟ್ಟಿಗೆಯ್ದು ಗೊಟ್ಟಿಗಂ ಬಗೆಯಱಿದು ನಗುವ ನಗೆಗಂ . . . ಮನಂದೆಚ್ಚು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ ವ) : ನಾನಾರತ್ನದಿನೊಪ್ಪುಗುಂಪಾನಾಡಕ್ಕರದ ಗೊಟ್ಟಿಯಿಂ ಪಂಡಿತರಿಂ (ಬೊಂಕಶಾ. ೧೯೪೪. ಬಂಕಾಪುರ. ೨೧-೧೫ ; 1069). **ಗೋಷ್ಠಿ :** ೫. (ಕರಾ) ಉಸಾಬರಿ ; ಗೊಡವೆ : ನಮಗೆ ಅವರ ಗೋಷ್ಠಿಯೇ ಬೇಡ (ರೂಢಿ). ೬. ಸಾರ್ವಜನಿಕ ಕೆಲಸಗಳಿಗಾಗಿ ಕೊಟ್ಟ ದತ್ತಿ, ದಾನಗಳ ವಿನಿಯೋಗವನ್ನು ನೋಡಿಕೊಳ್ಳುವ ವ್ಯಕ್ತಿ ; ಧರ್ಮದರ್ಶಿ : ನಾಗದೇವನೀ ಧರ್ಮದೊಳ್ ಗೋಷ್ಠಿ ಆದೋಮ್ (ಎಇ. VII, ೨೦೦-೨೨ ; 865).

**ಗೊಟ್ಟಿಗವರ್**=ಗೋಷ್ಠಿಗೆ ಬರು ; ಜತೆಗಾಗಿ ಬರು : ಒಂದೆಡೆಯೊಳ್ ನಾಲ್ವರಯ್ವರ್ ಗಾಟ್ಟೊಟ್ಟಿರ್ದಲ್ಲಿಗೊರ್ವನೆಗ್ಗಂ ಗೊಟ್ಟಿಗೆ ವಂದು ಕಣ್ಣಱಿಯದೆ ಸೋಂಕೆಯುಂ (ಪಂಪಭಾ. ೪-೯೩ ವ). [<ಸಂ. ಗೋಷ್ಠೀ]

**ಗೊಟ್ಟಿ₂** 'ಕೊಟ್ಟಿ₇' ನೋ.

**ಗೊಟ್ಟಿಗಾಣ** (ನಾ). ೧. ವೇಳಸಂಗೀತ; ಗೋಷ್ಠಿಗಾನ: ಲತಾಗೃಹಮಿಲ್ಲದ ಗೊಟ್ಟಿಗಾಣಮಿ[ಪಾಠಾಂ. ೦]ಲ್ಲದ ಕಡೆವಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೩೬): (ಸೂಕ್ತಿಸು. ೮-೦೩೩ ನೋ). ೨. ಗೋಷ್ಠಿಗಾನದಲ್ಲಿ ಭಾಗವಹಿಸುವವನು: ಗೊಟ್ಟಿಗಾಣರಂತಿರೆ ಮಱುದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳನಲ್ಲಿ ತಾಮರಸ ರಂತಿರೆ ತಾಮರಸಂಗಳೊಪ್ಪುಗುಂ (ಪಂಪಭಾ. ೩-೩೮).

[ ಗೊಟ್ಟಿ₁ + ಗಾಣ₃ ]

**ಗೊಟ್ಟಿಗಾಳೆಗ** (ನಾ). ಗುಂಪುಗಾಳಗ; ತುಮುಲಯುದ್ಧ: ಪೊಳ್ತಿನತನಂತರಂ ಪೊಳ್ತೇರೆ, ಪೊಳ್ತರೆಯ ಕದಿರುಗಳೆಟ್ಟಣಿಸಿದ್ದೈಕಿಲಿಗೆ ಗೊಟ್ಟಿಗಾಳೆಗವಾಗಿ, ಸೋಲ್ತು ಮಂಜಿನ ಸೇನೆ (ಶ್ರೀರಾಮಾ. ೨೦೦-೧೬೩).

[ ಗೊಟ್ಟಿ₁ + ಕಾಳೆಗ ]

**ಗೊಟ್ಟಿಗಾಱ** (ನಾ). ಗೋಷ್ಠಿಗೆ ಸಂಬಂಧಿಸಿದವನು; ಸಂಗೀತ, ನಾಟ್ಯ ಮುಂತಾದ ವಿನೋದ ಗೋಷ್ಠಿಗಳನ್ನು ಏರ್ಪಡಿಸುವವನು ಅಥವಾ ಅದರಲ್ಲಿ ಭಾಗವಹಿಸುವವನು: ಗರುವರ ಗೊಟ್ಟಿಗಾಱ [ಪಾಠಾಂ. ಣ]ರ ನೆಗಲ್ತೆಯ ಮಿಂಡರ . . . ಆಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಕಬ್ಬಿಗ. ೯೨).

[ ಗೊಟ್ಟಿ₁ + -ಗಾಱ (<-ಕಾಱ) ]

**ಗೊಟ್ಟಿಗೆ₁** (ನಾ). ೧. ಸಭೆ; ಗೋಷ್ಠಿ: ಆಮುವೊಂದುದಿವಸಮಾತನಂ ಪರಸರ್ ಪೋಗಿ ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ (ಶಾಂತಿಪು. ೨-೨೦ ವ). ೨. ಒಂದು ಬಗೆಯ ಆಟ: ಉಯ್ಯಾಲೆ ಜೋಜೋ ಅಳವಾಳ ಗೊಟ್ಟಿಗೆ ಅಟ್ಟಿಗೆ ಮುಟ್ಟಿಗೆ (ವಿಷ್ಣುಪ್ರೇಸು. ೧೯-೩).

[ <ಸಂ. ಗೋಷ್ಠಿಕ ]

**ಗೊಟ್ಟಿಗೆ₂** 'ಗೋಟಾಗೆ' ನೋ.

**ಗೊಟ್ಟಿಗೆಯ್** (ಕ್ರಿ). ೧. ಸಭೆ ಸೇರು; ಗೋಷ್ಠಿ ನಡೆಸು. ೨. ಸರಸ ಸಲ್ಲಾಪವನ್ನು ಮಾಡು: ಕಣ್ಣಱಿದು ಗೊಟ್ಟಿಗೆಯ್ದು ಗೊಟ್ಟಿಗಂ . . . ಮನಂಬೆಚ್ಚು ಪತ್ತೆ ಪೊಯ್ಯಂತಾಗಿರೆ (ಶಾಂತಿಪು. ೩-೩೯ ವ); ಅಂತಾತನಂ ಮೇಳಿಸುತ್ತಮಂಗಡಿಗಳೊಳಮರಮನೆಗಳೊಳಮಾಟಪಾಟದೆಡೆಗಳೊಳಂ ಪರಿಚಯದಿಂ ಶೃಂಗಾರಕಥಾರಸದೊಳಂ ಗೊಟ್ಟಿ [ಪಾಠಾಂ. ಗೋಷ್ಠಿ] ಗೆಯ್ಯುತ್ತಿರೆ (ಪಂಚರಿ. ೩-೩೧ ವ). [ ಗೊಟ್ಟಿ₁ + ಕೆಯ್₁ ]

**ಗೊಟ್ಟಿಗೇಯ** (ನಾ). ಮೇಳಗಾನ; ಸಮೂಹಗಾನ: ಆಮುವೊಂದು ದಿವಸಮಾತನಂ ಪರಸರ್ ಪೋಗಿ ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ (ಶಾಂತಿಪು. ೨-೨೦ ವ). [ ಗೊಟ್ಟಿ₁ + ಗೇಯ ]

**ಗೊಟ್ಟಿರ್** (ಕ್ರಿ). ಗೋಷ್ಠಿಯಲ್ಲಿರು; ಜತೆಯಲ್ಲಿರು; ಸಹವಾಸಮಾಡು: ನೆರದವೊಲ್ಲೊಳಿಂತು ಸದ್ಭಾವದೆ ಗೊಟ್ಟಿರಲ್ ಬಯಸಿ ಬಂದೆಯದೀಗಳೆ ದೂಳ್ಗಿತಾಯ್ತು (ಪಂಪಭಾ. ೯-೯೩). [ ಗೊಟ್ಟಿ₁ + ಇರ್₁ ]

**ಗೊಟ್ಟು₁** 'ಗೊಡ್ಡು₁' ನೋ.

**ಗೊಟ್ಟು₂** 'ಕೊಟ್ಟೆ₁' ನೋ.

**ಗೊಟ್ಟುಕಾಲ** (ನಾ). ಮಳೆಯಿಲ್ಲದಿರುವ ಕಾಲ; ಅನಾವೃಷ್ಟಿ; ಬರಗಾಲ: (*). [ ಗೊಟ್ಟು₁ (<ಗೊಡ್ಡು₁) + ಕಾಲ ]

**ಗೊಟ್ಟುಗಟ್ಟು** (ಕ್ರಿ). ಒಣಗಿಹೋಗು; ಮುರುಟಿಹೋಗು; ವ್ಯರ್ಥವಾಗು: ಮದನನ ಕೆಯ್ಯುಕೆಯ್ದು ಕರಶಾಪೆ ಮುರುಂಟಿದುದೆಯ್ದೆ ಗೊಟ್ಟುಗಟ್ಟಿದುದು ಸರಲ್ಗೆ ಬೀಗಿ ನನೆದೋಱುವ ಪೂಗುಡಿ . . . ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ (ಅನಂಪು. ೧-೨೪).

[ ಗೊಟ್ಟು₁ (<ಗೊಡ್ಡು₁) + ಕಟ್ಟು₁ ]

**ಗೊಟ್ಟುಗುಳಿ** 'ಗೊಟ್ಟುಗುಟೆ' ನೋ.

**ಗೊಟ್ಟುಗುಟೆ**, ಗೊಟಗಣಿ, ಗೊಟ್ಟಗುಣಿ₁, ಗೊಟ್ಟುಗುಳಿ (ನಾ). ಒಂದು ಬಗೆಯ ಆಟ; ಅಟ್ಟುಗುಳಿ ಆಟ: ಚದುರಂಗದ ನೆತ್ತದ ಗೌರವದ ಗೊಟ್ಟುಗುಟೆಯುಂ ಮುಟ್ಟಂ ಮನೆಯೊಳ್ ಪದೆದಿರಿಸುಗೆ ತಾನುಂ ಕಲ್ಸುದು ಗಣಿಕೆಗಮದನೆ ಕಲಿವುದಱಿನಯದಿಂದಂ (ಮದಕ. ೧೦-೩೦); ಅಟ್ಟುಗೂಟು ಗೊಟ್ಟುಗುಟೆ ಮೊದಲಾಗೆಸೆವೊಟ್ಟುಗೆಳೆಯ ನೊಡಗೂಡಿ ಪುಟ್ಟಿದಂದು ಮೊದಲಾಗಿ ಮಾಡುವ ಸಖಿ ನಿಟ್ಟಿಸಿ ನುಡಿದಳೆಂತೆಂದು (ಅಂಜನ. ೫-೦೯೬). **ಗೊಟಗುಣಿ:** ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ಸದೀಶ. ೭೯). **ಗೊಟ್ಟಗುಣಿ₁:** ಹುಡುಗಾಟ ಗೊಟ್ಟಗುಣಿ ಕುರಿಕಳ್ಳ . . . ಬಲುಪರಿ ಒಂದೊಂದು ಬಾಲಾಟದಲ್ಲಿ ನಲಿದು (ವಿಷ್ಣುಪ್ರೇಸು. ೧೯-೩). **ಗೊಟ್ಟುಗುಳಿ:** ಏಣಾಕ್ಷಿಯೊರ್ವಳಾಡುವ ಗೊಟ್ಟುಗುಳಿಯು ಕಟ್ಟಾಣಿ ಮುತ್ತುಗಳೊಪ್ಪಿದುವು (ಶಂಪ್ರಸಾಂ. ೧೮-೯೯). 'ಅಟ್ಟುಗುಳಿ' ಪರಾ.

[ ಗೊಟ್ಟು₂ (<ಕೊಟ್ಟು₁) + ಕುಟೆ₂ ]

**ಗೊಟ್ಟುವಳ್ಳ** (ನಾ). ಒಣಗಿಹೋದ ಗುಂಡಿ,-ಹಳ್ಳ: ಅಂತವಳಣುಗನಂ . . . ಮಡಿಪಿ ಕಾಲ್ವಿಡಿದು ಸರಸರನೆಳೆದಾರುಮಱಿಯದಂತೊಂದು ಗೊಟ್ಟುವಳ್ಳದೊ[ಪಾಠಾಂ. ಗೊಂಟನೊ, ಗೋಂಟುವಳ್ಳದೊ]ಳಿಕ್ಕಿ ಪುಲ್ಲಂ ಕವಿಸುತಾಗ್ಗೇಯಸ್ನಾನಮೆಸಗಿ (ವೃಷವಿ. ೧೪-೬೦ ವ).

[ ಗೊಟ್ಟು₁ (<ಗೊಡ್ಡು₁) + ಪಳ್ಳ ]

**ಗೊಟ್ಟೆ₁** 'ಕೊಟ್ಟೆ₁' ನೋ.

**ಗೊಟ್ಟೆ₂** 'ಗೊಡ್ಡು₁' ನೋ.

**ಗೊಟ್ಟೆ₃** (ನಾ). (?): ಜಗಭಗದ ಊರ್ಧ್ವದಲ್ಲಿ ಮೋಹನದ ಗೊಟ್ಟೆ ಹುಟ್ಟಿತ್ತು ಗೊಟ್ಟೆಯು ಪೂರ್ವದಲ್ಲಿ ಕಮಲವರಳಿತ್ತು ಕಮಲಹೃತ್ಕಮದಲ್ಲಿ ಬಿಂದುವೆ ವ್ಯಂಜನದಿಂದ ಗುರುಲಿಂಗರೂಪಾಗಿ ಪುಲ್ಲಿಂಗ ಚರಿಸಿತ್ತು (ದಾಸೋಹಂ. ೩೫). 'ಕೊಟ್ಟೆ₁' ಪರಾ. [ ? ]

**ಗೊಟ್ಟೆಗಡಿ** (ನಾ). ಒಂದು ಗ್ರಾಮದ ಹೆಸರು: ಪಶ್ಚಿಮತಃ ಮುಕ್ಕೊಡಲ್ ನಾಮಗ್ರಾಮಃ ಉತ್ತರತಃ ಗೊಟ್ಟೆಗಡಿ ನಾಮಗ್ರಾಮಃ (ಮೈಆರಿ. ೧೯೩೫, ೪೦-೭೦: 951); ಗೊಟ್ಟೆಗಡಿಯ ಭದ್ರಯ್ಯನ ಕಾಲ ಕನ್ನಯ್ಯ ಕಟ್ಟಿದ (ಎಕ. VIII, ಸೊರಬ. ೪೪-೧೦: 971). [ ಗೊಟ್ಟೆ₀ + ಗಡಿ₁ ]

**ಗೊಟ್ಟೆಗೆಱೆವಳ್ಳ** (ನಾ). ಒಂದು ಹಳ್ಳದ ಹೆಸರು: ದಕ್ಷಿಣತಃ ಪರದಗೆಱೆ ಪಳ್ಳಂ . . . ಉತ್ತರತೋ ಗೊಟ್ಟೆಗೆಱೆವಳ್ಳಂ (ಮೈಆರಿ. ೧೯೪೪, ೦೫-೪೦: 725). [ ಗೊಟ್ಟೆಗೆಱೆ₀ + ಪಳ್ಳ ]

**ಗೊಟ್ಟೆಯಣ್ಣಗಾವುಂಡ** (ನಾ). ಒಬ್ಬಾತನ ಹೆಸರು: ಗೊಟ್ಟೆಯಣ್ಣ ಗಾವುಣ್ಣನೂರಳಿವಿನೊಳು ಕಾದಿ ಸತ್ತು ಸ್ವರ್ಗಸ್ತನಾದ (ಎಕ. IX, ಚನ್ನಪ. ೧೫೯-೪; ಕು. 904 ?).

[ ಗೊಟ್ಟೆಯಣ್ಣ₀ + ಗಾವುಂಡ (<ಗಾಮುಂಡ) ]

**ಗೊಟ್ಟೆವಡ್ಡಿ** (ನಾ). ಒಂದು ಸ್ಥಳದ ಹೆಸರು: ಗೊಟ್ಟೆವಡ್ಡಿಯ ಗೋವುಣ್ಣುಗಳು ಸೆಲಾಂಭ್ಯೆಯರುಂ ಆನೆಯುರು ಕೂಡಿ ಗೊವುಣ್ಣುಂಗೆಯ್ದುವದರ್ಕ್ಕೆ (ಎಕ. III, ನಂಜನ. ೧೯೯-೬; ?). [ ? ]

**ಗೊಟ್ಟೆಱೆಯ** (ನಾ). ತುರುಹಟ್ಟಿಯ ಯಜಮಾನ (?): ಗೊಟ್ಟೆಱೆಯರಮ್ಮಲಕೆ ಕೊಟ್ಟುದು ಅಯ್ಯಾಮ್ಮು ಕಟನಿ (ಮೈಆರಿ. ೧೯೨೬, ೧೦೦-೮; ೨ನೆಯ ಶತ). [ ಗೊಟ್ಟ₀ (<ಕೊಟ್ಟ₇) + ಎಱೆಯ ]

**ಗೊಡಗು, ಗೊಡಂಗು** (ನಾ). ೧. (ಬಾವಿಯ ಅಥವಾ ಹಗೇವಿನ ಒಳಗೆ ಆಗಿರುವ) ಡೊಗರು: (*). ೨. ಗುಂಡಿಯಲ್ಲಿ ನಿಂತಿರುವ ನೀರು; ಬಗ್ಗಡ: ದನಕ್ಕೇಕೆ ತಿಳಿನೀರು ಎಂದು ರಾಡಿನೀರನ್ನೂ ಗೊಡಗನ್ನೂ ಕುಡಿಸಬಾರದು (ಗೋಗ್ರಾಸ. ೩೦). **ಗೊಡುಗು:** (*). [ ? ]

**ಗೊಡಚಿ₁** 'ಕೊಡಂಚಿ' ನೋ.

**ಚಟ್ಟಣೆ** (ನಾ). ಪಾತ್ರೆಗಳ ಮುಚ್ಚಳ; ರಕ್ಷಾಕಣೆ (ಉಕ) : "ಆಹಾರ ಪದಾರ್ಥಗಳನ್ನು ಬಿಸಿಯಾಗಿಟ್ಟಿರಲು ಉಪಯೋಗಿಸುವ ಲೋಹ, ಮೊ.ಗಳ ಮುಚ್ಚಳ; ಚಟ್ಟಣೆ" (Dish-Cover. ಇಂಕನ್ನ). [ <ಸಂ. ಛಾದನ ? ]

**ಚಟ್ಟನೆ** (ಅ). = ಚಟಕ್ಕನೆ : "ಫಕ್ಕನೆ, ಭೊಂಕನೆ . . . ಚಟ್ಟನೆ, ಚಕ್ಕನೆ, ಗವ್ವನೆ, ಗಕ್ಕನೆ, ಬುದಿಂಗನೆ, ಪುಸುಕನೆ" (ಶಂಸುಹು. ೮೫); ಗಣಪತಿಯು . . . ಆದರ ಮೇಲೆ ಚಟ್ಟನೆ ಹಾರಿ ಕುತುಕೊಂಡು ಮನೆಗೆ ಹೋದನು (ಮುಂಬಯು. ೪-೮೦); ಶ್ರೀ ಕೃಷ್ಣನು ಹೇಳಿದ ಯೋಗವು . . . ಸಂಸಾರದ ಕಟ್ಟನ್ನು ಚಟ್ಟನೆ ಕಳಚಬಲ್ಲದು (ಗೀತಾಸಂ. ೩). [ ಚಟ್ + – ಅನೆ$_1$ ]

**ಚಟ್ಟಬ್ಬೆ** (ನಾ). ಒಬ್ಬಾಕೆಯ ಹೆಸರು : ಪುತ್ರಿ ಗುಣಾನ್ವಿತೆ ಚಟ್ಟಬ್ಬರಸಿಗೆ ದೊರೆಯಾರ್ದಾನಧರ್ಮ್ಮಶೀಳೋನ್ನತಿಯೊಳ್ (ಮ್ಯಆರಿ. ೧೯೩೦, ೭೪-೭೬; 1053 ?). [ ಚಟ್ಟ$_5$ + ಅಬ್ಬೆ$_1$ ]

**ಚಟ್ಟಯದೇವ** 'ಚಟ್ಟಯ್ಯದೇವ' ನೋ.

**ಚಟ್ಟಯ್ಯ** (ನಾ). ಒಬ್ಬಾತನ ಹೆಸರು: ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೪೩೩-೬ ; 972) ; ಹೊನ್ನಯ್ಯನ ಮಗ ಚಟ್ಟಯ್ಯಂ ಕಲ್ಲಂ ನಿಱಿಸಿದ (ಎಕ. VIII, ಸೊರಬ. ೭೪-೧೩ ; 1082). [ ಚಟ್ಟ$_5$ + ಅಯ್ಯ$_1$ ]

**ಚಟ್ಟಯ್ಯದೇವ, ಚಟ್ಟಯಂದೇವ** (ನಾ). = ಚಟ್ಟಯ್ಯ : ಚಟ್ಟಯ್ಯದೇವನ ಪರಿ ಬನ್ದು ಊರನಿಱಿದಲ್ಲಿ (ಎಕ. VIII, ಸೊರಬ. ೧೬-೪ ; 1015). **ಚಟ್ಟಯದೇವ** : ತದಾತ್ಮಜಂ ಚಟ್ಟಯದೇವನಿಂ (ಇಆ. X, ೨೩೦-೦೩ ; 1108). [ ಚಟ್ಟಯ್ಯ + ದೇವ ]

**ಚಟ್ಟವ್ರಿತ್ತಿ** (ನಾ). ಶಿಷ್ಯರ ಅಥವಾ ವಿದ್ಯಾರ್ಥಿಗಳ ಉಪಭೋಗಕ್ಕಾಗಿ ಬಿಟ್ಟ ಭೂಮಿ : ದೇವರ ಅಂಗಭೋಗಕಂ ದೇ[ಗು]ಲಕಂ ಮಾಟಕ್ಕಂ ಚಟ್ಟವ್ರಿತ್ತಿ ಬಾಲಶಿಕ್ಷೆಯಿನಿತುಮಂ ನಡೆಯಿಸುವನ್ತಾಗಿ (ಸೌಇಇ. XI–II, ೦೭೧-೮೮ ; 1121). ] ಚಟ್ಟ$_4$ + ವ್ರಿತ್ತಿ ]

**ಚಟ್ಟಸಮಯ** (ನಾ). ಶಿಷ್ಯರ ಸಮೂಹ,–ಗುಂಪು ; ಇಪ್ಪಜನಕ್ಕೆ ಚಟ್ಟಿ ಸಮಯಕ್ಕೆ ಮಹಾಜನಭೋಜನಕ್ಕೆ ಯುತ್ಕೃಷ್ಟ . . . ಚರಾಚರೋರ್ವ್ವಿಯೊಳು (ಎಇ. XVIII, ೧೭೪-೯ ; 1044). [ ಚಟ್ಟ$_4$ + ಸಮಯ ]

**ಚಟ್ಟಳಿಕು** (ಕ್ರಿ). (?) : ಹಿಮಗಿರಿಗಳನೆಂಬ ಗುಂಡವ ಮಾಡಿದ ಕ್ರಮದಷ್ಟ ಮೂರ್ತಿಯ ಚಟ್ಟಳಿಕಿ ವಿಮಲ ಶಕ್ತಿಯ ಹಾಸು ದಟ್ಟನೆ ಮಾಡಿ (ದೇವಾಂಪು. ೩-೯೯). [ ? ]

**ಚಟ್ಟಳಿ$_1$** 'ಚಡ್ಡಣೆ' ನೋ.

**ಚಟ್ಟಳಿ$_2$** (ನಾ). ಮಣ್ಣಿನ ಪಾತ್ರೆ : ಚಟ್ಟಳಿಯಲ್ಲಿ ಬಟ್ಟ ಸೊರೆಯೊಳ್ ಪೊಸಗಾಜಿನ ಚಾರು ಪಾತ್ರೆಯೊಳ್ ಬಟ್ಟಲೊಳಿಂದುಕಾಂತಮಯ ಭಾಜನದೊಳ್ಪರಲಾವೆಯೋಡಿನೊಳ್ . . . ತಿಳಿಗಳ್ಳನದಂ ನೆಱೆ ತುಂಬಿ ತಂದು ಮುಂದಿಟ್ಟುದು ಮಾಱದಗ್ರಜರನುಕ್ರಮಮಂ ಶಬರೀ ಸಮೂಹಕಂ (ಚಾಧಪು. ೧೦-೦೩೬). ಚಟ್ಟಳಿಯಲ್ಲಿ ತೀವಿದ ಸುರಾರಸಮಂ ಕುಡಿಯುತ್ತು ಮಿರ್ದನೇರ್ಪಟ್ಟನಿಯಳ್ಗೆ ನೀಡಿ (ಚಾಧಪು. ೧೦-೧೩೩). [ <ಚಟ್ಟ$_1$ ? ]

**ಚಟ್ಟ$_1$, ಚಟ್ಟ$_2$, ಚಿಟ್ಟಿ$_1$, ಸಟ್ಟಿ** (ನಾ). ೧. (ಮಣ್ಣಿನಿಂದ ಮಾಡಿದ) ಅಗಲವಾದ ಪಾತ್ರೆ. ೨. ಮಡಕೆ: "ಭಾಂಡದೊಳು ಸಂಕಿಯೊಳ್ ಚಟ್ಟ" (ಶಬ್ದಮಂ. ೯೦) ; ಬಟ್ಟವೆಂಗಳು ಕೆಲಬರು ಸುಳಿದರು ಹೊನ್ನ ಚಟ್ಟ ಸಟ್ಟುಗಗಳನಾಂತು (ಭರತ. ೪-೭೧) ; ಸುಲಲಿತವೆನಿಪ್ಪ ಚಟ್ಟಿಯ ಮೊಸರನಿಳಿಪಿಕೊಂಡು (ಸಿದ್ಧೇಪು. ೩-೧೮); ಇವುಗಳೆಲ್ಲವನ್ನೂ ಬೇರೊಂದು ಚಟ್ಟಿಯಲ್ಲಿ ಹಸುವಿನ ಬೆಣ್ಣೆ ಸಹಿತ ಒಗ್ಗರಿಸಿ . . . ಕೊಡಲು ದಾಹಜ್ವರ ಬಿಡುವುದು (ಸಕಪ್ಪೆ. ೮೩) ; ಹುಟ್ಟು ಮೊದಲೀಗರುಹಲೀ ನರಚಟ್ಟ ದಿವ್ಯಶರೀರವಾದುದು ನಿಮ್ಮ ಕೃಪೆಯಿಂದ (ಅಂದೊತಾ. ೪೭-೩) ; ಅಟ್ಟು ಉಂಡೇನೆಂದು ಚಟ್ಟೀಕುಡಿಕೆ ತಂದೆ (ಜಗೀತ. ೦೭). **ಚಟ್ಟ$_2$** : ೨. 'ಚಟದಾರ' ಪರಾ. **ಚಿಟ್ಟಿ$_1$** : ೨. ಚಿಟ್ಟಿ ಮಡಕೆಗಳೊಳಗೆ ಭಿನ್ನಪರಿಮಳಂಗಳಂ ಕಟ್ಟಿಕೊಂಡು (ಸೂಪಶಾ. ೪-೪); ಚಿ[ಪಾಠಾಂ. ಚ]ಟ್ಟಿಯೊಳು ತುಪ್ಪವೆಱೆದಿಂಗಿಕ್ಕಿ ವೊಗ್ಗರಣೆಗೊಟ್ಟು (ಸೂಪಶಾ. ೪-೩೬) . **ಸಟ್ಟಿ** : ೨. 'ಕೈಸಟ್ಟಿ' ಪರಾ. [ ದೇ.೩ ತಮಿ. ಮಲ. ತುಳು. ತೆಲು. ಚಟ್ಟಿ ]

**ಚಟ್ಟಿ$_2$** (ನಾ). (ಕರಾ) ಅಕ್ಕಿ, ಉದ್ದು ಇತ್ಯಾದಿ ಧಾನ್ಯಗಳನ್ನು ಸೇರಿಸಿ ಒರಟಾಗಿ ಹುಡಿಮಾಡಿ ಕಲಸಿ ಕಾವಲಿಯ ಮೇಲೆ ತಟ್ಟಿ ಬೇಯಿಸಿದ ಒಂದು ಬಗೆಯ ತಿಂಡಿ,–ರೊಟ್ಟಿ: ರುಚಿಯಾದದ್ದಕ್ಕೆ ಏನೋ. ಎರಡು ಇಂಥಾ ಚಟ್ಟಿ ತಿಂದರೂ, ಹೊಟ್ಟೆಯ ತುದಿಗೂ ಮುಟ್ಟಿದ ಹಾಗೆ ಕಾಣಿಸುವುದಿಲ್ಲ (ಮರಮ. ೬೨). [ <ಚಟ್ಟಿ$_1$ ]

**ಚಟ್ಟಿ$_3$** 'ತಟ್ಟಿ$_1$' ನೋ.

**ಚಟ್ಟಿ$_4$** 'ಭಟ್ಟಿ' ನೋ.

**ಚಟ್ಟಿ$_5$** 'ಸೆಟ್ಟಿ' ನೋ.

**ಚಟ್ಟಿಗ** (ನಾ). ಒಬ್ಬಾತನ ಹೆಸರು: ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನು ನೊಲಿಪನಂ ಚಟ್ಟಿಗನಂ ತಟ್ಟುಟುಱೆ (ಎಕ. XV, ಅರಸಿ. ೨೩೭-೧೪; 971); ತುಱುಗಳೊ[ಳ್ಸ][ಟ್ಟ್ರ]ದ್ದುದಂ ಕೇಟಿಲಾಗದು . . . ಚಟ್ಟಿಗನ ಸಿರಿಗನ (ಸೌಇಇ. XI–I, ೩೨-೩ ; ?). [ ಚಟ್ಟಿ$_5$ + – ಇಗ ]

**ಚಟ್ಟಿಗೆ, ಚಟಿಕೆ$_1$, ಚಟಿಗೆ** (ನಾ). = ಚಟ್ಟಿ$_1$ ೨ : ಬೈಚಟ್ಟ ಬೆಣ್ಣೆಯ ಚಟ್ಟಿಗೆಗಳ ತೆಗೆದಷ್ಟನು ಸವಿದನು (ಪ್ರಸಭಾ. ೦೭-೨೪). **ಚಟಿಕೆ$_1$** : ವರ ಚಿಂತಾಮಣಿಯಿರುತಿರೆ ಗಾಜಿನ ಚಟಿಕೆಯ ಹಿಡಿದಂತೆ (ಸುಸಾರ. ೧೦೪-೬). **ಚಟಿಗೆ** : ತುಪ್ಪದ ಚಟಿಗೆಯನ್ನು ನೆಲುವಿಗೇರಿಸು (ರೂಢಿ). [ <ಚಟ್ಟಿ$_1$ ]

**ಚಟ್ಟಿಮ** (ನಾ). ಒಬ್ಬಾತನ ಹೆಸರು: ನಾಗಚನ್ದ್ರಭಟ್ಟ ಪುತ್ರಾಯ ಚಟ್ಟಿಮ ಭಟ್ಟಾಯ . . . ರಾಜಾದಿತ್ಯೇನ ಗ್ರಾಮದ್ವಯಂ ದತ್ತಂ (ಮ್ಯಆರಿ. ೦೯೩೩, ೪೦-೩೪ ; 951). [ ಚಟ್ಟಿ$_5$ (<ಸೆಟ್ಟಿ) + ಅಮ (<ಅಮ್ಮ$_1$) ]

**ಚಟ್ಟಿಸು** (ಕ್ರಿ). ತಲೆ ಬಗ್ಗಿಸು,–ತಗ್ಗಿಸು ; ಹಲುಗಿರಿದು ಹುಬ್ಬೇಱಿಸುತ ಹಣುಗುತ್ತ ಹೆದಱುತ ತಲೆಯ ಚಟ್ಟಿಸುತ (ತೊರರಾ. ೩-೭-೪೩). [ ಚಟ್ಟು? + – ಇಸು$_3$ ]

**ಚಟ್ಟಿಱು, ಚಿಟ್ಟರಿ, ಚಿಟ್ಟಿಱು, ಚೆಟ್ಟಿಱು** (ಕ್ರಿ). ೧. (ಸುಗಂಧ ಮೊದಲಾದುವನ್ನು) ಲೇಪಿಸು,–ಬಳಿ,–ಹಚ್ಚು : (೩). ೨. = ಚಿಟ್ಟುಬಡಿ: "ಸ್ಥಾಸಕಂ, ಹಸ್ತಬಿಂಬಂ – ಈ ೨ ಚಟ್ಟಿಱುವುದು" (ಹಲಾಯು. ೮೯-೩೮೬) ; ಚಟ್ಟಿಱಿದ ಗೋಡೆಗಳ ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹಚಕಾ. ೧೦-೩೦); ಚಟ್ಟಿಱಿದು ಘಟವನರ್ಚಿಸಿ ನೆಟ್ಟನೆ ಪೊಸ ಪೂಗಳಿಂದು (ಕುಸುಮಾ. ೧೧-೦೩೮); ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಿಱಿದು (ಪಸಾರ. ೯೩೩); ದಿಗ್ಭಿತ್ತಿಯೊಳ್ಕೂಡಿ ಚಟ್ಟಿಱಿದಂತಿರ್ದ್ದಪುದ ಪ್ರತಕ್ಕ್ರರ ತೇಜ ದೇವರಾಜೇಂದ್ರನಾ (ಸೌಇಇ. IV, ೨೭೭-೨೮ ; ಸು. 1880) ; ನೃಪನೊಡಹುಟ್ಟಿದನ ಹೊಯ್ದುರುಣಜಲದಲಿ ಚಟ್ಟಿಱಿದು (ಕುವ್ಯಾಕ. ೨೦-೨) ; ಚಟ್ಟಿಱಿದು ಚಪ್ಪರಿದು ನುಂಗುವ ಭೂತಕೋಟಿಗಳನಟ್ಟಿ (ತೊರರಾ. ೬-೭-೧೨). **ಚಿಟ್ಟರಿ** : ೨. ದರಹಾಸಂ ಜೊನ್ನಮಂ ಚಿಟ್ಟರಿದು ಕರೆಯೆ ತದ್ರೂಪನಂ ನೋಡಲಾಗಳ್ (ಚಂದ್ರಪ್ರು. ೦೩-೪). **ಚಿಟ್ಟಿಱು**: ೨. ಅಸ್ರಾಂಬುವಿಂ ಚಿ[ಪಾಠಾಂ. ಚಿ]ಟ್ಟಿಱಿದು ಕರುಳಿನಿಂ ತೋರಣಂಗಟ್ಟಿ (ಜಗವಿ. ೬-೦೨). **ಚೆಟ್ಟಿಱು** : ಮೇಲಿನ 'ಜಗವಿ' ಪ್ರಯೋಗದ ಪಾಠಾಂತರವನ್ನು ನೋಡಿ. [ ಚಟ್ಟು$_5$ + ಇಱು$_1$ ]

**ಚಟ್ಟು$_1$** 'ಚಟ್ಟ$_1$' ನೋ.

**ಚಟ್ಟು$_2$, ಚಿಟ್ಟು$_2$** (ನಾ). ೧. ಅಶುದ್ಧತೆ; ಕೊಳೆ; ಹೊಲಸು. 'ಮುಟ್ಟು ಚಟ್ಟು' ಪರಾ. ೨. ನಾಶ ; ಕೆಡುಕು ; ಹಾಳು : ಅವನನ್ನು ಚಟ್ಟು ಮಾಡಿದರು (ರೂಢಿ). **ಚಿಟ್ಟು$_2$** : (೩). [ ದೇ.೩ ತಮಿ. ಚಟ್ಟು ; ತುಳು. ಚಟ್ಟ್ ; ತೆಲು. ಚೆಡು=ಕೆಡು ]

**ಚಟ್ಟು$_3$** 'ಚಟ್ಟು$_4$' ನೋ.

**ಚಟ್ಟು$_4$** (ನಾ). ಸಣ್ಣಕಲ್ಲಂ ತುಂಬಿದ ಭೂಮಿ; ಕಲ್ಲು ಭೂಮಿ: ಈ ಚಟ್ಟನಲ್ಲಿ ಏನು ಬೆಳೆ ಬಂದೀತು (ರೂಢಿ). [←ತೆಲು. ಚಟ್ಟು]

**ಚಟ್ಟು$_5$, ಚೆಟ್ಟು$_3$** (ನಾ). ೧. ಗೋಡೆಗೆ ಕೈಯಿಂದ ಒತ್ತುವ ಬಣ್ಣದ ಗುರುತು. 'ಚಟ್ಟುಬಡಿ' ಪರಾ. ೨. ಪ್ರಥಮ ಋತುಮತಿಯಾದವಳು ಗೋಡೆಗೆ ಒತ್ತುವ ಅರಿಸಿನದಿಂದ ಅಂಕಿತವಾದ ಹಸ್ತದ ಗುರುತು. ೩. ಪರಿಮಳ ದ್ರವ್ಯದ ಲೇಪನ; ಸುಗಂಧದ ಲೇಪ: "ಚರ್ಚಾ, ಚರ್ಚಿಕ್ಯಂ, ಸ್ಥಾಸಕಃ–ಈ ೩ ಗಂಧವನಿಟ್ಟು ತೊಳೆವುದರ ಪೆಸರು. ಚಟ್ಟೆಂದು ಎಂಬರು" (ನಾಚಿರಾ. ೧೨೪). ೪. ನಕಲು. 'ಚಟ್ಟುಹೊಡೆ' ಪರಾ. ಚಟ್ಟು$_3$: ೧. ಕೋಣವೊಂದು ಸ್ಥಾಪಿತವಾಗಿತ್ತು. ಅದರ ಶರೀರದ ಮೇಲೆಲ್ಲಾ ಭಕ್ತಜನರ ಕೈಯ ಕೆಂಪು ಚಟ್ಟುಗಳು ಕಾಣುತ್ತಿದ್ದವು (ಬಾಡಿಅ. ೪೭). ೨. ಚಟ್ಟು ಬಡಿಸುವಶಾಸ್ತ್ರ, ಇನ್ನೂ ಏನೇನೋ ಶಾಸ್ತ್ರಗಳು ಆದುವು (ಕೆಳುಮು. ೨೦೧). ೩. ಪುಣುಗಿನ ಚಟ್ಟು ಹರಿಣ ಗೋರೋಚನ ಕೃಷ್ಣಾಜಿನವುಲಿಚರ್ಮ ನರಿಗೊಂಟುಗಳನಿತ್ತರೊಲಿದು (ಮೋಹತ. ೧೯–೬೩).

[ ದೇ.೫ ತಮಿ. ಚಟಙ್ಕು= ಹುಡುಗಿಯು ಪ್ರಥಮ ಋತುಮತಿಯಾದಾಗ ಮಾಡುವ ಸಮಾರಂಭ ]

**ಚಟ್ಟು$_6$** (ನಾ). ಜಟ್ಟಿ ಕಾಳಗದಲ್ಲಿ ಒಂದು ವರಸೆ: ಎಸೆವ ಮುಹಗ್ಗಳಂ ಠಡಕಿ ಕಕ್ಕವಡಂ . . . ಪಾಸಗೆವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣಿ ಖಿವುಟ್ಟುರಿ ಕತ್ತರಿ . . . ಚಟ್ಟಿಗನ ನಟ್ಟಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೩–೭೮). [ ದೇ.೫ ತಮಿ. ಚಟಙ್ಕು ]

**ಚಟ್ಟುಕ**(ನಾ). ಸುಗಂಧ ದ್ರವ್ಯಗಳನ್ನು ಸಿದ್ಧಗೊಳಿಸುವವನು,-ಲೇಪಿಸುವವನು; ಘಟ್ಟಿವಳ: ತಟ್ಟುಕಂ ಚಟ್ಟುಕಂ ತಟ್ಟಿ ಚಟ್ಟಿ ಶಬ್ದಾ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯ ಕರ್ದಮ ಕೃತ ಸ್ಥಾಸಕ ವಚನೌ ತತ್ಕುರ್ವನ್ (ಶಬ್ದಾನು. ೪೪೦ ವ್ಯಾಖ್ಯಾ). [ ಚಟ್ಟು$_5$ + – ಕ$_3$ ]

**ಚಟ್ಟುಗ**(ನಾ). ಒಬ್ಬಾತನ ಹೆಸರು: ಬಂಟಾಗ ಮದಭಂಜನಂ ಜಯಾಂಗನಾ ಮನೋರಞ್ಜನಂ ಚಟ್ಟುಗ ಮದೇಭ ಪಞ್ಚಾನನಂ (ಎಕ. VIII, ಸಾಗರ. ೧೧೯–೪; 1042). [ <ಚಟ್ಟು$_6$ ]

**ಚಟ್ಟುಬಡಿ** (ಕ್ರಿ). ಮಡಕೆ, ಗೋಡೆ, ಬಾಗಿಲು ಮುಂತಾದುವುಗಳ ಮೇಲೆ, ಕೈಯಿಂದ ಬಣ್ಣವನ್ನು ಒತ್ತು; ಗುರುತು ಮಾಡು: ಬಾಗಿಲು, ಗೋಡೆಗಳ ಮೇಲೆ ಚಟ್ಟು ಬಡಿದಿದ್ದರು (ರೂಢಿ); ಚಟ್ಟು ಬಡಿದಿದ್ದ ಮಡಕೆಗಳನ್ನು ಸಾಲಾಗಿ ಇಟ್ಟು ಪೂಜಿಸಿದ್ದರು (ರೂಢಿ).

[ ಚಟ್ಟು$_5$ + ಬಡಿ$_1$ ]

**ಚಟ್ಟುಹೊಡೆ** (ಕ್ರಿ). ೧. ಗೋಡೆಗೆ ಕೈಯಿಂದ ಬಣ್ಣವನ್ನು ಒತ್ತು: ಹಿರಿಗೆ ಮನೆಗೆ ಪುಣ್ಯಾಹಕ್ಕೆ ಮೊದಲು ಚಟ್ಟುಹೊಡೆ (ರೂಢಿ). ೨. ನಕಲು ಮಾಡು; ಕಾಪಿಹೊಡೆ: ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪುಸ್ತಕ ದಲ್ಲಿದ್ದುದನ್ನೇ ಚಟ್ಟು ಹೊಡೆದಿದ್ದರು (ರೂಢಿ). ೩.(ಕರಾ). ಮತ್ತೊಬ್ಬರು ಹೇಳಿದ್ದನ್ನೇ ಹೇಳು: ಏನೂ ಕೆಲಸವಿಲ್ಲ, ಸುಮ್ಮನೆ ಚಟ್ಟುಹೊಡೆಯುತ್ತಾನೆ (ರೂಢಿ). [ ಚಟ್ಟು$_5$ + ಹೊಡೆ$_1$ (<ಪೊಡೆ$_1$) ]

**ಚಟ್ಟಿ$_1$, ಚೊಟ್ಟಿ$_1$** (ನಾ). ೧.(ಯುರೋಪಿನವರ ಮಾದರಿಯ)ಉಡುಗೆ ತೊಡುಗೆ. 'ಚಟ್ಟಿಗಾರ' ಪರಾ. ೨. ಮೈಮೇಲೆ ಬೆಳ್ಳಗೆ ಸ್ವಲ್ಪ ಉಬ್ಬಿದ ಮಚ್ಚೆಗಳೇಳುವ ಒಂದು ಬಗೆಯ ಗುಹ್ಯರೋಗ; ಪರಂಗಿ ರೋಗ: (೩). ಚೊಟ್ಟಿ$_1$.

ಚೊಟ್ಟಿಯವ=ಯುರೋಪಿನವರ ಮಾದರಿಯ ವೇಷಧರಿಸಿದವನು; ಚಟ್ಟಿಕಾರ: ಬಾಗಿಲಿಗೆ ಬೀಗ ಹಾಕಿಸಿ ಬಟ್ಟರು. ಮುಖಿಸಾಮವ್ವನವರು ಚೊಟ್ಟಿಯವನಿಗೆ ಹೇಳಿ (ಕಂಗೂಲಿ. ೧೩೭).

[ ದೇ.೫ ತಮಿ. ಚಟ್ಟೈ; ಮಲ. ತುಳು. ತೆಲು. ಚಟ್ಟ ]

**ಚಟ್ಟಿ$_2$** 'ಚಟ್ಟು$_1$' ನೋ.

**ಚಟ್ಟಿ$_3$** 'ತಟ್ಟು$_1$' ನೋ.

**ಚಟ್ಟಿಕಾರ** 'ಚಟ್ಟಿಗಾರ' ನೋ.

**ಚಟ್ಟಿಗಾರ, ಚಟಿಕಾರ, ಚಟ್ಟಿಕಾರ** (ನಾ). ೧. ಯುರೋಪಿನವರ ವೇಷವನ್ನು ಧರಿಸಿದವನು: (೩). ೨. ಯುರೋಪಿನ ಹಾಗು ಏಷ್ಯಜನರ ಸಂಕರ ಜಾತಿಯವನು; ಆಂಗ್ಲೊ ಇಂಡಿಯನ್: ಬ್ರೌ ಎಂಬ ಚಟ್ಟೀಗಾರನು ಆ ದಿವಸ ಗಾಡಿ ಹೊಡೆಯುತಾ ಇದ್ದನು (ಮುಮುರಾ. ೧೯). ಚಟಿಕಾರ: ೨. ಚಟಿಕಾರರುಚೌಕಿ ಮಾಡುತ, ನಡಿದರೂ ಹೇಳದೆ ಗುಡದಾಗ (ಕನ್ನಜಾ. ೮೮). ಚಟ್ಟಿಕಾರ: (೩).

[ ಚಟ್ಟಿ$_1$ + – ಕಾರ$_1$ (< – ಕಾಱ). / ತಮಿ. ಚಟ್ಟೈಕ್ಕಾರನ್; ಮಲ. ಚಟ್ಟಕ್ಕಾರನ್; ತುಳು. ಚಟ್ಟಿಗಾರೆ; ತೆಲು. ಚಟ್ಟಕಾರ ]

**ಚಟ್ಟೋಜ** (ನಾ). ಒಬ್ಬಾತನ ಹೆಸರು: ಅರ್ಜುನೋಜನ ಮಗಂ ಚಟ್ಟೋಜ ಕಲ್ಲಂ ಮಾಡಿಸಿದ (ಎಕ. VIII, ಸೊರಬ. ೧೬–೧೦; 1016); ಗೊಯ್ದಿಸೆಟ್ಟಿಯ ಬೆಸವಗಂ ಅಕ್ಕಶಾಲೆ ಚಟ್ಟೋಜನ ತಮ್ಮಂ (ಎಕ. VII, ಶಿಕಾರಿ. ೪೩–೭೯; 1172 ?). [ ಚಟ್ಟು$_6$ + ಓಜ$_1$ (<ಒವಜ್ಝ) ]

**ಚಟ್ಗ್ರಾಮ** (ನಾ). ಒಂದು ಊರಿನ ಹೆಸರು: ಪಾವಕದಿಶಿ ಶಮಿಾ ಯಿ ಕೃಷ್ಣಪಾಷಾಣಾಂ ಚ[ಟ್ಟ]ಗ್ರಾ]ಮತಃ ಕೃಷ್ಣಪಾಷಣಂ (ಸೌಇಇ. XX, ೪–೧೩; ೬೬೬). [ ಚಟ್ಟ? + ಗ್ರಾಮ ]

**ಚಟ್ನಿ** 'ಚಟ್ನಿಣಿ' ನೋ.

**ಚಟ್ನಿಪುಡಿ** (ನಾ). ಕಡಲೆಬೇಳೆ, ಉದ್ದಿನಬೇಳೆ, ಕೊಬ್ಬರಿ, ಮೆಣಸಿನ ಕಾಯಿ ಮೊದಲಾದುವನ್ನು ಹಾಕಿ ಮಾಡಿದ ನಂಜಿಕೆಯ ಪದಾರ್ಥ: ಚಟ್ನಿಪುಡಿ ಮುಗಿದು ಹೋಗಿದೆ (ರೂಢಿ). 'ಪುಡಿಚಟ್ನಿ' ಪರಾ.

[ ಚಟ್ನಿ (<ಚಟ್ನಿಣಿ) + ಪುಡಿ ]

**ಚಟ್ನಿ** 'ಚಟ್ಟಣಿ' ನೋ.

**ಚಡ್‌ಸಾಲ್** 'ಭಡಸಾಲ್' ನೋ.

**ಚಡ** (ನಾ). ೧. ಬೇಗ (?): ಬಂದವನೆತ್ತಿ ವಿಕ್ರಮದಿನೀಟ್ಕುಳಿಗೊಂಡವನಂತೆ ಕೂಸ ನಿನ್ನಿಂದಮಗೊಳ್ಳಿಯಂ ಬಿಡುವ ವೇಟುಱ್ ತನಗಿಕ್ಕಿದ ಕೋಂಟೆ ತಾಂ ಚಡಂ ಬಂದು ನಿಜೇಶನಾತಕೋಟೆಯಂ ತಿಱಿವಂ ಗಟಪಲ್ಕೆ ಬೇಡ ಪೋಗೆಂದುಅದೊತ್ತಿ ಚಪ್ಪರಿಸೆ ಪೋದನವಂ ಪಗೆಸಾರಿ ಕೋಪದಿಂ (ಪುಷ್ಪಪು. ೭–೭೭). ೨. [ಸಂಗೀತ] ರಾಗದಲ್ಲಿ ಒಂದು ಗತ್ತು (?): ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ತನ್ನೆವಣಿ ನಿಸ್ಸರಣಿ ರಂಗರಕ್ಕಿ ಬೇಗ ವಣಿತು ತರಹರಂ ಸುರಿಪೊಟ್ಟಜೆ . . . ಬೆಡಂಗು ವಡೆಯ ಪಾಡುತ್ತಿರೆಯುಂ (ಶಾಂತೀಶ್ವ. ೧೬–೭೭ ವ). [ ? ]

**ಚಡತ** (ನಾ). ಮನೆಯ ಮುಂದಿನ ಜಗಲಿ; ಕಟ್ಟೆ: ಅವರೆಲ್ಲ ಮನೆಯ ಮುಂದಿನ ಚಡತದಲ್ಲಿ ಕುಳಿತಿದ್ದರು (ರೂಢಿ). [ ? ]

**ಚಡತಿ** (ನಾ). ಅಸೂಯೆ; ಹೊಟ್ಟೆಕಿಚ್ಚು; ಕರುಬು: (೩). [ ? ]

**ಚಡಪಡ** (ನಾ). ೧. ಅಸಮಾಧಾನ; ಕಳವಳ. 'ಚಡಪಡಿಕೆ' ಪರಾ. ೨. ಆತುರ; ಅವಸರ; ಗಡಿಬಿಡಿ. 'ಚಡಪಡಿಸು' ಪರಾ. [ ? ]

**ಚಡಪಡನೆ, ಚಡಪುಡನೆ, ಚಡುಂಪಡನೆ, ಚಡುಪುಡನೆ, ಚಡುಹುಡನೆ** (ಅ). ಲಗುಬಗೆಯಿಂದ; ಬೇಗನೆ; ತ್ವರಿತವಾಗಿ: "ಚಚ್ಚರಂ . . . ಚಡಪಡನೆ ಭೋರೆನೆ . . . ಶೀಘ್ರಾರ್ಥ" (ಶಬ್ದಮಂ. ೬೩). ಚಡಪುಡನೆ: "ಚಟ್ಟನೆ" (ಹಾಸನಿಘ. ೩೪) ಚಡುಹುಡನೆ: "ಭೋಂಕನೆ ಚಡು[ಪಾಠಾಂ. ಡ]ಪಡನೆ ಚಚ್ಚರಂಗಳ್ . . . ತುರಿಪಮುಂ" (ಅಭಿಶ್ರೀ. ೪೯). ಚಡುಪುಡನೆ: ಭೋಂಕಲ್ ಚಡುಪುಡನೆ ಗಿಬ್ಬ ತಿಬ್ಬನೆಯುಂ . . . ಒದವುಗ್ಗಂ ಶೀಘ್ರಾರ್ಥಂ (ಕಮುರ. ೩೦೩). ಚಡುಹುಡನೆ: ಚಡುಹುಡನುಂಡು . . . ನಡೆದರ್ (ಸೂಕ್ತಿಸು. ೧೮–೩೩). 'ಸಡುಹುಡನೆ' ಪರಾ. [ಚಡಪಡ + – ಅನೆ$_1$]

**ಚಡಪಡಿಕೆ,** ಚಟ್ಪಟಿಕೆ₁, ಚಟುಪಡಿಕೆ (ನಾ). =ಚಡಪಡ೧ : ಒಳಗಿನ ಚಡಪಡಿಕೆಯನ್ನು ಆಡಿ ತೋರಿಸುವಂತಿಲ್ಲ (ಪ್ರನಿ. ೩೯) ; ಸಾವಿತ್ರಿಯ ಚಡಪಡಿಕೆ ಕಣ್ಣೀರ ಕೋಡಿಯಾಗಿ ಹರಿಯ ತೊಡಗಿತು (ಚಿಪರಿ. ೨೪೩) ; ಒಂದು ಒಂದೂವರೆ ತಾಸು ಕುಳಿತರೂ ಯಾರೂ ಬರಲಿಲ್ಲ ಅವನಿಗೆ ಚಡಪಡಿಕೆಯಾಗಹತ್ತಿತು (ಕೃಕಳ್ಳ. ೧೬೪) ; ಯಶೋದೆಗೆ ತಡವಾದಂತೆ ಚಡಪಡಿಕೆ ಹೆಚ್ಚಾಯಿತು (ವಾತ್ಸಲ್ಯ. ೨೩೮). **ಚಟಪಟಿಕೆ₁ :** (ಕ). **ಚಟುಪಡಿಕೆ :** ಅನಂತನ . . . ಈ ವ್ಯರ್ಥ ಚಟುಪಡಿಕೆಯನ್ನು ಕಂಡು ಕಮಾಂಡರರೇ ಹೇಳಿದರು (ಸಮುಸಾ. ೧೦೪). [ ಚಡಪಡ + – ಇಕೆ ]

**ಚಡಪಡಿಸು,** ಚಟಪಟಿಸು (ಕ್ರಿ). ೧. ಕಳವಳಗೊಳ್ಳು ; ವ್ಯಥೆಪಡು : ಕರುಗಳು ಕಣ್ಮರೆಯಾದ ಕೂಡಲೆ ದನಗಳು ಚಡಪಡಿಸುತ್ತವೆ (ಕುಂಬಯ. ೫-೫೩). ೨. ಅವಸರಪಡು ; ಆತುರಪಡು : ಯಾವಾಗ ಅವರನ್ನು ನೋಡಿಯೇನೆಂದು ಆತ ಚಡಪಡಿಸುತ್ತಿದ್ದ (ಕೃವಾಕ. II, ೧೯೬) ; ನನಗೂ ಅವರಂತೆ ಕುಣಿದಾಡಬೇಕು ಎಂದು ಕೈಕಾಲುಗಳು ಚಡಪಡಿಸುತ್ತಲೇ ಇದ್ದುವು (ಶಾಲಸು. ೨೨೦). ೩. ಒದ್ದಾಡು ; ಹೊರಳಾಡು : ಒಬ್ಬನು ಆ ಚಡಪಡಿಸುವ ಆತನ ಎರಡೂ ಕೈಗಳನ್ನು ಬಲವಾಗಿ ಹಿಡಿದುಕೊಂಡನು (ವೀರಬಂ. ೫೦) ; ಕಾಯ್ದ ಹಂಚಿನ ಮೇಲೆ ಹುರಿಯಲು ಹಾಕಿದ ಅರಳಿನ ಜೋಳದ ಕಾಳಿನಂತೆ ಚಡಪಡಿಸಿದನು (ಚಂಕುಟಿ. ೨೦) ; ನಿನ್ನ ಕುದುರೆ ನೆಮ್ಮದಿಯಿಲ್ಲದೆ ಚಡಪಡಿಸುತ್ತಿತ್ತು (ಶಾರಿಮ. ೮೪). **ಚಟಪಟಿಸು :** ೩. ಅಶಾಂತಿಯಿಂದ ಅವಳು ಚಟಪಟಿಸುತ್ತಿದ್ದಳು (ವಂಶವೃ. ೧೯೯). [ ಚಡಪಡ + – ಇಸು₃ ]

**ಚಡಪುಡನೆ** 'ಚಡಪಡನೆ' ನೋ.

**ಚಡರ** (ನಾ). ಕವಚ : "ಸನ್ನಾಹಂ, ಕವಚಂ, ಚಡರಃ . . . ಜಾ(ಳಿ)ಕಾ-ಈ ೧೦ ಕವಚಂ" (ಹಲಾಯು. ೭೭-೩೦೫) [ ಸಂ ]

**ಚಡಲೆ** (ನಾ). ಒಂದು ಬಗೆಯ ಮರ : ಅಂಸಿನ, ಬೂರುಗ, ಚಡಲೆ, ನಾರವಳ್ಳಿ, ನೀರವಳ (ಸಮ್ಯಸು. ೨೩೭). [ ? ]

**ಚಡಾಯ,** ಚಢಾಯಿ, ಭಡಾಯ (ನಾ). ೧. (ಪದವಿಯಲ್ಲಿ) ಉನ್ನತಿ ; ಬಡತಿ : ರಾಜಪುತ್ರರ್ಗೆ ಪಸಾಯವಂ ಕೊಡಿಸುತ್ತಂ ವೀರಭಟರ್ಗೆ ಚಡಾಯವಂ ಮಾಡಿಸುತಂ (ಬಸರ. ೬-೩೪). ೨. ಅತಿಶಯ ; ಆಧಿಕ್ಯ : ರಾಯರಥಿಕರು ಚಟುಳ ಚ್ತರಣ ಚ[ಪಾಠಾಂ. ಧ]ಡಾಯ ಮಾನಿತರಿಳಿದುದಾಖಳರಾಯ ದುರ್ಗವ (ತೊರರಾ. ೬-೧೮-೪). **ಚಢಾಯಿ** ೩. ಮೇಲೇರಿ ಹೋಗುವುದು ; ದಾಳಿ : ನಿಂ ಚಢಾಯಿ ಮಾಡುವ ನೀತಿ ಅಸಲ್ ನಿರ್ಭೀತಿ ಹೇಳಿಕೇಳಿ (ಅರಳು. ೩೯೭-೧೦). **ಭಡಾಯ :** ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ←ಹಿಂ. ಮರಾ. ಚಢಾಈ ]

**ಚಡಾಯತಿಕೆ** (ನಾ). (ಕುದುರೆಯನ್ನು) ಏರುವ ಕ್ರಮ,–ಆರೋಹಣ ವಿಧಿ (?) : ವಾಮರಾಜ ಪ್ರಿಯ ತನೂಜಾತ ರೂಪುರೇಖೆ ಥಾಪನೆ ಬಯ್ಸಕೆ ತೊಡೆಮಡ ಕಯ್ದನಿಯೆಂಬ ಚಡಾಯತಿಕೆಗಾಯತಿಕೆವಡೆದಾರೂಢ ವಿದ್ಯಾವಿಳಾಸ (ಸೌಇಇ. IX–1, ೩೯೩-೨೦ : 1226). [ ? ]

**ಚಡಾಯಿಸು,** ಭಡಾಯಿಸು, ಭಡಾಯ್ಸು (ಕ್ರಿ). ೧. ಏರು; ಹೆಚ್ಚಾಗು; ಚಡಾಳಿಸು : (ಕ). ೨. ಎತ್ತರಿಸು ; ಹೆಚ್ಚಿಸು ; ಹೆಚ್ಚು ಮಾಡು : (ಕ). ೩. (ಹೊಡೆತ, ಏಟು ಮೊದಲಾದುವನ್ನು) ಕೊಡು ; ಹಾಗಿಸು : (ಕ). ೪. ಚಬಕದಿಂದ ಅಥವಾ ಬೆತ್ತದಿಂದ ಥಳಿಸು : (ಕ). **ಭಡಾಯಿಸು :** ೨. ಜಮಾಬಂದಿಗೆ ಜಾಸ್ತಿ ಭಡಾಯಿಸಿ ತನ್ನ ಕೈಕಾಗಜಕ್ಕೆ ಕೂಡಿ ಬರಬೇಕೆಂಬದಾಗಿ (ಮಹಾವಂ. II, ೭೧). **ಭಡಾಯ್ಸು :** ೩. ಅಗ ಅಡ್ಡೇ ಇದ್ದ ಮಾತ್ನಲ್ಲಾ, ಈಗ ಒಂದಕ್ಕೆರಡಾಗಿ ಭಡಾಯ್ಸ್ತಿದೀನ್ನೂ (ದುರಂಪಾ. ೬೩).

[ ಚಡಾಯ + – ಇಸು₃ ]

**ಚಡಾವು,** ಭಡಾವು (ನಾ). ೧. ಏರಿಕೆ ; ಉನ್ನತಿ ; ಬಡತಿ : (ಕ). ೨. ಏರುನೆಲ; ದಿಣ್ಣೆ : ಚಡಾವಿನಲ್ಲಿ ಮುಂದಕ್ಕೆ ಹೋಗದೆ ನಿಂತುಬಿಡುತ್ತಿದ್ದಿತು (ಭೈಸರ್ಪ. ೧೨೦). ೩. ಒಂದು ಬಗೆಯ ಮೆಟ್ಟು : ಕೆಲವರು ತುರುಕರ ಸಂಪ್ರದಾಯದ ಚಡಾವುಗಳನ್ನು ಉಪಯೋಗಿಸುತ್ತಿದ್ದರು (ಹುಟ್ಟುಹ. ೮) ; ಕಾಲೊಳಗಿನ ಹರಿದು ಹೋದ 'ಚಡಾವ'ನ್ನು ನೆಲಕ್ಕೆ ಅಪ್ಪಳಿಸಿದನು (ಸಕುಮಾಂ. ೪೪) ; ಕೆಂಪು ಬಣ್ಣದ ಸೊಗಸಾದ 'ಕಿರಿಕಿರಿ' ಚಡಾವು (ದಾಳಹೊ. ೨). **ಭಡಾವು :** ೩. ನಾನು ಜುಬ್ಬ ತೊಟ್ಟು ಪೈಜಾಮ ಹಾಕಿ ಕಾಲಿಗೆ ಪಂಜಾಬಿ ಮಾದರಿಯ ಭಡಾವನ್ನು ಮೆಟ್ಟಿದ್ದೆ (ಧರ್ಮಶ್ರೀ. ೧೧೩).

[ ←ಹಿಂ. ಚಢಾಪ್, ಚಢೌವಾ ; ಮರಾ. ಚಢಾಊ, ಚಢಾವ್ ]

**ಚಡಾಳ,** ಚಢಾಳ, ಭಡಾಳ (ನಾ). ಹೆಚ್ಚಳ ; ಅತಿಶಯ ; ಆಧಿಕ್ಯ : ಧ್ರುಮರವಾದ್ಯ ಮರಂಗಳ ಗಾವರಕ್ಕೆ ಜಾವಳಿಸಿ ಚಡಾಳದೊಳ್ಮೊರೆವುವು (ಅನಂಪು. ೦-೭೭) ; ಸಿರಿಯ ಚಡ[ಪಾಠಾಂ. ಧಾ]ಳದಲಿ ತಂದಖಿಳ ವಸ್ತುವ ನಾಲಯದೊಳೊಕ್ಕಿಸಿದನು (ಕುವ್ಯಾಸ. ೫-೬೫) ; ಹೇಳು ಹೇಳಭಿಮಾನಭಂಗ ಚ[ಪಾಠಾಂ. ಧ]ಡಾಳವಾರಿಂದಾದುದು (ತೊರರಾ. ೩-೩-೪) ; ತೋಳ ಮೂಲಗಳೊಡೆವಂತೆ ಪೆರ್ಮೊಲೆಯ ಚಡಾಳದಿ ಮೆರೆವ ಹೆಣ್ಣುಗಳು (ಮೋಹತ. ೧೪-೬೦) ; ಗಂಧರ್ವ ವಿದ್ಯಾಚಾರ್ಯ ನೃಪಸುತರೂ ಮೆಚ್ಚಿ ವೀಣೆಯನು ಕಲಿವ ಚಡಾಳವೇನು (ಸಾಳ್ವಭಾ. ೦೭-೧) ; ನಾಲಗೆದೆಣೆದವ ನುಡಿವೊಂದು ನುಡಿಯ ಚಡಾಳವನೇನ ಬಣ್ಣಿಪೆವು (ಭರತ. ೫೭-೨೪). **ಚಢಾಳ :** ಬಲ್ ಚದುರ ಚಾವಡಿ ಚಢಾಳದೋಳಿ ಜೇಟದ ಥಾಟ ಸಿಂಗರದ ರಂಗಭೂಮಿ (ಪದ್ಮರಾ. ೬-೮೭). **ಭಡಾಳ :** ಮುನಿವ್ರಜ . . . ಕಡು ಶೋಕರಸದ ಭಡಾಳವನು ನಿಲಿಸಿದರು (ಕುವ್ಯಾಅ. ೫-೨೮) ; ಬಿಸಿಲ ಭಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ವಂದಂತೆ (ಮೋಹತ. ೨೭-೧೭).

[ <ಪ್ರಾ. ಧಡಾಲ ]

**ಚಡಾಳತೆ,** ಭಡಾಳತೆ (ನಾ). ಹೆಚ್ಚಳ ; ಆಧಿಕ್ಯ : ಚತುರಂಗದ ಚ[ಪಾಠಾಂ. ಧ]ಡಾಳತೆಯಿಂದ ಜೂರಿಸುವಸ್ತ್ರ ಶಸ್ತ್ರದಲಿ ಹೊದೆಸಿಕೊಂಡುದು ಕಪಿಬಲವನು (ತೊರರಾ. ೬-೦೭-೩೦). **ಭಡಾಳತೆ :** ನಿಮ್ಮಾತನಾಗಿದೆಬ್ಬಿಸಿದ ಹುಲಿಯೋ ನೊಂದ ಹಂದಿಯೊ ಹಸಿದ ಭುಜಗನೋ ಕಾದ ಕಟ್ಟುಕ್ಕಿನ ಭಡಾಳತೆ[ಪಾಠಾಂ. ಳಿಕೆ]ಯೊ (ಕುವ್ಯಾಅ. ೬ ೬). [ ಚಡಾಳ + – ತೆ₃ ]

**ಚಡಾಳಧ್ವನಿ** (ನಾ). ಅಧಿಕವಾದ ಧ್ವನಿ ; ಅತಿಶಯವಾದ ಧ್ವನಿ : ಅದೆ ರಘುಕ್ಷಿತಿಪಾಲಕನ ಚಾಪದ ಚಡಾಳಧ್ವನಿ[ಪಾಠಾಂ. ಧ್ವಾನ]ಯ ಚಿತ್ತೈಸಿದಿರ ಮುಂದಿಧೆ ಸಮರಭೈರವನುಗ್ರಸಿಂಹರವ (ತೊರರಾ. ೩-೬-೩೩).

[ ಚಡಾಲ + ಧ್ವನಿ ]

**ಚಡಾಳಿಕೆ,** ಭಡಾಳಿಕೆ (ನಾ). ೧. ಉಗ್ರತೆ ; ರಭಸ : ಬಲು ಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಮೋಹತ. ೧೯-೪೬) ; ಇವರ ಬಲುಹು ಮತ್ತಿವರಟ್ಟುಳಿ ಮೇಣಿವರ ಚಡಾಳಿಕೆ ಇವರ ಕಟುಕತ್ವ (ಕಕೃಸ. IV, ೦೫). **ಭಡಾಳಿಕೆ :** ೨. ಅತಿಶಯ ; ಆಧಿಕ್ಯ : ನಾಟ್ಗಿ ಬಸಂತನ ಕಾವು ಕಾಮದೇವನ ರತಿಯಾಜ್ಞೆ ಚಂದ್ರನ ಭಡಾಳಿಕೆ[ಪಾಠಾಂ. ತಳಾರಿಕೆ] ತಂಬೆಲರೊಂದು ದೆಂಬಲಂ (ಅನಂಪು. ೦-೮೭). (ಸೂಕ್ತಿಸು. ೪-೨೯ ನೋ).

[ ಚಡಾಳ + – ಇಕೆ ]

**ಚಡಾಳಿಸು,** ಚಡಾಳೈಸು, ಚಢಾಳಿಸು, ಚೌಡಾಳಿಸು, ಭಡಾಳಿಸು (ನಾ). ೧. ಅಧಿಕವಾಗು ; ಮೇಲಾಗು ; ಆಧಿಕ್ಯವನ್ನು ಪಡೆ : ತೋಳು ಸಾವಿರವಮರಪತಿ ತೆಬುವಾಳಿನೊಕ್ಕಲು . . . ಶೂಲಿ ಬಾಗಿಲ ಕಾಯ್ದನೀಸು ಚಡಾಳಿಸಿದ ಸಿರಿ ಯಾರಿಗೆ (ಕುವ್ಯಾಸ. ೯-೬೩) ; ಮೇಲಣಾಮರಣಾಂಬು ಕುದಿವುತಿರ್ದುದು ಶಿಖಿ ಚಡಾಳಿಸಲ್ (ಚಬಪು. ೩೦-೬). ೨. ಚಾತುರ್ಯದಿಂದ ಜೋಡಿಸು ; ಸೊಗಸಾಗಿ ಅಳವಡಿಸು : ಜಂತ್ರವೀಣೆಯ ತಂತ್ರಿಗಳನು ಚಡಾಳಿಸಿ ಕಂತುವಿನಂಕಮಾಲೆಯನು . . . ಬಾಜಿಪ ಕಾಂತೆ ಕಣ್ದ

ಸೆದಳು (ಅಂಬಿಕ. ೫-೦೩೨) ; ಹಸುರಂಗಿಯುನು ತೊಟ್ಟನು ಚಡಾಳಿಸಿ ಪದದೊಳೆಕ್ಕದವ (ಕುಮಾ.ಆ. ೦೩-೦೯) ; ಪೊನ್ನ ದಂಡಿಗೆಯು ಚಡಾಳಿಸಿ ಬಿಗಿದನು (ತ್ರಿಪುರ. ೬-೨೬). ೩. ತುಂಬು; ವ್ಯಾಪಿಸು ; ಹಬ್ಬು: ಬಲುಗಾಳಿಗದ ಭಾರಣೆಯು ಬಲುಹು ಚ[ಪಾಠಾಂ. ಧ]ಡಾಳಿಸುತಲಿರ್ದುದು ಚತುರ್ದಶ ಭುವನವೀಧಿಗಳ (ಕೂರಲಾ. ೬-೦೮-೦೦) ; ಅವನ ಕೀರ್ತಿ ಚಡಾಳಿಸಿತು ತ್ರೈಜಗವನು (ನಳಚ. ೪-೦). ೪. ಪ್ರಜ್ವಲಿಸು; ಥಳಥಳಿಸು : ಬಾಲಸೂರ್ಯನವೋಲ್ . . . ತೇಜದ ವಿಕಾರ ಚಡಾಳಿಸಿತು (ಕುಮಾ.ದ್ರೋ. ೦೮-೩೦) ; ದುಕೂಲ ಮಣಿಭೂಷಣವ ಧರಿಸಿ ಚಡಾಳಿಸುವ ಕಾಂತಿಯಲಿ ಸಿಂಹಾಸನದಿ ಕುಳ್ಳಿರ್ದ (ನಳಚ. ೯-೦). ೫. ಉರವಣಿಸು; ರಭಸಗೊಳ್ಳು: ಗುರು ಚಡಾಳಿಸಿ ಹೊಕ್ಕನೊಪ್ಪಂಗುರವಣಿಸಿದನು ಬಾಹ್ಲಿಕನು (ಕುಮಾ.ವಿ. ೮-೭೯) ; ಹೊಗೆ ಚಡಾಳಿಸಿ ಹಬ್ಬಿತಂಬರವ (ಶಾಕಿಲಾ. ೨೨-೩೮) ; ಕೋಳರಡನು ಕಟ್ಟಿ ಜಯರಾಜನಿತ್ತ ಚಡಾಳಿಸಿ ತರುತ್ತಿದ್ದನತ್ತ (ಭರತ. ೩೪-೯೬). **ಚಡಾಳ್ಳೈಸು:** ೨. ಕರದ ಬಿಲ್ಲೈದೆಯಂ ಚಡಾಳ್ಳೈಸುತಾಗ ಶತಮಾಯನಿಂದ್ರನ ಸರಿಸದೊಳ್ ನಿಂದು (ಕಬ್ಬ. ೪೯-೨೦). **ಚಢಾಳಿಸು :** ೧. ಕೆಲಿಸಿದ ಹೃದ್ಬೀಜಬಿಂದು ಚಢಾಳಿಸಿದ ಶೀತಾಂಶುವಾಗಲು (ಪ್ರಭುಲಿ. ೨-೧೦) : ವಿಷರಸದ ಬೊಬ್ಬೆಗೆ ಚಪಳತೆ ಚಢಾಳಿಸಿತು (ತುರಂಗ. ೬೯-೪೦). ೫. ಕಣೆಗಳಿಂ ಚಢಾಳಿಸಿ ಭಟರ ಕಣೆಗಳಿಂ ಮನ್ನಿಸಿದನು (ತುರಂಗ. ೬೪-೪). **ಚೌಡಾಳಿಸು :** ೫. ಚೌಡಾಳಿಸಿಯ್ಯಯಂಟರೊಳಗೆ ಕಾಯನು ಕೊಂದು ಅವುಕಿ ಬೆತ್ತಿಯೊಳು ಜೋಡೆತ್ತಿ . . . ಹಳದಿ ಜೋಡ ಬವರಕ್ಕೆ ನಿಲಿಸಿ ಯಾಡಿದರು (ಸಾಂಗಳಾ. ೪-೪೦). **ಧಡಾಳಿಸು :** ೧. ಮನಂ ಸೋಲ್ತು ಕಾಂತನಂ ಕಾತರದೆ ಡಾವರಿದೀಕ್ಷಿಸೆ ಧಡಾಳಿಸಿದ ರಾಗದಿಂ (ಪದ್ಮರಾ. ೮-೯೪); ನಾಲಗೆಯು ನೆಣಗೊಬ್ಬಿ ವಿಶ್ಯ ಧಡಾಳಿಸಿದರೇನಹುದು (ಕುಮಾ.ಆ. ೧೬-೦೭) : ಉರಿ ಧಡಾಳಿಸಿತೊಡನೆ ಧೂಮವು ಪುರವ ಮುಚ್ಚಿದುದು (ಅಂಬಿಕಾ. ೪೪-೩೫). ೪. ಥಾಳದ ದೆಂಬಟ್ ವಿಡಿದು ಧಡಾಳಿಸೆ ದೃಗ್ರುಚಿ (ಉದ್ಭಟ. ೦೧-೧೬) : ವಿತ್ರು ಕಳೆತಳು ಕಾಂತಿ ಧಡಾಳಿಪ ಮಣಿಮಂಚದೆಡೆಯು ಆಳಿಯರ್ . . . ಪ್ರಕ್ಷಾಲಿಸಿದರು ಪದಯುಗವ (ಸೋಮೇಶ.೨೭-೩೩). ೫. ಕೈದುಕಾಱರ ಗುರು ಧಡಾಳಿಸಿ ಮೈದೆಗೆದು ನಿರ್ಜರರ ನಗರಿಗೆ ಹಾಯ್ದನು (ಕುಮಾ.ದ್ರೋ. ೦-೩) ; ಮತ್ತೆ ಖಳರು ಧಡಾಳಿಸುತ ಮೇಲೇಱಿದರು ಘನತರದ ಕೋಪದಲಿ (ಚೀರಂಜ. ೬-೦೩) ; ಈ ದೇಹ ಸುಖದನುಭವ ಧಡಾಳಿಸಿ ಮರಳಿ ನಿನ್ನೆಡೆಗೆಳೆದು ತಹುದು (ಅಕ್ರೂರ. ೪-೭೩). ೬. ವಿರೋಧಿಸು ; ಎದುರುಬೀಳು : ಕೇಳಿಯೊಳಿನಿಯಂಗೆ ಸುಖವನೆಯ್ದಿಸದೆ ಧಡಾಳಿಸಿದವಳ ಪೇರುರವ ಬಾಳಿನೊಳ್ ಸಿಗಿವಂತೆ . . . ಸೀಳಿದಳೊಂದು ದೆಕ್ಕೆಲೆಯು (ಸೋಮೇಶ. ೦೬-೩೩).

[ ಚಡಾಳ + – ಇಸು$_3$ ]

**ಚಡಾಳ್ಳೈಸು** 'ಚಡಾಳಿಸು' ನೋ.

**ಚಡಿ$_1$** (ನಾ). ಸಣ್ಣಮಾರ್ಗ, ಕಿರುದಾರಿ: ಈಶಾನ್ಯ ಚಡಿಯ ದಾರಿಯುನ್ನೀವಳಯ ಸೀಮೆಯುಂ (ಎಕ. V, ಹಾಸನ. ೬೦-೪೨; 1218); ಜಾಂಬೇಜಿಯಂಥ ದೊಡ್ಡ ಪ್ರವಾಹವು ನಾಲ್ಕು ಕಡೆಗಳಲ್ಲಿ ಮುರಿದು ಈ ಭೂಮಿಯ ಚಡಿಯಲ್ಲಿ ಧುಮುಕುವ ನೋಟವು ಅತಿ ಮನೋಹರವಾಗಿದೆ (ಜಾಂಪ್ರ. I, ೩೦೭). [ < ಪ್ರಾ. ಛೇಂಡೀ ]

**ಚಡಿ$_2$** 'ಛಡಿ' ನೋ.

**ಚಡಿ$_3$** (ನಾ). ಮರಗೆಲಸದಲ್ಲಿ ಎರಡು ಮರದ ತುಂಡುಗಳನ್ನು ಕೂಡಿಸುವ ಸ್ಥಳದಲ್ಲಿ ಮಾಡುವ ಪಡ ಅಥವಾ ಕೂರು ; ಕೂಲು : (ಕ).

[ ? ]

**ಚಡಿಕೆ, ಚಳಕ$_1$, ಚಳಕಿ$_1$, ಧಡಕಿ, ಧಡಿಕೆ** (ನಾ) ಬಟ್ಟೆಕಾಳಗದಲ್ಲಿ ಒಂದುವರಸೆ : ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟ ಮುಡುಹಂ ಮುಹಡಂ ದಣಾವಟ್ಟಿ ಪಟ್ಟಿಸಂ (ಅನಂಪು. ೩-೨೭) : ಒಡೆಮುರಿವಪಟ್ಟಿಸಕೆ ಬಾಡುವ ಚಡಿಕೆ[ಪಾಠಾಂ. ಝುಡಿತೆ]ಗೊದಗುವ ಭಟರು ಹೆಣಗಿದರು (ಕುಮಾ.ಸ. ೨-೯೭). **ಚಳಕ$_1$ :** ತವದ ನಿಜಕೋಪದಿಂ ಚಳಕವಿನ್ನಣಂಗೊಂಡು ತಕ್ಕಿನೊಳ್ . . . ಡೊಕ್ಕರಿಸಿ ಕೊಂದನಾ ಮುಷ್ಟಿಕನಂ (ಜಗವಿ. ೬ ೬೮) ; ಕೇಣವಿಲ್ಲದೆ ಚಾರಿ ಚಳಕ ಚಾಳೆಯು ಚದುರ್ ಪಾಣಿಲಾಘವ ಪಂಥ ಪಾಡುಗಳನಱಿದು (ಕೃಮಿಥಾ. ೨೨-೬) ; ಪರಿವಿಡಿಯೊಳ್ ಚಳಕಂ ಮೆಯ್ಸುರಿಯಟ್ಟಱು ಕಾಣದೊಳ್ಪು ಪೆಣಗುವ ಸ್ಥೈರ್ಯಂ ದೊರೆಕೊಂಡ ಕುವರನಿರವಂ ನಿರವಿಸಿದರ್ ಗರುಡಿಯೋಜರವನೀಪತಿಯೊಳ್ (ಚಳವಿ. ೪-೦೩೩). **ಚಳಕಿ$_1$ :** ಚಳಕಿ ಚಳವಾಗೆ ಪಾರಂ ಸೆಳೆವೆಳೆವಂ ಪಟ್ಟಿಸಂಡಿ ಪುಟವಟ್ಟರೆ . . . ಕೊಱಗಿಡಂ ಬಾಣೂರಂ (ಅರ್ಜನೀ. ೮-೧೦೮). **ಧಡಕಿ:** ಎಸೆವ ಮುಹಗ್ಗಳಂ ಧ[ಪಾಠಾಂ. ಠ] ಡಕಿ ಕಕ್ಷವಡಂ ಮುಹಡಂ . . . ಬಾಹುದಣಿ ಖಮ್ಮರಿ ಕತ್ತರಿ ಜೋಡವಂಕುಶಂ ಸಸಿಕುವೆನಿಪ್ಪ ಬೆಟ್ಟಿಗನ ನಚ್ಚಿನ ಬಿನ್ನಣವೊಪ್ಪೆ ಕಾದಿದರ್ (ಚಂದ್ರಪ್ರ. ೫-೭೮). **ಧಡಿಕೆ :** ಚೊಕ್ಕಯವಾಸಿಗೆ ಪೊಕ್ಕಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಧಡಿಕೆಯೊಳ್ ಬಗಿದು ಆಳಿಸಿ ನೂಂಕುವ ನೂಂಕೆ ಪೋಗದೆ ನಿಂದ ಸೆಳೆಹನಂ ಸೆಳೆದು ಕೆಡಪಿ (ಗಿರಿಜ. ೨-೧೦೫ ವ).

[ ದೇ.೩ ತೆಲು. ಚಡಿಕಿ, ಚಲಿಕಿ, ಧಡಿಕಿ ]

**ಚಡಿತ$_1$, ಛಡತ, ಛಡಿತ$_2$** (ನಾ). ಮರದ ಸಾಮಾನುಗಳು ಬಿಗಿಯಾಗಿ ಹೊಂದಿಕೊಂಡಿರುವಿಕೆ ; ಹೊಂದಾಣಿಕೆ : ಗಾಜನ್ನು ಪಠದ ಚೌಕಟ್ಟಿನ ಚಡಿತಕ್ಕೆ ಸರಿಯಾಗಿ ಕೂಡಿಸಿ ಆಮೇಲೆ ಪಠವನ್ನು ಜೋಡಿಸಬೇಕು (ರೂಢಿ). **ಛಡತ :** ಬಾಗಿಲಿನ ಛಡತ ಸರಿಯಾಗಿಲ್ಲ (ರೂಢಿ). **ಛಡಿತ$_2$ :** ಮೇಜದ ಖಾನೆ ಯಾಕೋ ಛಡಿತಕ್ಕೆ ಸರಿಹೊಂದುವುದಿಲ್ಲ (ರೂಢಿ). [ <ಚಡಿ$_3$ ]

**ಚಡಿತ$_2$** (ನಾ). ೧. ಅಧಿಕವಾದ ಬೆಲೆ ; ಏನು ಬೆಲೆ : ಮಾರುಕಟ್ಟೆಯಲ್ಲಿ ಅಡಕೆ ೨೫೦ ರೂ ಚಡಿತಕ್ಕೆ ಹೋಗಿತ್ತು (ರೂಢಿ). (ಗ್ರಾ). ೨. ಹೆಚ್ಚಾದ: ಪೊಡವಿಯೊಳು ಇದು ಮೊದಲು ಚಡು [ ಡಿ ] ತಬಾಡಿಯನಾಡೆ ಬಾಡ ಮುಟ್ಟಿ ನಾಲಿಗೆಯ ಕೆಡಹಿ ಕೊಯ್ಯುವೆನು (ಕರಲೀ. ೩೫೩-೫).

[ ←ಮರಾ. ಚಢಣಾ ]

**ಚಡಿತ್ತ, ಛಡಿತ$_1$** (ನಾ). ಒಂದು ಬಗೆಯ ಸುಂಕ,-ತೆರಿಗೆ (?) ಭೂದಾನದರ್ವದ ತಾಂಮ್ರ ಶಾಸನ . . . ೧ ಉಭಯಂ ಗ ೩೫।೧ ಮೆಣಸಿನ ಚಡಿತ್ತದಿಂದಲೂ ಗ ೮೨॥ ಉಭಯಂ ಗ ೩೫।೩ (ಎಕ. VIII, ತೀರ್ಥಹ. ೫೮-೦೫ ; 1630); ಮೆಣಸಿನ ಚಡಿತ್ತಗರ ೨॥ ಉಭಯಂ ೧೫೬೧ (ಕ್ಯಾಆರಿ. ೧೯೩೩, ೨೮-೨೬ ; 1630). **ಛಡಿತ$_1$ :** ವಕಲ ಬಿರಾಡದಿಂದ ಗ ೧೦ ಭತ್ತ ಮೆಣಸಿನ ಛಡಿತ ಗ ೪ ಭತ್ತ ಸುಂಕದಿಂದ ಗ ೯ (ಎಕ. VIII, ತೀರ್ಥಹ. ೦೦೬-೦೯ ; 1702). [ ? ]

**ಚಡಿಫೌಜು** 'ಚಡೆಪವುಜು' ನೋ.

**ಚಡಿಬಾಣ** (ನಾ). ಒಂದು ಬಗೆಯ ಬಾಣ : ಬಾಣಕಾರರು ರಾಮಬಾಣ ಕುಮಾರಬಾಣ, ಚಡಿಬಾಣವೆಂಬ ನಾಲ್ಕಾರು ದಿನಸಿನ ಬಾಣಗಳನ್ನು ಎತ್ತುಗಳ ಮೇಲೆ ಹೇರಿಸಿಕೊಂಡು ಬಂದರು (ಚಿಕ್ಕರು. ೧೪). [ಚಡಿ? + ಬಾಣ$_2$]

**ಚಡಿಮರಿ** (ನಾ). [ವೀಶೈ] " ಸಮಾಜದ ಕಾರ್ಯಕ್ರಮ ಏರ್ಪಡಿಸುವ ವ್ಯವಸ್ಥಾಪಕನು, ಮಠಪತಿ " (ಕರಜಾ. ೨೪-೬).

[ ಚಡಿ? + ಮರಿ (<ಮಱ) ]

**ಚಡಿಯೇಟು** (ನಾ). ಬೆತ್ತದ ಏಟು,–ಹೊಡೆತ: ನಾನೊಮ್ಮೆ ಹಳ್ಳಿಯಲ್ಲಿ ರೈತನೊಬ್ಬನಿಗೆ ಚಡಿಯೇಟು ಬಾರಿಸುತ್ತಿದ್ದುದನ್ನು ನೋಡಿದೆ (ಪುನರು. ೨೦೯). [ ಚಡಿ$_2$ (<ಛಡಿ) + ಏಟು$_1$ ]

**ಚಡುಪಡನೆ** 'ಚಡಪಡನೆ' ನೋ.

**ಚಡುಪುಡನೆ** 'ಚಡಪಡನೆ' ನೋ.

**ಚಡುಹುಡನೆ** 'ಚಡಪಡನೆ' ನೋ.

**ಚಡೆಸವ್ವಜು, ಚಡಿಫೌಜು** (ನಾ). ಲಷ್ಕರೀಸಾಮಗ್ರಿಗಳ ಆಡಂಬರ ವಿಲ್ಲದೆ ಹೊರಟ ಸೈನ್ಯ; ಚಿಕ್ಕಪುಟ್ಟ ಆಯುಧಗಳನ್ನು ಮಾತ್ರ ತೆಗೆದುಕೊಂಡು ಯುದ್ಧಕ್ಕೆ ಹೊರಟಿರುವ ಸೈನ್ಯ: (+). **ಚಡಿಫೌಜು:** ಜನರಲ್ ಫ್ಲಾಯಿಡ್ ಸಾಹೇಬರವರು ಚಡಿಫೌಜು ತೆಗೆದುಕೊಂಡು ಬಂದು ಇದ್ದಾರೆ (ರಾಜೇಂದ್ರ. ೯೩). [←ಮರಾ. ಸಡೀಫೌಜ್]

**ಚಡೆಸವಾರಿ** (ನಾ). ಪರಿವಾರವಿಲ್ಲದೆ ಹೊರಟ ಸವಾರಿ; ಏಕಾಕಿಯಾಗಿ ಹೊರಟಿರುವುದು: ಏನು ನಸುಕಿನಲ್ಲಿಯೆ ಚಡೆಸವಾರಿ ಹೊರಟಿರಿ? (ಕೂಶಿ).
[ ←ಹಿಂ. ಛಡೀಸವಾರೀ; ಮರಾ. ಸಡೇಸ್ವಾರೀ ]

**ಚಡ್ಡಣ** 'ಚಡ್ಡಣೆ' ನೋ.

**ಚಡ್ಡಣಿಸು** (ಕ್ರಿ). ವಿಶಾಲವಾಗಿ ಕಟ್ಟು; ವಿಸ್ತಾರವಾಗಿ ಕಟ್ಟು: ಒಡ್ಡಿದರು ದಡಿವಲೆ ಸಿಡಿವಲೆ ಕಡ್ಡಿವಲೆ ಕಣವಲೆಯನಗಲಕೆ ಚಡ್ಡಣಿ[ಪಾಠಾಂ. ವಿ]ಸಿದರು ಬೀಸುವಲೆ ಬೆಳ್ಳಾರವಲೆಗಳಲಿ ಅಡ್ಡವಿಸಿ ಸೋಹಿದರು (ತೊರವೆ. ೩-೩-೦೨).
[ ಚಡ್ಡಣ (<ಚಡ್ಡಣೆ) + -ಇಸು$_2$ ]

**ಚಡ್ಡಣೆ, ಚಟ್ಟಳೆ$_1$, ಚಡ್ಡಣ** (ನಾ). ಅತಿಶಯ; ಆಧಿಕ್ಯ: ಉಪಹಾಸದ ನುಡಿಯ ವ್ಯಾಭುಲ್ಲಣೆಯ ರೋಮಾಂಚನದ ಚಡ್ಡಣೆಯ . . . ಚೌಪಟವಲ್ಲ ನಿದ್ದನು ರಿಪುಬಲವ ಲೆಕ್ಕಿಸದೆ ಕಲಿದ್ರೋಣ (ಕುವ್ಯಾದ್ರೋ. ೦೭-೩೩): ದಂಡೆ ಯೊಳಗೆದ ಕಾಳೋರಗನವೊಲು ಚಡ್ಡಣೆಯ ಚಪಳಕ್ರೋಧಶಿಖಿ ಮೋಹಿ ದುದು ಮೋಟ್‌ಯಲಿ (ಕುವ್ಯಾಳ. ೨೦-೯). **ಚಟ್ಟಳೆ$_1$:** ಚಟ್ಟಳೆಯ ಚತು ರಾಸ್ಯನಿವರೊಡಹುಟ್ಟಿದರ ಸಮಜೋಳಿ ಗಡ ಜಗಜಟ್ಟಿಗಳು ತಾವಿವರೆನುತ ಕಲೆದೂಗಿದನು ಮಗಧ (ಕುವ್ಯಾಸ. ೨-೮೩). **ಚಡ್ಡಣ:** ಕೋಟಿಕಾ ವನಮಧ್ಯದಲಿ . . . ಸಿಡಿಲಿನ ಚೀಟಿಕೆಯಚಡ್ಡಣದ ರವ ರಾಘವನ ಕಿವಿಗಳಿಗೆ(ತೊರವೆ. ೩-೦೨-೦೪).[ <ಪ್ರಾ. ಚಡಣ./ಹಿಂ. ಮರಾ. ಚಢನಾ ]

**ಚಡ್ಡಿ$_1$, ಚೆಡ್ಡಿ** (ನಾ). ೧. ಅರೆ ಚಲ್ಲಣ; ಚಣ್ಣ; ನಿಕ್ಕರು: ಚಡ್ಡಿಗಳ ತೊಟ್ಟು (ಸೌಗಂಧಿ. ೩೦-೪); ಚಡ್ಡಿಯ ಜೋಬಿನ ತುಂಬ ರೂಪಾಯಿಗಳು (ಬೆಳ್ಳಿ. ೦೦೩); ಉಂಡು ಏಳುವಾಗ ಒಂದು ಲಾಡನ್ನು ಅವನು ತನ್ನ ಚಡ್ಡಿಯ ಕಿಸೆಗೆ ತುರುಕಿಕೊಂಡನು (ಕಾಳಿಶ. ೬೨). ೨. ಗುಹ್ಯಭಾಗಗಳನ್ನು ಮಾತ್ರ ಮುಚ್ಚತಕ್ಕ ಬಿಗಿಯಾದ ಕಾಸೆ; ಕಾಚ; "ಸುತ್ತು ಲಂಗೋಟಿ" (ಜಾನಪೋ. ೩೪): ಹಿಂದು ಹುಡುಗರ ಸಂಗಡ ಚಡ್ಡಿಯನ್ನು ಹಾಕಿಕೊಂಡು ಈಜಲಿಕ್ಕೆಂದು ಹೋಗುತ್ತಿದ್ದಳು (ಧಂಸಂ. ೨೭). **ಚೆಡ್ಡಿ:** ೧. ಲಂಗ ಚೆಡ್ಡಿ ಹೊಲಿದು ತರುವೆ (ಳಪಹು. ೨-೩೮); ಅಗಸನಿಂದ ಬಂದ ಚೆಡ್ಡಿ ಷರಟಿನ ಅಲಂಕಾರ (ಮೂಗೆಸ.೨೪); ಪಂಚೆಯನ್ನು ಬಿಚ್ಚಿ ಕಳಚುವಂತೆ ಚೆಡ್ಡಿಯನ್ನು ಕಳಚಲಾದೀತೆ (ರಂಗಳ. ೨೮). [ ← ತೆಲು. ಚೆಡ್ಡಿ ]

**ಚಡ್ಡಿ$_2$** 'ಸಡ್ಡೆ$_2$' ನೋ.

**ಚಡ್ಡಿಸು** (ಕ್ರಿ). ಸಿದ್ಧವಾಗು; ಸಿದ್ಧಗೊಳ್ಳು: ಒಡ್ಡಿದ ಸಾರಿಯಂ ಶಿವಿವ ಕಯ್ಯೊಡನಿಕ್ಕುವ . . . ತಿದ್ದಿ ಕೊಳ್ಳೆನಲ್ ಚಡ್ಡಿಸಿ ನಿಲ್ವ ನೂತನ ದುರೋದರಕೇಳಿ ಪಳಾಳವಲ್ಲವೇ (ನಳಚಂ. ೬೩೭). [ ? ]

**ಚಡ್ಡೆ** 'ಸಡ್ಡೆ$_1$' ನೋ.

**ಚಡ್ಡೆಗೊಳ್** 'ಸಡ್ಡೆಗೊಳು' ನೋ.

**ಚಢ, ಛಡ** (ನಾ). ಏರಿಕೆ; ಮೇಲಕ್ಕೆ ಹತ್ತುವುದು. 'ಚಢಸವಾಲು' ಪರಾ. **ಛಡ:** 'ಛಡಸವಾಲು' ಪರಾ. [<ಪ್ರಾ. ಚಡ, ಚಢ ]

**ಚಢಸವಾಲು, ಛಡಸವಾಲು** (ನಾ). ಹರಾಜಿನಲ್ಲಿ ಏರಾಟದ ಬೇಡಿಕೆ; ಹರಾಜಿನಲ್ಲಿ ಹೆಚ್ಚಿನ ಬೆಲೆಗೆ ಸವಾಲು ಹಾಕುವುದು: ಚಢಸವಾಲಿಗೆ ನೀವೆಲ್ಲ ಏರಿರಬೇಕೆಂದು ದೇವರ ಕಡೆಯಿಂದ ನಾನು ಆಶೀರ್ವಾದ ಮಾಡು ತ್ತೇನೆ (ಗಂಗಾಳ. ೦೩೪). **ಛಡಸವಾಲು:** ರೈತರುಗಳ ಜಮೀನನ್ನು ತಮ್ಮವರ ಕಡೆಯಿಂದ ಛಡಸವಾಲು ಮಾಡಿಸಿ ಕೊಂಡುಕೊಳ್ಳುವುದು(ಳಂವ. ೨೩೩). [ ಚಢ + ಸವಾಲು ]

**ಚಢಾಯಿ** 'ಚಡಾಯಿ' ನೋ.

**ಚಢಾಳ** 'ಚಡಾಳ' ನೋ.

**ಚಢಾಳಿಸು** 'ಚಡಾಳಿಸು' ನೋ.

**ಚಣ$_1$** (ನಾ). ಕ್ಷಣ; ಸ್ವಲ್ಪಹೊತ್ತು: "ಕ್ಷಣಂ ಚಣ" (ಶಬ್ದಮಂ. ೧೪). "ಕ್ಷಣಕ್ಕೆ ಬಂದವುದು ಚಣವೆಂದು" (ಳಕರ. ೩೬); ಶಿವನು ಭವನುಂ ದೈವವಂ ಸೃಜಿಸುವನು ಚಣಮಾತ್ರದೊಳೆಲವೊ ಕೇಳಾ (ಬಸವು. ೩೦-೩೫); ಚಣದೆ ಶಾನ್ಯದುತ್ಸವಮಪ್ಪಳಿಸಿದನು ಸಹಭವನ (ರಾಮಾಸಂ. ೪-೧-೬೬); ಮಾವನ ಸ್ಥಿತಿಗತಿಯ ಬಗ್ಗೆ ಚಣವೂ ಯೋಚಿಸಿದವನಲ್ಲ (ಶದ್ಯಸ. ೨೦೭); ಸಾಧ್ವಿಯು ನಿಂದಳು ಚಣ ಮೈಮರೆಯುತಲಿ (ಳವಿಪೋ. ೩೭-೧೪).

**ಚಣಚಣ** (ದ್ವಿರುಕ್ತಿ): ಚಣಚಣವು ಹೊಸ ಹಸಿವು ಅದಾಗಿ ಇದಕಾಗಿ ಮತ್ತೊಂದಕಾಗಿ (ಪಂಚಾಳ. ೨೦೮); ಗೆಣೆಯನಾಡಿದ ಆಟ ಮನದಾಗ ಊರಿ ನಿಂತ್ಹಾಂಗ ಆ ಹುಡುಗಿ ಚಣಚಣಕ ನೆನಸಿ ಅಳತಾಳೊ (ಳನ್ನಜಾ. ೦೦೮). [ <ಸಂ. ಕ್ಷಣ ]

**ಚಣ$_2$** (ನಾ). ಸಾಮರ್ಥ್ಯ. 'ಅಕ್ಷರಚಣ' ಪರಾ. [ ಸಂ. ]

**ಚಣಾಂಗ** 'ಚಣಗೆ' ನೋ.

**ಚಣಾಂಗಿ** 'ಚಣಗೆ' ನೋ.

**ಚಣಕ$_1$** (ನಾ). ಅರ್ಧತೊಡೆಯವರೆಗೆ ಮಾತ್ರ ಇರುವ ಚಲ್ಲಣ; ಅರ್ಧೋರುಕ; ಚಡ್ಡಿ: "ಚಣಕಂ = ಚಲ್ಲಣಂ (ಅರ್ಧೋರುಕಂ)" (ಕಮಿರ. ಶಿ. ೨). "ಚಲ್ಲಣದಲ್ಲಿ ಮಾತು ಚಣಕಂ" (ಳಕಾಸಿ. ೨೭); ಶ್ರೀದ್ವಾರವೊಂದಕ್ಕೇ ತನ್ನ ಚಣಕವನ್ನು ಕಟ್ಟಿಸಿದ್ದನಂತೆ (ವಿಗಿಪ. ೪೩.೭).
[<ಸಂ. ಚಂಡಾತಕ ]

**ಚಣಕ$_2$** (ನಾ). ಒಂದು ಬಗೆಯ ದ್ವಿದಳ ಧಾನ್ಯ; ಕಡಲೆ; "ತಾಂ ಹರಿಮಂಥಂ ಚಣಕಾಖ್ಯಂ" (ಪಕ್ತೀಪೋ. ೯೪-೦೭); ಅಂತು ಕೊಂಡ ಪದವಟಿಗಳೊಳ್ . . . ಚಣಕ ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ (ಆದಿಪು. ೬-೬೨ ವ); ಕಣಕವುಂ . . . ವಿದಿದಾವಿಷದಾಕೃತಿಯಾಗಿ ಕೂಡಿಕೊಂಡೊಣಗಿಸಿದಿಂ ಬಟಿಕ್ಕೆ ಚಣಕೋದಕದಿಂ ತೆಗಪಿ (ಲೋಕೋಪ. ೮-೦೩); ಚಣಕಮುದ್ಗಮಾಷ ಗೋಧೂಮ ಶಾಲಿಯೆಲ್ಲ ಧಾನ್ಯಗಳ ಸಂಪತ್ತಿ (ಶಾಂತೀಶ. ೬.೦೩). [ ಸಂ. ]

**ಚಣಕಡಿಕ** (ನಾ). ಒಂದು ಕ್ಷಣದಲ್ಲಿ ಕತ್ತರಿಸಬಲ್ಲವನು, - ಕಡಿಯುವು ದರಲ್ಲಿ ನಿಪುಣನಾದವನು: ಚಣಕಡಿಕನ ಕಡುಗಮದೊರ್ಚಣಕೊಂಡ್ಯ ದಾರುಕೋಟಿ ಸಬವಂ ಕೆಡೆವೊಲ್ (ಪದಳಂ. ೯೧). [ಚಣ$_1$ + ಕಡಿಕ$_2$ ]

**ಚಣಕಾಲ** (ನಾ). ಒಂದು ಕ್ಷಣದಷ್ಟು ಸಮಯ; ಸ್ವಲ್ಪಹೊತ್ತು: ಚಣಕಾಲ ಮೈ ನಡುಗುತ್ತಿತ್ತು (ಮುಕುಳು. ೪೩); ಅಬ್ಬಕಬ್ಬೆ ಚಣಕಾಲ ಚಿಂತಾಕ್ರಾಂತಳಾದಳು (ದಾನಚಿಂ. ೩೮) [ ಚಣ$_1$ + ಕಾಲ ]

**ಚಣಕಿ** (ನಾ). ಚೌಡಿಕೆಯಂತಹ ಒಂದು ವಾದ್ಯ; ತುಣತುಣಿ: ಚಣಕಿ ನುಡಿಸುತ್ತಾ ಜೋಗಿ ಹಾಡತೊಡಗುವನು (ಕೂಶಿ). [←ಮರಾ. ಚಾಣಕೀ]

**ಚಣಕು** (ಕ್ರಿ). = ಚಲಂಕು ೨: ನೆರೆದು ಬಹ ಬಲಪರಾಕ್ರಮಗಳನು ಕಲಕಿ ಚಣಕಿದನದೇನು ಸಾಹಸಿಕನೆಂದಾರು ಬಣ್ಣಿಸಲಿಕ್ಕು ಮೋ (ಜಂಗಾರಾ. ೬-೦೩-೪). [ <ಚಲಂಕು ]

**ಚಣಕೆ** (ನಾ). ೧. ಹೋಳುಮಾಡುವ ಸಾಧನ (?): ಉದರ ಸೀಳುವುತ್ತರಂ ಸಂಘ್ರ ಹಸ್ತ ಕತ್ತರಿಸು ಹೋಳಿಸಗು ಶಿರವರಿದೆನದಗಿದಗೆಂದು ಹೆಣಗಿದರ್ ಚಣಕೆಯಂತೆ (ಚಿನಮು. ೨೯-೩೭); ಸೇನೆ ಸಹಿತಭ್ರರಾಜೇಂದ್ರರುಂ ಚಣಕೆಗಳ್ ಲೂನಿಸುತ ಮಾನಿಸದೆ ಲೀನಿಸುತಲಂಗಮರಿದೂನಿಸುತ . . . ಕರುಳ್ಳಚ್ಚಿ ಚಲಿವಿಲಿನೆ ಪರಿದು (ಚಿನಮು. ೩೦-೪೩). ೨. ಚೂರು; ಚಕ್ಕೆ (?): ಕಣೆಯಾ ಕಣ್ಮನಕಣೆಯಗೊಡದಿಹ ವಿಣಾಗು ವಿಂಚಿನ ಚಣಕೆಗಳೊ ಸಂದಣಿಯ ಮಿಾನ್ನಳೊ (ಚಿರಾಮಾ. ೨೩೦-೪೬). [ ? ]

**ಚಣಗ** ‘ಚಣಗೆ’ ನೋ.

**ಚಣಗಿ** ‘ಚಣಗೆ’ ನೋ.

**ಚಣಗೆ, ಚಣಾಗ, ಚಣಂಗಿ, ಚಣಗ, ಚಣಾಗಿ, ಚಣೆಗಿ, ಚನ್ನಂಗಿ₁, ಚಾಣಂಗಿ** (ನಾ). ಕಡಲೆ : “ಮಾಂಗಲ್ಯಕಃ,ಮಸೂರಃ – ಈ ೨ ಚಣಗೆ” (ಹಲಾಯು. ೯೩-೪೨೬). **ಚಣಂಗ :** “ಜಲಧಂಗಂ ವಿರಹಂ ಕಮಂಡಲು ಚಣಂಗಂ ಕೋರಕಾವಲ್ಲಿಯುತ್ಕಲಿಕಾಖ್ಯಂ” (ನಾನಾರ. ೦೦೩). **ಚಣಂಗಿ :** “ಚಣಂಗಿ ಖಂಡಿಕಮನಲು ಕಡಲೆ” (ಮಂಗರಾ. ೦೦೦-೪). **ಚಣಗ:** ಅರಸಿನ ಜೀರಿಗೆ ಸಿದ್ಧಾರ್ಥ ಮೆಂಥೆಯು ಕರಿಯು ಹೆಸಱು ಎಳ್ಳು ಚಣಗ ಹರಿಮಂಥ ತೊಗರಿ ಕಲ್ಲುಪ್ಪು ಲವಂಗವು (ಜ್ಞಾ.ಸ.ಜ. ೩೬-೦೦೨). **ಚಣಗಿ :** ಅದಿಮಾರ್ಗತ್ರಯಮುಂ ಪೂವಿನೆಸಳುಂ ಚಣಗಿಯುಂ ಜವೆಯ ಸುಳಿಯುಂ ಯಥಾಕ್ರಮದಿನಾಕಾರಂಗಳುಂ ಚಕ್ಷುರಿಂದ್ರಿಯಕ್ಕೆ (ತತ್ತ್ವಾರ್ಥ. ೪೦); ಗೋದುವೆ ಚಣಗಿ ಹೆಸಱುದ್ದುಗಳನದಕಿದರು (ಪ್ರಭುಲಿ. ೨೩-೩೬); ಹೇಮನಗದ ಬಣ್ಣದೊಳೆಸೆವ ತೊಗರಿ ಶೋಭನ ಕೋಯ ಬಗೆವತ್ತ ಚಣಗಿ ಬೇಳೆಯ ಪರಿಪಿನಂ . . . ಕಲಸುತುಂಬುದು (ಲಿಂಗಪು. ೮-೨೩). **ಚಣೆಗಿ :** ವಟಾಣಿ ಧಾನ್ಯವೆಂದರೆ ಚಣೆಗಿ ಲಿಂಕಿ ಬಟ್ಟಗಡಲೆ ಕರಿಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತಬೇಕು (ಕೃಷಿಶಾ. ೮೦). **ಚನ್ನಂಗಿ₁:** ಬಟ್ಟಗಡ್ಲೆ ಚನ್ನಂಗಿ ತೊಗರಿ ಅವರಿ ಪುಂಡಿ ಸಾಸಿವೆ ಈ ಧಾನ್ಯಗಳಲ್ಲಿ ತಮಗೆ ಬೇಕಾದವುಗಳನ್ನು ಅಕ್ಕಡಿಯಿಂದ ಬಿತ್ತುತ್ತಾರೆ (ಮುಂಬಯಿ. ೩-೨೦೦); ಜೋಳ, ಬಟಗಡ್ಲೆ, ಚನ್ನಂಗಿ, ಅವರಿ ಸ್ವಲ್ಪಸ್ವಲ್ಪ ಬೆಳೆಯುತ್ತವೆ (ಧಾರವಾ. ೯). ಉದ್ದು, ಚನ್ನಂಗಿ . . . ಸೆರೆ-ಇವೆಲ್ಲಾ ರಾಜಸ ಆಹಾರದಲ್ಲಿ ಬರುವವು (ಬ್ರಹ್ಮಶೀ. ೦೩). **ಚಾಣಂಗಿ :** ಚಾಣಂಗಿ ಬೇಳೆಯ ಹಾಗೆ ಸರ್ವಾಂಗಗಳಲ್ಲಿಯೂ ಸ್ಫೋಟಕಗಳುಂಟಾಗಿಹವು (ವೈದ್ಯಸಾ. I, ೩೬೯).
[ <ಸಂ. ಚಣಕ ]

**ಚಣಪುಟ** (ನಾ). ಸ್ತನಾಗ್ರ ; ಚೂಚುಕ (?) : ಪೊಣರ್ವಕ್ಕಿ ಬಸಿರಕೊಳ ದಿಂದಣೆಯುರವೆಯ್ತಂದು ರಂಜಿಪುವೆಂಬಾ ಅಣಕಮನಾಂತುದು ಸತಿಯರ ಚಣಪುಟ ನೀರಂಧ್ರ ಬಂಧುರ ಸ್ತನಯುಗಳಂ (ಚಂದ್ರಪ್ರ. ೦೯-೨೩). [ ? ]

**ಚಣಯಿಗೆ** (ನಾ).=ಚಣಗೆ (?) : ದ್ರವ್ಯೇಂದ್ರಿಯಂ ನಿವೃತ್ತಿಯುಮುಪಕರಣ ಮುಮೆಂದಿತ್ತೆಱನೆಂತೆನೆ ಚಕ್ಷುವಿಂಗೆ ಚಣಯಿಗೆಯಾಕಾರಂ ಶ್ರೋತ್ರಕ್ಕೆ ಯುವೆಯುವೆಯ ಸುಳಿಯಾಕಾರಂ (ಪಚಾರ. ೧೯೬-೦). [ ? ]

**ಚಣಾರ್ಧ** (ನಾ). ಅರ್ಧಕ್ಷಣ ; ಕ್ಷಣಾರ್ಧ ; ಸ್ವಲ್ಪಕಾಲ: ಹಿರಿಯ ಅಧಿಕಾರಿಗಳನ್ನು ಒಲಿಸಿಕೊಳ್ಳುವುದರಲ್ಲಿ ಧರಮ ಹೆಗ್ಗಡೆ ತನ್ನ ಆತ್ಮಗೌರವ ವನ್ನೂ ಮರೆಯಬಲ್ಲವನು,ಎಂಬುದು ಅವನಿಗೆ ಚಣಾರ್ಧದಲ್ಲಿ ಹೊಳೆಯಿತು (ಸವತಿ. ೬೮). [ <ಸಂ. ಕ್ಷಣಾರ್ಧ ]

**ಚಣೆಗಿ** ‘ಚಣಗೆ’ ನೋ.

**ಚಣೆನ** (ನಾ). (ಕರಾ). ಅಳಿಲು ; ಇಣಚಿ.
[ ←ತುಳು. ಚಣಿಲ್, ಚನಿಲ್ ]

**ಚಣ್ಣ** ‘ಚಲ್ಲಣ’ ನೋ.

**ಚತು** (ನಾ). ಒಂದು ಸಂಖ್ಯೆ ; ನಾಲ್ಕು : “ಚೌ ಚತು ಸಮುದ್ರ . . . ಜಳರಾಶಿಯೆಂದು ನಾಲ್ಕಱ ನಾಮಂ” (ಶಬ್ದಸಾ. ೯-೪); ವೇದ ಚತು ವೇದಾಂಗ ಷಡುವಿಧ (ಗಗಕಾ. ೩-೦೦). [ <ಸಂ. ಚತುರ್ ]

**ಚತುಃಕಷಾಯ** ‘ಚತುಷ್ಕಷಾಯಂ’ ನೋ.

**ಚತುಃಕಷಾಯಿ** (ನಾ). [ಜೈನ] ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳನ್ನುಳ್ಳವನು : ಕಷಾಯಾನು ವಾದದಿಂ ಚತುಃಕಷಾಯಿಗಳ್ಗಂ ಅಕಷಾಯಿಗಳ್ಗಂ ಸಾಮಾನ್ಯೋಕ್ತಸ್ಪರ್ಶನಂ (ತತ್ತ್ವಪ್ರ. ೨೯). [ ಸಂ. ಚತುಃಕಷಾಯಿನ್ ]

**ಚತುಃಪದಿ** ‘ಚತುಷ್ಪದಿ’ ನೋ.

**ಚತುರ₁** (ನಾ). ಒಂದಂ ಸಂಖ್ಯೆ; ನಾಲ್ಕು: ದಿವ್, ಸ್ರಜ್, ಚತುರ್ . . . ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರಜ, ಚತುರ ಎಂಬಂತತ್ವಮಾ ದೊಡಂ (ಶಮದ. ೫೬ ಪ್ರಯೋ). [ ಸಂ. ಚತುರ್ ]

**ಚತುರ₂** (ಗು). ೧. ಜಾಣತನವುಳ್ಳ ; ಕುಶಲ : ಸಹಜಕವಿ ಚತುರಕವಿ ನಿಃಸಹಾಯ ಕವಿ(ಸುಕುಮಾ. ೧-೩೨); ಭಾರತೀಪತಿ ಚತುರ ಪರಿಮಿತೋದಾರ ಗಂಭೀರ ಭಾಷಿತಂಗಳಿಂ ಬಿನ್ನಪಂಗೆಯ್ಯೆ (ಜಗವಿ. ೬-೬೬ ವ) ಇಂ ಬಿಲ್ಲೆ ಗಳನ್ನೂ ಗುಂಡುಗಳನ್ನೂ ಚತುರ ರೀತಿಯಲ್ಲಿ ಜೋಡಿಸುವುದು (ಶಿಕ್ಷಣ. ೮೪). ೨. ಚಟುವಟಿಕೆಯುಳ್ಳ ; ಲಗುಬಗೆಯ. (ನಾ). ೩. ದಕ್ಷ ನಾದವನು; ಬಲ್ಲವನು; ಜಾಣ: “ಚತುರಃ . . . ಶಿಕ್ಷಿತಃ, ಪ್ರವೀಣಃ- ಈ ೧೧ ಬಲ್ಲವಂ” (ಹಲಾಯು. ೩೩-೦೮೦); “ಚದುರಂ ಚತುರಂ” (ಕವಿಶಂ. ೨೩೬): ಚತುರರೆರ್ದೆಯಿಂದವಿಟ್ಟ ಅಯಳ್ . . . ತನ್ನೀ ಕೃತಿಕಾಂತೆ (ರೀಲಾವ. ೦-೮೦) ; ಚತುರಂ ನೀಱನುದಾರನುಜ್ವಲಯಶಂ (ಅನಂತಪು. ೧-೩೦). ೪. [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ; ಎಡಗೈಯನ್ನು ಅಲ ಪಲ್ಲವ ಹಸ್ತದಲ್ಲೂ ಬಲಗೈಯನ್ನು ಚತುರ ಹಸ್ತದಲ್ಲೂ ಎದೆಯ ಹತ್ತಿರ ಹಿಡಿದು ಒಂದು ಕಾಲಿನಿಂದ ಉದ್ಘಟ್ಟಿತ ಮಾಡುವುದು : ಎಡಗಯ್ಯಲಪಲ್ಲವ[ಮು]ಂ ಪಡೆದೆರ್ದೆಯಲ್ಲಿರ್ದು ಬಲದ ಕೈ ಚತುರಾಖ್ಯಮ ನೊಡರ್ಚುತ್ತಲ್ಲುದ್ಘಟ್ಟವಾದೊಡವೆರ್ಚರೆ ಪಾದಮೊಂದು ಕರಣಂ ಚತುರಂ (ಶಾಸ್ತ್ರರಂ. ೪-೯೪). ೫. [ನಾಟ್ಯ] ಒಂದು ಬಗೆಯ ಹಸ್ತಮುದ್ರೆ; ಅಸಂಯುತ ಹಸ್ತಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ – ೧. ಪತಾಕ . . . ೧೭. ಚತುರ . . . ೨೪. ತಾಮ್ರಚೂಡ (ಅಭಾನ್ಯ. ೪೮). [ ಸಂ. ]

**ಚತುರಂಗ** (ನಾ). ೧. ನಾಲ್ಕು ಅಂಗಗಳನ್ನುಳ್ಳುದು: ಆ ಧ್ಯಾನಯೋಗಂ . . . ಧ್ಯಾನಂ ಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಂ (ಅಜಿತಪು. ೮-೨೮ ವ). ೨. ನಾಲ್ಕು ಅಂಗಗಳನ್ನುಳ್ಳ ಸೈನ್ಯ; ಆನೆ, ಕುದುರೆ, ರಥ, ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯದಿಂದ ಕೂಡಿದುದು : ಚತುರಂಗಂ ಚತುರಂಗ ಸೈನ್ಯದೊಳಡು[ರ್ತ]ತಿಬ್ಬನೆಯ್ತಂದು ತಾಗಿ (ಪಂಪಭಾ. ೧೧-೬) : ಚತುರಂಗಕ್ಕೆಡರಿಲ್ಲ ರಾಯ ನಿನಗೇನು ಮಾಡುವ ರಾಜಕಾರ್ಯವೆಂದಂ (ಜೈಮಿಭಾ. ೨-೫೪). ‘ಚತುರಂಗಬಲ’ ಪರಾ. ೩. ಚದುರಂಗದ ಆಟ: ಚತುರಂಗ . . . ಕಂತುಕ ದ್ಯೂತಾದಿ ಖೇಲನಗಳಿಂ (ವಿವೇಕ. ೨೦೪). [ ಸಂ. ( ಚತುರ್ + ಅಂಗ) ]

**ಚತುರಂಗದಂಡಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು : ಮುಖ್ಯವಾದ ಕೆಲವು ಆಸನಗಳು ೧. ಉತ್ತಾನಾಸನ. ೨. ಚತುರಂಗ ದಂಡಾಸನ (ಭಾರದ. ೧೬೬). [ ಚತುರಂಗ + ದಂಡ + ಆಸನ ]

**ಚತುರಂಗಬಲ** (ನಾ). ಆನೆ, ಕುದುರೆ, ರಥ ಮತ್ತು ಕಾಲಾಳು ಎಂಬ ನಾಲ್ಕು ಅಂಗಳನ್ನುಳ್ಳ ಸೈನ್ಯ : ಚತುರಂಗಬಲ ಸಮನ್ವಿತರ್ . . . ಅವನತರಾದರ್ ಚಕ್ರಿಗಳ್ಗೆ (ಆದಿಪು. ೦೨-೩೩); ಬೆಂಗೊಟ್ಟುದು ದಶಮುಖ ಚತುರಂಗಬಲಂ (ಪಂಪರಾಮಾ. ೦೦-೨೦೬). [ ಚತುರಂಗ + ಬಲ ]

**ಚತುರಂಗುಲ, ಚತುರಂಗುಳ** (ನಾ). ೧. ನಾಲ್ಕು ಅಂಗುಲ: ಚತುರಂಗುಲ ಪ್ರಮಾಣೋದ್ಧೃತ ಋದ್ಧಿ ಪ್ರಾಪ್ತರ್ . . . ಕುಂದಾಚಾರ್ಯರ್ (ಸುಕುಮಾ. ೧-೦೩): ಚತುರಂಗುಲ ಚಾರಣ ಋದ್ಧಿ ತಮಗೆ ಸಮನಿಸಿದುದು (ಪಂಪರಾಮಾ. ೧-೦೨). **ಚತುರಂಗುಳ:** ೨. ಒಂದು ಬಗೆಯ ಸಸ್ಯ ; ಕಕ್ಕೆ ಗಿಡ: “ಶಮ್ಯಾಕಃ, ಚತುರಂಗುಳಃ . . . ೮ ಕಕ್ಕೇಗಿಡದ ಹೆಸರುಗಳು” (ಸಿದ್ಧಾಂತಿ. ೧೦೩): ಸರ್ವಾಂಗೀಣ ಸಾಂದ್ರ ಹರಿದ್ರಾ ವಿಲೇಪನ ವಿಲಿಪ್ತ ಹರಿ ತಾಲಿ ಪಂಕಪಿಂಗಲ ಶಿಲಾಸ್ತಂಭ ವಿಭ್ರಮ ನಿತಂಬ ಶಿಖರ ತರಂಗಿತ ಚತುರಂಗುಳಾಗ್ರ:ಪಲ್ಲವ ನಿವಸನಂ (ಆದಿಪು. ೦೩-೪೩ ವ).
[ ಸಂ. (ಚತುರ್ + ಅಂಗುಲ) ]

**ಚತುರಂಗುಳ** 'ಚತುರಂಗುಲ' ನೋ.

**ಚತುರಂತ** (ಗು). ೧. ನಾಲ್ಕು ಎಲ್ಲೆಗಳನ್ನುಳ್ಳ; ನಾಲ್ಕುದಿಕ್ಕಿನ ಸಮುದ್ರಗಳೇ ಮೇರೆಯಾದ: ಇಂತು ಚತುರಂತ ಧಾತ್ರೀಕಾಂತೆಯ ನಳವಡಿಸಿ (ಎಕ. VII, ಶಿಕಾರಿ. ೦೩೬-೩ : 1068). (ನಾ). ೨. ಪಲ್ಲಕ್ಕಿ; ಅಂದಣ. 'ಚತುರಂತಯಾನ' ಪರಾ. [ಸಂ (ಚತುರ್ + ಅಂತ)]

**ಚತುರಂತಕ್ಷಿತಿ** (ನಾ). ನಾಲ್ಕು ಎಲ್ಲೆಗಳನ್ನುಳ್ಳ ಭೂಮಿ; ನಾಲ್ಕು ಸಮುದ್ರದವರೆಗೆ ಹಬ್ಬಿರುವ ಭೂಮಿ: ಚತುರಂತಕ್ಷಿತಿ ಗರ್ಭಸ್ಥಿತನದು ಗಡಿಮೆಂದು ಮುದ್ರಿವಂತಾಯ್ತು ಯಶಸ್ಸತಿಯ ಪದನ್ಯಾಸಂ (ಆದಿಪು. ೮-೩೨); ಚತುರಂತಕ್ಷಿತಿಕಾಂತೆ ಕೀಳ್ ಜಲಧಿ ಕೀಳ್ ಸಪ್ತಾರ್ಚಿ ಕೀಳ್ . . . ಪೆರ್ಚಿವನಂ ಕೊಂದೆನ್ನ ಕೋಪಾಗ್ನಿಗಾಹುತಿಯಂ ಮಾಳ್ಪೆಂ (ಗದಾಯು. ೬-೨೩); ಚತುರಂತಕ್ಷಿತಿಭಾರವಂ ತಳೆಯಲಾಂ ಸಾರ್ದಿದರ್ಭೂಡಂ (ಚಂದ್ರಪು. ೪-೦೩). [ಚತುರಂತ + ಕ್ಷಿತಿ]

**ಚತುರಂತಯಾನ** (ನಾ). ಪಲ್ಲಕ್ಕಿ; ಅಂದಣ: ಕನ್ನೆಯಂ ನೆರೆಯೆ ಕೈಗೆಯ್ಸಲ್ಕೇಟ್ಟು ಮನುಷ್ಯವಾಹ್ಯಮಪ್ಪ ಚತುರಂತಯಾನವನೇಱಿಸಿ (ಶಾಂತಿಪು. ೪-೯೦ ವ); ಕೇಳು ನೃಪ ಚತುರಂತಯಾನದ ಮೇಲೆ ಕುಳ್ಳಿದ್ದು ಭಯ ಚಾಮರ ಢಾಳಿಸಲು ಶಶಿಯಂತೆ ಧವಳಛತ್ರ ಥಳಥಳಿಸೆ (ತಿಮ್ಮಭ. ೪-೯೪). [ಚತುರಂತ + ಯಾನ]

**ಚತುರಕಳ್ಳಿ** 'ಚದರಗಳ್ಳಿ' ನೋ.

**ಚತುರಚೂಡಾಮಣಿ** (ನಾ). ಬುದ್ಧಿವಂತರಲ್ಲಿ ಶ್ರೇಷ್ಠನಾದವನು; ಶ್ರೇಷ್ಠಜ್ಞಾನಿ: ಮಣಿಕೂಟಮೆಂಬ ಶೈಲಾಗ್ರಣಿ ಕಣ್ಣೊಲವಾಯ್ತು ಚತುರಚೂಡಾಮಣಿಯ (ಚಂದ್ರಪು. ೦೫-೩೦). [ಚತುರ+ಚೂಡಾಮಣಿ]

**ಚತುರಣ** (ಗು). ಚೌಕಾಕಾರವಾದ: ಸಂಕಿಯನ ಹೇಳಯನು ಮಾಕಲ ಕಾಯಕನ ಮಗ ಚವಯ ನಾಯಕಂಗೆ ಚತುರಣ ಸೀಮೆಯೊಳಗಾಗಿ ಕೊಟ ಪೂಡೆಗೊಡಗಿಯ ಕ್ರಮವೆಂತೆಂದಡೆ (ಎಕ. XVI, ತುಮಕೂ. ೮೩-೦೯; ?). [<ಸಂ. ಚತುರ್ಣ]

**ಚತುರತನ** (ನಾ). ಚಾತುರ್ಯ; ಕುಶಲತೆ; ಬುದ್ಧಿವಂತಿಕೆ: ಚತುರತನದಲಿ ನುಡಿದ ನುಡಿಗಳ ಸಚಿಗೆ ಮರುಳಾದವನು (ಕೌಶಿರಾ. ೧೯-೭). [ಚತುರ + – ತನ]

**ಚತುರತರ** (ಗು). ಬಹಳ ಚಾತುರ್ಯವುಳ್ಳ: ಸಭಾಸದರೆಲ್ಲರ್ ಮೆಚ್ಚೆ ಚತುರತರ ಚತುರ್ವಿಧ ನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಶಬಶ. ೦-೭೯ ವ). [ಸಂ.]

**ಚತುರತೆ** (ನಾ). = ಚತುರತನ: ಜಗತ್ಕಾಂತ ವಚಶ್ಚತುರತೆಯೆಂದಿಂತಿವು ಭಾವಿಸುವೊಡಗ್ಗಳಂಗೆ ನಿಸರ್ಗಂ (ಚಂದ್ರಪು. ೧-೩೪); ಚತುರತೆಯಂ ಕೀರ್ತಿಸುವೊಡಮತಿ ಶ್ರುತಾವಧಿ ವಿಬೋಧವೊಪ್ಪುವುದವು (ಶಾಕ್ತಿಪು. ೦೩-೮); ಪರಿಮಿತಾಕ್ಷರಶತಿಯೊಳಪರಿಮಿತಾರ್ಥ ರಚನೆಯಲಿ ವಿರಚಿಸುವುದದು ಕವಿಯ ಚತುರತೆ (ಬಸಪು. ೦-೨೨); ನುತ ಸೊಬಗು . . . ಸೌಭಾಗ್ಯದ ಸುಲಕ್ಷಣದಲಿ ಸುಶೀಲದಲಿ ಚತುರತೆಯೊಳನುನಯದಿ ಲೋಕದ ಸತಿಯರನು ಗೆಲಿದುದು (ಜೀವಂಧ. ೨-೩೪). [ಸಂ. ಚತುರತಾ]

**ಚತುರತ್ವ** (ನಾ).=ಚತುರತನ: ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಅಂಜಾಪ. ೧೬೮-೭೯). [ಸಂ.]

**ಚತುರಧಿಪತಿ** (ನಾ). ೧. ನಾಲ್ಕು ವಿಭಾಗಗಳ ಅಥವಾ ಜಿಲ್ಲೆಗಳ ಒಡೆಯ,-ಅಧಿಕಾರಿ. ೨. ಚತುರಂಗ ಸೇನೆಯ ಅಧಿಪತಿ. [ಸಂ. (ಚತುರ್ + ಅಧಿಪತಿ)]

**ಚತುರಭಾವ** (ನಾ). ಚಾತುರ್ಯ; ನೈಪುಣ್ಯ: ಕುಟಿಳ ನೀಳ ಕುಂತಳ ಕಲಾಪೆಯರ ಚತುರಭಾವಕ್ಕೆ ತಾವಮುಂ ಸೋಲ್ತು (ಶಾಂತಿಪು. ೮-೩೦ ವ). [ಚತುರ೩ + ಭಾವ೩]

**ಚತುರವೃತ್ತಿ** (ನಾ). ಜಾಣತನ; ಚಾತುರ್ಯ: ರತಿಪನಿತೆಗೆ ವಿಧವತೆಯಂ ಶ್ರುತದೇವಿಗೆ ಚತುರವೃತ್ತಿಯಂ ಮಾಳ್ಪ ತಪಶ್ಶ್ರುತಮೆರಡುಂ ನಿರುಪಮಮಾ ಕ್ಷಿತಿಯೊಳ್ ಶ್ರುತಕೀರ್ತಿದೇವ ಭಟ್ಟಾರಕರ (ಚಂದ್ರಪು. ೦-೩೫). [ಚತುರ೩ + ವೃತ್ತಿ]

**ಚತುರಶೀತಿ** (ನಾ). ಎಂಬತ್ತುನಾಲ್ಕು: ಅಂಭೋದನಿನಾದಂ ಭದ್ರಮನಂ ಮನೋಜವಂ ಲಕ್ಷಪ್ರಮಿತಂ (ಆದಿಪು. ೦೦-೨೯); ಚತುರಶೀತಿ ಸಹಸ್ರ ಯೋಜನೋತ್ಸೇಧದೊಳ್ ಕಾಳೋದಕ ಸಮುದ್ರವಿರ್ದುದು (ಅಜಿಪು. ೦೦-೦೩ ವ). [ಸಂ. (ಚತುರ್ + ಅಶೀತಿ)]

**ಚತುರಶ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ. ೨. ಕ್ರಮಬದ್ಧವಾದ; ಅಚ್ಚುಕಟ್ಟಾದ. ೩. ಒಪ್ಪುವಂತಹ; ಹಿತವಾದ. (ನಾ). ೪. ಚೌಕವಾದುದು; 'ಚೌಕಾಕಾರವಾದುದಂ: ಪಂಚರತ್ನ ಹಿರಣ್ಮಯಂ ಚತುರಶ್ರಂ ಮೂಱುಂ ಯೋಜನದಳವಿಯ ಸಭಾಮಂಟಪಮಂ . . . ತಂದು ಮುಂದಿಟ್ಟು (ಪಂಪಭಾ. ೬-೨೨); ಶಶಿಹಾಸನಭವನರಸಿಯ ಮುಂದೆ ಚತುರಶ್ರದೊಳ್ಕುಂಡಮಂ ತೆಗಸಿ (ಕ್ರಮಿಥಾ. ೩೦-೬೬). ೫. ಮೇರೆ; ಎಲ್ಲೆ; ಸೀಮೆ: ವಿಚಿತ್ರವಾದ ಬುದ್ಧಿಗೆ ಸುಖದುಃಖಗಳ ಚತುರಶ್ರವನ್ನು ತಿಳಿಯಲು ಸಾಮರ್ಥ್ಯವಿರುವುದರಿಂದ (ಕಾಂಪೂಹ. ೪೭). ೬. [ಸಂಗೀತ] ಒಂದು ಬಗೆಯ ತಾಳ: ಚಂಚತ್ಪುಟ . . . ಚತುರಶ್ರ . . . ಜಯಾಳ ಮೆಂಬಿವು ಮೊದಲಾದ ನೂಱಿಂಟುತಾಳಂಗಳುಂ (ವಿವೇಕ. ೨೩೪); (೧) ತ್ರಿಶ್ರ (೨) ಚತುರಶ್ರ . . . (೫) ಸಂಕೀರ್ಣ ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ (ಸಂಗೀತಂ. ೩೬). [ಸಂ. (ಚತುರ್ + ಅಶ್ರ)]

**ಚತುರಸ, ಚದುರಸ** (ನಾ). ಚೌಕೋನ: ಚತು[ಪಾಠಾಂ. ದು]ರಸದೊಳಗಣ ನಿಲವ ಕಾಣಬೇಕು (ಅಮೇಶ. ೦೨೯-೩೮೬). **ಚದುರಸ:** ವಿರೂಪಾಕ್ಷದೇವರ ಕೆಯಿಂ ಮೂಡಲಾ ಗಡಿಂಬದಿಂ ಕೆನ್ನೆಲ ಚದುರಸ ಮತ್ತ ೧ (ಸೌಇಇ. IX-1, ೨೨೩-೯೨ : 1149); ಎಂಟರಳತೆ ಹದಿನಾಱಱ ಚದುರಸವ ಮೂವತ್ತೆರಡಱ ಮಧ್ಯದಲ್ಲಿ ಹಸ್ತ ಕಂಬಿಯನಿಕ್ಕಿ ಮೂಱಱಲ್ಲಿ ಭಾಗಿಸಲಾಗಿ ಎರಡು ಒಳಗು ನಿಂದಿತ್ತು (ಸರ್ವಪ. ೦೦೯-೬೦೬); ದೆಲ್ಲಕ್ಕೆ ಚದುರಸ [ಪಾಠಾಂ. ಚದುರರಸ] ವಲ್ಲದೆ ಸಿಹಿಗೆ ಚದುರಸ[ಪಾಠಾಂ. ಚದುರರಸ]ಉಂಟೆ (ಅಂಬಿವ. ೩೯೦-೯೯). [<ಸಂ. ಚತುರಸ್ರ]

**ಚತುರಸ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ: ಚತುರಸ್ರಾಷ್ಟಾಸ್ರವೃತ್ತೋದರ ಕುಮುದ ಕಪೋತಾಂಸಕಂಠಗಳಾಲಂಬಿತ ಘಂಟಾಚಾಮರೋಜ್ಜೃಂಭಿತಮಣಿಫಳಕಂಗಳ್ (ಅಜಿಪು. ೦೦-೨೮). ೨. ಕ್ರಮಬದ್ಧವಾದ; ಅಚ್ಚುಕಟ್ಟಾದ. (ನಾ). ೩. ನಾಲ್ಕು ಮೂಲೆಗಳನ್ನು ಉಳ್ಳುದು; ಚೌಕೋನ; ಚೌಕ: ಚತುರಸ್ರಾಶ್ವತ್ಥದಳಪ್ರತಿಮರುಚಿಸ್ವಗಿತಮಣಿವರಾಂಗಂ ಶುಭಂ (ಲೋಕೋಪ. ೦೦-೩೩); ಬಳಿಕ ದೇವಿಯ ಮುಂದೆ ಚತುರಸ್ರದಲ್ಲಿ ಅವನು ಕುಂಡವನ್ನು ತೆಗೆಸಿದ (ಕಿರುಕ. ೦೮೩); ಶಿವಲಿಂಗ ಲಕ್ಷಣವನ್ನು . . . ಆಯಾಯ ಲಿಂಗಗಳಿಗೆ ಆಧಾರವಾಗಿರುವ ಚತುರಸ್ರ, ಅಷ್ಟಾಸ್ರ, ವೃತ್ತಪೀಠಗಳಿಂದ ತಿಳಿಯಬಹುದಾಗಿದೆ (ಭಾರತ. ೬೯). ೪. [ಜ್ಯೋತಿ] ಲಗ್ನದಿಂದ ನಾಲ್ಕನೆಯ ಹಾಗು ಎಂಟನೆಯ ರಾಶಿಗಳು: ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ (ಜಾತತಿ. ೦-೩೪). ೫. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು: ಪಾದಗಳಿಗೆ ಒಂದೂವರೆ ಗೇಣು ಅಂತರವಿರುವಂತೆ ನಂದ್ಯಾವರ್ತ ಸ್ಥಾನಕಗಳಲ್ಲಿ ನಿಂತುಕೊಳ್ಳುವುದು: ಉರು ನಂದ್ಯಾವರ್ತದೆ ಸಂದಿರು ತೊಗ್ಗೇಣರೆಯನುಳಿದು ನಿಲೆ ಚತುರಸ್ರಂ (ಶಾಸ್ತ್ರರಂ. ೭-೩೯). ೬. ಒಂದು ಬಗೆಯ ಹಸ್ತಮುದ್ರೆ: ಮೂವತ್ತು ನೃತ್ತ ಹಸ್ತಗಳಲ್ಲಿ

ಒಂದು: ಒದವಿದ ಕಟಕಾಮುಖಮೆರಡರ್ದೆಗಿದಿರಾಗೆಂಟು ಬೆರಲ ತೆಱಂ ನಿಂದಿರ್ದದೆ ಭುಜಕೆ ಸಮದಿನಿರೆ ಕೇಳ್ ಚದುರೇ ಚತುರಸ್ರಹಸ್ತಮೆಂದೆನಿಸಿರ್ಕುಂ (ರಾಸ್ತರಂ. ೨-೯೩) ; ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು ೧. ಚತುರಸ್ರ ೨. ಉದ್ವೃತ್ತ . . . ೩೦. ವಲಿತ (ಅಭಿನ್ನ. ೪೯).
[ ಸಂ. (ಚತುರ್ + ಅಸ್ರ) ]

**ಚತುರಸ್ರಂಬೆಱು** (ಕ್ರಿ). ನಾಲ್ಕು ಮೂಲೆಗಳನ್ನು ಪಡೆ ; ಚೌಕವಾಗು : ಚತುರಸ್ರಂಬೆತ್ತ ವೇತ್ರಾಸನವೊಲಿದುಮಿರ್ಕುಂ (ಶಾಂತೀಶ್ವ. ೦-೬೬).
[ ಚತುರಸ್ರ + ಪೆಱು₁ ]

**ಚತುರಾಂತರ** (ನಾ). ಚೌಕದ ಮಧ್ಯಭಾಗ : ಆದ್ರ್ಯಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ ಮುತ್ತಿನ ಚೌಕದ ನಡುವಣ . . . ದುಗುಲದ ಪಸೆಯೊಳ್ (ಶಂಖಧಾ. ೩-೭೪ ವ); "ಹಸೆಯ ಜಗುಲಿ" (ಶಂಖದೀ. ೦೨೪). [ ಸಂ. (ಚತುರ್ + ಅಂತರ) ]

**ಚತುರಾಕ್ಷ** (ನಾ). ಜಾಣತನವೇ ಕಣ್ಣಾಗಿರುವವನು ; ಕುರುಡ ; ಭಾನುವಿನ ಭಾರಣೆಯ ಪೋಲುತ್ತಾನ ಮುಖ ಚತುರಾಕ್ಷ [ಪಾಠಾಂ. ಚತುರಾಂಧ] ಭೂಪನ ಸೂನು ಹೊಕ್ಕನು ರಂಗವನು ಭೀಷ್ಮಾದಿಗಳಿಗೆಱಗಿ (ಕುಮ್ಮಾಭ. ೭-೨೭). [ ಸಂ. (ಚತುರ + ಅಕ್ಷಿ + -) ]

**ಚತುರಾಘಾಟ** (ನಾ). ನಾಲ್ಕು ಎಲ್ಲೆ,-ಗಡಿ,-ಮೇರೆ : ಸರ್ವಬಾಧಾಪರಿಹಾರವಾಗಿ ಬಿಟ್ಟ ಮತ್ತನ್ನೂರ್ಅಯ್ವತ್ತರ್ದಱ ಚತುರಾಘಾಟದ ಸೀಮೆ ಯಾವುದೆಂದಡೆ (ಸೌಇಇ. XX, ೦೫-೩೭; 980) ; ರಾಮನಾಥದೇವರ ಭೂಮಿಯಿಂ ಪಡುವಲು ಚತುರಾಘಾಟ ಲಿಂಗಮುದ್ರೆಯ ಕಲ್ಲಿನ ಸೀಮೆಯಿಂದೊಳಗೆ (ಕಇ. IV, ೦-೦೦೦ ; 1204).
[ ಸಂ. (ಚತುರ್ + ಆಘಾಟ ) ]

**ಚತುರಾತ್ಮ** (ನಾ). ೧. ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ವಾಸುದೇವ ಎಂಬ ನಾಲ್ಕು ರೂಪಗಳನ್ನುಳ್ಳವನು. ೨. ಚುರುಕುಬುದ್ಧಿಯುಳ್ಳವನು ; ಕೌಶಲವನ್ನುಳ್ಳವನು ; ಜಾಣ. ೧, ೨ : ಹರಿಯೆಂಬಾತೆಯ ಕೃಷ್ಣನದಾವನೊ ಚತುರಾತ್ಮನು ಸಲೆ ನಿಷ್ಕ್ರಿಯನು (ಭ್ರನ್ನಾಕೀ. ೪೬).
[ ಸಂ. ಚತುರಾತ್ಮನ್ (ಚತುರ್ + ಆತ್ಮನ್ ; ಚತುರ + ಆತ್ಮನ್) ]

**ಚತುರಾನನ** (ನಾ). ೧. ನಾಲ್ಕು ಮುಖಗಳನ್ನುಳ್ಳವನಂ ; ಬ್ರಹ್ಮ : ಚತುರಾನನನಂ ಬಡಿಸದರತಿಶಯಿತಾರ್ಥಮನೆ ತೋಱು ಪದಿಂ (ಪುಪ್ಪಪು. ೦-೩೭) ; ಘನರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ (ಕುಮ್ಮಾಸ. ೯-೩). ೨. ಚಾತುರ್ಯದಿಂದ ಕೂಡಿದ ಬಾಯಿ ಉಳ್ಳವನಂ; ಮಾತಿನಲ್ಲಿ ನಿಪುಣ : ಆ ಸರಸತಿಯಂ ಚತುರಾನನಪರಿಚಿತೆಯನಿಸಿಪನದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨): ಅಬ್ಜಭವನಂತೆ ಚತುರಾನನಂ . . . ಎಂದು ಧರ್ಮಾಜನ ಧರೆ ಪೊಗಳುತಿರೆ (ಕೃಮಿಭಾ. ೨-೦೩) . ೩. ಒಬ್ಬ ಕನ್ನಡ ನಿಘಂಟುಕಾರನ ಹೆಸರು; ಚತುರಾಸ್ಯ ಬೊಮ್ಮರಸ: ಕವಿ ಚತುರಾನನನೆಂದೆನಿಸುವ ನಾಮದೆ . . . ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩). [ ಸಂ. (ಚತುರ್+ಆನನ; ಚತುರ+ಆನನ) ]

**ಚತುರಾಶಿಗಿಡ**(ನಾ). ಒಂದು ಬಗೆಯ ಸಸ್ಯ: ಕಾಡು ಸಬ್ಬಸಿಗೆ, ಚತುರಾಶಿಗಿಡ (ಮೃಶಿಗಿ. ೩೮-೭೬೩). 'ಚೇತರಾಶಿ' ಪರಾ.
[ ಚತುರಾಶಿ₂ + ಗಿಡ (<ಗಿಡು) ]

**ಚತುರಾಶ್ರಮ** (ನಾ). ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸವೆಂಬ ನಾಲ್ಕು ಬಗೆಯ ಆಶ್ರಮಗಳು : ಚಾತುರ್ವರ್ಣ್ಯದ ಕರ್ತವ್ಯಗಳು, ಚತುರಾಶ್ರಮದ ಕರ್ತವ್ಯಗಳು . . . ಉಕ್ತವಾಗಿವೆ (ಭಾರರ. ೬೩). [ ಸಂ. (ಚತುರ್ + ಆಶ್ರಮ) ]

**ಚತುರಾಶ್ರಯ** (ನಾ). ನಾಲ್ಕು ಮೇರೆ,-ಎಲ್ಲೆ : ಶ್ರೀಮನು ಮಹಾಮಹಿಮ ಕಪಿಲಸಿದ್ಧಮಲ್ಲೇಶ್ವರ ದೇವರ ಕ್ಷೇತ್ರದ ಚತುರಾಶ್ರಯದ ನಾಲ್ಕುಂ ದೆಸೆಯ ಪೆಳೆಯದೊಳಗೆ (ಎಇ. XXIII, ೦೯೩-೪೮ ; 1266).
[ ಸಂ. (ಚತುರ್ + ಆಶ್ರಯ) ]

**ಚತುರಾಸೀತಿ** (ನಾ).=ಚತುರಶೀತಿ: ಪೆರ್ಮಾಟ್ಟಿ ಪಟುಘೋಷಣಾಂ ಚತುರಾಸೀತಿ ನಗರಾಧಿಷ್ಠಿತಂ (ಸೌಇಇ. XX, ೪೧-೬ ; 1068).
[ <ಸಂ. ಚತುರಶೀತಿ ]

**ಚತುರಾಸ್ಯ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : ಚತುರಾಸ್ಯಂಗಂ ನೆಗಟ್ಟಿಹಪತಿಗಮುಳಂಬಂ (ಆನಾಶಿ. ೭-೭) ; ಚತುರಾಸ್ಯೇಂದ್ರಾದಿ ದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರುದ್ವೃತ್ತತೆಯಂ ಪೇಳ್ದೊಡೆ (ಜಗವಿ.೨-೪೪). ೨ ಸುಂದರವಾದ ಮುಖವುಳ್ಳವನು. ೩. ಜಾಣ್ಮೆಯ ಮಾತನ್ನಾಡುವವನು ; ವಾಕ್ಚತುರ. ೧, ೨, ೩ : ಈ ಮಹಾಪುರುಷಂ . . . ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ಲ (ಜಗವಿ. ೮-೦೦ ವ). ೨, ೩ : ಆ ಜಿನೇಶ್ವರಂ . . . ಚತುರಾಸ್ಯನುಮುಮ್ಭಾಯನುಮಕ್ಷಿಸ್ಪಂದವ್ಯಪೇತನುಂ . . . ಗಗನಗಮನನುಮಾಗಿ (ಪುಸುಮಾ. ೮-೭೯ ವ) ; ಚತುರಾಸ್ಯನತುಳ ಮತಿಯಿಂ . . . ನೆಗಟ್ಟಂ ಚತುರ್ಗುಣಂ ಸಕಳ ರಾಜನೀತಿಯೊಳ್ (ಪಾರ್ಶ್ವಪು. ೭-೪೮). ೪. = ಚತುರಾನನ ೩ : ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩).
[ ಸಂ. (ಚತುರ್ + ಆಸ್ಯ; ಚತುರ + ಆಸ್ಯ) ]

**ಚತುರಾಸ್ಯತೆ** (ನಾ). [ಜೈನ] ಕೇವಲಜ್ಞಾನಿಯಾದವನಿಗೆ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು ; ಒಮ್ಮೆಲೆ ನಾಲ್ಕು ಕಡೆಯೂ ನೋಡುವ ಶಕ್ತಿ : ಚತುರ ಚತುರಾಸ್ಯತೆ . . . ಗತಚ್ಛಾಯತೆಯ ಪೀರ್ಕೆದತಿಶಯವು ಜಿನನ (ಸಾಳ್ವಭಾ. ೭೦-೭೪). [ ಸಂ. ಚತುರಾಸ್ಯತಾ ]

**ಚತುರಾಸ್ಯತ್ವ** (ನಾ).=ಚತುರಾಸ್ಯತೆ : ಚತುರಾಸ್ಯತ್ವಮಭುಕ್ತಿಭಾವಮನಿಮೇಷತ್ವಂ . . . ಅಚ್ಛಾಯತೆಯೆಂಬ ಪತ್ತತಿಶಯಂ ತೀರ್ಥೇಶನೊಳ್ ಶೋಭಿಕುಂ (ಚಂದ್ರಪು. ೦೩-೦೦೩). [ ಸಂ. ]

**ಚತುರಾಸ್ಯಪ್ರಿಯೆ** (ನಾ). ಸರಸ್ವತಿ : ಪುಸ್ತಕಹಸ್ತಾನ್ವಿತೆ ಪುಣ್ಯಕಥೆಯನೊರ್ವಳೆ ಚತುರಾಸ್ಯಪ್ರಿಯೆ ಸುರಾಗದಿಂ ವಾಚಿಸಿದಳ್ (ಪುಷ್ಪಪು. ೯-೮೬).
[ ಚತುರಾಸ್ಯ + ಪ್ರಿಯೆ ]

**ಚತುರಿಂದ್ರಿಯ** (ನಾ). ೧. ನಾಲ್ಕು ಬಗೆಯ ಇಂದ್ರಿಯಗಳು ; ಕಣ್ಣು, ಮೂಗು, ನಾಲಗೆ ಮತ್ತು ಚರ್ಮ. ೨. (ಕಿವಿಯನ್ನುಳಿದು) ನಾಲ್ಕು ಇಂದ್ರಿಯಗಳನ್ನು ಮಾತ್ರ ಹೊಂದಿರುವ ಜೀವಿ : ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್ (ಆದಿಪು. ೦೫-೬೦ವ); ದಂಶಮಶಕ ಮಕ್ಷಿಕಾ ಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪರಿಚ್ಛಿತ್ತ್ಯಪೇತಂಗಳಪ್ಪುವು (ಕತ್ತ್ವಪು. ೯೮). [ ಸಂ. (ಚತುರ್ + ಇಂದ್ರಿಯ) ]

**ಚತುರಿಕೆ₁** (ನಾ). ಚಾತುರ್ಯ ; ಚದುರು ; ನೈಪುಣ್ಯ : ತತವಿತತಘನ ಸುಸಿರ ವಾದ್ಯದ ಚತುರಿಕೆಗೆ . . . ನಲಿದು ನರ್ತಿಪುದು (ಸಾಳ್ವಭಾ. ೭೦-೩೦); ಅಧವನಂ ಜಱಿವ ಚತುರಿಕೆಯ ಮಾತುಗಳನು ಸೊಲ್ಲುಸೊಲ್ಲೆಂದು ಮೂದಲಿಸುತಂ (ಅಲಲು. ೩೩-೨೨). [ ಚತುರ₂ + - ಇಕೆ ]

**ಚತುರಿಕೆ₂** (ನಾ). ೧. ಚತುರೆಯಾದವಳು ; ಜಾಣೆ. ೨. [ಕಾವ್ಯಮೀ] ನಾಯಿಕೆಯ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಬ್ಬಳು : ಇತ್ತ ಚತುರ ಚತುರಿಕೆಯರಪ್ಪ ಪರಿಚಾರಕಿಯರುಂ . . . ಮಂಗಳಪಸದನಂಗೊಳಿಸಲವಸರಂಬಡೆದು (ಪುಷ್ಪಪು. ೮-೩೩ ವ) ; ಅಭಿಸಾರಿಕೆ, ಚತುರಿಕೆ, ಸಹಸಂಚಾರಿಕೆ, ದೂತಿಕೆಯರೆಂಬ ಚತುರ್ವಿಧ ಸಖಿಯರಿಂ (ವಿವೇಕ. ೨೨೯).
[ ಸಂ. ಚತುರಿಕಾ ]

**ಚತುರುಪಧಾವಿಶುದ್ಧ** (ಗು). ೧. ಧರ್ಮ, ಅರ್ಥ, ಕಾಮ, ಭಯ ಈ ನಾಲ್ಕು ವಿಷಯಗಳಲ್ಲಿ ಮಾಡಿದ ಪರೀಕ್ಷೆಗಳಿಂದ ಪರಿಶುದ್ಧನೆಂದು ನಿರ್ಣಯಿಸಲ್ಪಟ್ಟ : ಚತುರುಪಧಾವಿಶುದ್ಧಮತಿಚಿತ್ರಭವ ಪ್ರತಿರೂಪ ಸುಂದರಾಕೃತಿ . . . ಬಸವಯ್ಯನಾಯಕನೊಳೆಯ್ದೆ ಜಗನ್ನುತಿವೆತ್ತು ಕೋಳುಗುಂ (ಎಕ. XI, ದಾವಣ. ೪೨-೪೩ : ಶು. 1162) : "ರಾಜಭಕ್ತಿ, ಅಸ್ವಾರ್ಥಪರತೆ, ಜಿತೇಂದ್ರಿಯತ್ವ, ಧೈರ್ಯ-ಈ ಗುಣಗಳಲ್ಲಿ ಪರೀಕ್ಷಿತವಾಗಿ ಶುದ್ಧವಾಗಿರುವ" (ಕಾಶಕುಂ. ೬೮೧ ಟಿಪ್ಪಣಿ). (ನಾ). ೨. ಮೇಲಿನ ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟವನು : ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ . . . ಭದ್ರಮೂರ್ತಿಯುಮಪ್ಪ ವಸುಭಾಗಭಟ್ಟನಿಂತೆಂದಂ (ಪಂಚತಂ. ೦೬-೦೩) : ಚತುರುಪಧಾವಿಶುದ್ಧನನವದ್ಯಚರಿತಂ . . . ನೃಪನೇಂ ವಿವೇಕಿಯೋ (ಪುಷ್ಪಪು. ೩-೬೩) : ಚತುರುಪಧಾವಿಶುದ್ಧನಧಿಕಾರಿ ಕಳಾವಿದಂ (ಸುಕುಮಾ. ೧೬-೫೪).

[ ಸಂ. (ಚತುರ್ + ಉಪಧಾ + ವಿಶುದ್ಧ) ]

**ಚತುರುಪಧಾಶುದ್ಧಿ** (ನಾ). ಧರ್ಮ, ಅರ್ಥ, ಕಾಮ, ಭಯಂಗಳೆಂಬ ನಾಲ್ಕು ಬಗೆಯ ಗುಣಗಳಲ್ಲಿ ಪರೀಕ್ಷಿತನಾಗಿ ಶುದ್ಧಿಹೊಂದುವಿಕೆ : ವಿದಿತಂ ಪಂಚಾಂಗಮಂತ್ರಸ್ಥಿತಿ ಚತುರುಪಧಾಶುದ್ಧಿ ಸಿದ್ಧಿತ್ರಯಾಸಂಪದಮಾ ಷಾಡ್ಗುಣ್ಯವೃತ್ತಂ (ಚಂದ್ರಪು. ೯-೦೦೬).

[ ಸಂ. (ಚತುರ್ + ಉಪಧಾ + ಶುದ್ಧಿ) ]

**ಚತುರುಪಾಯ** (ನಾ). (ಕಾರ್ಯಸಾಧನೆಗೆ ಪ್ರಯೋಗಿಸಲಾಗುವ) ನಾಲ್ಕು ಬಗೆಯ ಉಪಾಯಗಳು; ಸಾಮ, ದಾನ, ಭೇದ, ದಂಡ: ವಿದಿತಂ . . . ಚತುರ ಚತುರುಪಾಯಪ್ರಯೋಗಂ (ಚಂದ್ರಪು. ೯-೦೦೬).

[ ಸಂ. (ಚತುರ್ + ಉಪಾಯ) ]

**ಚತುರೋಕ್ತಿ** (ನಾ). ಚಾತುರ್ಯದ ಮಾತು; ಚಮತ್ಕಾರಪೂರ್ಣವಾದ ಮಾತು : ಸ್ತುತಿಗೆಯ್ವಂ . . . ಚತುರೋಕ್ತಿ ಪ್ರಚುರಾರ್ಥ ಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗನ್ನಾ. ೦-೮) ; ನಾಗರಿಕನುಕ್ತಿಗೆ ಚತುರೋಕ್ತಿ ಚತುರ್ಮುಖಂ ಮೆಚ್ಚುತ್ತುಂ ಪೋಗೆ (ಚಂದ್ರಪು. ೬-೭೨ ವ).

[ ಚತುರ್ + ಉಕ್ತಿ ]

**ಚತುರೋಪಾಯ** (ನಾ). ೧. = ಚತುರುಪಾಯ: "ಕೊಟ್ಟು ಕೊಳ್ವುದು ದಾನಮೆನಿಸಿಕ್ಕು ವೈರಮಂ ಪುಟ್ಟಿಸಲು ಭೇದಮೆನಿಸಿಕ್ಕು ಶಿಕ್ಷಿಸಲೊಡಂಬಟ್ಟೊಡದು ದಂಡಮೆನಿಸಿಕ್ಕು ಸೈರಣೆ ಸಾಮಮಕ್ಕು ಕಾವಿಂತಿವೆಯ್ದೆ ಮುಟ್ಟೆ ಚತುರೋಪಾಯಮಕ್ಕುಂ" (ಮಂಗರಾ. ೭೯-೬) ; ಉಗ್ರಪಂಚಾನನಂ ಗೆಲ್ವ ಚತುರೋಪಾಯಮಂ ಬಿಟ್ಟು ಕಾನಳ್ಕಿ ಬಳ್ಕಿ ಕಡುದೈನ್ಯದಿಂದೀಗ ಮುಗ್ಧಾಂಗಮಂ ತಳೆದಿರ್ಪುದು ಎನಿದಚ್ಚರಿಯೆಂದು (ಕೃಮಿಥಾ. ೬-೨೮). ೨. ನಾಲ್ಕು ಬಗೆಯ ಉಪಾಯಗಳನ್ನು ಬಲ್ಲವನು : ಸುರಪುರನಿಲಯ ಚೆನ್ನಿಗರಾಯ ಚತುರೋಪಾಯ ರಕ್ಷಿಸು ಎಮ್ಮನನವರತ (ಹರಿಸಾ. ೦). [ <ಸಂ. ಚತುರುಪಾಯ ]

**ಚತುರ್ಗತಿ** (ನಾ). ೧. ನಾಲ್ಕುಗತಿ ; ನಾಲ್ಕು ಅವಸ್ಥೆ. ೨. [ಜೈನ] ದೇವ, ಮನುಷ್ಯ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳು: ತಪಃಪೋತದಿನಣ್ಣ ನೀಂ ತಡಿಯನೆಯ್ದಂತಲ್ಲದಿಂತೀ ಚತುರ್ಗತಿ ಸಂಸಾರ ಪಯೋಧಿಯಂ ಪೊಱಮಡಲ್ ಮತ್ತಿಲ್ಲ ನೀನಾರ್ತಪಯ್ (ಆದಿಪು. ೩-೫೬) : ಇನ್ನೆವರಂ ಚತುರ್ಗತಿಗಳೊಳ್ತಿರಿತಂದು ಜವಂಗೆ ಪೇಡಿಯಾದೆಂ (ಮಲ್ಲಿಪು. ೧೩-೯೨). [ ಸಂ. (ಚತುರ್ + ಗತಿ) ]

**ಚತುರ್ಗುಣ** (ನಾ). ೧. ನಾಲ್ಕುಮಡಿ,-ಪಟ್ಟು. 'ದ್ವಿಗುಣ' ಪರಾ. ೨. [ದ್ವೈತ] ಸತ್, ಚಿತ್, ಆನಂದ, ಆತ್ಮ ಎಂಬ ಭಗವಂತನ ನಾಲ್ಕು ಗುಣಗಳು. 'ಚತುರ್ಗುಣೋಪಾಸಕ' ಪರಾ.

[ ಸಂ. (ಚತುರ್ + ಗುಣ) ]

**ಚತುರ್ಗುಣಿತ** (ಗು). ನಾಲ್ಕರಿಂದ ಗುಣಿಸಿದ ; ನಾಲ್ಮಡಿಯಾದ : ಆ ಸಂಕಟಸಮಯದಲ್ಲೂ ಅವನು ದ್ವಿಗುಣಿತ ಚತುರ್ಗುಣಿತ ಬಲಿಷ್ಠನಾದನು (ಅಂದಿಕ. ೦೦೫). [ ಸಂ. (ಚತುರ್ + ಗುಣಿತ) ]

**ಚತುರ್ಗುಣೋಪಾಸಕ** (ನಾ). [ದ್ವೈತ] ಭಗವಂತನ ನಾಲ್ಕು ಗುಣಗಳನ್ನು ಉಪಾಸನೆ ಮಾಡುವವನು : ಮನುಷ್ಯೋತ್ತಮರು ಚತುರ್ಗುಣೋಪಾಸಕರು (ಹಿಂದಸಾ. ೨೯೦).

[ ಚತುರ್ಗುಣ + ಉಪಾಸಕ ]

**ಚತುರ್ಗ್ರಾಮ** (ನಾ). ನಾಲ್ಕು ಹಳ್ಳಿಗಳು ; ಚೌಗಾವೆ.

[ ಸಂ. (ಚತುರ್ + ಗ್ರಾಮ) ]

**ಚತುರ್ಜಾತಕ** (ನಾ). [ವೈದ್ಯ] ದಾಲ್ಚಿನ್ನಿ, ಏಲಕ್ಕಿ, ನಾಗಕೇಸರಿ, ಜಾಪತ್ರೆ ಎಂಬ ನಾಲ್ಕು ಔಷಧಿದ್ರವ್ಯಗಳು : ೨ ಹಲಹಿಪ್ಪಲಿ. ತವಕ್ಷೀರ ೪ ಹಲ, ಚತುರ್ಜಾತಕ ೧ ಹಲ ಜೇನುತುಪ್ಪ ೬ ಹಲ ಸಹ ಹಾಕಿ ಕಲಸಿ ಸೇವಿಸಲು ಕ್ಷಯವ್ಯಾಧಿ . . . ಗುಣಮಕ್ಕು (ಶಕವೈ. ೨೫೮). [ ಸಂ. ]

**ಚತುರ್ಜ್ಞಾನ** (ನಾ). [ಜೈನ] ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಾಯಂಗಳೆಂಬ ನಾಲ್ಕು ಬಗೆಯ ಜ್ಞಾನಗಳು : ಅಂತೊಗೆದ ಚತುರ್ಜ್ಞಾನದೊಳಾವಗಮೆಸೆದು ಜ್ಞಾನರೂಪನಾದಿಬ್ರಹ್ಮಂ (ಆದಿಪು. ೯-೮೮); ದೇದೀಪ್ಯಮಾನ ಪ್ರಭಾಭಾಸುರಗಾತ್ರಂ ಚತುರ್ಜ್ಞಾನನೇತ್ರರಂ . . . ಕಂತು (ಸುಕುಮಾ. ೮-೪೮ ವ). [ ಸಂ. (ಚತುರ್ + ಜ್ಞಾನ) ]

**ಚತುರ್ನಿಕಾಯ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ಸಮೂಹ : ಅಮರಪತಿ ಚತುರ್ನಿಕಾಯಾಮರೇಂದ್ರಪರಿವೃತಂ ಬಂದು (ಮಲ್ಲಿಪು. ೦೩-೦೬೫). [ <ಸಂ. ಚತುರ್ನಿಕಾಯ ]

**ಚತುರ್ಥ** (ಗು). ೧. ನಾಲ್ಕನೆಯ. 'ಚತುರ್ಥಾಂಶ' ಪರಾ. (ನಾ). ೨. ನಾಲ್ಕನೆಯ ವರ್ಣಕ್ಕೆ ಸೇರಿದವನು ; ಶೂದ್ರ : ಈ ಕೆಱೆಗೆ ಸಂಸ್ಕಾರ ಜಲಶುದ್ಧಿ ದೊರಕದು ಚತುರ್ಥನಿದನಗೆದಾತಂ (ಸಿದ್ಧರಾ. ೪-೬೨).

[ ಸಂ. ]

**ಚತುರ್ಥಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು ; ಶುಕ್ಲಧ್ಯಾನ : ಧ್ಯಾನಾನಳದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ (ಆದಿಪು. ೦೬-೭೪ ವ).

[ ಚತುರ್ಥ + ಧ್ಯಾನ ]

**ಚತುರ್ಥಸ್ನಾನ** (ನಾ). ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ : ಮರುದೇವಿ ಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮ ದುಕೂಲವಸನೆಯುಂ . . . ಆಗಿ (ಆದಿಪು. ೭-೨೬ ವ) ; ದೇವಕಿದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ ಮಂಗಳ ಪ್ರಸಾಧನಮನಪ್ಪುಕೆಯ್ದು (ಜಗನ್ನಾ. ೨-೫೯). 'ನಾಲ್ನೀರ್' ಪರಾ.

[ ಚತುರ್ಥ + ಸ್ನಾನ ]

**ಚತುರ್ಥಾಂಶ** (ನಾ). ನಾಲ್ಕನೆಯ ಒಂದು ಭಾಗ ; ಕಾಲುಭಾಗ : ನಕ್ಷತ್ರತಾರಾಗಣಕ್ಕೆಯುತ್ಕೃಷ್ಟದಿಂ ಪಲ್ಯೋಪಮ ಚತುರ್ಥಾಂಶಂ ಜಘನ್ಯದಿಂ ಪಲ್ಯೋಪಮಾಷ್ಟಮ ಭಾಗಮಕ್ಕುಂ (ಸುಕುಮಾ. ೦೦-೫೯ ವ).

[ ಚತುರ್ಥ + ಅಂಶ ]

**ಚತುರ್ಥಿ** (ನಾ). ೧. ಚಾಂದ್ರಮಾನ ಮಾಸದ ಒಂದು ಪಕ್ಷದಲ್ಲಿ ನಾಲ್ಕನೆಯ ತಿಥಿ ; ಚೌತಿ : ಷಷ್ಠಿ ಅಷ್ಟಮಿ ನವಮಿ ಪಾಡ್ಯ ಚತುರ್ಥಿ ಪೌರ್ಣಮಿ ಅಮಾವಾಸ್ಯೆ ಈಸು ತಿಥಿಗಳು ಅಶುಭ (ಗಗಶಾ. ೪-೬೬). ೨. [ವ್ಯಾಕ] ನಾಮ ವಿಭಕ್ತಿಗಳಲ್ಲಿ ನಾಲ್ಕನೆಯದು : ನಿನಗೆ ಯೆನಗೆ ತನಗೆಯೆಂಬೀ ನುಡಿ ಚತುರ್ಥಿಯೊಳ್ (ಶಾಬ್ದಸ. ೦೫೨) : ನುತಸಂಪ್ರದಾನ ರೂಢಂ ಚತುರ್ಥಿ (ಶಮದ. ೦೨೯). [ ಸಂ. ಚತುರ್ಥೀ ]

**ಚತುರ್ದಂಡಿ** (ನಾ). [ಸಂಗೀತ] ನಾಲ್ಕು ಬಗೆಯ ಸಂಗೀತ ರಚನೆಗಳು : ಗೀತ, ಆಲಾಪ, ಠಾಯ ಮತ್ತು ಪ್ರಬಂಧ ಎಂದು ನಾಲ್ಕು ವಿಧ ರಚನೆಗಳನ್ನು ತಿಳಿಸಿ ಇವನ್ನು 'ಚತುರ್ದಂಡಿ' ಎಂದು ವೆಂಕಟಮಖಿ ಕರೆದಿದ್ದಾನೆ (ಸಂಗೀತಸಂ. ೬೦). [ ಸಂ. ಚತುರ್ದಂಡೀ ]

**ಚತುರ್ದಂತ** (ನಾ). ೧. ನಾಲ್ಕು ಹಲ್ಲು : ಗಳ್ದನಂಗರುಚಿಯಿಂದ್ಯ ರಾವಣನುಂ ಕುಮಾರಚೂಡಾಮಣಿ ಲಾಲಾಜಲದೊಳಂ ಚತುರ್ದಂತದೊಳಂ (ಶಂರಾಮಾ. ೩-೧೩೦). ೨. ನಾಲ್ಕು ಕೋರೆಗಳನ್ನುಳ್ಳುದು ; ಐರಾವತ : ಲಲಿತಾಂಗುಲಿ ಭಾಸುರಭದ್ರ ಲಕ್ಷಣಾಲಂಕೃತಂ ಚತುರ್ದಂತಂ (ಅಜಿಪು. ೮-೩೬). [ ಸಂ. (ಚತುರ್ + ದಂತ) ]

**ಚತುರ್ದಶ** (ಗು). ೧. ಹದಿನಾಲ್ಕನೆಯ. (ನಾ). ೨. ಹದಿನಾಲ್ಕು : ವೃಷಭಾದ್ರಿಗಳಿಂದಂ ಚತುರ್ದಶ ಮಹಾಸ್ವಪ್ನಗಳಿಂದಮೆಸೆದು (ಆದಿಪು. ೦-೪೪ ವ). [ ಸಂ. ಚತುರ್ದಶನ್ (ಚತುರ್ + ದಶನ್) ]

**ಚತುರ್ದಶಧರೆ** (ನಾ). = ಚತುರ್ದಶಲೋಕ : ಜೀವಾಂತರಾತ್ಮ ಪರಮಾತ್ಮ ಚೇತನರೂಪ ಪಾವನ. ಚತುರ್ದಶಧರಾಜನಾಧೀಶ (ವಿಶ್ವಕು. ೪-೪-೨). [ ಚತುರ್ದಶ + ಧರೆ ]

**ಚತುರ್ದಶಪದಿ** (ನಾ). [ಛಂದ] ಹದಿನಾಲ್ಕು ಚರಣಗಳನ್ನುಳ್ಳ ಒಂದು ಬಗೆಯ ಪದ್ಯ ; ಸುನೀತ ; ಇಂಗ್ಲಿಷಿನ ಸಾನೆಟ್‌ರೂಪದ ಪದ್ಯ : ಈವರೆಗೆ ಕೆಲಕೆಲವು ಭಾವಗೀತಗಳನ್ನೂ ಚತುರ್ದಶಪದಿಗಳನ್ನೂ . . . ರಚಿಸಿಲ್ಲದುದರಿಂದ (ಹಕ್ಕಿ. ಇ. ಮುನ್ನುಡಿ) [ ಸಂ. ಚತುರ್ದಶಪದೀ ]

**ಚತುರ್ದಶಪೂರ್ವ** (ನಾ). [ಜೈನ] ಶ್ರುತಾಂಗಗಳ ವಿವರಣೆಗಳನ್ನು ಕೊಡುವ – ಉತ್ಪಾದ, ಅಗ್ರಾಯಣೀಯ, ವೀರ್ಯಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯ, ಕ್ರಿಯಾವಿಶಾಲ, ಲೋಕಬಿಂದುಸಾರ ಎಂಬ ಹದಿನಾಲ್ಕು ಪೂರ್ವಗ್ರಂಥಗಳು : ಗುರುವಿನನುಮತದಿಂ ದ್ವಾದಶಾಂಗ ಚತುರ್ದಶಪೂರ್ವಂಗಳಂ ಕಲ್ತು (ಆದಿಪು. ೦೪-೦೩೯ ವ) : ದ್ವಾದಶಾಂಗ ಚತುರ್ದಶಪೂರ್ವಮಂ . . . ಕಲ್ತು (ಶಾಂತಿಪು. ೯-೦೦೩ ವ). [ ಚತುರ್ದಶ + ಪೂರ್ವ ]

**ಚತುರ್ದಶಭುವನ** (ನಾ). = ಚತುರ್ದಶಲೋಕ : ಈ ಚತುರ್ದಶಭುವನಮೆ ಬೆಲೆಯನಿಪ ಕೃತಿಯನಮಲಾಕೃತಿಯುಂ (ಅರ್ಧನೇ. ೦-೪೬) ; ಇಕ್ಷ್ವಾಕು ವಂಶದೊಳಗಣ ಚತುರ್ದಶ ಭುವನಪತಿಗಳೊಳಗಿಂದುತನಕಾಣನಗೆಯಾ ಹುಟ್ಟಿ ಹೊದ್ದದವರಿಲ್ಲ (ಹರಿಶ್ಚ. ೨-೬) ; ಏಕಾಂತರಾಮನನಂತತೇಜೋಮಹಿಮೆಯದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ಬಸವ. ೫೨-೪೩) : ಈ ಕಾಳಿಗ ಚತುರ್ದಶಭುವನಜನ ಸಂಕ್ಷೋಭವಾಯ್ತೆಂದ (ಕುಮಾರ. ೨೨-೧೧) [ ಚತುರ್ದಶ + ಭುವನ ]

**ಚತುರ್ದಶಮನು** (ನಾ). ೧. ಸ್ವಾಯಂಭುವ, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಎಂಬ ಹದಿನಾಲ್ಕು ಜನ ಮನುಗಳು. ೨. [ಜೈನ] ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ ಎಂಬ ಹದಿನಾಲ್ಕು ಮನುಗಳು : ಅಜ್ಞಾನತ್ರಯರಹಿತರ್ . . . ಅಧಿಕಪ್ರಜ್ಞರ್ ಪುಟ್ಟುವರೀ ನೆಲನಾಡಜ್ಞಾಮುದ್ರಿತಮೆನಲ್ ಚತುರ್ದಶ ಮನುಗಳ್ (ಶಂರಾಮಾ. ೦-೬೯). 'ಕುಲಂಕರ' ನೋಡಿ. [ ಚತುರ್ದಶ + ಮನು ]

**ಚತುರ್ದಶಮಾರ್ಗಣೆ** (ನಾ). [ಜೈನ] ಜೀವಸಮಾಸದಲ್ಲಿ ಉಂಟಾಗುವ ವಿವಿಧ ರೂಪಗಳನ್ನು ವಿವರಿಸುವ ಹದಿನಾಲ್ಕು ವಿಭಾಗ ; ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯ, ಸಮ್ಯಕ್ತ್ವ, ಸಂಜ್ಞಾ, ಆಹಾರ ಎಂಬ ಹದಿನಾಲ್ಕು ಮಾರ್ಗಣಗಳು : ಗತೀಂದ್ರಿಯ ಕಾಯ ಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾ ಭವ್ಯ ಸಮ್ಯಕ್ [ತ್ವ] ಸಂಜ್ಞಾಹಾರಗಳೆಂಬ ಚತುರ್ದಶ ಮಾರ್ಗಣೆಗಳೊಳಂ . . . ಸುಜೀವ ಜೀವಂಗಳೆಲ್ಲಂ ಸಂಸಾರಿ ಜೀವಂಗಳೆಂಬುವಕ್ಕು (ಜೀವಸಂ. ೩-೬ ವ). [ ಚತುರ್ದಶ + ಮಾರ್ಗಣೆ ]

**ಚತುರ್ದಶರತ್ನ** (ನಾ). (ಸಮುದ್ರ ಮಥನದಿಂದ ಹುಟ್ಟಿದ) ಲಕ್ಷ್ಮಿ, ಕೌಸ್ತುಭ, ಪಾರಿಜಾತಕ, ಸುರೆ, ಧನ್ವಂತರಿ, ಚಂದ್ರ, ಕಾಮಧೇನು, ಐರಾವತ, ರಂಭೆ ಮೊದಲಾದ ಅಪ್ಸರೆಯರು, ಉಚ್ಚೈಶ್ರವಸ್ಸು, ವಿಷ, ಶಂಖ, ಅಮೃತ, ಹರಿಧನುಸ್ಸು ಎಂಬ ಹದಿನಾಲ್ಕು ರತ್ನಗಳು. ೨. [ಜೈನ] ಗೃಹಪತಿ, ಸೇನಾಪತಿ, ಶಿಲ್ಪಿ, ಪುರೋಹಿತ, ಸ್ತ್ರೀ, ಆನೆ, ಕುದುರೆ, ಚಕ್ರ, ಖಡ್ಗ, ಛತ್ರ, ದಂಡ, ಮಣಿ, ಚರ್ಮ, ಕಾಕಿಣಿ ಎಂಬ, ಚಕ್ರವರ್ತಿಗೆ ದೊರೆಯುವ ಏಳು ಜೀವ ರತ್ನಗಳು ಮತ್ತು ಏಳು ಅಜೀವ ರತ್ನಗಳು. 'ಅಜೀವರತ್ನ', 'ಜೀವರತ್ನ' ನೋಡಿ. [ ಚತುರ್ದಶ + ರತ್ನ ]

**ಚತುರ್ದಶಲೋಕ** (ನಾ). ಹದಿನಾಲ್ಕು ಲೋಕಗಳು ; ಭೂ, ಭುವ, ಸುವ, ಮಹ, ಜನ, ತಪ, ಸತ್ಯ ಎಂಬ ಏಳು ಮೇಲಿನ ಲೋಕಗಳು ಮತ್ತು ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲವೆಂಬ ಏಳು ಕೆಳಲೋಕಗಳು : ಚತುರ್ದಶಲೋಕಮನೆಯ್ದೆ ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯ ತನ್ನುದರಾಂತರದೊಳ್ (ಜಗನ್ನಾ. ೨-೪೮). ಪುಟ್ಟಿದನೀಗಳ್ ಚತುರ್ದಶಲೋಕಪ್ರಭು (ಜಗನ್ನಾ. ೩-೦೪). [ ಚತುರ್ದಶ + ಲೋಕ ]

**ಚತುರ್ದಶವಿದ್ಯೆ** (ನಾ). ೧. ನಾಲ್ಕು ವೇದ, ಆರು ವೇದಾಂಗ ಮತ್ತು ಮೀಮಾಂಸೆ, ನ್ಯಾಯ, ಧರ್ಮಶಾಸ್ತ್ರ, ಪುರಾಣ ಎಂಬ ಹದಿನಾಲ್ಕು ವಿದ್ಯೆಗಳು: ವೇದ ಚತು ರ್ವೇದಾಂಗ ಷಡುವಿಧವಾದ ಸ್ಮೃತಿಪೌರಾಣದ್ವಯ ವಿನ್ನಾದ ಘನ ಮೀಮಾಂಸೆ ನ್ಯಾಯಾದ್ಯಮನಿತುವೆರೆಸೆ . . . ಚತುರ್ದಶವಿದ್ಯದೊಳಗೆಯು ಸಾತಿಶಯ ಮೀಮಾಂಸೆ ವಿಂಶತಿ ರೀತಿಯಾಗಿಹುದು (ಗಣಿತಾ. ೩-೦೦). ೨. [ಜೈನ] ತಂತ್ರ, ಸಾಮುದ್ರಿಕ, ಸ್ವಪ್ನ, ಜ್ಯೋತಿಷ್ಯ, ಯೋಗ, ಶಿಲ್ಪ, ಕೋಶ, ಅಶ್ವ, ಕೃಷಿ, ನಾಟ್ಯ, ವಾಸ್ತು, ರಸಾಯನ, ಧನುಷ್ಯ ಮತ್ತು ಬ್ರಹ್ಮ ಎಂಬ ಹದಿನಾಲ್ಕು ವಿದ್ಯೆಗಳು. [ ಚತುರ್ದಶ + ವಿದ್ಯೆ ]

**ಚತುರ್ದಶಿ** (ನಾ). ಚಾಂದ್ರಮಾನ ಮಾಸದ ಒಂದೊಂದು ಪಕ್ಷದ ಹದಿನಾಲ್ಕನೆಯ ತಿಥಿ : ಮಾಘ ಬ ಚತುರ್ದಶಿಯಲ್ಲು ಜಿನರಾತ್ರಿ ಮಹೋತ್ಸವಕ್ಕೆ (ಎಕ. XI, ಹೊಳಲ್ಕೆ. ೦-೨೦ : 1154) : ಆ ಪಕ್ಷಂಗಳೊಳಗೆ ಈಶ್ವರನಧಿದೇವತೆಯಾದ ಚತುರ್ದಶಿ (ವಿವೇಕ. ೩೨೦). [ ಸಂ. ಚತುರ್ದಶೀ ]

**ಚತುರ್ದಿಕ್ಕು** (ನಾ). ನಾಲ್ಕು ದಿಕ್ಕುಗಳು ; ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣ : ಅಳೆದ ಭೂಮಿಯ ಚತುರ್ದಿಕ್ಕಿನ ಮೂಲೆಗಳಲ್ಲಿಯೂ ಗುರುತು ಮಾಡುವಿಕೆ (ಭೂಮಿಅ. ೦೪). [<ಸಂ. ಚತುರ್ದಿಶ್ ]

**ಚತುರ್ನಿಕಾಯ** (ನಾ). = ಚತುರ್ಣಿಕಾಯ : ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯ ದೇವನಿಕಾಯಂ (ಶಂರಾಮಾ. ೮-೩೦) : ಚತುರ್ನಿಕಾಯಾಃ – ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಾರ್ಥಸೂ. ೦೬೪). [ ಸಂ. (ಚತುರ್ + ನಿಕಾಯ) ]

**ಚತುರ್ನಿಕಾಯಾಮರ** (ನಾ).=ಚತುರ್ಣಿಕಾಯ: ಅಂತು ಚತುರ್ನಿಕಾಯಾಮರಜನಂಬೆರಸು . . . ಪೋದಂ (ಆಪು. ೩-೬೦ ವ) : ಈ ಗತಿ ಚತುಷ್ಟಯದೊಳುತ್ಕೃಷ್ಟಮೆನಿಸಿದ ಚತುರ್ನಿಕಾಯಾಮರರೊಳ್ (ಮಲ್ಲಿಪು. ೧೩-೧೧೧). [ ಚತುರ್ನಿಕಾಯ + ಅಮರ್ತ್ಯ ]

**ಚತುರ್ನೃಪವಿದ್ಯೆ** (ನಾ). ಅರಸನು ಕಲಿತುಕೊಳ್ಳಬೇಕಾದ ನಾಲ್ಕು ವಿದ್ಯೆಗಳು ; ಸಾಮ, ದಾನ, ಭೇದ, ದಂಡಗಳೆಂಬ ಉಪಾಯಗಳು: ತ್ರಿವಿಧಶಕ್ತಿಪ್ರಯುಕ್ತನುಂ ಚತುರ್ನೃಪವಿದ್ಯಾವಿಶಾರದನುಂ (ಚಂದ್ರ ಪು. ೬-೩೩ ವ). [ ಸಂ. ಚತುರ್ನೃಪವಿದ್ಯಾ (ಚತುರ್ + ನೃಪ + ವಿದ್ಯಾ) ]

**ಚತುರ್ಬಲ** (ನಾ). ಆನೆ, ಕುದುರೆ, ರಥ, ಮತ್ತು ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯ; ಚತುರ್ಬಲವುಂ ನೆರವುತ್ತುಂ . . . ಚಂಪಾಪುರಮಂ ಪರಿಯಿಟ್ಟು ಮುತ್ತಿದಂ (ಪುಷ್ಪಪು. ೩-೧೨೭) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋರಿದರು ತಂತಮ್ಮಾಳು ಕುದುರೆಗಳ (ಉದ್ಯೋ. ೯-೧೭); ಚತುರ್ಬಲ ನಿಜನಾಮ ಶಿಕ್ಷೆ ವರಚೇತನ ಸೂಚನೆಯಿಂತು ಸಂಜ್ಞೆಯಕ್ಕು (ನಾನಾರ. ೧೧೧). [ ಸಂ (ಚತುರ್ + ಬಲ) ]

**ಚತುರ್ಭಕ್ತಿ** (ನಾ).[ಜೈನ]ನಾಲ್ಕು ಬಗೆಯ ಭಕ್ತಿ: ಅರ್ಹದ್ಭಕ್ತ್ಯಾಚಾರ್ಯಭಕ್ತಿ ಬಹುಶ್ರುತಭಕ್ತಿ ಶ್ರುತಭಕ್ತಿಯೆಂಬ ಚತುರ್ಭಕ್ತಿಯುಂ (ಚಂದ್ರಪು. ೧೧-೨೨ ವ). [ ಸಂ. (ಚತುರ್ + ಭಕ್ತಿ) ]

**ಚತುರ್ಭದ್ರ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು [ ಸಂ. (ಚತುರ್ + ಭದ್ರ) ]

**ಚತುರ್ಭಾವ** (ನಾ). ನಾಲ್ಕು ವಸ್ತುಗಳು : ಆ ತ್ರಿವಿಧ ಏಕವಾಗಿ ಅಪ್ಪುತತ್ತ್ವವ ಕೂಡಲಿಕ್ಕೆ ಆ ಚತುರ್ಭಾವ ಏಕವಾಗಿ ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಪ್ರೋಕ್ಮಾ. ೭-೨೩). [ಸಂ. (ಚತುರ್+ಭಾವ)]

**ಚತುರ್ಭುಜ** (ನಾ). ೧. ನಾಲ್ಕು ತೋಳುಗಳು. ೨. ನಾಲ್ಕು ತೋಳುಗಳುಳ್ಳವನು : ಪರಶು ಫಲಾಕ್ಷಸೂತ್ರ ವರದೋಚಿತಚಿಹ್ನ ಚತುರ್ಭುಜಂ ಮನೋಹರ ವೃಷಲಾಂಛನಂ (ಆದಿಪು. ೧-೮). ೩. ಹರಿ; ವಿಷ್ಣು: ಪುಣ್ಯೋದಯದಿಂ ಚತುರ್ಭುಜನೆ ಪುಟ್ಟಿದಪಂ (ಜಗವಿ.೨-೮೪); ರತಿಕಾಂತ ಹರಭಕ್ತನೀ ತೆಜದಿ ನುಡಿಯಲವ ಚತುರ್ಭುಜನ ಸತಿಯು ಕಾರುಣ್ಯ ನಿನಗಿಲ್ಲ ಎಂದತಿ ಕೋಪದಿಂ ತಿರುಗಿ ತನ್ನ ಗೃಹಕಂ ಪೋಗೆ (ಪ್ರಭುಲಿ. ೦೩-೨೪). ೪. (ಅಲಂ) ಮದುವೆಯಾದವನು ; ವಿವಾಹಿತ : ಒಂದು ದೊಡ್ಡ ನವಕರಿಯನ್ನು ಹಿಡಿದು ಬೇಗನೆ ಚತುರ್ಭುಜನಾಗು ಎಂದು ಆಶೀರ್ವದಿಸಿದರು (ಅಮಂತ. ೨೨೪). [ ಸಂ. (ಚತುರ್ + ಭುಜ) ]

**ಚತುರ್ಮಡಿ** (ನಾ). ನಾಲ್ಕು ಮಡಿ ; ನಾಲ್ಕರಷ್ಟು : ಇದರ ಚತುರ್ಮಡಿ ಮೊಸರ ನೀರನ್ನು ಬಿಟ್ಟು ಪಾಕ ಮಾಡುವಾಗ ಹಾಕುವ ಕಲ್ಕದ್ರವ್ಯ (ಸಕವೈ. ೦೦೩). [ ಸಂ. ಚತುರ್ + ಮಡಿ ]

**ಚತುರ್ಮುಖ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ ; ಇರ್ದಂ ಜಗತ್ಪತಿಯೊಡ್ಡೋಲಗದೊಳ್ ಚತುರ್ಮುಖಂ . . . ವಾಣೀವಧೂಟೀಸಖಂ (ಜಗವಿ. ೦-೨೬) ; ಚತುರ ಚತುರ್ಮುಖನೆಲ್ಲಾ ಶ್ರುತಿಗಳ ನೊಲವಿಂದೆ ಕಲ್ತು (ಗಿರಿಕ. ೦-೯). ೨. [ಜೈನ] ಮಹಾಸಾಮಂತರು ಮಾಡುವ ಜಿನಪೂಜೆ ; ಸರ್ವತೋಭದ್ರ ಪೂಜೆ : ಮಹಾಮಂಡಳಿಕ ಪ್ರಮುಖಮುಕುಟಬದ್ಧರ್ ಮಾಳ್ಪ ಚತುರ್ಮುಖಮುಂ (ಆದಿಪು. ೦೩-೧೩ ವ). [ <ಸಂ. (ಚತುರ್ + ಮುಖ) ]

**ಚತುರ್ಮುಖತಂತ್ರ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ಚತುರ್ಮುಖತಂತ್ರ ಮಲಯತಂತ್ರ . . . ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೬೧). [ ಚತುರ್ಮುಖ + ತಂತ್ರ ]

**ಚತುರ್ಯುಗ** (ನಾ). ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳು ; ಧರೆಯೊಳು ಚತುರ್ಯುಗಂಗಳು ಮರಳಿ ಮರಳಿ ಸಾವಿರ ಬಾರಿ ಬಂದದಜಗೊಂದು ದಿನ (ಹರಿಕಾ. ೨-೨೩). [ ಸಂ. (ಚತುರ್ + ಯುಗ) ]

**ಚತುರ್ವಕ್ತ್ರ** (ನಾ).=ಚತುರ್ಮುಖ ೧ (೩). [ ಸಂ.(ಚತುರ್ + ವಕ್ತ್ರ) ]

**ಚತುರ್ವರ್ಗ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು : ಸಮನಿಸಿ ಧರ್ಮಕ್ಕವಿರುದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನುಕ್ರಮದೊಳೆ ಕಾಮಕ್ಕಂ ಕಡೆಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗಫಲಂ (ಆದಿಪು. ೨-೪೭). [ ಸಂ. (ಚತುರ್ + ವರ್ಗ) ]

**ಚತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು : ಭರತಚಕ್ರವರ್ತಿಯು ಔದ್ಯೋಗಿಕದೃಷ್ಟಿಯಿಂದ ಜನತೆಯನ್ನು ಚತುರ್ವರ್ಣಗಳಾಗಿ ವಿಂಗಡಿಸಿದನು (ಧಾರದ. ೦೬೨). [ ಸಂ. (ಚತುರ್ + ವರ್ಣ) ]

**ಚತುರ್ವಲ** (ನಾ). =ಚತುರ್ಬಲ : ನೆರೆದು ಚತುರ್ವಲಂಬೆರಸು ಬಂದುಱದೊಡ್ಡಿದ ಗಂಡರಾರುಮೆನ್ನಱಿಯದ ಗಂಡರೇ (ಪಂಪಭಾ. ೦೧-೮೯). [ <ಸಂ. ಚತುರ್ಬಲ ]

**ಚತುರ್ವಲಯ, ಚತುರ್ವಳಯ** (ನಾ). (?): ಉತ್ತರೋತ್ತರ ಚತುರ್ವಲಯ[ಪಾಠಾಂ. ಚತುರ್ವಳಯ, ಛತ್ರವಳಯ]ಕಾನಿದ್ದಲ್ಲಿ ಚಂದ್ರಸೂರ್ಯತಾರಾಮಂಡಲ ತಾ ನಿದ್ದಲ್ಲಿ (ಅವಚಂ. ೮೨-೩೬೦). ಚತುರ್ವಳಯ: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಸಂ. (ಚತುರ್ + ವಲಯ) ]

**ಚತುರ್ವಳಯ** 'ಚತುರ್ವಲಯ' ನೋ.

**ಚತುರ್ವಿಂಶತಿ** (ನಾ). ಇಪ್ಪತ್ತುನಾಲ್ಕು: ಚತುರ್ವಿಂಶತ್ಯರ್ಹತ್ಪ್ರತಿಮಾ ವಿರಾಜಮಾನ ಹೇಮದಾಮ ವಿಲಂಬಿತ ಘಂಟಾ ಸಮನ್ವಿತ ವಂದನಮಾಲೆಗಳೊಳಂ (ಆದಿಪು. ೦೬-೩೭ ವ); ಜೈನ ಪುರಾಣಗಳಲ್ಲಿ . . . ಚತುರ್ವಿಂಶತಿ ಕಾಮದೇವರೂ, ಏಕಾದಶರುದ್ರರೂ ನಿರ್ದೇಶಿಸಲ್ಪಟ್ಟಿರುವರು (ಸಾಹಿಸ. ೦೬೩). [ ಸಂ. ]

**ಚತುರ್ವಿಧ** (ಗು). ೧. ನಾಲ್ಕು ಬಗೆಯ ; ನಾಲ್ಕು ರೀತಿಯ: ವನಮಾಲಾ ಮಹಾದೇವಿ ಪುತ್ರಕಾಮ್ಯದಿಂದವರೌಷಧಾನ್ನದಾನಾದಿ ಚತುರ್ವಿಧ ಧರ್ಮತತ್ಪರೆಯಾಗಿ (ಪುಷ್ಪಪು. ೩-೧೦೮ ವ). (ನಾ). ೨. ನಾಲ್ಕು ರೀತಿ; ನಾಲ್ಕು ಬಗೆ : ಚತುರ್ವಿಧಮಪ್ಪ ದತ್ತಿಯುಮಂ . . . ಆರ್ಯಷಟ್ಕರ್ಮಂಗಳು ನಿಮಗಿವು ಕುಲಾಚಾರಂಗಳೆಂದಱಿಯೆ ಪೇಳ್ದು ಕೈಕೊಳಿಸಿ (ಆದಿಪು. ೦೩-೦೩ ವ). [ ಸಂ. (ಚತುರ್ + ವಿಧ) ]

**ಚತುರ್ವಿಧಜೀವ** (ನಾ). ಸ್ವೇದಜ, ಅಂಡಜ, ಉದ್ಭಿಜ ಮತ್ತು ಜರಾಯುಜ ಎಂಬ ನಾಲ್ಕು ಬಗೆಯ ಜೀವಗಳು. [ಚತುರ್ವಿಧ+ಜೀವ]

**ಚತುರ್ವಿಧಪದ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗು ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷಗಳು : ನಿಮ್ಮ ಶರಣರ ಚರಣದ ಭಕ್ತಿಯೇ ಎನಗೆ ಸಾಲೋಕ್ಯಪದವಯ್ಯ . . . ಇಂತೀ ಚತುರ್ವಿಧ ಪದಂಗಳಲ್ಲದೆ ಅನ್ಯವ ನಾನಱಿಯೆನಯ್ಯ (ಉರಿಶ. ೯೮-೮೦). [ ಚತುರ್ವಿಧ + ಪದ್ಮ ]

**ಚತುರ್ವಿಧಪದವಿ** (ನಾ).=ಚತುರ್ವಿಧಪದ : ಚತುರ್ವಿಧಪದವಿಯ ಹಾರ ಅಂಪದ್ವರ್ಗಕ್ಕಳುಕ . . . ನಮ್ಮ ಬಸವಣ್ಣನು (ಮಹಾದೇ. ಬ. ೮೪-೨೦೪). [ ಚತುರ್ವಿಧ + ಪದವಿ ]

**ಚತುರ್ವಿಧವಾದ್ಯ** (ನಾ). ತತ, ಅವನದ್ಧ, ಘನ ಮತ್ತು ಸುಷಿರ ಎಂಬ ನಾಲ್ಕು ಬಗೆಯ ವಾದ್ಯಗಳು. [ ಚತುರ್ವಿಧ + ವಾದ್ಯ ]

**ಚಬ್ಬಯ್ಯ** (ನಾ). ಒಬ್ಬಾತನ ಹೆಸರು : ಅವರಣ್ಣಂ ಚಬ್ಬಯ್ಯಂ ಕಲ್ಲಂ ನಿಱಿಸಿದಂ (ಎಕ. VIII, ಸೊರಬ. ೩೮೬-೭ ; 1004). [ಚಬ್ಬ$_0$+ಅಯ್ಯ$_{81}$]

**ಚಬ್ಬಿಜೋಯಿ** (ನಾ). ಒಂದು ಪ್ರದೇಶದ ಹೆಸರು : ರಾಜಾದಿತ್ಯರಸರ್ ಕೋಸವಳಂ ಸವಲಕ್ಷೇಯ ಭಾಗಮುಮಂ ಚಬ್ಬಿಜೋಯಿ ಯೆಪ್ಪತ್ತೊಂದು ಸಾಸಿರಮುಮಂ . . . ಪ್ರತಿಪಾಳಿಸುತ್ತುಂ (ಕಇಅ. ೨೨-೭-೨೪; 1083). [ ? ]

**ಚಬ್ಬಿಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಿಸೆಟ್ಟಿ (ಎಕ. IX, ದೊಡ್ಡಬ. ೯-೮ ; 918). [ ಚಬ್ಬಿ$_0$ + ಸೆಟ್ಟಿ ]

**ಚಬ್ಬೆ** 'ಸಬ್ಬೆ' ನೋ.

**ಚಮ** (ನಾ). ಯಜ್ಞದಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,- ಪಾನಪಾತ್ರೆ : ದಶಚಮದಿ ಹದಿನಾಲ್ಕುಗ್ರಹಗಳು ಮುಸಲ ಶಮ್ಯವುಲೂಖಲಂಗಳು . . . ಅಗ್ನೀಧ್ರರಾ ದ್ವಾದಶಕರೊಪ್ಪಿದರು (ಕೌಶಿರಾ. ೦-೫೯). P ಯಾಗದಲ್ಲಿ ೧. ಹೋತೃವಿಗೆ 'ಮಂಡಲ,' ೨. ಬ್ರಹ್ಮನಿಗೆ 'ಚತುರಸ್ರಕ', ೩. ಉದ್ಗಾತೃವಿಗೆ 'ತ್ರ್ಯಸ್ರಿ', ೪. ಯಜಮಾನನಿಗೆ 'ಪೃಥು', ೫. ಪ್ರಶಾಸ್ತೃವಿಗೆ 'ಅವತಪ್ಪ', ೬. ಬ್ರಹ್ಮಶಂಸಿಗೆ 'ಉತ್ತ್ರೋಷ್ಟ', ೭. ಪೋತೃವಿಗೆ 'ವಿಶಾಖಿ', ೮. ನೇಷ್ಟೃವಿಗೆ 'ದ್ವಿಗೃಹೀತಕ', ೯. ಅಚ್ಛಾವಾಕನಿಗೆ 'ರಾಸ್ನಾವ', ೧೦. ಅಗ್ನೀಧ್ರನಿಗೆ 'ಮಯೂಖಿಕ' ಎಂಬ ಹತ್ತುಬಗೆಯ ಚಮಗಳು ಬೇರೆ ಬೇರೆ ಋತ್ವಿಜರಿಗೆ ವಿಧಾಯಕವಾಗಿವೆ. [ <ಸಂ. ಚಮಸ ]

**ಚಮಕ$_1$** (ನಾ). ಒಂದು ಅನುಕರಣ ಪದ : ದುಮುದುಮು ತತ್ತೊಂ ತತ್ತೊಂಗೆನುತಂ ಚಮಕಂ ತಕನಕ ತಕ ಎಂದೆನುತಂ (ಕುಂಗಳ. ೨).

**ಚಮಕ$_2$** (ನಾ). ಒಂದು ವೇದಸೂಕ್ತದ ಹೆಸರು : ಚಮಕದಿಂದ ಖಿ ಲಾ ಧಿ ಪ ತ್ಯ ವ ನಮಕದಿಂದಖಿಲಾತ್ಮಭಾವವಮರಮನುಜಭುಜಂಗ ಮುಖದೊಳ್ಪಿತ್ತರಿಸುತಿರಲು (ವಿವೇಭ. ೦೨-೯೯). [ ಸಂ. ]

**ಚಮಕಾಯಿಸು** (ಕ್ರಿ). ೧. ಕೋರೈಸು; ಕುಕ್ಕು : ಅದನ್ನು ನೋಡಿದಂತೆಲ್ಲ ಕಣ್ಣು ಚಮಕಾಯಿಸಿ ಹೋಯಿತು (ಎಳಕ. ೫೯). ೨. = ಚಮಕಿಸು ೩ : ನನ್ನ ಕುದುರೆಯನ್ನು ಚಮಕಾಯಿಸುವುದರೊಳಗೆ ಭೀಮರಾಜನು ಮಾಯವಾಗಿ ಹೋಗಿದ್ದನು (ಶ್ರೀರಾಯ. ೨೦೬) ; ನಾಯಕನು . . . ಕುದುರೆಯನ್ನು ಚಮಕಾಯಿಸಿದನು (ಮಲ್ಲಿ. ೫೬). ೩. ನಡುಗಿಸು ; ಬೆದರಿಸು ; (ಕ). [ ಚಮಕಾ$_2$ (← P ಹಿಂ. ಚಮಕಾನಾ) + – ಇಸು$_3$.]

**ಚಮಕಿ** (ನಾ). ೧. ಬೇಗಡೆ; ಗುನ್ನಾಂಪಟ್ಟೆ. ೨. ಹೊಳೆಯುವ ವಸ್ತ್ರ,– ಪುಡಿ; ಕಿವಿಗಳೆರಡರಲ್ಲೂ ಮಿರುಗುವ ಚಮಕಿಯ ಕಾಗದದ ಓಲೆ (ಅಂಹೂ. ೯): ನಾವು ಚಮಕಿಯ ಅಂಗಿಯನ್ನು ತೊಟ್ಟು (ಅಶಿಮ. ೨೨); ಚಮಕಿಯ ಕುಂಕುಮದ ಬಾಸಿಂಗ . . . ಮೆರಗು ಕೊಡುತ್ತಿತ್ತು (ಅಂಹೂ. ೮೪). ೩. ಖಡ್ಗಯುದ್ಧದಲ್ಲಿ ಒಂದು ವರಸೆ ; ಮಿಂಚಿನ ವೇಗದ ಹೊಡೆತ: ಯಿಬ್ಬರು ಸಾಧಕರ ಕೈಗಳಲ್ಲಿ ಯಿದ್ದಂಥಾ ಬಂಡಿಕೋಲ್ಗಳ ವಳಗೆ ವಂದು ಬಂಡಿಕೋಲಿನ ಕೂಡಿ ಯಿದಿರಾಗಿ ಯಿದ್ದ ವೈರಿಯ ವಕ್ಷಸ್ಥಳದಲ್ಲಿ ದೃಢವಾಗಿ ಯಿದ್ದಂಥಾ ಏಟು ಯಾಪದು ಅದು ಚಮಕಿಯೆಂದು ತಿಳಿಯಲ್ಪಡುವುದು (ಐಶ್ವಟೀ. ೫-೫೯). [ ←ಹಿಂ. ಮರಾ. ಚಮಕೀ ]

**ಚಮಕಿತ** (ಗು). ೧. ಚಕಿತ; ವಿಸ್ಮಯಗೊಂಡ; ಬೆರಗಾದ. (ನಾ). ೨. ವಿಸ್ಮಿತನಾದವನು: ಒಡನೇ ಅವರು ಮಾಯವಾದದ್ದನ್ನು ಕಂಡ ಬಾಹ್ಮಣರೆಲ್ಲರೂ ಚಮಕಿತರಾದರು (ಕುರಾವಿ. ೧೦೪) ; ಭೂಪತಿಯು ಚಮಕಿತನಾಗಿ ನಿಂತು ಬಾಲನ ಮುಖದ ಕಡೆಗೆ ನೋಡುತ್ತಾ ನಿಂತುಕೊಂಡನು (ಇಪ್ಪಕ. ೨೯೪): ದರವಾನನು ತೂಕಡಿಸುತ್ತ ತೂಕಡಿಸುತ್ತ ಹಠಾತ್ತಾಗಿ ಒಂದು ಸಲ ಚಮಕಿತನಾಗಿ ಎಚ್ಚರಗೊಂಡರೆ (ನಿಬಂಧ. II, ೩೭೭).

[<ಸಂ. ಚಮತ್ಕೃತ ]

**ಚಮಕಿಬಟ್ಟು** (ನಾ). "ಉಡುಪು, ಮೊ. ಗಳಿಗೆ ಸೇರಿಸಿ ಹೊಲಿಯುವ ನಾಣ್ಯದಾಕಾರದ, ಬೆಳ್ಳಿ, ಮೊ. ಗಳ ಅಲಂಕಾರದ ಬಟ್ಟು" (Sequin. ಇಂಕನಿ). [ ಚಮಕಿ + ಬಟ್ಟು$_1$ (<ಬಟ್ಟಿ$_1$) ]

**ಚಮಕಿಸು** (ಕ್ರಿ). ೧. ಲಕಲಕಿಸು; ಥಳಥಳಿಸು: ಕೆಂಪು ಬೆರೆತ ಜರಿಯ ದಡಿ ಹೆಚ್ಚು ಝುಗಝುಗಿಸಿ ಚಮಕಿಸುತ್ತದೆ (ಚಂದುಟ. ೬೦); ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಚಮಕಿಸಿದವು (ಚಂದುಟ. ೮೮). ೨. ಜಳಪಿಸು ; ಹೊಳೆಯಿಸು : (ಕ). ೩. ಚಾಟಿಯಿಂದ ಬಡಿದು ಚುರುಕುಗೊಳಿಸು: ಕುದುರೆಗಳನ್ನು ಚಮಕಿಸುತ್ತಿದ್ದಾರೆ (ಆರ್ಯಕ. ೦೨೪).

[ ಚಮಕು + – ಇಸು$_3$ ]

**ಚಮಕು** (ನಾ). ೧. ಥಳಕು ; ಥಳಥಳಿಸುವಿಕೆ : ಚಿತ್ರದ ಎಚ್ಚರವು ಅವರಿಗೆ ಸೊನ್ನೆ ; ಅವರಿಗೆ ಚಮಕು ಬೇಕು (ನಿಬಂಧ. II, ೨೦೮). ೨. ಹೊಳಪು : ಚನ್ನಬಸವಾಂಕನ ಬರೆವಣಿಗೆಯಲ್ಲಿ ಚದುರಿನ ಚಮಕಿಲ್ಲ (ಕಸಾಕ. ೩೩೦). ೩. ಚುರುಕು ; ಚೂಟಿ : ಹವಾದೊಳಗ ಹಾರಾಡಿದರ ಚಮಕ ಹತ್ತಲಿಕ್ಕೆ ಬೇಕು. ಚಮಕ ಇಲ್ದ ಗಾಳಿ ಎಲ್ಲೈತಿ (ರಕ್ತಧ್ವ. ೩೨೭).

[←ಹಿಂ. ಮರಾ. ಚಮಕ್ ]

**ಚಮಗಾರ, ಸಮಗಾರ, ಸಮ್ಮಕಾರ, ಸಮ್ಮಗಾಱ** (ನಾ). ಚರ್ಮದ ಕೆಲಸ ಮಾಡುವವನು ; ಮೋಚಿ : ಹಾದಿಯಲ್ಲಿ ಹೋಗುವ ಚಮಗಾರನನ್ನು ಮುಟ್ಟಿ ಹಾಗೇ ಮನೆ ಒಳಕ್ಕೆ ಹೊಕ್ಕು ಈತ ತಾಯಿಯನ್ನು ಮುಟ್ಟುವನು (ಗೌರಾಂಗ. ೦೦) : ಚೆಂದವಾದ ಚಪ್ಪಲಿಗಳನ್ನು ಮಾಡಿ . . . ಕೊಳ್ಳಲು ಒತ್ತಾಯ ಮಾಡುವ ಚಮಗಾರನನ್ನು ನೀವು ನೋಡಿರಬಹುದು (ಮಾವಾದ. ೦೦೮). **ಸಮಗಾರ**: "ಸಮಗಾರ–ಚರ್ಮಕಾರ" (ಗಂಗಾಮ. ೩೨೦) ; ಚರ್ಮದ ಮೇಲೆ ಆಸಕ್ತನಾಗುವವನು ಸಮಗಾರನೇ ಸರಿ ಎಂದು ಅಷ್ಟಾವಕ್ರ ಮಹರ್ಷಿಗಳನ್ನುವರು (ಬ್ರಹ್ಮಶೀ. ೧೯೦); ಹಲವು ಸಮಗಾರರು ಕೂಡಿ ತೊಗಲೆಲ್ಲಾ ಹದ ಕೆಡಿಸಿದರು (ಗಾದೆ). **ಸಮ್ಮಕಾರ**: ಬ್ರಹ್ಮವನದಲ್ಲಿ ಬ್ರಾಹ್ಮಣ ಸರ್ವ ಜೀವ ಹತಕರ್ವಕ್ಕೊಳಗಾದಲ್ಲಿ ಸಮ್ಮಕಾರ (ಕಡ್ಡುಮು. ೦೦). **ಸಮ್ಮಗಾಱ**: "ಚರ್ಮಕಾರ" (ನಾಚಿರಾ. ೬); "ಚರ್ಮಕೃತ್ಯಂ ಪಾದುಕಾಕಾರನೆಂದೆನಲು ಸಮ್ಮಗಾಱಂ" (ಮಂಗರಾ. ೦೧೨-೬); ಶ್ರೀಮಹಾಚಾತುರ್ವಿದ್ಯ ಸಮುದಯಮಿಚ್ಛಾಸಿರ್ವರುಂ ಈ ಊರ ಸಮ್ಮಗಾಱರಾ ಕವಱ್ತಿಯಾನ್ನಿಟ್ಟಾರ್ (ಕಇ. I, ೯-೩; ಸು. ೮ನೆಯ ಶತ); ಚಕಾರಕ್ಕೆ ಸಕಾರಂ-ಕ್ರಕಚ–ಕರಗಸ; ಚರ್ಮಕಾರ–ಸಮ್ಮಗಾಱ (ಶಮದ. ೨೬೩ ಪ್ರಯೋ) ; ಹುಸಿವೊಳೆತುದಂತ್ಕಡೆಯಲಾ ಹುಸಿಯೆಸೆದುದುಂಕುರ ಸ ಮ್ಮ ಗಾ ಱ ನ ಲಿ (ಕೌಶಿರಾ. ೦೦-೩೦) ; ದೂಸಿಗರ ಪೂವಡಿಗರ ಸಮ್ಮಗಾಱರ . . . ನಾಡಿಗರೊಂದು ಜಂಗುಳಿ (ರಾಮಾಶ್ವ. ೬೮-೦೪). P. ಸಂಸ್ಕೃತದ 'ಚರ್ಮಕಾರ' ಎಂಬ ಪದದಿಂದ 'ಚಮ್ಮಗಾರ' ಎನ್ನುವುದು ಸ್ವಾಭಾವಿಕವಾದ ತದ್ಭವ. 'ಚಮಗಾರ' ಎನ್ನುವುದು ಅದರ ಮುಂದಿನ ರೂಪ. ಸಕಾರದಿಂದ ಮೊದಲಾಗುವ ಮತ್ತು ಶಕಟರೇಫದಿಂದ ಕೊನೆಗಾಣುವ 'ಸಮ್ಮಗಾಱ'ವು ಕವಿಗಳು ಪ್ರಾಚೀನವೆಂದು ರೂಪಿಸಿಕೊಂಡ ಸ್ವರೂಪಗಳಿರಬಹುದು. [<ಸಂ. ಚರ್ಮಕಾರ ]

**ಚಮಚ, ಚಮಚೆ** (ನಾ). ಚಿಕ್ಕ ಸವುಟನಾಕಾರದ ಸಾಧನ : ಖಾರವನ್ನಾದರೂ ತಿನ್ನೋಣವೆಂದರೆ ಅದೂ ಅಷ್ಟೆ ಉಳಿದಿದೆ–ಒಂದು ಚಮಚ, ಎರಡು ಚಮಚ (ಅಗಸ್ತ್ಯ. ೬) ; ಚಾಕು ಚಮಚಗಳ ಉಪಯೋಗ ಗೊತ್ತೇ ಇಲ್ಲ (ಪ್ರವಾಇ. II, ೦೮೧). **ಚಮಚೆ**: ತಮ್ಮನ ತಟ್ಟೆಗೆ ಒಂದು ಚಮಚೆ ತುಪ್ಪ ಹೆಚ್ಚು ಬಿತ್ತು (ಚಂದುಟ. ೧೧) ; ಚಮಚೆಯಿಂದ ಹಾಲನ್ನು ಕುಡಿಸುತ್ತಿದ್ದೆ (ಜನಜೀ. ೧೦೩) ; ನನಗೆ ನಿನ್ನ ಚುನಾವಣೆ ಗೀತೆಯನ್ನು ಚಮಚೆಯಿಂದ ಕುಡಿಸು (ಹನ್ನೊಂದ. ೩೫).

[←ಪಾರ. ಚಮ್ಚ, ಚುಮ್ಚ : ಹಿಂ. ಮರಾ. ಚಮಚಾ./ಸಂ. ಚಮಸ ]

**ಚಮಚಿ** 'ಚಮಚ' ನೋ.

**ಚಮಟ₁** (ನಾ). ಹೆಚ್ಚು ಬೆವರುವ ಒಂದು ಬಗೆಯ ರೋಗ (?) : ಈ ಗುಳಿಗೆಯಂ ಗರುಗದ ರಸದಲ್ಲಿ ಕೊಡಲು ಚಮಟ ಮಾಣ್ಗುಂ (ವಿವೈ. ೩೫) [←ತೆಲು. ಚೆಮಟ, ಚೆಮ್ಮಟ]

**ಚಮಟ₂** 'ಚಮಡ' ನೋ.

**ಚಮಡ**, ಚಮಟ್ಟ, ಚಮ್ಮಡ (ನಾ). ತೊಗಲು; ಚರ್ಮ: ಅದರ ಚಮಡ ಸುಲೀದ ಬಿಡ್ತಾರ್ದ (ಕಾನೂರು. ೨೭೮); ಕಂಭಕ್ಕೆ ಕಟ್ಟಿ ಚಮಡ ಸುಲೀತೇನೆ (ಅಗಸ್ತ್ಯ. ೯೨) ; ಅವಳಿಗೆ ಈ ದಿನ ಚಮಡ ಸುಲೀದಿದ್ದರೆ ನನ್ನ ಹೆಸರು ಬೇರೆ ಕರೀಬೇಕು (ಮಗಮೂಂ. ೩೭). **ಚಮಟ್ಟ** : ಲೇ, ಸುಳ್ಳು ಹೇಳಿದರ ಒಬ್ಬೊಬ್ಬರ ಚಮಟಾ ಬೆಳಗೇನು (ಗ್ರಾಮಾಯ. ೩೮). **ಚಮ್ಮಡ** : ಚಮ್ಮಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡುತ್ತೇನೆಯೇ (ನಡಿದಾ. I, ೫೦೭). [←ಹಿಂ. ಚಮಡಾ, ಚಮಡೀ; ಮರಾ. ಚಮಡೀ]

**ಚಮತು** (ನಾ). ಚಮತ್ಕಾರ; ಚಾತುರ್ಯ: ಈ ಹೊಸ ಸರ್ವಜ್ಞ . . . ಯಾವ ಸ್ವಂತ (ಚಮತು)ಮಾಡಲಿರುವನೆಂಬುದು ಅವರಿಗೆ ಗೋಚರಿಸಲಿಲ್ಲ (ಕನಕ. ೨೫). [<ಸಂ. ಚಮತ್ ?]

**ಚಮತುಕಾರತ್ವ** (ನಾ). = ಚಮತ್ಕಾರ ೨: ಚಮತುಕಾರತ್ವದಿಂ ಬಾಡಟಂ ನಲಿವಂತೆ ಸುಮತಿ ತತ್ಪರಶುವಂ ಬೀಸಿಡಲ್ ಸಾರಥಿಯ ಕಂಠವಂ ಕಡಿದೊಯ್ವುದು (ಶರಕು. ೩೦-೩೬). [<ಸಂ. ಚಮತ್ಕಾರತ್ವ]

**ಚಮತುಕೃತಿ** (ನಾ). = ಚಮತ್ಕಾರ ೨ : ಅಮರಪುರಪಾಲನದ ಲೀಲಾ ಚಮತುಕೃತಿಗಿನ್ನೇನನೆಂಬೆನು (ನಿಭಾಗ. ೮-೨೦-೦೬). [<ಸಂ. ಚಮತ್ಕೃತಿ]

**ಚಮತ್ಕರಿಸು** (ಕ್ರಿ). ೧. ಸೋಜಿಗವನ್ನು ಉಂಟುಮಾಡು ; ಆಶ್ಚರ್ಯಗೊಳಿಸು : ಸುಖಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ (ಗಿರಿಶ. ೩-೨೫) ; ತಳಹತ್ತಂ ದಣುವಟ್ಟೆ . . . ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೋಱಿದರ್ (ಶಬಶಂ. ೪-೭೩). ೨. ಅತಿಶಯಿಸು : ಚಿಲ್ವಂ ಚಮತ್ಕರಿಸುವಂತೆ ಸಾಹಿತ್ಯವಂ ಸಯ್ತುಡುವಂತೆ ಪ್ರಾಣವಂ ಪರಿರಕ್ಷಿಪಂತೆ . . . ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಶ. ೩-೦೧೯ ವ). [ಚಮತ್ಕರಣ₀ + – ಇಸು₁]

**ಚಮತ್ಕಾರ** (ನಾ). ೧. ಸೋಜಿಗ ; ಆಶ್ಚರ್ಯ ; ವಿಸ್ಮಯ. ೨. ಚಾತುರ್ಯ ; ಕೌಶಲ : ನಯಾನೀಕ ಪ್ರಯುಕ್ತ ಮಹಾಮಂತ್ರ ನಿಚಯ ಚಮತ್ಕಾರಮತಿವಿವೇಕ ಬುದ್ಧ್ಯಾಜೀವಿ (ಎಕ. XIII, ೩೩೦-೨೦ ; ೨೨೨) ; ವರಪ್ರಸಾದವಮ್ಮೊಱು[ರಾ]ಯಾಸ್ಥಾನ ಚಮತ್ಕಾರಬಗೆಕಾಱ (ಬೊಂಕಶಾ. ೦೯೩೭, ಸಿಂದಗಿ. ೦೦-೮ ; ೯೭೨) ; ಬಲಾತ್ಕಾರವಿದ್ದರೂ ಚಮತ್ಕಾರವಿರಬೇಕು (ಗಾದೆ). ೩. ಶೀಘ್ರತೆ ; ತ್ವರಿತತೆ ; ಬೇಗ : (ಶ). ೪. [ಕಾವ್ಯವಿಹಾ] ಆನಂದ : ಆಹ್ಲಾದವಿಶೇಷಕ್ಕೆ "ಚಮತ್ಕಾರ"ವೆಂಬ ಹೆಸರೂ ಉಂಟು (ಭಾರಮಿಾ. ೧೫೫). [ಸಂ.]

**ಚಮತ್ಕಾರಿ** (ಗು). ೧. ಸೋಜಿಗವನ್ನುಂಟುಮಾಡುವ ; ಆಶ್ಚರ್ಯಕರವಾದ. ೨. ಅಸಾಧಾರಣವಾದ ; ಅಸಾಮಾನ್ಯವಾದ. (ನಾ). ೩. ಚತುರನಾದ ವ್ಯಕ್ತಿ ; ಚಮತ್ಕಾರ ಮಾಡುವವನು : (ಶ). [ಸಂ. ಚಮತ್ಕಾರಿನ್]

**ಚಮತ್ಕಾರಿತ** (ಗು). ಚಕಿತಗೊಳಿಸಿದ ; ವಿಸ್ಮಯವನ್ನುಂಟುಮಾಡಿದ ; ಆಶ್ಚರ್ಯಗೊಳಿಸಿದ : ನಿಖಿಳಜಗದಾಶ್ಚರ್ಯ ಶೌರ್ಯರಸ ಬಹುಲ ಬಾಲಕ್ರೀಡಾ ಚಮತ್ಕಾರಿತ ವೀರಚಕ್ರನುಂ (ಆದಿಪು. ೮-೪೨ ವ). [ಸಂ.]

**ಚಮತ್ಕೃತ** (ಗು). ೧. ಚಕಿತ; ವಿಸ್ಮಿತ. (ನಾ). ೨. ವಿಸ್ಮಿತನಾದವನು; ವಿಸ್ಮಯಗೊಂಡವನು : ಅವನಂ ಚಮತ್ಕೃತನಾಗಿ ಅಲ್ಲಿಯೇ ನಿಂತನು (ಕಪಾಕುಂ. ೨೩). [ಸಂ.]

**ಚಮತ್ಕೃತಿ** (ನಾ). ೧. ಸೋಜಿಗ ; ಆಶ್ಚರ್ಯ : ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ ಹೊಂಚುವ ಚಮತ್ಕೃತಿಯನಳವಡಿಸಿ (ಕೃಮಿಭಾ. ೨೬-೦೦). ೨. ಕೌಶಲ ; ಚಾತುರ್ಯ : ಸತ್ಕೃತಿ . . . ಚಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ (ಕಾದಂಪೂ. ೫) ; ಈ ಕೃತಿ ಪುಣ್ಯಾಕೃತಿ ತಾಂ ಚಮತ್ಕೃತಿವಿಲಾಸಾವಾಸಂ(ಸುಕುಮಾ. ೧-೪೫); ಶ್ಯಾಮಕಂಧರನೀವನೀ ಕೃತಿಗತಿಚಮತ್ಕೃತಿಯ (ಬಸಪು. ೧-೫). ೩. ಆಹ್ಲಾದ ; ಆನಂದ : ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ (ಜಗವಿ. ೦-೦೫). [ಸಂ.]

**ಚಮನ್**, ಚಮಾನು, ಚಮಾಲು (ನಾ). ಹೂದೋಟ; ಪುಷ್ಪೋದ್ಯಾನ: ಕೈದಿ ಕಛೇರಿ ಮುಂದಿನ ಸಣ್ಣ ಚಮನ್‌ನಲ್ಲಿ ಬಹಳ ದಕ್ಷತೆಯಿಂದ ಹೂಗಿಡಗಳ ಪಾತಿ ಕಟ್ಟಿ . . . ಕೆಲಸ ಮಾಡುತ್ತಿದ್ದ (ಕಲಿತೆ. ೪೦೯) ; ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಳೆ ಹಣ್ಣಿನ ಮರ (ಹೊಸಕ್ಕಿ. ೦೨೩). **ಚಮಾನು** : ದಕ್ಷಿಣಾಮೂರ್ತಿ ದೇವಸ್ಥಾನಕ್ಕೆ ಚಮಾನು ಗುರಿಕಾರ ಕವನ್ನಯ ಹಿತ್ತಾಳೆ ಚೌಕಟ್ಟು ಗುಬ್ಬೀಕದ ಸಹ ಮಾಡಿಶಿ ಪಟ್ಟಿಶಿದ ನಿಲುವಿನ ಸೇವಾರ್ಥ (ಎಕ. XIV, ಚಾಮುರಾ. ೨೩೭-೦ ; ೪). **ಚಮಾಲು** : ಚಮಾಲನ್ನಂತು ನೋಡುವುದಕ್ಕೇ ಆಗದು, ಚೆನ್ನಾಗಿ ಹುಲ್ಲು ಕೂಡ ಬೆಳೆದಿಲ್ಲ (ಕಂಕಥ. ೧೯೪). [←ಪಾರ. ಹಿಂ. ಮರಾ. ಚಮನ್]

**ಚಮರ** (ನಾ). ೧. ಉದ್ದವಾದ ಕೂದಲು ಮತ್ತು ಗೊಂಡೆಬಾಲವುಳ್ಳ ಒಂದು ಬಗೆಯ ಮೃಗ. ೨. ಚಮರಮೃಗದ ಬಾಲದ ಕೂದಲಿಂದ ತಯಾರಿಸಿದ ಕುಂಚ,–ಚಾಮರ : "ಚಾಮರ ಚಮರವಮದಕ್ಕುಂ" (ಕವಿಕಂ.೨೬೬) ; ಇಕ್ಕೆಲದ ಚಮರ ಸೀಗುರಿಯಿಂದೆ ಮೆಱೆವುತಂ (ನಂದಿರ. ೩-೬೫) ; ಕರಗ ಕಾಳಾಂಜಿ ಬಡಪ ಗಿಂಡಿ ಚಮರವ ಧರಿಸಿದೂಳಿಗದವರು (ಕಂನವಿ. ೦೨-೩೭). [ಸಂ.]

**ಚಮರಗಾರ್ತಿ** (ನಾ). ಚಾಮರ ಬೀಸುವವಳು ; ಚಾಮರ ಬೀಸುವ ಊಳಿಗದವಳು: ಕಸ್ತೂರಿ ಹಿಂಗದ ಚಮರಗಾರ್ತಿಯರು ಹೊಂಗದಳಿಯ ಕೋಮಲಪತ್ರವೀಜನದಂಗನೆ ಮೆಱೆದಳೊತ್ತಿನಲಿ (ಮೋಹತ. ೫-೩೯). [ಚಮರ + – ಕಾಱ + – ತಿ₁ (< – ಇತ್ತಿ)]

**ಚಮರಜ** (ನಾ). (ಚಮರೀಮೃಗದ ಕೂದಲಿನಿಂದ ಮಾಡಿದ) ಚಾಮರ: ಒರ್ವಳ್ ಕೊಡೆವಿಡಿವುದು ಮತ್ತೊರ್ವಳ್ ಚಮರಜವ [ಪಾಠಾಂ. ಚಾಮರವ] ನಿಕ್ಕುತಿರ್ಪುದು (ಗದಾಯು. ೯-೩೦) ; ಚಮರಜಮನಿಕ್ಕೆ ಖಚರಪ್ರಮದಾಜನಂ (ಶಂರಾಮಾ. ೦೪-೧೨೮). [ಸಂ.]

**ಚಮರಧಾರಿಗ** (ನಾ). ಚಾಮರದ ಆಳು : ಹಡಪ ಬಾಹಿಯ ಚಮರಧಾರಿಗರ ದೊರೆಗಳುಳಿದರು ಬೆದಱಿ ರಥದಲಿ (ಕುವ್ಯಾಗ. ೧-೦೪). [ಚಮರಧಾರ₀ + – ಇಗ]

**ಚಮರರುಹ** (ನಾ).=ಚಮರಜ : ತಚ್ಚಮರರುಹ ಮಹಾಶೋಭೆ ಕೈಗಣ್ಕೆ (ಶಂಶಭಾ. ೪-೦೪) ; ಚಮರರುಹದ್ವಯಂ ಬೆಳಪ ಬೆಳ್ಗೊಡೆ ಪೂಮಱೆ ಭಾಪ್ರತಾನಮತ್ತ್ರಮುವಣಿಪೀಠಮಿಂದ್ರಸಭೆಯೆಂಬಿವು ಘಾತಿ ಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೪-೭೩) ; ಚಮರರುಹಾಗ್ರವಂ ಪಿಡಿದು (ಕಾದಂಜಾ. ೯೮) ; ಇಕ್ಕುವ ಚಮರರುಹಂ ತನ್ನ ಕಣ್ಗೆ ಮಱೆಯಾದಪುದು (ಅಜಿಪು. ೫-೩೪) : ದೇಸೆವೆತ್ತುವು ಕಮಳಭವಂಗಿಕ್ಕುವಮಳ ಚಮರರುಹಂಗಳ್ (ಜಗವಿ. ೧-೩೮). [ಸಂ.]

**ಚಮರಾಲವಟ್ಟ** (ನಾ). ಚಮರಮೃಗದ ಕೂದಲಿನಿಂದ ಮಾಡಿದ ಬೀಸಣಿಗೆ; ಚಾಮರ: ಆಳಿಯರ್ ಬೀಸುವ ಚಮರಾಲವಟ್ಟ ತಣ್ಣಾಳಿಯಿಂದವಳೊಡಲ್ಗಿಚ್ಚು . . . ಭಡಾಳಿಸಿತು (ಮೋಹತ. ೨೭-೬೨). [ಚಮರ + ಆಲವಟ್ಟ]

**ಚಮರಿ** (ನಾ). ೧. ಹೆಣ್ಣು ಚಮರಮೃಗ : “ಆ ರೋಮಿ ಗೋಕರ್ಣಮೆನಲು ಚ[ಪಾಠಾಂ. ಲ್ಚ]ಮರಿಯ ಮೃಗ[ಪಾಠಾಂ. ಚಮರಿಮೃಗ]ಮದು” (ಮಂಗರಾ. ೪೯-೦೦) ; ಮುಸುಗಳವು ಕತ್ತುರಿಯ ಮೃಗವಿವು ಚಮರಿಯಿವು . . . ಗಜಗಮನೆ ನೋಡು (ಕೊರಡಾ. ೫-೧-೫೦) ; ಉಡುಗುತ್ತಲ್ಲಿರ್ಪುದುದ್ಯಚ್ಚಮರಿ ರಜಮನಾ ತಾಣದೊಳ್ ಹಸ್ತಿ ಕೈನೀರಿಡುತಂ ಸಮ್ಮಾರ್ಜನಂಗೆಯ್ವುದು (ರಾಜಶೇ. ೧-೦೨೬). ೨. ಚಮರಮೃಗದ ಬಾಲದ ಕೂದಲು: ಆನೆಗಳ ದಂತಂಗಳುಂ ಮುತ್ತುಗಳುಂ ಪುಲಿಯ ತೊವಲ್ಗಳುಮಂ ಚಮರಿಗಳುಮಂ ಕೊಂಡು ಬಂದು (ವಡ್ಡಾರಾ. ೦೬೫-೦೫) ; ಚಮರಿಯನೆಯ್ದೆ ಕರ್ಬುನದ ಮುಟ್ಟುಗಳಿಂ ಪಿಡಿದಿರ್ದ ಮಾಜಿಬಿ ನೀಂ (ಅಟ್ಟಮ. ೬-೨೨). ೩. ಚೌರಿ; ಚಾಮರ: ಢಾಳಿಸುವ ಹಲವು ಚಮರಿಗಳ ಮಧ್ಯದೊಳೋಲಗಂಗೊಟ್ಟು ಕುಳ್ಳಿರ್ದ (ಹಚಕಾ. ೦೦-೫೬): ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚಮರಿಗಳು (ಕುವ್ಯಾದ್ರೋ. ೫-೪೦). ೪. ಒಂದು ಬಗೆಯ ಮೀನು : “ಚಮರೀ-ಚಮರೀಮೃಗ, ಮೀನಭೇದ” (ಓಷಧಿ. ೫೪). [ಸಂ. ಚಮರೀ]

**ಚಮರಿಕ** (ನಾ). ಒಂದು ಬಗೆಯ ಮರ; ಕೋವಿದಾರವೃಕ್ಷ. [ಸಂ.]

**ಚಮರಿಮೃಗ** (ನಾ).=ಚಮರೀಮೃಗ : “ಆ ರೋಮಿ ಗೋಕರ್ಣಮೆನಲು ಚಮರಿ ಮೃಗ[ಪಾಠಾಂ. ಚಮರಿಯಮೃಗ]ಮದು” (ಮಂಗರಾ. ೪೯-೦೦). [ಚಮರಿ + ಮೃಗ]

**ಚಮರೀಜ** (ನಾ). = ಚಮರಜ : ನಾನಾಚಮರೀಜಮಾಯು ಸಭೆಯಂ ತಳ್ವೊಯ್ಯಲಿರ್ದಾ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೦-೨೬). [ಸಂ.]

**ಚಮರೀಜಕಾಂತೆ** (ನಾ).ಚಾಮರ ಬೀಸುವ ದಾಸಿ: ಚಮರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ (ಕಾದಂಪೂ. ೯೬೫). [ಚಮರೀಜ + ಕಾಂತೆ]

**ಚಮರೀಮೃಗ** (ನಾ). = ಚಮರಿ ೧ : ಚಮರೀಮೃಗಶಿಶು ತಂದುದು ನಮಗಿದು ಸಾಫಲ್ಯಮಾಯ್ತು (ಕುಸುಮಾ. ೭-೮೬) ; ಬಳಿಕಲ್ಲಿ ಕಸ್ತೂರಿಮೃಗ ಚಮರೀಮೃಗ . . . ಪವಿತ್ರಮೃಗ ಜಾತಿಗಳುಂ (ವಿವೇಕ. ೨೦೨) ; ಉರಿಗಣ್ಣ ಚಮರೀಮೃಗಂ ಹೇರಣಲು ಚಿತ್ರಕ (ರುಕ್ಮಾಂಗ. ೦೦-೪). [ಸಂ.]

**ಚಮರೀರುಹ** (ನಾ).=ಚಮರಜ: ಮಿಳಿರ್ವನ್ನಂ ಚಮರೀರುಹಂ ಮಿಳುಗುವನ್ನಂ ಪಾಂಡರಚ್ಛತ್ರಮಂಡಳಂ (ಜಗವಿ. ೪-೯೯) ; ಜಿನಾಂಬಿಕೆಗಿಕ್ಕಿದರಮರಿಯರಮರೆ ಧವಳಚಮರೀರುಹಮಂ (ಪುಷ್ಪಪು. ೯-೬೪). [ಸಂ.]

**ಚಮಸ** (ನಾ). ೧. ಯಾಗಾದಿಗಳಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,- ಪಾನಪಾತ್ರೆ: ಚಮಸ ದರ್ವೀ ಆಜ್ಯಸ್ಥಾಲೀ . . . ಪ್ರಮುಖಪಾತ್ರವಿಶೇಷಂಗಳು (ವಿವೇಕ. ೦೫೫) ; ವಿಹರಿಸುವ ದರ್ಭಾಸ್ತರಣದ ಚಮಸಾದಿಗಳ ಬಹುಸಾಧನಂಗಳಿಂ (ಕೃಮಿಥಾ. ೫೫-೫೮) : ಸೋಮಲತೆಗಳನ್ನು ಕೊಂಡು ತಂದು ಚಮಸಗಳೆಂಬ ಪಾತ್ರೆಗಳಲ್ಲಿ ಸೋಮರಸವನ್ನು ಗ್ರಹಿಸಿ (ಶಿವದ. ೨೦೨-೧೪). ‘ಚಮು’ ಪರಾ. ೨. ಚಮುಚ; ಸಣ್ಣ ಆಕಾರದ ಸಟ್ಟುಗ : ಪಾಯಸದ ಸವಿಯನರಿಗುವೆ ಚಮಸಂ (ನೀತಿಮಂ. I, ೫೦೪). ೩. ಅಕ್ಕಿಹಿಟ್ಟು, ಗೋಧಿಹಿಟ್ಟು ಮೊದಲಾದುವುಗಳಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ,—ಮಿಠಾಯಿ. [ಸಂ.]

**ಚಮಸಿ** (ನಾ). = ಚಮಸ ೧ : “ಚಮಸಿ—ಸೋಮಪಾನಪಾತ್ರ” (ಸಿದ್ಧಾಂತಿ. ೫೮೬). [ಸಂ. ಚಮಸೀ]

**ಚಮಾನು** ‘ಚಮನ್’ ನೋ.

**ಚಮಾಲು** ‘ಚಮನ್’ ನೋ.

**ಚಮು** (ನಾ). ೧. ಪಡೆ; ಸೈನ್ಯ : “ಪೃತನಾನೀಕ ಧ್ವಜಿನೀ ಪತಾಕಿನೀ ಸೇನೆ ಬಳ ಚಮೂ ಚಕ್ರಾಕ್ಷಿಕಂ” (ವಸ್ತುಕೋ. ೮೫-೭): “ಪೃತನಾ, ಸೇನಾ . . . ಚಮೂಃ, ವರೂಥಿನೀ, ಅನೀಕಿನೀ, ಅನೀಕಂ—ಈ ೧೦ ಪಡೆ” (ಹಲಾಯು. ೬೫-೫೦೫). ೨. ೭೨೯ ಆನೆ, ೭೨೯ ರಥ, ೨೧೮೭ ಕುದುರೆ, ೩೬೪೫ ಕಾಲಾಳು—ಇವುಗಳನ್ನುಳ್ಳ ಒಂದು ಸೈನ್ಯದಳ: “ಪೃತನೆಯುವು ಮುಂದೆ ಮೂಱಾಗೆ ಚಮು” (ಮಂಗರಾ. ೮೬-೫೦). [ಸಂ. ಚಮೂ]

**ಚಮೂನಾಥ** (ನಾ). ಪಡೆವಳ; ದಂಡಾಧಿಪತಿ; ಸೇನಾನಿ : ಚಮೂನಾಥ ಚಕ್ರಾಧಿನಾಥಂಗೆ ಜಯಪ್ರಾರಂಭಗಚ್ಛಸ್ಫಟಿಕಕಳಶಮಂ ತೀವಿ (ಆದಿಪು ೦೨-೮) ; ಗಂಗರಾಜ ಚಮೂನಾಥನ ಜನನಿ (ಎಕ. II, ೦೦೮-೨೫ ; 1120). [ಸಂ. (ಚಮೂ + ನಾಥ)]

**ಚಮೂಪ** (ನಾ). = ಚಮೂನಾಥ : ಅರಮನೆಯೊಳೊಡನೆಯ ಚಮೂಪರೊಡಗೂಡಿ ಮಜ್ಜನ ಭೋಜನಂ ಮಾಡಿ ಪವಡಿಸಲು (ಹಚಕಾ. ೪-೫೫೫). [ಸಂ.]

**ಚಮೂಪತಿ** (ನಾ).=ಚಮೂನಾಥ : “ಚಮೂಪತಿಯನೀಕಸ್ಥನೆನೆ ದಂಡನಾಥನಕ್ಕು” (ಮಂಗರಾ. ೮೦-೮) ; ಸಿಂಧುರಾರಾತಿಯುಂ . . . ಚಮೂಪತಿ ಕಂಡಂ (ಆದಿಪು. ೦೬-೯೫) ; ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದಂ (ಅಜಿಪು. ೦-೪೫). [ಸಂ. (ಚಮೂ + ಪತಿ)]

**ಚಮೂರ** (ನಾ). ಹುಲಿ ; ವ್ಯಾಘ್ರ : “ವ್ಯಾಘ್ರಂ ತರಕ್ಷು ಮೃಗರಿಪು. ಚಮೂರವೆನೆ ಶಾರ್ದೂಲಂ” (ವಸ್ತುಕೋ. ೪೦-೦) ; “ಚಮೂರವೆನೆ ಹುಲಿ” (ಮಂಗರಾ. ೪೭-೭) ; ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವಜಿತನಾಥನ ಕೆಲದೊಳ್ (ಅಜಿಪು. ೭-೬) ; ತೊಟ್ಟನೆ ಬೀೞ್ ಮೇಲೆ ಪುಲಿದೋಲ್ ನಿಜದೀವದ ಪುಲ್ಲೆ ಬೆರ್ಚಿ ಧೀಂಕಿಟ್ಟು ಚಮೂರವೆಂದು ಬಿಱುತೋಡೆ (ಪುಷ್ಪಪು. ೫-೦೦೦). [?]

**ಚಮೂರು** (ನಾ). ಒಂದು ಬಗೆಯ ಜಿಂಕೆ ; “ಶ್ರೇಷ್ಠವಾದ ಚರ್ಮವುಳ್ಳ ಜಿಂಕೆಯ ಭೇದಗಳು” (ಅಮರ. ೬೪೪). [ಸಂ.]

**ಚಮೂವಲ್ಲಭ** (ನಾ).=ಚಮೂನಾಥ: ವಾಜಿಗಳಂ ವಿಳಾಸಿನಿಯರಂ ತನ್ನಂ ಚಮೂವಲ್ಲಭಾಭರಣಂ ಶ್ರೀಪತಿ (ಸೌಇಇ. XX, ೭೪-೯ ; 1112). [ಸಂ. (ಚಮೂ + ವಲ್ಲಭ)]

**ಚಮ್ಮ, ಚೆಮ್ಮ, ಸಮ್ಮ₁, ಸಮ್ಮ₂** (ನಾ). ಚರ್ಮ ; ತೊಗಲು : ತನುವೆಂಬ ಮನೆಗೆ ಅಸ್ಥಿಂಗಳು ಚಮ್ಮ[ಪಾಠಾಂ. ರ್ಮ]ದ ಹಂಜರ ನರದ ಭೀಮಗಟ್ಟು (ಆದವ. ೦೫-೫೫) ; ಮೆಱದಿರಾಗಿ ಕಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮವಂ ಸಱಸಱಸಱನೆ ಸೀಳ್ದು ಬದಿರ್ಚಿಯಾಡುತ (ಎಕ. XVI, ಚಿಕ್ಕನಾ. ೭೦-೨೫ ; 1235). ಚೆಮ್ಮ : ‘ಚೆಮ್ಮಾವುಗೆ’ ಪರಾ. ಸಮ್ಮ₁: “ಸಮ್ಮ (ಸಮ, ಚಮ್ಮ)—ಚರ್ಮ(ನ್)=ತೊಗಲು” (ತದ್ಭಕೋ. ೪೫). ‘ಸಮಗಾರ’ ಪರಾ. ಸಮ್ಮ₂: “ನೆಱೆ ತೋಲ್ ತೊವಲುಂ ಸಮ್ಮಮಡಿರದಕ್ಕುಂ ಚರ್ಮ” (ಕವಿಕಂ. ೮೫) ; “ಸಮ್ಮವೆನೆ ಚರ್ಮ” (ಕಶರ. ೧೦೫) ; ನುಣ್ಪುವಟ್ಟು ತೋೞ್ ಬಿಗಿದುಟ್ಟ ಪುಲಿದೊವಲೊಳಂ ತಕ್ಕಿನಿಂ ಮಿಕ್ಕು ಪೋದರ್ದಾನೆರಕ್ಕಸನ ಸ[ಪಾಠಾ. ಚ]ಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಕಬ್ಬಿಕಾ. ೦೬೬) : ಕಣ್ಣಪ್ಪನಡಿಗೆರ್ಪು ಭರದಿನೊರಸಲ್ಸವೆದು ಪೋದುದು (ಅರಾಜ. ೫-೨೮); ಮೆಯ್ಯ ಸಮ್ಮಂ ಸುಗಿದು (ಭಾವಜಿಂ. ೫-೭) ; ನಸುನಗುತ್ತರಳಿಯಂ ತಾಳ್ದು ಪುಲಿಯಂ ಸೀಳ್ದು ಪೊಸಸಮ್ಮವುಟ್ಟು ಫಣಿಗಳ ತೊಟ್ಟು ಕೈದುಗಳನೆಸಕದಿಂ ಧರಿಸಿ (ಚಬಪು. ೨೦-೫೦) ; ಶಿರಮಾಲೆಯಾಭರಣ ನಿರ್ಮಲ ದುಕೂಲಂ ಸಮ್ಮದಂಬರಂ ಕುಂಕುಮದ ತಿಲಕ ಪಣೆಗಣ್ ವಿರಾಜಿಸುವರ್ಧನಾರೀಶ ಸಿದ್ಧನಂಜೇಶ ಸಲಹಾ (ಗುರುಚಾ. ೦೧-೦) ; ಪೊಂಬುಲಿ ಸಮ್ಮಮಾನೆದಲೆಮುತ್ತು ಮೊಲಂಗಳ ಬಿಕ್ಕು . . . ಪೀಲಿಯೆಂಬಿವಂ ತುಂಬಿದ ಕಂಬಿಯುಂ ತಳೆದರ್ದೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೦೦೪); ಮೆತ್ತನೆಯಾದ ಸಮ್ಮದ ಮನೋಹರ ಮೆಂಡೆನಿರ್ಸಿದ ಶೆಳ್ವಸಿರ್ ಬಿತ್ತರಮಾಗಲ್ (ಹಾಲಾಸ್ಯ. ೧-೦೫-೨೬). ‘ಸಮ್ಮಮಾವುಗೆ’ ಪರಾ. [ <ಸಂ. ಚರ್ಮನ್ ]

**ಚಮ್ಮಖಿಳ್ಳ** (ನಾ). ಚರ್ಮದ ಮೇಲಿನ ಕಲೆ,–ಕೆಂಪುಚುಕ್ಕೆ : ತಲೆಗಾತ್ರ ಸ್ಫುರಣಂ ನರವುಲಿ ಕಾರೆಳ್ಳಟ್ಟಿ ಚ(ಂ)ಮ್ಮಖಿಳ್ಳೆಂದಿನಿತುಂ ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟಫಲಮಂ ಕುಡುಗುಂ (ಲೋಕೋಪ. ೧೧-೬೪). [ಚಮ್ಮ + ಖಿಳ್ಳ$_0$ (←Pಪ್ರಾ. ಖಿಲ್ಲ = ಗುಳ್ಳೆ)]

**ಚಮ್ಮಟ** (ನಾ). ಚರ್ಮದ ಹೊದಿಕೆಯುಳ್ಳ ಗುರಾಣಿ,– ಖೇಟಕ : ಬಹುಧಾರಣದ ಚಮ್ಮಟದ ಖಡುಗದ ಪಾರಗದ ಪರಿಣತರು ಹೆಣಗಿದರು (ಕುಮಾರದ್ರೋ. ೧೪-೩). [ <ಸಂ. ಚರ್ಮಪಟ ]

**ಚಮ್ಮಟಿಕೆ$_1$, ಚಮ್ಮಟಿಗೆ$_1$, ಚಮ್ಮಟ್ಟಿಗೆ$_1$, ಚಮ್ಮಡಿಕೆ**(ನಾ). ಕಮ್ಮಾರನು ಬಳಸುವ ದೊಡ್ಡಸುತ್ತಿಗೆ : ಮಾಯೆಗಲುಗದ ಧೈರ್ಯವೆಂಬಡೆಯ ಮೇಲಿರಿಸಿ ನಿತ್ಯವೆಂದೆಂಬ ಚಮ್ಮಟಿಕೆ[ಪಾಠಾಂ. ಗೆ]ಯಿಂ ಪೊಡೆವುತಂ(ಇಮ್ಮಡಿ. ದೇ. ೦೦೭-೨೧). **ಚಮ್ಮಟಿಗೆ$_1$ :** ಕಾಯ್ದ ಮೊಳೆಯ ಚಮ್ಮಟಿಗೆಗಳಿಂದೆ ಅಡಸಿ ಹೊಯ್ಕೆ (ಸಾನಂದ. ೬-೦೦ ರಗಳೆ) ; ಅಸ್ತ್ರಗಳನು ಮುಱಿಯದೆ ಚಮ್ಮಟಿಗೆಯೊಳು ಕೊಱೆಯದೆ ಗರಗಸವಿಡಿದು ಕೈಕಾಲ್ಗಳ ಬಱಿದೇಕೆ ಕೊಂದೆನೊ ರಣದಿ (ವರ್ಧಪ. ೮-೧೨); ಕಲ್ಲುಗಳಿದ್ದರೆ . . . ಟಾನಗಳಿಂದಾಗಲಿ ಚಮ್ಮಟಿಗೆಯಂಥ ದೊಡ್ಡ ಸುತ್ತಿಗೆಯಿಂದಾಗಲಿ ಒಡೆದು ತಂದು ಹೊಲದ ಮೇರೆಗೆ ಹಾಕಬೇಕು (ಕೃಷಿಪ್ರ. ೪೧). **ಚಮ್ಮಟ್ಟಿಗೆ$_1$ :** (೬). **ಚಮ್ಮಡಿಕೆ :** ಚಮ್ಮಡಿಕೆ ಮೊದಲಾದುವಱಿಂ ಬಡಿವ (ಶಾಸ್ತ್ರಟೀ. ೬೦-೨).

[ ದೇ.॥ ತಮಿ: ಚಮ್ಮಟ್ಟಿ; ತುಳು. ಚವಟಿಗೆ; ತೆಲು. ಸಮ್ಮಟ ]

**ಚಮ್ಮಟಿಕೆ$_2$** 'ಚಮ್ಮವಟ್ಟಿಗೆ' ನೋ.

**ಚಮ್ಮಟಿಗೆ$_1$** 'ಚಮ್ಮಟಿಕೆ$_1$' ನೋ.

**ಚಮ್ಮಟಿಗೆ$_2$** 'ಚಮ್ಮವಟ್ಟಿಗೆ' ನೋ.

**ಚಮ್ಮಟ್ಟಿಗೆ$_1$** 'ಚಮ್ಮಟಿಕೆ$_1$' ನೋ.

**ಚಮ್ಮಟ್ಟಿಗೆ$_2$** 'ಚಮ್ಮವಟ್ಟಿಗೆ' ನೋ.

**ಚಮ್ಮಡ** 'ಚವಡ' ನೋ.

**ಚಮ್ಮಡಿಕೆ** 'ಚಮ್ಮಟಿಕೆ$_1$' ನೋ.

**ಚಮ್ಮಡೆಗದ್ದೆ** (ನಾ). ಕೆಂಪುಮಣ್ಣಿನ ಗದ್ದೆ (?): ಕೇರಿದ ಚಂಮಡೆಗದ್ದೆ ಕೆವರ ಯಸಗವೊಳೆ (ಎಕ. III, ತಿರುಮ. ೬೩-೫೦೩ ; 1744).

[ಚಮ್ಮಡೆ$_0$ + ಗದ್ದೆ (<ಗಟ್ಟಿ) ]

**ಚಮ್ಮಣಿವಟ್ಟು** 'ಚಿಮ್ಮಣಿವಟ್ಟು' ನೋ.

**ಚಮ್ಮರ** 'ಚಮ್ಮಾರ' ನೋ,

**ಚಮ್ಮರಿಗೆ** (ನಾ). ಚಾಟಿ ; ಬಾರುಕೋಲು ; ಕೋರಡೆ: ಅಱುವತ್ತಾಱು ಮಂಡಳಿಕರ ಚೆಂನ ಚಂಮರಿಗೆ ಹೊಳೆಕಲ್ಲ ಚೆಣೆಯನಾಯ್ಕನ ಮಗ ಕಂಬೆಯ ನಾಯ್ಕ (ಎಕ. XVI, ತಿಪಟೂ. ೧೬೦-೧೦ ; 1277).

[ <ಚಮ್ಮಟಿಗೆ? ]

**ಚಮ್ಮವಟ್ಟಿಗೆ, ಚಮ್ಮಟಿಕೆ$_2$, ಚಮ್ಮಟಿಗೆ$_2$, ಚಮ್ಮಟ್ಟಿಗೆ$_2$, ಸವಟಿಗೆ, ಸಮ್ಮಟಿಗೆ** (ನಾ). ಬಾರುಕೋಲು ; ಚಾವಟಿ : ತತ್ತುರಂಗವನು ತಗೆದಂಗಣಕೆ ಹಲ್ಲಣಿಸಿ ಹತ್ತಿ ಹೊಯ್ದಾ ಚಮ್ಮವಟ್ಟಿಗೆಯ ಹುಯ್ಲಿಗೆ ಕಱುತ್ತು ನಭಕುಪ್ಪರಿಸೆ. ಜಗುಳ್ದಧೋಗತಿಗೆ ಬೀಳ್ವಂದದಿಂ ಬಿಳ್ದನವನು (ಸಮ್ಯಕೌ. ೧೭-೬೦). **ಚಮ್ಮಟಿಕೆ$_2$ :** ಬಿರುದರ ಬೆನ್ನ ಚಮ್ಮಟಿಕೆ ಗಂಡರ ದಾವಣಿ ವೀರಘಂಟೆಯುಪ್ಪರಗುಡಿ ಬಿಲ್ಲ ಜೇವಣಿಕೆ ಕಣ್ಣಲೆ ಕಾಸದೆಯೆಂಬ ಡೊಂಬಿನಾಳ್ ಧುರಧರರೆಯೊಳ್ ಸಹಸ್ರವಿದಿರಾದಡಮಂತಕನೆಮ್ಮವೋರಿಯಂತಿರೆ ಕಡೆವೊಯ್ವೆನಲ್ಲದಡೆ ಮಾಡುವೆನಗ್ನಿಮುಖಪ್ರವೇಶಮಂ (ಮಹಾನೇ. ೧೧-೧೩೬) ; ಚಮ್ಮಟಿಕೆಯಂ ಪಿಡಿದು ರಥವನು ತಿರುಗಿಸುತಲಂದು (ರಾಮದಿ. ೫೯): ಎತ್ತಿ ಚಮ್ಮಟಿಕೆಯನ್ನು ಚಪ್ಪರಿಸುತ್ತ ವಾಜಿಗಳನ್ನು ಗರಗರಸುತ್ತ (ಮುರ್ದ್ರಾಶಾ. ೫-೩೦). **ಚಮ್ಮಟಿಗೆ$_2$ :** " ಚರ್ಮದಂಡಃ, ಕಶಾ – ಈ ೨ ಚಮ್ಮಟಿಗೆ " (ಹಲಾಯು. ೭೩-೨೮೮) : " ಕಶೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಿಕ್ಕು " (ಮಂಗರಾ. ೮೧-೧೩) : ಅನ್ನೆಗಂ ನಕುಳನುಮಂಕವಣಿಯುಂ ಬಾಳುಂ ಬಾರುಂ ಚಮ್ಮಟಿಗೆಯುಮನೊರ್ವ ಕೀಱಾಳಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೫೪ ವ); ಬಟಲೊಡ್ಡಲೊಳ್ ಚಮ್ಮಟಿಗೆಗುತ್ತುಗಳುಮಂ . . . ಮೆಯ್ಯೊಳ್ಪೊವಲ್ಪೊರಜೆಗಳ ಕಟ್ಟಿಂ ವುಟ್ಟಿದ ಬೇನೆಯುಮನೆಂತು ಸೈರಿಸಿದೆ (ಕಾದಂಬ. ೭೩೦); ಕಟ್ಟಿ ಚಮ್ಮಟಿಗೆ ಮುಟ್ಟಿದವೊಲ್ ನಸುಬೆರ್ಚೆ (ಕಾವ್ಯಾವ. ೮೨೩) : ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟಿಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ . . . ತಟ್ಟನೊಟ್ಟಜೆಯ ಕಟ್ಟುಬ್ಬಟೆಯ ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿಜಾ. ೬-೫೫ ವ) : ಮಡದತಾಂಕಿ ಚಮ್ಮಟಿಗೆಯಂ ತೆಗೆದೊತ್ತಿದ ಮುನ್ನಮಾ ಹಯಂ ಮಿಡಿದವೊಲಾರ್ಟಿನಿಂ ನೆಗೆದು ಪಶ್ಚಿಮದಿಕ್ಕಿಗೆ ವಾಯ್ದು (ಪುಣ್ಯಾಸ್ರ. ೦೦-೩೦) ; ತುರಗವನು ಬೋಳಯಿಸಿ ವಾಘೆಯ ತಿರುಹಿ ಚಮ್ಮಟಿಗೆಯಲಿ ತೇಜಿಯ ಬರಿಯ ಬೆದಱಿಸಿ ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುಮಾಭೀ. ೩-೨); ಎಸೆವ ಮಿಳಿ ಸರ್ಪಮುಪನಿಷದಾಳಿ ಹಯ ರಜ್ಜು ಮಿಸುಪ ಚಮ್ಮಟಿಗೆಯೋಂಕಾರಂ (ಚಬಪು. ೪೮-೪೨) : ಈ ಚಮ್ಮಟಿಗೆ ಸುಲಿದು, ಬೆನ್ ಪಸುರ್ಗಟ್ಟಿ (ಅಶ್ವತ್ಥಾ. ೬-೯೫) ; ತನ್ನ ಕೋಣೆಯಲ್ಲಿ ಕುಳಿತು ತನ್ನ ಕಲ್ಪನಾವಿಲಾಸಕ್ಕೆ ಚಮ್ಮಟಿಗೆಯನ್ನು ಬೀಸಿ ಎತ್ತೆತ್ತೋ ಹರಿಬಿಡುವನು (ಜಯಂತ. ೬೯). **ಚಮ್ಮಟ್ಟಿಗೆ$_2$ :** " ಚರ್ಮಪಟ್ಟಿಕಾ–ಚಮ್ಮಟ್ಟಿಗೆ, ಸವಟಿಗೆಯೆನಲುಮಕ್ಕುಂ"(ಶಮದ. ೨೯೪ ಪ್ರಯೋ): "ಚಮ್ಮಟಿಗೆ – ಚಮ್ಮಟ್ಟಿಗೆ " (ಶಬ್ದಾನು. ೩೭೮ ಪ್ರಯೋ). **ಸವಟಿಗೆ :** "ಚರ್ಮಪಟ್ಟಿಕಾ–ಚಮ್ಮಟ್ಟಿಗೆ, ಸವಟಿಗೆಯೆನಲುಮಕ್ಕುಂ" (ಶಮದ. ೨೯೪ ಪ್ರಯೋ) : " ಸವಟಿಗೆ, ಚಮ್ಮಟಿಗೆ–ಚರ್ಮಪಟ್ಟಿಕಾ " (ಕರ್ಣಕೋ. ೪೩). **ಸಮ್ಮಟಿಗೆ :** ರಾಹುವ ಕೇತುವ ಬಲಿದಿಕ್ಕಳಿನಿಂ ತೆಗೆದಂಥಾಸುರ ನೆರ್ದಗಲ್ಗೊಳ್ ವಜ್ರದ ಸಮ್ಮಟಿಗೆಯ ನಿಗುಚಿ ಕುಳಿಕನ ವಿಷದಿಂ ನೀರೂಡಿಸಿ (ವೀರೇಶ. ೨-೯). [ <ಸಂ. ಚರ್ಮಪಟ್ಟಿಕಾ ]

**ಚಮ್ಮವಾವುಗೆ, ಚಮ್ಮಾವುಗೆ, ಚಿಮ್ಮಾವುಗೆ, ಸಮ್ಮವಾವುಗೆ, ಸಮ್ಮಾವುಗೆ**(ನಾ). ಚರ್ಮದ ಪಾದುಕೆ,–ಪಾದರಕ್ಷೆ: ಸೊಸೆವಿರ್ಗೆಲ್ಲಂ ಸಲೆ ಚಮ್ಮ [ಪಾಠಾಂ. ರ್ಮ]ವಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೦-೧೨೦). **ಚಮ್ಮಾವುಗೆ :** ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೬೧) ; ಮೂವತ್ತಿರ್ವರ್ ಸೊಸೆವಿರ್ಗಂ ಚಮ್ಮಾವುಗೆಯಂ ಮಾಡಿಸಿ ಕೊಟ್ಟಳ್ (ಜೀವಸಂ. ೦೦೮-೩೭ವ); ಆತನಾ ಕಂಬಳಮಂ ಕಂಡು ಕರ್ಕಶಮದನೊಲ್ಲೆನೆಂದು ಮರಳಿ ಕಳಿಪಲಾ ಯಶೋಭದ್ರೆ ಮೂವತ್ತಿರ್ವರ್ ಸೊಸೆಯರ್ಗೆ ಚಂಮಾ[ ಮ್ಮಾ ] ವುಗೆಗಳಂ ಮಾಡಿಸೆ (ಪುಣ್ಯಾಸ್ರ. ೬-೩೨) : ಪಲ್ಲಕ್ಕಿಯಿಂದಿಳಿದು ಚಮ್ಮಾವುಗೆ ಮೆಟ್ಟಿ (ಭರತೇ. ೪೭-೧೨) ; ಹರಳಯ್ಯ ಬಸವೇಶಂಗೆ ಪ್ರೀತಿಯಿಂ ನಮಿಸಿ ಚಮ್ಮಾವುಗೆಯ ಮುಂದಿಟ್ಟು ಮೆಟ್ಟೆನ್ನ ಗುರುವೆ ಎನಲು (ಪ್ರಭುಪು. ೯-೧೦೦) : ಶಿವಕವೀಶ್ವರರ ಪ್ರಸಾದವಂ ಸವಿವೆ ಮೇಣವರ ಚಮ್ಮಾವುಗೆಯ ಮುಡಿದು ಮುಕ್ತ್ಯಂಗನೆಯ ತವಕದಿಂ ನೆರೆವೆನು (ಶಿಕೋಪು. ೩-೫). **ಚಿಮ್ಮಾವುಗೆ:** ಒಪ್ಪವಸಿಕ್ಕಿದ ಎಪ್ಪತ್ತುಗೊಂಡೆಯ ಸರ್ಪನ ಹೆಡೆಗೈಯುತಲಿ ಚಿಮ್ಮಾವುಗೆಯ ಸುಪ್ಪಾಣಿಯಿಂದ ನಯಮಿಟ್ಟ (ಶರಚ. ೨೯೯) : ಈ ಚಿಮ್ಮಾವುಗೆಗಳಸ್ನಾದರೂ ಸ್ವೀಕರಿಸಿ ನನ್ನ ಕುಲಕೋಟಿಯನ್ನೆಲ್ಲ ಉದ್ಧರಿಸುವ ಕೃಪೆಮಾಡಿರಿ! (ಶರಚ. ೩೦೧). **ಸಮ್ಮವಾವುಗೆ:** ಸೊಸೆವಿರ್ಗೆಲ್ಲಂ ಸುಸಮಾನಚಿತ್ತದಿಂದಿಂದು ಸಮ್ಮವಾವುಗೆಯನಲ್ತೆ ಮಾಡಿಸಿಕೊಟ್ಟಳ್ (ಸುಕುಮಾ. ೦೦-೧೨೧) : ದೇವರ ಸಮ್ಮವಾವುಗೆಗಳಂ ಪಿಡಿದೆಂಬುದ ನಿಂಬುಕೆಯ್ದು ಸದ್ಭಾವಮೆ ಸಾಲ್ಗುಂ (ಪಂರಾಮಾ. ೭-೬೮) : ಬೀಮಮಾರುತ ರುಗ್ಮಿಣನ ಪುರಕೆ ಪೋದ ಕಾವನ ಕೈಸೆಱೆ ತಂದು ಭೂವರ ಕೇಳ್ನಿನ್ನ

ಪದಪದ್ಮಕೆ ಸಮ್ಮಾವಾವುಗೆಗಳನಿಕ್ಕಿಸುವವು (ಚೀ.ಮಿ.ಸಂ. ೨೬-೧೪೧); ಸಮ್ಮಾವುಗೆ: ಮೆರೆವ ಸಮ್ಮಾವುಗೆಯ ಮುಅಂಕದಿಂ ತೆಗೆದುಟ್ಟು ಹೆತ ದುಕೂಲದ ಮುಂಜೆಱಂಗಿನಿಂ (ಪದ್ಮರಾ. ೩-೧೨); ಲಳಿತ ದಾಮೋದರಂ ವರಸೋಮಯಾಜಿಗಳ್ಪಳಿಯ ಸಮ್ಮಾವುಗೆಯ ಮಾಧವಂ (ಅರಾಜ. ೬-೦೬): ಜನಮುನಿಗಳೊಡನೆ ವಾದಿಸಿಯವರು ಸೋಲ್ವುದು ಪದವಿನತರಾಗಲ್ಕೆ ಸಮ್ಮಾವುಗೆಯ ಸೇವೆಯಂ ಕೊಟ್ಟವರ ರಕ್ಷಿಸಿದನು (ವೀಕ್ಷ್ಯಪು. ೪-೯-೫೬): ಚಿನ್ನಗಂಬಿಯ ಪಟ್ಟಿ ಪಚ್ಚಡಂಗಳನೊಲಿದು ಚನ್ನಾಗಿ ವಲ್ಲಿವಾಟವ ಪೊದೆದು ಯಡಕೆರದಿ ಪೊನ್ನೊರೆ ಕಠಾರಿಯುಮನಾಂತು ವರಹಸ್ತದೊಳಕುಚ್ಚಮಂ ಪಿಡಿದು ನಡಿಯೇಯಿನ್ನು ಜರಿಸರಿನದ ಸಮ್ಮಾವುಗೆಯ ಮೆಟ್ಟಿ (ನನಚೋ. ೦೬-೫೭). [ ಚಮ್ಮ + ಪಾವುಗೆ. / ಸಂ. ಚರ್ಮಪಾದುಕಾ ]

**ಚಮ್ಮಳಗೆ** 'ಚಮ್ಮಾಳಿಗೆ' ನೋ.

**ಚಮ್ಮಳಿ** (ನಾ). ನವಗ್ರಹಗಳಲ್ಲಿ ಒಂದಂ ; ಕೇತು : " ಚ[ಪಾಠಾಂ. ಚೆ] ಮ್ಮಳಿಯೆಂದು ಕೇತು " (ಕಳಸಾ. ೩-೬೨).: " ಉಜೆ ಚಮ್ಮಳಿ ಕೇತು ರಾಹು ಬಾಂಬಾವಕ್ಕುಂ " (ಕವಿಕಂ. ೪೨). 'ಚಾಟ್' ಪರಾ. [ ? ]

**ಚಮ್ಮಳಿಕೆ** (ನಾ). = ಚಮ್ಮಳಿ ಚಮ್ಮಳಿಕೆಯೆನೆ ಕೇತು " (ಕರ್ಣ. ೩೩). [ < ಚಮ್ಮಳಿ ]

**ಚಮ್ಮಾರ**, ಚಂಬಾರ್, ಚಂಬಾರ, ಚಮ್ಮರ (ನಾ). ಚರ್ಮದ ಕೆಲಸ ಮಾಡುವವನು ; ಚಮಗಾರ ; ಸಮಗಾರ: " ಚಮ್ಮಾರ – ಚರ್ಮ ಕಾರ " (ತದ್ಭತ್ವ. ೦೨). **ಚಂಬಾರ್:** (ಶ್ರ.ಸ್ಗ. II, ೩೪೩); (ಮ್ಯಗೆಜೆ. IV, ೬೬೬). **ಚಂಬಾರ:** (ಎಪಿಗ್ರ. XVII, ೨). **ಚಮ್ಮರ:** ಚಮ್ಮರನ ಕಣ್ಣು ಮಬ್ಬೇರಿದುದು, ಕಿವಿ ಕೇಳದಾದುದು (ಕಗದ್ಯ. ೬೪).
[ < ಸಂ. ಚರ್ಮಕಾರ ]

**ಚಮ್ಮಾರುಲಿ** (ನಾ) ಚರ್ಮದ ಮೆಟ್ಟು (?) : ಮೆಟ್ಟಿದ ಚಮ್ಮಾರುಲಿಯ ಹೆಱನೊಸಲೊಳಗಿಟ್ಟ ಕಸ್ತುರಿಯು ತಿಲಕದ ಮುಟ್ಟಿ ಹಿಡಿದ ಕೈಸಾಣೆಯ ಕೊನಬುಗಳಿಟ್ಟಣಸಿಹರು ಬೀದಿಯತಲಿ (ಕಂಸವಿ. ೬-೦೯೩). [ ? ]

**ಚಮ್ಮಾವುಗೆ** 'ಚಮ್ಮಾವಾವುಗೆ' ನೋ.

**ಚಮ್ಮಾಳ** (ನಾ). ಒಂದು ಬಗೆಯ ಚರ್ಮವಾದ್ಯ : ಚಮ್ಮಾಳ ಬಾರಿಸು ವವರು ಬಂದರು (ರೂಢಿ). [ ← ಭುರಾ. ಸಂಬಳ್ ]

**ಚಮ್ಮಾಳಿಗೆ**, ಚಮ್ಮಳಗೆ, ಚಮ್ಮೋಳಗೆ, ಚಿಮ್ಮಣಿಗೆ (ನಾ). ಚರ್ಮದ ಪಾದುಕೆ: ನಂಬಿಯಣ್ಣಂ ಪರವಾಲೀಲೆಯೊಳುದ್ದ ಚಮ್ಮಾಳಿ[ಪಾಠಾಂ. ವು]ಗೆ ಗಳಂ ಮೆಟ್ಟಿ (ಬಸವ. ೨೬-೦೪) ; ಹಳ್ಳಯನೆಂಬೊ ಮಾದಿಗ ತನ್ನ ಸತಿಗೂಡಿ ಒಳ್ಳೆ ರೌಪಾದ ಚಮ್ಮಾಳಿಗೆಯಕ್ಕ (ರಿಣ್ಣಕಾ. ೭-೦೦). **ಚಮ್ಮಳಗೆ :** ಚಮ್ಮಳಗಿ[ಗೆ]ಯ , ಮೆಟ್ಟಿ ವಾರೆದುರುಬಾ ಕಟ್ಟಿ (ವಿಶಾಸು. ೦೬-೩). **ಚಮ್ಮೋಳಗೆ :** ಚಮ್ಮೋಳಗೆಯ ಮೆಟ್ಟಿದವರುಂಟೇ ಕಂಟಕಗಳ ಭಯ (ಜಗದಾ. ೨೦೪). **ಚಿಮ್ಮಣಿಗೆ:** ಸರ್ವರು ಮೆಟ್ಟುವದಕ ಕಾಲೊಳು ಚಿಮ್ಮಣಿಗೆ (ಕನ್ನಡಾ. ೮೪); ಮೆಟ್ಟದಾನ ಚಿಮ್ಮಣಿಗೆ ಉಟ್ಟದಾನ ಧೋತರ (ಜೋಳಗೀ. ೦೬೬). [ ಚಮ್ಮ + ? ]

**ಚಮ್ಮೋಳಗೆ** 'ಚಮ್ಮಾಳಿಗೆ' ನೋ.

**ಚಯ್$_1$** (ನಾ). ಒಂದು ಅನುಕರಣ ಪದ: ಚಯ್‌ಚಯ್ಯೆಂಬಾಗಳ್ ಮಯ್ ಮಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವು[ರ್ಕಿಂ] (ಪಂಪಭಾ. ೦೩-೩೪).

**ಚಯ್$_2$**, ಚಯ್ಯ, ಚೆಯ್$_1$, ಚೈ (ನಾ). ಚೆಲ್ಲಾಟ ; ವಿನೋದ. 'ಚಯ್ಯಾಡು' ಪರಾ. **ಚಯ್ಯ :** " ಚಯ್ಯವು[ಪಾಠಾಂ. ಚಯ್ಯಾಟ, ಚೆಯ್ಯಾಟ]ಮೆನಲ್ ಚೆಲ್ಲಾಟವಮಕ್ಕುಂ " (ಕಲ್ಪಿಸ್ಯ. ೨೦) ; ಚ[ಪಾಠಾಂ. ಬ] ಯ್ಯವಾಡುವುದೇಡಿವುದು (ರಾಮವಿ. ೦೬-೮೬). **ಚೆಯ್$_1$ :** 'ಚೆಯ್ಯಾಟ' ಪರಾ. **ಚೈ :** 'ಚೈಗುಡು' ಪರಾ. [ ? ]

**ಚಯ** (ನಾ). ೧. ಗುಂಪು ; ಮೊತ್ತ ; ರಾಶಿ ; ಸಮೂಹ : ದಿಗಂಬರ ಕೆಟಂಬಳಂ ಬಳಸಿ ಕೀರ್ತಿವಲ್ಲೀಚಯಂ (ಆದಿಪು. ೩-೫೭) : ಸ್ಮರಕಾಂತಾರತ ಘರ್ಮಬಿಂದುಚಯಮೋ (ಕಾದಂಪೂ. ೭೪೧); ಇಂದ್ರಿಯಚಯವ ಗೆಲುವದೆ ತನ್ನ ಗೆದ್ದುದದು (ನೀಗಟ್ಟು. ೦೨೪). ೨. ಮಣ್ಣಿನ ದಿಣ್ಣೆ ; ೩. ಕೋಟೆಯ ಸುತ್ತುಗೋಡೆ, – ಪ್ರಾಕಾರ. [ ಸಂ. ]

**ಚಯನ** (ನಾ). ಕೂಡಿಹಾಕುವಿಕೆ; ಒಟ್ಟುಗೂಡಿಸುವಿಕೆ; ಶೇಖರಿಸುವಿಕೆ; ರಾಶಿಮಾಡುವಿಕೆ : ಚಯನಂ ಮುಗಿಯೆ ಬಲವಂದುಮಡವಂದುಮಾ ಚಿತೆಯಂ (ಶ್ರೀರಾಮಾ. ೧೨೦-೨೨೪). 'ಸಂಚಯನ' ಪರಾ. [ ಸಂ. ]

**ಚಯಿತ್ರ** (ನಾ). = ಚೈತ್ರ ೨ : ಚಯಿತ್ರ ಸು ೧೦ ಬ್ರಿದಂದು (ಎಕ. XI, ಚಿತ್ರದು. ೦೨-೧೪ ; 1286). [ < ಸಂ. ಚೈತ್ರ ]

**ಚಯಿತ್ರಪೈಯಿತ್ರ** (ನಾ). = ಚೈತ್ರಪವಿತ್ರ : ಶ್ರೀಗ್ರಾಮೇಶ್ವರದೇವರಂಗ ಭೋಗಕ್ಕಂ ನಿತ್ಯನಿವೇದ್ಯಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕಂ ಚಯಿತ್ರಪೈಯಿತ್ರಕ್ಕಂ . . . ಬಿಟ ಗರ್ದೆ (ಸೌಇಇ. XX, ೬೬-೫೬ ; 1118).
[ < ಚೈತ್ರಪವಿತ್ರ ]

**ಚಯ್ಯ** 'ಚಯ್$_2$' ನೋ.

**ಚಯ್ಯಾಟ**, ಚೆಯ್ಯಾಟ (ನಾ). ಚೆಲ್ಲಾಟ ; ವಿನೋದ ; ಚೇಷ್ಟೆ : " ಚಯ್ಯಾಟ[ಪಾಠಾಂ. ಚಯ್ಯವು]ಮೆನಲ್ ಚಲ್ಲಾಟಮಕ್ಕುಂ " (ಕಲ್ಪಿಸ್ಯ. ೨೦). **ಚೆಯ್ಯಾಟ:** ಕುಚೇಷ್ಟಿತದ ಚೆಯ್ಯಾಟದ ಮುಗುಳ್ನಗೆ ಮೆತ್ತು (ಮಂತ್ರಶ. ೮೮-೯). [ ಚಯ್$_2$ + ಆಟ ]

**ಚಯ್ಯಾಡಂಬರ** (ನಾ). ಕಾಂತಿ ; ಶೋಭೆ : ಇಂದ್ರವಜಕ್ಕೆ ಚಯ್ಯಾಡಂಬರ ಮೆಂಚಂತಿರಲೊಪ್ಪಂಬಡೆದಾತನಿರೆ × × ಎಱೆಯಂಗನ್ನಿಪಂ (ಪ್ರಿಆರ. ೦೧೨೮, ೯-೦೦ ; 1133). [ ? ]

**ಚಯ್ಯಾಡು**, ಚೆಯ್ಯಾಡು (ಕ್ರಿ). ಚಲ್ಲಾಟವಾಡು ; ವಿನೋದಮಾಡು: ಕೆಯ್ಯೊಕಲೆತ್ತಿಯಾನೀ ಮೆಯ್ಯಾರ್ವಿನಮಪ್ಪಿಕೊಂಡು ಪಣೆಯಿಂ ಪಣೆಯಾ ದೊಯ್ಯನೆ ಹೆಡಿಡು ತಣಿಯದೆ ಚಯ್ಯಾಡುವ ತನಯನೆನಗದೆಂದಾದಪನೋ (ಧರ್ಮನಾ. ೩-೦೨೦). **ಚೆಯ್ಯಾಡು:** ದೂರದಿಂದೆ ಪರಿತಂದಪ್ಪನೆಪ್ಪನುತ್ತಪ್ಪೆ ಪೊಯ್ಯಗೆ ಚೆಯ್ಯಾಡುವ ಪೋಲುದಂ ಮುಸುಕಿಡುತ್ತೋಯೆಂಬ . . . ಕಂದನೊಳ್ ನಲಿವ ಪೆಣ್ಣೊಂ ನೋಂಪಿಯಂ ನೋಂತಳೋ (ಜಗವಿ. ೨-೬೭). 'ಚೈಗುಡು' ಪರಾ. [ ಚಯ್$_2$ + ಆಡು$_1$ ]

**ಚಯ್ಯಾಳಿ** (ನಾ). (ಸಂತೋಷದ ಸಮಯದಲ್ಲಿ)ವಾದ್ಯವನ್ನು ನುಡಿಸುವ ಒಂದಂ ಗತ್ತು (?): ಹೊಟ್ಟೆ ಬಸಪ್ಪನು ಉತ್ಸಾಹದಿಂದ 'ಚಯ್ಯಾಳಿ'ಯ ಗತ್ತನ್ನು ಹಿಡಿಯುತೊಡಗಿದನು (ಹಳ್ಳಿಬ. ೩೮). [ ? ]

**ಚರ** (ಗು). ೧. ಚಲಿಸುವ; ಗತಿಯುಳ್ಳ; ನಡೆಯುವ. ೨. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ : ವಾರಸುದಾರರು ಜವಾನುಗಳನ್ನು ತೆಗೆದುಕೊಳ್ಳಲು ನಿರಾಕರಿಸಿದಾಗ ಓಡಿಹೋದವನ ಚರ ಆಸ್ತಿ ನಮಗೆ ಸೇರುತ್ತದೆ (ಪ್ರತಾಇ. II, ೪೭೮). (ನಾ). ೩. ಚಲಿಸುವವನು ; ನಡೆಯುವವನು : ಪರನಪರಂ ಭವನಭವಂ ಚರನಚರಂ . . . ಎನಿಪ ಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳವೋ (ಜಗವಿ. ೩-೯೬). ೪. ಚಲಿಸುವ ವಸ್ತು ; ಪ್ರಾಣಿ : ಪುರಗಗನಜಲವನಚರಂಗಳು ಚರಗಳವು (ಅಮೃತ. ೪-೬೪). 'ಚರಾಚರ' 'ಜಲಚರ' ಪರಾ. ೫. ಗೂಢಚಾರ; ಬೇಹುಗಾರ : "ಅಪಸರ್ಪಃ, ಚರಃ, ಚಾರಃ—ಈ ಮೂಱು ಅರಸಾಳು " (ಹಲಾಯು. ೬೦-೨೮೧) ; ಅವಧರಿಪುದೆಂದು ಚರನಿಂತೆಂದಂ (ಪಂರಾಮಾ. ೪-೫೬); ವಿಜಯಲಕ್ಷ್ಮಿಯ ಸೆಱಗ ಹಿಡಿದನು ದ್ರೋಣನೆಂದರು ಚರರು ಭೂಪತಿಗೆ (ಕುಪ್ರಾದ್ರೋ. ೦೮-೮). ೬. [ವೀಶೈ] ಜಂಗಮ : ಜಂಗಮ ವೆನಿಸಿಕೊಳ್ಳುವ ಚರಾದಿಗಳು (ಅವಹಂ. ೨೫೮-೧೦೬೩); ನಟವರ ಕಾಯಕವ ಮಾಡಿ ದೊರೆದರ್ಥದಿಂ ಚರಕೆ ಭಕ್ತಿಯಂ ನಡೆಸುತಿರಲು (ಪ್ರಾಛರಾ. ೨-೬) ;

ಚರವು ಗೋಕ್ಷೀರವಂ ಬೇಡೆ ಕೊಟ್ಟಗೆಯತ್ತ ಬಱಿದುಗವಿಲೆಯ ಕರೆದು ಸಲಿಸಿದಂ (ಧಾಭಾಕ. ೮-೩೪). ೭. [ವಿಜ್ಞಾ] ವಿದ್ಯುದ್ವಾಹಿಯಾದ ಕಣ: ವಿದ್ಯುತ್ತನ್ನು ಹೊತ್ತ ಅಣುಭಾಗಗಳಿಗೆ ಚರಗಳೆಂದು (Ions) ಹೆಸರು (ಭೌತವಿ. ೩೪೬). [ಸಂ.]

**ಚರಂಡಿ** (ನಾ). ಕೊಳಚೆನೀರು ಹರಿದು ಹೋಗಲು ಮಾಡಿದ ಮೋರಿ; ಗಟಾರ: ನಮ್ಮ ನಗರಗಳ ಚರಂಡಿಗಳಲ್ಲೂ ಸಿಗದು ಇಂಥ ದುರ್ಗಂಧ! (ಮೂಣಸ. ೭೮): ಅಡುಗೆಮನೆಯ ಕೊಳಚೆನೀರನ್ನು ನಲ್ಲಿಗಳ ಅಥವಾ ಚರಂಡಿಗಳ ಮೂಲಕ ದೂರ ಒಯ್ಯಬೇಕು (ಅಡುಶಾ. ೪೦): ಅವಳು ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೂ. ೦೬೪); ಅಲೆಕ್ಸಿ, ಗುಂಡಿ ತೋಡಿ, ಚರಂಡಿ ಹೊಡೆದು ತನ್ನ ಕೆಲಸವನ್ನು ಮುಗಿಸಿದನು (ಹೋಧಕು. ೧೬).

[ ?. / ಪಾರ. ಚರಾಂಡಿ = ಗಲ್ಲಿ ]

**ಚರಂಡಿತನ** (ನಾ). ಕೊಳೆಮಾಡುವಿಕೆ; ಹೊಲಸುತನ: ಚಂಡಿಕೆಯ ತೆಗೆದ ಚೆಂಡಿನೊಳಿಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯ ಚೆಂಗಾಲ! (ನವ್ಯಧ್ವ. ೦೨-೬). [ಚರಂಡಿ + - ತನ]

**ಚರಂತ** 'ಚರಂತಿ' ನೋ.

**ಚರಂತಿ, ಚರಂತ** (ಗು). ೧. ಚಲಿಸುವ: ತುಟಿಗೆ ತುಟಿಯಿಡುವ ರತಿಕಾಮರ ಜೋಡಿ! ಚರಂತಿ ತ್ರಿಶಂಕು ಸ್ವರ್ಗದ ಹೊಸ ಮೋಡಿ! (ಹಂಕಸ. ೩೦-೩). (ನಾ). ೨. [ವೀಶೈ] ಬ್ರಹ್ಮಚರ್ಯವ್ರತವನ್ನು ಕೈಕೊಂಡ ಜಂಗಮ: ಚೆನ್ನರಾಜದೇವರು ಮಠವ ಕಟ್ಟಿಸಿ ಚರಂತಿಗಳ ದಾಸೋಹಕ್ಕೆ ಬಿಟ್ಟ ಗದ್ದೆ (ಮೈಅರಿ. ೦೯೨೮, ೫೫-೫ ; ?); ಯಿಾ ಮಠದ ಚರಂತಿ ಹಿರೇರು (ಎಕ. VII, ಶಿಪಮೊ. ೦೦೬-೫ ; ?). **ಚರಂತ**: ೨. ಚರಂತರ ಮಠದಲ್ಲಿ ಈ ದಿನ ಪುರಾಣ ಪ್ರವಚನವಿದೆ (ಬೂಧಿ). [<ಸಂ. ಚರತ್]

**ಚರಕ₁** (ನಾ). ೧. ಅಲೆದಾಡುವವನು. ೨. ಯಾತ್ರಿಕನಾದ ವಿದ್ಯಾರ್ಥಿ. ೩. ಬೇಹುಗಾರ; ಗೂಢಚಾರ. ೪. ಪ್ರಸಿದ್ಧ ವೈದ್ಯಶಾಸ್ತ್ರಜ್ಞನಾದ ಒಬ್ಬ ಋಷಿಯ ಹೆಸರು. ೫. ಚರಕಋಷಿಯಿಂದ ರಚಿತವಾದ ವೈದ್ಯಗ್ರಂಥ; ಚರಕಸಂಹಿತೆ. [ಸಂ.]

**ಚರಕ₂** (ನಾ). ೧. ನೂಲುವ ರಾಟೆ: ಅವಳು ಚರಕ ತೆಗೆದುಕೊಂಡು ದಾರ ತೆಗೆಯುವುದಕ್ಕೆ ಕುಳಿತುಕೊಂಡಳು (ದೇಜಾಂ. ೫೬); ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು (ಗೃಹವಿ. ೭೨). ೨. ಅರೆಯುವ ಯಂತ್ರ; ಗಾಣ: ಬಂಡವಾಳಗಾರನು . . . ಇಡೀ ರೈತವರ್ಗವನ್ನು ಸರಕಾರೀ ಕರ-ಕಂದಾಯಗಳ ಚರಕದಲ್ಲಿ ಹಾಕಿ ತೆಗೆದು ಸಿಪ್ಪೆದುಸಪ್ಪೆಯಾಗಿ ಮಾಡುತ್ತಾನೆ (ಮೂವಾರ. ೦೪೭). ೩. ಚಕ್ರ; ಗಾಲಿ: ದರುಮದ ಚರಕಂ ನನ್ನಿಯ ಪೊರ್ಕುಳಂ ಮರಿವು ಸಮಾಧಿ ಧೃತಿಯುಮಿರೆ ನೇಮಿ (ಶಾಸಂದ. ೩-೧೦). [←ಮರಾ. ಚರಕ್; ಪಾರ. ಚರ್ಖ್; ಹಿಂ. ಚರ್ಖ್, ಚರ್ಖಾ / ಸಂ. ಚಕ್ರ]

**ಚರಕಿ, ಚರಿಕಿ** (ನಾ). ೧. ಲೋಹ, ದಂತ ಮೊದಲಾದುವುಗಳನ್ನು ತಕ್ಕ ಆಕಾರದಲ್ಲಿ ಕಡೆಯುವುದಕ್ಕಾಗಿ ಸಿದ್ಧಪಡಿಸಿದ ಯಂತ್ರ; ಕಡೆತದ ಯಂತ್ರ; ಲೇತ್‌ಯಂತ್ರ: ಚರಕಿಯ ಭಾಗಗಳನ್ನು ತಕ್ಕಂತೆ ಅಳವಡಿಸುವುದಕ್ಕಾಗಿ . . . ಗಾಡಿಯುಳ್ಳ ಚರಕಿ ಯಂತ್ರದ ತಳಚೌಕಟ್ಟು (Lathe-bed. ಇಂಕಪ). **ಚರಿಕಿ**: ೨. ಕುಂಬಾರನ ತಿಗುರಿ: (+). ೩. ಬೀಸುವ ಕಲ್ಲು: (+). [←ಮರಾ. ಚರಕೀ, ಚರಖೀ; ಪಾರ. ಚರ್ಖಾ; ಹಿಂ. ಚರ್ಖೀ]

**ಚರಗ** 'ಚರುಗ' ನೋ.

**ಚರಚಕ್ರವರ್ತಿ** (ನಾ). ಜಂಗಮರಲ್ಲಿ ಶ್ರೇಷ್ಠನಾದವನು: ಮಲೆಯ ವೀರೇಶ ಸಿದ್ಧರಾಮಸ್ವಾಮಿಯಾ ಕರಕಮಲ ಸಂಭೂತ ಚರಚಕ್ರವರ್ತಿ (ವೀಕೈಕು. ೦-೦-೬). [ಚರ + ಚಕ್ರವರ್ತಿ]

**ಚರಚರ** (ನಾ). ಒಂದು ಅನುಕರಣ ಶಬ್ದ. 'ಚರಚರನೆ' ಪರಾ.

**ಚರಚರನೆ** (ಅ). ಚರಚರ ಎಂಬ ಶಬ್ದದೊಂದಿಗೆ: ಕಲುಷದ್ವೈತ್ಯರನೆಲ್ಲ ಚರಚರನೆ ಸೀಳಿ (ಬಾದೀಕ. ೨೮-೦); ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೂ. ೦೬೪).

[ಚರಚರ + - ಅನೆ₁]

**ಚರಜಿಂದಗಿ, ಚರಜಿಂದಿಗಿ, ಚರಜಿಂದಿಗೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಆಸ್ತಿ; ಚರಆಸ್ತಿ: ಮನೆಗಳನ್ನು ಜಪ್ತಿಮಾಡಿ ಹಿಂಡುವ ಎಮ್ಮೆಯನ್ನು (ಕರಸಹಿತ) ಇತರ ಚರಜಿಂದಗಿಯನ್ನು ಜಪ್ತಿ ಮಾಡಿದರು (ಕರವೀ. ೪೩). **ಚರಜಿಂದಿಗಿ**: ಚರಜಿಂದಿಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಿಂದಗಿಯ ಮೌಲ್ಯವನ್ನು ಕುರಿತ ದಾವೆ (ನ್ಯಾಮೂಕ. ೨೦). **ಚರಜಿಂದಿಗೆ**: "ಚರಜಿಂದಿಗೆ, ಜಂಗಮದ್ರವ್ಯ" (Chattel. ಪಾರಿಶಿ. ೦೪).

[ಚರ + ಜಿಂದಗಿ]

**ಚರಜಿಂದಿಗಿ** 'ಚರಜಿಂದಗಿ' ನೋ.

**ಚರಜಿಂದಿಗೆ** 'ಚರಜಿಂದಗಿ' ನೋ.

**ಚರಟ, ಚಟ್ಟ₂, ಚಿಟ್ಟ₁** (ನಾ). ೧. ದ್ರವವಸ್ತುಗಳ ತಳದಲ್ಲಿ ನಿಂತ ಗಟ್ಟಿಯಾದ ವಸ್ತು; ಗಮ್ಟು; ಗಸಿ: ಸಟಕಾರದ ಚರಟವನ್ನು ಕೂಡಿಸಿ ಮಾಡಿದ ಕಾಜಿನಿಂದ ಆಗುತ್ತವೆ (ಮುಂಬಯು. ೪-೨೨೨); ಬರೀ ಸಾರಿನ ಚರಟ ಇದೆ (ಬೂಧಿ). ೨. ನಿಸ್ಸಾರವಾದ ವಸ್ತು; ಸಾರ ತೆಗೆದ ವಸ್ತು: ಕಾಫಿಯ ಚರಟವನ್ನು ಪಾತ್ರೆ ತೊಳೆಯುವುದಕ್ಕೆ ಬಳಸಬಹುದು (ಬೂಧಿ). ೩. ಶರೀರದ ಹೊರಪದರ; ಚರ್ಮ; ತೊಗಲು. **ಚಟ್ಟ₂**: (+). **ಚಿಟ್ಟ₁**: ೨. 'ಚಿಟ್ಟಬೆಳಗಂ' ಪರಾ.

ಚಟ್ಟಾಎತ್ತು = ಚರ್ಮವನ್ನು ಸುಲಿ; ಹಿಂಸೆಮಾಡು: ಕಿಟ್ಟಗಿಟ್ಟ ಹಡದೀ ನಿನ್ನ ಚಟ್ಟಾಎತ್ತೀನ (ಕನ್ನಜಾ. ೬೦). ಚರಟಾನೇ ಬೆಳಗು, ಚಿಟ್ಟಾನ ಬೆಳಗು=ಚಟ್ಟಾಎತ್ತು: ಸುಳ್ಳು ಬದ್ದೀ ಅಂದ್ರ ನಿನ್ನ ಚರಟಾನೇ ಬೆಳಗೇನು (ಶಿಹುಗು. ೭೩); ನಿನ್ನ ಚರಟಾನೇ ಬೆಳಗೇನು (ಮಿಂಚುಹು. ೦೦೭); ಇವನು ಚಿಟ್ಟಾನ ಬೆಳಗತಾನ (ದೀಪಹ. II, ೫೭).

[ದೇ.₂ ತುಳು. ಚಟ್; ತೆಲು. ಚಟ್ಟ]

**ಚರಣ** (ನಾ). ೧. ನಡೆ; ಸಂಚಾರ. ೨. ನಡೆವಳಿಕೆ; ಆಚರಣೆ; ವ್ಯವಹಾರ. 'ತಪಶ್ಚರಣ' ಪರಾ. ೩. ಅಡಿ; ಪಾದ: "ಅಂಘ್ರಿಃ, ಚರಣಃ, ಪಾದಃ— ಈ ೩ ಕಾಲ್" (ಹಲಾಯು. ೮೪-೩೫೬); ಚ[ಪಾಠಾಂ. ಕ]ರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಭಂಗಿಗಳ್ ನೆಗಟ್ಟೆಡೆಯೊಳ್ (ಆದಿಪು. ೪-೩೪); ಚರಣದೆ ಕಾಂಚಿಯಂ ಗುರುನಿತಂಬದ ಪರ್ವುಗೆಯಿಂದೆ ಮಧ್ಯಮಂ . . . ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದಿವಳ್ (ಕಾದಂಸಾ. ೩೩೩): ಕೂಡಲ ಸಂಗಮದೇವಾ ನಿಮ್ಮ ಚರಣಕಮಲದಲಾನು ತುಂಬಿ (ಬಸವ. ೪೯೨); ಎಂತುಮವಾರ ಚರಣಂ ಶರಣಂ (ಜಗವಿ. ೦-೩೪); ಶಿರುನೀಲಕಂಠರ ಚರಣಮಂ ಪಿಡಿದು (ತಿರುಠ. ದೀ. ೬-೦೬); ಹಿಂದೆ ಚರಣದಲೊದೆದನೊಬ್ಬನ (ಜಾಶಿದಾ. ೨೬-೩೦). ೪. [ಛಂದ] ಪದ್ಯದ ಪಾದ,-ಪಂಕ್ತಿ: ಕವಿತೆಯಲ್ಲಿ ಎರಡು, ಮೂರು . . . ಭಾಗಗಳನ್ನು ಮಾಡಿ, ಒಂದೊಂದಕ್ಕೆ ಅಡಿ, ಚರಣ, ಪಾದ, ಪದ ಮುಂತಾದ ಹೆಸರುಗಳನ್ನಿಟ್ಟಿದ್ದಾರೆ (ಛಂದಶ್ಶಾ. ೦೪). ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ: "ಕ್ರಮ ಚರಣಂ ಪದಯುಗಳಂ ಸಮ ಉಭಯಂ ಬಾಹು ಕಿವಿಗಳೆರಡಱ ನಾಮಂ" (ವ್ಯವಹಾ. ೪-೨). ೬. [ಜೈನ] ನಾಲ್ಕು ಅನುಯೋಗಗಳಲ್ಲಿ ಮೂರನೆಯದು; ಮುನಿಗಳ ಹಾಗು ಶ್ರಾವಕರ ಆಚರಣೆಯನ್ನು ವಿವರಿಸುವ ಶಾಸ್ತ್ರಭಾಗ: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ನಾಲ್ಕು ಅನುಯೋಗಗಳನ್ನು ಜೈನರ ಚತುರ್ವೇದಗಳೆಂದು ಕರೆಯಬಹುದು (ಭಾಕರ. ೦೭೪). 'ಚರಣಾನುಯೋಗ' ಪರಾ. [ಸಂ.]

**ಚರಣಗ್ರಂಥ** (ನಾ). [ಜೈನ] ಚರಣಾನುಯೋಗವನ್ನು ವಿವರಿಸುವ ಗ್ರಂಥ : ಆಚಾರವಾರಾಧನೆ ಮೊದಲಾಗೊಡೆಯ ಚರ[ಪಾಠಾಂ. ಶ್ರವ]ಣ ಗ್ರಂಥಂಗಳುವಂ . . . ಕಲ್ತೊಡಲ್ಲದೆ (ವಡ್ಡಾ.ಆ. ೩-೭).
[ ಚರಣ + ಗ್ರಂಥ ]

**ಚರಣಚೌಪಟ** (ನಾ). ಶ್ರೇಷ್ಠ ಕಾಲಾಳು ; ಪರಾಕ್ರಮಿಯಾದ ಪದಾತಿ: ನೆರಹಿದನು ಹದಿನಾಱುಸಾವಿರ ಕರಿಘಟೆಯನು . . . ಚರಣಚೌಪಟರ್ಕಳು ಲಕ್ಷವ (ಕುಮ್ಮಾ.ಆ. ೨೨-೩). [ ಚರಣ + ಚೌಪಟ (<ಚೌಪಟ್ಟ) ]

**ಚರಣತಲ, ಚರಣತಳ** (ನಾ). ೧. ಕಾಲಿನ ತಳಭಾಗ ; ಅಂಗಾಲು : "ಚರಣತಲ [ಪಾಠಾಂ. ಳ] ಮಂದೊಡಂಗಾಲೆನಿಕುಂ" (ಶಬ್ದಮ. ೫೮-೧೮).
**ಚರಣತಳ:** ೧. ಚರಣತಳಪ್ರಘಾತದೆ ಪದಾತಿಗಳಂ ನಖರಪ್ರಹಾರದಿಂ ತುರಗದಟಂಗಳಂ . . . ನುರ್ಗುಮಾಡಿ (ಚಂದ್ರಪ್ರ. ೦೦-೯೩). ೨. ಕಾಲು; ಪಾದ : ಚರಣತಳಕ್ಕೆ ಬೀಟ್ಟ ಮಣಿಕಾಂಚಿಯನೆತ್ತದೆ ಚುರ್ಚುಸಿರ್ವ ನೂಪುರವನೆ ನೈತು ಸಾರ್ಚದೆ . . . ಬಂದು ಸಂಭ್ರಮದಿನೀಕ್ಷಿಸು ತಿರ್ದಳೀಳೇಶಕಂತುವಂ (ಕುಸುಮಾ. ೮-೦೦) ; ನಂಬಿಯಣ್ಣಂ ಪೂರ್ವಮಂ ನೆನೆದು ಪರಿತಪ್ಪದು ಚರಣತಳದೊಳು ಬೀಳುತುಂ (ಸಂಬಿರ. ೭-೦೨೮).
[ ಚರಣ + ತಲ₂ ]

**ಚರಣತಳ** 'ಚರಣತಲ' ನೋ.

**ಚರಣದೊಡರು** (ನಾ). ಕಾಲಿನ ಆಭರಣ ; ಅಂದುಗೆ : ಚರಣತ್ತು ನಡೆಗಲಿಸೆ ಚರಣದೊಡರುಲಿಯ ಘಿತ್ಕಾರದಿಂ ನಡೆವುತ್ತ (ಪವರ್ತ. ೦೫-೩೩).
[ಚರಣ + ತೊಡರು₂(<ತೊಡರ್₂) ]

**ಚರಣನ್ಯಾಸ** (ನಾ).=ಚರಣವಿನ್ಯಾಸ ೧ : ಚರಣನ್ಯಾಸೋಚಿತಮೇದುರ ಕಾಂಚನಕಮಳಸಪ್ತಕಂ ಕರವೆಸೆಗುಂ (ಚಂದ್ರಪ್ರ. ೦೩-೩೬) ; ಚರಣನ್ಯಾಸದೋಳಾಂಪರಂಬುಜಮನೇಟಂ ದೇವದೇವಂಗೆ ದೇವರಿಳಾಮಂಡಳಮಂ ಮಹಾನಿಲಕುಮಾರರ್ . . . ಪರಿಸ್ಫುರಿತಾದರ್ಶಮಿದೆಂಬಿನಂ ಬೆಳಗುವರ್ತಂತಮ್ಮ ಸದ್ಭಕ್ತಿಯಿಂ (ಅನಂತ. ೦೪-೩೩). [ ಚರಣ + ನ್ಯಾಸ ]

**ಚರಣಪೆಂಡೆಯ** (ನಾ). ಕಾಲಿಗೆ ತೊಡುವ ಒಂದು ಬಗೆಯ ಆಭರಣ: ತಮ್ಮ ನಾಟ್ಯಕ್ಕೆ . . . ನವರತ್ನದ ಬಿರುದಿನ ದಿವ್ಯ ಚರಣಪೆಂಡೆಯವನಿಕ್ಕಿದರು (ಕೆಳದಿ. ೨೪-೩೬) ; ಆಗಿನ ಅವರ ಆಭರಣಗಳೆಂದರೆ . . . ಕಿರುಪಿಲ್ಲಿ, ಚರಣಪೆಂಡೆಯ, ಪಾಯವಟ್ಟ (ಕರ್ಣಾಟ. ೦೭೨).
[ ಚರಣ + ಪೆಂಡೆಯ(<ಪೆಂಡೆ) ]

**ಚರಣಭಜಕ** (ನಾ). ಪಾದಸೇವಕ ; ಭಕ್ತ : ಚರಣಭಜಕಕಂಟಬಂಬನೆಂಬೀ ಬಿರುದ ಪಾಲಿಸಿ . . . ಕೊಡುವುದೆಮಗೆ ಮಹಾಪ್ರಸಾದವನು (ಕುಮ್ಮಾ.ಸ. ೦೦-೩೮). [ ಚರಣ + ಭಜಕ ]

**ಚರಣವಲ್ಮೀಕ** (ನಾ). ಹುತ್ತಗಾಲು ರೋಗ : "ಚರಣವ[ಪಾಠಾಂ. ವಾ] ಲ್ಮೀಕಮನೆ ಹುತ್ತುಗಾಲಕ್ಕು" (ಶಬ್ದಮ. ೦೦೩-೨). [ಚರಣ+ವಲ್ಮೀಕ]

**ಚರಣವಿಡಿ** (ಕ್ರಿ). ಪಾದಗಳನ್ನು ಹಿಡಿ : ಕರವ ಪಿಡಿಯ ಸಾರ್ಸಾರೆಂದು ಜಱೆದೊಡೆ ಚರಣವಿಡಿದು ದುಃಖಿಸುತ (ಕೆಳದಿ. ೬-೦೬೭).
[ ಚರಣ + ಪಿಡಿ₁ ]

**ಚರಣವಿನ್ಯಾಸ** (ನಾ). ೧. ಪಾದಗಳನ್ನು ಇಡುವಿಕೆ ; ಹೆಜ್ಜೆಯಿಡುವಿಕೆ. ೨. [ಛಂದ] ಪದ್ಯದ ಪಾದಗಳ ರಚನೆ. ೧, ೨ : ಚರಣವಿನ್ಯಾಸದೊಳ ಪ್ರಗಲ್ಭನು ತಾನು . . . ಕುಕವಿಯು ಬಾಲಕನಿವನು (ಅಂಬಾಶ. ೦೭೩-೩೩).
[ ಚರಣ + ವಿನ್ಯಾಸ ]

**ಚರಣಸಂಘಟ್ಟ** (ನಾ). ಪಾದಗಳ ಹೊಡೆತ,-ತುಳಿತ : ತನ್ನ ನಿಷ್ಠುರ ಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟರ ಮಕುಟಂಗಳೊಳ್ ತಲೆಗರೆದಿರ್ದನ ಗೆತ್ತು ಸೋದಿಸಿ ನೋಡಿಯುಂ . . . ಕಾಣದೆ(ಗದಾಯು. ೩-೨೮ ಪ).
[ ಚರಣ + ಸಂಘಟ್ಟ ]

**ಚರಣಹತಿ** (ನಾ). ೧. = ಚರಣಸಂಘಟ್ಟ : ಚಾತುರಂಗದ ಚರಣಹತಿ ನಿರ್ಧೂತ ಧೂಳೀಪುಂಜವಖಿಳದಿಗುಜಾತವನೆ ಥಟ್ಟನೆಯುಲೀಲ್ತು ಪಾಂಡುಸುತಸೇನೆ (ಕುಮ್ಮಾ.ದ್ರೋ. ೦೫-೨೩). ೨. ಹೆಜ್ಜೆಯ ಗುರುತು : ಇರುವೆ ಮೊಲ ಪೋದ ಪೆಜ್ಜೆಯು ಹರಿಣ ಚರಣಹತಿ . . . ಬಗ್ಗದಡಿ ಹೆಗ್ಗುರುತು (ನವಮೋ. ೦೩-೦೯). [ ಚರಣ + ಹತಿ ]

**ಚರಣಹೇತಿ**(ನಾ).ಕಾಲುಗಳನ್ನೇ ಆಯುಧವನ್ನಾಗಿ ಉಳ್ಳುದಂ; ಹುಂಜ; ಕುಕ್ಕುಟ : "ಕೃಕವಾಕು ತಾಮ್ರಚೂಡಾಭಿಖ್ಯಂ ತಾಂ ಚರಣಹೇತಿ ಕುಕ್ಕುಟಂ" (ಪಠ್ಯಕೋ. ೪೩-೦೮). [ ಚರಣ + ಹೇತಿ ]

**ಚರಣಾನುಯೋಗ** (ನಾ). [ಜೈನ] ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ : ಚರಣಾನುಯೋಗಮೆಂಬುದು ಕಷಾಯೇಂದ್ರಿಯೋಪಸರ್ಗಪರೀಷಹ ವಿಜಯಿಗಳಪ್ಪ ಚಾರಿತ್ರಮಾನಿಗಳ ಸದಾಚಾರ ಪ್ರಕಾಶನಂ ಗೆಯ್ವುದು (ಜಾಪುಂಶ. ೩೯೯-೩); ಪ್ರಥಮ ಕರಣ ಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ಜೋಯಿಸಮಂ ಕಲಲಪ್ಪರದು (ಸುಕುಮಾ. ೩-೩೩ ಪ). [ ಚರಣ + ಅನುಯೋಗ ]

**ಚರಣಾಭರಣ** (ನಾ). ಕಾಲಿಗೆ ತೊಡುವ ಆಭರಣ: ಸಾಲದೇ ನಿಮಗಿನ್ನು ಕೌರವರೋಲಗದ ಫಲವಾಯ್ತಲಾ ವನಮಾಲೆ ಕೊರಳಿಂಗಲ್ಲ ಚರಣಾಭರಣವಾಯಿತೆಲೆ (ಕುಮ್ಮಾ.ಸ. ೦೩-೩೦). [ ಚರಣ + ಆಭರಣ ]

**ಚರಣಾಯುಧ** (ನಾ).=ಚರಣಹೇತಿ : " ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ-ಈ ೪ ಕೋಟಿ " (ಹಲಾಯು. ೪೦-೯೪) ; ಕರಮೆಸೆಯೆ ಸಮೆದು ಬಂದುದು ಚರಣಾಯುಧಮದಱ ಚಿತ್ರಪರಿಶೋಭೆಗೆ ಲೆಂಕರನೊಂದಾಶ್ಚರ್ಯಸಿರ್ದುದು (ಯಶೋಚ. ೩-೨೪) ; ಬಲಿದ ಚರಣಾಯುಧದವೊಲು ಪರರಳವನೀಕ್ಷಿಸಿ ಕಪಿಯವೊಲು ವ್ಯೆವಳಿಯ ಹತ್ತಿದ ರಂದು ಕಡಿತಲೆಗಾಣಬರುಭಯದಲಿ (ಕುಮ್ಮಾ.ಭೀ. ೯-೩೩) ; ಪಾರಾವತಂ ಪರಪುಷ್ಟಂ ಚರಣಾಯುಧಂ ಶಕುನಿ . . . ರಕ್ಷುಖಗಮಿಕರ್ಗಂ ತದ್ಘನಾಘೋಷದೊಳ್ (ರಾಜಶೇ. ೩-೩೯). [ಚರಣ + ಆಯುಧ]

**ಚರಣಿ** (ನಾ). ಕುದುರೆ, ದನ ಮುಂತಾದುವುಗಳಿಗೆ ಮೇವನ್ನು ಹಾಕಲು ಮಾಡಿದ ಮರದ ಚೌಕಟ್ಟು ; ಗೋದಲೆ ; ಚಂಡಿಗೆ : ಕುದುರೆಯ ಮಂದುರತಮಂ ಪಾರಿ ಪುಗುವಂತೆ ಪೊಕ್ಕು ಚರಣಿಯ ಪುಲ್ಲೊಳ್ ಪೊರಳೊಡಂ (ಪಂಚತಂ. ೦೬೯-೦೦); ತುರಗದುರದುದ್ದ ಮಾಟ್ಟುದು ಚರಣಿಯ ನದಱೊಳಗು ಹಸ್ತವಿಸ್ತಾರಂ ಮತ್ತೆರಡುಂ ಕೆಲದೊಳ್ ಮುಂಡಿಗೆ (ಅಶ್ವಶಾ. ೭-೮) ; ಕೊಂಡೆಳದು ಹಾಯ್ಕಿದಳ್ಚರಣಿಯೊಳಗೆ (ಪಾಶೋಪಾ. ೯-೭೩) ; ಮರದ ಪೆಟ್ಟಿಗೆ, ಭತ್ತದ ತೊಂಬೆ, ಹುಲ್ಲಿನ ಚರಣಿ ಒಂದನ್ನೂ ಬಿಡಬೇಡ (ನಿಕಲ. ೨೩೮).
[ ತುಳು. ಚರಣಿ = ಹುಲ್ಲುಗಾವಲು, ಗೋವಮಾಳ./ಹಿಂ. ಚರನೀ ]

**ಚರಣೋಪಾಂತ** (ನಾ). ಕಾಲಿನ ಬಳಿ,-ಹತ್ತಿರ; ಪಾದದ ಸಮೀಪ: ಅನಂತವೀರ್ಯಕೇವಲಿಗಳ ಚರಣೋಪಾಂತದೊಳ್ ಕೈಕೊಂಡ ವರಾಂಗನಾವಿರತಿವ್ರತದ ಭಂಗಮಂ ಬಗೆಯದೆ (ಪಂಪಾಮಾ. ೯-೦೦೩ ಪ).
[ ಚರಣ + ಉಪಾಂತ ]

**ಚರಪಡಿ** (ನಾ). ಒಂದು ಸ್ಥಳದ ಹೆಸರು (?) : ಅನ್ನ ಬನ್ನು ಕೊಟ್ಟರೆ ಪಳ್ಳದ ಅಲಕಟಂಕಿಯ ಕರ್ಗಲ್ಲೊಟ್ಟಿಯ ಪುಣುಶಿ ಪಡಿಯ ಘೊರಪಡಿಯ ಬಳಿಪುಣುಶಿಯ ಚರಪಡಿಯ ತುಟ್ಟುರೊಟ್ಟಿಯ ಇಶನ್ಯದಿಶಿ ಒಳಗೆಱೆಯ ಬರಡಗೆಱೆ (ಎಕ. XVI, ತಿಪಟೂ. ೦೪೦-೭೨ : ಸು. ೯೦೦). [ ? ]

**ಚರಪಾಠ** (ನಾ). "ನಿರ್ದಿಷ್ಟ ಸ್ವರೂಪವಿಲ್ಲದ, ಅಸಂಗತವಾದ, ಅವ್ಯವಸ್ಥಿತವಾದ, ಸ್ಥಿರಸ್ವರೂಪವಿಲ್ಲದ ಪಾಠಕ್ಕೆ ಅನ್ವಯವಾಗುವಂಥದು. ಅಂಥ ಪಾಠವನ್ನು ಚರಪಾಠ(Fluid text) ಎಂದೂ ಕರೆಯುತ್ತಾರೆ" (ಪಾಠಿಶ. ೦೦೬). [ ಚರ + ಪಾಠ ]

**ಚರಪು** 'ಸೆಜಪ್ರ' ನೋ.

**ಚರಬಂಡವಲ** (ನಾ). ೧. ದನಕರಂ ಮೊದಲಾದ ಚರ ಆಸ್ತಿ : (ಕ). ೨. ವ್ಯಾಪಾರದಲ್ಲಿ ತೊಡಗಿಸಿದ ಬಂಡವಾಳ: (ಮುಂಬಯಿ. ಕಿ: ೫-೧೦೦). 'ಚಲಬಂಡವಾಳ' ಪರಾ. [ ಚರ + ಬಂಡವಲ ]

**ಚರಬಿ** 'ಚರ್ಬಿ' ನೋ.

**ಚರಮ** (ಗಂ). ೧. ಕಡೆಯ ;ಕೊನೆಯ; ಅಂತಿಮವಾದ: ಚರಮಾವಸ್ಥಿತ ವೀತರಾಗಹೃದಯಚೈದ್ಮಸ್ಥ . . . ತವಿಸಿದಂ ಪಂಚಾಂತರಾಯಂಗಳಂ (ಅನಂಪು. ೯-೦೧೯); ಅಂತರಿಕವಾದ ಕವಿಯ 'ಧ್ಯಾನಾತ್ಮಕ ಅಥವಾ ಭಾವಾತ್ಮಕ ಜೀವನವು ಸ್ವಾಭಿವ್ಯಕ್ತಿಯನ್ನೇ ತನ್ನ ಚರಮ ಗುರಿಯನ್ನಾಗಿ ಮಾಡಿಕೊಂಡು ಅದಕ್ಕಾಗಿ ಮಾತ್ರ ಕಾವ್ಯರೂಪವನ್ನು ತಳೆಯುತ್ತದೆ (ಭಾವಗೀ. ೪). ೨. ತೀರ ಕೆಳವಂಟ್ಟದ; ಅತ್ಯಂತ ಕೀಳಾದ. ೩. ಪಶ್ಚಿಮ ದಿಕ್ಕಿನ; ಪಾಶ್ಚಾತ್ಯವಾದ: ಲೋಕಯಾತ್ರೆಗೈದು ಮನೆಯಿಂ ಪೊಗುತರ್ಪನಿಯಂಗೆ ಚರಮದಿಕ್ಕಾಂತೆ ರನ್ನವಟ್ಟಲೊಳ್ ಒಂಗದೆತ್ತಿದಾರತಿಯ ಕೆಂಬೆಳಗೆನೆ ಸಂಧ್ಯಾರಾಗಮೆತ್ತಂ ಪರಿಯೆ (ರಾಮಾಶ್ವ. ೨೨-೬). (ನಾ). ೪. ಕೊನೆಯಲ್ಲಿ ರುವುದು ; ಅಂತ್ಯದಲ್ಲಿರುವುದು : ಪರಪದ ಪೂರ್ವಂ ದ್ವಿತ್ವಾಕ್ಷರಪಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮದ. ೫೯). ೫. ಅಂತ್ಯ ; ಕೊನೆ: ಚರಮದೊಳಯ್ದುಂ ಜ್ಞಾನಾವರಣಮುಮಂ . . . ಪರಿಹರಿಸಿದನಯ್ದುಮಂತರಾಯುಗಳುಮಂ (ಮಲ್ಲಿಪು.೦೯-೯೦). ೬. ತರುವಾಯಂ ; ಬಳಿಕ : "ಪಶ್ಚಾತ್, ಚರಮಂ – ಈ ೨ ಬಳಿಕಂ" (ಹಲಾಯು. ೦೦೭-೨೨); "ಚರಮಮೆನೆ ಪಶ್ಚಾದೆನಲು ಬಳಿಕಮಕ್ಕು" (ಮಂಗರಾ. ೦೨೯-೦೨); ಅಘಾತಿಗಳ ಚರಮದೊಳು ವಿಘ್ನಂ ಪರಿಸಲ್ಪಟ್ಟುದು (ಗೊಮ್ಮಸಾ. ೨-೪). [ ಸಂ. ]

**ಚರಮಕಲ್ಯಾಣ** (ನಾ). [ಜೈನ] ಜಿನನ ಪಂಚಕಲ್ಯಾಣಗಳಲ್ಲಿ ಕೊನೆಯ ಕಲ್ಯಾಣ ; ಪರಿನಿರ್ವಾಣಕಲ್ಯಾಣ : ಪರಮನ ಚರಮಕಲ್ಯಾಣಂ ಪರಿಪೂರ್ಣವಾಗೆ (ಶಾಂತಿಪು. ೧೨-೩೭ ವ). [ ಚರಮ + ಕಲ್ಯಾಣ ]

**ಚರಮಗೀತ** (ನಾ). ಸತ್ತುಹೋದವರಿಗಾಗಿ ದುಃಖಿಸಿ ಅವರ ಗುಣಗಾನ ಮಾಡುವ ಹಾಡು : ತಳಿರಿಗೊಂದು ಚರಮಗೀತ ಹಾಡಲೆಂದು ಬಯಸಿ, ಇಂತು ನುಡಿದೆ ನಾನು (ಮಾಂದಳಿ. ೩೭-೦೩). [ ಚರಮ + ಗೀತ ]

**ಚರಮಗೀತೆ** (ನಾ). = ಚರಮಗೀತ : "ಅಳುಹಾಡು . . . ವಿಲಾಪಗೀತೆ; ಚರಮಗೀತೆ" (Elegy. ಇಂಕನಿ). [ ಚರಮ + ಗೀತೆ ]

**ಚರಮತನು** (ನಾ). ೧. ಕೊನೆಯ ದೇಹ; ಕೊನೆಯ ಜನ್ಮ. ೨. [ಜೈನ] ಕೊನೆಯ ಜನ್ಮದವನು; ಮೋಕ್ಷಗಾಮಿ : ಅಮೂರ್ತರ್ ಚರಮತನು ಸಮಾಕಾರರ್ (ಆದಿಪು. ೧-೨) : ಪರಮಶ್ರೀವಲ್ಲಭಂಗೀ ಚರಮತನುಗಿದೇ ಬಾಬ್ತೆ (ಶಂರಾಮಾ. ೬-೦೨೫). [ ಚರಮ + ತನು ]

**ಚರಮದೇಹ** (ನಾ).=ಚರಮತನು ೧ : ಚರಮದೇಹ ಶತಾತ್ಮಜರಿಂದಮಾ ಮಹೋತ್ಪಲನುಖಿಯಿಂದಮಾ ಸತಿ . . . ಪಡೆದಳ್ . . . ವೈಮೆಯುಂ (ಆದಿಪು. ೮-೪೫) : ಚರಮದೇಹಮಂ ತಾಳ್ದಿ (ಚಾವುಂಪು. ೩೨-೦೫). [ ಚರಮ + ದೇಹ ]

**ಚರಮದೇಹಧರ** (ನಾ). [ಜೈನ] ಕೊನೆಯ ಸಲ ದೇಹವನ್ನು ಧರಿಸಿದವನಂ ; ಇನ್ನು ಮುಂದೆ ಜನ್ಮವಿಲ್ಲದವನು ; ಮೋಕ್ಷಗಾಮಿಂ : ನೀಂ ಚರಮದೇಹಧರನೈ (ಅಜಿಪು. ೬-೬೨). [ ಸಂ. ]

**ಚರಮದೇಹಧಾರಿ** (ನಾ).=ಚರಮದೇಹಧರ: ಇವರಿರ್ವರರಸುಗಳಪ್ಪೊಡೆ ಚರಮದೇಹಧಾರಿಗಳ್ (ಆದಿಪು. ೧೪-೦೦೦ ವ). [ಸಂ. ಚರಮದೇಹಧಾರಿನ್]

**ಚರಮದೈಹಿಕ** (ಗು). ೧. ಚರಮದೇಹಕ್ಕೆ ಸಂಬಂಧಪಟ್ಟ. (ನಾ). ೨.= ಚರಮದೇಹಧರ : ನೀ ಚರಮದೈಹಿಕನು ಧರೆಯೊಳೀ ನಿನ್ನಂತೆ ಪುಣ್ಯಾತ್ಮರುಗಳಾರೈ (ಗಗಣಾ. ೦೭-೯೭). [ ಸಂ. ]

**ಚರಮಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಧ್ಯಾನಗಳಲ್ಲಿ ಕೊನೆಯದು ; ಮೋಕ್ಷಸಾಧನವಾದ ಧ್ಯಾನ : ಪರಮಜಿನಪತಿಯ ಚರಮಧ್ಯಾನದಂತೆಯುಂ . . . ಮಾನ್ನೀರೆ ಮೇರೆದಪ್ಪಿದಂತಪ್ಪುದುಂ (ಮಲ್ಲಿಪು. ೦೨-೦೫೨). [ ಚರಮ + ಧ್ಯಾನ ]

**ಚರಮವಾಕ್ಯ** (ನಾ). ೧. ಕೊನೆಯ ಮಾತು : ಸಾಯುವಾಗ ಆತನಾಡಿದ ಚರಮವಾಕ್ಯ ಎಲ್ಲರ ಕಣ್ಣಲ್ಲೂ ನೀರು ತರಿಸಿತು (ರೂಢಿ). ೨. ಸತ್ತವರ ಸ್ಮಾರಕವಾಗಿ ಅವರ ಸಮಾಧಿಯ ಮೇಲೆ ಬರೆದ ವಾಕ್ಯ : ಕೆಲವು ಹೊಸ ಗೋರಿಗಳು ಕಂಡುಬಂದವು. ಅವುಗಳ ಮೇಲೆ ಚರಮವಾಕ್ಯಗಳಿದ್ದುವು (ನಿಕಟ. ೦೯೨). [ ಚರಮ + ವಾಕ್ಯ ]

**ಚರಮಶರೀರ** (ನಾ). ೧.=ಚರಮತನು ೧ : ಚರಮಶರೀರಮಂ ಪಡುವ ಕೆಯ್ದುಗಳಿಲ್ಲ (ಮಲ್ಲಿಪು. ೦೯-೯೩). ೨.=ಚರಮತನು ೨: ಚರಮಶರೀರಂ ಸಗರಂ ಚರಮಶರೀರರ್ ನಿಜಾಗ್ರಜಾತರ್ ನೀನುಂ ಚರಮಶರೀರಂ (ಅಜಿಪು. ೦೦-೩೫). [ ಚರಮ + ಶರೀರ ]

**ಚರಮಶ್ಲೋಕ** (ನಾ). = ಚರಮಗೀತ : ನಿನ್ನ ಸಾಹಸಕಾರ್ಯಗಳನ್ನು ಪ್ರಶಂಸಿಸುವ ಚರಮಶ್ಲೋಕಗಳಲ್ಲಿ ಪ್ರತಾಪಕುಮಾರಿಯ ಹೆಸರೂ ಸೇರಿಕೊಳ್ಳಲಿ (ಆರ್ಯಾಳ. ೯೮). [ ಚರಮ + ಶ್ಲೋಕ ]

**ಚರಮಸಮಯ** (ನಾ). ೧. ಆಯುಸ್ಸಿನ ಕಡೆಗಾಲ ; ಅಂತ್ಯಸಮಯ ; ಮರಣಪೂರ್ವಕಾಲ : ಸ್ವಕೀಯ ಚರಮಸಮಯದೊಳ್ . . . ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬-೯೯ ವ): ಚರಮಸಮಯದೊಳ್ ಬೋಧಾವರಣಮನಯ್ದಂತರಾಯಂ . . . ತೊಳ್ದಿ ತಾಳ್ದಿದಂ ಗುಣಗಣಮಂ (ವರ್ಧಪು. ೦೫-೬೮). ೨. ಕೊನೆಯ ಅವಕಾಶ : ಸಿಂಹಾಸನಾರೋಹಣಕ್ಕಿದುವೆ ಚರಮಸಮಯಮೆಂದಱಿವಂತೆ (ಶಂರಾಮಾ. ೦೪-೦೨೫ ವ). [ ಚರಮ + ಸಮಯ ]

**ಚರಮಸ್ವರ** (ನಾ). ಶಬ್ದದ ಕೊನೆಯ ಸ್ವರ : ಚರಮಸ್ವರಕ್ಕೆ ಚರಮಾಕ್ಷರ ಕಕ್ಕುಂ ಲೋಪಂ (ಶಮದ. ೨೦೯). [ ಚರಮ + ಸ್ವರ ]

**ಚರಮಾಂಗ** (ನಾ). ೧.=ಚರಮತನು ೧ : ಕೊರಗದೆ ಕರಗದೆ ಪರಮನ ಚರಮಾಂಗಂ ದೀಪ್ರದೀಪಮೆನಿತೊದವಿದೊಡಂ (ಪುಷ್ಪಪು. ೦೪-೨೮). ೨.=ಚರಮದೇಹಧರ: ಪುರುಪರಮೇಶ್ವರಪುತ್ರಂ ಚರಮಾಂಗಂ ಚಕ್ರವರ್ತಿಯಂದೊಡೆ ಪೇಟಲ್ ದೊರೆ ಪೆಱರಾರ್ ಭರತನೊಳ್ (ಆದಿಪು. ೦೨-೦೦೯) : ಈ ದಶರಥಾಗ್ರತನೂಭವನೇಕವಾಕ್ಯನಾಶಾಕರಿಕರ್ಣಚಾಮರಯಶಂ ಚರಮಾಂಗನನಂತವೀರ್ಯಂ (ಶಂರಾಮಾ. ೫-೬೨). [ ಚರಮ + ಅಂಗ ]

**ಚರಮಾಕ್ಷರ** (ನಾ). ಶಬ್ದದ ಕೊನೆಯ ಅಕ್ಷರ; ಅಂತ್ಯಾಕ್ಷರ : ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಂ (ಶಮದ. ೨೦೯). [ ಚರಮ + ಅಕ್ಷರ ]

**ಚರಮಾದರ್ಶ** (ನಾ). ಕೊನೆಯ ಧ್ಯೇಯ ; ಪರಮಾದರ್ಶ : ಅದು ಚರಮಾದರ್ಶವಲ್ಲದಿದ್ದರೂ ನಮ್ಮ ಪೂರ್ವಿಕರ ಆದರ್ಶ (ಕೀಪ್ರಶ್ನೆ. ೦೨೭). [ ಚರಮ + ಆದರ್ಶ ]

**ಚರಮೂರ್ತಿ** (ನಾ).=ಚರಂತಿ ೨: ಚರಮೂರ್ತಿಯಾನೆ ನಿನ್ನಂ ಕರೆಯುತ್ತಿರೆ ಕೇಳದಂತೆ ತಳರ್ದಪೆ (ವೃಷವಿ. ೨೬-೨೩) ; ವಿವಾಹ ಮಾಡಿಕೊಳ್ಳದೆ ಚರಮೂರ್ತಿಯಾಗಿ ಅಲೆಯುತ್ತಿದ್ದ (೧೧೮ಶ. ೩೫) : ಶ್ರೀಶರೀಫರು ಹುಟ್ಟು ಕಡಿವೆ ಚರಮೂರ್ತಿಗಳಾಗಿದ್ದರು (ಶರೀಫ. ೭೯ ಕವಿಕಾವ್ಯಪರಿಚಯ). [ ಚರ + ಮೂರ್ತಿ ]

**ಚರಯಿಸು** 'ಚರಿಸು' ನೋ.

**ಚರರೂಪು** (ನಾ). ಜಂಗಮನ ರೂಪು: ಹರನು ಚರರೂಪಿಂದೆ ಹರಿಯೆಂದು ನುಡಿವೇಳೆ ಕರದ ಹುಟ್ಟಿಂದ ತಿವಿದೀಶನೊಲಿಸಿದ ಗುರುವೆ ಸತ್ಯಕ್ಕ ಶರಣಾಗು (ಕನಾ೯ಳ. ೦೬೨). [ ಚರ + ರೂಪು ]

**ಚರಲಿಂಗ** (ನಾ). [ವೀಶೈ] ಜಂಗಮರೂಪವಾದ ಲಿಂಗ ; ಜಂಗಮ: ಭಾವುರೇ ಚರಲಿಂಗಜೀವಕಳಾವ ಚರಲಿಂಗೈಕದೇವನ (ಬಸವ. ೩೬-೨೪) : ಸರ್ವಕರಣಂಗಳಂ ಚರಲಿಂಗ ಮುಖವ ಮಾಡಿ ಆತ್ಮವಿದ್ಯಾಲಿಂಗದಲ್ಲಿ ಮನ ಸಂದು (ಪ್ರಭುವ. ೨೬) ; ಶಿವನು ಚರಲಿಂಗವಾಗಿ ಬಂದು, ಚೂತಫಲವಂ ಬೇಡಲು, ಪವಾಡದಿಂದ ಚೂತಫಲವಂ ಮಾಡಿ ಇತ್ತು (ಭೃಂಗಶೃ. ೯).
[ ಚರ + ಲಿಂಗ ]

**ಚರಲೋಕ** (ನಾ). ಸ್ಥಿರವಲ್ಲದ ಲೋಕ ; ಮರ್ತ್ಯಲೋಕ : ಚರಲೋಕ ಸ್ಥಿರವೆಂದು ವರರೆಲ್ಲ ನೆರೆನಂಬಿ, ತಿರುತಿರುಗಿ ತಿರೆಯೊಡನೆ ಕೆಡುತಿಹರಲಾ! (ಶಿವಪು. ೨೬-೩). [ ಚರ + ಲೋಕ ]

**ಚರವಿಗೆ** 'ಚರಿಗೆ$_1$' ನೋ.

**ಚರಸಹ** (ನಾ). ಒಂದು ಬಗೆಯ ಕುದುರೆ; ಪಳಗಿಸಿದ ಕುದುರೆ (?): ಈ ಐದು ಕ್ರಿಯೆಗಳನು ತಿಳಿದು ತಿದ್ದಿದ ಕುದುರೆ ಚರಸಹನೆನಿಸಿಕೊಂಬುವುದು (ಅಶ್ವಶಾ. ೨೫-೧೧). [ ? ]

**ಚರಸೇವೆ** (ನಾ). ಜಂಗಮಸೇವೆ: ಶ್ರದ್ಧೆ ಸನ್ಮಾರ್ಗ ಭಕ್ತಿ ಇಲ್ಲದಲ್ಲಿ ಗುರು ಭಕ್ತಿ ಶಿವಲಿಂಗಪೂಜೆ ಚರಸೇವೆ ತ್ರಿವಿಧವೂ ಇತ್ತಲೆ ಉಳಿಯಿತ್ತು (ಮುದೇಶ. ೨೬೪-೧೭) ; ತೊಡೆಯದಿರಿ ಶಿವಪೂಜೆಯ ಬಿಡದು ಮಾಡಿಯದಿರಿ ಚರ ಸೇವೆಯ (ಸರ್ವಜ್ಞ ೩೪-೧೭೯). [ ಚರ + ಸೇವೆ$_1$ ]

**ಚರಸೋಪಾನ**(ನಾ). "ಪ್ರಯಾಣಿಕರನ್ನು ಮೇಲಕ್ಕೆ ಹತ್ತಿಸುವುದಕ್ಕಾಗಲಿ ಕೆಳಕ್ಕಿಸುವುದಕ್ಕಾಗಲಿ ಉಪಯೋಗಿಸುವ ಚರಸೋಪಾನ ; ತಿರುಗು ಮೆಟ್ಟಿಲು" (Escalator. ಇಂಕನ್ನ). [ ಚರ + ಸೋಪಾನ ]

**ಚರಸ್ವತ್ತು** (ನಾ). = ಚರಜಿಂದಗಿ : ನಮ್ಮ ಸ್ಥಿರ ಹಾಗು ಚರಸ್ವತ್ತುಗಳೆಲ್ಲ ಇವರದೇ ಅಲ್ಲವೆ? (ದಾಪಶಿಂ. ೦೦೩). [ ಚರ + ಸ್ವತ್ತು ]

**ಚರಾಕು** (ನಾ). ಹುಲ್ಲುಗಾವಲು. [ ←ಹಿಂ. ಚರಾಗಾಹ್ ]

**ಚರಾಚರ** (ಗು). ೧. ಚಲಿಸುವ ಮತ್ತು ಚಲಿಸಲಾರದ ; ಸ್ಥಾವರವಾದ ಹಾಗು ಜಂಗಮವಾದ : ಪರಮಾಗಮಮೂರ್ತಿ ಚರಾಚರ ಲೋಕಾ ಲೋಕ ಸಂಪ್ರದಾಯಿನಿ . . . ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಶಬ್ದಾನು. ೨) ; ಜಗದೊಳುಳ್ಳ ಚರಾಚರ ಪ್ರಾಣಗಳವಲ್ಲಿರ್ದಡೆಯೊಳಸುಗಳ ತಗಹು ಬಿಟ್ಟವು (ಜಸವು. ೨೮-೫೫). (ನಾ). ೨. ಸ್ಥಾವರ ಹಾಗು ಜಂಗಮ ವಸ್ತುಗಳು : ಧರೆ ಗಗನವಡೆ ಕಾದುವಡೆಡೆಯಲಿಹ ಚರಾಚರ ವೆಲ್ಲಿ ಹೊಗಲಿ (ಹಕಶಾ. ೨-೨೩). ೩. ಸ್ಥಾವರ ಹಾಗು ಜಂಗಮ ವಸ್ತು ಗಳಿಂದ ಕೂಡಿದ ಜಗತ್ತು : ಈ ಚರಾಚರ ವಿಚಾರ ವ್ಯಾಪ್ತಿ ನಿಮ್ಮಡಿಗ ಗೋಚರವೆ ಶಿವಶಿವಾ (ಕೃಮಿಥಾ. ೨-೫೫); ಅವನೊಳಡಗುವುದಖಿಳ ಚರಾ ಚರವಾ ವಿಷ್ಣುಗಾನೆರಗುವೆನು (ಹರಿಲ. ೮-೦). [ ಚರ + ಅಚರ ]

**ಚರಾದಾಯ** (ನಾ). ೧. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ವಸ್ತು, ಪ್ರಾಣಿ ಮೊದಲಾದುವುಗಳಿಂದ ಬರುವ ಆದಾಯ : ಕೋಟ ತುಡಿಕೆ ಕಳಕೋಠಾರ ಸುಂಕ ಚರಾದಾಯ (ಮೈಆರಿ. ೧೯೪೬, ೦೮-೦೯ ; 1488) ; ಚರಾದಾಯ ಸ್ಥಿರಾದಾಯ (ಮೈಆರಿ. ೧೯೩೦, ೯೩-೩೦ ; 1606) ; ಗ್ರಾಮಾ ದಾಯ ಚರಾದಾಯ ಹೊರಾದಾಯ ಇವು ಮೊದಲಾದ ಆ ಸಕಲ ಸ್ವಾಮ್ಯ ವನೂ . . . ಅನುಭವಿಸಿಕೊಂಡು ಬಹರು (ಎಕ. XIV, ಮೈಸೂರು. ೧೦೫-೪೦೪ ; 1674). 'ಸ್ಥಿರಾದಾಯ' ಪರಾ. ೨. ವಾರಸುದಾರ ರಿಲ್ಲದ ದನಕರುಗಳ ಮಾರಾಟದಿಂದ ಸರ್ಕಾರಕ್ಕೆ ಬರುವ ಆದಾಯ : ಈ ವೃತ್ತಿಗೆ ಸಲ್ಲುವ . . . ಹುಲ್ಲುಹಣ ಚರಾದಾಯ ಹೊರಾದಾಯ ಶೀಗೇವಡಿ ಪತಂಗ (ಹುಟ್ಟುಹ. ೩). ೩. ಸಂಬಳವಲ್ಲದೆ ಮೇಲೆ ಬರುವ ಲಂಚ, ರುಷುವತ್ತು ಮೊದಲಾದ ಆದಾಯ: (ಕ).
[ ಚರ + ಆದಾಯ ]

**ಚರಾಯ** 'ಚರಾಯಿ' ನೋ.

**ಚರಾಯಿ,** ಚರಾಯ (ನಾ). ೧. ಹುಲ್ಲುಗಾವಲು; ಹುಲ್ಲಿನ ಬಯಲು: (ಕ). ೨. ಹುಲ್ಲುಗಾವಲಿನಲ್ಲಿ ದನಕರುಗಳನ್ನು ಮೇಯಿಸುವಿಕೆ : ಲಷ್ಕರಿನಲ್ಲು ಇದ್ದಂಥಾ ಲಾಗರಾದ ಎತ್ತುಗಳನ್ನು ಮಹಾರಾಜರವರು ತಮ್ಮ ವಶಕ್ಕೆ ತೆಗೆದುಕೊಂಡು, ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿ ದರು (ರಾಕೇಂದ್ರ. ೦೪೬). **ಚರಾಯ** : ೧. ಚಿತ್ರದುರ್ಗದ ದನಗಳು ಬೂದಿ ಹಾಳ್ ಚರಾಯದಲ್ಲಿ ಮೆಯ್ಯುವವು (ಚಿತ್ರಬಾ. ೬೩).
[ ←ಮರಾ. ಚರಾಯಿ: ಹಿಂ. ಚರಾಈ, ಚರಹೀ ]

**ಚರಾರ್ಚನೆ** (ನಾ). ಚರಸೇವೆ ; ಜಂಗಮಾರ್ಚನೆ : ಗಳಗಳನೆ ಬಳೆದು ಧನವಂ ಗಳಿಸಿ ಚರಾರ್ಚನೆಯಾನೆಸಗಿ ಹರಕೃಪೆವಡೆದು (ರಾಜಶೇ. ೦೩-೦೦೯).
[ ಚರ + ಅರ್ಚನೆ ]

**ಚರಾವು** (ನಾ). ಹುಲ್ಲುಗಾವಲು : ಚರಾವಿನ ನೆಲದ ವಿಸ್ತಾರಕ್ಕೂ, ಉಳುಮೆಗೆ ಬಳಸಿಕೊಳ್ಳುವ ನೆಲದ ವಿಸ್ತಾರಕ್ಕೂ, ಅಜಗಜಾಂತರ ವ್ಯತ್ಯಾಸವಿದೆ (ಬಿಶಿಸಂ. ೪೬). [ ←ಹಿಂ. ಚರಾಈ ]

**ಚರಾಸ್ತಿ** (ನಾ). = ಚರಜಿಂದಗಿ : (Personal-estate. ಶಕ್ತಿನಿ. ೩೫).
[ ಚರ + ಆಸ್ತಿ ]

**ಚರಿ$_1$** (ಕ್ರಿ). (?) : ಮೊರೆಹೊಕ್ಕರ ಕಾವ ಮಾರಾಂತರ ಕೊಲುವ ಕಸ್ತೂರಿ ಕೋಲಾಹಲ ಚರಿದು ಚಲ್ವರ ಗಂಡ ಹರತಿಯುಮ್ಮಡಿರಂಗಪ್ಪನಾಯಕ ಅಯ್ಯನವರ (ಎಕ. XII, ಶಿರಾ. ೮೪-೫ ; 1612). [ ? ]

**ಚರಿ$_2$** 'ಸಟಿ$_2$' ನೋ.

**ಚರಿ$_3$** (ನಾ). ಸಖಿ ; ಸೇವಕಿ : ರಾಕ್ಷಸಿ ನಾ ಸವಿ ಕ್ಷಿಸು ತಾ ಚರಿಯರ ಮ್ಮೆಲ್ಲ ಸಳುತಲೇನೆನಲು (ಚಿರಾಮಾ. ೨೪೮-೦). [ ಸಂ. ಚರೀ ]

**ಚರಿ$_4$** (ನಾ). ಕೈಯಿಂದ ಹೊಸೆದು ಮಾಡಿದ ನಾರಿನ ಅಥವಾ ಸೆಣಬಿನ ಹುರಿ: ಬೇನೆಯ ಮನುಷ್ಯನು ಮರಣೋನ್ಮುಖನಾದನೆಂದರೆ ಅವನ ಬಾಯಲ್ಲಿ ಸಕ್ಕರೆ ಕೂಡಿಸಿದ ನೀರು ಹಾಕಿ, ಕಾಲುಗಳನ್ನು ಚಾಚಿ ಅಂಗುಷ್ಠ ಗಳನ್ನು ಚರಿಯಿಂದ ಬಿಗಿಯುವರು (ಕಛಾಗ. ೨೩೯). [ ←ಮರಾ. ಚರೀ ]

**ಚರಿಕ** 'ಚರಕ' ನೋ.

**ಚರಿಗೆ$_1$,** ಚರವಿಗೆ, ಚರುವಿಗೆ, ಚವರಿಗೆ, ಚೆರಿಗೆ, ಚೌರಿಗೆ$_1$ (ನಾ). ಚೆಂಬು, ತಂಬಿಗೆ, ಬಿಂದಿಗೆ, ತಪ್ಪಲೆ ಮೊದಲಾದ ಲೋಹದ ಪಾತ್ರೆ: ಧರ್ಮ ಪತ್ನಿ ಚರಿಗೆಯಲ್ಲಿ ನೀರು ತಂದು ಕೊಟ್ಟರು (ನರಿದಾ. II, ೦೦೫೮) ; ಒಲೆಯ ಮೇಲೆ ತಕಪಕಿಸುತ್ತಿದ್ದ ಅನ್ನದ ಹಿತ್ತಾಳೆ ಚರಿಗೆಯನ್ನು ಒಲೆಯ ಪಕ್ಕದಲ್ಲಿ ಟ್ಟಿದ್ದ ತಾಮ್ರದ ಬಾಗುಮರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿ ಯಾಗುತ್ತಿದ್ದಳು (ದುರಿಮ. ೩೦೦); ಪಾಕಶಾಲೆಯ ರೂಪರೇಖೆ ತಕ್ಕಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗುಮರಿಗೆ . . . ಮೊಸರುಗಡಿಗೆ, ಮಜ್ಜಿಗೆ ಚರಿಗೆ . . . ನೊಣಗಳು ಇತ್ಯಾದಿ (ಕಾಶೂರು. ೫೦). **ಚರವಿಗೆ:** ಚರವಿಗೆ ಯಲ್ಲಿ ನೀರನ್ನು ಯಾವಾಗಲೂ ತುಂಬಿಟ್ಟಿರಬೇಕು (ಕೂರಿ). **ಚರುವಿಗೆ :** ಮಲ್ಲಿಕಾರ್ಜುನನ ಖಾಣಸಕೊಂದು ಚರುವಿ[ಪಾಠಾಂ. ಚಾರಿ]ಗೆಯೂ ಸಟ್ಟುಗವೂ (ಸಿದ್ಧರಾ. ೯-೩); ಇವನ್ನೆಲ್ಲಾ ಕೂಡಿ ತಾಮ್ರದ ಚರುವಿಗೆಯಲ್ಲಿ . . . ಅಟ್ಟು (ಸೂಶಾ. ೧೬೯) ; ಕೊಡಪಾನ ಚರುವಿಗೆ ಗಿಂಡಿ (ಸಿದ್ಧಶಾ. ೦೩-೪೨): **ಚವರಿಗೆ:** ಒಂದು ಚವರಿಗೆ ನೀರು ತರೋ ಅಷ್ಟರಲ್ಲೇ ಸುಸ್ತಾಗಿ ಬುಟ್ಟು (ಪಾಳ್ಯದ ಮು. ೧೫೦) ; ಒಂದು ಚವರಿಗೇಲಿ ತಗೊಂಡು ಒಯ್ಯ ಬಾರದೇನಪ್ಪ? (ಅವತಂ. ೬೩). **ಚೆರಿಗೆ:** ಚೆಂಗೆ ಪಾತ್ರಗಳು ಬರಿದಾಗುವವು (ನಾಚಿಕೆ. ೫೦). **ಚೌರಿಗೆ$_1$ :** ಅತ್ತಿಯ ಮಣೆ ಬಂದೊ ಮುತ್ತಿನ ಚೌರಿಗೆ ಬಂದೊ ಹಡೆದವ್ವ ನೀರ ಹದಮಾಡಿ (ಹಳ್ಳಿಪಾ. ೫೫) ; ಚೌರಿಗೆ ತೆಗೆದು ಕೊಂಡು ತಾವೇ ನೀರಿಗೂ ಹೋಗುತ್ತಿದ್ದಳು(ಸರ್ವಮಂ. ೯): ಅಮ್ಮಯ್ಯನು ಚೌರಿಗೆಯನ್ನು ತೆಗೆದುಕೊಂಡು ಭಾವಿಯ ಹತ್ತಿರಕ್ಕೆ ಹೊರಟರು . . . ಅವನು ಐದಾರು ಚೌರಿಗೆ ಸೇದಿಕೊಟ್ಟ (ಚಂಗಾಳಿ. ೦೧).

**ಚರಿಗೆಕಾಯು** = ಹೊಟ್ಟೆ ಹಸಿ : ನೈವೇದ್ಯದ ಅಕ್ಕಿ ಎಸರುನೀರನ್ನು ಸೇರುವ ಮೊದಲೇ, ಐತಾಳರಿಗೆ ಚರಿಗೆಕಾಯುತ್ತದೆ (ಮುಂಮ. ೦೦). **ಚರಿಗೆ ತೆಗೆದುಕೊಂಡು ಹೋಗು**=ಮಲವಿಸರ್ಜನೆಗೆ ಹೋಗು: ಶಿವಪುತ್ರ ಬಾಗಿಲಿಗೆ ಬರುವುದಕ್ಕೂ, ಬಸವ್ವ 'ಚರಿಗೆ ತೆಗೆದುಕೊಂಡು' ಹೋದವಳು ಹಿಂದಿರುಗುವುದಕ್ಕೂ ಸರಿಹೋಯಿತು (ಬರಹಾ. ೯೯).

[ ದೇ. ॥ ತುಳು. ಚರಿಗೆ, ಚರಿಗೆ; ತೆಲು. ಚಿರವ. / ಹಿಂ. ಚರವಾ ; ಮರಾ. ಚರವೀ. / ಸಂ. ಸರಕ ]

**ಚರಿಗೆ₂** 'ಚರಿಯೆ' ನೋ.

**ಚರಿಗೆಗುಡು** 'ಚರಿಗೆಗೊಡು' ನೋ.

**ಚರಿಗೆಗೊಡು, ಚರಿಗೆಗುಡು** (ಕ್ರಿ). [ಜೈನ] ಭಿಕ್ಷೆಗೆ ಹೊರಡು; ಚರಿಗೆಗೆ ಬರು : ಮುನಿಪತಿ ಚರಿಗೆಗೊಟ್ಟನರಣ್ಯದಿಂದಾ ರಾಜವೀಧಿಯೊಳು (ಸಾಳ್ವಭಾ. ೩-೩). **ಚರಿಗೆಗುಡು:** ಕಿಸುಕುಳರೂಪಿಂ ಕೃತಕರ್ತೃಯಾಗಿ . . . ಚರಿಗೆಗುಡುವುದುಂ [ಪಾಠಾಂ. ವರ್ಪುದುಂ] (ಧರ್ಮಾಮೃ. ೯-೭೭) ; ಆ ನಗರಕ್ಕರಣ್ಯದಿಂ ಚರಿಗೆಗೊಟ್ಟನಂಗಜಮಲ್ಲಂ (ಅರ್ಹನಿ. ೦-೯೦); ಅರಮನೆ ವಾಗಿಲೊಳ್ ಚರಿಗೆಗೊಟ್ಟವರಂ ನಿಲಿಸಲ್ಕೆ ಪೋಪ ಭೂವರನೊಡವೋಗಿ (ಪುಷ್ಪಪು. ೩-೯೮). [ ಚರಿಗೆ₂ (<ಚರಿಯೆ) + ಕೊಡು₁ ]

**ಚರಿಗೆದೋಱು** (ಕ್ರಿ). ಭಿಕ್ಷೆಯನ್ನು ಸ್ವೀಕರಿಸು ; ಭೋಜನಮಾಡು : ಕಿತ್ತಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱೆ ನೀಮುಂ ಬಿಜಯಂಗೆಯ್ಯಿಮೆನೆ (ವಡ್ಡಾ. ಕಾ. ೮೦-೦೩).

[ ಚರಿಗೆ₂ (<ಚರಿಯೆ) + ತೋಱು ]

**ಚರಿಗೆನಿಲಿಸು** (ಕ್ರಿ). ಚರಿಗೆಗಾಗಿ ಬಂದ ಮುನಿಗಳನ್ನು ಊಟಕ್ಕಾಗಿ ನಿಲ್ಲಿಸಿಕೊಳ್ಳು : ಅರಸಿ ತಾ ಮಲಧಾರಿದೇವರ ಚರಿಗೆನಿಲಿಸಲೆ ಬಂದಿಸಿರೆ ನಿನ್ನರಸನಾಗಲಿಯುಳ್ಳೊಡಾತ್ಮಜನಾಗಲೆಲೆ ಮಗಳೇ ಚರಿಗೆನಿಲಿಸಲೆ ನಿಲ್ವೆನೆನುತವೆ ಪರಸಿ ಬಿಜಯಂಗೈಯೆ (ಸಾಳ್ವಭಾ. ೩-೦೮).

[ ಚರಿಗೆ₂ (<ಚರಿಯೆ) + ನಿಲಿಸು ]

**ಚರಿಗೆವರ್** (ಕ್ರಿ). ಆಹಾರದ ಭಿಕ್ಷೆಗೆ ಬರು; ಪಾರಣೆಗೆ ಬರು: ಇಂದೆಮ್ಮ ಮನೆಗೆ ಚರಿಗೆವರಲ್ವೇಟ್ಟುಮೆಂದು ನುಡಿದೊಡೆ (ವಡ್ಡಾ. ಕಾ. ೬೦-೨೬) : ಮುನಿವರರೆಂತೀ ಗಿರಿಗೆ ಚರಿಗೆವರ್ಪರ್ (ಆದಿಪು. ೫-೭) ; ಕಿಸುಕುಳ ರೂಪಿಂ ಕೃತಕರ್ತೃಯಾಗಿ . . . ಚರಿಗೆವರ್ಪುದುಂ [ಪಾಠಾಂ. ಗುಡುವುದುಂ] (ಧರ್ಮಾಮೃ. ೯-೭೭). [ ಚರಿಗೆ₂ (<ಚರಿಯೆ) + ಬರ್₁ ]

**ಚರಿಗೆವುಗಿಸು** 'ಚರಿಗೆವೊಗಿಸು' ನೋ.

**ಚರಿಗೆವುಗು** 'ಚರಿಗೆವೊಗು' ನೋ.

**ಚರಿಗೆವೊಗಿಸು, ಚರಿಗೆವುಗಿಸು** (ಕ್ರಿ). ಆಹಾರದ ಭಿಕ್ಷೆಗೆಂದು ಮನೆಮನೆಗೆ ಕಳುಹಿಸು: ಋಷಿಸಮುದಾಯವೆಲ್ಲಮಂ ಚರಿಗೆವೊ[ಪಾಠಾಂ. ವು]ಗಿಸುತ್ತುಂ (ವಡ್ಡಾ. ಕಾ. ೮೫-೦೦). **ಚರಿಗೆವುಗಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚರಿಗೆ₂ (<ಚರಿಯೆ) + ಪೊಗಿಸು ]

**ಚರಿಗೆವೊಗು, ಚರಿಗೆವುಗು** (ಕ್ರಿ). ಆಹಾರದ ಭಿಕ್ಷೆಗಾಗಿ ಮನೆಯೊಳಗೆ ಪ್ರವೇಶಿಸು,– ಬರು : ನಿರ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ (ಆದಿಪು. ೫-೦೦). 'ಚರಿಗೆವೊಗಿಸು' ಪರಾ. **ಚರಿಗೆವುಗು :** ಕಿಱುಮನೆ ಪೆರ್ಮನೆಯೆನ್ನದುಣಲ್ಕೆ ಮನೆಗಳೊಳ್ ಚರಿಗೆವುಗುತ್ತುಂ ಬರ್ಪೊರ್ (ವಡ್ಡಾ. ಕಾ. ೭೮-೭) ; ಸಾಕೇತನಗರಕ್ಕೆ ಪ್ರೀತಿಂಕರಮುನಿ ಚರಿಗೆವುಗೆ (ಪಾಪುಂಪು. II, ೩೮-೨೯). [ ಚರಿಗೆ₂ (<ಚರಿಯೆ) + ಪೊಗು ]

**ಚರಿಗೆವೋಗು** (ಕ್ರಿ). ಭಿಕ್ಷೆಗಾಗಿ ಹೋಗು : ನೀಮಾ ನಗರಕ್ಕಾಗಿ ಚರಿಗೆ ವೋಗುತ್ತುಂ (ಸುಕುಮಾ. ೫-೨) ; ಅತಿಕ್ಷಪಿತಕಾಯರಾಲೋಕನಗರಕ್ಕೆ ಚರಿಗೆವೋ[ಪಾಠಾಂ. ಚರಿಗೆಗೆ ಪೋ, ಚರಿಗೆಗೆ ಪೋ]ದೊಡೆ (ಶಂರಾಮಾ. ೦೫-೯೯ ವ). [ ಚರಿಗೆ₂ (<ಚರಿಯೆ) + ಪೋಗು₁ ]

**ಚರಿಚಲಿ** 'ಚೆಂಚಲಿ' ನೋ.

**ಚರಿಜಲಿ** 'ಚೆಂಚಲಿ' ನೋ.

**ಚರಿತ** (ಗುಂ). ೧. ಮಾಡಿದ; ನೆರವೇರಿಸಿದ; ಸಾಧಿಸಿದ. 'ಚರಿತಾರ್ಥ' ಪರಾ. (ನಾ). ೨. ಗಮನ ; ಗತಿ ; ನಡಗೆ. ೩. ನಡೆದುದು ; ಆಗಿ ಹೋದುದು. ೪. ಜೀವನಕಥೆ; ಚರಿತ್ರೆ; ಇತಿಹಾಸ : ತ್ರಿಷಷ್ಟಿಶಲಾಕಾ ಪುರುಷರ್ಕಳ ಚರಿತಂಗಳುಮನಾಚಾರಮಾರಾಧನೆ ಮೊದಲಾಗೊಡೆಯಂ ಕರಣಗ್ರಂಥಂಗಳುಮಂ . . . ಕಲ್ತೊಡಲ್ಲದೆ ಪೇಟಲಾಗದು (ವಡ್ಡಾ. ಕಾ. ೬-೬) ; ಕವಿರತ್ನನಿನ್ನಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೦೨-೨೭). ೫. ನಡವಳಿಕೆ ; ಆಚಾರ ; ಶೀಲ : "ಚರಿತಂ ರೀತಿ ಚಾರಿತ್ರಮನೆ ಶೀಲಮನೆ ಚರಿತ್ರಮನಲ್ಕೆಯಾಚಾರಕಕ್ಕು ನಾಮಂ" (ಮಂಗರಾ. ೭೯-೩) : ಆ ಯವ್ವನದೊಳವರ ಚರಿತಂ ಕರಂ ಪೊಸತು (ತಿರುಕ. ದೀ. ೯-೩). ೬. ವಿಧಿ ; ಕ್ರಮ : ಹರುಷದಿಂದಾ ಕ್ರಿಯಲಾ ಅವ್ಯತಲಿಂಗವಂ ಚರಿತದಿ ಪ್ರತಿಷ್ಠಿಸಿ ಮಹಾಪೂಜೆಯುಂ ಮಾಡಿ (ಸಿದ್ಧರಾ. ೬-೫೭). ೭. ಅದ್ಭುತಕಾರ್ಯ ; ಸಾಹಸಕೃತ್ಯ. ೮. (ಆಲಂ) ಆಡಳಿತ; ಆಳ್ವಿಕೆ: ತಿರಿಕನನು ಕರತಂದು ಧರಣಿಯ ಚರಿತದೊಳಗಿರಿಸಿದರೆ ಮರ್ಕಟ ಶರೆಯ ಸೇವಿಸಿದಂತೆ ಕುಣಿವರೆ ಭಗಿನಿಭಗಧಾಗ್ಯಾಧರವ ತಿಂದಿರ ಲಾರದಲೆ ಇದಗರೆದೆಯಾಕೆಯ ನೋಡಿ ನೃಪನನುಸರಿಸಿ ಇಹನೆಂದಂತರಂಗದಿ ತಿಳಿವುದೆನೆ ಮಂತ್ರಿ (ಬಿಜ್ಜಪು. ೬೨-೫೪). [ ಸಂ. ]

**ಚರಿತಂ** (ಅ). ಬೇಗನೆ ; ತ್ವರಿತವಾಗಿ : ಪತ್ರಂಟು ದೇಸೆ ವಿಳಾಸದೊಳ್ ತೊಡರೆ ಚರಿತಂ ಬಂದರ್ ಕಣ್ಗೊಳ್ಪರಲ್ ವರಭೋಗಿಯರ್ (ಪಂಪಭಾ. ೯-೦೦೨). [ <ತ್ವರಿತ ? ]

**ಚರಿತಪುರಾಣ** (ನಾ). ಮಹಾಪುರುಷರ ಚರಿತ್ರೆಯನ್ನೊಳಗೊಂಡ ಪುರಾಣ : ಚರಿತಪುರಾಣದೊಳೊಂದಕೆ ಬರೆದರ್ ಬರೆದಿಕ್ಕಿದತ್ರಿರ್ಷಷ್ಟಿ ಸಲಾಕಾಪುರುಷಪುರಾಣಮಂ (ಚಾವುಂಪು. ೯-೨೦) ; ಚರಿತಪುರಾಣ ಮನಱಿಯದೆ ತುರಿಪದಿನಧ್ಯಾತ್ಮಿಯಾಗಿ ನೆಗಟ್ಬನ ತಪಮುಂ . . . ಪಂದೆಯ ಬಿರುದುಂ ಸುಖಮಾಗಲಾಱವೆಂದುಂ ಕಡೆಯೊಳ್ (ಧರ್ಮಾಮೃ. ೬-೯೯). [ಚರಿತ + ಪುರಾಣ ]

**ಚರಿತಾರ್ಥ** (ಗುಂ). ೧. ಗುರಿಯನ್ನು ಸಾಧಿಸಿದ ; ಇಷ್ಟಸಿದ್ಧಿಯನ್ನು ಮಾಡಿಕೊಂಡ (ನಾ). ೨. ಕಾರ್ಯಸಿದ್ಧಿ; ಇಷ್ಟಸಿದ್ಧಿ; ಉದ್ದಿಷ್ಟ ಪ್ರಾಪ್ತಿ : ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ ಚರಿತಾರ್ಥ ಪಡೆಗೊಂಡಿತೀ ಕಬ್ಬದೊಳಗೆ (ಮುರಳೀ. ೫೦-೯). ೩. ಇಷ್ಟಸಿದ್ಧಿಯನ್ನು ಪಡೆದವನು ; ಕೃತಾರ್ಥ ; ಧನ್ಯ : ಪರಮಾಯು ಮೂಱುದಿವಸಂ ಚರಿತಂ ಚರಿತಾರ್ಥನಾ[ಗುನೀ]ನೆಂಬವೊಲ್ (ಸುಕುಮಾ. ೦೦-೮೩) ; ಬಿನ್ನಪಮಂ ಬಗೆಗೊಳ್ವುದು ಚರಿತಾರ್ಥನಾಗೆ ಮಾಡುವುದೆನ್ನಂ (ಶಂರಾಮಾ. ೯-೦೩೬) ; ಏಂ ಚರಿತಾರ್ಥನೊ ಸಾರ್ವಭೌಮರೊಳ್ ಯಮತನಯಂ (ಜಗವಿ. ೦೭-೫); ನಿಮ್ಮ ಕಾರುಣ್ಯೋದಯವು ಯೆಮಗಾಯ್ತಲಾ ಚರಿತಾರ್ಥರಾವೆಂದ (ಕುಮಾ. ಅ. ೦೦-೨೮). ೪. ಬದುಕು; ಹೊಟ್ಟೆಪಾಡು: ವಸುಮತಿ ಈ ಹೊಲಗಳಲ್ಲಿ ತನ್ನ ದೆವರು ಹರಿಸಿ ಚರಿತಾರ್ಥವನ್ನು ಚೊಕ್ಕಟವಾಗಿ ಸಾಗಿಸುತ್ತಿದ್ದಳು (ಮುತ್ತು. ೬) ; ಅವಳ ತಂದೆ . . . ಬಂದುದರಲ್ಲಿಯೇ ಚರಿತಾರ್ಥ ಸಾಗಿಸುತ್ತಿದ್ದ (ಅಶ್ರು. ೪೬) ; ಅವರಿಗೆ ಬರುತ್ತಿದ್ದ ಸಂಭಾವನೆಯೂ, ಹೊಲಗದ್ದೆಗಳಿಂದ ಬರುವ ಉತ್ಪನ್ನಗಳೂ ಸೇರಿ ಅವರ ಚರಿತಾರ್ಥ ನಡೆಯುತ್ತಿತ್ತು (ರಾಜೋದ. ೫).

[ ಚರಿತ + ಅರ್ಥ ]

**ಚರಿತಾರ್ಥತ್ವ** (ನಾ). ಕೃತಕೃತ್ಯತೆ ; ಕೃತಾರ್ಥತೆ : ಇದಾವ ಪರ ತತ್ವಾನುಭವಸುಖವಿದುವೆ ಚರಿತಾರ್ಥತ್ವಮಂದಿರವಿದುವೆ ತುದಿಪದವೆಂದು ನಿನ್ನಿಂದವೆ ವಿದಿತವಹುದು (ಬಸವ. ೨-೩೬). [ ಸಂ. ]

**ಚರಿತೆ** (ನಾ). ೧. ಚಾರಿತ್ರ್ಯ; ಶೀಲ; ಸ್ವಭಾವ: ಏತರಣ ಧೈರ್ಯ ವಿದ್ಯಾ ಗೌರವಂಗಳಲಿ ಸುರಮಹೀಜನರಾಜ ರುದ್ರರ ಚರಿತೆಗಳಿಗಿಮ್ಮಡಿಯೆನಿಸಿ ಸತ್ಪುರುಷನಲ್ಲಿಗೆ ಸಲಹ ಬಂದನು (ಬಸಪು. ೩-೬೪). ೨. ಕಥೆ; ಜೀವನ ಚರಿತ್ರೆ: ಮುನ್ನಿನ ವೃದ್ಧಭಕ್ತರ ಚರಿತೆಗಳನೊರೆದುದ್ಧರಿಸಿ ಜಗದೇವನಂ ಸಲಹಿದನು ಬಸವೇಶ (ಬಸಪು. ೬೦ ಸೂಕಪ); ವಿಶ್ವೇಶ್ವರನು . . . ಸರಸ್ವತಿಯರೀ ಕೃತಿಗೆ ನೆಟ್ಟಿ ಬಾರದಿರರದೇಕೆಂದೊಡೆ ಮಹಾಶಿವಶರಣ ಶಂಕರದಾಸಿಮಯ್ಯನ ಚರಿತೆಯಾದುದರಿಂದೆ (ಶಂಕದಾ. ೧-೧೧). [ಸಂ. ಚರಿತ]

**ಚರಿತ್ರ** (ನಾ). ೧. ನಡೆ; ನಡೆವಳಿ; ಆಚಾರ: "ಚರಿತ್ರಂ, ಚರಿತಂ, ಶೀಲಂ, ಚಾರಿತ್ರಂ—ಈ ೪ ಆಚಾರಂ" (ಹಲಾಯು. ೬೬-೨೪೨); ಕಾಗು ನಿರೋಧದ ಆಗುಹೋಗನರಿಯದ ಶರಣನ ಚರಿತ್ರವ ನೋಡಿ ನೋಡಿ ಬೆರಗಾದೆನಯ್ಯಾ (ಬಸವ. ೯೦೨). ೨. ಇತಿಹಾಸ; ಜೀವನ ಕಥೆ; ನಡೆದು ಹೋದ ಸಾಹಸಾದಿಗಳ ನಿರೂಪಣೆ. 'ಚರಿತ್ರಗಾರ' ಪರಾ. ೩. ಆಚರಣೆ; ಅನುಷ್ಠಾನ. ೪. ಕೆಲಸ; ಕರ್ತವ್ಯ. ೫. ಸಾಹಸಕಾರ್ಯ; ಅದ್ಭುತ ಕೃತ್ಯ. ೬. ಸ್ವಭಾವ; ಮನೋಧರ್ಮ. [ಸಂ.]

**ಚರಿತ್ರಕಾರ** (ನಾ). ಇತಿಹಾಸವನ್ನು ಬರೆಯುವವನು; ಇತಿಹಾಸಕಾರ: ಚರಿತ್ರಕಾರರು . . . ಹೇಳಿರುವ ಕೆಲವು ಅಂಶಗಳನ್ನು ನನಗೆ ಸರಿಯೆಂದು ತೋರಿದ ರೀತಿಯಲ್ಲಿ ಹೊಂದಿಸಿಕೊಂಡಿದ್ದೇನೆ (ಪತಿ. IV ಪ್ರಸ್ತಾವನೆ), [ಚರಿತ್ರ + -ಕಾರ$_1$ (<-ಕಾರ)]

**ಚರಿತ್ರವಂತ** (ನಾ). ಶೀಲವನ್ನು ಕಾಯ್ದುಕೊಂಡವನು; ಶೀಲವಂತ; ಚಾರಿತ್ರವುಳ್ಳವನು: ವಿವಾಹಪೂರ್ವದಲ್ಲಿ ಅವರು ಚರಿತ್ರವಂತರಾಗಿ ಉಳಿಯಲಿಕ್ಕೇ ಬೇಕು (ಬ್ರಹ್ಮಚ. ೪). [ಚರಿತ್ರ + -ವಂತ]

**ಚರಿತ್ರವತಿ** (ನಾ). ಒಳ್ಳೆಯ ಶೀಲವುಳ್ಳವಳು; ಪತಿವ್ರತೆ: "ಕುಲವಧು ಸಾಧ್ವಿ ಪತಿವ್ರತೆ ಕುಲಪಾಲಿಕೆ ಸತಿ ಚರಿತ್ರವತಿಯಕ್ಕುಂ"(ಚಮ್ಮ ಕೋ. ೩೩-೪); ಆತನ ಪಿರಿಯರಸಿ ಗುಣಾನ್ವಿತೆ ಪತಿವ್ರತೆ ಚರಿತ್ರವತಿ ವಿಶದ ಗುಣಖ್ಯಾತವತಿ . . . ಚಂಡಿಕಬ್ಬೆಯೆನೆ ಪೊಗಳ[ದ]ರಾರ್ (ಸೌಇಇ. XX. ೪೭-೧೭; 1074). [ಸಂ. ಚರಿತ್ರವತೀ]

**ಚರಿತ್ರವಳ್ಳಿ** (ನಾ). ಒಂದು ಊರಿನ ಹೆಸರು: ಶ್ರೀಮತ್ಕನ್ನಯ್ಯ ಚರಿತ್ರವಳ್ಳಿಯುಮಂ ಪೆಬ್ಬಾರ್ಗಳುಮಂ ಬಿದಿರುವಳ್ಳಿಯುಂ × × × (ಎಕ. XI, ಚಿತ್ರದು. ೪೯-೮೦; 947). [ಚರಿತ್ರ + ಪಳ್ಳಿ$_1$]

**ಚರಿತ್ರೆ** (ನಾ).=ಚರಿತ್ರ ೨: ಇಂದಿನ ಬಾಳು ನಾಳೆಗೆ ಚರಿತ್ರೆ (ಸಾಹಿಚೀ. ೩೩). [ಸಂ. ಚರಿತ್ರ]

**ಚರಿಯ** 'ಚರಿಯೆ' ನೋ.

**ಚರಿಯಿಸು** 'ಚರಿಸು' ನೋ.

**ಚರಿಯೆ, ಚರಿಗೆ$_1$, ಚರಿಯ, ಚರುವೆ, ಚರೆಯ** (ನಾ). ೧. ಆಚರಣೆ; ಚರ್ಯೆ: ನಿತ್ಯ ಪುನೀತ ಶೀಲ ಬ್ರತ ಚರಿಯೆಯಂ [ಪಾಠಾಂ. ಶೀಲವ್ರಾತ ಚರಿಯಂ] ಸಿಕ್ಕುಗೊಳಿಸಿದೆಯೆಂ (ಬಸಪು. ೪೭-೧೨). **ಚರಿಗೆ$_1$**: ೨. [ಜೈನ] ಮುನಿಗಳು ಆಹಾರಕ್ಕಾಗಿ ಮಾಡುವ ಸಂಚಾರ; ಭಿಕ್ಷಾಟನೆ: ವಿಂದುಂಡೀಗಳೆ ಬಿಜಯಂಗೆಯ್ಯೆಂದಿರೆ ಕುಳಾದ್ರಿಧೈರ್ಯಂಗೆ ..ಚರಿಗೆ ಮಾಣ್ದತ್ತಿನಿಸುಂ (ಆದಿಪು. ೯-೧೨೯); ಮುನಿಗಳ್ ಚರಿಗೆಗೆ ಬರುತಿರೆ (ಹಂಚಕಂ. ೦೯೦-೨೦); ಮುನಿಗಳ ಚರಿಗೆಯ ಕಾಲವನರಿದ್ಧರಮನೆಯ ಬಾಗಿಲಿಗೆ ನಡೆದನು (ಭರತ. ೩-೨). ೩. ಊಟ; ಔತಣ: ತಡೆದನವನೆಲ್ಲರಂ ತನ್ನ ನಿಳಯದ ಚರಿಗೆಗೆ (ಸೋಮುಚ. ೨-೯೨). **ಚರಿಯ**: ೧. ಚರಿಸಲಾಗದವರ ಚರಿಯ್ನ ನಿರತೆಗೇಳಲಾಗದವರ ಸರಿಯೊಳಾವ ಭುಕ್ತಿ ಭೋಗಮಾಡಲಾಗದು (ಶಿವಗೀ. ೪೩೮); ಎರಡು ವಿಂಶತಿ ವರುಷಕೆ ಈ ಪರಿಯ ಚರಿಯ ಮಾಡಿದ ಪರಮಹರುಷದಿ (ಜಗದಾ. ೦೩೪). ೪. **ನಡೆವಳಿಕೆ**: ಜಾರೆಯರು ತಲೆವಾಗಿಲ ನಿಕ್ಕಿ ನೋಡುವ ಚರಿಯುಗಳ ಕಂಡು (ರಂಗಾಪ. ೩-೬-೦). **ಚರುವೆ**: ೩. ಆದಯ್ಯನರಸಿ ಪದ್ಮಾವತಿಯುಮಿರದೆ ಜಂಗಮಕೆಂದು ಮಾಡಿದನ್ನವ ಜಿನರ ಚರುವೆಗೆಂದೊಯ್ಯಲು (ಚಬಪು. ೩೭-೩೬). **ಚರೆಯ**: ೫. ಮೇಯುವುದು: ಮಂದಮತಿಯು ಮುಂದೆ ತಲೆಯ ಚುಂಚಂ ಒಡಿದು ಚರೆಯಕ್ಕೆ ಬಿಟ್ಟ ಗೂಂಟನೆಟ್ಟಿದು ತಪ್ಪಂತೆ ತಂದು (ಅರ್ಥನೀ. ೬-೬೬ ಪ).

**ಚರಿಗೆಮಾಡು**=ಊಟಮಾಡು; ಆರೋಗಿಸು: ಆನುಂ ಭಕ್ತಿಯಿಂದಂ ದಿವ್ಯಾಹಾರವುಂ ಮಗುಟ್ಟಿಮಗುಟ್ಟಿ ಬಡ್ಡಿಸೆ ಚರಿಗೆಮಾಡಿ [ಪಾಠಾಂ. ಯುಂಡು] (ವಡ್ಡಾರಾ. ೮೯-೨೭). [<ಸಂ. ಚರ್ಯಾ]

**ಚರಿಷ್ಣು** (ಗು). ೧. ತಿರುಗಾಡುವ. ೨. ಅಸ್ಥಿರವಾದ. [ಸಂ.]

**ಚರಿಸು, ಚರಯಿಸು, ಚರಿಯಿಸು** (ಕ್ರಿ). ೧. ನಡೆ; ಚಲಿಸು; ಸಂಚರಿಸು: ಹಂಸನಂತೆ ರಮಣೀಯ ನೂಪುರನಿನಾದಾನಂದಿತ ಮಾನಸಸರೋವರದೊಳ್ ಚರಿಸಿಯುಂ(ಕಾದಂಪೂ. ೬೨೪); ಮಹಾಶರಣರ್ಗೆ ಗುರುವೆನಿಸಿ ಸಕಲ ದೇಶಂಗಳಂ ಚರಿಸಿದಂ (ಚಬಪು. ೧-೧೮); ಆಗಸದೊಳು ಚರಿಸುವ ಸುರಸತಿಯರ ಸೋಗೆಮುಡಿಗೆ ಪೂಜ್ಯವಾಗಿ . . . ಪೂಗವೃಕ್ಷಗಳೊಪ್ಪುತಿಹುವು (ಶಂಪವಿ. ೩-೪೦). ೨. ಅಲುಗು; ಅಲ್ಲಾಡು: ಬೆದರ್ ಭೂಕಂಪದಲ್ಲಿ ಕುಲಗಿರಿಯದಿರುವಂತಿರೆ ಚರಿಸಿ . . . ಕಲಿಕರ್ಣ ಮೈಮರೆಯೆ (ಕುಮಾರವ್ಯಾ. ೩-೨೯). ೩. ಆಚರಿಸು; ನಡೆದುಕೊಳ್ಳು; ಅನುಷ್ಠಾನಮಾಡು: ತಂತಮ್ಮಾಪ್ತರ್ ಚರಿಸುವ ಪೋದೆಯೊಳೇಕೆಯೊ ಚರಿಯಿಸರನ್ಯರ್ (ಧರ್ಮಾಮೃ. ೭-೪೨); ಪರಬ್ರಹ್ಮನು ಹರಂ ಚ[ಪಾಠಾಂ. ಧ]ರಿಸುವರು ಬ್ರಹ್ಮಣ್ಯಮಂ(ಬಸಪು. ೩೩-೪೦); ಮುನೀಂದ್ರಂ ಚರಿಪಂ ಸತಿವೆರಸು ತಪವನೀ ಪರ್ವತದೊಳ್ (ಹಾಳಂತ. ೧೧೦-೧೭). ೪. ಇರು; ವ್ಯವಹರಿಸು; ವರ್ತಿಸು: ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಚೆನಿನ್ನಾಚೆ ನಯ್ಯೋ (ರಕ್ಷಾಶ. ೪); ಈ ಪ್ರಕಾರದಿ ಚರಿಸುತಿರೆ ಸಾತ್ವಿಕ ಸುಭಕ್ತಿಸ್ಥಿರಮನಸ್ಕನು (ಬಸಪು. ೪೭-೪); ಸಿರಿ ಸರಸ್ವತಿ ಚಂಡಿ ದುರ್ಗಿಯರೆಂಬ ನಾಮದಲಿ ಚರಿಸುತಿಹ ನಿನ್ನೇಕಮೂರ್ತಿಯ ಪರಿಯನರಿವವರಾರು (ಕುಮಾರವ್ಯಾ. ೭-೧೦೪). **ಚರಯಿಸು**: ೧. "ಚರಯಿಸು (ಚರಿಯಿಸು) ಭ್ರಮಣೇ" (ಕಮುಧಾ); ಚರಿಸಿದಂ, ಚರಯಿಸಿದಂ (ಶಮುದ.೭೪ ಪ್ರಯೋ): ಕನಸಿನೊಳ್ ಚರಯಿಪಂದೊಲ್ ಪೋಗುತಿರ್ದನ್ (ಸಂಸಪ. ೩೨-೦೮೮). **ಚರಿಯಿಸು**: ೧. ಚರಿಯಿಪ ವನದೇವತೆಯರ ಚರಣಾಲಕ್ತಕದೆ ಪೊರೆದು ಪೆನಿಪುವು . . . ಚೆಂದಳಿರ್ದುಱುಗಲ್(ಕಾದಂಪೂ. ೯೬); ಚರಿಯಿಸಿ ನಿಚ್ಚವಚ್ಚವನದೊಳ್ (ಜಗವಿ.೦೬-೦೨೮); ಕೇಳು ನೀನೆಲೆ ಪಾರ್ಥ . . . ರವಿರಥ ಕಾಲಚಕ್ರವನೈದಿ ಗಗನಾಂಗಣದಿ ಚರಿಯಿಪುದ (ಕುಮಾರವ್ಯಾ. ೭-೨೨). ೨. ಸ್ಥಿರನಾಗಿ ಗುಣದೊಳೆಸಗುವ ನರನುಂ ವೈರಾಗ್ಯಮುಳ್ಳನುಂ . . . ಉರ್ವರೆ ಚರಿಯಿಸುವೊಡಮುಟ್ಟಿವರಲ್ಲರುತ್ತಮಗುಣಮಂ (ಧರ್ಮಾಮೃ. ೩-೦೩೨). ೩. ಪಿರಿದಪ್ಪಾದರದಿಂದಂ ಪುರಾಣಮಂ ಕೇಳ್ವರಲ್ಲದಾ ತೆಱದಿಂದಂ ಚರಿಯಿಸುವರಲ್ಲರನ್ಯರ್ (ಸಮುಪ. ೬-೨೪); ಗುರುವಚನಮನುಲ್ಲಂಘಿಸಿ ಚರಿಯಿಸಲಣಮಾಗದು(ಧರ್ಮಾಮೃ. ೩-೦೩೦). ೪. ಜನನಾಥಂ ಕಾಮಾಸಕ್ತನಾಗಿ ಮದದಂತಿಯಂತೆ ಚರಿಯಿಸಿ (ಪುಂಚತಂ. ೧೩-೨೦); ಎರಡನೆಯ ಸುಷಮಕಾಲದ ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ ಚರಿಯಿಸುಗುಂ (ಪುಂರಾಪಾ. ೦-೩೬); ನೆಲೆಗೆ ಪೋಗಿ ಮಕ್ಕಳೊಳಂ ಪೆಂಡಿರೊಳ ಮೊಡಗೂಡಿ ಸುಖದಿಂ ಚರಿಯಿಸುವೆಂ ಮೆಚ್ಚಿದಂದದಿಂ ಭೋಗಿಸುವೆಂ (ಧರ್ಮಾಮೃ. ೦-೦೩೦).

**ಚರಿಸಾಡು, ಚರಿಸಿಯಾಡು**=ಅಲೆದಾಡು; ಸುತ್ತಾಡು: ನಡೆದಡೆ ಹೆಜ್ಜೆಯಿಲ್ಲ ಸುಳಿದಡೆ ನೆಳಲಿಲ್ಲದೆ ಬಯಲ ಬೆಳಗೆ ಸ್ವರೂಪವಾಗಿ ಚರಿಸಾಡುತ್ತ ತನ್ನನರ್ಚಿಸುವ ಭಕ್ತರ ನೋಡುತ್ತ ಬಪ್ಪಲ್ಲಿ (ಶದಗೋ. ೯೬); ನಿರಾಶಾಭರಿತನಾಗಿ ಚರಿಸಾಡುತ್ತಲು (ಚೂನ್ಯಸಂ. ೨೬೩-೦೦). [ಚರಣ + -ಇಸು$_3$]

**ಚರು₁** (ನಾ). (ಕೃಷಾ) ಒಂದು ಬಗೆಯ ಸಣ್ಣ ವಿಮಾನ [←ತುಳು. ಚರು]

**ಚರು₂** (ನಾ). ೧. ಹೋಮಕ್ಕಾಗಿ ಸಿದ್ಧಪಡಿಸಿದ ಅನ್ನ ; ಹವಿಸ್ಸು : "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ—ಈ ೫ ಚರು" (ಚರಣಯು. ೬೯-೨೬೨); ಜಲಗಂಧಾಕ್ಷತೆ ಪುಷ್ಪಾವಲಿ ಚರು ದೀಪಪ್ರದೀಪ ಧೂಪ ಫಲಂಗಳ್ . . . ತಳತಳ ತೊಳಗಿದುವು (ಆದಿಪು. ೭-೧೦೫); ಚಾರುಚರುನಿಚಯದಿಂ ಘನಸಾರಾಗರುಂ ಧೂಮರೇಖೆಯಿಂ . . . , ಜಿನೇಂದ್ರನನಾರಾಧಿಸಿದಂ ನರೇಂದ್ರ ಚೂಡಾರತ್ನಂ (ಶಾಂತಿ ಪು. , ೩೪-೬); ಅಡ್ಡುಗೆಯುಂ ಚಿಕಂಗೆ ಹೆಂಡಮುಂ ಮಾರಿಗೆ ಚೊಮ್ಮಯುಂಗೆ ಚರುವಂ ಪದೆದೆತ್ತುವಂ (ಸೂಕ್ತಿಸು. ೮-೬೪); ಕೊಟ್ಟನು ಚರುವವಾಡೆಯು ದೈತ್ಯ ಚಂಡೋದರಿಗೆ ತಲೆಯೊಡನೆ (ಕಾಶಿಖಂ. ೩೬-೨೫). ೨. ಹವಿಸ್ಸಿನ ಪಾತ್ರೆ: "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಚರಣಯು. ೩೨-೦೩೯); ಕೈಯಲ್ಲಿ ಚರುವನ್ನು ಹಿಡಿದುಕೊಂಡು ಅಗ್ನಿನಾರಾಯಣನು ಪ್ರಕಟನಾದನು (ಕುಳಸು. ೩೪). ೩. ಬಲಿ: ಇದೇನು ಭೂತದ ಚರುವನ್ನು ಮಾಡುತ್ತೀರಾ? (ಮುಕಮ. ೩೯); ಈರಮ್ಮನು ಚರು, ಓಕಳಿ . . . ಮುಂತಾದ ಶಲಕರಣೆಗಳನ್ನು ಸಜ್ಜುಗೊಳಿಸಿ-ಭಟ್ಟರ ಅಡುಗೆಗೆ ಬೇಕಾದ ಲವಾಜಮೆಗಳನ್ನು ಸಿದ್ಧಗೊಳಿಸಿದಳು (ಹುಂಚಹು. ೯೦). ೪. (ಆಲಂ) ಆಹಾರ ; ಊಟ : ಒಂದು ಚರುವನ್ನು ರಾತ್ರಿ ಅವರಲ್ಲಿಯೇ ತೆಗೆಯುವ (ಮುಗಿಯು. ೦೮೫). [ ಸಂ. ]

**ಚರುಕ** (ನಾ). ೧. ಹವಿಸ್ಸು ; ನೈವೇದ್ಯ : ಅನೇಕ ಭಕ್ಷ್ಯೋಪದಂಶ ರಸಪ್ರಚುರ ಚಾರುಚರುಕಂ[ಪಾಠಾಂ. ಚರು]ಗಳಿಂದಂ (ಆದಿಪು. ೨-೩೨ ವ) ; ಬಲಿತೀಷ್ಟಲಿಂಗ ಪ್ರಸಾದವೇ ಚರುಕಮದನೊಲಿದು ತಾನುಪಭೋಗಿಸುವುದು(ಕಾಳಿಕ. ೦೨-೦೬). ೨. ಹವಿಸ್ಸಿನ ಪಾತ್ರೆ. ೩. ಪಾಕಪಾತ್ರೆ: ಚರಚನಿತ್ರನು ನಿನಗೆ ಹೇಮದ ಚರುಕವಿದೆ ವಿವಿಧಾನ್ನಪಾನೋತ್ಕರದ ತವನಿಧಿ (ಕುಮಾ.ಭ. ೧-೯). [ ಸಂ. ]

**ಚರುಕಲು** (ನಾ). ಅಗಲ ಬಾಯಿಯ ಪಾತ್ರೆ: ಹೆಚ್ಚಾಗಿ ಉಳಿದ ಅನ್ನವನ್ನು ಚರುಕಲಿನಲ್ಲಿ ಹಾಕಿ ಮುಚ್ಚಿಡಬೇಕು (ಕೂಳು). [ <ಸಂ. ಚರುಕ ? ]

**ಚರುಗ, ಚರಗ, ಚರಗು, ಚೆರಗ, ಸರುಗ, ಸರುಗು** (ನಾ). ೧. ಹೊಲ, ಗದ್ದೆಗಳಲ್ಲಿ ಪೈರು ಬೆಳೆದಾಗ ರೈತರು ಭೂಮಿತಾಯಿಗೆ ನೈವೇದ್ಯವೆಂದು ಕ್ಷೇತ್ರದ ತುಂಬ ಚೆಲ್ಲುವ ಕಡುಬು ಮುಂತಾದ ಭಕ್ಷ್ಯ : "ಚರುಗ = ಹೊಲದೊಳಗೆ ಚೆಲ್ಲುವ ಆಹುತಿಯ ಅನ್ನ" (ಗಂಗಾಮು. ೦೩೯). ೨. ದೇವತೆಯ ಪ್ರೀತ್ಯರ್ಥವಾಗಿ ಹೊಲದಲ್ಲಿ ಮತ್ತು ಊರಿನ ಸುತ್ತ ಚೆಲ್ಲುವ ಕೋಣದ ರಕ್ತ ಮತ್ತು ಮಾಂಸದ ಬಲಿ : (ಕ). **ಚರಗ** : ೧. ಊರ ಒಕ್ಕಲಿಗರ ಚರಗದ ಬಾಟ್ಲಿಗಳೆಲ್ಲ ಹೊರಬಿದ್ದವು. ತಮ್ಮ ದೇವರಿಗೂ ಚರಗ ಸಲ್ಲಬೇಕೆಂದು ಹೆಂಡತಿ ಸೂಚಿಸಿದಳು (ಗರಿಹಾ. ೭೩) ; ಚರಗವನ್ನು ಚೆಲ್ಲಿದಂತೆ ಚೆದರಿ ಹೋಗಿರಬಹುದು (ಕ೭ಹಾ. ೩೩). **ಚರುಗು** : ೧. ಬಂದಿಕೀವಿದ ಚರುಗು [ಪಾಠಾಂ. ಕೂಟು, ಚರುಗಳ್]ವೆರಸು ತನ್ನ ಮಗನಪ್ಪ ಮುಂದಣಕೌಶಿಕನಂ ಕುಂಭಂಗಾಹಾರ ನಿಮಿತ್ತಮಟ್ಟಿದೊಡೆ (ಕಾವ್ಯಾಂಬು. II, ೩೯-೩೩) ; ಜನಪದಯುಗಳಕ್ಕತ್ತಿ ನೈವೇದ್ಯಮುಂ ಜಾತ್ರೆಗೆ ಬಂದವರ್ಗೆತ್ತಿ ಕೋರ್ವರ್ ಚ[ಪಾಠಾಂ. ಪ]ರುಗಂ (ಸಮಶ. ೨-೬೯). **ಚೆರಗ** : ೧. ಹೊಲಕೆ ಒಕ್ಕಲಿಗ ಚೆರಗೊಗೆದು (ಕರಕ. ೦೭) ; ಜೋಕುಮಾರನ ಅಳಕ ಅಂಬಲಿಯೇ ಒಕ್ಕಲಿಗನು ತನ್ನ ಬೆಳಸಿಗೆ ಒಗೆಯುವ ಮೊದಲನೆಯ ಚೆರಗ (ಜನಗೀ. ೦೭ ಮೊದಲಮಾತು). **ಸರುಗ** : ೧. ಮತ್ತಂ ಶುಚಿರ್ಭೂತರಾಗಿ ಚಕ್ಕುಲಿಯಂತೆ ಪಿಟ್ಟನಿಂ ಬಟ್ಟಿತುಮಾಗಿ ಬೆರದೂಡಿ ಮೇಲೆ ಸರುಗದ ಮುದ್ದೆಗಳನಿಟ್ಟು (ಶಿಸಾರ. ೯೬೩) ; ಪಾಪಮ್ಮ 'ಸರುಗ' ಮಾಡಿಕೊಂಡು ಬಂದು ಎತ್ತುಗಳ ಪ್ರದಕ್ಷಿಣೆಮಾಡಿ 'ಸರುಗ' ಚೆಲ್ಲಿದಳು (ಸಧೀಕ. ೬೬). **ಸರುಗು** : ೧. ಅದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗಮನೆ ಕೆಂಡುದದಂ (ಆದಿಪು. ೧೩-೩೯) ; ಗಂಧ ಮಾಲ್ಯಾದಿಗಳನರ್ಚಿಸಿದ ಸಿಂಹಾಸನವನೇರಿ ನಾಯ್ ಸರುಗನುಣೆ ಕಂಡುದದಂ (ಕಾವ್ಯಾಂಬು. ೭೩-೨೩) ; ಗಂಧಧೂಪದೀಪಕ್ಕಂ ಸರುಗಿಗ[ಂ] . . . ಕುಡುವ ಭೂಮಿ (ಎಕ. XVII, ೧೨೨-೭ : ೧೦೬೯) ; ಪರಕೆಯನೀಯದೆ ಮಾಸಲ ಸರುಗಂ ಮುಂದಿಡದೆ ತಡೆಯದೂಡದೆ ಪಲರುಂ ಬಿರಸರ್ಚನೆ ಮಾಡದೆ ಮಾಣ್ದಡೆ ಪೀಡೆಗಳೇಕೆ ಮಾಣ್ಬುವೆಂದು ಜಡಾತ್ಮರ್ (ಪತಾರ. ೯೬೩).

**ಚರಗಚೆಲ್ಲು, ಸರುಗಚೆಲ್ಲು** = ಭೂಮಿತಾಯಿಗೆ ನೈವೇದ್ಯಕ್ಕೆಂದು ಸಿದ್ಧಪಡಿಸಿದ ಚರುಗವನ್ನು ಚೆಲ್ಲು : ನಾಡಿನ ಒಕ್ಕಲು ಜನ ಶೀಗಿಹುಣ್ಣಿಮೆಯ ದಿನ ಹೊಲದಲ್ಲಿ 'ಚರಗ' ಚೆಲ್ಲಲು ಹೋಗುತ್ತಾರಷ್ಟೆ ? (ಕರೀಕ. ೩೬) ; ಕಲ್ಲಪ್ಪ ರಾಸಿಪೂಜೆಯನ್ನು ಮಾಡಿದ. ಕಣದ ಸುತ್ತೆಲ್ಲ 'ಸರುಗ' ಚೆಲ್ಲಿದ (ದಿಜಾಂ. ೩). **ಚೆರಗ ತೂರಾಡು** = ಯಥೇಚ್ಛವಾಗಿ ಚೆಲ್ಲು ; ಹಾಳುಮಾಡು ; ಪೋಲುಮಾಡು : ತನ್ನ ಹರೆಯದ ರೂಪಿನ ಚೆರಗ ತೂರಾಡ ಬಾರದೆಂದು ಬಸವಂತಿ ಜಚ್ಚಿಸುತ್ತಿದ್ದಳು (ದೀಜಹ. II, ೦೪೦) [ <ಸಂ. ಚರುಕ ]

**ಚರುಗು** 'ಚರುಗ' ನೋ.

**ಚರುಪು** 'ಸೆಜಿಪು' ನೋ.

**ಚರುವಿಗೆ** 'ಚರಿಗೆ₁' ನೋ.

**ಚರುವೆ** 'ಚರಿಯೆ' ನೋ.

**ಚರೆ, ಚೆರೆ** (ನಾ). ಬಂದೂಕಿನಿಂದ ಹಾರಿಸುವ ಚಿಕ್ಕ ಸೀಸದ ಗುಂಡು ; ಸಿಡಿಮದ್ದು : ಕೋವಿಯನ್ನು ಕೆಳಗೂ ಮೇಲೂ ಅಲ್ಲಾಡಿಸುತ್ತಿದ್ದಾಗಿದ್ದಾಗ ಎಲ್ಲಿಯೋ ಚರೆಯೆಲ್ಲ ನೆಲಕ್ಕುರುಳಿ ಹೋಗಿದ್ದುವು (ಕಾಮೂರು. ೩೦). **ಚೆರೆ** : ಸಿಡಿಮದ್ದು ಚೆರೆ ಬಿದ್ದು, ಜಗ್ಗದೆಯ ನುಗ್ಗಿದರು (ಭಂಗೀತ. ೨೨-೧) ; ಜೇಬಿನಿಂದ ಚೆರೆಯನ್ನು ತೆಗೆದು ಅಂಗೈಯ ಮೇಲೆ ಅದರ ಪ್ರಮಾಣ ನಿರ್ಣಯ ಮಾಡುತ್ತಿದ್ದಾಗ ಕೋಳಿ . . . ಓಡತೊಡಗಿತು (ಕಾನೂರು. ೯೩) [ ←ಹಿಂ. ಮರಾ. ಛರಾ ]

**ಚರೆಗುಂಡಿನಗಿಡ** (ನಾ). ಒಂದು ಬಗೆಯ ಸಸ್ಯ : ಕ್ಯಾನ್ನಾಗಿಡ, ಚರೆಗುಂಡಿನ ಗಿಡ, ಸರ್ವಜಯ, ಹೂದಿಂಗಣ (ಪುಷ್ಪಕಿಗಿ. ೦೭-೨೯೯). [ ? + ಗಿಡ (<ಗಿಡು) ]

**ಚರೆಯು** 'ಚರಿಯೆ' ನೋ.

**ಚರ್ಕಣ** (ನಾ). ಹೆಂಡ ಕುಡಿಯುವುದರಿಂದುಂಟಾದ ಮದ (?) : ಪಾನಂಗೋಷ್ಠಿಕೆಯದಾಪಾನಂ ಶುಂಡಾಪ್ರಪಾನಂ ಕಳ್ಗುಡಿಹ ಕಡುಸೊರ್ಕಿಚರ್ಕಣಂ ತಾನದು ವೆಸರೊಳದುಂ (ವಸ್ತುಕೋ. ೯೩-೬). [ ? ]

**ಚರ್ಚನೆ** (ನಾ). ಗಂಧ ಮೊದಲಾದುವುಗಳನ್ನು ಮೈಗೆ ಲೇಪಿಸುವುದು ; ಅನುಲೇಪನ. 'ಚರ್ಚನೆಗೈ' ಪರಾ. [ ಸಂ. ಚರ್ಚನ ]

**ಚರ್ಚನೆಗೈ** (ಕ್ರಿ). ಬಳಿ ; ಲೇಪಿಸು : ಮಿಙುಗುವ ಕುಂಕುಮ ಗಂಧವ ಮುನಿಗಳ ಚರಣಕ್ಕೆ ಚರ್ಚನೆಗೈದು (ಜ್ಞಾನಕ. ೨೭-೮೭). [ ಚರ್ಚನೆ + ಗೈ (<ಕೆಯ್₁) ]

**ಚರ್ಚರಂ** 'ಚಚ್ಚರಂ' ನೋ.

**ಚರ್ಚರಿ** (ನಾ). ೧. ಉಲ್ಲಾಸದ ಆಟ ; ವಿನೋದ ; ಚೆಲ್ಲಾಟ. ೨. ಸಂತೋಷದ ಕೂಗು ; ಹರ್ಷೋದ್ಗಾರ. ೩. ಒಂದು ಬಗೆಯ ಹಾಡು ; ನೃತ್ಯಗೀತ : ಸಂಗೀತದಿಂಚರಮನನುಸರಿಸಿ ಪೌರಜನಂಗಳ ಚರ್ಚರಿಯ ನಿನದಂ ಪೆರ್ಚುತಿರೆ (ಮಿತ್ರಗೋ. ೭) ; ಗರಿಯ ವಿಕ್ಕಿರನೊ ಕಿನ್ನರನೊ ಬಗೆವೆದೆಯ ಮಾಧುರಿಯನರುಹೆಮಗೆಂದುಮಾಲಿಸಿಲ್ಲ ಸುರೆಯ ಚರ್ಚರಿಂದಲಕ್ಕರೆಯ ಸಂಸ್ಕೃತಿ ಎದಿ ಸುರಿದಿಂತು ದಿವ್ಯ ಹರ್ಷಾವೇಶವಂ (ಗಿರಿಪಿಂ. ೭-೭೩೬). [ ಸಂ. ಚರ್ಚರೀ ]

**ಚರ್ಚಾಕೂಟ** (ನಾ). ಚರ್ಚೆ ನಡೆಯುವ ಸಭೆ ; ಆಯ್ದುಕೊಂಡ ಒಂದು ಹೇಳಿಕೆಯಲ್ಲಿ ಪೂರ್ವಪಕ್ಷ ಉತ್ತರಪಕ್ಷಗಳಾಗಿ ಅಥವಾ ಪರ-ವಿರುದ್ಧ ಪಕ್ಷಗಳಾಗಿ ವಾದಮಾಡುವ ಸಭೆ: ಉಪಾಧ್ಯಾಯ–ವಿದ್ಯಾರ್ಥಿ ಸಹಕಾರ ಬೋಧನಕ್ರಮ – ಇದು ಚರ್ಚಾಕೂಟದ ಬೋಧನಕ್ರಮದಂತಿದ್ದು . . . ಯೂರೋಪು ಮುಂತಾದೆಡೆ ಪ್ರಚಾರಕ್ಕೆ ಬಂತು (ಶಿಕ್ಷಣ. ೨೯೮) ; ಚರ್ಚಾಕೂಟಕ್ಕಾಗಿ . . . ಗ್ರಂಥಾಲಯದ ಕಟ್ಟಡದಲ್ಲಿ ಪ್ರತ್ಯೇಕ ಕೋಣೆಗಳಿರಬೇಕು (ಗ್ರಂಥಾಲ. ೬). [ ಸಂ. (ಚರ್ಚಾ + ಕೂಟ) ]

**ಚರ್ಚಾತೀತ** (ಗು). ವಾದಕ್ಕೆ ನಿಲುಕದ,-ಮೀರಿದ ; ವಾದಾತೀತವಾದ : “ಚರ್ಚಾಸ್ಪದವಲ್ಲದ; ಚರ್ಚಾತೀತ” (Beyond dispute. ಪತ್ರಿಕೆ. ೩೨). [ ಸಂ. (ಚರ್ಚಾ + ಅತೀತ) ]

**ಚರ್ಚಾಮಂದಿರ** (ನಾ). ಚರ್ಚೆ ನಡೆಸುವ ಮಂದಿರ : ನ್ಯಾಯದರ್ಶಿಗಳು ಗುಂಪುಗುಂಪಾಗಿ ಹೊರಟು ಚರ್ಚಾಮಂದಿರದಲ್ಲಿ ಸೇರಿದರು (ಪುಸರು. ೩೬). [ ಸಂ. (ಚರ್ಚಾ + ಮಂದಿರ) ]

**ಚರ್ಚಾಸ್ಪದ** (ಗು). ಚರ್ಚೆಗೆ ಅವಕಾಶವಿರುವ ; ಚರ್ಚೆಮಾಡಬೇಕಾದ ; ವಾದವಿವಾದಗಳಿಗೆ ಈಡಾಗಿರುವ : ಇದೇ ಸಂದರ್ಭದಲ್ಲಿ ಚರ್ಚಾಸ್ಪದವಾದ ೨ನೆಯ ಸೂತ್ರವು ಹೊಸ ಪ್ರತಿಯಲ್ಲಿ ಬಂದಿದೆ (ಶಮಹಾಂ. ೫೦). [ ಸಂ. (ಚರ್ಚಾ + ಆಸ್ಪದ) ]

**ಚರ್ಚೆ** (ನಾ). ೧. ಚರ್ಚೆ ; ವಾಕ್ಕಲಹ : ಜೂಜಾಟಕೆ ಸೋಲಬಂಟಕೆ ರಣದ ಸಂವಾದ ಪೆರ್ಗೂಡಿಗಳ್ ಚರ್ಚೆ ರಾಜವೀಥಿಯೊಳಾಡುವ ಸಂದಣಿ . . . ನಿತ್ಯಕೃತ್ಯದಲಿ (ಪ್ರಭುಚರಿ. ೨೦-೨೬). ೨. ವಿಚಾರಣೆ ; ಪರಿಶೋಧನೆ. [ ಸಂ. ]

**ಚರ್ಚಿಕೆ** (ನಾ). ಗಂಧಾದಿಗಳನ್ನು ಬಳಿಯುವಿಕೆ ; ಅನುಲೇಪನ : ನವ ಓಪ್ಪ ಚರ್ಚಿಕಾಕಶ್ಮೀರಪಾತ್ರ ದರ್ಪಣಮಂ . . . ಪೂರ್ಣಕಲಶಂ ತಳೆದತ್ತು ತುಳಂ ವಿಳಾಸಮಂ (ಚಂದ್ರಪ್ರ. ೬-೫೩). [ ಸಂ. ಚರ್ಚಿಕಾ ]

**ಚರ್ಚಿತ** (ಗು). ೧. ಬಳಿದ; ಸವರಿದ; ಲೇಪಿಸಿದ: ನಾಕಲೋಕಾಚರಿತ ಚರ್ಚಾಚರ್ಚಿತ ಸುರಭಿ ನವೋರು . . . ಸಮುತ್ತುಂಗ ಮಣಿಪೀಠಪ್ರತಿಮಮಪ್ಪ ಸೌಧವರ್ಗೋಂದ್ರನುತ್ತುಂಗದೊಳ್ ಶೀರ್ಷಕರತುಷಾರಕರ (ಶಾಂತಿಪು. ೧೧-೧೩ ವ); ಘನಸಾರಸುರಭಿ ಮಳಯರುಹ ಚರ್ಚಿತಮುಂ . . . ಸ್ವಸ್ತಿಕಪ್ರಶಸ್ತ ಮಣಿದರ್ಪಣಾ ಸಮರ್ಪಿತಮುಮಪ್ಪ ಕಳಧೌತ ಮಂಗಳ ಕಳಶಮಂ ಬಳಸಿ (ಮಲ್ಲಿಪು. ೯-೧೦೦) ; ಮಂಜುಳ ಹರಿದ್ರ ಕುಂಕುಮಚರ್ಚಿತಾಂಗದಿಂ ಚೆಲ್ವಿಂದೆ ಸಂಗಡಿಸಿದ ಅಂಜಲಿಗಳಿಂ . . . ದಂಪತಿಗಳಭಿನಮಿಸೆ (ಕೃಮಿಭಾ. ೩೦-೩೨). ೨. ಚರ್ಚಿಸಿದ; ವಿಚಾರಿಸಿದ ; ವಿಮರ್ಶೆಮಾಡಿದ. ೩. ಇಚ್ಛಿಸಿದ ; ಬಯಸಿದ. [ ಸಂ. ]

**ಚರ್ಚಿಸು** (ಕ್ರಿ). ೧. ವಾದ ಮಾಡು ; ವಿವಾದ ಮಾಡು : ಜೇಮಕ್ಷಕ ನಪ್ಪುದಾಗಮಮನೋವದೆ ಮೆಚ್ಚಿ ಚರ್ಚಿಸದಿರ್ಪುದೊಯ್ಯನೆ ವಾದದೊಳ್ (ಧರ್ಮಾಮೃ. ೫-೧೦೦). ೨. ಪರಿಶೀಲಿಸು ; ವಿಚಾರಿಸು ; ಯೋಚಿಸು : ಕೇಳಿಮಿದಿಂತುಟೆಂದು ಚರ್ಚಿಸಿ ನಾಡಿವಂತು ಬೇಟಿ ಪೆಚಿತಾಪ್ಪುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೯೧); ಸುಮತಿ . . . ಅವರ ಬಗೆಯ ನಱಿದುಪಾಯಮನಾಗಳೆ ಚರ್ಚಿಸಿ (ಸುಕುಮಾ. ೬-೧೩ ವ); ಶವ್ಯೋಳ್ ಚರ್ಚಿಸಿ ಕಳ್ಳೊಳ್ ವಿಷಮಂ ಬೆರೆಯಿಸಿಕೊಂಡು ಬಂದರ್ (ಧರ್ಮಾಮೃ. ೨-೨೦೦); ಸಾಧಕಬಾಧಕಗಳನ್ನು ಮುಂದಿಟ್ಟು ಸ್ಪಷ್ಟವಾಗಿ ಚರ್ಚಿಸಿದರು (ಹಿಂಕಿರು. ೩೩). [ ಚರ್ಚೆ + – ಇಸು₁ ]

**ಚರ್ಚು**₁, **ಚಚ್ಚು**₂, **ಚೆಚ್ಚು**₁ (ಕ್ರಿ). (ಕಂಕುಳಲ್ಲಿ) ಎತ್ತಿಕೊಳ್ಳು: “ಚರ್ಚು – ಶಿಶುಸಂಧಾರಣೇ” (ಶಮದ. ವ); ಚರ್ಚಲ್ ಶಶಿಶಿಶುವಂ ಕಱಿಗರ್ಚಲ್ ಘನಘಟೆಯನರ್ಚಲವರದ್ರುಮಮಂ . . . ಒಡರ್ಚಿದುವೆನೆ ನೀಳ್ದುವಿದಱ ಶಿಖರಕರಂಗಳ್ (ಕಾವ್ಯಾವ. ೫೩೬). **ಚೆಚ್ಚು**₁: ಮಗುವನ್ನು ಬಗಲಿಗೆ ಚಚ್ಚಿಕೊಂಡು (ಮರಮ. ೨೭); ಅವನನ್ನು ಬಗಲಲ್ಲಿ ಚಚ್ಚಿಕೊಂಡೇ ಅಚ್ಯುತನ ವಿರಾಮ ಕಳೆಯುತ್ತದೆ (ಮುಗಿಯು. ೩೯೦). **ಚೆಚ್ಚು**₁: ತುಂಬಿದ್ದ ಕೊಡವನ್ನು ಹಗ್ಗದ ಕೊಂಡಿಯಿಂದ ಬಿಡಿಸಿ, ಸೊಂಟಕ್ಕೆ ಚೆಚ್ಚಿ ಬಚ್ಚಲ ಮನೆಯತ್ತ ನಡದೇಬಿಟ್ಟಳು (ಮೂರುದಾ. ೧೯೭). [ ? ]

**ಚರ್ಚು**₂ (ನಾ). ಕ್ರೈಸ್ತರ ಪ್ರಾರ್ಥನಾಮಂದಿರ : ಚರ್ಚಿನ ಗೋಪುರದಿಂದ ಬರುವ ಗಂಟೆಯ ಸದ್ದು (ಮರಳಿಮ. ೦). [ ←ಇಂ. Church ]

**ಚರ್ಚೆ** (ನಾ). ೧. ಸುಗಂಧದ್ರವ್ಯಗಳ ಅನುಲೇಪನ : “ ಸಮಾಲಂಭನಂ, ಚರ್ಚಾ, ಮಾರ್ಜ್ಜನಾ–ಈ ೩ ಚರ್ಚೆ” (ಕರ್ಣಾಟ. ೪೯-೩೭೭); ತರಳಕೆ ತಂದ ಚಂದನದ ಚರ್ಚೆಗಳಿಂ . . . ಮೂರ್ಛೆಯಿಂದೆಚ್ಚತ್ತು (ಕಾದಂಸಂ. ೮೮೪) ; ಪ್ರಗವ ದ ಘುಸೃಣ ಚಂದನ ಚರ್ಚೆಯೊಳಂ (ಜಗಿಪಿ. ೮-೬೦ ವ). ೨. ಚಿಂತನೆ ; ಮನಸ್ಸಿನಲ್ಲಿ ಮತ್ತೆ ಮತ್ತೆ ಆಲೋಚಿಸುವುದು ; ಪರ್ಯಾಲೋಚನೆ : “ಚಿಂತೆಯಲ್ಲಿಯುಂ ಚರ್ಚಾ ಎಂಬುದು” (ಕರ್ಣಾಟ. ೦೩೨-೮) ; ಕವಿಕಾವ್ಯದ ವಿಷಯವಾಗಿ ಕೆಲವು ಮಾತುಗಳನ್ನು ಚರ್ಚೆಗೆ ಎತ್ತಿಕೊಂಡಿರುವರು (ಸಾಹಿಸ. ೦೦೯). ೩. ದುರ್ಗೆ; ಚಾಮುಂಡಿ; ಭೈರವಿ: “ಚಾಮುಂಡಿ ಕರ್ಣಮೋಟಿ ಮಹಾ ಮಾಯಾಮೂರ್ತಿ ಚರ್ಚೆಯುಂ ಭೈರವಿಯಾ ನಾಮಮಿಮಪಕ್ಕುಂ” (ಪಶು.ಕೋ. ೮-೦೯) ; “ಚಾಮುಂಡಿ ಚರ್ಚೆ ಭೈರವಿಯೆನಲು ವನದೇವಿ” (ಮಂಗರಾ. ೫-೦೪). ೪. ಕಾರಣ ಸಹಿತವಾಗಿ ವಿಮರ್ಶಿಸುವುದು; ತರ್ಕ. ೫. ವಾಗ್ವಾದ: ವಿವಾದ. ೬. ಉತ್ಸವ ; ಸಂತೋಷ ; ಉಲ್ಲಾಸ : “ ಮುಂದಮವಲು ಚರ್ಚೆ” (ಮಂಗರಾ. ೪೭-೦೬). ೭. ರತಿಕ್ರೀಡೆ; ಮೈಥುನ. ೮. ಮಾತು; ಉಕ್ತಿ. ೯. ವ್ರತ. ೧೦. ಪ್ರತಿಮೆ. ೧೧. ನೀರುಗುಳ್ಳೆ ; ಬುದ್ಬುದ. “ ಸ್ನೇಹಂ ಯುಕ್ತಿ ಪ್ರತಿಮೋತ್ಸಾಹಂ ವ್ರತ ಚಿಂತೆ ಚಂಡಿಕಾದೇವಿಯರುಂ ದೇಹಕ್ಕನುಲೇಪನಕಂ ಮೋಹದಿ ಪುಟ್ಟುವದು ನವವ ಚರ್ಚಾಶಬ್ದಂ” (ನಾನಾಕೋ. ೦೦೩); “ರತಿಯೊಳ್ ಚಿಂತೆಯೊಳ್ . . . ವ್ರತದೊಳ್ ಲೇಪನಬುದ್ಬುದೋತ್ಸವಗಳೊಳ್ ಚರ್ಚಾಭಿಧಾನಂ” (ನಾನಾರ. ೭೪). [ ಸಂ. ಚರ್ಚಾ ]

**ಚರ್ಚೆಗೈ** (ಕ್ರಿ). ೧. ಬಳಿ; ಸವರು. ೨. ನೇವರಿಸು: ಪೊಚ್ಚ ಪೊಸ ಸುರಚಾಮರಂತೆಸೆವ ವಾಲಧಿಯ ಚರ್ಚೆಗೈವುತಮಡೆದು ಕೊರಳ ಕೊಂಕಿಸಿ ಮರುತನಚ್ಚರಿಯ ಕುವರ . . . ಉಲ್ಲಾಸದಿಂದೆಸೆದನು (ಜಂಆಶಾ. ೫-೧-೦೩). ೩. ಚರ್ಚೆಮಾಡು; ಚರ್ಚಿಸು; ವಾದಿಸು. [ಚರ್ಚೆ+ಗೈ (<ಕೆಯ್[1])]

**ಚರ್ದಿ** (ನಾ). ಕಾರಿಕೊಳ್ಳುವಿಕೆ; ಓಕರಿಕೆ; ವಾಂತಿ; ವಮನ. ‘ಚರ್ದಿಸು’ ಪರಾ. [ <ಸಂ. ಛರ್ದಿ ]

**ಚರ್ದಿಸು** (ಕ್ರಿ). ಓಕರಿಸು ; ಕಾರಿಕೊಳ್ಳು ; ವಾಂತಿಮಾಡು : ಕುಡೆ ವಿಧಿಪೂರ್ವಕಂ ಸುಧೆಸಮಪ್ಪುದನ್ನಮನುಂಡು ತೃಪ್ತಿಯಂ ಪಡೆದು ಬಱಿಕ್ಕೆ ಚರ್ದಿಸಿದೊಡಂತದನಾ ಸತಿ ತನ್ನ ಕೈಗಳಿಂದುಡುಗಿ (ಮಹಾಸಿ. ೬-೦೩೪). ‘ಛರ್ದಿಸು’ ಪರಾ. [ ಚರ್ದಿ + – ಸು₁ ]

**ಚರ್ಪಟಿಸು** (ಕ್ರಿ). ೧. ಶಂಕರಾಚಾರ್ಯರ ಚರ್ಪಟಮಂಜರಿ ಸ್ತೋತ್ರವನ್ನು ಹೇಳು. ೨. ಹೀಯಾಳಿಸು; ಬಡಬಡಿಸು. ೧. ೨: ಜೀವದ ಚಿತ್ತು ಜಗತ್ತಿನ ಸತ್ತು ತಿಳಿದಾನಂದದ ಸಂವಿತ್ತು. ಚರ್ಪಟಿಸಲಿ ಅದ್ವೈತದ ವಾದ ಜಾಣ ಬೊಮ್ಮ ಮೌನದೊಳಿತ್ತು (ಅರಳು. ೨೬೦-೩). [ ಚರ್ಪಟ₀ + – ಇಸು₁ ]

**ಚರ್ಬಿ**, **ಚರಬಿ** (ನಾ). ಕೊಬ್ಬು ; ನೆಣ ; ಮಜ್ಜೆ : ಚರ್ಬಿ ಇಲ್ಲದ ನನ್ನ ಮಗ ಇವನು (ಧಮೋಕಾ. ೨೨೨). **ಚರಬಿ**: ಅಲ್ಲಿ ಸ್ವಲ್ಪ ಚರಬಿ ಇಟ್ಟಿದ್ದೆ. ತಂದುಕೊಡು ಕತ್ತಿಗೆ ಹಚ್ಚಬೇಕು (ಮರಳಿಮ. ೯೪) ; ಚರಬಿ ಮಿಶ್ರಿತ ಇಂಗ್ರೇಜಿ ಬಿಸ್ಕೀಟುಗಳನ್ನು ತಿಂದು ನಿಮ್ಮ ಸ್ವಾಸ್ಥ್ಯವನ್ನು ಕಳೆದುಕೊಳ್ಳಬೇಡಿರಿ (ಕುಂಹಿಂ. ೦೩೩) ; [ ←ಪಾರ. ಚರ್ಬೀ; ಹಿಂ. ಮರಾ. ಚರಬೀ ]

**ಚರ್ಮ** (ನಾ). ೧. ತೊಗಲು ; ತ್ವಕ್ಕು ; ಅಜಿನ : "ಕೋಲ್ ತೊವಲುಂ ಸಮ್ಮವದಿರದಕ್ಕುಂ ಚರ್ಮ" (ಕವಿಕಂ. ೮೩). ೨. ಗುರಾಣಿ; ಢಾಲು: "ಖೇಟಕಂ, ಫಳಕಂ, ಚರ್ಮ, ಆವರಣಂ—ಈ ೪ ಹರಿಗೆ" (ಹಲಾಯು. ೭೩-೩೦೬). [ ಸಂ. ಚರ್ಮನ್ ]

**ಚರ್ಮಕಶೆ** (ನಾ). ಸೀಗೆಮರ ಮತ್ತು ಅದರ ಕಾಯಿ [ <ಸಂ. ಚರ್ಮಕಷಾ ]

**ಚರ್ಮಕಾರ** (ನಾ). ಮೆಟ್ಟು ಹೊಲಿಯುವವನು; ಚಮ್ಮಾರ; ಸಮಗಾರ: "ಡೋಹಾರಃ— ಚರ್ಮಕಾರಂ" (ಕಾಕಶ. ೬೬) ; ಹೊಲೆಯನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮವಮಾತ್ರದಲಿ ರೂಢಿಸಿಯೆನುತ ಚರ್ಮಕಾರರ ಗೂಡಿನಲಿ ಜನಿಸುವನು (ಕುಮಾವ್ಯಾಭ. ೬೦೩. ಪ. ೩೪೩). [ ಸಂ. ]

**ಚರ್ಮಕೃತ್ತು** (ನಾ).=ಚರ್ಮಕಾರ : "ಚರ್ಮಕೃತ್, ಪಾದುಕಾಕಾರಃ— ಈ ೨ ಸಮ್ಮಗಾಱಂ" (ಹಲಾಯು. ೯೮-೪೪೨). [ ಸಂ. ಚರ್ಮಕೃತ್ ]

**ಚರ್ಮಗತ** (ಗು). ಚರ್ಮಕ್ಕೆ ಸೇರಿದ; ಚರ್ಮಕ್ಕೆ ಸಂಬಂಧಿಸಿದ: ಅನ್ನಗತ ಪ್ರಾಣ. ಚರ್ಮಗತ ದೃಷ್ಟಿ (ಗಾಥ). [ ಚರ್ಮ + ಗತ₂ ]

**ಚರ್ಮಘರ್ಘರ** (ನಾ). ಎಣ್ಣೆ ಮೊದಲಾದುವನ್ನು ಹಾಕಲು ಮಾಡಿದ ಚರ್ಮದ ಬುದ್ದಲಿ,-ಬುಡ್ಡಿ : "ಚರ್ಮಘರ್ಘರ[ಪಾಠಾಂ. ಗರ್ಘಟ, ಗರ್ಘರ]ಮೆನಲು ಬುದ್ದಲಿಗೆ ನಾಮಮಕ್ಕುಂ" (ಮಂಗರಾ. ೩೩-೨೬).
[ ಚರ್ಮ + ಘರ್ಘರ₂ (<ಗರ್ಘರ₁) ]

**ಚರ್ಮಚಕ್ಷು** (ನಾ). ಪ್ರಾಕೃತಿಕವಾದ ಕಣ್ಣು ; ಭೌತಿಕ ದೃಷ್ಟಿ; ಹೊರಗಣ್ಣು : ಈ ಚರ್ಮಚಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ (ಜಗವಿ. ೦-೬೩) ; ಚರ್ಮಚಕ್ಷುಗಳಂತೆ ಅಂತಃಚಕ್ಷುಗಳೂ ಉಪಯೋಗಕ್ಕೆ ಬಾರದ ಧೃತರಾಷ್ಟ್ರನಂಥ ವರ್ಗವನ್ನು ಅಪವಾದವೆಂದು ಬಿಟ್ಟು ಬಿಟ್ಟರೂ (ಪ್ರಬಂಧ. ೪೬). [ ಚರ್ಮ + ಚಕ್ಷು ]

**ಚರ್ಮಣ** (ನಾ). ವಾಗ್ಮಿ ; ಅವಧಾನಿ ; ಅನೇಕರ ಪ್ರಶ್ನೆಗಳಿಗೆ ಏಕಕಾಲದಲ್ಲಿ ಕೂಡಲೆ ಉತ್ತರ ಹೇಳಬಲ್ಲವನು : "ಮೇಳೈಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ" (ಮಂಗರಾ. ೦೦೩-೦೬). [ ? ]

**ಚರ್ಮದಂಡ** (ನಾ). ಚರ್ಮದಿಂದ ಮಾಡಿದ ಚಾಟಿ ; ಕಶಾದಂಡ ; ಬಾರುಕೋಲು; ಚಮ್ಮಟಿಗೆ: "ಚರ್ಮದಂಡಃ, ಕಶಾ—ಈ ಚಮ್ಮಟಿಗೆ" (ಹಲಾಯು. ೭೩-೨೮೮) ; "ಕಸೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಕ್ಕು" (ಮಂಗರಾ. ೮೦-೧೩). [ ಚರ್ಮ + ದಂಡ ]

**ಚರ್ಮಪಟ್ಟಿಕೆ** (ನಾ). ೧. ಚರ್ಮದ ಬಾರು. ೨. ಪಗಡೆ ಮೊದಲಾದುವನ್ನು ಆಡಲು ಬಳಸುವ ಚರ್ಮದ ಹಾಸು ; ಪಟ್ಟಿ.
[ ಚರ್ಮ + ಪಟ್ಟಿಕೆ ]

**ಚರ್ಮಪಾದುಕ** (ನಾ). ತೊಗಲಿನ ಹಾವುಗೆ ; ಚರ್ಮದಿಂದ ಮಾಡಿದ ಮೆಟ್ಟು ; ಪಾದರಕ್ಷೆ : "ಚರ್ಮಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೩೦-೦೮). [ ಸಂ. ಚರ್ಮಪಾದುಕಾ ]

**ಚರ್ಮಪಾದುಕೆ** (ನಾ).=ಚರ್ಮಪಾದುಕ. [ ಚರ್ಮ + ಪಾದುಕೆ ]

**ಚರ್ಮಪಾಶ** (ನಾ). ಚರ್ಮದಿಂದ ಮಾಡಿದ ಹಗ್ಗ,-ಮಿಣಿ : "ಮಿಣಿ ಚರ್ಮಪಾಶಂ" (ಮಂಗರಾ. ೮೪-೨೩). [ ಚರ್ಮ + ಪಾಶ ]

**ಚರ್ಮಪ್ರಭೇದಿಕೆ** (ನಾ). ಚಮ್ಮಾರನು ಉಪಯೋಗಿಸುವ ಚೂರಿ,-ಉಳಿ ; "ಚರ್ಮ ಕತ್ತರಿಸುವ ಸಾಧನ" (ಅಮರ. ೮೪೪).
[ ಸಂ. ಚರ್ಮಪ್ರಭೇದಿಕಾ ]

**ಚರ್ಮಪ್ರಸೇವಿಕೆ** (ನಾ). ತಿದಿ : "ಚರ್ಮಪ್ರಸೇವಿಕೆ = ತೊಗಲ ತಿದಿ" (ಗಂಗಾಮ. ೦೨೯). [ ಸಂ. ಚರ್ಮಪ್ರಸೇವಿಕಾ ]

**ಚರ್ಮಯಷ್ಟಿ** (ನಾ).=ಚರ್ಮದಂಡ : "ಕಶಾಹ್ವಯಂ ಚರ್ಮಯಷ್ಟಿ" (ಪಮ್ಮಕೋ. ೮೬-೨೩). [ ಚರ್ಮ + ಯಷ್ಟಿ ]

**ಚರ್ಮಯಷ್ಟಿಕೆ** (ನಾ).=ಚರ್ಮದಂಡ. [ ಚರ್ಮ + ಯಷ್ಟಿಕೆ ]

**ಚರ್ಮರತ್ನ** (ನಾ). [ಜೈನ] ಚಕ್ರವರ್ತಿಯಾಗುವವನಿಗೆ ತಾನಾಗಿ ದೊರಕುವ ಏಳು ಅಜೀವರತ್ನಗಳಲ್ಲಿ ಒಂದು ; ☞ ನೀರಿನ ಮೇಲೆ ತೇಲಿ ಹೋಗಲು ಉಪಯೋಗಿಸುವ ಚರ್ಮದ ಸಾಧನ. ಇದರ ಪ್ರಭಾವದಿಂದ ಚಕ್ರವರ್ತಿಯು ಅಗಾಧ ಜಲದುರ್ಗಗಳನ್ನು ಆಕ್ರಮಿಸಬಲ್ಲನು. ಮಳೆ ಬಂದಾಗ ಮೇಲೆ ಛತ್ರರತ್ನವನ್ನು ಹಿಡಿದು, ಚರ್ಮರತ್ನದ ಮೇಲೆ ಅಪಾರ ಸೈನ್ಯದೊಡನೆ ನಿಶ್ಚಿಂತನಾಗಿ ನಿಂತುಕೊಳ್ಳಬಹುದು : ಅಗಾಧಜಲದುರ್ಗಸಮುತ್ತರಣನಿರತಸಕಲಶಿಬಿರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ (ಆದಿಪು. ೦೦-೩ ವ) ; ನೆಲನೆಲ್ಲಮನವರೇಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಂ ಮೇಲೆ ಪಿಡಿದ ಛತ್ರರತ್ನಮುಂ ಕಾಯೆ(ಅಜಿಪು. ೯-೩೪ ವ); ಗಗನತಳದಂತೆ ಪೆರ್ಮೆಯಂ ತಳೆದ ವಜ್ರಮಯಮೆಂಬ ಚರ್ಮರತ್ನಮುಂ (ಚಂದ್ರಪು. ೬-೦೦೦ ವ). [ ಚರ್ಮ + ರತ್ನ ]

**ಚರ್ಮವಾದ್ಯ** (ನಾ). ತೊಗಲಿನಿಂದ ಮಾಡಿದ ಹರೆ, ಮೃದಂಗ, ತಬಲ ಮುಂತಾದ ವಾದ್ಯ: ಇಲ್ಲಿ ಚಂಡೆ . . . ಎಂಬ ಒಂದು ಚರ್ಮವಾದ್ಯವನ್ನು ಉಪಯೋಗಿಸುತ್ತಾರೆ (ಯಕ್ಷಗಾ. ೦೬). [ ಚರ್ಮ + ವಾದ್ಯ ]

**ಚರ್ಮಪಾವುಗೆ, ಚರ್ಮಾವುಗೆ** (ನಾ).=ಚರ್ಮಪಾದುಕ: ಸೊಸಿಮೆಗೆಲ್ಲಂ ಸಲೆ ಚರ್ಮ [ಪಾಠಾಂ. ಮ್ಮ] ಪಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೧-೦೨೧). **ಚರ್ಮಾವುಗೆ**: ಜನಪವೋಲಗದ ಚಾವಡಿಗೆಯ್ದೆ ಕೇಳ್ದನಾ ಚರ್ಮಾವುಗಾರವೆಂದು (ಗುರುಚಾ. ೦೩-೩೫).
[ ಚರ್ಮ + ಪಾವುಗೆ ]

**ಚರ್ಮಶಾಸ್ತ್ರ** (ನಾ). "ಚರ್ಮ ಮತ್ತು ಚರ್ಮರೋಗ ವಿಷಯಕವಾದ ಶಾಸ್ತ್ರ ; ಚರ್ಮಶಾಸ್ತ್ರ" (Dermatology. ೩೦೪೨).
[ ಚರ್ಮ + ಶಾಸ್ತ್ರ ]

**ಚರ್ಮಸೇವನ** (ನಾ). ತಿದಿ : "ಧೃತಿ ಚರ್ಮಸೇವ[ವ]ನಮೆನಲ್ಕೆ ತಿದಿಯಕ್ಕು" (ಮಂಗರಾ. ೦೩೩-೩೦). [ ಸಂ. (ಚರ್ಮ + ಸೇವನ) ]

**ಚರ್ಮಾಂಬರ** (ನಾ). ತೊಗಲಿನ ಬಟ್ಟೆ, - ವಸ್ತ್ರ, - ಉಡುಗೆ : ಹರಿಣಶಾರ್ದೂಲಾದಿ ಚರ್ಮಾಂಬರವೆ ಸಮಕಟ್ಟಿಮಗೆ ರತ್ನಾಭರಣವೇ ರುದ್ರಾಕ್ಷಿಯೆಂದಳು ನಗುತ ತರಳಾಕ್ಷಿ (ಕುಮಾವ್ಯಾಭ. ೨೦-೭). [ ಚರ್ಮ + ಅಂಬರ ]

**ಚರ್ಮಾಕ್ಷಿ** (ನಾ). = ಚರ್ಮಚಕ್ಷು : ಹರನನೀ ಚರ್ಮಾಕ್ಷಿಯಲಿ ಗೋಚರಿಸಬೇಡಿದುದಂಟು ಮರ್ತ್ಯದೊಳಿರವು ಮರ್ಖು ಭಾಪ್ನ ಪುಣ್ಯವೆನುತ್ತ ಬಿಸುಸುಯ್ದು (ಕುಮಾವ್ಯಾಭ. ೭-೨). [ ಚರ್ಮ + ಅಕ್ಷಿ ]

**ಚರ್ಮಾಯತನಪಕ್ಕಿ** (ನಾ). ಬಾವಲಿ ; ಕಣ್ಣುಕಪ್ಪಡಿ : ಜಠನದಪ್ಪದ ಕೊನೆವಿಡಿದು ನೇಲುವ ಚರ್ಮಾಯತನಪಕ್ಕಿಯು ಕಂಡು ನಗುತೆ (ಪಂಚತಂ. ೨೪-೬೨). [ ಚರ್ಮ + ಆಯತನ + ಪಕ್ಕಿ₁ ]

**ಚರ್ಮಾವುಗೆ** 'ಚರ್ಮಪಾವುಗೆ' ನೋ.

**ಚರ್ಮಿ** (ಗು). ೧. ಗುರಾಣಿಯನ್ನು ಹಿಡಿದುಕೊಂಡ.(ನಾ). ೨. ಹರಿಗೆ; ಗುರಾಣಿ : "ಫಳಕಂ ಖೇಟಕಂ ಚರ್ಮಿ ಹರಿಗೆಯಕ್ಕುಂ" (ಮಂಗರಾ. ೮೬-೩೦). ೩. ಗುರಾಣಿಯನ್ನು ಹಿಡಿದುಕೊಂಡವನು ; ಯೋಧ : "ಚರ್ಮಿ, ಫಲಕಪಾಣಿ-ಕಡಿತಲೆಗಾಱ" (ನಾಚಿರಾ. ೬). ೪. "ಭುಜಪತ್ರೆಗಿಡ" (ಅಮರ. ೮೪೪). [ ಸಂ. ಚರ್ಮಿನ್ ]

**ಚರ್ಮೇಂದ್ರಿಯ** (ನಾ). ೧. ಪಂಚೇಂದ್ರಿಯಗಳಲ್ಲಿ ಒಂದಾದ ಚರ್ಮ ; ಸ್ಪರ್ಶೇಂದ್ರಿಯ. ೨. ಭೌತಿಕಜಗತ್ತಿಗೆ ಸೀಮಿತವಾದ ಇಂದ್ರಿಯ ; ಚರ್ಮೇಂದ್ರಿಯಗಳಿಗೆ ಗೋಚರಿಸುವ ಮಹಾಭೌತಿಕ ಸೃಷ್ಟಿ; ಶಬ್ದಗಳಿಂದ ಸೂಚಿತವಾಗುವ ಸಾಹಿತ್ಯ ಸೃಷ್ಟಿ; ಮನಸ್ಸಿಗೇ ಹೊಳೆಯುವ ಕಲ್ಪನಾಸೃಷ್ಟಿ (ಸಾಹಿವಿ. ೦೪೨). [ ಚರ್ಮ + ಇಂದ್ರಿಯ ]

**ಚರ್ಯೆ** (ನಾ). ೧. ನಡತೆ; ನಡೆವಳಿ: ನಾವು ಅವಳ ವಿಷಯದಲ್ಲಿ ತೋರಿಸಿದ ಚರ್ಯೆವು ಅಷ್ಟು ಶ್ಲಾಘ್ಯತರವಾದ್ದೆಂದು ಕಾಣುವುದಿಲ್ಲ (ಚೀಚಸೂ. ೩೦). ೨. ಆಚರಣೆ ; ಅನುಷ್ಠಾನ : ಶೈವಾಗಮಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯೆ ಎಂಬ ನಾಲ್ಕು ವಿಷಯಗಳನ್ನು ವಿವರಿಸತಕ್ಕವುಗಳಾಗಿವೆ (ಭಾಕರ. ೨೦೦). [ ಸಂ. ಚರ್ಯಾ ]

**ಚರ್ಯಾಧಿಕಾರ** (ನಾ). ೧. ಅನುಷ್ಠಾನದ ಯೋಗ್ಯತೆ. ೨. ಅನುಷ್ಠಾನ ಮಾಡಿ ಸಿದ್ಧಹಸ್ತನಾದವನು : ಆರ್ಯಾಶತಕವುಂ . . . ಚರ್ಯಾಧಿಕಾರನತ್ಯಾಶ್ಚರ್ಯಾಮರವಾಣಿಯಿಂದಮೆಸಗಿದನೊಲವಿಂ (ಶಾಕುಂಕ. ೬-೧೧). [ ಸಂ. (ಚರ್ಯಾ + ಅಧಿಕಾರ) ]

**ಚರ್ಯಾಪಾದ** (ನಾ). [ವೀಶೈ] ಆಚಾರ ಸಂಪ್ರದಾಯ ಹಾಗೂ ವ್ರತಗಳನ್ನು ತಿಳಿಸುವ ಆಗಮಭಾಗ : ಚರ್ಯಾಪಾದವು ಆಚಾರಸಂಪ್ರದಾಯಗಳನ್ನೂ ವ್ರತನಿಯಮಗಳನ್ನೂ ಹೇಳುತ್ತದೆ (ಭಾಕರ. ೨೦೦).
[ ಸಂ. (ಚರ್ಯಾ + ಪಾದ) ]

**ಚರ್ಯಾಮಾರ್ಗ** (ನಾ). ೧. [ಶೈವ] ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ ಮತ್ತು ಜ್ಞಾನಮಾರ್ಗ ಎಂಬ ಮೋಕ್ಷ ಸಾಧನೆಯ ನಾಲ್ಕು ಮಾರ್ಗಗಳಲ್ಲಿ ಒಂದು : ಚರ್ಯಾಮಾರ್ಗ ಅಥವಾ ದಾಸಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಶಿವಭಕ್ತರ ಸೇವೆ ಮಾಡಿಕೊಂಡು . . . ಸಾಲೋಕ್ಯಪದವಿಯನ್ನು ಹೊಂದುವನು (ಭಾಕರ. ೨೦೬). ೨. [ಜೈನ] ಚರಿಗೆಗಾಗಿ ಹೋಗುವ ಉದ್ದೇಶ : ಚಂಪಾನಗರಕ್ಕೆ ಚರ್ಯಾಮಾರ್ಗದಿಂ ಬರುತ್ತಂ (ಸುಕುಮಾ. ೪-೩೩ ವ). [ ಸಂ. (ಚರ್ಯಾ + ಮಾರ್ಗ) ]

**ಚರ್ಯೆ** (ನಾ). ೧. ನಡೆ ; ನಡತೆ ; ವರ್ತನೆ : ಗುರು ಆಕೆಯ ಚರ್ಯೆಗೆ ವಶನಾಗಿ, ಆಕೆಗೆ ಧರ್ಮವನ್ನು ಉಪದೇಶ ಮಾಡಿದನು (ಹಚ್ಚಾಚ. ೧೮) ; ಹೆಂಡತಿಯಾದವಳಿಗೆ ಗಂಡನ ಚರ್ಯೆಯಲ್ಲಿ ಮರುಅಭಿಪ್ರಾಯವನ್ನು ಸೂಚಿಸುವ ಅಧಿಕಾರವಿದೆಯೇ? (ಕಾಪೀಠಿ. ೦೪೩). ೨. ಅಭಿವ್ಯಕ್ತಿ. 'ಮುಖಚರ್ಯೆ', ಪರಾ. ೩. [ಜೈನ] ಅಹಿಂಸೆಯ ಪ್ರತಿಜ್ಞೆ,-ಆಚರಣೆ: ಚರ್ಯೆಯೆಂಬುದು ದೇವತಾರ್ಥಮುಂ ಮಂತ್ರಸಿಧ್ಯರ್ಥಮುಂ ವೋಷಣಾರ್ಥಮುಂ ಆಹಾರಾರ್ಥಮುಂ ಭೋಗಾರ್ಥಮುಮಾಗೆ ಜೈನನಪ್ಪಾತಂ ಹಿಂಸೆಗೆಯ್ಯನಲ್ಲಂ (ಚಾವುಂಪು. ೨೪೬). [ ಸಂ. ಚರ್ಯಾ ]

**ಚರ್ವಣ** (ನಾ). ೧. ಅಗಿದು ತಿನ್ನುವುದು ; ನುರಿಸುವುದು : ಸಮ್ಮಾರ್ಜಿತೋಜ್ವಲದಶನನಿಚಯತಾಂಬೂಲಚರ್ವಣಭರಿತಕಪೋಲರುಂ ಗೋನಿಯೋಗ ದಂಡಧರರುಮಾಗಿ(ಜಗವಿ. ೪-೧೦ ವ). ೨. ಮನಸ್ಸಿನಲ್ಲಿ ಮೆಲುಕು ಹಾಕುವಿಕೆ; ಪುನಶ್ಚಿಂತನೆ: ಅನುಭವದ ಚರ್ವಣರೂಪದ ಪುನರನುಭವವೇ ಕಲಾಸೃಷ್ಟಿಗೆ ಕಾರಣವಾದ ಅನುಭವ (ಸೌಂದಮೀ. ೧೪). [ ಸಂ. ]

**ಚರ್ವಣೆ** (ನಾ). = ಚರ್ವಣ ೨ : ಅವುಗಳ ಚರ್ವಣೆಯಿಂದ ಆಸ್ವಾದ್ಯವಾದುದೇ ಅಲೌಕಿಕ ಕರುಣರಸ (ಧ್ವನ್ಯಾಲೋ. ೧೪ ಅಟಿ).
[ ಸಂ. ಚರ್ವಣ ]

**ಚರ್ವಿ** (ನಾ). (?) : ಉದಿಪುದು ಮಹಾಹವೆಂಬುರು ಭ್ರಾಂತಿ ದುರ್ಮಾರ್ಗಪದವಿಯಂ ಪಿಡಿದ ಚರ್ವಿಯು ಜನಿಸಿ ವೈಕರೂನ್ಯ ವಿಧಿಯೆನಿಪ ಕೃಷ್ಣಜಿಹ್ವೆಯು ಮನೋಭ್ರಮೆಯಿಂದ ಧಾವಿಸುತಮಿಸುತಿಹುದು (ಪಂಗಾರಾ. ೩-೨೦-೬೦). [ ? ]

**ಚರ್ವಿತ** (ಗು). ೧. ಅಗಿದು ನುರಿಸಿದ. ೨. ತಿಂದ ; ಉಂಡ ; ರುಚಿ ನೋಡಿದ. 'ಚರ್ವಿತಚರ್ವಣ' ಪರಾ. [ ಸಂ. ]

**ಚರ್ವಿತಚರ್ವಣ** (ನಾ). . ತಿಂದುದನ್ನೇ ಮತ್ತೆ ತಿನ್ನುವುದು ; ಅಗಿದುದನ್ನೇ ಮರಳಿ ಅಗಿಯುವುದು. ೨. (ಅಲಂ) ಮಾಡಿದಂದನ್ನೇ ಮಾಡುವಿಕೆ ; ವ್ಯರ್ಥವಾದ ಪುನರುಕ್ತಿ ; ತೌಡು ಕುಟ್ಟುವುದು : ನಿಚ್ಚ ಮಾ ಪಿಷ್ಟಪೇಷಣಮಾ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ ಮರುಳ್ಮಾಡಿತೋ (ಅವಿಶು. ೬-೬೪) ; ಭವಜಲರಾಶಿಯೊಳ್ ಮುಳುಗಲಟ್ಟಿಯ ಚರ್ವಿತಚರ್ವಣಕ್ಕೆ (ಅಹಿಶು. ೧೧-೫). [ಚರ್ವಿತ + ಚರ್ವಣ]

**ಚರ್ವಿಸು** (ಕ್ರಿ). ತಿನ್ನು; ಸೇವಿಸು: ಕೈಬಾಯಿಗಳ ತೊಳೆದು ತಾಂಬೂಲವಂ ಚರ್ವಿಸಿ (ನವಪೂ. ೧೧-೭೨). [ ಚರ್ವಣ + – ಇಸು$_3$ ]

**ಚರ್ವು** 'ಜರ್ವು$_1$' ನೋ.

**ಚಲ್$_1$** 'ಸಲ್$_1$' ನೋ.

**ಚಲ್$_2$** 'ಚಲ್ಲು$_1$' ನೋ.

**ಚಲ$_1$, ಚಳ$_1$, ಛಲ$_1$** (ನಾ). ೧. ಪಟ್ಟುಹಿಡಿಯುವುದಂ; ಹಿಡಿದುದನ್ನು ಬಿಡದೆ ನಡೆಸುವ ದೃಢಚಿತ್ತತೆ ; ಸ್ಥಿರಸಂಕಲ್ಪ ; ಮನೋನಿಶ್ಚಯ : ಕಂದರ್ಪಂ ಚಲದೆನ್ನೊಳ್ಳಿಂದಂ (ಶವಿಲಾ.೨-೮೨). ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೦೪-೬೪) ; ಕಿಡದ ಜಸಕ್ಕೆ ತಾನೆ ಗುಜುಯಾದ ಚಲಂ . . . ಆಳ್ದ ಚಲಂ ಚಲದಂಕರಾಹುನ(ಎಇ. II, ೦೩೩-೨೦ ; 982); ಚಲದಿಂ ಯದುಬಲವಾಂತಿಸೆ ಸಲೆ ಶರತತಿ ಖಚರರಪಘನೇಗಳನಾಗಳ್ ಗೆಲೆ . . . ನಭಶ್ಚರಸ್ಯನ್ಯಂ (ನೇಮಿಪು. ೬-೮೪). ೨. ಮೊಂಡುತನ; ಹಟಮಾರಿತನ: ಚಲದಿಂ ಕೃಷ್ಣೆಯ ಕೇಶವಂ ಪಿಡಿದ ನಿನ್ನಂ ದಾದಟ ಲ್ ನಿನ್ನುರಸ್ಥಲಮಂ ಪೋಟಿದೆ ಪೋಪುದಲ್ಲು (ಪಂಪಭಾ. ೦೨-೦೪೬). ೩. ಹಿಡಿತ ; ಬಿಗಿ : ಶ್ಲೇಷ್ಮದ ಚಲ ಕತ್ತರಿಸಿ ಬೀಳುವುದು (ಸಳಚ್ಯ. ೨೨೬). ಚಳ$_1$: ೧. ಪುಗೆ ನೃಪಸಂಕುಳಂ ಮನಸಿಜಗ್ರಹಮಾಗ್ರಹದಿಂದೆ ಪತ್ತಲಂದೊಗೆಯೆ ವಿಕಾರಚೇಷ್ಟೆ ಚಳವಂ ನುಡಿದು (ನೇಮಿಪು. ೯-೮೯). ಛಲ$_1$ : ೧. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ (ಬಸವ. ೬೭೬) ; ಛಲದಿಂ ಪೋರಿದರೆಲ್ಲರಂ ಗೆಲಿದು ಬಂದಾ ಪೆಣ್ಣ ಕೊಂಡೋದಿದಂ (ಸೋಮೇಶ. ೪೪): ಎಲವೆಲವೊ ಕಲಿಯಾಗು ಮಾರುತಿ ಗೆಲಿದನೆಂದಿರಬೇಡ . . . ಛಲವದುಳ್ಳಡೆ ಸಾಕು (ಕುವ್ಯಾದ್ರೋ. ೦೩-೫೨). 'ಛಲವಿಡಿ' ಪರಾ. ೪. ಹಟಗಾರ: ದೃಢಸಂಕಲ್ಪವುಳ್ಳವನು : ಮೂಜಗದೊಳ್ ಮೆಚ್ಚಿವ ಮಾನವದೇವಂ ಗೆಲಿದಂ ಅಸ(ಶ)ನ ಬೆಸನವ ಛಲರಧಿಕಂ ಹಾಲ ಬಸವಿದೇವಮುನೀಸಂ (ಎಇ. XXI, ೧೩-೩೪ ; 1260).

**ಚಲಚಲ** (ದ್ವಿರುಕ್ತಿ) : ಚಲಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್ (ಪಂಪಭಾ. ೧೦-೩೩). **ಚಲಕೆ ನಲ್ಲಾತಂ**=ದೃಢಸಂಕಲ್ಪದಲ್ಲಿ ಆಸಕ್ತಿಯುಳ್ಳವನು ; ಒಂದು ಬಿರುದು : ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವನ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಮಿರೆ (ಸೌಇಇ. IX-1, ೬೬-೨ : 956) ; ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವಂ (ಎಇ. IV, ೩೫೨-೨ ; 975). **ಚಲಕೆ ಮೊದಲಿಗಂ**=ದೃಢಸಂಕಲ್ಪವನ್ನು ಪಾಲಿಸುವವರಲ್ಲಿ ಮೊದಲಿಗನಾದವನು ; ಒಂದು ಬಿರುದು : ಅಸಹಿವಿದೂರನಾಳ್ದಾನಿ ವೀರಂ ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮರಟ್ಟಗಣ್ಡನಕಳಂಕ ಮಹೇಶ್ವರಂ (ಎಕ. XIV, ಕೃಷ್ಣರಾಜ. ೦೨೬-೪: ಹ. 900). **ಚಲಕ್ಕೆಬಲ್ಗಂಡಂ**=ದೃಢನಿಶ್ಚಯಕ್ಕೆ ತಕ್ಕ ಪರಾಕ್ರಮ ಉಳ್ಳವನಂ ; ಒಂದು ಬಿರುದಂ : ಉದಾರ ಮಹೇಶ್ವರಂ ಚಲಕ್ಕೆ ಬ[ಲ್ಗ]ಣ್ಡಂ ಶೌರ್ಯ್ಯಮಾರ್ತ್ತಣ್ಡಂ (ಸೌಇಇ. XI-1, ೦೦೩-೬ ; 1074). **ಚಲದಂಕ, ಛಲದಂಕ**=ಹಟವುಳ್ಳ ವೀರ ; ದೃಢನಿಶ್ಚಯವುಳ್ಳವನು : ಒಂದು ಬಿರುದಂ : ಚಲದಂಕ ಕಂಠೀರವ ನರಸೇಂದ್ರ ಭೂತಳವ ಪಾಲಿಸುತಿರಳ್ತಿಯಲಿ (ಕಂಪವಿ. ೯-೨) : ಗುಂಟಲಗಾಳಗತ್ತರಿ ಗರಗಸದ ಬಿರುದಾಳಿಗಳ ಛಲದಂಕ ರಾವುತರೊತ್ತಿ ನೂಕಿದರು (ಕುವ್ಯಾಭೀ. ೪-೫೬) : ಬಲಗೊಂಬೆನಧಿಕ ಪ್ರವೀಣನ ಬಾಣನ ಕಲೆಗಳಾಸಾರ ಮಯೂರನ ಸುಲಲಿತ ವಾಕ್ಯಭೂಷಣ ಕಾಳಿದಾಸನ ಛಲದಂಕನ ರಾಘವಾಂಕನ (ತ್ರಿಭುತಿ. ೨-೦೬). **ಚಲದಂಕಕಾಱ**=ಚಲದಂಕ:

ಪರಸೈನ್ಯವುಂ ಪೆಱಂಗೆಡೆಗುಡದಟ್ಟಿ ಕೊಲ್ವ ಚಲವನ್ನಾಳ್ದ ಚಲಂ ಚಲದಂಕ ಕಾಱನ (ಎಕ. II, ೦೪೪-೨೫ : 982). ಚಲದಂಕಮಲ್ಲ, ಛಲದಂಕಮಲ್ಲ= ೧. ದೃಢಚಿತ್ತದಿಂದ ಕಾದಾಡುವ ವೀರ ; ಒಂದು ಬಿರುದಂ : ಚಲ ದಂಕಮಲ್ಲನಾದ ಕಂಠೀರವನರಸರಾಜನು . . . ಪರಾಕ್ರಮದಿಂಡ ಕಾದಿದನು (ಕವೀರ. ೧೨೯) : ಚಲದಂಕಮಲ್ಲನೂ ಅಭಿಮಾನಧನನೂ ಎನಿಸಿದ ಸುಯೋಧನನು ಚಿಂತಾಕ್ರಾಂತನಾದನು (ಛಾಮಹ. ೪೦). ೨. ಹಟಗ್ಗಾರ್ರ : 'ಛಲದಂಕಮಲ್ಲರೂ, ಮಾನಧನರೂ' ಆಗಿ ವರ್ತಿಸುತ್ತಾರೆ (ಕಿಕ್ಷದ. ೮೦೫): ಚಲದಂಕರಾಮ=ರಾಮನಂತೆ ಸ್ಥಿರಸಂಕಲ್ಪದಿಂದ ಹೋರಾಡುವವನು; ಒಂದು ಬಿರುದಂ : ನರಸಂಕಭೀಮುಂ ಚಲದಂಕರಾಮಂ ಗಣ್ಡರ ಗಣ್ಡಂ (ಸೌಇ. XX, ೧೮-೯ ; 980) ; ಸನಿವಾರಸಿದ್ಧಿ ಗಿರಿದುರ್ಗಮಲ್ಲ ಚಲದಂಕರಾಮ (ಕಇಅ. ೬೯-೦೨-೦೪ : 1170) ; ಸೇದಿಂಬದ ವಿಪ್ರರೊಂದಳವನೇ ವೋಗಳ್ವಂ ಚಲದಂಕರಾಮರ (ಕಇಅ. ೯೭-೪-೩೨ ; 1೫ನೆಯ ಶ೬). ಚಲದ ವಿನಾಯಕ=ನಿರ್ಧಾರಕ್ಕೆ ಬರುವ ಅಡ್ಡಿಗಳನ್ನು ನಾಶಪಡಿಸಶಕ್ಯವನು ; ಒಂದು ಬಿರುದು : ಪುರುಷಕಾರದ ತಾಯ್ಗರು ಪೆಂಪಿನಾಗರೆ ಚಲದ ವಿನಾಯಕಂ ನೆಗಳ್ದ ಜಕ್ಕಣಂ (ಕಇ. I೯, ೦೦-೪೫ : 1121). ಚಲದುತ್ತರಂಗ= ಸ್ಥಿರಸಂಕಲ್ಪದಲ್ಲಿ ಮಿಗಿಲಾದವನು ; ಒಂದು ಬಿರುದು : ಪವೊಗಟ್ಟಿ ನೆವ್ವಱಿಯೆಂ ಚಲದುತ್ತರಂಗನಂ (ಎಕ. II, ೫೯-೮೬ : 974); ನನ್ನಗಿರಿನಾಥಂ ಚಲದುತ್ತರಂಗ ಜಗದೇಕವೀರ ನೊಳಂಬಕುಲಾಂತಕದೇವ (ಎಇ. VI, ೨೫೯-೨ ; 975). ಛಲದಾಳ=ಹಟಸ್ವಭಾವದವನು; ಚಲಗಾರ: ಕಲಿಯ ಕಾಲತೊಡರು ಛಲದಾಳಿಗ[ಪಾಠಾಂ. ಕಲಿತನಕ್ಕ]ಲ್ಲದೆ ಇಕ್ಕಬಾರದು (ಬಸವ. ೬೬೫).

ಚಲ$_2$, ಚಳ$_2$(ಗು). ೧. ಅಲುಗುವ; ನಡುಗುವ; ಚಂಚಲವಾದ; ಅಸ್ಥಿರವಾದ. ೨. ಚಲಿಸುವ ; ನಡೆಯುವ : ಸಾಗುವ . ಚಲ[ಪಾಠಾಂ. ಳ]ಕಲಹಂಸಸಾರಸರಥಾಂಗಮದಾಲಿನಿನಾದಕೈರವೋತ್ಪಲಶತಪತ್ರ . . . ಗಂಧಬಂಧುರಂ ಲಲಿತನ್ಯವಾಂಗನಾಲಕಚಯಂಗಳನಾಡಿವುದಾಯ್ತು (ಆದಿಪು. ೪-೯೫). ೩. ಕದಡಿದ; ಕ್ಷುಬ್ಧವಾದ; ಉದ್ರಿಕ್ತವಾದ. (ನಾ). ೪. ಚಂಚಲನಾದವನು: ಗಾಳಿಗೊಡ್ಡಿದ ದೀಪಾಂಕುರದಂತೆ ತನ್ನ ನಿಯ್ಯವಂ ಕಾಮಂ ಚಲಂ ಮಾಡಿದಂ (ಕಾದಂಪೂ. ೬೫೫). ೫. ಕ್ಷೋಭೆ ; ಉದ್ವೇಗ. ೬. ಗಾಳಿ; ವಾಯು. 'ಚಲಗತಿ' ಪರಾ. ೭. ವೇಗಶಾಲಿ. ೬, ೭: ಘನಕು ಘನನ ಚಲಕು ಚಲನ ನೋಡೆನ್ನಿನನ (ಹಂಸರ. ೬೬-೨೨). ಚಳ$_2$: ೧. ಚಳಚಮರರುಹಸಮಾಜಾನಿಳನಿಂದೊಗೆದೆಸೆವ ಚಾರು ಕರ್ಪೂರರಜೋವಳಿಯಿಂ . . . ಗೆಲೆವಂದುದೋಲಗಂ (ಶಾಂತೀಶ್ವ. ೨-೮೪). ೮. ಚಂಚಲವಾದುದಂ: ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ (ಮಲ್ಲಿಪು. ೩-೦೯).

ಚಳವಾಗು=ತಡವರಿಸು ; ಕ್ರಮತಪ್ಪು : ಅರಗೀಗಳ್ ನಿರ್ಮಳ(ಲ) ಮುನಿಸೋ(ರೋ)ದುವೋದಂ ಚಳವಾದೆಡೆಯುಱದು ಪೇದ್ವು(ಳ್ವು) ಪರುಳುಂ ಪಗಲುಂ (ಎಇ. XVI, ೩-೦೦ ; 980). [ ಸಂ. ]

ಚಲಂಕು, ಚಲಂಗಂ, ಚಲಕು, ಚಲಗಂ, ಚಲುಂಕು, ಚಲುಕು, ಚೆಲುಂಕಂ, ಚೆಲಂಗು, ಜಲಕು (ಕ್ರಿ). ೧. ಎರಚು ; ಚಿಮುಕಿಸು ; ಚೆಲ್ಲು: "ಚಲಕು, ಚಲಂಕು-ಕರವಿಮೋಚನೇ (ಕೈಯಿಂದ ಬಿಡಿಸಿಕೊಳ್ಳು)" (ಶಮಧಾ). ಚೆಲಂಗು: ೧. "ಚ[ಪಾಠಾಂ. ಚೆ]ಲಂಗು-ಕರಮುಕ್ತೌ (ಕೈಯಿಂದ ಬಿಡು)" (ಶಮಧಾ). ಚಲಕು: ೧. 'ಚಲಂಕು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ೨. ಬಿಸಾಡಂ; ಒಗೆ; ಬಿಸುಡು: (ಕ). ೩. ಕಲಕು: ಅಱಲ್ಗಳನುಱ ತಱದೊಲವಿಂ ತಱುಂಬುತ್ತೊಂಬತ್ತು ಗರದಿನೆಕ್ಕಸರಂಗೆಯ್ದೊಬಲ್ದು ತಳೆವುತ್ತೆ ನೆಱ, ಬಾಂದೊಱಯಂ ಚಲುಕುತ್ತೆ ತಳರ್ದರಭವಗಣಂಗಳ್ (ವೀರಪು. ೦೦-೩೦). ಚಲಗು: ೨. "ಚ[ಪಾಠಾಂ. ಬ]ಲಗೆ [ಪಾಠಾಂ. ಕೆ]ನೆ ಬಿಸುಡೆಂಬರ್ಥಂ" (ರನ್ನಕಂ. ೪). ಚಲುಂಕು : ೧. "ಚಲುಕು, ಚಲುಂಕು-ಜಲೋತ್ಸರ್ಜನೇ (ದ್ರವವನ್ನು ಚೆಲ್ಲು)" (ಶಮಧಾ) : ನಿತ್ಯಬಿಂದುಗೆ-ಬೆಡಂಗು . ? . ಚಲುಂಕಿದಂ, ಪಲುಂಬಿದಂ (ಶಮದ. ೩೬.ಪ್ರಯೋ) ; ಶೀತಳಾಂಬುವಂ ಮಾನಿನಿ ಪಾಣಿಪಲ್ಲವದಿನೆಲ್ಲರ ಮೇಲೆ ಚಲುಂಕಿಯಾಡಿದಳ್ (ವಳಜಂ. ೦೩೩). ಚಲುಕು : ೧. 'ಚಲುಕಾಡು' ಪರಾ. ಚೆಲಂಕು: ೧. "ಚೆ [ಪಾಠಾಂ. ಚ] ಲಂಕೆಂದು ಕರವಿಮೋಚನಂ" (ಶಶಸಾ. ೨೮-೫೯೯) . ೨. "ಚೆ(ಬೆ)ಲಂಕಿದಂ=ಈಡಾಡಿದಂ" (ಶಮದ. ಶಿ೦.೩). ಚೆಲಂಗು : ೧. 'ಚಲಂಗು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ಜಲಕು: ೧. "ಜಲಕೆಂದು ಕರವಿಮೋಚನ" (ಶವಿಕಂ. ೨೩೯). 'ಕಲಂಕಂ', 'ಚಲ್ಲು$_1$' ಪರಾ. [ ? ]

ಚಲಂಗು 'ಚಲಂಕು' ನೋ.

ಚಲಂಬಿಡಿ, ಚಲವಿಡಿ, ಛಲವಿಡಿ (ಕ್ರಿ) ಹಟಹಿಡಿ ; ದೃಢನಿಶ್ಚಯವನ್ನು ತೊಡು : ಕೆಲರ್ ನೆತ್ತರೊಳ್ ಮಿಂದಾ ತವುಗೆ ದೋಷಮಿಲ್ಲೆಂದದರ್ಕೆ ದಿವ್ಯಂ ಬಿಡಿವಂತೆ ಪಂಬಿಸಲ್ ಚಲ್ಲಂಬಿಡಿದು ನಿಂದಪಾಂತರ್ (ಶಾಂತಿಪು. ೯-೩೦ ವ); ಸ್ವಾಸೆಂದುಂ ಬಾಂಬರವ್ ಅಳದಿರ್ಕೆಂದು ಚಲಂಬಿಡಿದು ತಱ ಸಂದರರೆಬರ್ (ಬದ್ಮಪ್ರ. ೦೨-೨೪೬). ಚಲವಿಡಿ : ಚಲವಿಡಿದೀಗಳಿಂತುಟು ನೆಲಂಬಿಡಿದಿರ್ಪುದು (ಚಳವಿ. ೫-೪೩): ಸತ್ಯಕೀರ್ತಿಯು . . . ಚಲವಿಡಿದನು (ಶವಿಕ. ೬). ಛಲವಿಡಿ: ಛಲವಿಡಿದೊಂದನೆಳಸಿ ಬಾರಿವರಿಯದೆ ನೆಲೆವಿಡಿದೊಂದಱೋಳರದ್ (ಹರಿಲ. ೩-೩೬). [ ಚಲ$_1$ + ಪಿಡಿ$_1$ ]

ಚಲಕು 'ಚಲಂಕು' ನೋ.

ಚಲಗತಿ, ಚಳಗತಿ (ನಾ). ವೇಗವಾದ ಗತಿ ; ವಾಯುವೇಗ : ನಭೋಜಾನೆಯಲಿ ನಿನ್ನವನಳವಿಗೊಟ್ಟನೇ ಭೀಮಸೇನನ ಚಲಗತಿಯು ಚಾತುರ ಚಪೇಟಪದಪ್ರಹಾರದಲಿ (ಕುವ್ಯಾಗ. ೪-೨೩). ಚಳಗತಿ : ಚಳಗತಿಯ ವಾಜಿಗಳು ಕೊಂಡೊಯ್ದುಳುಹಿದವು ತಮಸೆಯಲಿ (ತೊರರಾ. ೨-೪-೮). [ಚಲ$_2$+ಗತಿ]

ಚಲಗಾರ, ಛಲಗಾರ (ನಾ). ಹಟಗಾರ; ಚಲವುಳ್ಳವನು (ಕ). ಛಲಗಾರ. 'ಛಲಗಾರ್ತಿ' ಪರಾ. [ ಚಲ$_1$ + -ಗಾರ (< -ಕಾಱ) ]

ಚಲಗು 'ಚಲಂಕು' ನೋ.

ಚಲಚಲಿಸು (ಕ್ರಿ). ಚಂಚಲವಾಗು; ಗಾಬರಿಹೊಂದು: ಅವಳ ಕಣ್ಣುಗಳು ಚಲಚಲಿಸುತ್ತಿದ್ದುವು (ಭೂರಾಜ. ೪೬೫). [ <ಚಲ$_2$ + - ಇಸು$_2$ ]

ಚಲಚಿತ್ತ, ಚಳಚಿತ್ತ (ನಾ). ೧. ಚಂಚಲವಾದ ಮನಸ್ಸು. ೨. ಚಂಚಲವಾದ ಮನಸ್ಸುಳ್ಳವನು : ಅಸ್ಥಿರಬುದ್ಧಿಯವನು : ಮತ್ತನತಿಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು ಚಲಚಿತ್ತನತಿಕಾಮುಕನು . . . ಇಂತೀ ಹತ್ತುಜನವಾವಾಗ ಧರ್ಮದ ತತ್ತ್ವವನುಗಳನಱಯರ್ಕೈ (ಕುವ್ಯಾಉ. ೩-೬೬): ನೆತ್ತಿಮುಸುಕಿನ ಕೈಯು ಗಲ್ಲದ ಕುತ್ತದಲಿ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾದಿ ದುಗುಡದಲಿ (ಕುವ್ಯಾಭೀ. ೪-೮). ಚಳಚಿತ್ತ : ೨. ಚಳಚಿತ್ತರ್ಗೆ ಬಿಂಕದ ಕದಂ ಸತ್ಯಹೀನರ್ಗೆ ಸೋಂಕದ ಕದಂ (ನಂದಿರ. ೧೬-೬೫) : ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿಮದಾಂಧಂ (ಶಬಶಂ: ೫-೦೮). [ ಚಲ$_2$ + ಚಿತ್ತ ]

ಚಲಚಿತ್ರ (ನಾ). ಚಲನಚಿತ್ರ; ಸಿನೇಮ: ಇಂದಿಗೂ ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಧಾರರ. ೫೩೫). [ ಚಲ$_2$ + ಚಿತ್ರ ]

ಚಲತನ (ನಾ). ಚಂಡಿತನ ; ಮೊಂಡುತನ ; ಹಟಮಾರಿತನ : ಎಲೆಗೆ ನಿನ್ನೊಡನೆ ನಾನೇಂ ಹರಿಯ ಹೋರುವಂ ಚಲ[ಪಾಠಾಂ. ಛಲಿ]ತನಕಲಸಿದೆನಾಂ (ಜೈಮಿಧಾ. ೦೦-೩೦). [ ಚಲ$_1$ + -ತನ ]

ಚಲತ್ವ (ನಾ). ೧. ಚಂಚಲತೆ ; ಅಸ್ಥಿರತೆ. ೨. ನಡುಗುವಿಕೆ ; ಕಂಪನ. [ ಸಂ. ]

**ಚಲದಲ, ಚಲದಳ, ಚಳದಳ** (ನಾ). ಅಲುಗಾಡುತ್ತಲೆ ಇರುವ ಎಲೆಗಳನ್ನುಳ್ಳುದು ; ಅ ರ ಳಿ ಮ ರ : ಅಶ್ವತ್ಥ. **ಚಲದಳ** : "ಚಲದಳ ಮಶ್ವತ್ಥಂ" (ಮಲ್ಲಿ ಶೋ. ೩೩-೪). **ಚಳದಳ** : "ಚಳದಳಂ ಒಪ್ಪೆಲಂ ಬೋಧಿಯಶ್ವತ್ಥಮೆನಲರಳಿಯುಕ್ಕುಂ" (ಮಂಗರಾ: ೩೪-೧೦೨).
[ ಚಲ₂ + ದಲ ]

**ಚಲದಳ** 'ಚಲದಲ' ನೋ.

**ಚಲದಿ** 'ಶಲದಿ₂' ನೋ.

**ಚಲನ, ಚಳನ** (ನಾ). ೧. ಸರಿದಾಡುವಿಕೆ ; ಸಂಚಾರ ; ಗಮನ ; ಗತಿ ; ನಡೆ. ೨. ಅಲುಗಾಟ ; ನಡುಕ ; ಕಂಪನ. ೩. ಅಡಿ ; ಚರಣ ; ಪಾದ : ಕೇಳೀವನಸ್ಥಾನದೊಳ್ ಚಲನನ್ಯಾಸವಿಲಾಸವಂ ಮೆಚ್ಚಿದು (ಕಬಾಮಹಾ. ೯-೯೦). ೪. ಗಾಳಿ ; ವಾಯು. 'ಚಲನಭವ' ಪರಾ. ೫. [ನಾಟ್ಯ] ಕಣ್ಣಿನ ಒಂಬತ್ತು ಭಾವವಿನ್ಯಾಸಗಳಲ್ಲಿ ಒಂದು : ಭ್ರಮಣ . . . ಚಲನ . . . ಪ್ರಾಕೃತ ಈ ಒಂಬತ್ತು [ಸ್ವನಿಷ್ಟ] ಅಲಿಯ ಭೇದಂಗಳ್ (ಲಾಸ್ಯರಂ. ೩-೩೪ ವ). **ಚಳನ** : ೩. ಅದನಾಳ್ವನೆವನತಾರಾತಿ ನೃಪವಮಣಿಮಯಕಿರೀಟಪ್ರಭಾಲೀಢಚಳನನಳಿನಯುಗ್ಮಂ (ಸು ಕು ಮಾ. ೦-೭೪ ವ) ; ಶ್ರುತಕೀರ್ತಿವಳಿಗಳ ಚಳನಂ ನೆಮುಗುಳಸುಖಮನೀಗನವರತಂ (ಚಂದ್ರಪ್ರ. ೦-೦೩) : ಚಳನನಿತಂಬಬಿಂಬಕುಚಕರ್ಣಾಕಪೋಲಲಲಾಟದೇಶದೊಳ್ ತೊಳಗಿ (ಪುಷ್ಪ ಪು. ೮-೦೦೦). [ ಸಂ. ]

**ಚಲನಕ** (ನಾ). ಅರ್ಧದವರೆಗೆ ತೊಡೆ ಮುಚ್ಚುವ ಹೆಂಗಸರ ಒಳ ಉಡುಪು ; ಅರ್ಧೋರುಕ ; ಚಂಡಾತಕ. [ ಸಂ. ]

**ಚಲನಚಿತ್ರ** (ನಾ). = ಚಲಚಿತ್ರ : ಚಲನಚಿತ್ರದ ಪಟವು ಸುರುಳಿ ಬಿಚ್ಚಿದ ಹಾಗೆ (ಇಂಚಾಪ. ೩೦-೪೦). [ ಚಲನ + ಚಿತ್ರ ]

**ಚಲನಭವ** (ನಾ). ವಾಯುವಿನ ಮಗ ; ಭೀಮಸೇನ : ದುಶ್ಶಾಸ ಚಲನಭವನಂ ಕೆಣಕುತ (ತುರಂಗ. ೬೨-೭). [ ಚಲನ + ಭವ ]

**ಚಲನವಲನ** (ನಾ). ೧. ಸಂಚಾರ ; ಗತಿ : ಭೂಮಿಯ ಚಲನವಲನಗಳು ನಿಂತುಹೋದುವು (ಕಾಂಕರಾ. ೨೩೮). ೨. ಹೋಗುವಿಕೆ, ಬರುವಿಕೆ, ಮಾತಾಡುವಿಕೆ ಮುಂತಾದ ಕ್ರಿಯೆಗಳು ; ಚಟುವಟಿಕೆ ; ಸುಧಾಕರನು ಗುಪ್ತಚಾರನಾಗಿ ಮಾರುವೇಷದಿಂದ ನಮ್ಮ ಚಲನವಲನಗಳನ್ನು ಪತ್ತೆ ಹಚ್ಚಲು ಈಗಾಗಲೇ ತಿರುಗಾಡುತ್ತಿರುವನು (ದೇಶಭ. ೯೪) ; ಅವರ ಚಲನವಲನಗಳಲ್ಲಿ ವ್ಯತ್ಯಾಸವೇನಾದರೂ ಇತ್ತೇ? (ಜೀವಾತ್ಮ. ೨೫೦).
[ ಚಲನ + ವಲನ ]

**ಚಲನಶಕ್ತಿ** (ನಾ). ೧. ಚಲಿಸುವ ಶಕ್ತಿ ; ಸಂಚರಿಸುವ ಸಾಮರ್ಥ್ಯ : ವಾಯುವಿನಲ್ಲಿ ಚಲನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ ಸ್ವಾಭಾವಿಕವಾಗಿ ನೆಲಸಿರುವುದನ್ನು . . . ಕಾಣಬಹುದಾಗಿದೆ (ಕಕ್ಕಿವಿ. ೩೦). ೨. ಚಲನೆಯಲ್ಲಿರುವ ಶಕ್ತಿ ; ಕಾರ್ಯಮಾಡುತ್ತ ಇರುವ ಶಕ್ತಿ : "ಚಾಲನಶೀಲಶಕ್ತಿ, ಚಲನಶಕ್ತಿ" (Energy, Kinetic. ಪಾರಿಸಿ. ೩೭). ೩. [ವಿಜ್ಞಾ] "ಒಂದು ಕಾಯವನ್ನು ಚಲನಗೊಳಿಸುವ, ಅಳೆಯಲಾಗುವ, ಒಂದು ಪ್ರಭಾವ ; ಬಲ. (ಹಿಂದೆ) ಚಲನಶಕ್ತಿ" (Force. ಇಂಕನಿ). [ ಚಲನ + ಶಕ್ತಿ ]

**ಚಲನಸಂಭವ** (ನಾ). ೧. ವಾಯುವಿನ ಮಗ ; ಆಂಜನೇಯ ; ಮಾರುತಿ : ಆ ಚಲನಸಂಭವ ನಿದ್ದೆಯಿಂದೆಚ್ಚತಿಸಿ ಘರ್ಜಿಸಿದ (ಕೌಶಿರಾ. ೨೯-೨೪). ೨. ಭೀಮಸೇನ : ಚಲನಸಂಭವನೊರ್ವ ಕಾನಾಳ ಮೇಲಿದಿರಾದ ನೆಂಬುದಿದು ಮಿಥ್ಯೆ (ತುರಂಗ. ೬೪-೦೩). [ ಚಲನ + ಸಂಭವ ]

**ಚಲನಸಖ** (ನಾ). ವಾಯುವಿನ ಮಿತ್ರ ; ಅಗ್ನಿ : ಚಲನಸಖ ಸಾಕ್ಷಿಕದಲಾ ಕುಂಡಲೆ ಕುಶೇಶಯಲೋಚನೆಯನಿತ್ರಳು ಕುಬೇರಪ್ರಭಗೆ (ನಿ ಭಾ ಗ. ೯-೦೩-೩೮). [ ಚಲನ + ಸಖ ]

**ಚಲನಸುತ** (ನಾ). = ಚಲನಭವ ೨ : ಕೊಳುಗುಳದ ಜಯಲಕ್ಷ್ಮಿಗಾಯಿತು ಚಲನಸುತನಲಿ ಮದುವೆ (ಕುಮ್ಮಾ ಕ. ೧೯-೮೭). [ ಚಲನ + ಸುತ ]

**ಚಲನಾಂಗ** (ನಾ). ಚಲನಕ್ಕೆ ಸಾಧನವಾದ ಅಂಗ, ಅವಯವ : ಹೀಗೆ ಚಲನಾಂಗಗಳೆಲ್ಲ ಎದೆಗೆ ಸೇರಿವೆ (ಕೀಟಜ. ೦೮). [ ಚಲನ + ಅಂಗ₂ ]

**ಚಲನಿ** (ನಾ). = ಚಲನಕ. [ ಸಂ. ಚಲನೀ ]

**ಚಲನೆ** (ನಾ). = ಚಲನ ೨ : ಈ ಪರಿವರ್ತನೆ ಸುಲಭವಾಗಿ ಕಣ್ಣಿಗೆ ಕಾಣಿಸುವುದಿಲ್ಲ, ಗಡಿಯಾರದಲ್ಲಿ ಗಂಟೆಯ ಮುಳ್ಳಿನ ಚಲನೆಯಂತೆ (ದ್ರಾವಿ. ೩೨೪). [ ಸಂ. ಚಲನ ]

**ಚಲನೆಗೈ** (ಕ್ರಿ). ಚಲಿಸುವಂತೆ ಮಾಡು ; ಚಂಚಲಗೊಳಿಸು : ನಿನ್ನ ಪತಿ ತಪೋನೈಷ್ಠ್ಯದಿಂದಾನಿರಲು ತತ್ತಪೋ [ ವವ ] ಚಲನಗೈಯಲು ಕೋಪದಿಂ ನೋಡೆ ದಹನವಾದಾ (ಪವಚೋ. ೭-೯೩). [ಚಲನೆ + ಗೈ (<ಕೆಯ್₁)]

**ಚಲಪತ್ರ** (ನಾ). = ಚಲದಲ : ಪಲಸು ನೇರಿಲು ಚೂತ ಪಿಚುಮಂದ ನ್ಯಗ್ರೋಧ ಚಲಪತ್ರ ಬಿಲ್ವಾಮಲಕ . . . ಸಾಲುಮರಗಳೊಪ್ಪಿದುವು (ಶೋಚಕ. ೨-೩೪). [ ಚಲ₂ + ಪತ್ರ ]

**ಚಲಪದ** (ನಾ). ಹಟದ ಸ್ಥಿತಿ ; ಮೊಂಡುತನದ ರೀತಿ : ನೀತಿಮಾರ್ಗದಿ ತಿಳುಹಿ ಪಾರ್ಥನ ಗಯನ ಕಳುಹೆನೆ ಚಲಪದದಿ ಕೊಡೆನೆನಲು ಮರಳಿ ಸುಭದ್ರೆ ಗಮಿಸಿದಳು (ಕೋಗಯು. ೦೫ ಸಂಧಿ). [ ಚಲ₁ + ಪದ₂ ]

**ಚಲಪಿಲ್ಲಿ** (ನಾ). ಒಂದು ಬಗೆಯ ಪಿಲ್ಲಿ : ಕಾಲ್‌ಪಿಲ್ಲಿ ಚಲಪಿಲ್ಲಿ ಕೈ ಬಳೆಯ ದನಿಯಲ್ಲಿ . . . ಬಾ (ಬಣ್ಣದ. ೦೨ ೦೭). [ ಚಲ₂ + ಪಿಲ್ಲಿ₁ ]

**ಚಲಪ್ರತಿಮೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಪ್ರತಿಮೆ ; ಉತ್ಸವಮೂರ್ತಿ : "ಚಲ" ಪ್ರತಿಮೆಗಳು . . . ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು (ಭಾರದ. ೫೧೨). [ ಚಲ₂ + ಪ್ರತಿಮೆ ]

**ಚಲಬಂಡವಾಳ** (ನಾ). ಸ್ಥಿರವಾಗಿರದ ಬಂಡವಾಳ ; ಚಲನೆಯಲ್ಲಿರುವ ಬಂಡವಾಳ : 'ಚಲಬಂಡವಾಳ' ಎಂದರೆ ಶ್ರಮಶಕ್ತಿಯ ಮೇಲೆ ಕೂಲಿ ಸಂಬಳಗಳ ರೂಪದಲ್ಲಿ ವೆಚ್ಚಮಾಡಿದ ಬಂಡವಾಳ (ಮಾವಾದ. ೦೨೨). 'ಚರಬಂಡವಲ' ಪರಾ. [ ಚಲ₂ + ಬಂಡವಾಳ (<ಬಂಡವಲ) ]

**ಚಲಬ್ಬೆ** (ನಾ). ಒಬ್ಬಾಕೆಯ ಹೆಸರು : ಸ್ವಸ್ತಿಶ್ರೀ (ಶ್ರೀ)ಬಿಜ್ಜೇಶ್ವರದ ಸೂಳೆ ಚಲಬ್ಬೆ (ಇಕ. ೫, ೦೭೦-೦, ೧ನೆಯ ಕಟ). [ ? + ಅಬ್ಬೆ₁ ]

**ಚಲಮಲ** (ನಾ). ೧. ಹೊಳಪು ; ಚಕಚಕ ; ಮಿನುಗುಟ್ಟುವಿಕೆ : ಚಕಚಕ ಚಂಚಲ ಮಿಂಚಿನ ಗೊಂಚಲ ಚಲಮಲ (ಗರಿ. ೦೨೩-೦೨). ೨. ಚಂಚಲತೆ ; ಕಂಪನ. 'ಚಲಮಲಿಸು' ಪರಾ. [ ? ]

**ಚಲಮಲಿಸು** (ಕ್ರಿ). ನಡುಗು ; ಚಡಪಡಿಸು : ನಾನು ಹೆದರಿದ ಮೊಲ ಚಲಮಲಿಸುವ ಹಾಗೆ ಮಾಡಿ ಉದ್ಗರಿಸಿದೆನು (ಇಕ್ಕಳ. ೦೦೪).
[ ಚಲಮಲ + – ಇಸು₃ ]

**ಚಲಮಚ್ಚು** (ಕ್ರಿ). ಚಲವನ್ನು ತಿಳಿ ; ದೃಢನಿಶ್ಚಯವನ್ನು ಅರಿತುಕೊಳ್ಳು : ಬಲ್ಪಡೆ ಸು(ಶೂ)ದ್ರಕನ . . . ಮುತ್ತಿ ಆಣಿಯೆಂ ಕದಿಪೊಂಗಂ ಚಲಮಚ್ಚುಪೊಂಗಂ ಅಟ್ಟಿಪೊಂಗಂ ಕುಡಲ್ವಿಪ್ಪೊಂಗಂ ಬರ್ಬ್ಬರನೋ ಅಚಾರ್ಜ್ಜುನ್ (ಎಕ. XXIV, ೯೩-೮ ; 895). [ ಚಲ₁ + ಅಚ್ಚು ]

**ಚಲಮೂರ್ತಿ** (ನಾ). = ಚಲಪ್ರತಿಮೆ : ಚಲಮೂರ್ತಿಗಾಗಿ ಅರ್ಧಮಂಡಪವನ್ನು ಸೇರಿಸಲಾಯಿತು (ಹೊಯ್ಸಳವಾ. ೧೮). [ ಚಲ₂ + ಮೂರ್ತಿ ]

**ಚಲಮೆ** 'ಚಲುಮೆ₁' ನೋ.

**ಚಲವಾದಿ₁, ಛಲವಾದಿ** (ನಾ). ಚಲವನ್ನು ಹಿಡಿದವನು ; ದೃಢಸಂಕಲ್ಪವುಳ್ಳವನು ; ಛಲಿ : ಕಡುಚಾಗಿ, ಚಲವಾದಿ (ಕಮದ. ೦೬೫ ಪ್ರಯೋ) : ಚಲವಾದಿಯ ಸಂಗಡ ಹಟವಾದಿ ಸೇರಿದ ಹಾಗೆ (ಗಾದೆ). **ಛಲವಾದಿ** : ಛಳಿಗಂಡವೋಲು ಮೂರ್ಧಗ್ಗೈಸಿ ಪಥಿಸಿದತಿ ಛಲವಾದಿ ಧಂದವಿಡೆನ್ನ (ಕಕಸಾಂ. ೩೯-೯೯). [ ಚಲವಾದ₂ + – ಇ₃ ]

**ಚಲವಾದಿ₂** (ನಾ). ಮಾದಿಗರಲ್ಲಿ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು; ಕುಳವಾಡಿ: ಸುಂಕ ತಳವಾರ ಆನುವು ಮಗವು ಚಲವಾದಿ ಸಂಗಡಿ ಮಂತಗಾಜರಿಗೂ ಇದೇ ಭಾವೆ (ಸೌಇ೬. IX-II, ೩೩೨-೨೦; 1530) ; ಜೊತೆಗೆ ನಾಲ್ಕು ಜನ ಚಲವಾದಿಗಳು ಒಬ್ಬರಾದ ಮೇಲೆ ಒಬ್ಬರು ತಮ್ಮ ಕೊಂಬುಗಳನ್ನು ಊದಿದರು (ಚಿಕಿದಾ. ೩೯೩).

[ದೇ.೩ ತಮಿ. ಚಲವಾತಿ ; ತೆಲು. ಚಲವಾದಿ ]

**ಚಲವಾದಿಘಂಟೆ** (ನಾ). ಚಲವಾದಿಯು ಹೆಗಲ ಮೇಲೆ ಹೊತ್ತುಕೊಂಡು ಬಾರಿಸುತ್ತಾ ಹೋಗುವ ಗಂಟೆ : ಮಾಯಾಮುರತಾವು, ಪಂಚನಿಶಾನಿ, ಡವಣೆ, ಅರಲಿವಸ್ತ್ರ, ಚಲವಾದಿಘಂಟೆ (ಗುರುಚ. ೦೦). [ಚಲವಾದಿ₂+ಘಂಟೆ]

**ಚಲವಿಡಿ** 'ಚಲಂಬಿಡಿ' ನೋ.

**ಚಲವಿತ್ತ** (ನಾ). ೧. ಅಸ್ಥಿರವಾದ ಸಂಪತ್ತು. ೨. ಸಂಪತ್ತು ಸ್ಥಿರವಾಗಿಲ್ಲದವನು : ಚಲವಿ[ಪಾಠಾಂ. ಚಿ]ತ್ತಂ ಬಲಹೀನಜಾನು ಚಪಲಂ . . . ಮೇಷಜಂ (ಜಾತಕಿ. ೦೭-೦). [ಚಲ₁ + ವಿತ್ತ ]

**ಚಲವೀಣೆ** (ನಾ). ಒಂದು ಬಗೆಯ ವೀಣೆ : ಧ್ರುವವೀಣೆ, ಚಲವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೩೩೯). [ಚಲ?+ವೀಣೆ]

**ಚಲವು** 'ಶಲವು' ನೋ.

**ಚಲಾಂಡ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಟೀವಂ ಚಲಾಂಡ ಮೆನಿಸಿಕ್ಕು" (ಮಂಗರಾ. ೩೨-೦೧). [ ? ]

**ಚಲಾಕಿ** 'ಚಾಲಾಕಿ' ನೋ.

**ಚಲಾಕು** 'ಚಾಲಾಕು' ನೋ.

**ಚಲಾಯಿಸು, ಚಲಾಯ್ಸು** (ಕ್ರಿ). ೧. ನಡೆಸು; ಬಳಸು; ಉಪಯೋಗಿಸು: ಕಾನೂನು ಮೀರಿಗೆ ತಮಗೆ ಅಧಿಕಾರವಿಲ್ಲದಿದ್ದರೂ ಅಧಿಕಾರವನ್ನು ಚಲಾಯಿಸಿದ್ದಾರೆ (ಗ್ರಾಮೂಳ್‍೯೩) ; ಎಂಥ ನಿರಂಕುಶನಾದ ರಾಜನಾದರೂ ಅವನು ತನ್ನ ಗುಣಕ್ಕನುಸಾರವಾಗಿ ತನ್ನ ಸ್ವಾಮಿತ್ವವನ್ನು ಚಲಾಯಿಸುವನು (ಧಾಕ್ಕಾಂಗ. ೩೦) ; ಯಾವಯಾವದೋ ಸಿನಿಮಾ ಹಾಡುಗಳನ್ನು ಅವರು ಚಲಾಯಿಸುತ್ತಿದ್ದರು (ಮೂಗಾಸ. ೦೨೩). ೨. ಚಲಿಸುವಂತೆ ಮಾಡು; ತಿರುಗಿಸು: ಈಗ ಮೊದಲಿಗಿಂತ ಹೆಚ್ಚಿಗೆ ಚರಖಾ ಚಲಾಯಿಸುತ್ತಲೂ ಇದ್ದೇನೆ (ಕಲಿಳ. ೭೦). **ಚಲಾಯ್ಸು** : ೧. ವುಡಾನ್ನು ಯಂಬ ಹೆಸರಿನ ವಂಟ ಕುದುರೆ ಚಲಾಯ್ಸಿ ಅವರನ್ನ ಹೊಡೆಯುತ್ತಿದ್ದಳ್ಲಿ (ಕೈದಿರ. ೩೦). [ಚಲಾಯ್₂ (P ←ಹಿಂ. ಚಲಾನಾ) + – ಇಸು₂ ]

**ಚಲಾಯ್ಸು** 'ಚಲಾಯಿಸು' ನೋ.

**ಚಲಾವಣೆ** (ನಾ). ೧. ನಡೆಸುವಿಕೆ; ಬಳಕೆ;(ನಾಣ್ಯಗಳಂತೆ)ವಿನಿಮಯದ ವ್ಯವಹಾರದಲ್ಲಿರುವಿಕೆ: ಮಹಿವಾಟು : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಧಾಧಾನ. ೨೮೦): ಈಗ ಚಿನ್ನ ಯಾವ ರೀತಿ ನಿರ್ದಿಷ್ಟ ಚಲಾವಣೆ ಮೌಲ್ಯ ಹೊಂದಿದೆಯೋ ಹಾಗೆ ತಂಬಾಕು ನಾಣ್ಯವಾಗಿದ್ದಿತು (ಕಸಬು. ೩೬) ; ಪದಗಳು ಜನಮನದ ಟಂಕಸಾಲೆಯಲ್ಲಿ . . . ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಸೌಂದಸ. ೯೨). ೨. ಸಾಗಾಟ ; ಸಾಗಾಣಿಕೆ: ಒಂದೆರಡು ಪರ್ಮಿಟು ಮಾಡಿಸಿ ಪ್ಯಾಲು ಚಲಾವಣೆ ಮಾಡದಿದ್ದರೆ ನಮ್ಮ ರಥ ಸಾಗಲಾರದು (ದೇಶಭು. ೩೯). [ ← ಚಲಿಸುವಂತೆ ಮಾಡು, ಹಿಂ. ಚಲಾವನಾ=ಮರಾ. ಚಲನೀ= ಚಲಾವಣೆಯಲ್ಲಿರುವ ]

**ಚಲಿ₁** 'ಚಿಲ್ಲ₁' ನೋ.

**ಚಲಿ₂, ಛಲಿ** (ನಾ). ಛಲವುಳ್ಳವನು; ದೃಢಸಂಕಲ್ಪವುಳ್ಳವನು: ಅಮುಮ ದಂಡಾಧಿಪ ಕಿರೀಟಪದನೊಪ್ಪಿದಂ ಅಮುಮ ಚಲಿ [ಪಾಠಾಂ. ಛಲಿ]ನಾಯಕರ ದೇವನಿಂತೊಪ್ಪಿದಂ (ಬಶಾ. ೯-೨೦೦). **ಛಲಿ**: ಭಕ್ತಿಯ ಬಲಿಯು ವಿರಕ್ತಿಯ ಛಲಿಯ ಸಮ್ಯಕ್ತ್ರಿಯ ನೆಲೆಯಭ್ರಾರ್ಣವಕೆ ಭೈತ್ರ . . . ಗೌರನ ನವ್ಯ ಕಾವ್ಯ (ಪಜೀರಪು ೩-೨). [ಚಲ₁ + – ಇ₃ ]

**ಚಲಿ₃** (ನಾ). ಒಂದು ಬಗೆಯ ಮರ; ಚಿನ್ನಂಗಿ: "ಚಿನ್ನಂಗಿ ಚಲಿಯಕ್ಕು" (ಮಂಗರಾ. ೩೭-೦೦). [ ? ]

**ಚಲಿಂದಲ** 'ಚಲಿವಿಂದರ' ನೋ.

**ಚಲಿಕಿಸು** (ಕ್ರಿ) .ಕತ್ತರಿಸು; ತುಂಡರಿಸು: ಈಗ ಚಲಿಕಿಸಿ ಶಿರವನು ಕ್ರೂರದಿ ಕೊಂದಾನೆ (ಹರುಕ. ೦೯೦) : ಸತಿಶಿರಮಂ ಚಲಿಕಿಸು ಖಡ್ಗದಿಂ ತಡೆಯದೆ (ಹರುಕ. ೨೦೦). [ ? + – ಇಸು₂ ]

**ಚಲಿಕ್ಕ** 'ಚಳುಕ್ಕ' ನೋ.

**ಚಲಿತ, ಚಳಿತ₁** (ಗು). ೧.ಹೆಜ್ಜೆಯಿಟ್ಟ ; ಹೊರಟುಹೋದ ; ಮುಂದೆ ಹೋದ. ೨. ಕದಲಿಸಿದ ; ಕದಡಿದ ; ಸಂಚಲಗೊಳಿಸಿದ. ೩. ನಡುಗುವ ; ಕಂಪಿಸುವ. ೪. ಅಲುಗಾಡುವ ; ಚಲಿಸುವ : ಚಲಿತ ಭ್ರೂಚಾಪದಂಡಂ ನಿಶಿತಕರಜಹೇತಿಕ್ಷತಂ (೦೯ ಛಾ ಪ. ೦೩-೩೦). (ನಾ). ೫. ಚಂಚಲವಾದುದು ; ಚಪಲವಾದುದು : ಪದ್ಮ ಪತ್ರದ ಜಲ ಬಿಂದುವಿನಂತೆ ಚಲಿತಮಾದುದು ಚಿತ್ತಂ (ಶಂಖಾಮು. ೯-೭೬). **ಚಳಿತ₁** : ೧. ಪ್ರಥಮಚಳಿತದಕ್ಷಿಣಚರಣನಾಗಿ ನಿಜನಿವಾಸದಿಂ ಪೂ ಅ ಮ ಟ್ಟು (ಶಂಪಥಾ. ೯-೦೨ ಪ). [ಸಂ. ]

**ಚಲಿಮಿಲಿಸು** (ಕ್ರಿ). ಹಾತೊರೆ ; ಆತುರಪಡು ; ಉತ್ಕಂಠಪಡಾಗು : ಚಲಿಮಿಲಿಸುತಿಪ ಧಾತು ಪಂಚಭೂತಾಹುತಿಗೆ ಛಲ ಪ್ಪಾದ ಪ್ರತಕೆ (ಜಿಪಖು. ೯೬-೦೯). 'ಚಲಮಲಿಸು' ಪರಾ. [ ? + – ಇಸು₂ ]

**ಚಲಿಯಿಸು** 'ಚಲಿಸು' ನೋ.

**ಚಲಿವಿಂದರ, ಚಲಿಂದಲ**(ನಾ). ಪ್ರಯಾಣಿಕರ ಉಪಯೋಗಕ್ಕಾಗಿ ರಸ್ತೆಗಳ ಪಕ್ಕಗಳಲ್ಲಿ ನಿರ್ಮಿಸಿದ ನೀರಿನ ಆಶ್ರಯ ; ಅರವಟ್ಟಿಗೆ : (+). **ಚಲಿಂದಲ** : (ಎಪಿಮ್ಮ. XV, ೯೩).

'[←ತೆಲು. ಚಲಿವಿಂದಲ, ಚಲಿಪಂದಿರಿ, ಚಲಿವಂದ್ರಿ, ಚಲಿಪಂದ, ಚಲಿವೇಂದರ, ಚಲಿವೇಂದಲ, ಚಲಿವೇಂದ್ರ ]

**ಚಲಿಸು, ಚಲಿಯಿಸು, ಚಳಯಿಸು, ಚಳಿಯಿಸು, ಚಳಿಸು₁** (ಕ್ರಿ). ೧. ನಡೆ ; ನಡೆದಾಡು ; ಓಡಾಡು : ಮಹಾಪ್ರಧಾನರ ನಡುವ ಚಲಿಸುವ ಚಾತುರಂಗದ ಸುಳಿಯ ಸಂದಣಿಯ (ಕುಮಾ.ಕ. ೮-೨೦) ; ತಂಡತಂಡದೆ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಕೋಹಕ. ೩-೭೦): ಅಲ್ಲಿನ ವಿದ್ವಾಂಸರು ಚಲಿಸುವ ಪುಸ್ತಕಭಂಡಾರಗಳು (ಕಂಗಾಳ. ೪). ೨. ಅಲುಗಾಡು ; ಹೊಯ್ದಾಡು : ಅತ್ತಿತ್ತ ಚಲಿಸದಚಲಂ ನಡೆದು ಬರುತಿರ್ದ (ಬಸರ. ೩-೩೭); ಉದ್ದಂಡ ಪದಹತಿಗಳ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸಪು. ೫-೦೯) ; ಅರೆಮುಗಿದ ಲೋಚನದ ಸಂವೃತವರಳಿ ಚಲಿಸುವ ಚಂಚುಪುಟದುಪ್ಪರಿಸಿದಂಘ್ರಿಯ . . . ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀರುವ ವಿಹಗಸತಿಯನು ಕಂಡನಾ ಮುನಿಪ (ಕೊರಾಠ. ೦-೨-೦೯). ೩. ಕದಡು ; ಕ್ಷೋಭೆಗೊಳ್ಳು; ದೃಢತೆಯಿಲ್ಲವಾಗು ; ಧವಳಚಾಮರಂ ಕಯ್ಗಳೊಳ್ ಮನಂ ಚಲಿಸೆ ಮಾಸಿ ಕಾಜಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ (ಗದಾಯು. ೯-೩). ೪. ಅಪಮಾರ್ಗಕ್ಕೆ ಹೋಗು ; ಹಾದಿತಪ್ಪು: (+). ೫. ಚಲ್ಲಾಟವಾಡು: (+). **ಚಲಿಯಿಸು** : ೨. ಚಲಿಯಿಸಿದವುದಸಿತೋತ್ಪಲದಳವಲರಲೆಪಂಗಳಿಂದಿದೆಂಬಿನೆಗಂ ಕಿತ್ರ ಲೊ ಡ ಚಿ ೯ ದ ತ್ತು ಬಲಗಣ್ಮಲರ್ (ಕಾದಂಪೂ. ೩೯೦) : ಬಿಡೆನೀಶಾ ನಿಮ್ಮ ಪಾದಾಬ್ಜಮಂ . . . ಬಲ್ಮಿಡಿದೆಂ ಮತ್ತತ್ತಮಿತ್ತಂ ಚಲಿಯಿಸದೆ (ರಕ್ಷಾಶ. ೯೮). ೬. ಕದಲಿಸಂ ; ಉದ್ರೇಕಿಸಂ ; ಕ್ಷೋಭೆಗೊಳಿಸಂ : ಮುನಿಗೆ ಪಲವುಪಸರ್ಗಮಂ ಮಾಡುತ್ತಮಂತುಂ ಚಲಿಯಸಲಾಜಿದೆ ನಾಣ್ಚಿ ಮಯ್ಗರೆದು

ಪೋದಂ (ಜಾಪುಂಪು. ೪೪); ಹರನ ಚಿತ್ತಮಂ ಚಲಿಯಿಸಿ ಕಡುತಪಮಂ ಕಿಡಿಸೆಂದು ಪೇಳೆ (ಗಿರಿಕ. ೨ ಕಥಾಗರ್ಭ). **ಚಳಯಿಸು:** ೭. ಸಡಿಲಿಸು; ಅಳ್ಳಕಮಾಡು: ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಚಳಿಯಿಸಿದತ್ತು ಕಣ್ಗೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ ಚಳಯಿಸಿದತ್ತು ಮೆಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾಲಳಿತೆಯರ್ಗಿತ್ತುದಿಂತು ಜಲಕೇಳಿ ಮನೋಭವಕೇಳಿ ಲೀಲೆಯುಂ (ಆದಿಪು. ೧೦-೧೪೯). **ಚಳಿಯಿಸು:** ೧. ಮಿಳಿ ಪೆಗಲೊಳ್ ಕೈಯೊಳ್ ಸಂಬಳಿಗೋಲ್ . . . ಜರ್ಜರರವದಿಂ ಪೊಟಲ ಜನಂಗಳ ಕಿವಿಯೊಳ್ ಚಳಿಯಿಸುತುಂ ಬಂದು ನೋೞ್ಪ ಬಹಳಾಗ್ರಮಂ (ಮಹಾಸೀ. ೮-೩೩). ೨. ಅನಿಲಾಹತಿಯಿಂ ಚಳಿಯಿಕುಮನೋಕಹಾನೀಕಮದ್ರಿ ಚಳಿಯಿಕುಮೆ (ಅಜಿಪು. ೧೦-೪೮): ಅಳಿರೆಲೆಗಳಲುಗೆ ಮಾಂಗಾಯ್ ಚಳಿಯಿಸೆ (ಪುಷ್ಪಪು. ೦೨-೬೬). ೩. ಶಾವಂ . . . ಸಂಚಳಿಸದ ಶಂಕರನ ಮನಂ ಚಳಿಯಿಪುದುಂ ಸಾರ್ದು ಪಾರ್ದು ತಗೆನೆಱೆದಿರ್ದಂ (ಗಿರಿಕ. ೮-೪೪). ೪. ಕಲಬಮರ್ಮನು ಜರ್ ಚಳಿಯಿಸುತ್ತಿರೆ ಮಗುಳ್ದುವರಂ ಧರ್ಮದೊಳ್ ನಿಱಿಪುದುಂ (ಜಾಶ್ಮಟೀ. ೯೯-೧). ೭. ಅಚಳತಧೈರ್ಯನ ಮನಮಂ ಚಳಿಯಿಸಲಾಱದಚ್ಛರಸೆಯರಚ್ಛಗಂಗೊಂಡಂತಾಗೆಯುಂ (ಶಂಪಥಾ. ೬-೯೯ ವ). ೮. ಸೋಲಿಸು; ಹಿಮ್ಮೆಟ್ಟಿಸು: ಈತನ ಶೌರ್ಯಮುಮಿಾ ಮಹೋಗ್ರಸಂಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದಪ್ಪುದು (ಶಂಪಥಾ. ೧೨-೯೪); ಸುಜಟುರಕವಿರವಿಗಳಖಳಚೇತೋಗಗನಪ್ರಚುರತಮಸ್ತಿಮಿರಮನಳಿಱ್ ಚಳಿಯಿಸಲ್ ನೆರೆಗುವುಱ್ದವರ್ ನೆರೆದವರೇ (ವರ್ಧಪು. ೦-೦೯). ೯. ಅಲುಗುವಂತೆ ಮಾಡು; ಕಂಪಿಸುವಂತೆ ಮಾಡು; ಚಂಚಲವಾಗುವಂತೆ ಮಾಡು: ಎಱಿಸಿದ ಬಿಲ್ಲಂತೆ ಶರೀರಮಂ ಚಳಿಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಂ (ಧರ್ಮಾಮೃ. ೦೨-೦೮). **ಚಳಿಸು₂:** ೨. ಚಳಿಸಿದ ರಸದಿಂಬುಣ್ಗಳ ನಿಲಿಸದಿರದು (ಕೋಕೋಕ. ೯-೧೬೪); ಘಳರಸವೆ ಮದಧಾರೆ ಚಳಿಪ ತಳಿಗೊಂಚಲುಜ್ವಳ ಕರ್ಣಂ (ಶಬ್ದಸಾ. ೮-೩೦).

**ಚಲಚಲಿಸು** (ದ್ವಿರುಕ್ತಿ): ಮಹಾವಾದ್ಯರವ ಚಲಚಲಿಸುತಿಹುದೆತ್ತೆತ್ತಲು (ಜಿಪಥಾ. ೩೦-೪). **ಚಲಿಸವ ತನ**= ನಿಶ್ಚಲತೆ; ದೃಢತೆ: ಅನುದಿನವಲಸದೆ ಚಲಿಸದತನದಿಂದ ಜೀವಂಗೆ ಕರಣೀಯ (ಜಿಜೋ. ೩-೦೭-೬). [ ಚಲನ + – ಇಸು₃ ]

**ಚಲುಂಕು** 'ಚಲಂಕು' ನೋ.

**ಚಲುಕಾಡು**(ಕ್ರಿ). ಚೆಲ್ಲಾಡು; ಎರಚಾಡು: ಪಾಡುತದಱೊಳು ಕೃಷ್ಣನನು ಚಲು[ಪಾಠಾಂ. ತುಳು]ಕಾಡುತುದಕವನೊಬ್ಬರೊಬ್ಬರ ನೋಡಿ ನಗುತಬಲೆಯರು ವಿಹರಿಸುತಿರೆ (ವಿಭಾಗ. ೧೦-೦೯-೯೩).

[ ಚಲುಕು (<ಚಲಂಕು) + ಆಡು₁ ]

**ಚಲುಕು** 'ಚಲಂಕು' ನೋ.

**ಚಲುಮೆ** 'ಚೆಲುಮೆ₁' ನೋ.

**ಚಲುವ** 'ಚೆಲ್ವ' ನೋ.

**ಚಲುವತನ** 'ಚೆಲ್ವತನ' ನೋ.

**ಚಲುವತಿ** (ನಾ). ೧. ಚೆಲುವೆ; ಸುಂದರಿ: (೬). ೨. ರತಿದೇವಿ: (ಚಕುವಿ. ೬. I, ೯೦). [ ಚಲುವ (<ಚೆಲ್ವ) + – ತಿ₁ (<– ಇತ್ತಿ) ]

**ಚಲುವನೆ** 'ಚೆಲ್ವನೆ' ನೋ.

**ಚಲುವರಾಯ** 'ಚೆಲ್ವರಾಯ' ನೋ.

**ಚಲುವಳಿ** 'ಚೆಲುವಳಿ' ನೋ.

**ಚಲುವಾನ್** 'ಚೆಲುವಾನ್' ನೋ.

**ಚಲುವಿಕೆ** 'ಚೆಲ್ವಿಕೆ' ನೋ.

**ಚಲುವು** 'ಚೆಲ್ವು₁' ನೋ.

**ಚಲುವೆ₁** 'ಚೆಲ್ವೆ' ನೋ.

**ಚಲುವೆ₂** (ನಾ). ಒಂದು ಬಗೆಯ ಹಕ್ಕಿ: ಹರಡೆ ಚಲುವಿನಿಗನು ಚ[ಪಾಠಾಂ. ಚಿ]ಲುವೆ ಗಿಜುಗಿರಳೆ ಕಮ್ಮರನಸಗ ಕೊಟ್ಟುಳಿ ಹೊಬಿಸು ಪೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೩-೨೦). [ ? ]

**ಚಲುವೆ₃**, ಚಲವೆ, ಚಲುವೆ₂ (ನಾ). ಬಟ್ಟೆಗಳನ್ನು ಮಡಿ ಮಾಡುವಿಕೆ,–ತೊಳೆದು ಹಸನುಗೊಳಿಸುವಿಕೆ,–ಶಂಚಿಮಾಡುವಿಕೆ: ಗಡುಸಾದ ನೀರು (Hard water) ಚಲುವೆಗೆ ಯೋಗ್ಯವಲ್ಲ (ಗೃಹವಿ. ೮೬). **ಚಲವೆ:** ಚಲವೆ (ಮಡಿ) ಮಾಡಿರದ ಮೃದುವಾದ ಒಂದು ಚೀನಾ ರೇಷ್ಮೆ (ಬಟ್ಟೆ) (Pongee. ಇಂಕಕಿ). **ಚಲುವೆ₂:** ಓದುತ್ತ ಓದುತ್ತ ಅವರ ಮುಖ ಚಲುವೆಯ ಅರಿವೆಯಂತಾಯ್ತು (ಮರಳಿ. ೦೬೯); ತೊಟ್ಟುಕೊಂಡ ಮೇಲೆ ಬಹಳ ಬೆಳ್ಳಗೆ ಚಲುವೆಮಾಡಿ ಗಂಜಿಹಾಕಿ ಮಾರುತ್ತಾರೆ (ಪ್ರಬಾಇ. II, ೨೮೪). [ ದೇ.ಶ ತಮಿ. ಚಲವೈ; ತುಳು. ಚಲುವ ]

**ಚಲುವೆಟು** 'ಚೆಲ್ವುವೆಟು' ನೋ.

**ಚಲೆ** (ನಾ). ೧. ನಿಂತಲ್ಲಿ ನಿಲ್ಲದವಳು; ಚಂಚಲಸ್ವಭಾವದವಳು; ಅಸ್ಥಿರೆ. ೨. ಹಾದರಗಿತ್ತಿ; ವ್ಯಭಿಚಾರಿಣಿ: "ಸ್ವೈರಿಣಿ ವಿರ್ದಣಿ ಯನೀತೆ ಚಲೆ ಕುಲಟೆಯುಭಿಸಾರಿ ಪಾಂಸುಲೆ ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಸುಗಂಧಾ. ೯೦-೪). [ ಸಂ. ಚಲಾ ]

**ಚಲ್ಲ₁**, ಚಲ್ಲು₃, ಚೆಲ್ಲ₃, ಚೆಲ್ಲ₁, ಚೆಲ್ಲು₂ (ನಾ). ೧. ಸರಸ; ವಿನೋದ; ವಿಲಾಸ; ಒಯ್ಯಾರ: ಪುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೬೩ ವ); ಚಲ್ಲಂ ಚಳೆಯಂಗುಡುತ್ತುಮಿರೆ (ಅರ್ಧನೇ. ೨-೯೫); ಪೆಣ್ಣಾನೆಯೊಂದು ಚಲ್ಲದೊಳು ತೆಗೆದೊಡೆರಲ್ಪೆಣ್ಣಾನ ಬರ್ಪ ತೆಱದೊಳು (ಭರಕ. ೪೦-೬೩); ಪಲ್ಲಮಱಿಯ ಚಲ್ಲದ ಸೊರ್ಕನಿಱಿಕೆಯ್ದು ಬೀರದ ಜೋದರ ದಟವುಬದಿಂ (ಧಾಮಾಶ್ಚ. ೯೯-೦೮). ೨. ನಗು: "ಚಲ್ಲ [ಪಾಠಾಂ. ಲ್ಲಿ] ನಗೆ" (ಕಬ್ಬಿಮಾಂ. ೬೬). **ಚಲ್ಲು₃:** ೧. 'ಚಲ್ಲಂಬಡಿ' ಪರಾ. (ಗ್ರು). ೩. ಗಾಂಭೀರ್ಯವಿಲ್ಲದಿರುವ; ಹಗುರಸ್ವಭಾವದ; ಕಂಚೀಪ್ಪೆಯ ಸ್ವಭಾವದ: ಸ್ವಲ್ಪ ಚಲ್ಲುಸ್ವಭಾವದ ಮನುಷ್ಯ (ಅಶ್ವಕಿಪ. ೦೦೪). **ಚೆಲ್ಲ₃:** ೧. 'ಚೆಲ್ಲನೋಟ' ಪರಾ. ಚೆಲ್ಲ₁: ೧. "ಚೆಲ್ಲಮನೆ ಸರಸಮಕ್ಕುಂ" (ಚತುವಿ. ೦೪೩); ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೩೩೦ ಕೊಡ್ಡಳ); ಅಱಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ (ಶಂಪಥಾ. ೬-೯೪ ವ); ಅಲ್ಲದ ಬೇಳಿನ ಚೆಲ್ಲಕ್ಕೆ ಹೋಗಿ ಇವರೆಲ್ಲರೂ ನಾಣುಗೆಟ್ಟರಲ್ಲಾ (ಸರ್ವವ. ೯೨-೩೦೬); ಅಲರ್ಗಣ್ ಚೆಲ್ಲಮಂ ಸೂಸೆ (ಜಗವಿ. ೦೯-೦೦೪). ೨. "ಹಸನಂ ಚೆಲ್ಲಂ" (ಚತುವಿ. ೬೬). **ಚೆಲ್ಲು₂:** ೧. ಕಂತು ಪಡೆದಗ್ಗದ ಮೋಹನಶಕ್ತಿಸಂಕುಳಂ ಗಡಮನೆ ಚೆಲ್ಲಿ ನೇಟ್ಗೆನಡೆ ನೋೞ್ಪರ ಕಣ್ಗಳನೆಯ್ದೆ ಮಂಚಲಂಬಿಡುವ ವಿಳಾಸಿನೀನಿವಹಂ (ಶಾಂತೀಶ್ವ. ೧೦-೬೬). ೩. ಆ ಎದುರು ಮನೆ ಚೆಲ್ಲು ಹುಡಿಗಿ ರಾಜನಿದಾಳಲ್ಲ (ನಡದಾ. I, ೩೦೬). ೪. ಕಂಚೀಪ್ಪೆಯ ಸ್ವಭಾವದ ವ್ಯಕ್ತಿ: ಮನಸ್ಸಿಗೆ ತೋರಿದುದನ್ನು ಬಾಯಲ್ಲಿ ಆಡಿ ತೋರಿಸಿ ಎಲ್ಲರಿಂದಲೂ 'ಚೆಲ್ಲು' ಎನಿಸಿಕೊಳ್ಳುತ್ತಾಳೆ (ಕಂಕಿತ ೩೪). [ ?./ತೆಲು. ಚರಲು, ಚಿರಲು = ಉತ್ಸಾಹಗೊಳ್ಳು./ ಸಂ. ಚರ್ = ವಿನೋದಮಾಡು. ]

**ಚಲ್ಲ₂** 'ಸೆಳ್ಳ' ನೋ.

**ಚಲ್ಲಂಬೆರಸು**, ಚೆಲ್ಲಂಬೆರಸು (ಅ). ಸರಸದಿಂದ ಕೂಡಿ; "ಚಲ್ಲಾಟದೊಡನೆ" (ಶಂಪದೀ. ೨೬೬): ಕಡೆಗಣ್ಣ ಚ[ಪಾಠಾಂ. ಚೆ]ಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ . . . ಸೇಸೆಗೊಳುತ್ತುಂ (ಶಂಪಥಾ. ೮-೨೬ ವ); "ಪ್ರಸಾರದಿಂದ ಕೂಡಿ" (ಶಂಪವಿ). **ಚೆಲ್ಲಂಬೆರಸು:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚಲ್ಲ₁ + ಬೆರಸು₂ ]

**ಚಲ್ಲಂಬೇಱು** (ಕ್ರಿ). ವಿಲಾಸವನ್ನು ಹೆಚ್ಚಿಸು: ಚಲ್ಲಂಬೇಱಿದ ನೋಟದೊಳ್ಪು ನಯದಿಂ ನಾಣ್ದಾಣದೊಪ್ಪಂಗೆಳಂ ಬಲ್ಲಂದಂದದ ಕೋಟಱು ವೋಡೆ . . ಒರ್ವಳಂಗಜರಸಂ ಕೈಗಣ್ಮೆ ಬಂದಿರ್ದಳಂ ನೋಡದಂತೆ ನೋಡಿ (ಬಂಹರಿ. ೩-೩೦). [ ಚಲ್ಲ$_1$ + ಪೇಱು$_1$ ]

**ಚಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚಲ್ಲಕಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲಗಣ್, ಚೆಲ್ಲಗಣ್** (ನಾ). ಸರಸವನ್ನು ಬೀರುವ ಕಣ್ಣು; ಚೆಲುವಾದ ಕಣ್ಣು: ಸೊಗಯಿಪ ಚಲ್ಲಗಣ್ (ಎಕ. VI, ಕಡೀಕ. ೪೩-೩೪: 1196); ಚಲ್ಲಗಣ್ಣಡೆಯ ಕುಡಿವೆಳಗೆಂಬುರುಳ್ಗಣ್ಣಯಲ್ಲಿ ಪಥಿಕವನೋ ಮೃಗವನೆಯ್ದೆ ಬೀಱಿ ತಂದಿಲ್ಲಿ ತಡೆವರ್ (ಪದ್ಮರಾ. ೮-೯): ಚಲ್ಲ[ಪಾಠಾಂ. ಚೆಲ್ಲೆ]ಗಂಗಳ ಚದುರೆ (ಸಾಳ್ವಭಾ. ೨೯-೬). **ಚೆಲ್ಲಗಣ್:** ನಗೆಗಣ್ ಮಱುವೊಲ್ಲೆಯ ಚೆಲ್ಲಗಣ್ಣಳಿಂ ನೂರ್ಮಡಿ ಚೆಲ್ವಿನಾನೆ (ಶಬ್ದಾಸಾ. ೩೩೮): ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾಪಳಂ (ಪುಷ್ಪಪು. ೫-೨೪); ಮಣಿಹಾರಾ ವಿಟವೇತ್ರವಾಗುರವೆನಲ್ ಸಾರ್ದಿರ್ಪನಂ ಚೆಲ್ಲಗಣ್ ಗಣಿಕಾವಲ್ಲಭ ಸಂಕುಲಕ್ಕೆ ಮಥಿಸಲ್ ಸಾಕೆಂಬಿನಂ (ದಕಶು. ೦೦-೫೮).
[ ಚಲ್ಲ$_1$ + ಕಣ್ ]

**ಚಲ್ಲಗಾಯ್** 'ಚೆಳ್ಳೆಗಾಯ್' ನೋ.

**ಚಲ್ಲಗಾರ್ತಿ, ಚಲ್ಲಕಾತಿ, ಚಲ್ಲಕಾರ್ತಿ, ಚಲ್ಲೆಗಾರ್ತಿ, ಚೆಲ್ಲಕಾತಿ, ಚೆಲ್ಲಗಾತಿ, ಚೆಲ್ಲಗಾರ್ತಿ, ಚೆಲ್ಲೆಗಾತಿ** (ನಾ). ವಿಲಾಸವತಿ; ಸರಸವತಿ; ರಸಿಕಳಾದ ಸ್ತ್ರೀ: "ಸರಸವತಿ ಚಲ್ಲಗಾರ್ತಿ" (ಕವಿಕಂ. ೧೬೪); ಎಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಣಳ ಕಾಂತಿಕೌಮುದಿಗಳಿಂ (ಅನಂಪು. ೦-೧೦೩ ವ); ಒರ್ವಳ್ಚಲ್ಲ [ಪಾಠಾಂ. ಲಲ್ಲೆ]ಗಾರ್ತಿ ದೂದವಿಯೊಡನೆ ನಗೆ ಮಿನುಗೆ ವೊಗಮಂ ನೋಡಿ (ರಾಜಶೇ. ೦೦-೦೪೮ ವ). **ಚಲ್ಲಕಾತಿ:** ಮುಂಗುರುಳುಗಳ ತಿರ್ದುತ ಮೆಲ್ಲನಡಿಯಿಟ್ಟಳು ಚಲ್ಲಕಾತಿ (ಕಂಪ್ರಸಾಂ. ೯-೦೫೮). **ಚಲ್ಲಕಾರ್ತಿ:** ಚಲ್ಲಕಾರ್ತಿಯರ್ ಚಲ್ಲದಿಂ ನಿವಾಳಿಸಿ ನಾಣಂ ಬಱಿದೀಡಾಡಿಯುಂ (ಅರ್ಧನೇ. ೫-೩ ವ). **ಚಲ್ಲೆಗಾರ್ತಿ:** "ಚಲ್ಲೆಗಾರ್ತಿಯೆನೆ ಸರಸವತಿ" (ಕಕರ. ೩೫). **ಚೆಲ್ಲಕಾತಿ:** ತನ್ನ ಸೇವೆಯ ಚೆಲ್ಲಕಾತಿಯರ ಮೇಳದೊಳು (ಭರತ. ೫೫-೬೯). **ಚೆಲ್ಲಗಾತಿ:** ಚದುರೆಯ ಚೆಲ್ಲಗಾತಿಯ (ಗೀತಗೋ. ೫೫-೦೦). **ಚೆಲ್ಲಗಾರ್ತಿ:** "ಚೆಲ್ಲಗಾರ್ತಿಯೆಂದು ಸರಸವತಿ" (ಕಕಸಾ. ೧೯-೩೬೬). ಕಣ್ಗೆಲ್ಲದೊಳೆ ಗೆಲ್ವಳೆನ್ನಿವಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ (ಲೀಲಾವ. ೨-೮೬); ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಶ್ವ. ೩೦-೧೫). **ಚೆಲ್ಲೆಗಾತಿ:** ಮೆಲ್ಲೆದೆಯ ವರಿಗೆ ಬಾಹುಬಲಿಯ ಕೃತಿ ಚೆಲ್ಲೆಗಾತಿಯು ಲಲ್ಲೆವಾತು (ನಾಗಕು. ೦-೭೬).
[ ಚಲ್ಲ$_1$ + -ಕಾಱ + -ತಿ$_1$ (<-ಇತ್ತಿ) ]

**ಚಲ್ಲಣ, ಚಣ್ಣ, ಚಲ್ಲಾಣ, ಚೆಲ್ಲಣ, ಚೊಣ್ಣ, ಚೊಲ್ಲಣ** (ನಾ). ೧. ಮೊಣಕಾಲವರೆಗೆ ಬರುವ ಉಡುಪು;-ಚಡ್ಡಿ; ಅರ್ಧೋರುಕ: "ಚಂಡಾತಕಮೆಂಬುದು ಚಲ್ಲಣಂ" (ಹಲಾಯು. ೯೦-೩೯೩); "ಚಣಕಂ— ಚಲ್ಲಣಂ (ಅರ್ಧೋರುಕಂ)" (ಶಮದ. ಪರಿ. ೨); ಆಗಳಂಗರಾಜ . . . ಇಂಬಾಗಿ ಚಲ್ಲಣವನುಟ್ಟು (ಪಂಪಭಾ. ೧೨-೦೦೫ ವ); ಉಟ್ಟ ಚಲ್ಲಣ ಕೈಯ ಪಟ್ಟೆಯವಿಡಿದು ಗರುಡಿಯ ಕಟ್ಟ ಶ್ರವವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ೬೬೮); ಮುಂಚೆಱಗುಗಳ ಚಂದ್ರಿಕೆ ಪಟದ ಚಲ್ಲಣದ . . ವನಿತೆಯರು ಬಳಸಿದರು (ತೊರರಾ. ೦-೦೬-೫೨); ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ (ಮೋಹತ. ೦೨-೪೫). ೨. ಹರಾಯಿ; ಇಜಾರ: ಬೆಲೆಬಾಳುವ ಪರಟು ಹಾಕಿ ಉಲನ್ ಚಲ್ಲಣವನ್ನು ಧರಿಸಿದ್ದ (ವಂಶವೃ. ೩೩೬). **ಚಣ್ಣ:** ೨. ಅವರ ಅಂಗಿ . . . ಬಣ್ಣಬಣ್ಣದ ಚಣ್ಣ ನೋಡಿದರೇ ಹೇಳಬಹುದು (ತುಂಗಭ. ೩): ಹಾಕಿ ಚಣ್ಣ ಹಾಕಿಕೊಂಡು ಕಚೇರಿಗೆ ಹಾಜರಾಗಿ ಸಿಪಾಯರಿಂದ ನಗಿಸಿಕೊಳ್ಳುವದು ತಪ್ಪುತ್ತಿತ್ತಲ್ಲ (ಗಂಪೂಹೆ. ೮೨೦); ಚಣ್ಣ ವೈರಣಾ ಹಾಕಿದ್ದರೆ ಬರುತ್ತಿತ್ತು (ಕುರಿಹಿಂ. ೦೨೪); ಪಿಸ್ತೂಲು ತೆಗೆದುಕೊಂಡು ಚಣ್ಣದ ಕಿಸೆಯಲ್ಲಿಟ್ಟ (ಮೀದಿಮು. ೬೯). **ಚಲ್ಲಾಣ:** ೧. ಉಲಿವ ಪೊಕ್ಕುಳ ಘಂಟೆ ಚಲ್ಲಾಣದುರ ಗೆಜ್ಜೆ (ನವಮೋ. ೧೨-೬೮). **ಚೆಲ್ಲಣ:** ೧. ಸಲ್ಲಲಿತವಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲಗಜ್ಜೆಯ (ಶಾಂತೀಶ. ೭-೯೩ ವ); ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಣ್ಣದ ಹುರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳೆಂದು ಹೊಕ್ಕುದು ತುಳುವ ಪಡೆ (ಕುವ್ಯಾಲೀ. ೪-೩೩); ಚೆಲ್ಲಣ ಕಾಸೆ ಕುಪ್ಪಸ ಮೊಲೆಕಟ್ಟುಗಳ್ (ಮೋಹತ. ೨೪-೪). **ಚೊಣ್ಣ:** ೨. ನನ್ನ ಬಿಳಿಚೊಣ್ಣದ ಸಂಗಡಿಗರೊಡನೆ ಆಡುತ್ತಿದ್ದ (ಗೀಆ. ೨); ಚೊಣ್ಣದ ಕಿಸೆಯಲ್ಲಿ ಹುರಿಗಡಲೆ ಇದ್ದುವು (ಜಯಂತ. ೨೦). **ಚೊಲ್ಲಣ:** (೬).
[ ದೇ.೫ ತಮಿ. ಮಲ. ಚಲ್ಲಡ; ತುಳು. ಚಲ್ಲಣಿಸ; ತೆಲು. ಚಲ್ಲಡ; ಚಲ್ಲಾಡ. / ಸಂ. ಚಲನಕ, ಚಂಡಾತಕ ].

**ಚಲ್ಲಣಂದೆಗೆ** (ಕ್ರಿ). ೧. ಚಡ್ಡಿಯನ್ನು ಕಳಚಿಸು. ೨. (ಆಲಂ)ಅವಮಾನ ಮಾಡು; ಭಂಗಿಸು: ನಿಚ್ಚಟದ ರಾವುತರಂ ಚಲ್ಲಣಂದೆಗೆದುಂ ಮುಂಗುಡಿಯ ರಾವುತರಂ ಭಂಗಿಸಿ ತವಿದು (ಮಲ್ಲಿಕಜ. ೨೨೬-೦೫). [ ಚಲ್ಲಣ + ತೆಗ್$_2$ ]

**ಚಲ್ಲಣಗಟ್ಟು** (ಕ್ರಿ). ಚಡ್ಡಿಯನ್ನು ಧರಿಸು; ಚಣ್ಣವನ್ನು ತೊಟ್ಟುಕೊಳ್ಳು: ಸಾಸಿರದೆಂಟನೆಯ ದಳದಲ್ಲಿ ಜೇಚರಿ ಚಲ್ಲಣಗಟ್ಟಿ ವಾಸುಗಿಯ ಫಣಾಮಣಿಯು ಪ್ರಜ್ವಲಿಸುವುದ ಕಂಡೆ (ಅವಜಂ. ೬೦-೨೬೦). [ಚಲ್ಲಣ + ಕಟ್ಟು$_1$]

**ಚಲ್ಲಧ್ವಜ** (ನಾ). ಯಾವಾಗಲೂ ಸೋಲದ ವ್ಯಕ್ತಿ; ಒಂದು ಬಿರುದು (?): ಮಾಸಾಮಾನ್ಯ ಚಲ್ಲಧ್ವಜ ರಣದುತ್ತರಂಗನೆನ್ನುವೊಳ್ಳಿದಂ (ಎಕ. VIII, ಸೊರಬ. ೮೫-೨: 912). [Pಇದು 'ಚಲಧ್ವಜ' ಎಂಬುದರ ಅಪಲಿಖಿತವಿರಬಹುದು]

**ಚಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲವಂತ** 'ಚಲ್ಲವತ್ತ' ನೋ.

**ಚಲ್ಲವತ್ತ, ಚಲ್ಲವಂತ, ಚಲ್ಲವರ್ತ, ಚಲ್ಲವೊತ್ತ, ಚೆಲ್ಲವತ್ತ, ಚೆಲ್ಲವೊತ್ತ** (ನಾ). ಸವಿಮಾತುಗಳಿಂದ ಮರುಳುಮಾಡಿ ದ್ರೋಹ ಬಗೆಯುವವನು; ಠಕ್ಕ; ವಂಚಕ: "ನಂಬಿಸಿ ತಿಂಬುವನಂ ಬಾಧರೆಂಬರ್ ಬೊಂದುಕನು ಚಲ್ಲವತ್ತನುಮೆಂದುಂ" (ಕವಿಕಂ. ೦೫೫); ಕೆಮ್ಮಗೆ ನಾಡ ಚಲ್ಲವತ್ತ [ಪಾಠಾಂ. ವೊ]ತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೨); ನಂಬುಗೆ ಚಲ್ಲವತ್ತರೊಳ್ . . . ಉಂಟುಮಾಡದೆ ಕೇಡಂ (ನೀತಿಮು. I, ೦೦೫). **ಚಲ್ಲವಂತ:** "ಚಲ್ಲವಂತ[ಪಾಠಾಂ. ವತ್ತ]ನುಮೆನಲ್ ನಂಬಿಸಿಯೆ ತಿಂಬಾತ ನಕ್ಕು" (ಅಭಿಮುಂ. ೪೬). **ಚಲ್ಲವರ್ತ:** "ಬೊಂದುಕಂ ಚಲ್ಲವರ್ತ[ಪಾಠಾಂ. ವತ್ತ, ವೊತ್ತ]ನೆನೆ ನಂಬಿಸಿಯೆ ತಿಂಬವನ ಪೆಸರಕ್ಕು" (ಅಭ್ಯಕ್ತೈ. ೬೩). **ಚಲ್ಲವೊತ್ತ:** "ಚಲ್ಲವೊತ್ತರ್ = ನಂಬಿಸಿ ತಿಂಬವರ್" (ಶಮದ. ಪರಿ. ೨); ಎಲ್ಲಿಯಾನುಂ ಬಂದ ಚಲ್ಲವೊತ್ತನ ಬೆಲ್ಲವಾತುಗಳಂ ಕೈಕೊಂಡು ರಾಜ್ಯಹಿತಕೆ ಕಿಡಿಸಲ್ಕೆಗೆದೆಯಪ್ಪೊಡದನುಪೇಕ್ಷಿಸಲ್ಬಾರದೆ (ಪಂಚತಂ. ೦೫-೯). **ಚೆಲ್ಲವತ್ತ:** "ಬೊಂದುಕನೆಂದುಂ, ಚೆಲ್ಲವತ್ತನೆಂದುಂ ನಂಬಿಸಿ ತಿಂಬಾತಂ" (ಕಕಸಾ. ೦೬-೩೩೮); ಬೇಳ್ಪ ತೆರಿಕುಳಿಯಲ್ಲದರ ಚೆಲ್ಲವತ್ತನೆಂ (ಸಂಸಪ. ೨೪-೦೦). **ಚೆಲ್ಲವೊತ್ತ:** ಮೇಲಿನ 'ಕಬ್ಬಿಕೈ' ಪ್ರಯೋಗದ ಪಾಠಾಂತರವನ್ನು ನೋಡಿ. [?]

**ಚಲ್ಲವರ್ತ** 'ಚಲ್ಲವತ್ತ' ನೋ.

**ಚಲ್ಲವಾಡು, ಚಲ್ಲಾಡು$_2$, ಚೆಲ್ಲವಾಡು, ಚೆಲ್ಲಾಡು$_2$** (ಕ್ರಿ). ವಿನೋದ ಮಾಡು; ಸರಸವಾಡು: ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಿಕೇಸರಿ ನಿಂದು ನೋಡಿದಂ (ಪಂಪಭಾ. ೬-೮೦); ಬೆಳ್ಳಿಯ ಚಿನಕಂಗೆ

ಕೆಂಡದುಂಡಲಿಗೆಯು ಮಾಡಿ ಚಲ್ಲವಾಡಿದರೆ ಹಲ್ಲು ಹೋಹುದು (ಬಸವ. ೩೩೧ ಅ) ; ಹೋಹ ಮಾರಿಯ ಚಲ್ಲವಾಡುವರು (ಎಕ. VIII, ಸೊರಬ. ೨೬೮-೩೩ ; ಸು. 1216). **ಚಲ್ಲಾಡು₃ :** ನಲ್ಲನೆರ್ದೆಯಂ ಸಾರ್ದಲ್ಲಿ ಚಲ್ಲಾಡಿ (ಚಳವಿ. ೧-೩). **ಚೆಲ್ಲವಾಡು :** ನೇವುರದ ನುಣ್ಚರಕ್ಕೆ ಮರಳ್ದು ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲ ವಾಡುತ್ತುಂ (ಅರ್ಧನೇ. ೦-೯೨ ವ) ; ಬುಲ್ಲವಿಸಿದನು ಕೋಪಶಿಖಿಯಲಿ ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಶಾಶಿಶಾ. ೨೦-೯೮) ; ಒಲ್ಲದವಳೊಡನಾಡಿ ಚೆಲ್ಲವಾಡುವನೆಗ್ಗ (ಸರ್ವಜ್ಞ. ೧೭೦೭). **ಚೆಲ್ಲಾಡು₃ :** ಮಳೆ ಸುಗ್ಗಿಗಳ ತಡೆದು ಮಲ್ಗೆಲ್ಲ ಕುಳಿರ ತೆರ ಚೆಲ್ಲಾಡುತಿರಲು (ಶಾಮಾಚ. ೭೦-೨೩೮). [ ಚಲ್ಲ₁ + ಆಡು₁ ]

**ಚಲ್ಲವೊತ್ತ** 'ಚಲ್ಲವತ್ತ' ನೋ.

**ಚಲ್ಲಾಟ₁, ಚೆಲ್ಲಾಟ₁ (ನಾ).** ಚಲ್ಲಾಪಿಲ್ಲಿಯಾಗಿ ಚಲ್ಲುವುದು,-ಎಸೆಯುವುದು ; ತೂರಾಡುವುದು : (ಶ). **ಚೆಲ್ಲಾಟ₁ :** (ಶ).
[ ಚಲ್ಲು₁ + ಆಟ ]

**ಚಲ್ಲಾಟ₂, ಚೆಲ್ಲಾಟ₂(ನಾ).** ೧. ವಿನೋದ ; ಸರಸ ; ಲೀಲೆ ; ವಿಲಾಸ : ಭಾವದಲ್ಲಿ ನನ್ನ ಕೂಡಣ ಚಲ್ಲಾಟದಿಂದ ಸಂಚರಿಸುತ್ತ ತಾನೇ ಜಂಗಮ ನಾದನಯ್ಯಾ (ವಚಶಾ. II, ೦೩೨); ಅತಿವಿಳಾಸಮನೆಸಗುತ್ತೆಸದಿರ್ಪಳಮ್ಗಳ ಚಲ್ಲಾಟಮಂ ನೋಡುತ್ತ (ಅದ್ಭುಟ. ೩-೩೨ ವ). ೨. ಗಾಂಭೀರ್ಯವಿಲ್ಲದಿರುವಿಕೆ : ಅವಳ ಚಲ್ಲಾಟದ ನಡವಳಿಕೆ ಗೌರವಕ್ಕೆ ಧಕ್ಕೆ ತರುತ್ತದೆ (ಶಿ). **ಚೆಲ್ಲಾಟ₂ :** ೧. ಚೆಲ್ಲಾಟಂ ಕಲಹಂ ರತಿ ಸಲ್ಲೀಲೆ (ಮನ್ಮವಿ. ೩-೩೩) ; ಅಳಿಗಳವ್ವುಗೆ ಸಿಂಗವಣಿಗಳ ಚೆಲ್ಲಾಟ (ಕಂಸವಿ. ೦೦-೯೯) ; ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ಗಾದೆ). ೨. ನಲ್ಲ ಕಂಡರೆ ಚೆಲ್ಲಾಟವಾಡುವ ಚೆಲುವೆಯು ಗತಿಯೇನು? (ಜೋಗಿಮಾ. ೦೩೦ ಕೃಷ್ಣಾವನ).
[ ಚಲ್ಲ₁ + ಆಟ. / ತೆಲು. ಚೆಲ್ಲಾಟ ]

**ಚಲ್ಲಾಟಂಬೆಱು (ಕ್ರಿ).** ಸರಸವಾಡು; ಸಂತೋಷಿಸು; ವಿನೋದಪಡು: ಚಲ್ಲಾಟಂಬೆತ್ತು ಕಾಂತಾಮಣಿಯುಗುರಿಸಿದರ್ ತೈಲಮಂ ಬಾಲೆಗಾಗಳ್ (ಅದ್ಭುಟ. ೮-೦೩). [ ಚಲ್ಲಾಟ₂ + ಪೆಱು₁ ]

**ಚಲ್ಲಾಡು₁, ಚೆಲ್ಲಾಡು₁ (ಕ್ರಿ).** ೧. ತೂರಾಡು ; ಈಡಾಡು ; ಒಗೆದಾಡು : ಫುಲ್ಲನಾಭನ ಪ್ರಾಣವಲ್ಲಭೆಯು ನೆಱೆ ಸಿರಿಯು ಚ[ಪಾಠಾಂ. ಚೆ]ಲ್ಲಾಡುತಬೞಿ ಮೆಱೆದ ಕಲ್ಯಾಣಪುರದ ಸುತ್ತೆಲ್ಲ (ಗುರುಭಶ. ೦-೨೦). **ಚೆಲ್ಲಾಡು₁:** ೧. ಬಂದಚ್ಚಲರ ಧೂಳಿಗಳ ಚೆಲ್ಲಾಡಿ (ಕೃಮಿಶಾ. ೩-೨೪) ; ಹಿಗ್ಗಿರ್ಪ ಕಂಗಳಿಗೆ ಚೆಲ್ವಿಕೆಯ ಚೆಲ್ಲಾಡಿ (ಶಾಮಾಚ. ೦೦೫-೨೮೭). ೨. ಅತಿಶಯವಾಗಿ ಬಿದ್ದಿರು ; ಯಥೇಷ್ಟವಾಗಿ ಇರು ; ಇಟ್ಟಾಡು : ಹೊರಗಡೆ ತ್ರಯೋದಶಿ ಚಂದ್ರನ ಬೆಳಕು ಚೆಲ್ಲಾಡುತ್ತಿತ್ತು (ಕಂಗಾಕ್ಷಿ. ೩೦೩) : ಎರಡಾಣೆ ನಾಕಾಣೆಗೆ ಸೇರಕ್ಕಿ ಬಿದ್ದು ಚೆಲ್ಲಾಡೋದು (ನನ್ನೂರು. ೩೧೭). [ ಚಲ್ಲು₁ + ಆಡು₁ ]

**ಚಲ್ಲಾಡು₂** 'ಚಲ್ಲವಾಡು' ನೋ.

**ಚಲ್ಲಾಣ** 'ಚಲ್ಲಣ' ನೋ.

**ಚಲ್ಲಾನೆ (ನಾ).** ಒಂದು ಬಗೆಯ ಮರ: ವಲೀವರ, ಚಲ್ಲಾನೆ . . . ಗೂಗ (ಮೃಜಿ೧. ೩೦-೬೦೭). [ ? ]

**ಚಲ್ಲಾಪಿಲ್ಲಿ, ಚಲ್ಲಪಿಲ್ಲಿ, ಚಲ್ಲಿಪಿಲ್ಲಿ, ಚೆಲ್ಲಪಿಲ್ಲಿ, ಚೆಲ್ಲಾಪಿಲ್ಲಿ, ಚೆಲ್ಲಿಪಿಲ್ಲಿ(ನಾ).** ಅತ್ತಿತ್ತ ಚೆದರಿದ ಸ್ಥಿತಿ; ಅವ್ಯವಸ್ಥೆಯ ರೀತಿ; ಅಸ್ತವ್ಯಸ್ತತೆ : ಅವರ ಫೌಜಿಗೆ ಬಹಳ ಪೆಟ್ಟಾಗಿ . . . ಕಡೆಗೆ ಇದಿರಿಗೆ ನಿಲ್ಲಲಾರದೆ ಚಲ್ಲಾಪಿಲ್ಲಿ ಆದ್ದರಿಂದ (ರಾಜೇಂದ್ರ. ೯೩) ; ಉಪ್ಪಿನ ಮೂಟೆಯು ಉರುಳಿ ಹೋದರೆ ಅದರೊಳಗಿರುವ ಕಾಳುಗಳು ಚಲ್ಲಿ ಚಲ್ಲಾಪಿಲ್ಲಿಯಾಗಿ ಹೋಗುವಂತೆ (ಹುಟ್ಟಿಹ. ೧೨೮) ; ಮನಸು ಚದರಿ ಚಲ್ಲಾಪಿಲ್ಲಿಯಾಯಿತು (ಹೂಬಿಸಿ. ೧೨). **ಚಲ್ಲಪಿಲ್ಲಿ :** ಗರ್ಲೆಯೊಡೆಯ ತಿವಿದನು ಗಡೆಯವರನು ಚಲ್ಲಪಿಲ್ಲಿಯ ಮಾಡಿದನು (ಕುಠಾಸಾಂ. ೦೩-೨೦). **ಚಲ್ಲಿಪಿಲ್ಲಿ:** ಬಲದಲ್ಲಿ ಕೆಲಫೌಜು ನಿತ್ರಿಂಸ ಲಾಬಿದೆ ಚ[ಪಾಠಾಂ. ಚೆ]ಲ್ಲಿಪಿಲ್ಲಿಯಾದುದು (ಸಮ್ಮಿಳಾ. ೮-೩೦). **ಚೆಲ್ಲಪಿಲ್ಲಿ:** ರಾಣ್ಯವನೆಲ್ಲವ ಹೊಕ್ಕುಱಿದಿಱಿದು ಚೆಲ್ಲ[ಪಾಠಾಂ. ಚಲ್ಲಿ]ಪಿಲ್ಲಿಯ ಮಾಡಿ (ಕುಠಾಸಾಂ. ೩-೯೩). **ಚೆಲ್ಲಾಪಿಲ್ಲಿ :** ಸಾಮಾನುಗಳೆಲ್ಲ ಅತ್ತಿತ್ತ ಚೆಲ್ಲಾಪಿಲ್ಲಿ ಯಾಗಿದ್ದವು (ಕೂಶಕಾ. ೭೦) ; ಪಾಂಡ್ಯ ಸೈನ್ಯಗಳು ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದವು (ಶ್ರೀರಾಮ. ೩೦೯) ; ಕೈಯಲ್ಲಿದ್ದ ಬಟ್ಟಲು ಕೆಳ ಉರುಳಿ ಇದ್ದ ದೋಸೆ ಎಲ್ಲಾ ಚೆಲ್ಲಾಪಿಲ್ಲಿಯಾಗಿ ಕೆಳಬಿತ್ತು (ಪದ್ಮಸ. ೩೩). **ಚೆಲ್ಲಿಪಿಲ್ಲಿ :** ದೇವತೆಗಳು . . . ಕಲ್ಲುತಾಗಿದ ನೆಲ್ಲಿಯಂತೆ ಚೆಲ್ಲಿಪಿಲ್ಲಿಯಾಗುವಂ ತೋಡಿದುವಲ್ಲಿ ನಿಲ್ಲದೆ (ನೇಮಿಸಂ. ೨೩-೩೩).
[ <ಚಲ್ಲು₁. / ತುಳು. ಚಲ್ಲಾಪಿಲ್ಲಿ ]

**ಚಲ್ಲಿ₁, ಜಲ್ಲಿ₁ (ನಾ).** ೧. ಚೂರು ; ತುಣುಕು ; ತುಂಡು ; ಹೋಳು : ಒಗುಮಿಗೆ ಬೇಳೆಗೆಯ್ದು ಮೆಟಸಂ ತಳದಲ್ಲದ ಚಲ್ಲಿಯಂ ಪವಣ್ಬಿಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವತಿ. ೩-೬೦) ; ಚೆಳಯದಂಗೋಪಾಂಗವಂ ಚಲ್ಲಿ ಮಾಡಿದೊಡಂ ತಳ್ವೊಳಗಿರ್ದೊಡಂ ಕಡೆಗದೆಂದುಂ . . . ದೇಹದಿನಾತ್ಮಂ ಪೆಱನೆಂಬ ಬುದ್ಧಿ ನಿನಗೀಗಳ್ ಸಾರ್ದುದು (ಧರ್ಮಾಮೃ. ೩-೦೦೯) ; ಕಾಡೆ ಕವಟೀಕಾಯ ತಂದು ಚಲ್ಲಿಯ ಮಾಡಿ ಕೂಡೆ ವರಳೊಳಗಿಡುವುದು (ಸಾಳ್ವಸಾ೦.೯). **ಜಲ್ಲಿ₁:** ೨. ರಸ್ತೆಯನ್ನು ಭದ್ರಪಡಿಸಲು ಹಾಗು ಸಿಮೆಂಟ್ ಕಾಂಕ್ರೀಟ್ ತಯಾರಿಸಲು ಹಾಕುವ ಕಲ್ಲಿನ ಚೂರು,-ತುಂಡು: ಬದುಕಿನ ನಡುಕಟ್ಟನಲ್ಲಿ ಕಟ್ಟಿ ಮೈಯ ಕಲ್ಲ ಜಲ್ಲಿ(ಗರಿ. ೯೪-೩) ; ರಸ್ತೆಗೆ ಜಲ್ಲಿ ಎಂದರೆ ಏನೆಂಬುದು ತಿಳಿದೇ ಇರಲಿಲ್ಲ (ಕಂಗಳ. ೨೩). ೩. (ಆಲಂ) ಸುಳ್ಳು ; ಸತ್ವವಿಲ್ಲದ ವಿಚಾರ : ದುರಗಿ ಆಡಿದ ನುಡಿಯು ಬೇಡೆನ್ನರಲ್ಲಿ; ಕಾಳಿ ಹೇಳುವ ಮಾತಿನಲಿ ಇಲ್ಲ ಜಲ್ಲಿ (ಜನಪದ. IV, ೨೭-೧೨).
[ ದೇ.? ತಮಿ. ಮಲ. ಚಲ್ಲಿ ; ತುಳು. ಚಲ್ಲಿ, ಜಲ್ಲಿ ; ತೆಲು. ಜಲ್ಲಿ ]

**ಚಲ್ಲಿ₂, ಛಲ್ಲಿ₁ (ನಾ).** ೧. [ನಾಟ್ಯ] ನೃತ್ಯದ ಒಂದು ಗತಿ,- ಪಾದವಿನ್ಯಾಸ : ರಸಭಾವಾಭಿನಯಂಗಳ್ ಪೊಸವೆ ಪುಗಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೩); ಚರಣದ ಚಾರಿಯ ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟೆಡೆಯೊಳ್ (ಆದಿಪು. ೯-೩೯). **ಛಲ್ಲಿ₁:** ೨. [ಸಂಗೀತ] ಮೃದಂಗ ಬಾರಿಸುವ ಒಂದು ಮಟ್ಟು,-ಗತ್ತು : ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ಕಂಗವಾಗಿ . . . ಧೊಲ್ಡಾವಣೆ ಧೊಲ್ಡಾವಣೆ ಛಲ್ಲಿ ಪಾಡು ಪದಂ . . . ಜೋಕೆಯಂಬ ದೇಸೆಯ ಚಟ್ಟಂಗಳೆಸೆಯ ಬಾಜಿಸುತ್ತಿರೆಯುಂ (ಶಾಂತೀಶ್ವ. ೧೩-೬೭ ವ) .

**ಛಲ್ಲಿಮಾಡು**=ನರ್ತನಮಾಡು ; ನಾಟ್ಯವಾಡು : ವರ್ಗ ದ್ವಿತೀಯಾಕ್ಷರಂಗಳ್ಗೆ-ವಕ್ಷ್ಯಾಣಾಂ . . . ಛಲ್ಲಿಮಾಡಿದಂ (ಛಲ್ಲಂ ಮಾಡಿದಂ) (ಶಮದ. ೦೩ ಪ್ರಯೋ). [<ಪ್ರಾ. ಚಲ್ಲಿ=ನೃತ್ಯದಲ್ಲಿಯ ಗೀತೆ. / ತಮಿ. ಚಲ್ಲಿ= ಒಂದು ಬಗೆಯ ವಾದ್ಯ ]

**ಚಲ್ಲಿ₃, ಚೆಲ್ಲೆ₂, ಚೆಲ್ಲಿ (ನಾ).** ಕನ್ನಡಿ : ದರ್ಪಣ : "ಕನ್ನಡಿಗೆ ಕೈಪಿಡಿ ಚಲ್ಲಿ [ಪಾಠಾಂ. ಲ್ಲೆ]ಯೆಂದು" (ಕಂಮಂ. ೬೩) ; ಬಲ್ಲವನಲ್ಲರಿಗೆ ಲಲ್ಲೆಯ ನುಡಿವನ ಬಲ್ಲವನರವು ಚಲ್ಲಿಯ ರೂಹಿನಂತೆ ಯಿದ ಬಲ್ಲವರಾರೊ(ಶರಗೋ. ೪೮-೧೦೩). **ಚಲ್ಲೆ₂:** "ಚಲ್ಲೆಯೆನೆ ದರ್ಪಣಂ ನೇರಾದುದು" (ಶಶರ. ೩೪). **ಚೆಲ್ಲಿ:** ಒಲವಿಂದೀವೂಡೆ ಗೋವಂಗಲಗೆ ಕೊಟಲ್ ಕೋಡ ಕಾಳೆ ಕೋಲುಡೆ ದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಜಗವಿ. ೧೭-೨೨). [ ? ]

**ಚಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲಿಸು$_1$, ಚೆಲ್ಲಿಸು$_1$** (ಕ್ರಿ). ೧. ಎರಚುವಂತೆ ಮಾಡು ; ಚೆಲ್ಲುವಂತೆ ಮಾಡು : ಪಾವುಗಳಂ ಕರ್ಚಿಸುತ್ತುಂ ಪಲ್ಲಿಯಿಂದು ಬೆದಱಿಸುತ್ತುಂ ಕಿಚ್ಚಂ ಚಲ್ಲಿಸುತಂ (ಧರ್ಮಾಪ. ೧-೬೬ ವ) ; ಅಲ್ಲಿ ಉಳಿದಿದ್ದ ಒಂದು ಕೆಂಡವನ್ನು ತರಿಸಿ ಅದಕ್ಕೆ ಅಮೃತದ ನೀರನ್ನು ಚಲ್ಲಿಸಿದನು (ಪಂಚಾಮೃ. ೪೦). ೨. ಸುರಿಯುವಂತೆ ಮಾಡು ; ಸುರಿಸು : (+). **ಚೆಲ್ಲಿಸು$_1$** : ೧. ಮಲ್ಲಿಗೆಯರಳಂತೆ ಬೆಳ್ಗಾಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು . . . ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೧-೩೬) ; ಒಂದು ಖಂಡಿಗ ರಾಗಿಯನ್ನು ಚೆಲ್ಲಿಸಿದೆ (ಹಂಗಾಳ್ಕೆ. ೪೨೦). ೨. ಆಲಿನೀರ್ಗಳಂ ಚೆಲ್ಲಿಸಿಕೊಳುತ್ತೆ (ನಂಬಿರ. ೧೨-೧೦೭). [ಚಲ್ಲು$_1$ + – ಇಸು$_3$]

**ಚಲ್ಲಿಸು$_2$, ಚಳ್ಳಿಸು, ಚೆಲ್ಲಿಸು$_2$** (ಕ್ರಿ). ಚೂರುಮಾಡು ; ತುಂಡುಮಾಡು ; ಕತ್ತರಿಸು : ತಾಳಿಸಿದ ಬದನೆಯ ಕಾಯ ಚ[ಪಾಠಾಂ. ಚೆ]ಲ್ಲಿಸಿದ ನೀರುಳ್ಳಿ ಶುಂಠಿ ಸಹಿತಿಕ್ಕುವುದು (ಸೂಪಶಾ. ೪-೨೯). **ಚಳ್ಳಿಸು**: ನೀರುಳ್ಳಿಯ ಗಡ್ಡೆಯಂ . . . ಚಳ್ಳಿಸಿ ಜಾಜಿಯಂ ಕಲಸಿ ಮೆಲ್ಲದ ಮಾನವನೇನ ಬಲ್ಲನೋ (ನೀತಿಸಾ. ೬೪೭). **ಚೆಲ್ಲಿಸು$_2$** : ಚೆಲ್ಲಿಸಿದ ನೀರುಳ್ಳಿ ನಿಂಬೆಹುಳಿ ಮೆಣಸು ಹಸಿಯಲ್ಲ ಸಕ್ಕರೆ ಹುಳಿಯ ಬೆರಸಿ ಪಾಕಂ ಮಾಡಿ (ಸೂಪಶಾ. ೬-೧೭).

[ ಚಲ್ಲಿ$_1$ + – ಇಸು$_3$ ]

**ಚಲ್ಲು$_1$, ಚಲ್$_2$, ಚೆಲ್ಲು$_1$** (ಕ್ರಿ). ೧. ಹರಡು; ಪಸರಿಸು : ಕ್ರೂರಾಕಾರ ಮನೆಯ್ದೆ ತಾಳ್ದಿ ತಮಮಂ ಚ[ಪಾಠಾಂ. ಚೆ]ಲ್ಲುತ್ತುಮಿರ್ದಲ್ಲಿಯುಂ . . . ರಾಹು ಬಂದು (ಪಾರಪು. ೫-೦೩) ; ಬೆಳುದಿಂಗಳು ಹಾಲು ಚಲ್ಲಿದ ಹಾಗಿದೆ (ಜಾ೦). ೨. ಚದರಿಹೋಗು; ದಿಕ್ಕಾಪಾಲಾಗು; ಸಮಸ್ತಜನಮನಕ್ಕನುರಾಗಮಾಗಲಲ್ಲಿಗೆ ಚಲ್ಲಿದಲ್ಲಾ ಬ್ರಾಹ್ಮಣೋತ್ತಮರು ಬಂದು ಕೊಡಲ್ (ಉದ್ಭಟ. ೪-೧೦೨ ವ) ; ಮುಂದೆ ಹೆಣದಿನಿಹಿಗಳಿಂ ಖಗಮೃಗ ವೃಂದ ಚ[ಪಾಠಾಂ. ಚೆ]ಲ್ಲಿತು ಭೂತಪ್ರೇತನಿವಂದ ಕೆದಱಿತು (ಕುಮಾ.ಗ. ೧೨-೪): ಚ[ಪಾಠಾಂ. ಚೆ]ಲ್ಲಿತಾಕ್ಷಣ ನೆರೆದ ಸೇನಾವಲ್ಲಭರು (ತೊರವ. ೪-೯-೩೦). ೩. ಸಿಂಪಿಸು ; ಚಿಮುಕಿಸು ; ತಳಿ : ಬದ್ಧ ಜಲವಂ ಚಲ್ಲಿ ಚಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ (ಬಸಪು. ೩-೫). ೪. ಬಿಸುಡು ; ಎಸೆ : ಒಡೆದ ಹುಳಿಮಜ್ಜಿಗೆಯ ತಿಳಿಯುವಂ ಚ[ಪಾಠಾಂ. ಚೆ]ಲ್ಲಿ ಪಾವಡೆಯಲ್ಲಿ ಹಿಂಡಿ (ಸೂಪಶಾ. ೨-೦೬) ; ಆ ವಿಳಾಸದ ಕಾರ್ಡನ್ನು ಅಲ್ಲಿಯೇ ಚಲ್ಲಿ . . . ಓಡಹತ್ತಿದನು (ಜೀವಪ್ರ. ೨೬). ೫. ಧಾರಾಳವಾಗಿ ಖರ್ಚುಮಾಡು, –ವ್ಯಯಮಾಡು : ಗಳಿಸಿ ತಂದೆಮಗರ್ಥವೀವುದನುಳಿದು ಭಂಡಾರವನೆ ಮಿಂಡಗೆ೯ಳಿಸಿ ಚ[ಪಾಠಾಂ. ಚೆ]ಲ್ಲುವುದುಚಿತವೇಯೆಂದಾಗ್ರಹಿಸಿ ನುಡಿದು (ಬಸಪು. ೦೦-೬). ೬. ಕೆಡಹು ; ಬೀಳಿಸು : ಆರು ಕೊಂಡರು ಹೇಳು ನಡೆವುತ ದಾರಿಯಲಿ ಕೆಡಹಿದೆಯೊ ವ್ಯೋಮಱಿದಲ್ಲಿ ಚ[ಪಾಠಾಂ. ಚೆ]ಲ್ಲಿದೆಯೊ (ಬಸಪು. ೧೪-೨೬) ; ಭಾವನಂಟ ಬಂದಾಗ್ಲೂ ಹಾಲು ಚಲ್ಲೋದು ಬಿಡಲಿಲ್ಲ (ಗಾದೆ). ೭. ಇಡು ; ಹಾಕು ; ಇರಿಸು : ಕುಡಿಯುವ ನೀರೊಳಗೆ ಮೊದಲೇ ಒಂದು ಶೀತೋಷ್ಣಮಾಪಕ ಯಂತ್ರವನ್ನು ಚಲ್ಲಿಟ್ಟಿರಬೇಕು (ಮುಂಬಯಿ. ೫-೧೨೨). ೮. ಎರಚು ; ತೂರು : ಕಾಲಮೃತ್ಯುವಿನ ಎರಡು ಕಣ್ಣಲಿ ಚಲ್ಲಿ ಮಣ್ಣಂ (ಬಸಪು. ೪೭-೧); ಗದ್ದೆಗಳಿಗೆ ಬೀಜವನ್ನು ಚಲ್ಲಿದ ಮೇಲೆ ಮರುದಿವಸದವರೆಗೂ ನೀರನ್ನು ಬಂದು ಮಾಡಬೇಕು (ಕೃಷಿಪ್ರ. ೫೭). **ಚಲ್$_2$** : ೬. ನೀರ್ಗುಡಿವ ಸೌಹೃದಯರ್ಕಳಕ್ಷಿಗುರೆ ಕೋಮಲೆಯರಕ್ಷಿಗಳ್ ಚದುರಿನಿಂದಂಜುಳಿಗಳಲ್ಲೆಸೆಯೆ ಚಲ್ದಪರ್ಮಿನ್ನಗಳಿಂದುಚ್ಚರಿಸುತೆ (ಪರಶು. ೪-೨೦). **ಚೆಲ್ಲು$_1$** : ೧. ಚೆಲ್ಲುತುಮಾಸ್ಯದಿಂ ವಿಗೆ ಮುಗುಳ್ನಗೆಯಂ (ಕುಸುಮಾ. ೫-೦೩೮) ; ಕಾಂತೆಯರ್ ಬರೆ ಕಟಾಕ್ಷಮಂ ಚೆಲ್ಲುತುಂ (ನಂಬಿರ. ೧೦-೪); ಬಿಲ್ಲನೊದಱಿಸಿ ವೈರಿಭಟರಿಗೆ ಚೆಲ್ಲಿದನು ಭೀತಿಯನು (ಕುಮಾ.ದ್ರೋ. ೦೮-೩) ; ಮಲ್ಲಿಗೆಯರಳ್ಗೂಡಿ ಪಾಲ್ಗಳಿದಂದದಿ ಚೆಲ್ಲಿತು ಬೆಳುದಿಂಗಳಿಳೆಗೆ (ಮೋಹತ. ೦೮-೦೦೨) ; ಆ ದಿನ ಮಳೆಯಿಲ್ಲದ ಸ್ವಚ್ಛ ಬಿಸಿಲು ಚೆಲ್ಲಿದ ದಿನ (ಗಿರಿಜಾ. ೦). ೨. ಘುಳುಘುಳಿಸಿ ಬರ್ಪ ಮತ್ತಗಜಮಂ ಭೋಂಕನೆ ಕಂಡು . . . ಮಕ್ಕಳೆಲ್ಲಂ ಚೆ[ಪಾಠಾಂ. ಚ]ಲ್ಲಿ ಪೋಗೆ (ನಂಬಿರ. ೨-೨೬) ; ಅಂಬರದ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ (ತೊರವ. ೯-೪-೦೭) ; ವಿಸ್ಮಯಂಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂಕ್ಷೈಸಿಕೊಂಡು (ರಾಜಶೇ. ೬-೬೧ ವ). ೩. ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲ ಮಾಡುತ್ತುಂ (ಅರ್ಧನೇ. ೧-೯೨ ವ) ; ಮರುಗದ ಮಡಿಯೊಳ್ ಕತ್ತುರಿಯಂ ಚೆಲ್ಲು (ನಂಬಿರ. ೧೪-೩೮). ೪. ನಿನ್ನ ಕೈಯೊಳಗಿನ ಕೋಲು ಇತ್ತ ಕಡೆಗೆ ಚೆಲ್ಲು (ಮುಂಬಯಿ. ೩-೦೧೯). ೫. ಸಕಲಭಂಡಾರವನು ಭೂಸುರನಿಕರದಲಿ ಚೆಲ್ಲಿದನು (ಕುಮಾ.ಆ. ೪-೨೨). ೬. ತೆಗೆದೀಂಟೆ ಜಲವಂ ಬಿಡೆ [illegible] ತೀವಿಕೊಂಡು ಚೆಲ್ಲುವ ಪದದೊಳ್ (ಗಿರಿಕ. ೦-೦೨೦) ; ಮಸಗೆ ಮೊಗೆದನು ಹೊಗುವ ಸೇನಾಪ್ರಸರವನು ಕುಡಿತೆಯಲಿ ಚೆಲ್ಲಿದನಸಮಬಲನಡಹಾಯ್ದುಕೊಂಡನು ನೆಲನನಳವಿಯಲಿ (ಕುಮಾ.ಕ. ೧೨-೨೩). ೮. ಚೆಲ್ಲಿದರು ಒಬ್ಬರೊಬ್ಬರಿಗೆ ಜೀರಿಗೆವೆರಸು ಬೆಲ್ಲವಂ (ಸಿದ್ಧರಾ. ೮-೮೮) ; ಮಲ್ಲಿಗೆ ದಾಸಣ ಹೂವ ಸಂಪಗೆಯಂತೆ ಚೆಲ್ಲಿತು ಬಣ್ಣಗೂಳುಗಳ (ಮೋಹತ. ೦೫-೩೬) ; ಮಂಕುಬೂದಿಯನ್ನು ಚೆಲ್ಲಿದಳು (ಹಾಹುತ್ತ. ೯೫). ೯. ವರ್ಷಿಸು ; ಸುರಿ : ಕುಳ್ಳಿದರ್ಪರ ಮುಖದೊಳಂ ಕಣ್ಗಳಂ ಮಯ್ಯೊಳಂ ತುಷ್ಟಂ ಚೆಲ್ಲೆ (ನಂಬಿರ. ೬-೪೨) ; ಚೆಲ್ಲಿದವು ಸಹದೇವ ಶಿರದಲಿ ಮಲ್ಲಿಗೆಯ ಮೊಗ್ಗೆಗಳ ಮಳೆ (ಕುಮಾ.ಸ. ೯-೬೫). ೧೦. (ಬಾಣ ಮೊದಲಾದುವನ್ನು) ಪ್ರಯೋಗಿಸು,– ಬಿಡು : ಚೆಲ್ಲಿದರು ಕೂರಂಬುಗಳನೆಡದಲ್ಲಿ ಬಲದಲಿ ಹಿಂದೆ ಮುಂದೆಸೆ ಝಲ್ಲರಿಯ ಶರಜಾಳ ಝೊಂಪಿಸಿತಬುಜಸಖಸುತನ (ಕುಮಾ.ಕ. ೦೦-೩೫). ೧೧. ಬೀಸು; ಆಡಿಸು : ಚಾಮರ ಛತ್ರ ಕುಂಚ ಸಿತಚೌರಿಯ ಚಮತ್ಕಾರದಿಂ ಚೆಲ್ಲುವಾ ಮಡದಿಯರು ಯಿಕ್ಕೆಲದಿ ನಿಂದು (ನವಮೋ. ೦೦-೦೭). ೧೨. ಚಾಚು ; ನೀಡು : ಅವಯವಂಗಳನಲ್ಲಿ ಚೆಲ್ಲಿದಳು ಛಲದಿಂದೆ (ಶಾರಿರ. ಹ. ೫೭-೩೦) ; ಆಕಾಶದ ಸುತ್ತೆಲ್ಲ ನೋಡಿ ಕೈಮುಗಿದು, ಚೆಲ್ಲಿದ ಗೋಣಿನಿಂದ ದಿಕ್ಕುಗಳನ್ನೆಲ್ಲ ಕೇಳುವಂತೆ ಮಾಡಿದನು (ಪಾವಕ. ೩) ; ಬೆಂಚಿನ ಕೆಳಗೆ ಕೈಕಾಲು ಚೆಲ್ಲಿದ (ಕುರಿಹಿಂ. ೦೨೨). ೧೩. ಕಳೆ ; ನೀಗು : ಕಲ್ಲೆಗಡೆದವು ಕರಿಗಳಸುಗಳ ಚೆಲ್ಲಿದವು ತೇಜಿಗಳು (ಕುಮಾ.ಭೀ. ೭-೨).

**ಚಲ್ಲಬಡಿ, ಚಲ್ಲವಡಿ, ಚೆಲ್ಲಬಡಿ** = ಚದರಿಹೋಗುವಂತೆ ಹೊಡೆ ; ಚೆಲ್ಲಾಪಿಲ್ಲಿಯಾಗುವಂತೆ ಬಡಿ : ಅಲ್ಲಿ ಬಂದ ಮೃಗವಂ ಚ[ಪಾಠಾಂ. ಚೆ]ಲ್ಲಬಡಿವುತಂ (ಶಬ್ದರ. ಹ. ೩೫-೨೦) ; ಅಲ್ಲಿ ನೆರೆದಾ ಕ್ಷತ್ರವರ್ಗವ ಚಲ್ಲಬಡಿದು (ಕುಮಾ.ಆ. ೨-೩೩) ; ಚಲ್ಲಬಡಿವೆ ತನ್ನ ಸೇನೆಯ ಕರೆಯೊ ನಮ್ಮೆಲ್ಲ ವ್ಯಂತರಿಗರನು (ಭರತೇ. ೨೪-೪೬) ; ಕಾಪಿನವರನು ಚಲ್ಲಬಡಿದು (ರಾಮಾಸಂ. ೬-೬-೪೧) ; ಮಾವು ಬನದೊಳಗೆ ಮೃಗರೆದಮಾ ತುಂಬಿಗಳು ಚಲ್ಲವಡಿದಂತೆ ದೆಸೆದೆಸೆಗೆ ಪಾಱಿ . . . ಬರುತಿರ್ದಳಂತಾ ಭವಾನಿ (ವೀಕೃಪು. ೨-೪-೨೦) : ಸುರಬಲಂಗಳಂ ಚಲ್ಲವಡಿದಣ್ಣನಂ ತೋಱಿತೋಱಿನುತ್ತೆ (ಚಬಪು. ೩೦-೪೬) ; ಸುಶರ್ಮನವದಿರ ಚೆಲ್ಲಬಡಿದನು ದಳದ ನಾಯಕರೆಲ್ಲರಿಗೆ ಸವಿದೋಱಿದನು ಬಲುಗದೆಯ ಹೊಯ್ಲುಗಳ (ಕುಮಾ.ಶ. ೦೫-೩೪) ; ಮುಱಿಮುಳಿಯವನೆಲುಗಳ ಚೆ[ಪಾಠಾಂ. ಚ]ಲ್ಲಬಡಿ ಮೋದೆನುತ ಕಂಗಳು ದಳ್ಳುರಿಯನುಗುಳಲ್ಕೆ (ನಿಘಾಗ. ೫-೧೦-೭) ; ಉಱುಬುವ ರಥಾರೂಢರಂ ದೆಸೆದೆಸೆಗೆ ಚೆಲ್ಲಬಡಿದು . . . ಮತ್ತವನ ಚಾಪಮಂ ಕೋಪದಿಂ ಖಂಡಿಸಿದನು (ಚಬಪು. ೩೯-೨೦) ; ವೈರಿಗಳನು ಚೆಲ್ಲಬಡಿದು ದೆಸೆಗಟ್ಟಿ ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂಱೆಯಾಡಿದನು (ಕಂನವಿ. ೩-೫೬). **ಚಲ್ಲವರಿ, ಚಲ್ಲುವರಿ, ಚಲ್ಲೆವರಿ, ಚೆಲ್ಲವರಿ, ಚೆಲ್ಲುವರಿ** = ಹರಡು ; ಚದರು ; ವಿಸ್ತಾರವಾಗಿ ವ್ಯಾಪಿಸು ; ಚೆಲ್ಲಾಪಿಲ್ಲಿಯಾಗು : ನೆಲ್ಲಿಯಕಾಯ್ಗಳ ಹೆಗ್ಗದಿಗೆ

ಯೊಳಿಡೆ ಚಲ್ಲವರಿದು ಬೀಳುವಂತೆ ಬಲ್ಲಿದ ಶಾನರು ಚಿಗಿದು ಬಟ್ಟಾಕ್ಷಣ ಹಲ್ಲ ಕಿರಿದರಗಳೊಳಗೆ (ಶಂಸವಿ. ೦೯-೬೯) : ನೆಗೆವ ವ್ಯಗೇಂದ್ರಗಳಿಂ ಚಲ್ಲವರಿದ ಪುಲ್ಲೆಗಳಿಂ ಸಮ್ಮರ್ದಂಬಡೆವ ಪೊಮ್ಮಟೆಗಳಿಂ (ರಾಜಶೇ. ೧-೧೩೩ ವ); ಪುಲಿ ಬರವ ಕಾಣುತೆ ಹರಿಣಚಯ ಚಲ್ಲವರಿದಂತೆ ತರುಣಿಯರು ಯಿರದೆ ಮುರಿದೋಡುತ್ತೆ . . . ಇರಲು (ನವಮೋ. ೦೦-೬೩) ; ನಾಡೆಲ್ಲ ಹಸಿರು ದೆಳೆಗಳಿಂದ ತುಂಬಿ ಎಲ್ಲೆಲ್ಲಿಯೂ ಚೆಲುವು ಚಲ್ಲವರಿದಿತ್ತು (ಜೀವರಂ. ೫೦) ; ಚಲ್ಲುವರಿದ ಹೆಳಲಿನ ತುದಿ ಎಷ್ಟು ಮನೋಹರ (ಕಂದುಟ. ೬೦) ; ಅಲ್ಲಿ ಸಿಡಿಲುಗಳೆರಗಿದಂದದಿ ಬಲ್ಲಿದರ ಹರಿಗೆಗಳು ಮೊಳೆಗಲು ಚ[ಶಾಕಾಂ. ಚೆ]ಲ್ಲೆವರಿದಿಟ್ಟಾಡಿದುದು ಯಾದವರ ಪರಿವಾರ (ಕೃಷ್ಣಭಾ. ೧೯-೦೩) ; ತೆಲ್ಲಿಗರ್ ಬಿಲ್ಲಂ ಕಂಡ ಕಾಗೆಯಂತೆ ಚೆಲ್ಲದಾರಿಯೆ (ಧರ್ಮಾಮೃ. ೨-೬೯) ; ಪುಲ್ಲಶರನ ಮಾರ್ಬಲ ಬನದೊಳು ಪೊಕ್ಕು ಚೆಲ್ಲವರಿದು ಪೀಡಿಸಲು ಪಲ್ಲವಿಸಲು ಸದನದೊಳಿರ್ದ ರಿಸಿಗಳು ಗಲ್ಲಕೆ ಕರವ ಸಾರ್ಚಿದರು (ಮೋಹತ. ೬-೦೦) ; ದಿಕ್ಕುದಿಕ್ಕಿಗೆ ಚೆಲ್ಲವರಿದುದು ಪಾಯ್ದಳ (ನಾಗಳು. ೧೯-೬೬) ; ನೆಟೆ ಚೆಲ್ಲುವರಿದು ಸೂಸುವ ಕಣ್ಮವಣೆಯೆನಿಸಿ ಮೆಟೆದರಲ್ಲಿಯ ವಾರನಾರಿಯರು (ಭಕ್ತಾಢ. ೨-೮) ; ಕೈಗೆ ಸಿಕ್ಕಿದ ಗ್ರಂಥಗಳನ್ನು ತೆಗೆದುಕೊಂಡು ದಿಕ್ಕುದಿಕ್ಕಿಗೆ ಮತಾನುಯಾಯಿಗಳು ಚೆಲ್ಲುವರಿದಾಗ ಎಷ್ಟೋ ನಾಶವಾದುವು (ಕೂನ್ನಳು. ೧೬, ಹಿನ್ನೆಲೆ). **ಚಲ್ಲೆಪೊಯ್** = ಚೆದರುವಂತೆ ಹೊಡೆ: ಪೊದಜುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲೆಪೊಯ್ದು ನಖದಿಂ ನಲಿಗೆದಚಿ (ಅನಂಪು. ೬-೮೦ ವ). **ಚೆಲ್ಲಿಕೊಡು** = ಬಿಟ್ಟುಬಿಡಂ ; ಬಿಸುಡಂ : ಮನವೇಲ ಹುಡುಗೆಯನ್ನು ತನ್ನ ಅಪ್ಪುಗೆಯಿಂದ ಚೆಲ್ಲಿಕೊಟ್ಟು . . . ಅಲ್ಲಿಂದ ಜಾರಿಕೊಂಡ (ಅದೋಟೀ. ೦೯) ; ಆವೇಶ ಬಂದವಳಂತೆ ಹೊದಿಕೆಯನ್ನು ಚೆಲ್ಲಿಕೊಟ್ಟು ಹಾಸಿಗೆಯಲ್ಲಿ ಎದ್ದು ಕುಳಿತಳು (ಮೂರುದಾ. ೨೬೬). **ಚೆಲ್ಲಿಕೊಳ್** = ಎರಚಿಕೊಳ್ಳು ; ಸುರಿದುಕೊಳ್ಳು : ತುಟಾಗಿದ ಕಾಯಿವಣ್ಗಳ ಸಾಲವೃಕ್ಷವ ಮುಟಿದು ದೂಳಿಯ ಚೆಲ್ಲಿಕೊಳುತ . . . ಬಂದುದು ಬಿಜಾಗಾಳಿ ಮದಗಜದಂತೆ (ಮೋಹತ. ೮-೩೬) ; ಕೇತಕಿಯರಳ ಧೂಳ್ಗಳ ಚೆಲ್ಲಿಕೊಳುತಳಿವ್ರಾತಕಲರ ಮಧುಮದವ ಪ್ರೀತಿಯಿಂದೀಯುತನಿಲದಂತಿ ವನದೊಳಗಾತುರದಲಿ ಚರಿಸಿದುದು (ಶಂಸವಿ. ೯-೯).

[ ದೇ.$_1$ ತಮಿ. ತುಳು. ಚಲ್ಲು ; ಕೊಡ. ಚೆಲ್ಲ್ : ತೆಲು. ಚಲ್ಲು ]

**ಚಲ್ಲು$_2$** 'ಸೆಳ್ಳು$_1$' ನೋ.

**ಚಲ್ಲು$_3$** 'ಚಲ್ಲ$_1$' ನೋ.

**ಚಲ್ಲುಚಾಲು** (ನಾ). ಗಾಂಭೀರ್ಯವಿಲ್ಲದ ನಡವಳಿಕೆ; ಕೆಟ್ಟಚಾಳಿ ; ಹೀನವಾದ ನಡತೆ: ಸತ್ತ ಹೆಣದ ಹೆಬ್ಬೆಟ್ಟಿನ ಗುರ್ತನ್ನು ಹಾಕಿ ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಜಾರಿಗೆ ಸ್ವತ್ತು ಸೇರುವಂತೆ ಮಾಡಬಾರದು (ಹುಟ್ಟಿಹ. ೧೩೬).

[ ಚಲ್ಲು$_3$ (<ಚಲ್ಲ$_1$) + ಚಾಲು ]

**ಚಲ್ಲುತನ, ಚೆಲ್ಲುತನ** (ನಾ). ಗಾಂಭೀರ್ಯವಿಲ್ಲದಿರುವಿಕೆ ; ಲಲ್ಲೆಗಾರಿಕೆ ; ಲಘುಮನೋಭಾವ: (ಕ). **ಚೆಲ್ಲುತನ:** ಇವೆಲ್ಲಾ ದೇವಸ್ಥಾನದ ಆವರಣದಲ್ಲಿವೆ ಅಂತ ಮೊದಲೇ ಒಂದು ಪೂಜ್ಯಭಾವನೆಯ ಪಕ್ಷಪಾತ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿರುವದರಿಂದ, ನೋಡುವ ಕಣ್ಣಿಗೆ ಅದರಲ್ಲೇನೂ ಚೆಲ್ಲುತನ ಕಂಡುಬರುವುದಿಲ್ಲ (ಕಲ್ಲಿಶಾ. ೬): ಹಿಂದಿನ ಚೆಲ್ಲುತನವೆಲ್ಲ ಈಗ ಅಡಗಿದೆ (ಹುಂಪಾ. ೨೬೬).

[ ಚಲ್ಲು$_3$ (<ಚಲ್ಲ$_1$) + – ತನ ]

**ಚಲ್ಲುಬಡಿ** (ಕ್ರಿ). ಲಲ್ಲೆಯಾಡಂ; ವಿಲಾಸಮಾಡಂ: ಆ ಉಡುಗಿ ಕಂಡಕಂಡ ಗಂಡಸರ ತಾವ ಚಲ್ಲುಬಡೀತೈತೆ. ಇದೇನು ಚಂದವಾ ? (ಶಂಕರ. ೬೦).

[ ಚಲ್ಲು$_3$ (<ಚಲ್ಲ$_1$) + ಬಡಿ$_1$ ]

**ಚಲ್ಲುವಡು** (ಕ್ರಿ). ವ್ಯಾಪಿಸು ; ಆಕ್ರಮಿಸು: ಎಲ್ಲ ನಾಡುಗಳ . . . ಚಲ್ಲುವಡುತ ಗಡಿಸೆಟಿಗೆ ಪರಿದು (ಚಿಳಸ. ೦೯). [ <ಚಲ್ಲು$_1$ ? ]

**ಚಲ್ಲೆ$_1$** 'ಚೆಲ್ಲೆ' ನೋ.

**ಚಲ್ಲೆ$_2$** 'ಚಲ್ಲಿ$_3$' ನೋ.

**ಚಲ್ಲೆ$_3$** 'ಚಲ್ಲ$_1$' ನೋ.

**ಚಲ್ಲೆಗಣ್** 'ಚೆಲ್ಲೆಗಣ್' ನೋ.

**ಚಲ್ಲೆಗಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲೆನೋಟ, ಚೆಲ್ಲೆನೋಟ** (ನಾ). ಸರಸವಾದ ನೋಟ ; ಸೊಬಗಿನ ನೋಟ ; ವಿಲಾಸದ ದೃಷ್ಟಿ : ಚಲ್ಲೆನೋಟದಿ ರಂಗಕೇಳಿಯನೆಸಗೆಂಬ ವಲ್ಲಭೆಯೆಂದು ವಂದಪಳೊ (ಕಕಶಾಂ. ೨೩-೧೨). **ಚೆಲ್ಲೆನೋಟ:** ಮೆಲ್ಲಾತುದೋಟುತೊಯ್ಯನೆ ಚೆಲ್ವಿನೊಳಂ ಚೆಲ್ಲೆನೋಟಮಂ ಚೆಲ್ಲುವೆನೋ (ಚಿಕವಿ. ೬-೨೧೩). [ ಚಲ್ಲೆ$_3$ (<ಚಲ್ಲ$_1$) + ನೋಟ ]

**ಚಲ್ಲೆಹ** 'ಸಲ್ಲೆಹ' ನೋ.

**ಚಲ್ವ** 'ಚೆಲ್ವ' ನೋ.

**ಚಲ್ವಿಕೆ** 'ಚೆಲ್ವಿಕೆ' ನೋ.

**ಚಲ್ವು** 'ಚೆಲ್ವು$_1$' ನೋ.

**ಚಲ್ವೆ** 'ಚೆಲ್ವೆ' ನೋ.

**ಚವ$_1$** 'ಚೆವು' ನೋ.

**ಚವ$_2$, ಚವ್ವ$_3$, ಚೌ$_1$** (ನಾ). (ಉಕ) ೧. ರುಚಿ ; ಸೊಗಸು : ನಾಲಗೆಗೆ ಚವ ಇಲ್ಲ, ಏನೂ ಬೇಡ (ಕೂಂ). **ಚವ್ವ$_3$:** 'ಚವ್ವಗೆಡು' ನೋ. **ಚೌ$_1$:** ೨. ಚೆನ್ನಾಗಿರುವುದಂ; ಉತ್ತಮಸ್ಥಿತಿ; ಸುಖ; ಚೈನಿ (ಉಕ): ಎಲ್ಲರಿಗಿಂತ ಚೌ ಇರೋದು ನಂದು. ಆಳಿದ್ದಾವ ರಾಜಾ ಆಗೇನಿ (ಪ್ರೇಮೂಕ್ರ. ೨೬೩). ೩. (ಆಲಂ) ಮಾತಿನಲ್ಲಿ ಗೌರವ,–ಘನತೆ (?): ಏ ಚೌ ಅದ ಏನ ಬಾಯಾಗ ? ಒಳಗ ಹೊರಗ ಯಾರ್ಯಾರ ಕೇಳ್ಯಾರಂಬೂ ಅಂಜಿಕೀ ಅಳಕಾ ಏನೂ ಇಲ್ಲೇನು ನಿನಗ? (ದೀಪನಿ. ೫೦).

[ ←ಮರಾ. ಚವ್ ]

**ಚವಂಗ** (ನಾ). ಒಂದು ಬಗೆಯ ಆಟ ; ಚೌಕಾಬಾರದ ಆಟ; ಚಕ್ಕದ ಆಟ (ಉಕ): ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗಾಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೬೯). [ ? ]

**ಚವಕ** 'ಚೌಕ$_2$' ನೋ.

**ಚವಕಿ** 'ಚೌಕಿ' ನೋ.

**ಚವಚವನೆ** (ಅ). ಮೆಲ್ಲಮೆಲ್ಲನೆ (?) : ಶಿವಸಿದ್ಧಿಯನು ನೀವು ನಿಮ್ಮೊಳಿಕಂಡನುಭವಿಸಿದೊಡಹುದೆ ದೇವಿಯರೆ ನವಗಿಷ್ಟು ಬುದ್ಧಿಗಲಿಸಿಯೆಂದುಗಲ್ಲವ ಚವಚವನಲುಗಿ ಕೇಳುವನು (ಭಕಚ. ೯೩-೫೯).

[ ಚವಚವ$_0$ + – ಅನೆ$_1$ ]

**ಚವಟ** 'ಚೌಟ' ನೋ.

**ಚವಡಿ** 'ಚಾವುಂಡಿ' ನೋ.

**ಚವಡಿಕಿ** (ನಾ). ಒಂದು ಕ್ಷುದ್ರದೇವತೆಯ ಹೆಸರು: ಎಲ್ಲಾಯಿಯಕನಾತಿ ಬನದ ಶಂಕರಿ . . . ಕಲ್ಲದ ಚವಡಿಕಿ ಮಾರಿಮಸಣಿ (ವಿಶಾಸು. ೫೮-೨). [ <ಸಂ. ಚಾಮುಂಡಿಕಾ ]

**ಚವಡಿಕೆ, ಚೌಟಗಿ, ಚೌಡಕಿ, ಚೌಡಿಕೆ** (ನಾ). ಒಂದು ಬಗೆಯ ಚರ್ಮವಾದ್ಯ ; ಒಂದು ಕಡೆಗೆ ಚರ್ಮದ ಆವರಣವಿದ್ದು, ಉದ್ದವಾದ ಹಿಡಿಕೆಯೂ, ಚರ್ಮದ ನಡುವಿನಿಂದ ಒಂದು ತೆಳ್ಳಗಿನ ಹುರಿಯೂ ಜೋಡಿಸಲ್ಪಟ್ಟಿರುವ ವಾದ್ಯ : (ಕ). **ಚೌಟಗಿ:** ಗೊಂದಲದವರು ಬಂದು ಚೌಟಗಿ ಬಾರಿಸಿಕೊಂಡು 'ಜೇಜೇ' ಅಂತ ಹೇಳ್ತಾರಲ್ಲ, ಕೇಳಿದೀಯೇನು ? (ಚಿಳುಮು. ೮೩). **ಚೌಡಕಿ:** ಗೊಂದಲಿಗರು . . . ಇಬ್ಬರು

ಮೂವರು ಕೂಡಿ, ಸಂಬಾಳ, ಚೌಡಕಿಗಳನ್ನು ಬಾರಿಸುತ್ತಾ, ಭವಾನಿಯ ಹಾಡುಗಳನ್ನು ಹಾಡುತ್ತಾ, ಭಿಕ್ಷೆ ಬೇಡುವರು (ಕಥಾಗಿ. ೨೦೦) ; ಚೌಡಕಿಯ ನಾದ, ಸುತಿಯ ಸೂರು, ತಾಳ ಹೆಜ್ಜೆಗಳ ಗತ್ತಿನ ಕಡಿತ (ಪೆಟ್ಟು) . . . ಇಂಪಾಗಿ ಇನ್ನಷ್ಟು ಕೇಳಬೇಕೆಂದೆನಿಸುವುದು (ಕನ್ನಜಾ. ೧೩). **ಚೌಡಿಕೆ:** “ಚವಡಿಕೆ (ಚೌಡಿಕೆ)–ಸುತಿ” (ಜಾನಕೋ.' ೫೫).

[ ←ಮರಾ. ಚವಂಡಕೀ, ಚೌಂಡಕೀ, ಚೌಂತಕೀ ]

**ಚವತಿ** ‘ಚೌತಿ’ ನೋ.

**ಚವತಿಚಂದ್ರ** ‘ಚೌತಿಚಂದ್ರ’ ನೋ.

**ಚವರ, ಚಉರ, ಚವಲ$_{1}$, ಚವುರ$_{1}$, ಚವುಲ, ಚೌರ$_{2}$** (ನಾ). ೧. ಚಮರ; ಚಾಮರ: “ಚವರಂ ಚಾಮರಮಂತದು” (ಚತುನಿ. ೯೩) : ಮಂಗಳಾರತಿಯಿತ್ತು ಚವರ ಸೀಗುರಿಯಿಕ್ಕಿ (ಬಸಕ. ೩-೮೧) ; ನೆರೆದಲರ ಚವರಮಂ ಬಿತ್ತರದಿಂ ಬೀಸುತ್ತುಮಿರ್ದರ್ (ಕಬ್ಬಿಕಾ. ೦೩೮) ; ಪಿಡಿದರಳ್ ಸತ್ತಿಗೆಗಳಿರಡೆರಳ್ ಚವರಗಳ (ಚಂಚಪು. ೪೭-೩೭) ; ಚವರದ ಕುಂಚದಾರತಿಯ . . . ಬೋನವಮಂ ಸವಿವಡಿಯುಡುವಾಳಿಯರುಮಂ ಪದೆದಿತ್ತಳವಳ್ ವಿಳಾಸದಿಂ (ರಾಜಶೇ. ೯-೩೯). **ಚಉರ:** ೧. ಧಾರೆಯಾಱದು ಕೊಟ ಹಳಿ ಚಂನ ಮಾಡಲಾಗಿ ಚಉರ ಮರಿಯಾದಿಯಲು (ಎಕ. X(೧), ಕೋಲಾರ. ೦೪೮-೧೭ ; 1582). **ಚವಲ$_{1}$:** ೧. ಜನಿತ ವಿದ್ಯಾದೇವತೆಯರಾ ವನಿತೆಗಾಳಿಯರಾಗಿ ಬೆಳ್ಳಿರೆಯನು ಗಳಿಸಿ ಕೊಡೆವಿಡಿದು ಥಾಳಿಸಿದರು ಚವಲಗಳನು (ಸಾಳ್ವಭಾ. ೩೦-೨೭) ; ಕರಿಯುವ್ವಾಗೆ ಥೊರೆಗಾಳು ಬೀಸ್ಯಾಕು ಚವಲಾವ (ಹುಬ್ಬಿಹ. ೪೫). ೨. ಚಾಮರ ಬೀಸುವ ಊಳಿಗ: ಅಕ್ಕಸಾಲೆಯ ಕಾಳಯ್ಯ ಕಾಲಾಳು ಚವಲದ ಚಿಕ್ಕ (ನಾಗಕು. ೦೬-೨೬). **ಚವುರ$_{1}$:** ೧. ನನ ತಮ್ಮ ಎತ್ತರಿಸಿ ಬೀಸೋ ಚವುರವ (ಗರತಿ. ೪೦). **ಚವುಲ:** ೧. ಹಾಸವೊಜ್ಜುರದ ಹಲಗೆಯ ತುಳಸಮ್ಮ ಬೀಸವ್ವ ಬೆಳ್ಳಿ ಚವುಲವ (ನಾಪದ. ೧೪). **ಚೌರ$_{2}$:** ೧. “ಚೌರಮನೆ ತಾಂ ಬರ್ಕು ಚಾಮರಕೆ” (ಕಶಿರ. ೩೭) ; ಚೌರ ಬೀಸುತ್ತಿದ್ದವು ಚೌರ (ಅಮನಿ. ೫).

**ಚವರ ಬೀಸು**=೧. ಚಾಮರದಿಂದ ಗಾಳಿ ಹಾಕು. ೨. (ಅಲಂ) ಪೊರಕೆಯಿಂದ ಹೊಡೆ: ಇನ್ನೂ ನಿಮಗೆಷ್ಟು ಚವರಾ ಬೀಸಲೀ ಎಂದು ಕಸ ಉಡುಗುತ್ತ ಕಸಬರಿಗೆ ಸುಮ್ಮನೆ ಮೇಲೆ ಮಾಡಿದೆ (ಹುಚ್ಯಾಟ. ೫).

[ <ಸಂ. ಚಾಮರ ]

**ಚವರಂಗ** ‘ಚೌರಂಗ’ ನೋ.

**ಚವರಬೊಂಬಾಳ, ಚವಲಬೊಂಬಾಳ, ಚೌರಬೊಂಬಾಳ** (ನಾ). ರಾಜಯೋಗ್ಯವಾದ ಚಾಮರದ ಅಲಂಕಾರವುಳ್ಳ ಒಂದು ವಿಶೇಷ ರೀತಿಯ ಅಂದಣ,–ಪಾಲಕಿ: ಚವರಬೊಂಬಾಳ ಪಟ್ಟದ ರಾಜಗಲ್ಲದೆ ಯುವರಾಜಗುಂಟೆ ಲೋಕದೊಳು (ಭರತ. ೮೦-೨೭). **ಚವಲಬೊಂಬಾಳ:** ಧವರೋಗಹರ . . . ಲಲಿತ ಚವಲಬೊಂಬಾಳವನೇಱ ಮೆಲ್ಲಡಿಯಿಟ್ಟ ವಿವರವನೇನ ಬಣ್ಣಿಪೆನು (ಮೋಹತ. ೪೨-೨೨) ; ಚವಲಬೊಂಬಾಳವನಿಳಿದ ಮಾಧವನು (ಮೋಹತ. ೪೨-೩೭). **ಚೌರಬೊಂಬಾಳ:** ಒಪ್ಪುವ ಚೌರಬೊಂಬಾಳವಡರ್ದು ದಿಗ್ವಿಜಯಕ್ಕೆ ಪೊಱಮಟ್ಟ (ರಾಘಕ. ೧೯-೫೭).

[ ಚವರ + ಬೊಂಬಾಳ ]

**ಚವರಿ, ಚವಲಿ$_{1}$, ಚವುರಿ, ಚವುಲಿ, ಚೌರಿ$_{1}$, ಚೌಲಿ$_{1}$** (ನಾ). ೧. ಚಮರೀಮೃಗದ ಕೂದಲು: ತನ್ನ ಬೆನ್ನೊಳ್ ಪರೆದೊಪ್ಪುವ ಕೇಶಪಾಶಂ ಕಱಿಯ ಚವರಿಯಂ ಕಟ್ಟಿದಂತೆ (ಆಗವಿ. ೧೭-೧೩೩) ; ಬಾಲದ ಮೇಲಿನ ಕೂದಲು ಚವರಿಯಂತೆ ಒಪ್ಪುವವು (ಮುಂಬಯಿ. ೩-೫೫). ೨.= ಚವರ೧: ಬಿರುದಿನ ಬಿಳಿಯ ಚವರಿಯ ಬೀಸಿ ಮಲೆತರ ತಲೆಯ ಶೂಲದೊಳೆತ್ತಿ (ಕುಮ್ಯಾವಿ. ಒರಿ೩. ೬-೩೦) ; ಚವರಿ ಸೀಗುರಿ ಮುಂದೆ ಯುವತಿಯರ್ ಕುವರರು (ಭೈರವೇ. ೨-೬೧) ; ಮಹಾರಾಜರವರು ತಮ್ಮ ಭುಜಬಲದಿಂದ ಸಂಪಾದಿಸಿದ . . . ಸೂರೇಪಾನ, ಚವರಿ, ಪಟಪಾವಡೆ ಮುಂತಾದ ಬಿರುದುಗಳನ್ನು ಹಿಡಿದಿದ್ದರು (ಕಾಮಮಂ. ೩೩); ತಂಗಾಳೀಯಾ ಕೈಯೊಳಗಿರಿಸೀ ಎಸಳೀನಾ ಚವರಿ (ಗರಿ. ೨-೪). ೩. ಹೆಂಗಸರು ಕೇಶಶೃಂಗಾರಕ್ಕೆಂದು ಜೋಡಿಸಿಕೊಳ್ಳುವ ಕೂದಲ ಕುಂಚ್ಚು: ಗಂಗಾವನ (ಉಕ) ಅವಳ ಜಡೆ ಚಿಕ್ಕದಾದುದರಿಂದ ಚವರಿ ಸೇರಿಸಿಕೊಂಡು ಜಡೆ ಹೆಣೆದುಕೊಳ್ಳುತ್ತಾಳೆ (ರೂಢಿ). **ಚವಲಿ$_{1}$:** ೨. ಕಂದಾಟರದ ಕಾಗಕೆ ಕಳಿಹಿದಲಿ ಪರಬಳಸಿಂಗದ ಮೇಲೆ ಬಿಳಿಯ ಚವಲಿಯ ಕಟ್ಟ (ಎಕ. VIII, ಸಾಗರ. ೦೦೪-೬ : 1329?). ೩. ವನಿತಾ ಚೊಲ್ಲಹಕಂ ಚವಲಿಯಹುದೆ ಚೂಡಾರತ್ನ (ನೀತಿಸಾ. ೯೮೯). ೪. ತಲೆಯಲ್ಲಿ ಧರಿಸುವ ಒಂದು ಆಭರಣ: ಅಲರು ಚವಲಿ ಬೈತಲೆವಣಿ ಮುತ್ತಿನ ಬಲೆಯಿಲ್ಲ ಬಂದರೊಷ್ಟದೊಳು (ಭರತ. ೦೭-೨೫) ; ಬೆನಕ ನಿಮ್ಮವ್ವಾಗೆ ಬೆಳ್ಳೀಯ ಶಿವದಾರ ಕುಣಿಕಾಲು ಚವಲೀ ಕೊನೆ ಮುಡಿಯೋ (ಹುಬ್ಬಿಹ. ೩೦); ಹಬ್ಬಿಗಲ್ಲಿ ಮರೆತೆ ಹವಳಾವ ಜಾಣಾನ ಮಗ್ಗುಲಲ್ಲಿ ಮರೆತೆ ಚವಲಿಯ (ಕೃಸರ್ವ. ೦೩೧). **ಚವುರಿ:** ೧. ಸುಮನಃ-ಹುವ್ವು, ವಾಲ-ಚವುರಿಯ (ಜಾಹಟೀ. ೨-೬-೩೫ ವ). ೨. ಕೋಳುಗಳ ನೀಡಿ ಚವುರಿಗಳ ಬೀಸುವ ಹೆಣ್ಣುಗಳ ನಡುವೆ (ವಚಕಾ. ೫೦) ; ಸತ್ತಿಗೆ ಸೀಗುರಿ ಸೂರೆಪಾನ ಕುಂಚ ಚವುರಿ ಬೀಸಣಿಗೆ . . . ಕಣ್ಣೇರವಾದಿ ಬಿರುದುಗಳ್ಗ ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಚಟ್ಯಅ. ೩೦-೮). ೩. ಎಡಗಯ್ಯೊಳ್ ಕೊಟ್ಟರ್ಥದಂತೆ ತಳಿಗೆಯ ಕೂಟನಂತೆ ಮಾಡಿದ ಚವುರಿಯಂತೆ ನೆಲಹಿನ ಮೊಸರಂತೆ (ಧರ್ಮಾಮೃ. ೮-೦೪೨ ಅಱು). ೫. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬಳಕೆಯಲ್ಲಿದ್ದ ಒಂದು ನಾಣ್ಯ: ದುರ್ಗವು ಕೈವಶವಾದ ಮೇಲೆ . . . ಸಿಕ್ಕಿದ ನಾಣ್ಯಗಳ ವಿವರ: ೬,೪೦೦,೦೦೦ –ಬೆಳ್ಳೀನಾಣ್ಯ . . . ೧,೦೦೦,೦೦೦ – ಚವುರಿ (ಚಿತ್ರಪಾ. ೦೦೩). **ಚವುಲಿ:** ೪. ತಿಕೆ ಚವುಲಿ, ಬೈತಲೆವಣಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ (ರೂಢಿ). **ಚೌರಿ$_{1}$:** ೨. ಅಳವಡಿಸಿಕ್ಕಿದಾ ಬಿಳಿಯ ಚೌರಿಗಳುಜ್ವಲಕಾಂತಿ ನೀಳ್ದುಗೊಂದಳಿಸಿರೆ (ಕುಮುಮಾ. ೮-೬೫) : ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕ್ಕೆ ಕೋಱದರು (ಕುವ್ಯಾದ್ರೋ. ೯-೦೭). ೩. ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆಯವ ಮುಡಿ ಚೌರಿಯಂ ಕಾಲ್ಗಟ್ಟು (ಹಕಳಾ. ೪.೯೯) ; ಅಂಗನೆ ಚೌರಿ ಕಾಲಿಗೆ ಕಟ್ಟಿ ಮುಂಗೈಗೆ ತಾಳಿಯ ಬಿಗಿದು . . . ರಂಗನ ಸ್ಮರಿಸುತ ಹೊಱಗೆ ಹೊಱಟಳು (ಪುರಂದ. ೦-೦೧೧-೫). ೪. ಹೆರಳಿಂಗೆ ರನ್ನ ಕೆತ್ತಿಸಿದ ರಾಗಟೆ ಚೌರಿ ಗೊಂಡೆ ಮುತ್ತಿನ ಕುಚ್ಚುಗಳು (ಶ್ರೀಕೃಪಾ. ೧೦). ೬. (ಮಂಟಪ ಮುಂತಾದುವುಗಳ) ಅಲಂಕಾರಕ್ಕಾಗಿ ಕಟ್ಟುವ ಕುಚ್ಚು: ಕಟ್ಟಿದ ಚೌರಿಗಳ್ ಗಗನಮಂ ಮಿಗೆ ಚುಂಬಿಪ ಕೂವಕಂಭಂ (ದಕೆಳು. ೦೨-೫೪) ; ಆಯಿದನು . . . ಕುಣಿವ ಗಂಟೆಯ ಹೊಳೆವ ಹೊಂಗಱಿಯ ಬಾಯಿಧಾರೆಯ ತೈಲಲೇಪನದಾಯತದ ಚೌರಿಗಳ ರಿಪುಭಟನಾಯುಷದ ಕಡೆವಗಲಭುಕ್ತಿಯ ಶಕ್ತಿಯನು ನೃಪತಿ (ಕುವ್ಯಾಕ. ೩-೬೫) ; ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ನಳಚ. ೩-೬). **ಚೌಲಿ$_{1}$:** ೩. ಚೌಲಿ, ಟೇಪು, ಟಿನ್ನು ಮೊದಲಾದುವು ಹೆಂಗಸರ ಕೇಶಾಲಂಕಾರ ಸಾಮಗ್ರಿಗಳು (ರೂಢಿ). [ <ಸಂ. ಚಮರೀ ]

**ಚವರಿಕೊಟ್ಟು, ಚೌರಿಕೊಟ್ಟು** (ನಾ). ಒಂದು ಬಗೆಯ ಚವರಿ ಸೇರಿರುವ ತಲೆಯ ಆಭರಣ; ಚಿನ್ನದ ಕೊಪ್ಪಿನಲ್ಲಿ ಸೇರಿಸಿ ಕಟ್ಟಿರುವ ಚಮರೀಮೃಗದ ಕೂದಲಿಂದ ಮಾಡಿದ ಗೊಂಡೆ; ಚವಲಿತುಂಬು: (ಕ). **ಚೌರಿಕೊಟ್ಟು:** ರೇಗಟೆ, ಕೇದಿಗೆ, ಚೌರಿಕೊಟ್ಟು, ಜಡೆಬಂಗಾರ, ಗೊಂಡ್ಯ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲೆಮಂ. ೩೮). [ ಚವರಿ + ಕೊಟ್ಟು$_{2}$ ]

**ಚವರಿಕೊಪ್ಪು** (ನಾ). = ಚವರಿಕೊಟ್ಟು : (ಕ): [ ಚವರಿ + ಕೊಪ್ಪು$_3$ ]

**ಚವರಿಗೆ** 'ಚರಿಗೆ$_1$' ನೋ.

**ಚವರಿಬಿಜ್ಜಣ** (ನಾ). ಚವರಿಯಿಂದ ಮಾಡಿದ ಬೀಸಣಿಗೆ : ಚವರಿ ಬಿಜ್ಜಣವಿಡಿದು ಬಾಗಿರ್ದ ಮಾಯಕುವರಿ, ಹೆದರುತಂಜುತೆ ಮೆಲ್ಲನೆಯ ಮಾತು ತೆಗೆದಳು (ಶ್ರೀರಾಮಾ. ೬೩೧-೨೫೬). [ ಚವರಿ + ಬಿಜ್ಜಣ ]

**ಚವರಿಮಿಗ** (ನಾ). = ಚಮರೀಮೃಗ: ಮಜ್ಜೆಯಾನೆಗಳ್ ಕಲಂಕಿದ ದಡೆಯಂ ತುದಿವಾಲದಿಂ ಬಟ್ಟಿಪ ಚವರಿಮಿಗಂಗಳಿಂ (ರಾಮಾಶ್ವ. ೪೩-೨೫).

[ ಚವರಿ + ಮಿಗ ]

**ಚವರೀಮೃಗ** (ನಾ). = ಚಮರೀಮೃಗ : "ಸೃಮರಃ–ದೊಡ್ಡ ಚವ[ಪಾಠಾಂ. ಮ]ರೀಮೃಗ" (ಸಿದ್ಧಾಂತಿ. ೦೩೬). [ < ಸಂ. ಚಮರೀಮೃಗ ]

**ಚವರೆ** (ನಾ). (?) : ದೇವಿಯರ ಚವರೆಯಲು × × × ಕಲುಕುಳ (ಸೌತ್ಇ. ೧೯೩೨. ಉಡುಪಿ. ೩೪೨-೩೧ ; ?). [ ? ]

**ಚವರ್ಗ** (ನಾ). [ವ್ಯಾಕ] ಚ, ಛ, ಜ, ಝ, ಞ ಎಂಬ ಐದು ಅಕ್ಷರಗಳ ಗುಂಪು : ಚಟವರ್ಗಂ=ಚವರ್ಗ ಟವರ್ಗಂಗಳ್ (ಶಬ್ದ. ೬೫ ಟೀಕೆ) ; ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾ ವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ (ಮಧ್ಯಪು. ೧೩). [ ಚ + ವರ್ಗ ]

**ಚವಲ$_1$** 'ಚವರ' ನೋ.

**ಚವಲ$_2$** (ನಾ). ಹುಟ್ಟುಕೂದಲನ್ನು ತೆಗೆಸುವುದಂ ; ಮುಡಿ ತೆಗೆಸುವುದು; ಚೌಲಕರ್ಮ; ಜಾವಳ ಇಳಿಸುವಿಕೆ (ಉಕ) : ಹುಟ್ಟಿದಾಗ ಹಾಡುವ ಹಾಡುಗಳಿವೆ; ಚವಲದ ಹಾಡುಗಳಿವೆ (ಜಾನಗೀ. ೦೭); ಮದುವೆ, ಮುಂಜಿ, ಚವಲ . . . ಮಾತೀಯ ಪ್ರೇರಣೆಗಳನ್ನು ಬಿಂಬಿಸುವ ಸಾವಿರಾರು ಹಾಡುಗಳಿವೆ (ಸುವರ್ಣ. ೧೨೫). [ < ಸಂ. ಚೌಲ ]

**ಚವಲ$_3$, ಚವಲಿ$_2$, ಚೌಲ$_2$, ಚೌಲಿ$_2$** (ನಾ). ಎರಡಾಣೆ ಬೆಲೆಯ ಬೆಳ್ಳಿಯ ಒಂದು ಚಿಕ್ಕ ನಾಣ್ಯ : ಒಂದು ಚವಲ ದಕ್ಷಿಣೆ ಕೊಡಬೇಕು (ಕಲುಕ. ೪೭) ; ಅವರದು–ಚವಲದಲ್ಲಿಯ ಡೌಲು ! (ಸುಶ್ರುಮು. ೧೫) ; ಒಂದು ಚವಲ 'ಇನಾಂ' ಎಂದು ತಮ್ಮ ಒಕ್ಕಲುಗಳಿಗೆ ಕೊಡುತ್ತಿದ್ದರು (ಹರಾಪ. ೧೬೦). **ಚವಲಿ$_2$** : ಗೌಡ ಬೇಡಬೇಡವೆಂದರೂ ಎರಡಾಣೆಯ ಚವಲಿ ಯೊಂದನ್ನು ಅವನ ಕೈಯಲ್ಲಿ ತುರುಕಿದರು (ಮುಕುರುಂ. ೪) : 'ಚವಲಿ ಬುಲ್ಲಿಯ ದವಲು' ಎಂಬಂತೆ ವಿಶೇಷ ಆಭರಣಗಳಿಲ್ಲದಿದ್ದರೂ (ಮುಂಗಾರು. ೨೧). **ಚೌಲ$_2$** : ನೀರು ತುಂಬಿದ ಪಂಚಪಾತ್ರೆಯೊಳಗೆ ಒಂದು ಚೌಲವನ್ನು ಚಲ್ಲಿ . . . ವಕ್ರರೇಷೆಯಿಂದ ನೋಡಿರಿ : ಅದು ಪಾವಲಿಯಷ್ಟು ದೊಡ್ಡ ದಾಗಿ ಕಾಣಿಸುತ್ತದೆ (ಮುಂಬಯಿ. ೬-೯೩). **ಚೌಲಿ$_2$** : ಗಡಿಯಾಳಗಳು ತೀರ ಸಣ್ಣವೆಂದರೆ ಚೌಲಿಯಷ್ಟು ಇರುತ್ತವೆ (ಮುಂಬಯಿ. ೩-೮೬).

[ ← ಮರಾ. ಚವಲ್, ಚವಲೀ. / ತಮಿ. ಚವಲ :
ತುಳು. ಚವಲೊ ; ತೆಲು. ಚವಲ ]

**ಚವಲಂಬ** (ನಾ). ಕಣ್ಣವೆ ; ರೆಪ್ಪೆ : "ಚವಲಂಬಮೆಂದು ಕಣ್ಣವೆ" (ಕವಿಕಂ. ೧೮೫); ಪೊಂಗಳೆಯ ಕವಲಂಬಂ ಚವಲಂಬಮಾಡದ ಮುನ್ನಮೋಡುವಿನಂ ಪೋಗೆಬ್ಬಿಂ (ರಾಮಾಶ್ವ. ೧೯೫-೨) ; ಚವಲಂಬವನವಲಂಬಿಸಿ ನಗೆಯು ಕಣ್ಣಾಗೊನೆಗಿದೆ (ಅರಳು. ೪೯೫-೧). [ ? ]

**ಚವಲಬೊಂದಾಳ** 'ಚವರಬೊಂಬಾಳ' ನೋ.

**ಚವಲಿ$_1$** 'ಚವರಿ' ನೋ.

**ಚವಲಿ$_2$** 'ಚವಲ$_3$' ನೋ.

**ಚವಲಿತುಂಬು** (ನಾ). ತಲೆಯಲ್ಲಿ ಧರಿಸುವ ಒಂದು ಆಭರಣ : ಆಕೆ ಚವಲಿತುಂಬು ಹಾಕಿಕೊಂಡಿದ್ದಾಳೆ (ರೂಢಿ).

[ ಚವಲಿ$_1$ ( < ಚವರಿ) + ತುಂಬು$_2$ ]

**ಚವಳಿ, ಚವಳೆ, ಜವಳಿ$_4$** (ನಾ). ಒಂದು ಬಗೆಯ ತರಕಾರಿ ; ಗೋರಿಕಾಯಿ: ಹೀರೆ ಸೌತೆ ಕೂಷ್ಮಾಂಡಕೆಗೆಗೂರಿ ಕಾರಸೆಗದಳಿ ಚವಳಿ ದಾಬಂ ಬಿಜುಸೇಬದ ಮಡಿವಾಗಲ ಹಾಗಲ . . . ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳನೆಡೆಮಾಡಿದಳೆಡೆವಿಡದೆ (ಸುದೇಪು. ೨೭-೬); ಚವಳಿ, ಬದನೆ, ಅವರೆ, ಸವತಿ, ಕೋತಂಬರಿ, ಸಾಸಿವೆ, ಮುಂತಾದ ತೋಟಗಳಲ್ಲಿ ಬೆಳೆಯುವ ಪಲ್ಲೆಕಾಯಿಗಳು (ಕಥಾಗ. ೪೫೬) ; ಗೋವಿನ ಜೋಳದೊಡನೆ ಚವಳಿಯನ್ನು ತುಸು ಕೂಡಿಸಿದರೆ, ಬಾಳಕ ಬಹಳ ಒಳ್ಳೆಯದಾಗುವದು (ಗೋಗ್ರಾಸ. ೬೦). **ಚವಳೆ** : ಚವಳೆ ಹೀರಿ ಹಾಗಲು . . . ಎಂಬ ಕಾಯಿ ಎಲೆ ಪಲ್ಲೆಗಳು (ಮುಂಬಯಿ. ೫-೧೯೫). **ಜವಳಿ$_4$**. 'ಜವಳಿಕಾಯಿ' ಪರಾ.

[ ← ಮರಾ. ಚವಳೀ, ಚಂವಳೀ ]

**ಚವಳಿಕಾಯಿ, ಜವಳಿಕಾಯಿ** (ನಾ). ಗೋರಿಕಾಯಿ: ಅವ್ವ ಝುರಡಿಯೊಳಗೆ ಹಾಕಿಟ್ಟ ಚವಳಿಕಾಯಿ ಆರಿಸುತ್ತ . . . ಕೂತಿದ್ದಳು (ಕೃನಿ. ೨೬೦). **ಜವಳಿಕಾಯಿ** : ಕಡೂರಿನಿಂದ ಉತ್ತರಕ್ಕೆ ಗೋರಿಕಾಯಿಯನ್ನು 'ಜವಳೀ ಕಾಯಿ' ಎನ್ನುತ್ತಾರೆ (ಸುವರ್ಣ. ೨೬೦).

[ ಚವಳಿ + ಕಾಯಿ$_4$ ( < ಕಾಯ್$_4$) ]

**ಚವಳೆ** 'ಚವಳಿ' ನೋ.

**ಚವಿ** (ನಾ). ಹೊಳಪು ; ಕಾಂತಿ : "ಕಳೆಗದಿರು ವಿನುಗು . . . ಬೆಳಗುಂ ಚವಿಯುಂ ತಿಳಿವೆಸರ್ ಕಾಂತಿಗೆ" (ಕಬ್ಬಮಂ. ೦೬) : ನುಡಿಯ ಪಲ್ಗಳ ಚ[ಪಾಠಾಂ. ಛ]ವಿಯುಂ ತುಟಿದಳಿರ ಕೆಂಪುಮೇಂ ಕೆದಱಿದುದೋ (ಅರ್ಜನೇ. ೦-೯೩) ; ಮಿಸುನಿ ರತುನದ ಚವಿ[ಪಾಠಾಂ. ರತ್ನಪ್ರಭೆ]ಗಳಲ್ಲಿ ರಂಜಿಸುವ ಮಂಟಪದೊಳಗೆ . . . ಅವನೀಶನಿದ್ದನು ಸಿಂಹಪೀಠದಲಿ (ನಳಚ. ೪-೨೫).

[ < ಸಂ. ಛವಿ ]

**ಚವಿಕೆ** (ನಾ). ಮೆಣಸಿನ ಜಾತಿಗೆ ಸೇರಿದ ಒಂದು ಔಷಧಿ ಸಸ್ಯ : (ಕ).

[ ← ಮರಾ. ಚವಕ್ ]

**ಚವಿಸು** (ಕ್ರಿ). ತಳತಳಿಸು; ಮಿರುಗು; ಪ್ರಕಾಶಿಸು; ಹೊಳೆ.

**ಚವಿಚವಿಸು, ಚವಚವಿಸು** (ದ್ವಿರುಕ್ತಿ) : ಹರಳೋಲೆ ಮಕರಿಕಾಪತ್ರ ಮಾಣಿಕುತಿ ಸಣ್ಣಗೆಜ್ಜೆಯ ತಿಲಕ ಚವಿಚವಿಸೆ (ಭರತ. ೪೦-೫೩) ; ನೀನೀಗ ಧವಳಪಟ್ಟೆಯ ನೂಂಕಿ ಮೊಗದೋಱಿ ಮೋಹನ ಚವಚವಿಸಿದು ದೆಂದರವರು (ಭರತ. ೦೪-೧೩೬). [ ಚವಿ + – ಇಸು$_3$ ]

**ಚವು$_1$** 'ಚೌ$_1$' ನೋ.

**ಚವು$_2$** 'ಚೆವು' ನೋ.

**ಚವುಂಡನಾಯಕ** (ನಾ). ಒಬ್ಬಾತನ ಹೆಸರು : ಲೋಕವಿದ್ಯಾಧರನ ವಾಳೆಯಱಿಪ್ಪ ಚವುಣ್ಡನಾಯಕ ಅವಂಗೆ ಕೊಟ್ಟ ಮಣ್ಣು ಬಸದಿಗೆ (ಎಕ. VI, ಕಡೂರು. ೮-೧೦ ; ಸು. ೧೧೦೦). [ < ಚಾವುಂಡ + ನಾಯಕ ]

**ಚವುಕ** 'ಚೌಕ$_2$' ನೋ.

**ಚವುಕಛತ್ರಿ** (ನಾ). ಚಚ್ಚೌಕವಾದ ಕೊಡೆ, –ಛತ್ರಿ: ಮುತ್ತಿನ ಚವುಕಛತ್ರಿ ಪಲ್ಲವದ ಜಲ್ಲರಿಗಳೆತ್ತಿದವು (ಸಿಂಗಿರಾ. ೬-೪೩). 'ಚವುಕಸತ್ತಿಗೆ' ಪರಾ.

[ ಚವುಕ ( < ಚೌಕ$_2$) + ಛತ್ರಿ$_2$ ]

**ಚವುಕಪಳಿ** (ನಾ). ಒಂದು ಬಗೆಯ ಸೀರೆ : ಭುವನಕೋಶದ ಸೀರೆ ಶುಭ್ರಪಟ್ಟಾವಳಿ ನವರಂಗವು ಕರ್ಕವಡ ಚವುಕಪಳಿಯು ಸಿಂಹಳಾಂತಕ ಕಂಠಿಯು ಅವುಗಿದೇವನ ಮನೆದೊಳಗೆ (ಅಮುಸಾಂ. ೪-೨೩).

[ ಚವುಕ ( < ಚೌಕ$_2$) + ಪಳಿ$_8$ ( < ಪಟ್ಟಿ$_7$) ]

**ಚವುಕಸತ್ತಿಗೆ** 'ಚೌಕಸತ್ತಿಗ' ನೋ.

**ಚವುಕಳಿ** 'ಚೌಕಳಿ' ನೋ.

**ಚವುಕಿ** 'ಚೌಕಿ' ನೋ.

**ಚವುಕಿಗೆ** 'ಚೌಕಿಗ' ನೋ.

**ಚವುಕು** 'ಚೌಕ' ನೋ.
**ಚವುಕುಳಿ** 'ಚೌಕಳಿ' ನೋ.
**ಚವುಗಾವೆ** 'ಚೌಗಾವೆ' ನೋ.
**ಚವುಟು** (ನಾ). (?) : ವಟ್ಟನೇಗಾಣ (ವಾಣಿ) × × × ಮಾನಿ ಚವುಟುಂ ಪ್ರತಿಗ್ರಹೇ ಮಾಲಾಕಾರಿಮು ಪುಲವಸೂತ್ರತ್ರಯುಂ ಚ ದತ್ತವಾನ್ (ಕಆಳ. ೬೦-೪೩-೩೨ ; 1104). [ ? ]
**ಚವುಡಂಗಿ, ಚೌಡಂಗಿ, ತವುಡಂಗಿ, ತೌಡಂಗಿ** (ನಾ). ಒಂದು ಬಗೆಯ ಸಸ್ಯ : ಮೂತ್ರರಕ್ತಕ್ಕೆ:–ಚತುರ್ಭಾಗ ಚವುಡಂಗಿರಸ ಆವಿನ ನೊರೆಪಾಲು ಕುಡಿಸುವುದು (ವೈವಿ. ೧೨೪). **ಚೌಡಂಗಿ :** ಚೌಡಂಗಿ ಸೊಪ್ಪಿನ ರಸ, ನೆಲ ಗುಳ್ಳದ ರಸ ಹೆಗ್ಗುಳ್ಳದ ರಸ (ಸಕವೈ. ೫೦. ೪೪೪). **ತವುಡಂಗಿ:** "ತವು [ಪಾಠಾಂ. ತೌ]ಡಂಗಿ ಅಜಗಂಧಿಯುಕ್ಕು" (ಮಂಗರಾ. ४೦-೩೨). **ತೌಡಂಗಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]
**ಚವುಡಿ** 'ಚಾವುಂಡಿ' ನೋ.
**ಚವುತಿ** 'ಚೌತಿ' ನೋ.
**ಚವುಥಾಯ** 'ಚೌಥಾಯಿ' ನೋ.
**ಚವುದಂತ** 'ಚೌದಂತ' ನೋ.
**ಚವುದರಿ** 'ಚೌಧುರಿ' ನೋ.
**ಚವುದಳ** 'ಚೌದಳ' ನೋ.
**ಚವುಪಟವಲ್ಲ** 'ಚೌಪಟವಲ್ಲ' ನೋ.
**ಚವುಪದಿ** 'ಚೌಪದಿ' ನೋ.
**ಚವುಪರ್ಣ** (ನಾ). ಗರುಡ : [ಸಿ]ಲೆಯೊಳು ಕಾಳ್ಗಾನಂ ಜಲದೊಳಂಬುಜ ದಾಶರಥಂಗೆ ರಾಘವಂ ಕಲಿ ಚವುಪರ್ಣ್ಣನಾ ವಿನತೆಗಂತನುರಾಗದೆ ಪುಟ್ಟಿ ಕೀರ್ತ್ತಿಯಿಂ ನಿಲಿಸುವ ಪಾಂಗಿನಿಂ (ಕಇ. IV, ೨೨-೧೬ : 1024). [ <ಸಂ. ಸುಪರ್ಣ ]
**ಚವುಬಾರ** 'ಚೌಬಾರ' ನೋ.
**ಚವುರ**$_1$ 'ಚವರ' ನೋ.
**ಚವುರ**$_2$ 'ಚೌರ$_1$' ನೋ.
**ಚವುರಸ** 'ಚೌರಸ' ನೋ.
**ಚವುರಾಶಿ** 'ಚೌರಾಸಿ' ನೋ.
**ಚವುರಿ** 'ಚವರಿ' ನೋ.
**ಚವುರಿಸು** (ಕ್ರಿ). ಚಾಮರ ಬೀಸು; ಚಾಮರಸೇವೆ ಮಾಡು: ಎಸಳೆಸಳಿನ ಸಿರಸಲ ಚವುರಿಸುವದು ವೈಯನ್ನ ಬೀಸಲು ವ್ಯನವಿರೇರಿದ ನೇರಿಳೆ ನವಕನ್ನೆ (ಮುಳ್ಳ್ಕಂ..೪೪-೭). [ ಚವುರ (<ಚವರ) + – ಇಸು$_2$ ]
**ಚವುರಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೃಕಿ. ೦೪-೨೬೪). [ ಚವುರಿ$_2$ + ಹುಲ್ಲು (<ಪುಲ್) ]
**ಚವುಲ** 'ಚವರ' ನೋ.
**ಚವುಲಿ** 'ಚವರಿ' ನೋ.
**ಚವುವಟ್ಟಿ, ಚವ್ವಟ್ಟಿ** (ನಾ). ೧. ನಾಲ್ಕು ಹಾದಿಗಳ . ೨. ನಾಲ್ಕು ಹಾದಿ ಕೂಡುವ ಸ್ಥಳ ; ಚೌವಟ ; ಚೌಕ ; ಜೂದಿನ ಕಟ್ಟೆ ವೈಲಿಗೆ ಸಂತೆಯಂಗಡಿ ಬೀದಿ ಚವುವಟ್ಟಿ [ಪಾಠಾಂ. ಚವ್ವಟ್ಟಿ, ಚಾವ್ವಟ್ಟಿ]ಗಳೊಳಗೆ ಬಾದುರನವರ ಕಾಣದ (ಕುಮಾಸಾಂ. ೦೪-೦೨೦). **ಚವ್ವಟ್ಟಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚವು$_1$ (<ಚೌ$_1$) + ಬಟ್ಟೆ$_3$ ]
**ಚವುಪಪ್ಪಿ** 'ಚೌಪಪ್ಪಿ' ನೋ.
**ಚವುಸರ** 'ಚೌಸರ' ನೋ.

**ಚವುಳಪ್ರಪ್ತ** (ನಾ). ಸವುಳಂಭೂಮಿ ; ಚೌಳುನೆಲ (?) ಗೋವಣ್ಣ ದೇವಣ್ಣಂಗಳ ಕಯಲು ಕೊಂಡ ಚವುಳಪ್ರಪ್ತದ ಕಂಬ ೩ ಕಂ ಸಿಧಾಯ ಬೆ ೩ (ಎಳ. XI, ಹೊಳಲ್ಕೆ. ೦೩೬-೬೩ ; 1307). [ ಚವುಳು (<ಸವುಳು$_1$) + ಪ್ರಪ್ತ ? ]
**ಚವುಳಿ** 'ಚೌಳಿ$_1$' ನೋ.
**ಚವುಳು** 'ಸವುಳು$_1$' ನೋ.
**ಚವುಳುಪ್ಪು** 'ಸವುಳುಪ್ಪು' ನೋ.
**ಚವುಳುಭೂಮಿ** 'ಸವುಳುಭೂಮಿ' ನೋ.
**ಚವುಳುಮಣ್ಣು** 'ಸವುಳುಮಣ್ಣು' ನೋ.
**ಚವೆ** 'ಚವ್ವೆ' ನೋ.
**ಚವ್ಯ** (ನಾ). = ಚವ್ವೆ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ಯವಕ್ಕು [ಪಾಠಾಂ. ಚವ್ವವುಕ್ಕು, ಚವ್ವೆಯುಕ್ಕು] " (ಮಂಗರಾ. ४೨-೩೦) ; " ಚಕ್ರಿಕಾ – ಚವ್ಯ " (ಒಜಧಿ. ೨೩) : ತ್ರಿಕಟುಕವುಂ . . . ಜೀರಕ ಚವ್ಯ ಲವಣ ಸಂವರ್ಚಕವುಮ್ಮೃತಂ ಶ್ಲೇಷ್ಮವಾತಶೂಲಾಪಹರಂ (ಅಶ್ವಶಾ. ೦೦-೦೦). [ ಸಂ. ]
**ಚವ್ವ**$_1$ 'ಚವ್ವೆ' ನೋ.
**ಚವ್ವ**$_2$ 'ಚೌ$_1$' ನೋ.
**ಚವ್ವ**$_3$ 'ಚವ$_2$' ನೋ.
**ಚವ್ವಂಗುಲ** 'ಚೌವಂಗುಲ' ನೋ.
**ಚವ್ವಗೆಡು** (ಕ್ರಿ). ಹದಗೆಡು ; ರೀತಿಗೆಡು : ಕಾಲು ಬಿದ್ದರು ಇವಗ ಕರುಣ ಹುಟ್ಟುವದಿಲ್ಲ ನೀತಿ ನಡಾವಳಿಯಿಂದ ಚವ್ವಗೆಟ್ಟನೆ, ಮತಿಗೆಟ್ಟನೆ (ಮುನ್ನುಹೆ. ೬೩). [ ಚವ್ವ$_3$ (<ಚವ$_2$) + ಕೆಡು$_1$ ]
**ಚವ್ವಟ** 'ಚೌವಟ್ಟ' ನೋ.
**ಚವ್ವಟ್ಟಿ** 'ಚವುವಟ್ಟಿ' ನೋ.
**ಚವ್ವಲಿಸು** 'ಜವ್ವರಿಸು' ನೋ.
**ಚವ್ವಾಳಿ** (ನಾ). (ಉಕ) ಉದ್ದವಾದ ನಾಲ್ಕು ಸೀಳುಗಳನ್ನು ಜೋಡಿಸಿ ಹೊಲಿದ ಚೌಕಾಕಾರದ ಬಟ್ಟೆ ; ಹಾಸುವ ಜಮಖಾನದಂತಹ ಬಟ್ಟೆ : ಆ ಹೊರಸಿನ ಮೇಲೆ ಏನೋ ಒಂದು ಚವ್ವಾಳಿಯ ಹಾಗೆ ಒಗೆದದ್ದು (ಕನ್ನಡಿ. ೦೦೨) ; ಒಬ್ಬಳು ಚವ್ವಾಳಿಯ ಒಂದು ಚುಂಗು ಕೈಯಲ್ಲಿ ಹಿಡಿದುಕೊಂಡು . . . ಧೂಳಿಬ್ಬಿಸಿದ್ದರೆ (ಕ್ಷ್ಯತಿಟ. ೨೬೪). [ ← ಮರಾ. ಚವಾಳ, ಚವಾಳೀ ]
**ಚವ್ವಿ** (ನಾ). ಒಂದು ಅನುಕರಣ ಶಬ್ದ ; ಮಕ್ಕಳನ್ನು ಮಲಗಿಸುವಾಗ ಮೆಲ್ಲಗೆ ತಟ್ಟುವುದಕ್ಕೆ ಹೇಳುವ ಮಾತು : ಆ ಚಳಿಗಾಲಿಗೆ ಶಿವು . . . ಕುಸಗುಡಹತ್ತಿದ. ಪಾರ್ವತಿ ಅವನ ಮಗ್ಗುಲಲ್ಲಿಯೇ ಮಲಗಿ ಚವ್ವಿಬಡಿಯ ಹತ್ತಿದಳು (ನಡುಗೋ. ೩೮).
**ಚವ್ವೀಶ** 'ಚೌವೀಸ' ನೋ.
**ಚವ್ವೆ, ಚವೆ, ಚವ್ವ**$_1$ (ನಾ). ಒಂದು ಬಗೆಯ ಸಸ್ಯ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ವೆಯುಕ್ಕು [ಪಾಠಾಂ. ಚವ್ಯವಕ್ಕು, ಚವ್ವವುಕ್ಕು]" (ಮಂಗರಾ. ४೨-೩೦). **ಚವೆ :** ತಾಳೀಸಪತ್ರ ದು ೧½ ೩ ತೂಕ, ಮೆಣಸು ದುಡ್ಡು ೩ ತೂಕ, ಚವೆ ದು ೩ ತೂಕ . . . ಇಷ್ಟನ್ನೂ ಇಡಿದು ಚೂರ್ಣವಂ ಮಾಡಿ (ವೈವಿ. ೩೨). **ಚವ್ವ$_1$ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಸಂ. ಚವ್ಯಾ ]
**ಚಷಕ** (ನಾ). ಮದ್ಯವನ್ನು ಕಂಡಿಯುವ ಬಟ್ಟಲು ; ಪಾನಪಾತ್ರೆ : "ಮಧುಪಾತ್ರಂ ಚಷಕಂ" (ವಸ್ತುಕೋ. ४೯-೨೬); " ಗರ್ಗರಿ, ಅನುತರ್ಷ, ಚಷಕ, ಸರಕ–ಈ ೪ ಕಿಳಿವಟ್ಟಲ್ " (ಹಲಾಯು. ೩೪-೦೬೨) ; ಇರೆ ನವ ಪದ್ಮರಾಗ ಚಷಕಂ ನಿಜಹಸ್ತತಳಾಗ್ರದೊಳ್ (ಜಗವಿ. ೦೬-೦೦೩). [ ಸಂ. ]

**ಚಷಕಭಾಂಡ** (ನಾ). ಮದ್ಯದ ಪಾತ್ರೆ : ಕಡುಮುಳಿದವನರ್ಣಂಕೆ ಚಷಕ ಭಾಂಡದ ಮೇಲೆ ಪೊಡೆಗೆಡೆಯುತೆ (ಅರಾಚ. ೬-೦೩). [ ಚಷಕ + ಭಾಂಡ ]

**ಚಷಾಲ** (ನಾ). ಯಜ್ಞಶಾಲೆಯಲ್ಲಿ ಯೂಪಸ್ತಂಭದ ತುದಿಗೆ ಸೇರಿಸಿದ ಮರದ ಬಳೆ: ಯೂಪವುಂತೇಕವಿಂಶತಿಗಳುತ್ಕೃಷ್ಟ ತ್ರಿವೃತ್ಸೂತ್ರಭೂಷಿತ ಚಷಾಲದಿಂ ಮೆಱೆದುವಾ ಮಂಟಪದೊಳು (ಜೈಮಿಭಾ. ೩೩-೩೭). [ ಸಂ. ]

**ಚಷ್ಕ**(ನಾ). ಅಪಹರಿಸುವುದು ; ಲಪಟಾಯಿಸುವುದು : ಹೊರಡುವವರು . . . ಹೆಣ್ಣಿನವರಲ್ಲಿ ಯಥೇಷ್ಟವಾಗಿ ಪಾತ್ರೆ-ಪಳಗಗಳನ್ನು 'ಚಷ್ಕ' ಹೊಡೆದಿದ್ದರು (ಮನಿಲಿ. ೨೫) : ಹಗಲು ಹೂ ಮೊಡುವುದು, ರಾತ್ರಿ ಹೂವಿನ ಕಾಲು ತಲೆ ಕಡಿದು 'ಚಷ್ಕ' ಮಾಡುವುದು (ದೀಪಕ. I, ೭) : ಅಪ್ಪನ ಪಾಕೀಟನೊಳಗಿಂದ ಏದುರೂಪಾಯಿಯಾ ನೋಟನ್ನು ಚಷ್ಕಮಾಡಿ . . . ಒಂದು ಮಟ್ಟವನ್ನು ಮುಟ್ಟಿದ್ದನು (ಗಂಮಾಯಿ. ೫೪).

[ ←ಹಿಂ. ಚಸನಾ ; ಮರಾ. ಚಸಣೇ=ಮೋಸ]

**ಚಷ್ಮ** (ನಾ). ಕನ್ನಡಕ ; ಉಪನೇತ್ರ ; ಚಾಳೀಸು (ಉಕ) : ದಶದಿಶೆ ನಿಶೆಯುಂ, ಜಗವೆಲ್ಲಾ ನಿಶೆಯುಂ ನಿಶನಿರಂತರ ಚಷ್ಮ (ಜಂತನ. ೭೫-೯). [ ←ಪಾರ. ಚಷ್ಮಾ; ಹಿಂ. ಚಶ್ಮಾ; ಮರಾ. ಚಷ್ಮಾ, ಚಶ್ಮಾ, ಚಸ್ಮಾ ]

**ಚಸಕ** (ನಾ).=ಚಷಕ: "ಚಸಕ-ಶಾಕಗಳ ಪಾತ್ರೆ" (ಅಕಾನಿ. ೧೦-೦೭). [ <ಸಂ. ಚಷಕ ]

**ಚಹ**, ಚಹಾ, ಚ್ಹಾ₁ (ನಾ). ಟೀಸೊಪ್ಪು ಮತ್ತು ಅದರಿಂದ ಮಾಡಿದ ಪಾನೀಯ : ಚಹದ ಗಿಡದ ಮೂಲಸ್ಥಾನವು ಚೀನ (ಸಸ್ಯಶಾ. ೦೩೪) ; ಚಹಕ್ಕೆ ರೊಕ್ಕ ನೀನು ಕೊಟ್ಟುಬಿಡು (ಜಂದುಟಿ. ೫೭) ; ಎರಡು ಕಪ್ಪು ಚಹ ಮಾಡಲಿಕ್ಕೆ ಹೇಳು (ಅದೋಲ. ೦೪೯). **ಚಹಾ** : ಚಹಾತೊಪ್ಪಲದ ಬೀಜವು ಸಣ್ಣದಾಗಿ ಕಸಕಸಿಯಂತೆ ಇರುತ್ತದೆ (ಕೃಷಿಪ್ರ. ೨೦೦) ; ಚಹಾ ಆಗಲಿ, ಬಿಸಿ ಇರುವಾಗಲೆ . . . ತೆಗೆದುಕೊಳ್ಳಿ (ಒಂಟಿದ. ೧೭೦); ಗೋಪಾಲ ಎರಡು ಚಹಾ ತಗೊಂಡು ಬಾ (ಬೆನ್ನುಹಿಂ. ೧೧). **ಚ್ಹಾ₁** : ಒಂದೊಂದು ಕಪ್ಪು 'ಚಾ'ನಾದರೂ ಕುಡಿಯೋಣ (ಜಂದುಟಿ. ೫೭) ; ಇಬ್ಬರು ಚಾ ಕುಡೀಲಿಕ್ಕೆ ಹೋಗಿದ್ದರು (ರಕ್ತಧ್ವ. ೨೦).

[ ←ಚೀನಿ. ಚಾ. / ಪೋರ್ಚು.ಚಾ. / ಹಿಂ. ಚಾ, ಚಾಯ್ ; ಮರಾ. ಚಹಾ ]

**ಚಹಡ**, ಚಹಡಿ, ಚಹಡೆ, ಚಾಡ₁, ಚಾಡಿ, ಚಾಹಡ, ಛಾಡ, ಛಾಡಿ (ನಾ). ೧. ಇನ್ನೊಬ್ಬರನ್ನು ಕುರಿತು ದೋಷಾರೋಪಣೆ ಮಾಡಿ ಹೇಳುವುದು ; ಕೊಂಡೆಯ ; ಪಿಸುಣು : ವೈಶೂನ್ಯವೆಂಬುದು ಪರರ ಕೆಡಿಪೆನೆಂಬಾಸುರ ಚಹಡ ಕೊಂಡೆಯವು (ದ್ವಾದಶಾ. ೨೯-೭೬೦). ೨. ಚಾಡಿ ಹೇಳುವವನು ; ಚಾಡಿಕೋರ; ಹಿಸುಣ: "ದುಷ್ಕೃತಿಪ್ರೇರಕಂ ಚಹಡಂ" (ಮಂಗರಾ. ೭೨-೨೩); ವೀರೇಶ ನೀಂ ಸೌಂದರ್ಯದೂಪಾಟವುಂ ತೊಳೆದು ಪೊದಿಸು ನಾರದ ಸ್ನೇಹ ಚಹಡನಾಗು (ಪ್ರಭುಪು. ೭-೬೦). 'ಚಹಡತನ' ಪರಾ. **ಚಹಡಿ**: ೧. ನಾರದನು ಚಹಡಿಯ ಹೇಳಿ ಹಲವಂಗದಲಿ ಬಳಿಕಾ ಫಾಳಿಯನು ಕಳುಹಿದನು ಕೋಪಾಗ್ನಿಯನು ಹೊತ್ತಿಸ್ಕೆ (ತಿಮ್ಮಕಾಂ. ೫-೦೦೭) ; ಖೂಳ ನಾರದ ಬಂದು ಬಾಣನೊಳ್ ಚಹಡಿಯ ಹೇಳಲುಜ್ಜುಗ ವೆತ್ತನಂತೆ (ಮೋಹತ. ೩೩-೪೦) : ಮಂಚಣ್ಣ ಚಹಡಿಯಂ ವಿಸ್ತಾರದಿಂ ಪೇಳೆ (ಚಂಬಪು. ೭ ಸೂಚನೆ). **ಚಹಡೆ**: ೧. ದುರ್ಜನರ ಚಹಡೆಯ ಮಾತುಗಳ ಕೇಳ್ದು (ಚಂಬಪು. ೮-೯). **ಚಾಡ₁** : ೧. ನಾರದಂ . . . ಚಾಡವ ಪೇಳೆ (ಗುರುಚಾ. ೮-೭೨) ; ಆಡದಿರು ಪುಸಿ ನಿಂದ್ಯ ನಿಷ್ಠುರ ಚಾಡವುಂ (ಶಂಕರಾ. ೦೭-೪೮). **ಚಾಡಿ** : ೧. "ಪಿಸುಣ ಕೊಂಡೆಯ ಚಾಡಿಯನೆ ಕುತ್ಸಿತಕ್ಕೆ ಪೆಸರೆಸೆಗು" (ಶಬ್ದಮಂ. ೭೭) ; ಚಾಡಿಗಳ್ ಹೇಳುವುದಿಲ್ಲಿ ನುಡಿದಾಡುವ ನಾಲಿಗೆ ಕೀಳುವರಲ್ಲಿ (ಪುರಂದ. ೨-೩೯-೩) : ಅರಮಗ್ರೆಮಾಡಿ ಚಾಡಿಯ ಹೇಳಿದರು (ಎಕ. XI, ಮೊಳಕಾ. ೯-೬. 1651) ; ಅವರು ಪ್ರೀತಿಯಿಂದ, ಬಿಡದೆ ಹೋದರೆ ದೋಷವನ್ನು ಕಲ್ಪಿಸಿ, ಚಾಡಿಯನ್ನು ಹೇಳಬೇಕು (ಕೃಷಾಅ.೩೬೦). ೩. ಸೂಚನೆ.'ಚಾಡಿಯೋಲೆ' ಪರಾ. **ಚಾಹಡ**: ೧. ಮಹ ರಸಿಕತನದೊಳು ಚಾಹಡವ ಪೇಳೆ ದೇವದಾನವರು ಕನಲ್ದುರುಳುತಿಹರು (ಪ್ರಭುಪು. ೭-೩೭). **ಛಾಡ**: ೧. ಛಾಡವ ಪೇಳಿ ಉತ್ತಮರನ್ನ ಬಳಲಿಸಿ ನಾಡೊಳು ಸ್ವಾಮಿದ್ರೈವ ದ್ರೋಹತನದಲ್ಲಿ ಆಡಬಾರದ ಮಾತುಗಳೆಲ್ಲ ಸರ್ವದಾ ಜೋಡಿಸಿನುಡಿವುತ್ತ (ವಿಜಾಸು. ೬೪-೬). **ಛಾಡಿ**: ೧. ಛಾ[ಪಾಠಾಂ. ಚಾ]ಡಿ ಹೇಳಲುಬೇಡ ನಾಲಿಗೆ ನಿನ್ನ ಬೇಡಿಕೊಂಬುವೆನು ನಾಲಿಗೆ (ಪುರಂದ. ೧-೦೮೩-೨) ; ಬೇಡಿರಿ ಬೇಡಿರಿ ಹೀಗೆ ಛಾಡಿ ಹೇಳುವುದನ್ನು ಯಾರು ಕಲಿಸಿದರು (ಜನನಾ.೦೦೫). [ ?. / ತಮಿ. ತುಳು. ತೆಲು. ಚಾಡಿ./ಮರಾ. ಚಹಾಡ್, ಚಹಾಡೀ, ಚಾಡೀ ]

**ಚಹಡತನ**, ಚಾಡತನ(ನಾ). ಚಾಡಿಹೇಳುವ ಸ್ವಭಾವ; ಚಾಡಿಕೋರತನ: ಚಹಡತನಗಳನಱಿಯೆ ಏಗುವೆ ನೀನು ಹಸುಳೆಯಲಾ (ಶಾಶಿಕಾ. ೧೮ ೩೯). **ಚಾಡತನ**: (೬). [ ಚಹಡ + – ತನ ]

**ಚಹಡಿ** 'ಚಹಡ' ನೋ.

**ಚಹಡೆ** 'ಚಹಡ' ನೋ.

**ಚಹರೆ**, ಚೇರೆ, ಚೇಹರಾ (ನಾ). ಕೃತಿ ; ಆಮುದ್ರೆ ; ಲಕ್ಷಣ : ಅವನಿಗೆ ಸಾಮಾನ್ಯ ನಡವಳಿಕೆಯಲ್ಲೂ ನಾಟಕದ ಚಹರೆ ರೀತಿ ಬಂದುಬಿಟ್ಟಿತ್ತು (ಅಂತಃಪೂ. ೧೭) ; ಈ ಬಂದೂಕಿನ ಚಹರೆಯೂ . . . ನಿನ್ನ ಬಂದೂಕಿನ ಚಹರೆಯೂ ಒಂದೇ ಆಗಿದೆ (ಪಂಚಪಂ. ೨೨೦). 'ಮುಖಚಹರೆ' ಪರಾ. **ಚೇರೆ** : ಆರು ತಿಂಗಳ ಕೂಸು, ಚೇರೆ ಬದಲಾಯಿಸಿತು (ಕನ್ನಜಾ. ೦೮೯). **ಚೇಹರಾ** : ನಮಗೆ ಮೊದಲು ಚೇಹರಾ ಮಾತ್ರ ತೋರಿಸಬೇಕು (ರಕ್ತಧ್ವ. ೩೦೮). [ ←ಪಾರ. ಚಿಹ್ರಾ; ಹಿಂ. ಚೆಹರಾ; ಮರಾ. ಚಹರಾ, ಚೇಹರಾ, ಚೇಹೇರಾ ]

**ಚಹರೆಪಟ್ಟಿ** (ನಾ). ಆಕಾರ, ಲಕ್ಷಣ, ಮುಖಮುದ್ರೆ ಮೊದಲಾದುವುಗಳ ವಿವರ,-ತಪಶೀಲು : ಸಾಹಿತಿಯ ಚಹರೆಪಟ್ಟಿಯನ್ನು ಬರೆಯ ಹೊರಟವನು ಅವನ ಬಡತನವನ್ನು ಮೊದಲು ಕಾಣಿಸದೆ ವಿಧಿಯಿಲ್ಲ (ಅರಿಮು. ೧೦೪). [ ಚಹರೆ + ಪಟ್ಟಿ₂ ]

**ಚಹಾ** 'ಚಹ' ನೋ.

**ಚಹಾಪಾಣಿ** (ನಾ). ಚಹ, ತಿಂಡಿ, ನೀರು ಮೊದಲಾದುವುಗಳನ್ನು ತೆಗೆದುಕೊಳ್ಳುವುದು ; ಚಹ ಹಾಗೂ ಫಲಾಹಾರ : ಅವನು ಬಾಚಿದ ಬಿಲ್ಲಿನಲ್ಲಿ ಈ ಚಹಾಪಾಣಿಯ ವೆಚ್ಚವೂ ಸೇರಿತ್ತು (ಚೇಳನ್ನ. ೧೦೪).

[ ←ಮರಾ. ಚಹಾಪಾಣೀ ]

**ಚಹಾಪಾನ** (ನಾ). ಚಹವನ್ನು ಕುಡಿಯುವುದು : ಚಹಾಪಾನ ನಮ್ಮ ನೀರಡಿಕೆಯನ್ನು ಹಿಂಗಿಸಿದುದಲ್ಲದೆ ನಮ್ಮ ಮನಸ್ಸುಗಳಿಗೂ ನವಚೇತನ ನೀಡಿತು (ಕಾಂಡಯಾ. ೦). [ ಚಹಾ (<ಚಹ) + ಪಾನ ]

**ಚಳ₁** 'ಚಲ₁' ನೋ.

**ಚಳ₂** 'ಚಲ₂' ನೋ.

**ಚಳ₃** (ನಾ). ಬೆಲ್ಲ: ಮಲಯರುಹಂ ನುಗ್ಗಿಯ ಬೇರ್ ಜಲಮಂಬುದಮಣಲೆ ಮಾಂಸಿ ಚಳಮೇಲೆಯಿಮಂ ತಳಪುದು (ಲೋಕೋಪ. ೭-೯೩). [ ? ]

**ಚಳಂಕಿ** (ನಾ). ಒಂದು ಔಷಧಿ ದ್ರವ್ಯ : ಹಲಸಂದೆ ಔಡಲ ಚಳಂಕಿ ಇವು ಕ್ರಿಮಿದೋಷಹರ (ಅಶ್ವಟೀ. ೯೧-೨). [ ? ]

**ಚಳಕ₁** 'ಚಡಿಕೆ' ನೋ.

**ಚಳಕ₂** (ನಾ). ೧. ವೇಗ; ಚಪಲತೆ ; ಶೀಘ್ರತೆ: "ಚಳಕಮೆನಲ್ ಪಹಲವೆಂದು ತಿಳಿಗೆ ವಿದಗ್ಧರ್" (ಭಾರನಿ. ೦೦); ಕಲಕಿದನು ಬಲಜಲಧಿಯನು ಬಲು ಚಳಕದಲಿ ತೆಗೆದೆಸುತ (ಸಂಭಪ. ೧೯-೭); ಊರ್ಮಿಳಾಪತಿ

ಚಳಕ[ಪಾಠಾಂ. ದಳಯ, ನಿಳಯು]ದಿಂದ್ಯೆತಂದು ಕಂಡನು ಕಪಟರಕ್ಕಸಿಯ (ತೊರರಾ. ೩-೪-೨೬); ಚಳಕದೆ ಕಳಸದ ಘಟ್ಟವನಿಳಿದು (ಕೆಳನ್ನ. ೦೦-೫೪). ೨. ಜಾಣ್ಮೆ; ಚಾತುರ್ಯ; ಕೌಶಲ; ಚಮತ್ಕಾರ: ಆ ಬಿಲ್ಲನಾ ರಥವ ತಳುವದೆ ಕಡಿದು ಭಂಗಿಸಿದನವನ ಕೈಯ ಚಳಕವನೇನ ಬಣ್ಣಿಪೆನು (ನೇಮಿಸಂ. ೦೨-೬೯); ಈ ಲುಳಿಯಾ ಬಿನ್ನಣಮಾ ಯೊಡಲ್ಮಣಿತವಿಾಯೆಂದಾಳಮಾ ಬೀರವಿಾ ಚಳಕಂ ಶ್ರೀಚಿಕದೇವನೊಳ್ ಮೆಱೆಗುಂ (ಚಿಕವಿ. ೪-೦೪೮); ಬಿರಿಮುಗುಳ ಬಿಡಿಸುತ್ತಲಿರ್ದನು ಕರದ ಚಳಕದಲಿ (ಅಂಬಿಕಾ. ೪-೨೬): ಕೆಲವರು ರಂಗೋಲಿಯ ಕೆಳಗೆ ತೂರುವ ಚಳಕವನ್ನು ತೋರಿಸಿದರು (ನಂಟರು. ೩೦). 'ಚಾಲಾಕು' ಪರಾ. [ ? ]

ಚಳಕಿ₁ 'ಚಡಿಕೆ' ನೋ.

ಚಳಕಿ₂ (ನಾ). (?) : ಲಕ್ಷ್ಮೀನರಸಿಂಹದೇವರ ಅಮೃತಪಡಿಗೆ ಕೊಟ್ಟ ಗ ೫ ಚಳಕಿಯ ವೃತ್ತಿಯನು (ಎಕ. VI, ಕಡೂರು. ೮೮-೪೬ ; 1223 ?). [ ? ]

ಚಳಕಿಗೆ, ಚಳಿಕಿಗೆ (ನಾ). ತೋಳಿಗೆ ಧರಿಸುವ ಒಂದು ಆಭರಣ ; ತೋಳ್ಬಳೆ ; ಬಂದಿ: ದ್ವಿಗುಣಿಸೆ ಚಮರಜಮಂ ಪೊಳೆವುಗುರ್ಗಳ್ ಚಳಕಿಗೆಯ ಪೊಚ್ಚ ಪೊಸಮುತ್ತಿನ ತಟ್ಱ್ರಗವಂಶಮಾಳೆ ಮೇಗಣ್ತೊಗೆಯೆ ಕುಚಾಭೋಗವಿಕ್ಕಿದರ್ ಚಮರಜಮಂ (ಮಲ್ಲಿಪು. ೮-೦೦೨); ದ್ಯುತಿವೀಱುವ ಮುತ್ತಿನ ಚಳಕಿಗೆಯಂ ಯುವತಿಯ ನಳಿತೋಳ್ಗೆ ಕಟ್ಟಿದಳ್ ಮತ್ತೊರ್ವಳ್ (ಜಗವಿ. ೦೦-೧೧೬); ಕಂಕೆಲ್ಲಿಯ ಕಂಕಣಮುಮಂ ವಿಚಕಿಳದ ಚಳಕಿಗೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪ್ರ. ೬-೦೧೪ ವ); ಕಿಱುಗೆಜ್ಜೆ ಚಳಕಿಗೆ ಜೂಳಯಮೆಸೆದವಾನಿಱೆಗುರುಳಬಲಾಮಣಿಗೆ (ರಾಮವಿ. ೬-೬೪); ಹಸ್ತಕಡಗ ಚಳಕಿಗೆ ರನ್ನದ ಬಳೆ ಹರಳುಂಗುರಗಳನವುರಿಯುರಿಟ್ಟರವಳ್ಗೆ (ಚಂಪ್ರಸಾಂ. ೨೫-೦೩೬). ಚಳಕಿಗೆ : ಜೂಳೆಯ ಚಿನ್ನಪೂ ಕಮಲಪೂ ಚಳಕಿಗೆ ತಾಳೆಹೂ ಬೆಂಬಚ್ಚೆದಂಡೆ ತೋಳೊಂಕೆ . . . ಬಾಲೆಗಾಭರಣವೊಪ್ಪಿದುವು (ಭರತ. ೪೦-೬೫): ಗೆಜ್ಜೆಗೆಯ ಸಜ್ಜಿಕದ ಚಳಕಿಗೆಯನಜ್ಜಗೆಯ ವಜ್ರೀವ ಬಜ್ಜರದ ಬಾವುರಿಯ (ರಾಜಶೇ. ೦೦-೫೬ ರಗಳೆ). 'ಚಳಕೆ' ಪರಾ.

[ ? ]

ಚಳಕು₁, ಚಳಂಕು₁, ಛಳಕು, ಛಳುಕು (ನಾ). ಒಮ್ಮೆಂದೊಮ್ಮೆಲೆ ನರ ಮಿಡಿದು ಉಂಟಾಗುವ ನೋವು ; "ನರವಾಯು" (ಜಾನಕೋ. ೫೫). ಚಳುಕು₁ : ಕೆಲರುರದ ಚಳುಕಿಂ ವಾತಪಿತ್ತಜ್ವರದಿ ಕೆಲಬರು ಮಡಿಯುತಿರ್ದರ್ (ಅಕ್ಷರವಿ. ೮-೨೧) : ಅಯ್ಯೋ . . . ಮಯ್ಯೆಲ್ಲೆಲ್ಲ ಚಳಕು (ತುಂಗಭ. ೨೨). ಛಳಕು: ಆಗಾಗ್ಗೆ ಸೊಂಟದ ಛಳಕು, ಕೈಕಾಲುಗಳ ಹಿಡಿತದಿಂದ ಸಂಕಟಪಡುತ್ತಿದ್ದ ಮುದುಕಿ, ಹಬ್ಬವಾದುದರಿಂದ . . . ಕೆಲಸಮಾಡುತ್ತಿದ್ದುದನ್ನು ಕಂಡು ರತ್ನಮ್ಮನಿಗೆ ಕೊಂಚ ಕನಿಕರವೂ ಆಯಿತು (ಶೀಲಾಗೊಂ. ೦): ತೊಡೆ ಛಳಕು ಒಂದೂ ಇಲ್ಲವೆಂದೂ ಚಿಕ್ಕಪುಟ್ಟಮ್ಮ ಹೇಳಿದ್ದಳು (ಮನೋನಂ. ೦೫೦). ಛಳುಕು : ಮುಂದೆ ಕಂಕುಳು ಸಂದಿಯಲ್ಲಿ ಚಾತುಕೊಂಡಿತು. ತುಂಬಾ ಛಳುಕು ಕಾಣಿಸಿಕೊಂಡಿತು (ಊರುಳಿ. ೩೨); ಅವನಿಗೆ ಛಳುಕು ಹೊಡೆದಂತಾಯಿತು (ರಂಗನಾ. ೧೬೫).

ಚಳಕುಹಿಡಿ = ನರಗಳು ಮಿಡಿ ; ಸ್ನಾಯು ಅಲುಗಾಡದಂತಾಗಿ ನೋವಾಗು : ಅವನಿಗೆ ಚಳಕುಹಿಡಿದಂತೆ ಆಗಿತ್ತು (ಕನಕ. ೮೯) : ನನ್ನ ಸೊಂಟ ಚಳಕುಹಿಡಿದದ್ದು, ಕೈಕಾಲು ತತ್ತರಿಸಿದ್ದ ಅವಲಕ್ಷಣವೇ (ಸ್ವಶಿಆ. ೪೫೧). [ ದೇ.೫ ತಮಿ. ಮಲ. ಚುಳುಕ್ಕು ]

ಚಳಕು₂ (ನಾ). (ಹಾಡುವ ಪದ್ಯಗಳ) ಸಮುದಾಯ : ದುಂದುಮಿಯಲ್ಲಿ . . . ಚೌಪದಿಗಳಿರದೆ, ತ್ರಿಪದಿ ಅರ್ಧಚೌಪದಿ ಮೊದಲಾದವುಗಳ ಕೂಡುವಿಕೆಯ 'ಚಳಕು' ಗಳಿರುವುವು (ಕನ್ನಛಾ. ೯೫).

[ ←ಮರಾ. ಚಳಕ್ ]

ಚಳಕೆ, ಚಳಿಕೆ₁ (ನಾ). ೧. = ಚಳಕಿಗೆ : ವೈಡೂರ್ಯದ ಹೀರಗಡಗ ಚಳಕೆಗಳ (ಜಿನರಾ. ೯-೧೪೦). ಚಳಿಕೆ₁ : ೧ ಪಾಣಿ ಕಂಕಣ ಚಳಿಕೆ ಹಿಂಬಳೆಯು (ಜಿನಮು. ೦೨-೩೯); ಕರದ ಕಂಕಣ ಚಳಿಕೆ ಹಿಂಬಳೆ ಕೊರಳ ಸರ (ಜಿರಾಮಾ. ೨೫-೪೦). ೨. (ಕರಾ) ಕೈಬಳೆಗಳ ನಡುವಿನ ಹಸ್ತಾಭರಣ.

[ ದೇ. ೫ ತುಳು. ಚಳಿಕೆ ]

ಚಳಗತಿ 'ಚಲಗತಿ' ನೋ.

ಚಳಚಮತ್ಕೃತಿ (ನಾ). ವೇಗದ ಚಾತುರ್ಯ; ಅದ್ಭುತವಾದ ಚಟುವಟಿಕೆ: ಬಳಿಯ ರಕ್ಕಸರಥಿಕರೆಸುಗೆಯ ಚಳಚಮತ್ಕೃತಿಯಿಂದ ದೂಷಣ ಹಳಚಿದನು (ತೊರರಾ. ೩-೬-೦೪). [ ಚಳ₂ (=ಚಲ₂) + ಚಮತ್ಕೃತಿ ]

ಚಳಚಳ (ನಾ). ಒಂದು ಅನುಕರಣ ಶಬ್ದ : ಅಪ್ಪವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬಾಳುಬಾಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಚಶಾ. II, ೩೨).

ಚಳಚಳನೆ (ಅ). ೧. ಥಳಥಳನೆ: ಚಳಚಳನೆ ಮಿಂಚಿತ್ತು ಸಿಡಿಲ ಕೈದೀವಿಗೆವೊಲ್ (ಕಮುದ. ೦೯೩ ಪ್ರಯೋ); ಬಳಬಳನುದುರುತಿರ್ದುದು ಕರ್ವು ಚಿತ್ರಾಭೆ ಚಳಚಳನೊಳಗೇಱುತಿಹುದು (ಭರತ. ೬೬-೩೪). ೨. ಬೇಗನೆ; ಲಗುಬಗೆಯಿಂದ ಕೂಡಿ : ಭೋಜನಕೆ ಸಲುವುಪಕರಣವನಲ್ಲಲ್ಲಿಗೆಲ್ಲಕೆ ಚಳಚಳನನು ಗೊಳಿಸಿದರು (ಭರತ. ೪-೫೮); ಚಳಚಳನೆಯ್ದಿದರಂಗ ಶೃಂಗಾರಾಂಶು ತಳತಳನತ್ತಿತ್ತ ಕೆದಱೆ (ಭರತ. ೩೮-೩). [ <ಚಲ₂ + – ಅನೆ₁ ]

ಚಳಚಳಿಸು (ಕ್ರಿ). ಲಕಲಕಿಸು ; ತೆಳತಳಿಸು ; ಉಜ್ವಲವಾಗು : ಸಿರಿಸೋರ್ವ ಮುಖಪದ್ಮಂ ಚಳಚಳಿಸೆ (ರಾಮಾಶ್ವ. ೬೯-೨೪).

[ <ಚಲ₂ + – ಇಸು₃ ]

ಚಳಚಿತ್ತ 'ಚಲಚಿತ್ತ' ನೋ.

ಚಳಣ, ಛಲ್ಲಣ (ನಾ). ೧. ಅಡಿ ; ಪಾದ ; ಚರಣ : ನರೇಂದ್ರಂ . . . ಭೀಷ್ಮರ ಚಳಣಯುಗಕ್ಕೆಱಗೆ (ಪಂಪಭಾ. ೦೨-೬೦); ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜನಪತಿ ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂರಾಮಾ. ೦೬-೨೮). ಛಲ್ಲಣ : ೨. ಚಲನೆ ; ಹರಿದಾಟ : ಉದುಕದ ಛಲ್ಲಣಿಯಿಂದ ಚಂದ್ರ ಕಂಪನೆ ಅನುಭವಿಸುವಂತೆ (ತತ್ತ್ವಬಿಂ. ೩-೦೩). [ <ಸಂ. ಚಲನ ]

ಚಳತುಂಬಿ (ನಾ). ಸುಳಿದಾಡುವ ದುಂಬಿ ; ಚಂಚಲವಾದ ಭ್ರಮರ : ಗೊಂಚಲನಾಗೋತ್ತರ ಚಳತುಂಬಿಗೆ ಗುಣಗುಟ್ಟುವುದೆ ಮಾಯಾ (ಕದಾವ. ೩೬-೦). [ ಚಳ₂ ( = ಚಲ₂) + ತುಂಬಿ₁ ]

ಚಳತುಂಬು, ಚಳತೊಂಬು (ನಾ). ಓಲೆಗೆ ಸೇರಿಸುವ ಜುಮುಕಿಯಂತಹ ಅಲ್ಲಾಡುವ ಒಂದು ಆಭರಣ : ಫುಲ್ಲಲೋಚನೆ ಚಳತುಂಬು ಮಿಾನ ಬಾವುಲಿಯು . . . ಕರ್ಣದಲಿಟ್ಟು (ಶ್ರೀಕೃಪಾ. ೦೦); ನೀಲದ ಬಾವುಲಿ ಚವುಕಳಿ ಚಳತುಂಬು ತೂಬು ತಕ್ಕಡಿ ಇಟ್ಟರು (ಕರ್ನಾಕ. ೩೦೮); ಮುಗಿಲಲ್ಲಾಡುವ ಬಾವಲಿ ಮಲ್ಲಿಗೆ ಕಿವಿಗೂವು ಓಲೆಕೂವು ಚಳತುಂಬ (ಗರಿ. ೦೦೬-೯); ವಾಲೇಗೆ ಚಳತುಂಬ ಮರತೇ ಬಂದ್ನು (ನಾಶರ. ೦೦೮). ಚಳತೊಂಬು : ಎಸೆವ ಕಪೋಲ ಹೊಸ ಕುಂಡಲ ಚಳತೊಂಬುಗಳ್ಪ ಶ್ರವಣ (ಪುರಂದ. ೦-೧೯೦-೪).

[ ಚಳ₂ ( = ಚಲ₂) + ತುಂಬು₄./ತುಳು. ಚಳತುಂ, ಚಳ್ತುಂಬು ]

ಚಳತೆ (ನಾ). ೧. ಚಂಚಲತೆ ; ಚಪಲತೆ: ತಿಳಿವು ತಿರುಗಿತು ಲಾಸ್ಯಲೀಲೆಯ ಚಳತೆ ಚಂಡಿಸಿ ಹಿಂಗಿಹೋಯಿತು (ಕೃಭುಂಲೀ. ೬-೩೪). ೨. ಲಗುಬಗೆ ; ತ್ವರೆ : ಹಿಡಿಗುದುರೆಯ ಸಾವಿರವ ಬಿಡದೆ ಚ[ಪಾಠಾಂ. ದಚ್ಚ]ಳತೆ ಮಾಡಿ ತಂದೊಪ್ಪಿಸಿದನಂದು ಕಡುಗಲಿ ರಾಮನಾಥನಿಗೆ (ಕುರಾಸಾಂ. ೪೨-೮೦).

[ ಸಂ. ಚಲತಾ ]

ಚಳತೊಂಬು 'ಚಳತುಂಬು' ನೋ.

**ಚಳದಳ** 'ಚಲದಲ' ನೋ.

**ಚಳನ** 'ಚಲನ' ನೋ.

**ಚಳನತಳ** (ನಾ). ಪಾದತಲ ; ಕಾಲಡಿ : ಚಳನತಳಂಗಳಂ ತೊಳೆದು ಮುಂ ಬಟಾಟಟ್ಟಿಯ ತೀರ್ಥವಾರಿಯಿಂ . . . ಫಳಕುಳದಿಂ ಧರಾಧಿಪತಿ ಪೂಜಿಸಿದಂ (ಚಂದ್ರಪ್ರ. ೧೪-೯) ; ಚಳನತಳದ್ಯುತಿಚ್ಛಲದೆ ಕೆಂಬಿಸಿಲಂ ಕಿಡೆ ಮೆಟ್ಟಿ . . . ಪೊಜಿಮಟ್ಟಿಶೊರ್ವಳಭಿಸಾರಿಕೆ ಭೂಚರ ಚಂದ್ರಮೂರ್ತಿವೋಲ್ (ವರ್ಧಪು. ೬-೯೮). [ ಚಳನ (=ಚಲನ) + ತಳ$_{2}$ (=ತಲ) ]

**ಚಳಪಳ್** (ನಾ). ಒಂದು ಅನುಕರಣ ಶಬ್ದ : ನೀರು ಸುರಿಯುವಾಗ ಚಳವಳ ಸದ್ದು ಕೇಳಿಸುತ್ತಿತ್ತು (ಚೂಫ).

**ಚಳಪಳನೆ** (ಅ). ಚಳಪಳ ಎಂಬ ಸದ್ದಿನೊಡನೆ : ಚಳವಳನೆಳ್ಳು ಚಿಮ್ಮಿ ಗರಿಗಳ್ ಪೊಳೆಯಲ್ ನೆಗೆದೆಳ್ದು ಮತ್ತ್ಯಯುಂ ತಳತಳಿಸುತ್ತೆ . . . ತೋರ್ದುದಾ ವಿಳಸಿತರತ್ನಕೋಶಮೆನಿಸುತ್ತೆ ಧರಾತಳದೊಳ್ ನಿರಂತರಂ (ಹಾಲಾಸ್ಯ. ೯-೯-೨೦). [ ಚಳವಳ + – ಅನೆ$_{1}$ ]

**ಚಳಬಳಿಕೆ** (ನಾ). ೧. ಲಗುಬಗೆ; ಚಪಲತೆ; ಚಳಕ; ವೇಗ: ಚಳಬಳಿಕೆಗಳ ಚಾರುತುರಗಕುಲವನುವಾಗಿ ನಿಂದವು (ಸೋಮಶೇ. ೬-೨೮); ಭಾವಿಸುವೊಡಾ ಚಳಬಳಿಕೆಯನು ತಾವೆ ಬಲ್ಲರು ದೇವಭಕ್ತರು (ಪ್ರಭುಲೀ. ೨೩-೨೮); ಕುಣಿದ ವಸುರನ ರಥದ ಹಯ ದಿನಮಣಿಯ ದಿವ್ಯವರೂಥವಾಜಿಯ ಹಣೆಗೆ ಹೊಂಚುವ ಖುರದ ಚಳಬಳಿಕೆಯ[ಪಾಠಾಂ. ಪುಟದ ಚಲಗತಿಯ]ಧಡಾಳದಲಿ (ತೊರಚಾ. ೬-೨೦-೫೦) ; ಮಂಡಲಭೇದ ಚಳಬಳಿಕೆ ಚದುರೋಜೆವೆರಸಿ ರಣರಂಗದೊಳ್ . . . ಉರವಣಿಸಿದುವು (ಕೃಮಿಘ. ೨೫-೪೫). ೨. ಅಬ್ಬರ: ಪರಮವಿದ್ಯೆಯ ನೆರವಿ ನಿಲುಕುವ ಚಳಬಳಿಕೆ ಮೊಳಗುವ ಜಯಾಂತದ ವಾದ್ಯ ರಭಸದಲಿ (ತೊರಚಾ. ೬-೦೮-೮) ; ಕೊರಲೊಂದು ಚಳಬಳಿಕೆ [ಪಾಠಾಂ. ಳಕೆ]ಯನುಳ್ಳ ಪಲಬಣ್ಣದಿರವಾಂತ ಜೋಡ ಮೈಗಿಟ್ಟು (ವರ್ಧಚ. ೧೦-೦೨೬). ೩. ಗಾನದ ಇಂಪು: ಕೊರಳ ಚಳಬಳಿಕೆಯುಲಿಯೊಳ್ [ಪಾಠಾಂ. ಳಕೆಯೊಳುಲಿಯ]ಪುರುಷನ್ನೆದೆ . . . ಬಸಳೆ ತಪ್ಪುದಂಗನೆ (ಅನವ. ೮-೨೦) : ಧಡ್ಡೆಯಿಲ್ಲದೆ ತನ್ನ ಗಂಧರ್ವಗಾಯಕಮನಡ್ಡಮಾಡುವತಲಖಳ ಚಳಬಳಿಕೆಯಿಂ ಕೊನರಿ (ಲಿಂಗಪು. ೨೬-೯೬). ೪. ಸೊಗಸು; ಚಾತುರ್ಯ; ಬಿನ್ನಾಣ (?) : ಚಳಬಳಿಕೆಯೊಳು ಚಂದದೊಳು ಬಂಧದೊಳು ನಿರ್ವಾಳ ಮೋಹಿಗಳು ನೆರೆವಾಗ (ಭರತ. ೩೦-೧೩೦) ; ಹಾವಭಾವದ ಚಳಬಳಿಕೆ ರಂಜಿಸೆ ತನ್ನ ಹಾವಂತೆ ಬಂದೊರ್ವಳೊಲೆದು (ಭರತ. ೯೭-೩೮). ೫. [ನಾಟ್ಯ] ಒಂದು ನೃತ್ಯಭಂಗಿ : ಢಾಳ ಡಿಳ್ಳಾಯಿ ಚಂಡಣ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೭-೭೭ ಪ). [ ಚಳಬಳ$_{0}$ + – ಇಕೆ ]

**ಚಳಬಳಿಸು** 'ಚಳವಳಿಸು' ನೋ.

**ಚಳಮತಿ** (ನಾ). ಚಂಚಲಬುದ್ಧಿಯುಳ್ಳ ವ್ಯಕ್ತಿ : ಚಳಮತಿಯಾದ ನೀಂ ಜಡಧಿಸಂಭವೆಯಪ್ಪುದಜಿಂ (ಗದಾಯು. ೯-೫) ; ಚಳಮತಿ ಬೆಸನಿ ಸುಖಿ ಪ್ರಿಯಂ (ಸೂಕ್ತಿಸು. ೦೬-೫೨). [ ಚಳ$_{2}$ (= ಚಲ$_{2}$) + ಮತಿ ]

**ಚಳಮಾಲೆ** (ನಾ). ಪೊದರಾಗಿ, ನೇರವಾಗಿ ಬೆಳೆಯುವ ಒಂದು ಬಗೆಯ ಮುಳ್ಳಿನ ಗಿಡ,–ಕಂಟಿ : (ಕ). [ ? ]

**ಚಳಮಿಳನೆ** (ಅ). ಚಕಚಕನೆ ; ಮಿರಮಿರನೆ: 'ತಾನೆ ಹೂ, ಹಕ್ಕಿ,' ಹೆಣ್ಣು ಕಣ್ಣೊಂದಾಗಿ ನೀಡಿ ಬಾನ್‌ಮಿನಂಗಳಲ್ಲು ಚಳಮಿಳನಾಗಿ ಅಗ ಬಗೆಯ ಮಿಂಚಿತ್ತು ಒಂದೇ ಬಿಜು (ಮುಕ್ತಕಂ. ೩೨-೬). [ಚಳಮಿಳ$_{0}$ + – ಅನೆ$_{1}$]

**ಚಳಯ$_{1}$** 'ಚಳೆಯ$_{1}$' ನೋ.

**ಚಳಯ$_{2}$**, ಚಳೆಯ$_{2}$, ಚಾಳೆಯಂ, ಛಳೆಯ$_{2}$ (ನಾ). ೧. ಲಗುಬಗೆ ; ವೇಗ ; ಶೀಘ್ರತೆ : ಕಟ್ಟಾಯತನಾಗಿ ಚಳಯದಿಂ ಪೊಜಿಮಟ್ಟಂ (ಅನಂಪು. ೦೦-೫೬) ; ಚಳಯದಲಿ ತರಿಸಿದನು ಸಂಭಾರವನು ತವಕದಲಿ (ಶಾರಿಚಾ. ೦-೫೮). ೨. ಚಲನ ; ಗತಿ : ಸುಳುಹಿನ ಸೂಕ್ಷ್ಮದ ತಿಳುಹಿನ ಚಳಯವ ತಾಳ್ಕೆಡೆಯ ಬಲ್ಲರೆ ಬಲ್ಲರೆಂಬೆ (ಮೋಳಿಗೆಯ. ೦೦೩-೪೦೨). **ಚಳೆಯ$_{2}$:** ೧. ಪಟನೇರಿಂದಂ ಮರ್ದಿಸಿ ಚಳೆಯ[ಪಾಠಾಂ. ವಳಯ]ದೊಳಂ ಪೂಸೆ (ಜಮದ. ೦೦-೬೮) ; ಚಳೆಯದಿಂ ಸೂತನವನಿವನ ತರಲಾಲಯಕೆ (ನೀಂದ್ರ. ೪೦). **ಚಾಳೆಯ:** ೩. ಕುಪ್ಪಳಿಸುತ್ತ ಸಾಗುವ ಒಂದು ರೀತಿಯ ಚಲನ ಕ್ರಮ: "ಚಾ [ಪಾಠಾಂ. ಡಾ] ಳೆಯಂ ಗ[ಪಾಠಾಂ. ದ]ತಿ ಲಂಘನಂ" (ಮಂಗರಾ. ೨೩-೯). ೪. ಕುಸ್ತಿಯಲ್ಲಿ ಅಥವಾ ಕಾಳಗದಲ್ಲಿ ಶತ್ರುವನ್ನು ಹಿಡಿಯಲು ಹೊಂಚು ಹಾಕುತ್ತಾ ವೇಗವಾಗಿ ಸಂಚರಿಸುವ ಕ್ರಮ : ಕೈಲಾಸ ಚಾಳೆಯ ಮಂಡಿಸೀರಣಾ ಹಜ್ಜೆಯಕ್ರಮಂ (ಮಂಗರಾ. ೮೮-೩೮) ; ಶಕ್ತಿ ಮೊದಲಾದ ಕೈದುಗಳೊಳು ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದುರ್ವಾಣಿ ಲಾಘವ ಪಂಥ ಪಾಡುಗಳನರಿದು ಬಿನ್ನಾಣದಿಂ ಗಾಯ ಗಾಣಿಸಿದರತಿಬಲರು (ಕೃಮಿಘ. ೨೨-೬). ೫. [ಸಂಗೀತ] ಸ್ವರ ವಿನ್ಯಾಸ ಕ್ರಮ : ಗತಿ ಗಮಕ ಗಹಗಹಿಕೆ ತಿರುವು ಚಾಳೆಯ ಕೊಂಕು ಜತಿ ಜೋಕೆ ಮಾರ್ಗವಣೆ . . . ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋಚಿತ ತಾರ ಮಧುರಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಜಡಲಾ. ೬-೬) ; ಗಹಗಹಿಕೆವಡೆದ ವಹಣಿಯ . . . ಮಹ ಚಾಳೆಯದಲ್ಲಿ ಮೂರ್ತಿವಡೆದುದು ರಾಗಂ (ಜಕೋಜ. ೨-೨೯). ೬. [ನಾಟ್ಯ] ನೃತ್ಯದಲ್ಲಿ ಹೆಜ್ಜೆಯಿಡುವ ಕ್ರಮ: ಪಯ ಪಾಡು ನಿಬ್ಬವಣೆ ಚಾಳೆಯಮುಲ್ಲಾಸ ತಿರುಂಪು ತ ದ ವಿ ತ್ರ ದ ಮು ನ್ನ ಯ ನ ವಿ ಶೇ ಷ ಂ ಡಿಳ್ಳಾಯಿಯ ಲುಳಿ ಪುದಿದುಸುರಮಸವಿನಂ ನರ್ತಿಸಿದರ್ (ಧರ್ಮನಾ. ೨-೩೬); ತೋಳ ನೀಡಿದರು ಮನ್ಮಥನೊಜೆಯಿಂದುರ್ಚಿ ಬಾಳ ನೀಡಿದನೊಯಂಬಂತೆ ಚಾಳೆಯದೊಳು ಹೊಳೆದರು ರಾಜಸುತರೆದೆ ಹೋಳಾಗುವಂತೆ ಹೊಮ್ಮಿಜಿದು (ಭರತ. ೦೨-೬೬); ಅತಿ ಸೂರಿಯಲಿ ಚಾಳೆಯವಾಗಿ ತಿರುಹಿದಳು(ಅಕ್ಕಚಾ. ೨೬-೦೮). **ಛಳೆಯ:** ೧.ಛಳೆಯದಲಿ ಬರಹೇಳು ನಿನ್ನೀ ತಲೆಯೊಡೆಯನಹ ವಿಷ್ಣುವನು (ನಿಭಾಗ. ೬-೬-೦೦). [ <ಪ್ರಾ. ಚಲಿಅ. / ಸಂ. ಚಲಿತ ]

**ಚಳಯಂಗುಡು** 'ಚಳೆಯಂಗೊಡು' ನೋ.

**ಚಳಯಂಗೊಡು** 'ಚಳೆಯಂಗೊಡು' ನೋ.

**ಚಳಯಂಬಿಡು** (ಕ್ರಿ). ಜಲಸೇಚನವನ್ನು ಪಡೆ ; ಸಿಂಪಡಣೆಯನ್ನು ಪಡೆ : ಕ್ಷಿತಿತಳಂ ಸದ್ರಾಗದಿಂದೆಂಬಿನಂ ಘನಕಾಶ್ಮೀರದ ನೀರಿನಿಂದೆ ಚ ಳ ಯ ಂ ಬೆತ್ತೆತ್ತಲುಂ . . . ಮಾಡಿತ್ತು ಸಂತೋಷಮಂ (ವರ್ಧಪು. ೦೩-೬೫). [ ಚಳಯ$_{1}$ (<ಚಳೆಯ$_{1}$) + ಪೆಱು$_{1}$ ]

**ಚಳಯಗೊಡು** 'ಚಳೆಯಂಗೊಡು' ನೋ.

**ಚಳಯಿಸು** 'ಚಲಿಸು' ನೋ.

**ಚಳವಳ**, ಚಳವಳಿ, ಚಳುವಳಿ (ನಾ). ೧. ಚಲನೆ ; ಅಲ್ಲಾಡುವಿಕೆ ; ಜರಗುವಿಕೆ. 'ಚಳವಳಿಸು' ಪರಾ.೨. ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿಡಾಯ; ಸಾಮೂಹಿಕ ಕ್ಷೋಭೆ ; ಯಾವುದಾದರೂ ಒಂದು ಪದ್ಧತಿ, ಕ್ರಮ ಅಥವಾ ಕಾನೂನಿನ ವಿಷಯವಾಗಿ ನಡೆಸುವ ಸಾಮೂಹಿಕ ಆಂದೋಲನ: ನನ್ನ ಮಿತ್ರರ ಪ್ರೀತಿಯ ಚಳವಳಕ್ಕಾದರೋ ಇದೇ ಒಂದು ನೆವವಾಯಿತು (ಜೀವನಾ. ೯) ; ರಾಷ್ಟ್ರೀಯ ಚಳವಳದಲ್ಲಿ ಸೇರಿಕೊಂಡು ತ್ಯಾಗಬುದ್ಧಿಯಿಂದ ದೇಶಸೇವೆ ಮಾಡಿದ ವೀರವ್ಯಕ್ತಿ ಅವರು (ರಾಜಪ. ೨೭) ; ಬ್ರಿಟಿಷರ ಕಾಲದಲ್ಲಿ ನಾಟ್ಯಕಲೆಯನ್ನೆ ಬಹಿಷ್ಕರಿಸ ಬೇಕೆಂದು ಚಳವಳವೆದ್ದಿತ್ತು (ಭಾರತ. ೫೫೦). **ಚಳವಳಿ :** ೨. ಸ್ವದೇಶಿ ಚಳವಳಿಯ ಸಮಯದಲ್ಲಿ . . . ತಂದೆಯವರು ತಮ್ಮ ನೌಕರಿಯನ್ನೂ ಬಿಡುವ ಪ್ರಸಂಗ ಬಂದಿದ್ದ (ಛಾಂಕಿ. ೨) ; ಕರನಿರಾಕರಣೆಯ ಚಳವಳಿಯ ಸಮಯದಲ್ಲಿ . . . ಅಲ್ಲಿ ಇದ್ದೆ (ಬದುಕು. ೦೦). **ಚಳುವಳಿ :** ೨. ಇವರು ಹೂಡಿದ ಚಳುವಳಿ ಯುರೋಪಿನ ಬೌದ್ಧಿಕವಿಕಾಸವನ್ನು ತ್ವರೆಗೊಳಿಸಿತು

(ಕನ್ನಸಂ. ೨೨); ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು (ಭಾರದ. ೪೨೮); ಕ್ಷಾಮನಿವಾರಣೆಗೆ . . . ತಿಲಕರು ಚಳುವಳಿಯನ್ನ ಹೂಡಿದರು (ಸ್ವಾವೀರ. ೫೯): ಚಳುವಳಿ ನಿಂತಿತ್ತು, ಕಾಲೇಜು ತೆರದಿತ್ತು (ಇಂಚಾಪ. ೩೯-೮೨).

[ ←ಮರಾ. ಚಳವಳ ]

**ಚಳವಳಿ** 'ಚಳವಳ' ನೋ.

**ಚಳವಳಿಖೋರ** (ನಾ). ಚಳವಳಿ ಮಾಡುವವನು ; ಚಳವಳಿ ಮಾಡುವ ಸ್ವಭಾವದವನು: ಈ ಚಳವಳಿಖೋರ ಮಂದೀ ಮನಸೂ ಬಲೇ ಚಂಚಲ (ತಿಮಗು. ೧೨). [ ಚಳವಳಿ + – ಖೋರ(<–ಕೋರ್ರ) ]

**ಚಳವಳಿಸು**, ಚಳಬಳಿಸು (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲನೊನಲನಳ್ಳಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಟಿಯ್ದು ಬೆಳ್ಳೊಗದಿನಿರಂ (ಅಜಿತ. ೫-೯೦); ಕೌತುಕವಿದೇನೆಂದು ಚಳವಳಿಸುತಿರಲೆಲ್ಲರು(ಜನಮು. ೫೦-೫೯). **ಚಳಬಳಿಸು** : ೨. [ನಾಟ್ಯ] ನೃತ್ಯಭಂಗಿಯನ್ನು ತೋರು: ತಾಳದಲಿ ತರಹರಿಸಿ ಮಲ್ಲನೆ ಮೇಳದಲಿ ಮೈನಿಗುರಿ ಕರ ಸಂಚಾಳಿಯಲಿ ಚಳಬಳಿಸಿ ತಿರುಪಿನ ಮಡುಹಿನಲಿ ಮಣಿದು . . . ವಿನುತ ಮರಾಳಗತಿಯಲಿ ಗಮಕಿಸುತಮೊಪ್ಪಿರ್ದಳಾ ಮಾಯೆ (ಪ್ರಭುಲಿ. ೪-೫೬). [ ಚಳವಳ + – ಇಸು$_3$ ]

**ಚಳಾಯ** (ನಾ). ಸಾಗಾಣಿಕೆಯ ಸುಂಕ ; ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ವಸ್ತುಗಳ ಮೇಲೆ ಸಾಗಣೆಗಾಗಿ ಹೇರುವ ಸುಂಕ : ಉಳಿದ ಶೇಷವುಮಂ ಚಳಾಯವುಮಂ ಬಿಟ್ಟು (ಎಕ. VI, ತರೀಕೆ. ೨೦-೨೬ ; 1155); ಆರು ವರ್ಷಗಳ ಹಿಂದೆ ದಾಯದರೆ ಎಲ್ಲದರ ಜತೆಗೆ ಚಳಾಯವನ್ನೂ ಘಟಕಾಸ್ಥಾನಕ್ಕೆ ಮಾಯಕೊಡಲಾಯಿತು (ಸವತಿ. ೨೧). [ ಚಳ್$_2$(=ಚಲ್$_8$) + ಆಯ$_7$ ]

**ಚಳಿ$_1$**, ಸಳಿ$_1$ (ಕ್ರಿ). ಚಳಿತು, ಸಳಿತು (ಭೂತನ್ನೂ) . ೧. ಪ್ರಭಾವ ಕಡಮೆಯಾಗು ; ಸೆಡೆ ; ಹಿಂದೆಗೆ ; ಕಂಗ್ಗು ; "ಚಳಿ–ವಿಗತಪ್ರಭಾವೇ (ಶಕ್ತಿಗುಂದು), ಶೀತೇ ಚ " (ಶಮಧಾ); ಕಳ್ಳ ಕಸವರವಂನೆಲ್ಲಮನೇಗೆಯ್ದೆಯೆಂದು ಬೆಸಗೊಂಡೊಡನಿತುಮಿರ್ದುವಯ್ನಾಸಿರಮಜುಸಾಸಿರದೀನಾರಮನ್ನ ಸೂಳೆಗೆ ಬಯಮಾದುದುಟುದುವೆಲ್ಲ[ಂ] ವಣ್ಣ[ಂ] ಚಳಿಯದಿರ್ದುದೆಂದೊಡೆ (ವಡ್ಡಾರಾ. ೧೨೫-೨೫) ; ತುಂಗಕುಚದ್ವಯ ಶೈಲದುರ್ಗಮಂ ಚಳಿತ[ಪಾಠಾಂ. ತಳೆದ]ಡರ್ದೇಱದಂಗಜನುಂ (ಗದಾಯು. ೮-೫೯); ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತುಮಿಂತೆಂದಂ (ಅನಂತಪು. ೧೧-೯೦೫); ಚಳಿಯದಾಹವಕಾಂಕ್ಷೆ ಯಕ್ಷರಿಗೆಲೆಲೆ ನೋಡಾ (ಜಾತ್ರಾ. ೭-೫೧); ಬವರಿವರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮಂ ಕೈಗೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೬-೧೧ ವ); ನಿಮ್ಮಾ ಬಲ್ಮೆಯ ಜಂಕಣೆಗಂ ಕಣೆಗಂ ಚಳಿತರ್ (ರಾಮಾಶ್ವ. ೧೨೧-೨೬). ೨. ಬಳಲು ; ಸೋಲು ; ಸೋತುಹೋಗು : ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳಿವಿನಮಿಱದರೆರಡು ಬಲದೊಳ ಮುದಟರ್ (ಶಂಪಶಾ. ೧೩-೫೯); ಖಿಲಿಲ್ ಖಿಲಿಲ್ ತೊಪ್ಪು ತೊಪ್ಪು ಭಳಿಲ್ ಭಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮); ಬಳಸಿ ತೊಟಲ್ದೆನ್ನಡಿಗಳ್ ಚಳಿತುವು ಕಣ್ ನಂದಿ ಬಂದವುದು (ಲೀಲಾವ. ೧೪-೬೨); ಆವ ಪರಿಯೊಳಾದೊಡೆಯು ಚಳಿಯದೆ ಮತ್ತೆ ಶ್ರೀವರನೊಳು ತೋಳಲಿದರ ದೇವದೇವನ ಕಾಣಲಹುದು (ಕೃಷ್ಣಗೋ. ೨-೯೯). **ಸಳಿ$_1$** : ೨. ತಲೆ ಸಳಿತು ಕೈಮಱದರಂತೆ ಯೆಸುವಾಳುಗಳ್ ನಿಲೆ ಕಂಡು (ಸಮ್ಯಕ್ತ್ವಾ. ೮-೩೮). [ ದೇ.ಶ ತಮಿ. ತುಳು. ಚಲಿ ]

**ಚಳಿ$_2$**, ಛಳಿ, ಸಳಿ$_2$ (ನಾ). ೧. ಶೀತ ; ಶೈತ್ಯ ; ಥಂಡಿ : "ಚಳಿ–ವಿಗತಪ್ರಭಾವೇ(ಶಕ್ತಿಗುಂದು), ಶೀತೇ ಚ " (ಶಮಧಾ); ಚಳಿ ಬಿಸುವು ಬಿಸುವು ಚಳಿಯನೆ ಬಳೆದುದು ಹಿಮರಾಜತೇಜಮಿಾ ಜಗದೆಡೆಯೊಳ್(ಗಿರಿಕ. ೯-೭೪); ಗಿರಿಯ ಶೃಂಗಾಗ್ರದೆ ಚಳಿ ಮಳೆ ಬಿಸಿಲೆನ್ನದುರುತರ ಯೋಗಮಾರ್ಗದಲ್ಲಿ . . . ಯೋಗೀಶ್ವರರಿರುತಿಹರು (ಕಂಸವಿ. ೨-೩೧); ಅಲ್ಲಿ ಕೊರಗೆಂಬುದಿಲ್ಲಮ್ಮ, ಅಲ್ಲಿ ಚಳಿ ಛಿದ್ರವಿಲ್ಲಮ್ಮ (ಇಂಗೀತ. ೮೯-೬). ೨. ಹಿಮ ; ಮಂಜು . 'ಚಳಿವೆಟ್ಟು' ಪರಾ. ೩. ಚಳಿಜ್ವರದಲ್ಲಿ ಬರುವ ಮೈನಡುಕ : ಅವನಿಗೆ ಚಳಿ ಬಂದಿತ್ತು (ರೂಢಿ). **ಛಳಿ** : ೧. 'ಛಳಿಗಾಲ' ಪರಾ. ೩. 'ಛಳಿಜ್ವರ' ಪರಾ. **ಸಳಿ$_2$** : ೧. ಬೆಂಕಿಗೆ ಸಳಿ ಬಂದು ಉದಕವ ಕಾಯಲಾಗಿ ಹಿಮ ಹಿಂಗಿ ಜ್ವರ ಬಂದಿತ್ತು (ಸಗಜೊ. ೬೭); ಏನು ಕಾರಣವಾಗಿ ನೀನಿಂತು ಮೌನದಲ್ಲಿ ಮಂಡಿಸಿರ್ದೆ . . . ಸಳಿ ಮಳೆ ಘಾಳಿ ಬಿಸಿಲ ಬೇನೆ ಬಾಯಾಱಿಕೆ ಪಸಿವು ಮುಂತಾದ ವೇದನೆಗಳೊಂದುಂ ಗಣನೆಗೆ ತಾರದೆ (ಭಾರತಾಂ.೧೯-೭೧); ಹರಿಯುಮಿಾ ಹಿಮಕಂಜಿ ಕಲಶಾಬ್ಧಿಯಂ ಬಿಟ್ಟು . . . ಉರುವ ಸಳಿ ತೊಲಗದಿರಲೋಡಿಬಂದಾಗಸದ ತರಣಿಮಂಡಲ ಮಧ್ಯದೊಳ್ಮನೆಯ ಮಾಡಿಕೊಂಡಿರುವನೀ ಹೈಮಂತ ಶಕ್ತಿಯಂ ಬಣ್ಣಿಸಲ್ಕಾರಳವೂ ಮೂಜಗದೊಳು (ಅರ್ಜಾವಿ. ೧೬-೨೯). [ ದೇ.ಶ ತಮಿ. ಮಲ. ಚಳಿ ; ತುಳು. ಚಳಿ, ಚಲಿ, ಸಲಿ ; ತೆಲು. ಚಲಿ ]

**ಚಳಿ$_3$** 'ತಳಿ$_4$' ನೋ.

**ಚಳಿಕ** (ನಾ). ಲವಲವಿಕೆ : "ತವಕ, ಲವಲವಿಕೆ, ಚವಲ, ಆಸವಸ, ಚಳಿಕ" (ಕಂನುಹು. ೮೪). [ ? ]

**ಚಳಿಕಿಗೆ** 'ಚಳಕಿಗೆ' ನೋ.

**ಚಳಿಕೆ$_1$** 'ಚಳಕೆ' ನೋ.

**ಚಳಿಕೆ$_2$** (ನಾ). ಇಬ್ಬನಿ ; ಹಿಮ : ಪರೆದುದು ಚಳಿಕೆ ರವಿಯ ಕರಂಗಳು ಪರಕರಿಸಿದವೆಣ್ದೆಸೆಯ ಹರುಷವಾದುದು ಕೋಕಮಿಥುನ ಕೋಕನದ ಕೊರಗೆ ಚಕೋರ ಕೈರವವು (ಕರ್ಣಕಾ. ೪-೬೨). [ ? ]

**ಚಳಿಕೊಡು** 'ಚಳಿಗೊಡು' ನೋ.

**ಚಳಿಕ್ಕ** 'ಚಳಂಕ' ನೋ.

**ಚಳಿಗದಿರ್** (ನಾ). ತಂಪಾದ ಕಿರಣ; ಹಿಮಕಿರಣ: ಶಶಿಯ ಚಳಿಗದಿರ್ಗಳ ಕುಳಿರ್ಕಾಂತಿ (ಶ್ರೀರಾಮಾ. ೪೨೦-೬).

[ ಚಳಿ$_2$ + ಕದಿರ್$_2$ ]

**ಚಳಿಗದಿರ**, ಸಳಿಗದಿರ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಸವಿಗಡಲಣುಗಂ . . . ನೈದಿಲ್ಗೆಳೆಯ ಚಂದ ಚಳಿಗದಿರ ಕತ್ತಲೆವಣೆಯ ಶಶಿಯ ನಾಮವುಂ" (ಕಲ್ಯಕ್ಕ. ೪೩); "ಚಳಿಗದಿರಂ ಕತ್ತಲೆವಣಿ ಕುಳಿರ್ವೆಳಗನು . . . ತಣ್ಗದಿರ ಮಂಜುಗ್ಗೆಯಂ ಚಂದಂ" (ಕವಿಕಂ. ೪೩). **ಸಳಿಗದಿರ** : ಸಳಿಗದಿರನ ಕಳಂಕನುದ್ದುವವೊಲು ತಿಲಕವ ತೊಡೆದು (ಜ್ಞಾನಪ. ೪೩-೮೦).

[ ಚಳಿಗದಿರ್ + – ಅ$_7$ ]

**ಚಳಿಗದಿರ್ಗಲ್ಲು** (ನಾ). ಚಂದ್ರಕಾಂತಶಿಲೆ : ಎಕ್ಕಲಂ ಚಳಿಗದಿರ್ಗಲ್ಲಿನೊಳು ದಾಡೆಯಂ ಮಸೆದು ಪದಗೋಲಿಸುವನಿತಕ್ಕೆ (ರಾಘಶ. ೧೬-೬೨).

[ ಚಳಿಗದಿರ್ + ಕಲ್ಲು(<ಕಲ್$_3$) ]

**ಚಳಿಗಾಲ**, ಛಳಿಗಾಲ (ನಾ). ಚಳಿ ಹೆಚ್ಚಾಗಿರುವ ಕಾಲ ; ಮಾಗಿ ; ಹೇಮಂತ ಶಿಶಿರಋತುಗಳ ಸಮಯ : ಹಂಪ ತೋಱಗಳ ನಡುವೆ ಧೃತಿಯೊಸರಿಸದುಱ ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸಪು. ೨-೮೨); ಬಿಸಿಲು ಮಳೆ ಚಳಿಗಾಲವಿವು ಸಂಧಿಸಿದವೇ ರಘುಪತಿಯನೀಯಾಯಸವ ನೋಡಲಿಕಿದ್ದೆವೇ ಶಿವಶಿವ ಮಹಾದೇವ (ತೊರರಾ. ೭-೨-೬). **ಛಳಿಗಾಲ** : ಛಳಿಗಾಲದಲ್ಲಿ ಅವು ಒಂದೂವರೆ ಅಡಿ ಆಳದವರೆಗೂ ಹೋಗುತ್ತವೆ (ಕೀಟಬ. ೩).

[ ಚಳಿ$_2$ + ಕಾಲ ]

**ಚಳಿಗಿರಿ** (ನಾ). ಹಿಮಾಲಯ ಪರ್ವತ; ಹಿಮಾಚಲ: ಒಂದು ದಿನ ಚಳಿಗಿರಿಯ [ಪಾಠಾಂ. ವೆಟ್ಟ] ದೆಸೆಗೆ ಚೆಲ್ಲಲು ನಿತ್ಯದಂತಲ್ಲದತ್ತ ನೀ ಬಿಸುಟ ಪರಿಯ ತಿಳುಹೆನಲ್ಕೆ (ಶ್ರಾರಾ. ೪-೧೪). [ ಚಳಿ$_2$ + ಗಿರಿ$_1$ ]

**ಚಳಿಗೊಳ್** (ಕ್ರಿ). ತಣ್ಣಗಾಗು ; ಕಂಗಿಡು ; ತಗ್ಗು : ಕೇಡಿನಲ್ಲಿ ಕಂಗೆಡದ ಒಲವು, ಮುಪ್ಪಿನಲ್ಲಿ ಚಳಿಗೊಳದ ಗೆಲವು (ಇಂಗೀತ. ೮೩-೦೮). [ ಚಳಿ$_1$ + ಕೊಳ್$_1$ ]

**ಚಳಿಜ್ವರ, ಛಳಿಜ್ವರ** (ನಾ). ಚಳಿಯೊಡನೆ ಬರುವ ಜ್ವರ ; ಮೈನಡುಕದೊಂದಿಗೆ ಏರುವ ಜ್ವರ ; ಮಲೇರಿಯಂ : ಇವು ಚಳಿಜ್ವರ ಅಥವಾ ಮಲೇರಿಯಾಜ್ವರವನ್ನುಂಟುಮಾಡುತ್ತವೆ (ಪರಜೀ. ೨೭). **ಛಳಿಜ್ವರ :** ಮಂದಾಗ್ನಿಯಲ್ಲಿ, ಛಳಿಜ್ವರದಲ್ಲಿ [ಪಾಠಾಂ. ಛಳಿಯಲ್ಲಿ] . . . ವಮನಕ್ರಿಯೆಯ ಮಾಡಿಸುವುದು (ವೃದ್ಧಸಾ. I, ೩೦) ; ಗರುಗದ ಸೊಪ್ಪಿನಲ್ಲಿ ಒಂದು ಪಾವು ರಸವಂ ಹಿಂಡಿ ಛಳಿಬರುವ ಸಮಯದಲ್ಲಿ ಕೊಡಲು ಛಳಿಜ್ವರಂ ಮಾಣ್ಗುಂ (ಸಕವೈ. ೭೩). [ಚಳಿ$_2$ + ಜ್ವರ]

**ಚಳಿತ$_1$** (ನಾ). ಚಳಿ ; ಶೀತ ; "ಕಂಳಿದುರ್ಗಾದು" (ಚತುನಿ. ೬. I, ೩೭). [ಚಳಿ$_2$ + – ತ$_2$]

**ಚಳಿತ$_2$** 'ಚಲಿತ' ನೋ.

**ಚಳಿನಾಡು** (ನಾ). ಚಳಿ ಹೆಚ್ಚಾಗಿರುವ ನಾಡು ; ಶೀತವಲಯದಲ್ಲಿ ಇರುವ ನಾಡು : (✱). [ಚಳಿ$_2$ + ನಾಡು]

**ಚಳಿಯ** 'ಚಳೆಯಂ$_1$' ನೋ.

**ಚಳಿಯಿಸು** 'ಚಲಿಸು' ನೋ.

**ಚಳಿಲ್** (ನಾ). ಒಂದು ಅನುಕರಣ ಶಬ್ದ : ಪೊಸ ಪೂವಿನೊಳ್ ಪೊರೆದು ಪೊಣ್ಮಿದ [ಕ]ಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) ; ಉರ್ಕಂಬುಗಳೆಚಿಗಿರೋಮರೋಮಕ್ಕೆ ನೆಳಲ್ ನೆಕ್ಕು ಚಳಲ್ ಚಕ್ಕು ದೊಗರ್ ದೊಕ್ಕಿನ ನಾಂಟಿದುವರಾತಿಭಟರವಯವಮಂ (ಜಗವಿ. ೭-೫೦).

**ಚಳಿಲನೆ** (ಅ). ಒಮ್ಮೆಲೆ ; ಕೂಡಲೆ : ಚಳಿಲನೆ, ಕಿಳಿಲನೆ, ಗಳಗಳನೆ, ಕಿಳಿಕಿಳನೆ (ಶಬ್ದಾನು. ೦೯೦ ವ್ಯಾಖ್ಯಾ). [ಚಳಿಲ್ + – ಅನೆ$_1$]

**ಚಳಿವೆಟ್ಟ** 'ಚಳಿವೆಟ್ಟು' ನೋ.

**ಚಳಿವೆಟ್ಟಣುಗಿ** (ನಾ). ಹಿಮವಂತನ ಮಗಳು; ಪಾರ್ವತಿ: ಚಳಿವೆಟ್ಟಣುಗಿಯಾಣ್ಮನ ಭಕ್ತ ಸಂಗನಾದಳವ ನೋಡಲ್ಕೆ . . . ಸೂರ್ಯನುದಯಂಗೈದನಾ ಸಮಯದಿ (ಪ್ರಾಭಲಾ ೦೩-೨೪). [ಚಳಿವೆಟ್ಟು + ಅಣುಗಿ (< ಅಣುಂಗಿ)]

**ಚಳಿವೆಟ್ಟಳಿಯ** (ನಾ). ಹಿಮವಂತನ ಅಳಿಯಂ; ಶಿವ: "ಎಲರುಣಿವೆದೆಯಂ ಚಳಿವೆಟ್ಟಳಿಯಂ ಸಸಿದಲೆಯ . . . ಪೇಟ್ವರ್ ಸ್ಮರಹರಂಗೆ ನಾಮವಿದೆನುತುಂ" (ಶವಿಳಂ. ೦೫). [ಚಳಿವೆಟ್ಟು + ಅಳಿಯ]

**ಚಳಿವೆಟ್ಟಾಣ್ಮ** (ನಾ). ಹಿಮಗಿರಿಯ ಒಡೆಯ ; ಹಿಮವಂತ ; ಚಳಿವೆಟ್ಟಾಣ್ಮನ ಪುತ್ರಿ ಸುರ್ಕೆ ಚಳಿಯಿಂ (ರಾಜಶೇ. ೯-೦೭). [ ಚಳಿವೆಟ್ಟು + ಆಣ್ಮ (< ಆಳ್ವ) ]

**ಚಳಿವೆಟ್ಟು, ಚಳಿವೆಟ್ಟ, ಛಳಿವೆಟ್ಟು** (ನಾ). ಹಿಮಗಿರಿ ; ಹಿಮಾಚಲ : "ಕುಳಿರ್ವೆಟ್ಟೈಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುವಿ. ೦೦) ; ಮನ್ಮಥನು ತಳಿರ್ರಥವನೇಱ ಮುಂದೆ ಪೋಗಲ್ಕಾ ಚಳಿವೆಟ್ಟು ಕಣ್ಗೆ ರಂಜಿಸಿತು (ಮೋಹತ. ೭-೪೫). **ಚಳಿವೆಟ್ಟ:** ಚಳಿವೆಟ್ಟದಳಿಯ ಕೇಳುಳಿದ ಮಾತೇನೀಗ (ಮಲ್ಲಾ ಶಿ. ೬-೪). **ಛಳಿವೆಟ್ಟು:** ಛಳಿವೆಟ್ಟನಿಂದಬ್ಧಿ ಪರಿಯಂತದವನಿಯು ತದಾಕಾರದಂತೆಸೆವುದು (ನವಮೋ. ೨-೦೮).

ಚಳಿವೆಟ್ಟುಮಗಳ್ = ಚಳಿವೆಟ್ಟಣುಗಿ: ಚಳಿವೆಟ್ಟುಮಗಳ ನಲ್ಲಂ ಪೇಳ್ದ ಶಾಸ್ತ್ರಂಗಳ್ (ಏಕೋಶ್ಪ. ೭-೭೮). [ಚಳಿ$_2$ + ಬೆಟ್ಟು$_2$]

**ಚಳಿವೇಱು** (ಕ್ರಿ). ಚಳಿಯನ್ನು ಹೊಂದು ; ಶೀತದಿಂದ ಬಾಧೆಪಡು : ಭೀತಿಯಲಿ ಚಳಿವೆತ್ತು ನಡುಗುವಂದದಿ ಪೇಳ್ದ ರಣದುಮ್ಮಳಿಕೆಯ ಬಹಳ ನಿಮ್ಮರವ (ಮೋಹತ. ೩೪-೪೩). [ಚಳಿ$_2$ + ಪೇಱು$_1$]

**ಚಳಿಸು$_1$** 'ತಳಿಸು$_1$' ನೋ.

**ಚಳಿಸು$_2$** 'ಚಲಿಸು' ನೋ.

**ಚಳುಕಿ$_1$** 'ಚಳುಕ್ಯ' ನೋ.

**ಚಳುಕಿ$_2$** (ನಾ). ಒಂದು ಬಗೆಯ ವಿಮಾನಂ: "ಚಳುಕಿಯೆನೆ ಶಿಂಶುಮಾರಂ" (ವಸ್ತುಕೋ. ೨೩-೬). [ ? ]

**ಚಳುಕಿಡು** (ಕ್ರಿ). ನರಗಳ ಮಿಡಿತದಿಂದ ಬೇನೆಯುಂಟಾಗು; ನರಗಳಲ್ಲಿ ಚುಚ್ಚಿದಂತೆ ನೋವುಂಟಾಗು: ನವಮಾಸ ಪೂರೈಸಲಾ ಸತಿಗೆ ಬಿಡದೊಡನೆ ದಿವದಲ್ಲಿ ಕಾಂಚಿ ಕಟ ಮಿಡಿಮಿಡಿದು ಚಳುಕಿಡಲ್ (ಪರಕು. ೩-೪೯). [ಚಳುಕು$_1$ (< ಚಳಕು$_1$) + ಇಡು$_1$]

**ಚಳುಕು$_1$** 'ಚಳಕು$_1$' ನೋ.

**ಚಳುಕು$_2$** (ನಾ). (?) : ಅಳರಶರಕೇಳಿಪಂಪಿಂದಲಾಸ್ಯಶ್ರೀಯ ಚಳುಕಿನಿಂ ನೋಳ್ಪರಂತಃಕರಣತುಷ್ಟಿಯ ಸುಸೋಪನೇವರ್ಣಿಸುವೆನು (ಜಿನಮು. ೨-೦೨). [ ? ]

**ಚಳುಕ್ಯ, ಚಲಿಕ್ಯ, ಚಳಿಕ್ಯ, ಚಳುಕಿ$_1$, ಚಟುಕ್ಯ, ಚಾಳೋಕ್ಯ, ಸಳುಕಿ** (ನಾ). = ಚಾಲುಕ್ಯ: ಸತ್ಯಾಶ್ರಯವಸರಸೆದುದಾ ಚಳುಕ್ಯಾನ್ವಯದೊಳ್ (ಕಇಅ. ೨-೨-೨೦ : 1058). **ಚಲಿಕ್ಯ :** ಚಲಿಕ್ಯೋ ವಲ್ಲಭೇಶ್ವರಃ (ಎಇ. XXVII, ೮-೩; ೬೬೩). **ಚಳಿಕ್ಯ:** ಸಮಜನಿ ನವಮುಸ್ತಸ್ಯ ರಾಜ್ಞಶ್ಚಳಿಕ್ಯಕ್ಷ್ಮಾಪ (ಎಕ. VII, ಶಿವಮೊ. ೮೩-೦೪ ; 1687). **ಚಳುಕಿ$_1$ :** ಚಳುಕಿ ವಂಶೋತ್ತಮರಂ (ಎಇ. XVI, ೩೮-೫: 1107). △ **ಚಟುಕ್ಯ :** ಚಟುಕ್ಯರನ್ವಯಂ ನೆಗಳೆ ನಗಳ್ತೆಯಂ ತಳೆದು ತಂನಯ ತೇಜದೊಳಾಣೆಯೋಲೆಯುಂಡಿಗೆ ಸಲೆ ಸಾಧ್ಯವಾದ ನೆಲನಂ ತಳೆದಂ ನೃಪಮೇರುತ್ತೈಲಪಂ (ಕಇಅ. ೯೫-೪-೯ ; 12ನೆಯ ಶತ). **ಚಾಳೋಕ್ಯ:** ನನ್ನಿಯಂ ಪೇಳುವೆನರಸ ಕೇಳಿನ್ನು ಚಾಳೋಕ್ಯಾನ್ವಯದವರು ಮುನ್ನ ನಿಕ್ಷೇಪಿಸಿದುದೆಂಬತ್ತೆಂಟು ಕೋಟಿ ಧನ ಏನ್ನ ಸಿಂಹಾಸನದ ಕೆಳಗಿದೆ (ಬಸಪು. ೫-೩೭). **ಸಳುಕಿ :** ವಿದಿತ ಶ್ರೀ ಸಳುಕಿ ರಾಜ್ಯ[ದೊ]ಳ್ (ಸೌಇಇ. XI-1, ೦೪-೦೫; 872). [< ಸಂ. ಚಾಲುಕ್ಯ]

**ಚಳುಪು** (ನಾ). = ಚಳಕು$_1$ : (✱). [ ? ]

**ಚಳುಮ** (ನಾ). = ಚಳಕು$_1$ : ಯೋನಿಯೋನಿಯಲ್ಲಿ ಭೇದ ಚಳುಮರುಜಾ ಇತರ ತೋಳದ ನೋವು (ಬಾಹಟೀ. ೨-೦-೭೭ ವ). [ ? ]

**ಚಳುವಳಿ** 'ಚಳವಳ' ನೋ.

**ಚಳೆ$_1$** 'ತಳೆ$_4$' ನೋ.

**ಚಳೆ$_2$** 'ಚಿಲ್ಲ$_1$' ನೋ.

**ಚಳೆ$_3$** 'ಸೆಳೆ$_4$' ನೋ.

**ಚಳೆ$_4$** 'ತಟ$^3$' ನೋ.

**ಚಳೆ$_5$** (ನಾ). ೧. ಒಂದು ಬಗೆಯ ಬಟ್ಟೆ : ದೇವಾಂಗದ ಚಳೆಯ ವಟಿಯ ಪಟ್ಟಾವಟಿಯೆಕ್ಕಾರೋಹಣದ ಕಕ್ಕರವಟಿಯಗೆಯ ದುಗುಳದ ಪಾಗುಡಂಗಳಂ . . . ತೊಟ್ಟು (ಮಹಾನೀ. ೯-೪ ವ). ೨. ಚಿಕ್ಕಮಕ್ಕಳನ್ನಾಗಲಿ, ಅಶಕ್ತರನ್ನಾಗಲಿ ಎತ್ತಿಕೊಂಡು ಹೋಗುವುದಕ್ಕಾಗಿ ಬಳಸುವ ಬಟ್ಟೆ; ಜೋಳಿಗೆ : (✱).

**ಚಳೆಕೊಡು** 'ಚಳೆಗೊಡು' ನೋ.

**ಚಳೆಗೊಡು, ಚಳೆಕೊಡಂ, ಚಳೆಕೊಡಂ** (ಕ್ರಿ). ಸಿಂಪಡಿಸು; ಚಿಮುಕಿಸು ; ತಳಿಸು: ಕೇಸರಿಪೀಠವ ಪಾಸಿ ಕಸ್ತೂರಿನೀರ ಪೋಸರಿಸದೆ ಚಳೆಗೊಡುವ (ಅನಂಚ. ೫-೩೭); ಕಸ್ತೂರಿಯಾ ಜಲದಿಂದ ಚಳೆಗೊಟ್ಟು (ನವಮೋ. ೦೦-೭೮); ಸಾರಣೆಯನೇ ಹಾಕಿ ಚಳೆಗೊಟ್ಟು ರಂಗವಲ್ಲಿಯನಿಟ್ಟು (ಮಲ್ಲಕ. ೨-೦೫). **ಚಳೆಕೊಡು :** ಅಂಗಳ ಸಾರಿಸಿ ಗಂಧದ ಚಳೆಕೊಟ್ಟು (ಲೋಕಗೀ. ೨೦೫). **ಚಳೆಕೊಡು :** (✱). [ಚಳೆ$_1$ (< ತಳೆ$_4$) + ಕೊಡು$_1$]

**ಚಳೆಯು$_1$**, ಚಳಯು$_1$, ಚಳಿಯು, ಛಳಯು, ಛಳೆಯು$_1$ (ನಾ). (ನೆಲವನ್ನು ಗುಡಿಸಿದ ಬಳಿಕ)ನೀರು ಳಿಯುವುದಂ,-ಸಿಂಪಿಸುವುದು,-ಚಿಮುಕಿಸುವುದು : "ಚಳಿಯ ಮೆನೆ ನೀರ ತಳಿದುದು" (ಭಾರನಿ. ೧೦) : "ಚಳೆಯಮುಮೆನೆ ಸಿಂಪಿಸುವುದಕಕ್ಕುಂ" (ಕವಿಕಂ. ೨೪೬); ಎಳೆದಳಿರ ಹಸೆ ಪನ್ನೀರ ಚಳೆಯ ಮೆಟಿದವಾ ಶೃತ್ಯಶಾಲೆಯೊಳಗೆ (ಹರಿಶಾ. ೩-೪೩); ಕತ್ತುರಿನೀರ ಚಳೆಯದೊಳಂ (ಪುಷ್ಪಪು. ೮-೩೦ ವ) ; ಚಂದ್ರಕಾಂತದ ಜಲದ ಚಳೆಯಮಂ ಕೊಟ್ಟು (ಸೌಂದಪು. ೮-೨೦) ; ಚಳೆಯದಿಂ ಚೆಲ್ಲಿದ ಚಂದನರಸದಿಂದ ಪೊಳಲು ಕಣ್ಗೆಸೆದುದು (ಕುರಾಕಾಂ. ೪೦-೬೬) ; ಮೇಗಣೆಂದುದಿರ್ವ ಕ್ರಮ್ಮಲರ್ಸರಿಯ ಪನ್ನೀರ್ಚಳೆಯದ . . . ಅಗಡೆಯಿರ್ಪೆಡೆ ಮೆಟಿದುದು (ನಂದಿಪುರಾ. ೬-೩). **ಚಳಯು$_1$** : "ಜಲಸೇಚನಂ ಚಳಯಮೆನಿಕುಂ" (ಕಶಶ. ೦೨೩) : ಪುಷ್ಪರಸದ ಚಳಯಂಗಳೆನೆ ವ್ಯಸಿರಿಯನಾಂತ ತದ್ವನದೇವಿ (ಸೌಂದಪು. ೧೮-೩೨) ; ಪನಿನೀರೊಳೊದವಿದ ಚಳಯವೊಪ್ಪಿದುದು (ವರ್ಧಪ. ೩-೪೩). **ಚಳಿಯು**: ಬೀದಿಬೀದಿಯೊಳ್ ಬಿಡದಿತ್ತ ಪನ್ನೀರ ಚಳಿಯ ಮಾಡುವ ಪಾತ್ರದ (ಚಲಪು. ೩೬-೦೭). **ಛಳಯು** : ಅರಳಿದ ಹೂವುಗಳಲ್ಲಿ ಸುರಿವ ಮಕರಂದದಿಂದ ವನಪ್ರದೇಶವೆನುವ ಬೀದಿಯೊಳ್ ಛಳಯಮಂ ಕೊಟ್ಟು (ಸೌಗಂಧಿ. ೪೬೨-೦). **ಛಳೆಯು$_1$**: ಬಾವನ್ನಮಂ ಕದಡಿ ಸಿಂಪಿಸುವ ಛಳೆಯದಿಂ (ನಳಚಂ. ೧೯೩) ; ಹರುಷದಿಂ ಗುಡಿಗಟ್ಟಿ ವೀಧಿವೀಧಿಯಲಿ ಛಳೆಯದಿ ರಂಗವಲಿಗಳಿಂದ ವಿರಚಿಸಲು (ಐಶಿಚಂ. ೩೬-೩೧) ; ಪನ್ನೀರ ಬಾವನ್ನದೆಸೆವ ಛಳೆಯಂ ಮೃಗಮದೋನ್ನತದ ಸಾರಣೆಯು (ರಾಜಶೇ. ೪-೩). [ ಚಳೆ$_1$ (<ತಳಿ$_4$) + - ಅ$_6$ ]

**ಚಳೆಯು$_2$** 'ಚಳಯು$_2$' ನೋ.

**ಚಳೆಯು$_3$** 'ತಟಿ' ನೋ.

**ಚಳೆಯುಂಗುಡು** 'ಚಳೆಯುಂಗೊಡು' ನೋ.

**ಚಳೆಯುಂಗೆಯ್** (ಕ್ರಿ).=**ಚಳೆಗೊಡು**: ತಂಗೆ ತಲೆವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹರಿಶಾ. ೪-೨೪). [ಚಳೆಯು$_1$ + ಕೆಯ್$_1$]

**ಚಳೆಯುಂಗೊಡು**, ಚಳಯುಂಗುಡು, ಚಳಯುಂಗೊಡು, ಚಳಯುಗೊಡು, ಚಳೆಯುಂಗುಡು, ಛಳೆಯುಂಗೊಡು(ಕ್ರಿ). = **ಚಳೆಗೊಡು** : ಚಳೆಯಂಗೊಡುವವೊಲೆಸೆದುದಾ ಚಿಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨) ; ಕೇರಿಕೇರಿಯೊಳು ಪನ್ನೀರಿನಿಂದರರೆ ಚಳೆ [ಪಾಠಾಂ. ಳೆ] ಯಂಗೊಟ್ಟು (ಸಿದ್ಧೇಪು. ೦೯-೦೮). **ಚಳಯುಂಗುಡು** : ಚಲ್ಲಂ ಚಳ [ಪಾಠಾಂ. ಳೆ]ಯುಂಗುಡುತ್ತುಮಿರೆ ರಾಗರಸಾಮೃತದಿಂ (ಅರ್ಧನೇ. ೨-೯೩); ಘುಸೃಣರಸಂಗಳಿಂ . . . ಚಳಯಂಗುಡುತಿರ್ಪ ಮೌಕ್ತಿಕಪ್ರಸರದೆ ಕೂಡೆ ರಂಗವಲಿಯಂ ನಲಿದಿಕ್ಕುತುಂ (ವರ್ಧಪು. ೦೩-೬೪). **ಚಳಯುಂಗೊಡು** : ಅನಿಮಿಷವಧು ಕತ್ತುರಿಗದಡಿನ ಚಳಯುಂಗೊಟ್ಟಿಳ್ (ಅನಂಪು. ೬-೪೬). **ಚಳಯುಗೊಡು**: ಚಳಯಗೊಟ್ಟುದು ಲೇಸು ಕುಸುಮಾಜಿ ಹೊಸರಂಗವಲಿ ಲೇಸು ಕುಸುಮಾಂಗಿ (ಭರತ. ೧೦-೯). **ಚಳೆಯುಂಗುಡು** : ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯುಂಗುಡೆ (ಗಿರಿಕ. ೬-೩೩ ವ); ಘುಸೃಣರಸಂಗಳಿಂದೆ ಚಳೆಯುಂಗುಡುವಂತೆ (ಅನಂಪು. ೦೦-೩೩). **ಛಳೆಯುಂಗೊಡು** : ಪುನುಗು ಜವಾದಿ ಜಲದೀಯಲ್ಲ ಪೊರವಳೆಯಂಗಣದಿ ಛಳೆಯಂಗೊಟ್ಟು (ನವಮೋ. ೨೧-೧೮). [ ಚಳೆಯು$_1$ + ಕೊಡು$_1$ ]

**ಚಳೆಹಾಕು** (ಕ್ರಿ). = **ಚಳೆಗೊಡು** : ಅಂಗಳಕ್ಕೆಲ್ಲ ಚಳೆಹಾಕಿ ರಂಗವಲ್ಲಿ ಇಟ್ಟಿದ್ದಾರೆ (ರೂಢಿ). [ ಚಳೆ$_1$ (<ತಳಿ$_4$) + ಹಾಕು (<ಪಾಯ್ಕು$_1$) ]

**ಚಳೆಹೊಡೆ** (ಕ್ರಿ).=**ಚಳೆಗೊಡು**: ಮತ್ತೆ ಕೆಲವರು ಬೀದಿಗಳಿಗೆ ಪನ್ನೀರಿನ ಚಳೆ ಹೊಡೆಯುತ್ತಲಿದ್ದರು (ದೇಯೂನಿ. ೦೩೦).

[ ಚಳೆ$_1$ (<ತಳಿ$_4$) + ಹೊಡೆ$_1$ (<ಪೊಡೆ$_1$) ]

**ಚಳ್ಳ** 'ಸೆಳ್ಳ' ನೋ.

**ಚಳ್ಳಪಿಳ್ಳಿ**, ಚಳ್ಳೆಪಿಳ್ಳೆ (ನಾ). ಒಂದು ಬಗೆಯ ಮಕ್ಕಳಾಟ : ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು ಚಳ್ಳಪಿಳ್ಳಿ [ಪಾಠಾಂ. ಅಳ್ಳಂಚೀರ, ಅಳ್ಳಾಬಾರಿ]ಗೊಂಬೆಯಂತೆ ಆಡಿಹೋಯಿತು (ಕಸಕ. ೦೧೬-೩). **ಚಳ್ಳೆಪಿಳ್ಳೆ** : "ಮಕ್ಕಳ ಆಟ" (ಜಾನಕೋ. ೩೩). 'ಚಿಳ್ಳೆಪಿಳ್ಳೆ' ಪಾ. [ ? ]

**ಚಳ್ಳವರೆ** (ನಾ). (ಉಕ) ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಹಿತ್ತಲವರೆ ; ಚಪ್ಪರದವರೆ : ಔಡಲಗಿಡಗಳ ಬೊಡ್ಡೆಯಲ್ಲಿ ಚಳ್ಳವರೆಯ ಬೀಜವನ್ನು ಹಾಕಿ ಆ ಬಳ್ಳಿಯನ್ನು ಔಡಲಗಿಡಗಳಿಗೆ ಹಬ್ಬಿಸಬೇಕು (ಕೃಷಿಪ್ರ. ೧೩೩) ; ನಾನೇನು ನಿಮ್ಮ ತೋಟದಲ್ಲಿ ಬೆಳೆದ ಬದನೆ ಕಾಯಿಯೇ ಚಳ್ಳವರೆಯೇ (ಇಪ್ಪಕ. ೨೦೩). [ಚಳ್ಳು (<ಸೆಳ್ಳು) + ಅವರೆ$_1$]

**ಚಳ್ಳಿಸು** 'ಚಲ್ಲಿಸು$_2$' ನೋ.

**ಚಳ್ಳು** 'ಸೆಳ್ಳು' ನೋ.

**ಚಳ್ಳುಗುರ್** 'ಸೆಳ್ಳುಗುರ್' ನೋ.

**ಚಳ್ಳುಗುರು** 'ಸೆಳ್ಳುಗುರ್' ನೋ.

**ಚಳ್ಳೆ** 'ಸೆಳ್ಳ' ನೋ.

**ಚಳ್ಳೆಕೆಂದಾಳ** (ನಾ). ಒಂದು ಬಗೆಯ ಮರ : ಚಳ್ಳೆಕೆಂದಾಳ, ಕೆಂಪುಚಳ್ಳೆ (ಮೃಶಿಗಿ. ೨೪-೪೩೩). [ ? ]

**ಚಳ್ಳೆಪಿಳ್ಳೆ** 'ಚಳ್ಳಪಿಳ್ಳಿ' ನೋ.

**ಚಱಪು** 'ಸೆಱಪು' ನೋ.

**ಚಱಿಂಗಯ್ಯ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಱಿಙ್ಗಯ್ಯಂ ತೀರ್ತ್ಥವಮಂ ಬನ್ದಿಸಿದಂ (ಎಕ. II, ೪-೦ : ಸು. ೬೦೦). [ ? ]

**ಚಱಿತ್ತಿ** (ನಾ). ಒಬ್ಬಾಕೆಯ ಹೆಸರು : ಮಾರವರ್ಮ್ಮಸ್ವಾಮಿಗೆ ಸುನ್ದರಿ ಚಱಿತ್ತಿಯರಾ ದೇಗುಲಂ ಮಾಡೆಯ್ದುದಾ ವೃತ್ತಿಯುಂ ಸರ್ವ್ವಪರಿಹಾರಂ ಏಟ್ಟಾರ್ (ಎಕ. VI, ಚಿಕ್ಕಮ. ೯೨-೪ ; ಸು. 750 ?). [ ? ]

△ **ಚಟಕ್ಕ** 'ಚಳುಕ್ಕ' ನೋ.

**ಚಟುವಟಿ** (ನಾ). ಪ್ರತಿಜ್ಞೆ (?) : ಸಾಸಿಗ × × × ಪಱಿಯರೊಡೆಯ × ಅವೆಡೆಯವ್ವಂ ಹರಿತ್ತನ ಕುಮಾರಂ ಚಟುವಟಿ ಪೊಡದು ನುಡಿದು ಮತ್ತೆನ್ನದಾತನ್ ನುಡಿವಕ್ಕು (ಸೌಇಇ. IX-I, ೨೨-೦೦ : ೬೨೩). [ ? ]

**ಚಾ$_1$** (ನಾ). ೧. ಒಂದು ಅನುಕರಣ ಧ್ವನಿ : ಇದ್ದರೆಲ್ಲರ ಕೂಡಿಕೊಂಡು ಎದ್ದನು ಯುವರಾಜನೆಡೆಗೆ ಚಾ[ಪಾಠಾಂ. ಬಾ] ಹೋಯೆನೆ ಗೆದ್ದನು ಜಗದ ಜಾಣರನು (ಭರತ. ೩೬-೮೩). ೨. ದನಕರುಗಳನ್ನು ಅಥವಾ ಮೇಕೆಗಳನ್ನು ಮುಂದಕ್ಕೆ ಹೋಗುವಂತೆ ಅಟ್ಟುವಾಗ ಬಳಸುವ ಧ್ವನಿ : ಹುಡುಗನು ಚಾ ಎಂದು ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾನೆ (ರೂಢಿ).

**ಚಾ$_2$** 'ಚಹ' ನೋ.

**ಚಾಂಕಿಮಯ್ಯ** (ನಾ). ಒಬ್ಬಾತನ ಹೆಸರು : ಚಾಂಕಿಮಯ್ಯನ ಮಾಡಿಸಿದ ಶ್ರೀಶಾಂತಿನಾಥದೇವರ ತ್ರಿಭುವನತಿಳಕ ಚೈತ್ಯಾಲಯದಲಿರ್ಪ್ಪ ರಿಶಿ(ಷಿ)ಯರ್ (ಇಅ. XIX, ೨೬೩-೩೩ : 1064). [ ಚಾಂಕಿಮ$_6$+ಅಯ್ಯ$_1$ ]

**ಚಾಂಗಾಳ್ವ** 'ಚಂಗಾಳ್ವ' ನೋ.

**ಚಾಂಗು**, ಚಾಗು, ಜಾಂಗು, ಜಾಗು$_2$ (ಅ). ಭಲೆ, ಭೇಷ್, ಭಾಪು ಎಂಬರ್ಥದ ಹೊಗಳಿಕೆಯ ಮಾತು,-ಕೊಂಡಾಟದ ನುಡಿ: ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿತೋರಣವ ಕಟ್ಟಿ . . . ರಂಗವಾಲಿಯನಿಕ್ಕಿ ಉಘೆ ಚಾಂಗು ಭಲಾ ಎಂಬೆ (ಬಸವ. ೩೬೬) ; ಉಗೆ ಚಾಂಗು ಬಲಯೆಂಬ ನೆಗೆವ ರಭಸಂಗಳೊಳು(ರೇಕ್ಕಾಬೋ. ೦೦೬-೬); ಚಾಂಗು ಬಲಾಯೆನಲು ನಂದಿಧ್ವಜವ್ರಜವು (ಬಸಪು. ೩-೩೯); ಜಯ ಜಯ ಚಾಂಗು ಬೊಲ್ಲೆಂಬ ರಭಸದಿಂ ಕೀರ್ತಿಸುತ್ತ (ವೀಕೃಪು. ೪-೧೨-೪೩); ಪಾದವೆಟ್ಟಱಿಕೆ

ಪರಾಕು ಚಾಂಗೆಂದು ಮುಂದೋದೆ ಕೈಸನ್ನೆಯೊಳ್ನಿಲಿಸಿ . . . ಪಾಡುವ ನಾದವ ನಿಲಿಸಿಯಿಯ್ದುದನು (ಭರತ. ೪೯-೯). **ಚಾಗು:** "ಅರರೆ ಧಣು . . . ಚಾಗು ಸಲಿ ಸುಂವುರೆಯನೆ ಕೊಂಡಾಟದ ನುಡಿ" (ಭಾಶನಿ. ೪೬) ; ಮರ್ಝು ಪೂತು ಪಾಯಕು ಗಂಡುಗಲಿಯಹೆ ಚಾಗು ತೊಟ್ಟೆಸು (ಕು ವ್ಯಾ ಭೀ. ೧೦-೦); ಎಲ್ಲರುಂ ಪೂತುರೇ ಸುಭಟ ಚಾಗೆಂದುಲಿಯೆ ಕೋಪದಿಂ ಗುಹನಾರ್ದು ತೆಗೆದೆಚ್ಚನು (ಜಲಪು. ೪೩-೧೬); ಚಾಗು ದಣುದಣು ಭಾಪು ಭಳಿರೆ ಬಲ ಬಲರೆ ಕೇಳೀಗ ನಿನ್ನಂ ಪೋಲ್ವರಂ ಕಾಣೆನು (ರುಕ್ಮಾಂಗ. ೧೩-೬೩). **ಚಾಂಗು:** ಸಭೆಯೊಳುಣ್ಕೆ ಪೊಣ್ಮಿತ್ತು ಚಾಂಗು ಬೊಲ್ಲ ಶುಭ ಬೊಲ್ಲ ಮಾಂಗಳಿಕ ಬೊಲ್ಲಮೆಂಬೀ ರವಂ (ಜಗಪಿ. ೧೦-೬೨) ; ಕರಿಗಮನೆಯರು ತಂದರು ರತ್ನಮಯ ಹೊನ್ನ ಹರಿವಾಣ ದುಂಬಿದಾರತಿಯ ತಿರುಹಿ ನಿವಾಳಿಸಿ ಚಾಂಗು ಬೊಲ್ಲೆಂದೆಂದು ಸಿರಿವೆತ್ತು ನಿಂದರಿಕ್ಕೆಲದಲಿ (ಮೋಹತ. ೨೨-೧೩). **ಚಾಗು₂:** "ಅರರೇ ಭಾಪುರೆ . . . ಚಾಗುಮಾ ಧಣು ಧಿರುರೇ ಪುರೆಯನೆ ಕೊಂಡಾಟಂ" (ಚತುನಿ. ೫೫); ಚಾಗು ಧಣಾ ಧಣಾ ಪೂತು ಕಾಮರ್ಾಖ ಯೋಗಸಿದ್ಧನೆ (ಕುವ್ಯಾಅ. ೧೫-೨೯); ಸೊಲ್ಲಿಸಿದರು ಚಾಗು ಬೊಲ್ಲು ತುದ್ವ ಕಂಬಲ್ಲ ತಳಿಗೆ ಗಾರ್ತಿಯರು (ಮೋಹತ. ೧೫-೩೬).

**ಚಾಗುಚಾಗು, ಚಾಗುಚಾಗು** (ದ್ವಿರುಕ್ತಿ): ತಾನೊಹಿಸಿಕೊಳೆ ಸದರ ಗಂಡನೆ ಚಾಗುಚಾ[ಪಾಠಂ. ಚಾಗುಚಾ]ಗೆನುತೆ (ಮದೇಪು. ೩-೫೫); ಸುಭಟ ರಹುದೋ ಚಾಗುಚಾಗೆನುತೊಲೆದನಾ ದ್ರೋಣ (ಕುವ್ಯಾದ್ರೋ. ೨-೮೧): ಚಾಗುಚಾಗೆಂದಸುರ ಪ್ರಾತಿಯೊಳುಬ್ಬಿ ಘರ್ಜಿಸಿವ (ಅಂಬಿಕಾ. ೧೫-೨)

[ ←ತೆಲು. ಚಾಂಗು. / ಮರಾ. ಚಾಂಗ ]

**ಚಾಂಗೇರಿ** (ನಾ). ಒಂದು ಬಗೆಯ ಸೊಪ್ಪು; ಹುಲ್ಲುಹುಳಿಗನ ಸೊಪ್ಪು; ಪುಲ್ಲಂಪುರುಚಿ : (+). [ ಸಂ. ಚಾಂಗೇರೀ ]

**ಚಾಂಚಲ್ಯ** (ನಾ). ಚಂಚಲತೆ ; ಅಸ್ಥಿರತೆ : ಕುದುರೆಗಳೆರಡೂ ಚಾಂಚಲ್ಯ ತೋರಿದವು (ಇಪ್ಪಳ. ೩೨೦). 'ಚಿತ್ತಚಾಂಚಲ್ಯ' ಪರಾ. [ ಸಂ. ]

**ಚಾಂಡಾಲ, ಚಾಂಡಾಳ** (ನಾ). ಚಂಡಾಲ ; ಹೀನ : ಕರ್ಮಾಧಿಗತ ಚಾಂಡಾಲರಿವದಿರ ಮಾತುಗಳನೆಲೆ ನಂಬದಿರು ಭೂಪ (ಬಸಪು. ೫೬-೫೦) ; ಏಕಗೋತ್ರದ ಪುರುಷಸತಿಯರಜ್ಞಾನದಿಂದಾ ನೆರೆದಲ್ಲಿ ಪುಟ್ಟಿದಂ ಚಾಂಡಾಲನೈ (ಷೀಕೃಪು. ೬-೨-೨೦). **ಚಾಂಡಾಳ** : ಇದನಳಿದಾತಂಗಕ್ಷಯ ನರಕಂ ನಿಜವಂಶಕ್ಷಯವಾತಂ ಧರಿತ್ರಿಯೊಳು ಚಾಣ್ಡಾಳ (ಸೌಇಇ. XX,೧೦೬-೫೦: 1188). [ಸಂ.]

**ಚಾಂಡಾಲಗಿತ್ತಿ** (ನಾ). ಹೊಲತಿ ; ಪಂಚಮಸ್ತ್ರೀ : ಕೀಳು ವರ್ಗದ ಹೆಂಗಸು : ಕಂಡಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ (ಗಬಕಾ. ೨೮೯-೦). [ ಚಾಂಡಾಲ + – ಗಿತ್ತಿ ]

**ಚಾಂಡಾಲತ್ವ** (ನಾ). ಹೊಲೆತನ; ಪಂಚಮ ವರ್ಗಕ್ಕೆ ಸೇರಿರುವಿಕೆ : ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವವೆತ್ತ ಸತಿಯರ್ಗೆಳಸಿ ಘೋರ ನರಕಾಳಿಗನಿಮಿತ್ತ ಹೋಹವನಲ್ಲ (ಹಡಕಾ. ೮-೨೫). [ ಸಂ. ]

**ಚಾಂಡಾಲಪತಿ**(ನಾ). ಹೊಲೆಯರ ಪ್ರಮುಖ ; ಪಂಚಮರ ಮುಖ್ಯಸ್ಥ : ಚಾಂಡಾಲಪತಿಯ ಮನವೆರ್ದೆಗೊಂಡು ಮನಃಪದ್ಮ ಮುಕುಳವುಂ ಸವಿವಳಿಯಂ ಕಂಡೊಡೆ ಮುನಿವಾ ನರರುಂ ಪೆಂಡಿರುದಾರತೆಗದೇಕೆ ಮುನಿವರೋ ದೇವಿ (ಶಾಂತಿಪು. ೯-೧೯೪). [ ಚಾಂಡಾಲ + ಪತಿ₂ ]

**ಚಾಂಡಾಲಿಕೆ** (ನಾ). ಕೀಳುದರ್ಜೆಯ ಒಂದು ಬಗೆಯ ವಾದ್ಯ.

[ ಸಂ. ಚಾಂಡಾಲಿಕಾ ]

**ಚಾಂಡಾಳ** 'ಚಾಂಡಾಲ' ನೋ.

**ಚಾಂಡಾಳಿಸು** (ಕ್ರಿ). ಚಂಡಾಲನಂತೆ ವರ್ತಿಸು : ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿಸುವ ಚಿತ್ರೆಯರನರಸ ನೋಡುತ ಬಂದನು (ಹಡಕಾ. ಪರಿ. ೪-೫೫). [ ಚಾಂಡಾಳ ( = ಚಾಂಡಾಲ) + – ಇಸು₃ ]

**ಚಾಂತ** (ನಾ). ಚಕಾರವನ್ನು ಕೊನೆಯಲ್ಲಿ ಉಳ್ಳ ಶಬ್ದ : (+).

[ ಚ + ಅಂತ₂ ]

**ಚಾಂತಿ** 'ಸಾಂತಿ' ನೋ.

**ಚಾಂದಣಿ, ಚಾಂದನಿ** (ನಾ). ಮೇಲ್ಕಟ್ಟು ; ವಿತಾನ ; ಛತ್ತು: ವಿಧವಿಧದಿ ಪಾಸಿ ಚಾಂದಣಿಗಳಂ ಕಟ್ಟಿ (ಕೃಷ್ಣವಿ. ೨-೯೦): ಹಡಗಿನ ಮೇಲ್ಗಡೆ ಚಾಂದಣಿಯನ್ನು ಕಟ್ಟಿದ್ದಿತಾದ ಕಾರಣ ಹಡಗಿನೊಳಗಿದ್ದ ಪ್ರಯಾಣಿಕರಿಗೆ ಯಾವುದೂ ಗೊತ್ತಾಗುತ್ತಿರಲಿಲ್ಲ (ಕಪಾಕುಂ. ೩). **ಚಾಂದನಿ** : (+).

[ ←ಮರಾ. ಚಾಂದಣೀ : ಹಿಂ. ಚಾಂದನೀ ]

**ಚಾಂದನಿ** 'ಚಾಂದಣಿ' ನೋ.

**ಚಾಂದಸ, ಚಾನಸ, ಛಾನಸ** (ಗು). ೧. ಸಂಪ್ರದಾಯನಿಷ್ಠ. (ನಾ). ೨. ವೇದಾಧ್ಯಯನ ಮಾಡಿದವನು; ವೈದಿಕ: ಛಕಾರಕ್ಕೆ ಚಕಾರಂ–ಛವಿ–ಚವಿ . . . ಛಾಂದಸ – ಚಾಂದಸ (ಶಮದ. ೨೫೫ ಪ್ರಯೋ). ೩. ಮಂದಮತಿ ; ದಡ್ಡ : ವರರತ್ನಘೋಷನ ಪರಿಯಲ್ಲ ವಿದ್ಯಾಸಾಗರನಾದ ವ್ಯಾಳಿಯಂತಲ್ಲಾ ಪರಮಚಾಂದಸನಾದಕು (ಭೃರಸೂ. ೩೨೬). **ಚಾನಸ**: ೪. ಎಚ್ಚರವಿಲ್ಲದಿರುವಿಕೆ; ಅಜಾಗರೂಕತೆ: ಹುಲಿಯು ದುಷ್ಟಮೃಗವೆಂದು ತಿಳಿದಿದ್ದರೂ . . . ಚಾನಸದಿಂದ ಹುಲಿಯ ಬೋನಿಗೆ ಬದ್ಧಿರುವ ಬಾಗಿಲ ಹಲಗೆಯನ್ನು . . . ಎತ್ತಿದನು (ಕಥಾಮಂ. IV, ೮೮). **ಛಾನಸ** : ೧. ಸ್ವಲ್ಪ ಛಾನಸ ಸ್ವಭಾವದ ಪದ್ದಕ್ಕನಿಗೆ ದೇವರು ದಿಂಡರ ಕೆಲಸಗಳನ್ನು ಎರಡನೆಯವರು ಮಾಡಿದರೆ ಎಷ್ಟೂ ಒಗ್ಗುತ್ತಿರಲಿಲ್ಲ (ಸಾವಿಕಾ. ೬೬). ೩. ಉರಿದುವೀ ನಿಮ್ಮಯ ತಪೋಜಪ ಧ್ಯಾನಂಗಳೆರವದೇಂ ಛಾನಸಮದೊರ್ವ ಮಾಯಾವಿ ನಿಮ್ಮ ರಿಸಿಯರನೊಲಿಸಿಕೊಂಡೊಯ್ದಪಂ ಬಿಡಿಸಿಕೊಳ ಮೇಳೆಂದೊಱಲ್ದರಂದು (ಜಲಪು. ೨೦-೨೩). 'ಛಾನಸತನ' ಪರಾ.

[ <ಸಂ. ಛಾಂದಸ ]

**ಚಾಂದಸಿಕೆ** (ನಾ). ತಡಮಾಡುವಿಕೆ; ಆಲಸ್ಯ; ಜಡತೆ: ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸಘಾಟಿಕೆಯಿಂದ ಪಾಡಿದರು (ಭರತ. ೫-೫೮). 'ಛಾಂದಸಿಕೆ' ಪರಾ.

[ ಚಾಂದಸ + – ಇಕೆ ]

**ಚಾಂದ್ರ** (ಗು). ೧. ಚಂದ್ರನಿಗೆ ಸಂಬಂಧಿಸಿದ. (ನಾ). ೨. ಮೃಗಶಿರಾ ನಕ್ಷತ್ರ. [ ಸಂ. ]

**ಚಾಂದ್ರಜ್ಞಾನಿ** (ನಾ). ಚಂದ್ರಮಂಡಲವನ್ನು ಕುರಿತು ವಿಶೇಷ ಜ್ಞಾನವುಳ್ಳವನು : ಚಂದ್ರಮಂಡಲದ ವಿಷಯದಲ್ಲಿ ವಿಶೇಷಜ್ಞಾನವುಳ್ಳ ಜ್ಯೋತಿರ್ವಿಜ್ಞಾನಿ ಅಥವಾ ನಾವಿಕ : ಚಾಂದ್ರಜ್ಞಾನಿ (Lunarian. ಇಂಕನಿ).

[ ಸಂ. ಚಾಂದ್ರಜ್ಞಾನಿನ್ ]

**ಚಾಂದ್ರಪ್ರಭ** (ಗು). [ಜೈನ]ಚಂದ್ರಪ್ರಭನೆಂಬ ತೀರ್ಥಂಕರನಿಗೆ ಸಂಬಂಧಿಸಿದ : ಕಣ್ಗಿಂಬಾದ ಚಾಂದ್ರಪ್ರಭಂ ರೂಪಂ . . . ಎಮ್ಮೊಳ್ ಮಾಳ್ಕೆ ನೈರ್ಮಲ್ಯಮಂ (ಚಂದ್ರಪು. ೦-೧). [ ಸಂ. ]

**ಚಾಂದ್ರಮಸ** (ಗು) =ಚಾಂದ್ರ. [ ಸಂ. ]

**ಚಾಂದ್ರಮಸಾಯನ** (ನಾ). ಚಂದ್ರನ ಮಗ; ಬುಧ: "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ – ಈ ೪ ಬುಧನ ಪೆಸರ್" (ಹಲಾಯು. ೯-೪೬). [ ಸಂ. ]

**ಚಾಂದ್ರಮಾನ** (ನಾ). ಚಂದ್ರನ ಗತಿಯನ್ನು ಅನುಸರಿಸಿ ಕಾಲವನ್ನು ಗಣಿಸುವ ಕ್ರಮ : ಚಂದ್ರನ ಗತಿಯ ಸಂಬಂಧದಿಂದ ಎಣಿಸಲ್ಪಡುವ ಪಕ್ಷ, ಮಾಸ, ವರ್ಷಗಳ ಮಾನವು ಚಾಂದ್ರಮಾನವೆಂದೆನಿಸಿಕೊಳ್ಳುತ್ತದೆ (ಜ್ಯೋಂಬಯಿ. ೬-೭೮); ಚಾಂದ್ರಮಾನದ ಮಧ್ಯಾಹ್ನದಲ್ಲಿ, ಚಂದ್ರನ ಭಾಗ ಸೂರ್ಯಾಭಿಮುಖವಾಗಿರುವುದರಿಂದ ಅದು ಕುದಿಯುವ ನೀರಿನಷ್ಟು ಕಾವುಳ್ಳದ್ದಾಗಿರುತ್ತದೆ (ಅಕಾಶ. ೩೯). [ ಸಂ. ]

ಚಿಟುಕುಮುಳ್ಳಾಗು =ನೋವುಂಟಾಗು; ವ್ಯಥೆಪಡಿಸು : ಅದರ ಕಿರುಕುಳ ಬಹಳ ಜನಕ್ಕೆ ಚಿಟುಕುಮುಳ್ಳಾಗಿ . . . ಇರುತ್ತದೆ (ದೀಪಹ. II, ೩೬೪). **ಚಿಟುಕುಮುಳ್ಳಾಟ**=ಒಳಗೊಳಗೇ ಉಂಟಾಗುವ ನೋವು,-ಯಾತನೆ : ಸೂಟಿಯನ್ನು ಮುಗಿಸಿ ಊರನ್ನು ಬಿಡುವ ತನಕವೂ ಚಿಟುಕುಮುಳ್ಳಾಟವಾಗಿತ್ತು (ದೀಪಹ. II, ೧೬೬) ; ನೀಲಕಂಠನ ಸಂಗಡ ವನಮಾಲಿಲಾಲನ ಚಿಟುಕುಮುಳ್ಳಾಟ, ಛಲನೆ ಬಹಳ ದಿನಗಳಿಂದಲೂ ನಡದೇ ಇತ್ತು (ಇಪ್ಪಳ. ೪೦೧). **ಚಿಟುಕುಮುಳ್ಳಾಡಿಸು, ಚಿಟಕುಮುಳ್ಳಾಡಿಸು, ಚಿಟುಗುಮುಳ್ಳಾಡಿಸು** = ಒಳಗೊಳಗೇ ಚುಚ್ಚಿ ವ್ಯಥೆಪಡಿಸು : ಕಾವೇರಿ ಮದುವೆ ಆಗದೆ ಇದ್ದಾಗ ಶೇಷಣ್ಣ ಆಕೆಯನ್ನು ಚಿಟುಕುಮುಳ್ಳಾಡಿಸುತ್ತಿದ್ದನಂತೆ (ವೈನಿ. ೧೬೬) ; ಸರ್ವರ ಕಣ್ಣಿಗೂ ಬೀಳುವಂತೆ ನಾವು ಪ್ರದರ್ಶಿಸುತ್ತಿದ್ದೇವಲ್ಲ ಎಂಬ ಆತ್ಮಪ್ರಜ್ಞೆ ನಮ್ಮ ಒಳಗೆ ಚಿಟಕುಮುಳ್ಳಾಡಿಸುತ್ತದೆ (ಗಾಳಿಪ. ೬೮); ಇದು ಅವಳ ಮನಸ್ಸಿನಲ್ಲಿ ಚಿಟುಗುಮುಳ್ಳಾಡಿಸಿದಂತೆ ಮಾಡುತ್ತಿತ್ತು (ಇಪ್ಪಳ. ೬೪).

[ ಚಿಟುಕು$_1$ (<ಚಿಟುಂಕು) + ಮುಳ್ಳು(<ಮುಳ್$_2$) ]

**ಚಿಟುಕುವನಿ** (ನಾ). ತೊಟ್ಟಿಕ್ಕುವ ಹನಿ ; ತುಂತುರುಹನಿ ; ಸೋನೆ: ಮದನಮದಮರ್ದನನ ಬರವಿಂಗೆ . . . ಚೆಳೆಯಂಗೊಡುವವೋಲೆಸೆದುದಾ ಚಿಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨).

[ ಚಿಟುಕು$_1$(<ಚಿಟುಂಕು) + ಪನಿ$_2$ ]

**ಚಿಟುಕುವಾರೆ**(ನಾ). ಒಂದು ಬಗೆಯ ಔಷಧಿ ಗಿಡ: "ಪಲರಾಮು–ಚಿಟುಕುವಾರೆ" (ಓಷಧಿ. ೬೦). [ ? ]

**ಚಿಟುಕೆ** 'ಚಿಟಿಕೆ$_2$' ನೋ.

**ಚಿಟುಕೆನ್** (ಕ್ರಿ). ನೆಟಿಗೆ ಬರು : ಸೌಷ್ಠವದಿಂದಂ ಚಿಟುಕೆನ್ನದಿರ್ಪ ಮೊಟಕೆಯ್ ವೃತ್ತತ್ವದಿಂದೊಂದಿ ತೋಱುವ ಮುಂಗೆಯ್ ಕಡುದೊಡ್ಡಿತಪ್ಪ ತಳಮೊಳ್ಪಿಂದೊಂದಿ ನೇರ್ಪಟ್ಟು ತೋಱುವ ದೀರ್ಘಾಂಗುಲಿ ಕೆಂಪುವೆತ್ತಸೆವುಗುರ್ ಮಾಳ್ಕುಂ ಮಹೈಶ್ವರ್ಯಮಂ (ಲೋಕೋಪ. ೧೧-೧೦).

[ ಚಿಟುಕು$_1$ (<ಚಿಟುಂಕು) + ಎನ್$_1$ ]

**ಚಿಟುಕೊತ್ತು** (ಕ್ರಿ). = ಚಿಟುಕಂಗಳೆ : ಎಳವೆರಲ್ಗಳ ಚಿಟುಕೊತ್ತಿ ಕೈದೊಡಿಸುವ ಬಳೆಗಾಱರಿರ್ದಂಕ್ಕಲದಿ (ಮೋಹತ. ೩-೨೩).

[ ಚಿಟುಕು$_1$ (<ಚಿಟುಂಕು) + ಒತ್ತು$_1$ ]

**ಚಿಟುಗುಟ್ಟು** (ಕ್ರಿ). ೧. ಚಿಟ್‌ಚಿಟ್ ಎಂದು ಶಬ್ದಮಾಡು : ಕೆಂಡದ ಮೇಲೆ ಉಪ್ಪು ಬಿದ್ದು ಚಿಟುಗುಟ್ಟುತ್ತಾ ಇದೆ (ರೂಢಿ). ೨. (ಆಲಂ) ಸಿಡಿಮಿಡಿಗೊಳ್ಳು : ಕಂಗೆಟ್ಟವುಡ ಕಚ್ಚಿ ತೂಬರದ ಕೊಳ್ಳಿಯೊಲು ಚಿಟುಗುಟ್ಟುತಂ (ಷಶಿಂ. ೧೩-೨೩). [ ಚಿಟು$_1$ + ಕುಟ್ಟು$_1$ ]

**ಚಿಟುಗುಮುಳ್ಳು** 'ಚಿಟುಕುಮುಳ್ಳು' ನೋ.

**ಚಿಟುಚಟಕ** (ನಾ). ಸಣ್ಣಗುಬ್ಬಚ್ಚಿ ; ಚಿಟಗುಬ್ಬಿ : ಹಸುಬಂ ಚಿಟುಚಟಕ ಕಬ್ಬಕ್ಕಿ ಹೆಬ್ಬಕ್ಕಿಗಳ ನೋಡಿದವು (ಮದೀಪು. ೫-೯).

[ ಚಿಟು$_2$ (<ಚಿಟ್ಟು$_1$) + ಚಟಕ$_1$ ]

**ಚಿಟುಬಾಳೆ** 'ಚಿಟ್ಟುಬಾಳೆ' ನೋ.

**ಚಿಟುಮಿಟಿ** (ನಾ). ಅಸಂಬದ್ಧವಾದುದು : ಲಂಡ ಕೇಳ್ನಿನ್ನ ಚಿಟುಮಿಟಿ ಬಿನುಗುವಾದವು . . . ಅತರ್ಕ್ಯನನೆಯ್ದಲಾರ್ಪುದೇ (ವೀಶೈಪು. ೪-೬-೨೩).

[ ? ]

**ಚಿಟ್ಟ$_1$** 'ಚಿಟ್ಟು$_1$' ನೋ.

**ಚಿಟ್ಟ$_2$** 'ಚಿಟ್ಟೆ' ನೋ.

**ಚಿಟ್ಟಗುಬ್ಬಿ, ಚಿಟಗುಬ್ಬಿ**(ನಾ). ಒಂದು ಬಗೆಯ ಸಣ್ಣಗುಬ್ಬಿ: ಚಿಟ್ಟಗುಬ್ಬಿ ಚಿಂವು ಚಿಂವು (ಅರಳು. ೨೬೭-೧). **ಚಿಟಗುಬ್ಬಿ**: "ವರ್ತಿಕೆ – ಚಿಟಗುಬ್ಬಿ" (ಗಂಗಾಮ. ೨೮೩). [ ಚಿಟ್ಟ$_1$ (<ಚಿಟ್ಟು$_1$) + ಗುಬ್ಬಿ$_2$ ]

**ಚಿಟ್ಟಚ್ಚು** (ನಾ). ೧. ಅಚ್ಚನ್ನು ತಯಾರಿಸುವ ಚಿಕ್ಕಸಾಧನ: ಸಕ್ಕರೆಅಚ್ಚುಗಳನ್ನು ತಯಾರಿಸಲು ಚಿಟ್ಟಚ್ಚನ್ನು ಉಪಯೋಗಿಸುತ್ತಾರೆ(ರೂಢಿ). ೨. ಸಣ್ಣ ಅಚ್ಚು ; ಬೆಲ್ಲ,ಸಕ್ಕರೆ ಮುಂತಾದುವುಗಳ ಎರಕ ಹೊಯ್ದ ಚಿಕ್ಕ ಆಕೃತಿ : ನಾಲ್ಕು ಚಿಟ್ಟಚ್ಚು ಬೆಲ್ಲ ಬೇಕಾಗಿದೆ (ರೂಢಿ).

[ ಚಿಟ್ಟು$_1$ + ಅಚ್ಚು$_3$ ]

**ಚಿಟ್ಟಜೇನು, ಚಿಟ್ಟಜೇನು** (ನಾ).ಒಂದು ಬಗೆಯ ಜೇನು ; ಕಿರುಜೇನು: ಹೊಗೆಲಸಿ ಚಿಟ್ಟಜೇನಿಳಿಸಿದೀ ಚಿಂಜೇನು (ಚಾರಸಿ. ೨೩-೫೨೦). **ಚಿಟ್ಟಜೇನು** : 'ಚಿಟ್ಟಜೇನುತುಪ್ಪ' ಪರಾ.

[ ಚಿಟ್ಟ$_1$ (<ಚಿಟ್ಟು$_1$) + ಜೇನು$_1$ (<ಜೇನ್) ]

**ಚಿಟ್ಟನಬೇರು** (ನಾ). ಒಂದು ಬಗೆಯ ಔಷಧಿ ಗಿಡ: ಅಡಕೆ, ಚಿಟ್ಟನಬೇರು, ಸೊಗದೆಬೇರು . . . ಮೆಣಸು ಇವಂ ಸಮತೂಕ ಕಷಾಯಮಿಟ್ಟು ತೆಗೆದುಕೊಳ್ಳಲು ರಾತ್ರಿಜ್ವರಂ ನಾಶಮಕ್ಕುಂ (ಸಕವೈ. ೧೦೮).

[ ? + ಬೇರು (<ಬೇರ್) ]

**ಚಿಟ್ಟನೆ** (ಅ). ಗಟ್ಟಿಯಾಗಿ ; ಜೋರಾಗಿ : ಅವಳು ಚಿಟ್ಟನೆ ಚೀರಿದಳು (ಭಾರತಿ, ೨೦). [ ಚಿಟ್ +– ಅನೆ$_1$ ]

**ಚಿಟ್ಟಬಳ** (ನಾ). ಸಣ್ಣಬಳ್ಳ : ಚಿಟ್ಟಬಳಗಳಿಗೆ ಕಟ್ಟುಗಳಲ್ಲದೆ ಚಿಟ್ಟಕ್ಕೆ ಕಟ್ಟನಿಕ್ಕುವರೆ (ಶಾಂತೀಶ. ೬-೫೨). [ಚಿಟ್ಟ$_1$ (<ಚಿಟ್ಟು$_1$) + ಬಳ$_1$ (<ಬಳ್ಳ)]

**ಚಿಟ್ಟಬಾಸುರ** (ನಾ). ಸಣ್ಣಜಾತಿಯ ಕಬ್ಬು (?) : ಕರಿಯ ಕಬ್ಬು ರಸದಾಳಿಯ ಬಿಳಿಗಬ್ಬು ಮೆಱೆವ ಚಿಟ್ಟಬಾಸುರದ ಹೊಱಹೊಱಗಟ್ಟಿ ನಿಲ್ಲಿಸಿ ಮಾಱುವುದನಾ ದೊರೆಮಗ ಕಂಡನು (ಜ್ಞಾನಕ. ೩೮-೧೨೪).

[ ಚಿಟ್ಟ$_1$ (<ಚಿಟ್ಟು$_1$) + ? ]

**ಚಿಟ್ಟಬಿಲ್ಲು** (ನಾ).ಸಣ್ಣಬಿಲ್ಲು : ಕಡೆಗೊಂದು ಹಕ್ಕಿ ಹೊಡೆಯುವ ಚಿಟ್ಟಬಿಲ್ಲಾದರೂ ಇತ್ತೇ ? (ಮುಳಿಮ. ೬೬).

[ ಚಿಟ್ಟ$_1$ (<ಚಿಟ್ಟು$_1$) + ಬಿಲ್ಲು$_1$ (<ಬಿಲ್$_2$) ]

**ಚಿಟ್ಟಮುಟ್ಟಿ, ಚಿಟ್ಟಾಮುಟ್ಟಿ, ಚಿಟ್ಟೆಮುಟ್ಟಿ** (ನಾ). ಒಂದು ಬಗೆಯ ಮೂಲಿಕೆ : ಚಿಟ್ಟಮುಟ್ಟಬೇರು, ಪಿರಾಮುಟ್ಟವೇರು (ಸಕವೈ. ೧೦೬). **ಚಿಟ್ಟಾಮುಟ್ಟಿ**: ದಶಮೂಲ . . . ಕಿಱುಕಳ್ಳಂಗಡಲೆ, ಚಿಟ್ಟಾಮುಟ್ಟಿ, ಇಷ್ಟನೂ ಪ್ರತ್ಯೇಕ ಹತ್ತು ಹಲಗಳ ಚೆನ್ನಾಗಿ ಒಣಗಿಸಿ, ಜಜ್ಜುಗುಟ್ಟಿ (ವೈದ್ಯಸಾ. I, ೪೦೫). **ಚಿಟ್ಟೆಮುಟ್ಟಿ**: ಧಾತಕಿಕುಸುಮ, ಎಳಚಿಚಕ್ಕೆ, ನೆಲಗುಳ್ಳ, ಚಿಟ್ಟೆಮುಟ್ಟಿ, ಶುಂಠಿ, ಅರಿಸಿನ ಇವಂ ಕಷಾಯವಿಕ್ಕಿ ಕೊಡಲು ವಾತಜ್ವರಂ ಮಾಣ್ಗುಂ (ಸಕವೈ. ೬೯). [ ← ತೆಲು. ಚಿಟಿಮುಟಿ ]

**ಚಿಟ್ಟಲು** (ನಾ). ಒಂದು ಬಗೆಯ ಮರ: (ಎಸಕ್ರು. XVII, ೩೩). [ ? ]

**ಚಿಟ್ಟವುಡಲ, ಚಿಟ್ಟೌಡಲ** (ನಾ). = ಚಿಟ್ಟುಹರಳು : ಕರಿಯ ಚೆಕ್ಕಿನ ತಲೆಯೊಳಗೆ ಚಿಟ್ಟವುಡಲವ ಬಿತ್ತಿ ಬೆಳೆದು ಆ ಬೀಜವನ್ನು ಬಾಯೊಳಗೆ ಹಾಕಿಕೊಳ್ಳೆ ಆ ಚೆಕ್ಕಿನಂತಕ್ಕು (ವಿವೈವಿ. ೨೧೯). **ಚಿಟ್ಟೌಡಲ**: ವರ ಚಿಟ್ಟೌಡಲ ದೆಣ್ಣೆಯಲಾಗಲಿ ಮೇಣುರುವ ತ್ರಿಫಲೆ ಕಷಾಯದಲಿ (ಶಾಳ್ವಸಾಂ. ೨೦) ; ಚಿಟ್ಟೌಡಲದ ಹರಳು ಒಂದು ಹಿಡಿಯನ್ನು ಮೇಲಣ ತೊಟ್ಟ ತೆಗೆದು ಆ ತಿರುಳ ಹುಳಿಮಜ್ಜಿಗೆಯಲ್ಲಿ ಅರೆದು ಕುಡಿಯ ಶ್ವಾಸಖಾಸಗಳು ಹುಟ್ಟುಗೆಡುವುವು (ಸಕವೈ. ೨೦೬); ಚಿಟ್ಟೌಡಲ: – ಈ ಎಣ್ಣೆಯಂ ಹಾಲಲ್ಲಿ ತೆಗೆದುಕೊಳ್ಳೆ ವಾತೋದರ ಮಾಣ್ಗುಂ (ವಿವೈವಿ. ೪). [ಚಿಟ್ಟು$_1$+ಅವುಡಲ]

**ಚಿಟ್ಟಹಲಗೆ** (ನಾ). ಚಿಕ್ಕತಮ್ಮಟೆ : ಕರಡಿಯ ಮಜಲು ಊಡಕ – ಚಿಟ್ಟಹಲಗೆಯ ಮಜಲಿನವರು (ಸುಪರ್ಣ. ೪೦).

[ ಚಿಟ್ಟ$_1$ (<ಚಿಟ್ಟು$_1$) + ಹಲಗೆ (<ಪಲಗೆ) ]

**ಚಿಟ್ಟಹುಲ್ಲು** (ನಾ). ಸಣ್ಣಜಾತಿಯ ಹುಲ್ಲು : ಚಿಟ್ಟಹುಲ್ಲು – ಇದರಿಂದ ಬಹಳ ಚಾಪೆಗಳನ್ನು ಮಾಡುತ್ತಾರೆ (ಸಿದ್ಧಾಂತಿ. ೧೩೩).

[ ಚಿಟ್ಟ$_1$ (<ಚಿಟ್ಟು$_1$) + ಹುಲ್ಲು (<ಪುಲ್) ]

**ಚಟ್ಟಿಲಿಲ್** (ನಾ). ಸಣ್ಣ ಅಳಿಲು : ಚೀರಿದುದು ಚಿಳಿಚಿಳಿಚಿಳಿಲ್ಲೆಂದು . . . ಚಟ್ಟಿಳಿಲ್ (ಶ್ರೀರಾಮಾ. ೪೯೩-೧೯೯).
[ ಚಟ್ಟು$_1$ (< ಚಟ್ಟು$_1$) + ಅಳಿಲ್$_0$ (< ಅಣಿಲ್) ]

**ಚಟ್ಟಾಡು** (ಕ್ರಿ). ಸ್ವಲ್ಪವಾದರೂ ಅಲ್ಲಾಡು ; ಮಿಸುಕಾಡು : ದ್ರೋಣಾಚಾರ್ಯರ ಭಟ್ಟರೆಲ್ಲಂ ಚಿಟ್ಟದಂತೆ ಚಟ್ಟಾಡದಂಜಿ ನಿಲೆ (ಧರ್ಮಾಮೃ. ೧೩-೫೫ ಅಡಿಟಿ). [ ಚಟ್ಟು$_1$ + ಆಡು$_1$ ]

**ಚಟ್ಟಾನೆ** (ನಾ). ಸಣ್ಣಆನೆ; ಆನೆಮರಿ: ಹಳ್ಳಿಗೆ ಬರುವ ಸರ್ಕಸ್ ಎಂಥದಿರಬೇಕು . . . ಮಂಗ್ಯಾ, ನಾಯಿ, ಚಟ್ಟಾನೆ, ತಟ್ಟೂ ಕೆಲವು ಇದ್ದವು (ನಿಂತಿಳ. ೬೪). [ ಚಟ್ಟು$_1$ + ಆನೆ$_1$ ]

**ಚಟ್ಟಾಮುಟ್ಟಿ** 'ಚಿಟ್ಟಮುಟ್ಟಿ' ನೋ.

**ಚಟ್ಟಿ$_1$** 'ಚಟ್ಟು$_1$' ನೋ.

**ಚಟ್ಟಿ$_2$, ಚಟ್ಟೆ$_1$**(ನಾ). ೧. ಧಾನ್ಯದ ಒಂದು ಅಳತೆ; ನಾಲ್ಕು ಸೊಲಗೆಯ ಅಳತೆ : (ಹ). ಚಟ್ಟೆ$_1$ : ೧. ಮಾಟ್‌ನ್ನು ಚಟ್ಟಿ ಪಡಿಗೆ ಸಗಣಿಯ ತುಂಬ (ಅನುಶಾಂ. ೩-೧೨೬). ೨. ಸೇರಿನ ಹತ್ತನೆಯ ಒಂದು ಭಾಗ.
[ ದೇ. ಕ ತಮಿ. ತೆಲು. ಚಟ್ಟಿ ]

**ಚಟ್ಟಿ$_3$** 'ಚಿಟ್ಟ' ನೋ.

**ಚಟ್ಟಿಕ್ಕು$_1$** (ಕ್ರಿ). ಚಟ್ಟೆಂದು ಚೀರು : ಬಲುವಹಿತದಲ್ಲಿ ಅಟ್ಟಹಾಸದಲಿ ಚೀರಿ ಚಟ್ಟಿಕ್ಕಿ ಕೂಗಿ (ವಿಜಾಸು. ೬೦-೫). [ ಚಟ್ + ಇಕ್ಕು$_1$ ]

**ಚಟ್ಟಿಕ್ಕು$_2$** (ಕ್ರಿ). = ಚಟ್ಟುಹಿಡಿ ೧ : ವಾಸುದೇವನ ಪೂಜೆಯೊಮ್ಮೆ ಮಾಡೆಂದರೆ ಬೇಸತ್ತು ತಲೆಯ ಚಟ್ಟಿಕ್ಕಿ ಕುಳಿತೆ (ವಿದಾಕ್ಕ. ೫೧-೫).
[ ಚಟ್ಟು$_2$ + ಇಕ್ಕು ]

**ಚಟ್ಟಿಗ** (ನಾ). ಶಿಷ್ಯ; ಛಾತ್ರ: "ಶಿಷ್ಯಕಃ, ಶಿಷ್ಯಃ, ಈ ೨ ಚಟ್ಟಿಗಂ" (ಕಾಶಕ್ಕೆ. ೨೯೫) ; ಹಿಡಿದ ಕರಡಿಗೆ ಪುಷ್ಪವನಾಗುಮಾಡುವ ಜಡೆಯ ಚಟ್ಟಿಗರಿರೆ (ಹರಿಶಾಂ. ೧-೮೧) ; ಮುದುಕ ಜಂಗಮರು ಚಟ್ಟಿಗರೊಡಿದರು ಮುಂದೆ (ಸಿದ್ಧೇಪು. ೧೭-೧೪) ; ಓರಂತೆ ಸಂಚರಿಸುತಿರ್ಪ ಚಟ್ಟಿಗನಿತ್ತ ಬಾರನೆಂದಾ ಬಿಲದ್ವಾರದತ್ತಂ ನೋಡುತಿರೆ (ಕೊಟ್ಟೂಬ. ೮-೩೬). [ < ಸಂ. ಶಿಷ್ಯಕ ]

**ಚಟ್ಟಿಜೇನು** 'ಚಟ್ಟುಜೇನು' ನೋ.

**ಚಟ್ಟಿಜೇನುತುಪ್ಪ** (ನಾ). ಸಣ್ಣಜೇನಿನ ಗೂಡಿನಲ್ಲಿ ಸಿಗುವ ಜೇನುತುಪ್ಪ: ತವಕ್ಷೀರ ೪ ಪಲ ಸೇರಿಸಿ ಪಾಕದಲ್ಲಿ ಬೆರಸಿ ಚಟ್ಟಿಜೇನುತುಪ್ಪ ಸೇ ೨ ಹಾಕಿ ಕಲಸಿ (ಸಕವ್ಯ. ೪೧೨ ಪರಿ.). [ ಚಟ್ಟಿಜೇನು (< ಚಟ್ಟುಜೇನು) + ತುಪ್ಪ ]

**ಚಟ್ಟಿರಿ** 'ಚಟ್ಟಿಟಿ' ನೋ.

**ಚಟ್ಟಿಲಿ** (ನಾ). ಸಣ್ಣಇಲಿ ; ಚಿಕ್ಕಇಲಿ : "ಗಿರಿಕಾ, ಬಾಲಮೂಷಿಕಾ ಈ ೨ ಚಟ್ಟಿಲಿಗಳ ಹೆಸರು" (ಸಿದ್ಧಾಂತಿ. ೧೩೬) ; ಮನೆಯಲ್ಲಿ ಚಟ್ಟಿಲಿಗಳ ಉಪದ್ರವವು ಬಹಳವಾಗಿದೆ (ಕುಂಹಿಂ. ೧೬). [ ಚಟ್ಟು$_1$ + ಇಲಿ$_1$ ]

**ಚಟ್ಟಿಟಿ** 'ಚಟ್ಟಿಟಿ' ನೋ.

**ಚಟ್ಟು$_1$, ಚಟ್ಟ$_2$, ಚಟು$_2$, ಚಟ್ಟು$_1$, ಚಟ್ಟಿ$_1$, ಚಟ್ಟೆ$_2$, ಚೀಟು$_3$** (ಗು). ೧. ಸಣ್ಣದಾದ ; ಚಿಕ್ಕದಾದ. 'ಚಟ್ಟಿಲಿ' ಪರಾ. ಚಟ್ಟ$_2$ : ೧. 'ಚಟಕೊಳಗು' ಪರಾ. ಚಟು$_2$ : ೧. 'ಚಟುಬಾಳೆ' ಪರಾ. ಚಟ್ಟು$_1$ : ೧. 'ಚಟ್ಟಗುಬ್ಬಿ' ಪರಾ. ಚಟ್ಟಿ$_1$ : ೧. 'ಚಟ್ಟಿಜೇನು' ಪರಾ. (ನಾ). ೨. ಸಣ್ಣಹಕ್ಕಿ : ಚಟ್ಟ ಜೂಗ ಹದ್ದೆಂಬಿವಂ (ಹಡಕಾ. ೫-೯೩). ಚಟ್ಟೆ$_2$: ೧. 'ಚಟ್ಟೆಕಥೆ', 'ಚಟ್ಟೆಬೆಲ್ಲ' ಪರಾ. ೩. ಪಗಡೆಯ ಸಣ್ಣಕಾಯಿ : ಲತ್ತವಲಗೆಯ ಹಾಸಿ ಚಟ್ಟೆಯನಿತ್ತರದಿ ಸಾಲ್ಗೊಳಿಸಿ (ಜನಭಾ. ೩೬-೯೫). ೪. ಪಗಡೆಯ ಸಣ್ಣದಾಳ: ವಿರಾಟ ಧರ್ಮಭೂಪಾಲನಾ ಶಿರಮಂ ಚಟ್ಟಿಯೊಳಿಟ್ಟಂ (ಸೋಮೇಶ. ೬೪). ಚೀಟು$_3$: ೫. ಚೂರು; ತುಂಡು; ರಾಯನೀನಾರಬುತ್ತಿಗೆ ಚೀಟು ರೊಟ್ಟಿಯ ಕಾಯ ಕೊಯ್ದುವೆ ಕೇಳು (ಮೋಹತ. ೧೨-೩೬). [ ದೇ.ಕ ತಮಿ. ಚಟ್ಟು; ತುಳು. ಚಟ್ಟಿ; ತೆಲು. ಚಟ್ಟ, ಚಟ ]

**ಚಟ್ಟು$_2$** (ನಾ). ಜುಗುಪ್ಸೆ ; ಬೇಸರ. 'ಚಟ್ಟಿಕ್ಕು$_2$', 'ಚಟ್ಟುಹಿಡಿ' ಪರಾ. [ < ಚಟ್ ]

**ಚಟ್ಟುಂಬೆ** (ನಾ). ಒಂದು ಬಗೆಯ ಗಿಡ : ಸಾಂಬ್ರಾಣಿಮರ, ಚಟ್ಟುಂಬೆ (ವ್ಯಶಿಗಿ. ೧೩-೨೩೬). [ ? ]

**ಚಟ್ಟುಕೋಳಿ** (ನಾ). ಸಣ್ಣ ಆಕಾರದ ಒಂದು ಬಗೆಯ ಕಾಡುಕೋಳಿ : ಸೆಬೆ ಒಡ್ಡಿ ಕಾಡುಕೋಳಿ, ಚಟ್ಟುಕೋಳಿ ಹಿಡಿಯುವುದು (ಮಲೆಮ. ೯೩).
[ ಚಟ್ಟು$_1$ + ಕೋಳಿ$_1$ (< ಕೋೞ$_1$) ]

**ಚಟ್ಟುತಂದ್ರಿ, ಚಟ್ಟುತಾಂಡ್ರಿ** (ನಾ). ಒಂದು ಬಗೆಯ ಮರ: ಮರಗಳು : ಹಸವ . . . ಚಟ್ಟುತಂದ್ರಿ, ಬೇವು (ನಮ್ಮನು. ೨೩೬). ಚಟ್ಟುತಾಂಡ್ರಿ : ಚಟ್ಟುತಾಂಡ್ರಿಮರ, ಕಾಡುಲವಂಗ, ಕ್ರೂರವಾವು (ವೃಶಿಗಿ. ೫೨-೧೦೩೪).
[ ? ]

**ಚಟ್ಟುತಾಂಡ್ರಿ** 'ಚಟ್ಟುತಂದ್ರಿ' ನೋ.

**ಚಟ್ಟುದ್ದು** (ನಾ). ಸಣ್ಣಉದ್ದು ; ಉದ್ದಿನ ಕಾಳಿನಲ್ಲಿ ಸಣ್ಣ ಜಾತಿ: (ಹ).
[ ಚಟ್ಟು$_1$ + ಉದ್ದು$_2$(< ಉೞ್ದು) ]

**ಚಟ್ಟುಬಾಳೆ, ಚಟುಂಬಾಳೆ** (ನಾ). ಒಂದು ಬಗೆಯ ಬಾಳೆಗಿಡ ಮತ್ತು ಅದರ ಹಣ್ಣು ; ಪುಟ್ಟಬಾಳೆ : ಚಟ್ಟುಬಾಳೆಯ ಹಣ್ಣು ಬಹಳ ರುಚಿ (ರೂಢಿ). ಚಟುಂಬಾಳೆ: ಚಿಗುಳಿ ಚಿನ್ನಾರ್ ಬಚ್ಚೇವ ಚಟುಬಾಳೆ ಅಗಲೋಳು ಗರಿ ಕಾಣಿನೆ (ಮಲ್ಲಿಗ. ೨). [ ಚಟ್ಟು$_1$ + ಬಾಳೆ$_1$(< ಬಾೞೆ) ]

**ಚಟ್ಟುಮುರಿ** (ನಾ). ಒಂದು ಬಗೆಯ ಆಟ ; ಮುಂಟ್ಯಾಟ ; ಜೂಟಾಟ (?) : "ಚಟ್ಟುಮುರಿ ಪುಮ್ಮೆಯೊಳಕ್ಕುಂ" (ಕವಿಶಿ. ೨೨೬) ; ಹಂಸೆ ಹಂಸೆಗಟ್ಟುಂಬರಿವವೊಲು ಪದಪದಂ ಮಱೆಯ ಚಟ್ಟುಮುರಿ[ಪಾಠಾಂ. ಸೆಟ್ಟುಮರಿ]ಯಾಡುತಿರ್ದರು ಸತಿಯರು (ಹಡಕಾ. ೪-೧೧) ; ಜಗಜಟ್ಟಿ ಹಾಯಿಕಿಕೊಂಡು ನುಣ್ಣನೆ ಚಟ್ಟುಮುರಿಯಾಟದಲಿ ಸದೆದನು ಮತ್ತೆ ಕೌರವರ (ಕುವ್ಯಾಆ. ೬-೧೪) ; ಚಟ್ಟವನು ಕೊಡೆವಿಡಿದು ಮರದಿಂದಿಟ್ಟು ಪುಟನೆಗೆದಂಬರದೊಳುಱೆ ಚಟ್ಟುಮುರಿ[ಪಾಠಾಂ. ಟ್ಟಮರೆ]ಯಾಡುವ ನಳಾದಿ ಪ್ರಮುಖ ಪಟುಭಟರ (ಕೃಕರಾ. ೬-೩೫-೪೪). [ ? ]

**ಚಟ್ಟುಹರಳು** (ನಾ). ಚಿಕ್ಕಜಾತಿಯ ಹರಳು: ಚಟ್ಟುಹರಳಿನ ಎಣ್ಣೆ ತುಂಬ ತಂಪು (ರೂಢಿ). 'ಚಿಟ್ಟವುಡಲ' ಪರಾ. [ ಚಟ್ಟು$_1$ + ಹರಳು$_2$ ]

**ಚಟ್ಟುಹಿಡಿ** (ಕ್ರಿ). ಮನಸ್ಸಿಗೆ ಹಿಂಸೆಯಾಗು; ಬೇಸರವಾಗು ; ಜುಗುಪ್ಸೆಯುಂಟಾಗು : ನನಗೂ ತಲೆ ಚಟ್ಟುಹಿಡಿದುಹೋಗಿದೆ (ಮರಳಿ. ೩೫) : ನಮ್ಮ ಸಂಸ್ಕೃತಕಾವ್ಯಗಳಲ್ಲಿ . . . ತಲೆ ಚಟ್ಟುಹಿಡಿಯುವಷ್ಟು ವರ್ಣನೆಗಳೂ ಕಂಡುಬರುತ್ತವೆ (ಭಾರಿಠ. ೪೪೪); ಅವನ ತಲೆ ಚಟ್ಟುಹಿಡಿದುಹೋಗಿತ್ತು (ಕತ್ತಪ. ೪೫); ಆ ಮಾತೆಲ್ಲಾ ಕೇಳಿಕೇಳಿ ಕಿವಿ ಚಟ್ಟುಹಿಡಿದುಹೋಗಿದೆ (ಜಂಡಕೂ. ೧೪). [ ಚಟ್ಟು$_2$ + ಹಿಡಿ$_1$(< ಪಿಡಿ$_1$) ]

**ಚಟ್ಟುಹಿಡಿಸು** (ಕ್ರಿ). ಬೇಸರವಾಗುವಂತೆ ಮಾಡು: ಜೀರುಂಡೆಗಳ ಕೂಗು ಕಿವಿಗೆ ಚಟ್ಟುಹಿಡಿಸುತ್ತಿತ್ತು (ಮಲೆಮ. ೩) : ಹಾಳುಕೆಲಸ ತಲೆ ಚಟ್ಟುಹಿಡಿಸುತ್ತಿದೆ (ರೂಪಕ. ೧೩೧) ; ತುಂಬಾ ಚಟ್ಟುಹಿಡಿಸಿದರೆ . . . ಪುಟ್ಟ ಏಟನ್ನು ಕೊಟ್ಟು ಬರುತ್ತಿದ್ದಳು (ನಾಲ್ಕುಮ. ೧೧೬). [ಚಟ್ಟುಹಿಡಿ+ –ಇಸು$_1$]

**ಚಟ್ಟುಳುಕ** (ನಾ). ಒಂದು ಬಗೆಯ ಸಸ್ಯ : ನೆಗ್ಗಿಲು, ಸೂರ್ಯಭಕ್ತ, ಹೊನ್ನಗನ್ನೆ, ಚಟ್ಟುಳುಕ ಇದರ ಸೊಪ್ಪುಗಳಲ್ಲಿ ರಸವ ತೆಗೆದು ಜೇನು ತುಪ್ಪದಲ್ಲಿ ಕೊಡಲು . . . ಮೂತ್ರಕೃಚ್ಛ್ರರೋಗ ಸಹ ಪರಿಹಾರವಹುದು (ಸಕವ್ಯ. ೩೬೬). [ ? ]

**ಚಟ್ಟೂಳಿಗ** (ನಾ). ಚಿಕ್ಕಕೆಲಸ ; ಸಣ್ಣಪುಟ್ಟಕೆಲಸ : ಇವರುಗಳು ದೊರೆತನ ಮಾಡುವ ಯೋಗ್ಯತೆಯನ್ನು ಪಡೆದವರಾಗಿ ಕಾಣಲ್ಪಡುತ್ತಾರೆ ; ಚಟ್ಟೂಳಿಗ ಮಾಡುವುದಕ್ಕೆ ತಕ್ಕವರಲ್ಲ (ವ್ಯಾಸಜಿ. ೨೨೨).
[ ಚಟ್ಟು$_1$ + ಊಳಿಗ (< ಊೞಿಗ) ]

**ಚಿಟ್ಟಿ$_1$** 'ಚಿಟ್ಟೆ$_2$' ನೋ.

**ಚಿಟ್ಟಿ$_2$** 'ಚಿಟ್ಟು$_1$' ನೋ.

**ಚಿಟ್ಟಿ$_3$** 'ತಿಟ್ಟು$_3$' ನೋ.

**ಚಿಟ್ಟಿ$_4$** (ನಾ). [ಸಂಗೀತ] ಹಾಡಿನಲ್ಲಿ ಒಂದು ಶಾಸ್ತ್ರಬದ್ಧವಾದ ಕ್ರಮ. 'ಚಿಟ್ಟೆತಾನ', 'ಚಿಟ್ಟೆಸ್ವರ' ಪರಾ. [ದೇ.$_2$ ತಮಿ. ಚಿಟ್ಟೈ$_6$ ]

**ಚಿಟ್ಟಿ$_5$** 'ಚಿಟ್ಟ' ನೋ.

**ಚಿಟ್ಟಿ$_6$, ಜಿಟ್ಟಿ$_1$, ಜಿಟ್ಟೆ** (ನಾ). ೧. (ಹೂವಿನಿಂದ ಹೂವಿಗೆ ಹಾರಾಡುವ) ಒಂದು ಬಗೆಯ ರೆಕ್ಕೆಹುಳು ; ಪಾತರಗಿತ್ತಿ : ಮಿಂಚುವ ಚುಕ್ಕಿಯ ರೆಕ್ಕೆಯ ಚಿಟ್ಟೆಯೊ (ಅನಿಲ. ೩೦-೬) ; ಇನ್ನು ಪಾರದಿರೆನ್ನ ಬಳಿಯೆ ಸೊಗ ಗೂಡು; ಚಿಟ್ಟೆ ನೀ ನೆನವೊಳೆನ್ನೆಳವೆಯನಳುಂಬಂ (ಗೀವಿಂ. ೧-೬) : ರೇಷ್ಮೆ ಹುಳುವು . . . ೩ ವಾರ ನಿದ್ರೆಮಾಡಿ ಅದು ಎಚ್ಚತ್ತಾಗ ಚಿಟ್ಟೆಯಾಗಿ ರೂಪಾಂತರ ಹೊಂದುತ್ತದೆ (ಗೃಹವಿ. ೬೬). ೨. ಮಿಡತೆ: ದಿವ್ಯಾಸ್ತ್ರ ಚಯಂಗಳ್ಕೊಳೆ ಗಾಂಧರ್ವಬಲಂಗಳ್ಕಿಡೆದುವು ಮಿಟ್ಟೆಗೊಂಡ ಚಿ[ಪಾಠಾಂ. ಬ. ಚಿ]ಟ್ಟೆಯ ತೆಱದಿಂ (ಪಂಪಭಾ. ೬-೩೮). **ಜಿಟ್ಟಿ$_1$**: ೨. ಪ್ರತಿವರ್ಷ ತಪ್ಪದೆ ಸಣ್ಣ ಪ್ರಮಾಣದಲ್ಲಿ ಜಿಟ್ಟಿಗಳು ಕಂಡುಬರುತ್ತವೆ (ಕೀಟಬ. ೮೪) : ಜಿಟ್ಟಿ ಹುಳಗಳಱ್ಹಂಕಾರ ಮೈಯನ್ನು ಜುಮ್ಮೆನ್ನಿಸುತ್ತದೆ (ಕೃಹಿಶಾ. ೯). **ಜಿಟ್ಟೆ**: ೧. ಒಂದು ಜಿಟ್ಟೆಯನ್ನು ಹಿಡಿದು ಒಂದು ಕಡ್ಡಿಯ ಮೇಲೆ ಸಿಕ್ಕ ಹಾಕಿದ (ಕೃವಾಳ. ೦೦೨). ೨. "ಮಿಡಿತೆ, ಮಿಡಿಚಿ—ಜಿಟ್ಟಿ" (ಗಂಗಾಮ. ೨೫೬).

[ ? ]

**ಚಿಟ್ಟೆಕಥೆ** (ನಾ). ಚಿಕ್ಕಕಥೆ : ಉಪಮೆ, ರೂಪಕ, ಚಿಟ್ಟೆಕಥೆ, ತಿಳಿಹಾಸ್ಯ ಅಥವಾ ಪ್ರತಿಮೆ, ಅನ್ಯೋಕ್ತಿ ಒದಗಿ ಬಂದು ಯಾಕ್ತಿವಾದಗಳಿಂದ ಗಳಿಸ ಬೇಕಾದ ಸಿದ್ಧಿಯನ್ನು ಸಾಧಿಸುತ್ತದೆ (ನಿಬಂಧ. I, ಮುನ್ನುಡಿ X).

[ ಚಿಟ್ಟಿ$_2$(<ಚಿಟ್ಟು$_1$) + ಕಥೆ ]

**ಚಿಟ್ಟೆತಾನ** (ನಾ). [ಸಂಗೀತ] "ಮಿಟಾಟುಗಳ ಅಭ್ಯಾಸಕ್ಕಾಗಿಯೇ ರಚಿತ ವಾದ ತಾನಗಳಿಗೆ ಚಿಟ್ಟೆತಾನಗಳೆಂದು ಹೆಸರು" (ಸಂಗೀಪಂ. ೮೯).

[ ಚಿಟ್ಟಿ$_4$ + ತಾನ$_2$ ]

**ಚಿಟ್ಟೆತಾಳ** (ನಾ). = ಚಿಟಿಕೆತಾಳ : ಯುವತಿಯು ಎಡಗೈಯಲ್ಲಿ ಡಮರುಗ ವನ್ನೂ ಬಲಗೈಯಲ್ಲಿ ಚಿಟ್ಟೆತಾಳವನ್ನೂ ಹಿಡಿದು ನರ್ತಿಸುತ್ತಿರುವಳು (ಹೊಯ್ಸವಾ. ೩೩). [ ಚಿಟ್ಟಿ$_2$(<ಚಿಟ್ಟು$_1$) + ತಾಳ$_1$(=ತಾಲ) ]

**ಚಿಟ್ಟೆಬೆಲ್ಲ** (ನಾ). ಸಣ್ಣ ಅಚ್ಚುಬೆಲ್ಲ : ಕರೆದು ಕೈಯಲ್ಲಿ ಚಿಟ್ಟೆಬೆಲ್ಲ ಕೊಟ್ಟು ಚಿಕ್ಕ ಹರಳುಕಲ್ಲುಗಳನ್ನೆ ಆರಿಸಿ ಕೊಟ್ಟು (ಪುರಂದ. ೪-೬೭-೨).

[ ಚಿಟ್ಟಿ$_2$ (<ಚಿಟ್ಟು$_1$) + ಬೆಲ್ಲ ]

**ಚಿಟ್ಟೆಮುಟ್ಟೆ** 'ಚಿಟ್ಟಮುಟ್ಟೆ' ನೋ.

**ಚಿಟ್ಟೆಸ್ವರ** (ನಾ). [ಸಂಗೀತ] ಅಲಂಕಾರಕ್ಕಾಗಿ ಕೃತಿಗೆ ಸೇರಿಸುವ ಸ್ವರಗಳ ಗುಂಪು ; ಕೃತಿಯನ್ನು ಹಾಡುವಾಗ ಅನುಪಲ್ಲವಿ ಮತ್ತು ಚರಣದ ಕೊನೆಯಲ್ಲಿ ಹಾಡುವ ಸ್ವರಗಳ ಸಮೂಹ : ಪಲ್ಲವಿ, ಅನುಪಲ್ಲವಿ ಚಿಟ್ಟೆಸ್ವರಗಳ ನಂತರ ಪಲ್ಲವಿಗೆ ಸೇರುವುದು ಸಂಪ್ರದಾಯ (ಸಂಗೀಪಂ. ೬೨).

[ ಚಿಟ್ಟಿ$_4$ + ಸ್ವರ ]

**ಚಿಟ್ಟೆಹುಲಿ** (ನಾ). ಸಣ್ಣಜಾತಿಯ ಹುಲಿ: ಚಿಟ್ಟೆಹುಲಿಯಂತೆ ಅದರ ಮೈಮೇಲೆ ಪಟ್ಟೆಮುದ್ರೆ (ದಾಳಿಗಿ. ೯೩).

[ ಚಿಟ್ಟಿ$_2$ (<ಚಿಟ್ಟು$_1$) + ಹುಲಿ$_1$ (<ಪುಲಿ$_1$) ]

**ಚಿಟ್ಟೇಱು** (ಕ್ರಿ). ಮನಸ್ಸಿಗೆ ಹಿಂಸೆಯಾಗು ; ಬೇಸರವಾಗು; ಜುಗುಪ್ಸೆ ಯುಂಟಾಗು : ಚಿಟ್ಟೇಱೆ ವ್ಯುತ್ಕ್ರಮಗಱೆವಂತೊಟ್ಟಜೆಯಿಂ ಬಂದು ಹರನ ಸುತನೊಳ್ ಪಳಚಲ್ ತೊಟ್ಟನೆ ಚಕ್ರದಿ ತಲೆ ಪಱೆದಟ್ಟೆಗಳುರ್ವರೆಗೆ ಕೆಡೆದು ಮಡಿದರ್ ಸವಣರ್ (ಶ್ರೀಪುವಿ. ೩೨-೬೩).

[ ಚಿಟ್ಟು$_3$ + ಏಱು$_1$ (<ಏಱ್$_1$) ]

**ಚಿಟ್ಪೌಡಲ** 'ಚಿಟ್ಟವುಡಲ' ನೋ.

**ಚಿಟ್ಟ, ಚಿಟ್ಟೆ$_2$, ಚಿಟ್ಟಿ$_3$, ಚಿಟ್ಟೆ$_5$** (ನಾ). ದಿನಚರಿಯನ್ನು ಬರೆದಿಡುವ ಚಿಕ್ಕದಾದ ಕರಡುಪುಸ್ತಕ. 'ಕುಳವಾರ್ಚಿಟ್ಟ' ಪರಾ. **ಚಿಟ್ಟೆ$_2$**: (ಕೃಸಗ. II, ೫೪೬). **ಚಿಟ್ಟಿ$_3$** : (ಕ). **ಚಿಟ್ಟೆ$_5$** : ಹಣವಸೂಲಿ ತಪಶೀಲ್ ಲೆಖ್ಖವನ್ನು ದಾಖಲ್ಮಾಡಿರುವ ಚಿಟ್ಟೆಯು ಅಧಿಪತಿ ಭದ್ರವಾಗಿಟ್ಟಿರಬೇಕು (ಗ್ರಾಮಾಳ. ೬೮) : ಹಳೆ ದುಮರ್ಖಿ ಚಿಟ್ಟೆಯನ್ನು ನೋಡಿದರೆ ಈ ವಿಷಯ ತಿಳಿದು ಬರುತ್ತದೆ (ತುಳುನಾ. ೧೧೭). [ ←ಹಿಂ. ಚಿಟ್ಠಾ ]

**ಚಿಟ್ನೀಸ** 'ಚಿಟಣವೀಸ' ನೋ.

**ಚಿಟ್ರೆಹಕ್ಕಿ** (ನಾ). ಒಂದು ಬಗೆಯ ಹಕ್ಕಿ : ಚಿಟ್ರೆಹಕ್ಕಿಯು ಚಿರತೆ . . . ಪರಿವ ಗೀಜಗ ಮೆರೆದವು (ಗೋಹಾಡು. ಪುಟ ೨೪).

[ ಚಿಟ್ರೆ$_9$ + ಹಕ್ಕಿ$_1$ (<ಪಕ್ಕಿ$_1$). / ತುಳು. ಚಿಟ್ಟೆಪಕ್ಕಿ ]

**ಚಿಟ್ಲೆ, ಚಿಟ್ಲು** (ನಾ). ಒಂದು ಬಗೆಯ ಕಾಡುಮರ : (ಕ). **ಚಿಟ್ಲು** : (ಎಸಮ್ಮ. I, ೨೯). [ ←ತಮಿ. ಚಿಟ್ಟಲಿಂಗಿ ]

**ಚಿಟ್ಲು** 'ಚಿಟ್ಲೆ' ನೋ.

**ಚಿಡಾಯಿಸು, ಚುಡಾಯಿಸು** (ಕ್ರಿ). ಕೀಟಲೆ ಮಾಡಿ ರೇಗಿಸು: ಕೆರಳಿಸು : (ಕ). **ಚುಡಾಯಿಸು** : ಸುಮಿತ್ರೆಗೆ ಗೆಳತಿಯರು ಚುಡಾಯಿಸುವುದು ಕಿವಿಗೆ ಬೀಳಲೇ ಇಲ್ಲ (ವಿದ್ಯಾಕಿ. ೦೯೩) ; ಸ್ವಾಮಿಯನ್ನು ಇನ್ನೊಂದಷ್ಟು ಚುಡಾಯಿಸೋಣ (ಸ್ವಾಮಿಸ್ನೇ. ೦೩೬).

[ ಚಿಡಾಯಿ$_0$ (P ←ಮರಾ. ಚಿಡವಿಣೇ) + – ಇಸು$_3$]

**ಚಿಣಗಿ$_1$** (ನಾ). ಒಂದು ಬಗೆಯ ಹೂವು: ಅಣ್ಣಿಗೇರಿ ಅಮೃತಲಿಂಗ ಗೊಯ್ದನಾ ಚಿಣಗಿ ಬಿಳೀ ಕಣಗಿಲೆಹೂವ (ಕಜಾಗೀ. ೯೦) ; ಚಿಟ್ಟ ಚಿಣಗೀ ಹೂವ ದುಂಡಮಲ್ಲಿಗಿಹೂವ (ಮಲ್ಲಿಗ. ೬). [ ? ]

**ಚಿಣಗಿ$_2$** 'ಚಿಣಗಿ' ನೋ.

**ಚಿಣಿ** 'ಚಿನ್ನಿ$_1$' ನೋ.

**ಚಿಣಿಕೋಲ್** 'ಚಿಣ್ಣಿಕೋಲು' ನೋ.

**ಚಿಣಿಕೋಲು** 'ಚಿಣ್ಣಿಕೋಲು' ನೋ.

**ಚಿಣಗಿ, ಚಿಣಗಿ$_2$** (ನಾ). ಒಂದು ಬಗೆಯ ವಿಷಸರ್ಪ : ಚಿಣಗೀಹಾವು ಬಳೆಬಡಕಹಾವು ಹೆಬ್ಬಾವು ಎಂದು ಹಲವು ತರದ ಹಾವುಗಳು ಉಂಟು (ಮುಂಬಯಿ. ೨-೩೩). **ಚಿಣಗಿ$_2$**: ಬೇರೆ ವಿಷಯುಕ್ತಸರ್ಪಗಳು ಚಿಣಗೀಹಾವು (ಘುಸರ್), ಮಂಡೋಳ (ಘೋಣಸ)(ಕಥಾಗಿ. ೬೭). [ ? ]

**ಚಿಣಿದಾಂಡು** 'ಚಿನ್ನಿದಾಂಡು' ನೋ.

**ಚಿಣಿಪಣಿ** 'ಚಿಣಿಫಣಿ' ನೋ.

**ಚಿಣಿಫಣಿ, ಚಿಣಿಪಣಿ** (ನಾ). ೧. ಚಿಣ್ಣಿ ಮತ್ತು ದಾಂಡು : ಹುಡುಗರು . . . ತಮ್ಮ ಕೊಂಬು, ಕೊಳಲು, ಚಿಣಿಫಣಿ, ಗೋಲುಗಜ್ಜುಗಗಳನ್ನು ತಕ್ಕೊಂಡು . . . ಹಿಂಬಾಲಿಸಿದರು (ಛಾಮೃತ. ೩೧೩). ೨. ಚಿಣ್ಣಿ ಮತ್ತು ದಾಂಡುಗಳಿಂದ ಆಡುವ ಆಟ: ಸುಮ್ಮನ ಚಿಣಿಫಣಿ ಆಡೋಣು (ಅಮರಿ. ೨೬) ; ಅಪ್ಪಾ, ಕೃಷ್ಣನ ಕೂಡ ನಾನು ಚಿಣಿಫಣೀ ಆಡುತ್ತಿದ್ದೆ (ಮುಂಬಯಿ. ೫-೨೬೮). **ಚಿಣಿಪಣಿ** : (ಕ). [ ಚಿಣಿ(<ಚಿನ್ನಿ$_1$) + ಫಣಿ$_2$ ]

**ಚಿಣಿಮಿಂಡಿ** (ನಾ). ಒಂದು ಬಗೆಯ ತಿನಿಸು (?) : ಮಡಿಲೊಳಗೆ ಚಿಣಿಮಿಂಡಿ ಬಟ್ಟಲೊಳಡಸಿ ಚಲಿಪಾಲ್ಗಿಂಡಿನೀರನು ಪಿಡಿದು ಬಂದಿ ನ್ನೋರ್ವ ಸತಿ ಸುತನ್ನಸ್ತಸಂಜ್ಞೆಯಲಿ ಯಡೆಗೆ ಕರೆದು (ಜರಾಪೂ. ೪-೨೬).

[ ? ]

**ಚಿಣ್ಣ** 'ಚಿನ್ನ$_2$' ನೋ.

**ಚಿಣ್ಣಂಚಿ** (ನಾ). ಚಿಕ್ಕಹಂಸ ; ಹಂಸದ ಮರಿ : ಚಿಣ್ಣಂಚಿ ನಡೆ ಚಿಕ್ಕಹೆಱ್ ವಣಿ ಮಱಿಯುಲ್ಲೆಗಣ್ (ಶ್ರೀಪಾಲ. ೩-೩೮).

[ ಚಿಣ್ಣ (<ಚಿನ್ನ$_2$) + ಅಂಚೆ$_2$ ]

**ಚಿಣ್ಣತನ** (ನಾ). ಎಳೆತನ ; ಚಿಕ್ಕಂದು ; ಬಾಲ್ಯ: ಹೆಣ್ಣಿನಂಗವ ನೋಡಿರೆ ಪುರಾತನರ್ಬಳಿಕ ಚಿಣ್ಣತನದನುವ ನೋಡಿರೆ (ಮದೀಪು. ೩೦-೧೮) : ಕಣ್ಣ ಮುಂದುದಿಸಿಯನ್ನೋದಕಂಗಳ ಗ್ರಹಿಸಿ ಚಿಣ್ಣತನದಿಂ ಮೆರೆದು ಯವ್ವನತ್ವಂ ದಳೆದು (ಛಕ್ಷ. IV, ೩-೧). [ ಚಿಣ್ಣ (< ಚಿನ್ನ$_2$) + – ತನ ]

**ಚಿಣ್ಣನೆ** (ಅ). ಬೇಗನೆ; ಕೂಡಲೆ : ಆ ವೇಗಕ್ಕೆ ಬಲೆಯನ್ನು ಎತ್ತಿಹಿಡಿದಿದ್ದ ವಿಣೆಯು ಚಿಣ್ಣನೆ ಹಾರಿ ಸಮಗ್ರ ಬಲೆಯು ಹಂದಿಯ ಮೇಲೆ ಬಿತ್ತು (ಹುಬ್ಬಹ. ೨೦) [ ? + – ಅನೆ$_1$ ]

**ಚಿಣ್ಣವೆಟ್** (ನಾ). ಎಳೆಯ ಚಂದ್ರ; ಬಾಲಚಂದ್ರ: ಅಣ್ಣವಾಲು ಪಾಯಸ ಅಮೃತಾನ್ನವನು . . . ಚಿಣ್ಣವೆಟ್‌ಯ ಸೂಡಿದಭವನ ಶರಣರಿಗುಣ್ಣಲಿಕ್ಕುವ ಬಸವೇಶ (ಬಸಕ. ೧-೧೭೦). [ ಚಿಣ್ಣ (< ಚಿನ್ನ$_2$) + ವೆಟ್ ]

**ಚಿಣ್ಣಾಟ** 'ಚಿನ್ನಾಟ' ನೋ.

**ಚಿಣ್ಣೆ** 'ಚಿನ್ನಿ$_1$' ನೋ.

**ಚಿಣ್ಣೆಕೋಲು, ಚಿಣಿಕೋಲ್, ಚಿಣಿಕೋಲು** (ನಾ). ೧. ವಂಕ್ಕಳು ಆಟಕ್ಕೆ ಬಳಸುವ ಮರದ ಸಣ್ಣತುಂಡು ; ಚಿಣ್ಣೆ : ಬಪ್ಪಳನ ಬಲವ ಕಂಡು ಚಿಣ್ಣೆಕೋಲಂತೆ ಚಿಗಿದನು (ಬಿಜ್ಜಹ. ೬-೬೬). ೨. ಚಿಣ್ಣೆ ಮತ್ತು ದಾಂಡುಗಳಿಂದ ಆಡುವ ಆಟ: ಚೆಂಡು ಬುಗುರಿ ಚಿಣ್ಣೆಕೋಲು ಗಜ್ಜುಗವಾಡುತ (ಪುರಂದ. ೨-೫೨-೧). **ಚಿಣಿಕೋಲ್ : ೨.** ಬಾಲಕರು ನೂಱಾಱು ವೆಱಿದರು . . . ಚೆಂಡಿನ ಹೊಣಕೆ ಚಿಣಿಕೋಲಾಳುಗೊತ್ತಿನ ದಂಡೆಯನೆ ನಾನಾವಿನೋದದಲಿ (ಶಬ್ದಾ,ಅ. ೬-೧); ಚಿಣಿಕೋಲ್ ಚೆಂಡು ಬುಗರಿಯನಾಡುತ (ಪುರಂದ. ೧-೧೩-೨). **ಚಿಣಿಕೋಲು: ೨.** ಚಿಣಿಕೋಲಿನಂಥ ಆಟಗಳನ್ನು . . . ಆಡುವಲ್ಲಿ, ಗೆಲುವಿನ ಗುರುತನ್ನು ನೆನೆದು ಹಿಗ್ಗಬಲ್ಲ (ಸ್ವಸ್ವಹಿ. ೩೮).

[ ಚಿಣ್ಣೆ (< ಚಿನ್ನಿ$_1$) + ಕೋಲು$_1$ (< ಕೋಲ್$_1$) ]

**ಚಿಣ್ಣಿಗ** (ನಾ). ಬಾಲಕ; ಹುಡುಗ: ಹೆಣ್ಣು ಪ್ರಾಣಕ್ಕೆ ಮುನಿದರೇ ಚಿಣ್ಣಿಗ ಹಾದರಿಗನಾಗಿ ಕಳವಂ ಕಲಿತರೇ ಹೆಣ್ಣು ಧರೆ ಭೂಮಿಯಾ × × × ಹೆಣ್ಣಂ ಬಿಡು ಚಿಣ್ಣ ಬೇಡಾ ಆ ಮೋಣ್ಣಾಳದಿರಾ (ಗುಭಿಕ. ೬-೩೬).

[ ಚಿಣ್ಣ (< ಚಿನ್ನ$_2$) + – ಇಗ ]

**ಚಿಣ್ಣೆದಾಂಡು** 'ಚಿನ್ನಿದಾಂಡು' ನೋ.

**ಚಿಣ್ಣೊಸ** (ನಾ). (?): ಕಣ್ಣಾ ಬಿಟ್ಟರೆ ಬಿಡೆನೊ ಜಲವನ್ನು ಪೂಕ್ಕರೆ ಬಿಡೆನೊ ವಣ್ಣು ತೂರಿ ಕಿಡಿಯಾದರೆ ಬಿಡೆನೊ ಸಣ್ಣನಾಗಿ ಹೆಣ್ಣು ತೊರೆದಿರೆ ಬಿಡೆನೊ ಉಣ್ಣಾದ ಚಿಣ್ಣೊಸ ತೊರೆದರೆ ಬಿಡೆನೊ (ವೋಣ್ಣದೀ ೩೬-೧). [ ? ]

**ಚಿತ** (ಗು). ೧. ರಾಶಿಮಾಡಿದ ; ಕೂಡಿಹಾಕಿದ ; ಸಂಗ್ರಹಿಸಿದ. ೨. ವಂಚಿಸಿದ ; ಆವರಿಸಿದ ; ತುಂಬಿದ. [ ಸಂ. ]

**ಚಿತಕ** (ನಾ). ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ ; ಚಿತೆ : ಪ್ರಭಾವತಿ ಕಂತಿಕೆಯನೆತ್ತಿಕೊಂಡುಯ್ದು ಪರೇತವನದೊಳ್ ಯೋಗಸ್ಥರಾಗಿರ್ದ ಹಿರಣ್ಯವರ್ಮಮುನಿವರಸಿರ್ವರುಮನೊಂದೆ ಚಿತಕದ ಮೇಗಿಟ್ಟು ಸುಡುವಾಗಳ್ (ಚಾವುಂಪು. ೬೦). [ < ಸಂ. ಚಿತಿಕಾ ]

**ಚಿತಗು** 'ಚಿದಕಂ$_1$' ನೋ.

**ಚಿತಾನಳ** (ನಾ). ಹೆಣವನ್ನು ಸುಡುವ ಬೆಂಕಿ : ಆ ಜಯದ್ರಥನ ಚಿತಾನಳನಿಂದಮೊಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವೆನ್ನ ನಯನ ಜಲಂಗಳ್ (ಪಂಪಭಾ. ೧೧-೧೧೯). [ ಸಂ. ಚಿತಾನಲ (ಚಿತಾ + ಅನಲ) ]

**ಚಿತಾಭಸ್ಮ** (ನಾ). ಚಿತೆಯ ಬೂದಿ : ನೆಹರೂ ಅವರ ಚಿತಾಭಸ್ಮವನ್ನು ಅವರ ಅಪೇಕ್ಷೆಯಂತೆ ಭಾರತದಾದ್ಯಂತ ಸಿಂಪಡಿಸಲಾಯಿತು (ರೂಢಿ).

[ ಸಂ. (ಚಿತಾ + ಭಸ್ಮ) ]

**ಚಿತಾಯಿಸು** (ಕ್ರಿ). ಹುರಿದುಂಬಿಸು ; ಉತ್ತೇಜಿಸು : ರೇಗಿಸು ; ಚಿತಾಯಿಸು; ಎತ್ತಿಕಟ್ಟು (Incite. ಇಂಕನಿ). [ ಚಿತಾವಣೆ + –ಇಸು$_3$ ]

**ಚಿತಾರ** (ನಾ). ಬಣ್ಣದ ಸಾಮಾನುಗಳನ್ನು ಮಾಡುವವನು; ಗುಡಿಗಾರ: ಗುಡಿಗಾರರಿಗೆ ಚಿತಾರರೆಂತಲೂ ಅನ್ನುವರು. ಗಾಡದ ಮೇಲೆ ಕಟ್ಟಿಗೆಯ ಸಾಮಾನುಗಳನ್ನು ಮಾಡುವದೇ ಇವರ ಮುಖ್ಯ ಹೋರೆಯು (ಕಥಾಂಗ. ೧೩೬). [ ←ಮರಾ. ಚಿತಾರ. / ಸಂ. ಚಿತ್ರಕಾರ ]

**ಚಿತಾರಿ** (ಗು). ನಾಜೂಕಾಗಿರುವ: ಹಾಡಿಕೆಯಲ್ಲಿ ಚಿಲ್ಲರೆ ಚಿತಾರಿ ಕೆಲಸಗಳು ಇರಲಿಲ್ಲ, ಕಚ್ಚುಗುಳಿಯಿಡುವ ಅಗ್ಗದ ಸಾಮಾನು ಇರಲಿಲ್ಲ (ಗಾನಕ. ೪೪).

[ < ಚಿತಾರ ? ]

**ಚಿತಾವಣೆ** (ನಾ). ಇತರರನ್ನು ಪ್ರೇರಿಸುವಿಕೆ; ಎತ್ತಿಕಟ್ಟುವಿಕೆ; ಪ್ರಚೋದನೆ : ನರಸಮ್ಮನ 'ಚಿತಾವಣೆ'ಯಿಂದ ವಿಷಕಂಠಯ್ಯ, ಪಾರ್ವತಮ್ಮ ಮದುವೆಯ ಸುದ್ದಿ ಎತ್ತಿದಳು ಎಂದರೆ . . . ಕೋಣೆಯಿಂದ ಮೆಲ್ಲನೆ ಜಾರಿಬಿಡುತ್ತಿದ್ದನು (ಸರ್ವಮಂ. ೧೭೮) : ಆ ಸಿಂಬಾವಿಹೆಗ್ಗಡೆಯ ಚಿತಾವಣೆ ಬೇರೆ ಇದೆ ಅವನಿಗೆ (ಮಲೆಮ. ೩೪೮); ನಿನ್ನ ತಂದೆಯನ್ನು ತೀರಿಸಿಬಿಡು ಎಂದು ಚಿತಾವಣೆಮಾಡಿದನು (ಹಹು,ಹು. ೬೮).

[ ←ಹಿಂ. ಚಿತಾವನೀ ]

**ಚಿತಾವಣೆಗಾತಿ** (ನಾ). ಪ್ರೇರೇಪಿಸುವವಳು ; ಹುರಿದುಂಬಿಸುವವಳು : ವರ್ತಕ ಮಾಸ್ಲೋವಳನ್ನು ಬಿಡುಗಡೆ ಮಾಡಿಸುವ ಕಾತರತೆಯಿಂದ ಬಾಷ್ಕೋವಳೆ ಮುಖ್ಯ ಚಿತಾವಣೆಗಾತಿಯೆಂದು ಒತ್ತಿ ಒತ್ತಿ ಹೇಳಿದನು (ಪುನರು. ೧೦೩). [ ಚಿತಾವಣೆ + – ಕಾತಿ$_6$ ]

**ಚಿತಿ** (ನಾ). ೧. ರಾಶಿ ; ಸಮೂಹ. ೨. ಶೇಖರಿಸುವುದು ; ಸಂಗ್ರಹಿಸುವುದು. **೩.** ಬೆಂಕಿಯ ಕುಂಡ : ತುಪ್ಪವನಿಕ್ಕಿದ ಚಿತಿಯಂತೆ ಸ್ಫಟಿಕವ ಸಾರಿದ ಒಱತೆಯಂತೆ (ವೋಳೆಮಾ. ೧೬೦-೩೯೯) : 'ಚಿತಿ' ಎಂದರೆ ಯಜ್ಞವೇದಿಕೆ, ಕುಂಡ (ಶಾಂಡಿಕ. ೦೫೦). **೪.** ಶವವನ್ನು ಸುಡಲು ಒಟ್ಟಿದ ಕಟ್ಟಿಗೆಯ ರಾಶಿ; ಚಿತೆ: ಮತವು ತನಗಿನ್ನರಸನೊಡನಾ ಚಿತಿಯ ಪುಗುವುದು (ರಾಮಾಸಂ. ೬-೩-೨೦) ; ಮದವಳಿಗೆ ಲಗ್ನವೇದಿಕೆಯಂತೆ, ಚಿತಿಯು ಪೊಗುತ (ಗೀಪಿಂ. ೩೮-೧೮). **೫.** ಜ್ಞಾನಸ್ವರೂಪ ; ಆತ್ಮಧರ್ಮವಾದ ಜ್ಞಾನ : ಆ ಚೈತನ್ಯವು ಚಿತಿ ಮಾತ್ರ (ಛಾತತ್ತ್ವ. ೩೪೧). **೬.** [ಗಣಿತ] ಸಾಲಾಗಿರುವ ವಸ್ತುಗಳ ಕ್ರಮವನ್ನು ವ್ಯತ್ಯಾಸಪಡಿಸುವುದು, ಹಾಗೆ ವ್ಯತ್ಯಾಸಪಡಿಸಿದ ವಸ್ತುಗಳು ಮತ್ತು ಅವುಗಳಿಗೆ ಸಂಬಂಧಿಸಿದ ಲೆಕ್ಕ : ಲೀಲಾವತಿಯನ್ನು ೧೩ ಅಧ್ಯಾಯಗಳನ್ನಾಗಿ ವಿಭಾಗಿಸಿದ್ದಾರೆ . . . ಚಿತಿ (Stacks), ಕ್ರಕಚ (Saw) . . . ಮುಂತಾದ ವಿಷಯಗಳು ಅಡಕವಾಗಿವೆ (ಗಣಿಕ. ೨೭೪). [ ಸಂ. ]

**ಚಿತಿಶಕ್ತಿ** (ನಾ). [ತತ್ತ್ವಶಾ] ಜೀವಾತ್ಮ: ಇಂತಹ ಚಿತಿಶಕ್ತಿಗಳೆಂಬ ಜೀವಾತ್ಮರು ಅಸಂಖ್ಯಾತಗಳಾಗಿರುವರು (ಹಿಂದಣಾ. ೩೮). Pಸಾಂಖ್ಯಮತದಂತೆ ಚಿಚ್ಛಕ್ತಿಯೇ ಜೀವಾತ್ಮ. [ ಚಿತಿ + ಶಕ್ತಿ ]

**ಚಿತೆ** (ನಾ). = ಚಿತಿ ೪ : "ಚಿತ್ರ ಚಿತೆಯೆನಲು ಸಿದ್ಧಿಗೆಯುದನಿಕ್ಕುಂ" (ಮುಂಗರಾ. ೧೧೫-೭);ಆ ಗಂಧದ ಕೊರಡನ್ನು ತಂದು ಚಿತೆಯ ಮೇಲಿರಿಸಿದರು (ಹಲ್ಮಿಬ. ೪) ; ಕ್ಷಿಪ್ರದಲ್ಲಿ ಚಂದನಕಾಷ್ಠದ ಚಿತೆ ರಾಜಪಿತೃಭೂಮಿಯಲ್ಲಿ ಸಿದ್ಧವಾಯಿತು (ಶಾಂತಲಾ. ೧೮೦). [ ಸಂ. ಚಿತಾ ]

**ಚಿತೆವೆಂಕಿ** (ನಾ). ಚಿತೆಯ ಬೆಂಕಿ : ಬೇರೊಂದು ಚಿತೆವೆಂಕಿಯನ್ನು ಹಾದು ಬಂದಿರುವ . . . ಹೆಣ್ಣಿನ ವೋಹ ಬೇಡ (ಅನುಕ. ೪೩).

[ ಚಿತೆ + ಬೆಂಕಿ (< ಬೆಂಕೆ) ]

**ಚಿತ್ಕಲೆ, ಚಿತ್ಕಳೆ** (ನಾ). ಪರಮಾತ್ಮನ ಚೈತನ್ಯಾಂಶ: ಇದು ಚತುರ್ವೇದಾಗಮಪುರಾಣಾದುದಧಿಯೊಳ್ ಜನಿಸಿದಾ ಚಿತ್ಕಲಾನಿಧಿಯೆನಿಸಿ (ಬಸವೋಪು. ೦-೬೮). **ಚಿತ್ಕಳೆ:** ಆ ನೆನಹು ನಿರ್ಧರಿಸಿ ಚಿತ್ತನಿಸಿತ್ತು, ಆ ಚಿತ್ತಿನಿಂದೆ ಚಿತ್‌ನಾದ ಚಿತ್‌ಬಿಂದು ಚಿತ್‌ಕಳೆಗಳೊಗೆದುವು (ಅಖಂಡೇ. ೩-೧).

[ ಸಂ. ಚಿತ್ಕಲಾ (ಚಿತ್ + ಕಲಾ) ]

**ಚಿತ್ಕಳೆ** 'ಚಿತ್ಕಲೆ' ನೋ.

**ಚಿತ್ಕಾಂತ** (ನಾ). ಮನಸ್ಸಿಗೆ ಪ್ರಿಯವಾದವನು ; ಪ್ರಾಣಪ್ರಿಯ ; ಪ್ರಾಣಕಾಂತ: ಚಿತ್ಕಾಂತ ನಿನ್ನ ಯುನಿವಚನಾಮೃತವು ಸುರಸ ಮತ್ಕರ್ಣದೊಳು ಪೊಕ್ಕು (ನವಮೋ. ೩-೩). [ ಸಂ. (ಚಿತ್ + ಕಾಂತ) ]

**ಚಿತ್ಕ್ರಿಯೆ** (ನಾ). ಮನಸ್ಸಿನ ಆಲೋಚನೆ,– ಕ್ರಿಯೆ: ಕಲಾವಿದನ ಕ್ರಿಯೆ ಚಿತ್ಕ್ರಿಯೆಯಾದುದರಿಂದ ಭೌತಮಾಧ್ಯಮ ಯಾವ ರೀತಿಯಲ್ಲೂ ಅವನ ಅಭಿವ್ಯಕ್ತಿಗೆ ಅಡ್ಡಿಯಾಗುವುದಿಲ್ಲ . . . ಆದರೆ ಕಲ್ಲು, ಭಾಷೆ, ಬಣ್ಣ ಇತ್ಯಾದಿಗಳು ಕಲಾಮಾಧ್ಯಮವಾಗುವುದು ಕಲಾವಿದನ ಪ್ರತಿಭೆಗೆ ಅಥವಾ ಚಿತ್ಕ್ರಿಯೆಗೆ ಒಳಗಾದಾಗ (ಸೌಂದಸ. ೭೨).
[ ಸಂ. ಚಿತ್ಕ್ರಿಯಾ (ಚಿತ್ + ಕ್ರಿಯಾ) ]

**ಚಿತ್ತ** (ಗು). ೧. ತಿಳಿದ; ಗ್ರಹಿಸಿದ. (ನಾ). ೨. ಮನಸ್ಸು: ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ (ಬಸವ. ೨೯) ; ಶಿವನಿಷ್ಠೆ ಚಿತ್ತದೊಳು ಬೇರ್ವರಿದವರ್ಕೆಲರು (ತಿರುಶ. ದೀ. ೧೪-೧೬) ; ಸೂಚಿಪೋಯಿತು ಚಿತ್ತ . . . ವಿಷಾಯ ಪೊಗುವಂಗಜನ ಶರದಲಿ (ಕುಮಾವ್ಯ. ೨-೦೦). ೩. ಅಪೇಕ್ಷೆ; ಆಶಯ: ಧರ್ಮವನು ಮಾಡಬೇಕೆಂಬ ಚಿತ್ತದಿಂದ ತಿರುಮಲರಸರು (ಎಕ. XX, ೮-೩೩ ; 1556) ; ಚಿತ್ತವಱಿತು ಸೇವೆಯೆಸಗುವ ಸತಿಯರ ವೃತ್ತವ ಬಿತ್ತರಿಸುವೆನು (ಹರಿಬ. ೪-೩). ೪. ಗುರಿ ; ಉದ್ದೇಶ : ಪರಿಕಿಸುವ ನಾಡಿ ನಡುವಿರೆ ಪರೀಕ್ಷೆಯೊಳು ತಿಳಿದ ರಾಸಿಯಂತಿದು ಮೊದಲೊಳು ಚಿತ್ತದಿಚ್ಛೆಯೊಳಂತ್ಯದೊಳಿರೆ ತಪ್ಪದು ಫಣಮದು ಚಿತ್ತವಿಳಾಸಂ (ಭಾಸ್ಕರ. ೩೦-೮). [ ಸಂ. ]

**ಚಿತ್ತಂಗುಡು, ಚಿತ್ತಗೊಡಂ** (ಕ್ರಿ). ಮನಸ್ಸಿಡು ; ಗಮನಿಸು : ಸರ್ವಸ್ವಮುಂ ನಿಮ್ಮಡಿಗಳೊಡವೆ ಆಂ ಕಾಪಿನಾಳೆಂದು ಚಿತ್ತಂಗುಡುತಿರ್ಪಂತೆ (ರಕ್ಷಾಕ. ೫೯). **ಚಿತ್ತಗೊಡು:** ವಿದಿತ ವೈದಿಕ ಲೌಕಿಕಕೆ ಜಗವದುಹದಂತಿರೆ ಚಿತ್ತಗೊಡಬೇಕೆಂದು ಕೈಮುಗಿದ (ಕೊರಶಾ. ೬-೫೩-೨೬) ; ಮನೋರಮೆ ವಿನಾಯಕನ ಮಾತುಗಳನ್ನೆಲ್ಲ ಚಿತ್ತಗೊಟ್ಟು ಕೇಳುತ್ತಿದ್ದಳು (ಅಂಲಿಕ. ೦೬).
[ ಚಿತ್ತ + ಕುಡು$_1$ (<ಕೊಡು$_1$) ]

**ಚಿತ್ತಂಗೊಳ್** (ಕ್ರಿ). ಮನಸ್ಸಿಡು ; ಮನಸ್ಸಿಗೆ ತೆಗೆದುಕೊಳ್ಳು : ಕೇಳೀವನ ಪಾದಪಂಗಳಿರ ಚಿತ್ತಂಗೊಂಡು ಬೀಟ್ಕೊಂಡು ರಾಗದೆ ನಿಮ್ಮಂ ಬಲಗೊಂಡು ಪೋಪ ಗುಣಮಂ ಕೊಳ್ಳಿಂ (ಆದಿಪು. ೦೦-೧೩೪).
[ ಚಿತ್ತ + ಕೊಳ್$_1$ ]

**ಚಿತ್ತಂಗೊಳಿಸು** (ಕ್ರಿ). ಮನಸ್ಸನ್ನು ಒಲಿಸು ; ಮೋಹಗೊಳಿಸು ; ಆಕರ್ಷಿಸು : ಬಳೆದೊಡಿಸಲೆಂದು ಸುದತಿಯು ಕೆಳೆಯನದೊರ್ವಂ ಕರಕ್ಕೆ ಕೆಯ್ನೀಡೆ ಸುಖೋಜ್ವಳೆಯ ಶಶಿಮುಖಿಯು ಚಿತ್ತಂಗೊಳಿಸುವ ಸಖಿ ಬೇಡಬೇಡವೆನುತುಂ ನುಡಿದಳ್ (ಗಿರಿಶ. ೪-೦೩೮) ; ಕಡುಚದುರರ ಚಿತ್ತಂಗೊಳಿಸಿದುದಾ ಬನದೊಳು ಸುಳಿವೆಳಗಾಳಿ (ಜಯುಕಾ. ೦-೩೦).
[ ಚಿತ್ತಂಗೊಳ್ + – ಇಸು$_1$ ]

**ಚಿತ್ತಂಬಡೆ** (ಕ್ರಿ). ೧. ಮನಸ್ಸನ್ನು ಹೊಂದು ; ಗಮನವಿಡು : ಭುವನಾಗ್ರದ ಸುಖಸಂಪದಕಿಚ್ಛೈಸುವ ಚಿತ್ತಂಬಡೆದು ವಿರಾಜಿಪ ಮುನಿನಿವಹದ ಪದಪಂಕಜಕೆಱಗುವೆ ನಾಂ (ಜಯುಕಾ. ೦-೦೦). ೨. ಮನಸ್ಸನ್ನು ವಶಪಡಿಸಿಕೊಳ್ಳು: ಪುರುಷನ ಚಿತ್ತಂಬಡೆ[ಪಾಠಾಂ. ಬಡಿ]ಯಲ್ ಪರಮಶ್ರಾವಕಿಯರಪ್ಪರಿತ್ತಲ್ಲಳೆಯುಂ . . . ಪೆಂಡಿರಿಗೀಪರ್ ಗೌರಿಗೆಂದು ಸಲೆ ತಾಟಕಿಯರ್ (ಸಮಪ. ೫-೧೦೦). [ ಚಿತ್ತ + ಪಡೆ$_1$ ]

**ಚಿತ್ತಂಬುಗು** (ಕ್ರಿ). ಮನಸ್ಸನ್ನು ಪ್ರವೇಶಿಸು, – ಒಳಹೊಗು ; ಮನಸ್ಸನ್ನು ಆಕರ್ಷಿಸು : ಚಿತ್ತಂಬೊಕ್ಕಿರ್ದಯಿಂತ್ಯೆ ಹರಿ ಕುಳಿರ್ವ ಕರಸ್ಪರ್ಶದಿಂದಿಂದು ತಾಪಂಬೆತ್ತಂ ಮೈಸೋಂಕಿ ಮಂದಾನಿಳನುರಿದಂ (ಜಗವಿ. ೦೦-೪೦). [ ಚಿತ್ತ + ಪುಗು (<ಪೊಗು) ]

**ಚಿತ್ತಂಬೆಱು** (ಕ್ರಿ). ಮನಸ್ಸನ್ನು ಆಕರ್ಷಿಸು: ಬಸನಂ ಕೈಗಣ್ಕೆ ತಪ್ಪೊಲ್ದರನೆ ಪಿಡಿದು ಬಲ್ಲಂದದಿಂ ನಲ್ಮೆಯಂ ಪತ್ತಿಸಿ ಚಿತ್ತಂದೆತ್ತು ಮೆಚ್ಚಂ ಸಲಿಸಿ (ಸಮಪ. ೫-೫೦). [ ಚಿತ್ತ + ಪೆಱು$_1$ ]

**ಚಿತ್ತಕ್ಲೇಶ** (ನಾ). ಮನಸ್ಸಿನ ಆತಂಕ ; ಮನೋವೇದನೆ : ಲೇಸು ಮಾಡಿದಿರೆನ್ನ ಚಿತ್ತಕ್ಲೇಶ ಬೀತುದು ನಾನು ಬದುಕಿದೆ (ಕೌಶಿರಾ. ೪೩-೨೯).
[ ಚಿತ್ತ + ಕ್ಲೇಶ ]

**ಚಿತ್ತಕ್ಷೋಭ** (ನಾ). ಮನಸ್ಸಿನ ಗೊಂದಲ ; ಮನಸ್ಸು ಕಲಕಿ ಹೋಗುವಿಕೆ ; ಅಶಾಂತಿ : ಮುನಿಪಂ ಮೂದಲಿಸಿಯುಮಿನ್ನೆನಿತುಂ ಪೊಕ್ಕಿರ್ಪೆನೆಂದು ಚಿತ್ತಕ್ಷೋಭಂ ತನಗಾಗೆ (ಗದಾಯು. ೭-೨೬). [ ಚಿತ್ತ+ಕ್ಷೋಭ ]

**ಚಿತ್ತಕ್ಷೋಭೆ** (ನಾ). = ಚಿತ್ತಕ್ಷೋಭ : ನಾನಾವಿಧವಾದ ಚಿತ್ತಕ್ಷೋಭೆಗೆ ಮೂಲವಾದ ರಾಜಕೀಯಕ್ಷೇತ್ರದಲ್ಲೂ ಇದೇ ಪ್ರಶಾಂತಿಯನ್ನು ಪ್ರಕಾಶಪಡಿಸಿದ ರಾಮ, ಧರ್ಮರಾಜ . . . ಕಾರಣಪುರುಷರು (ಜುಕ್ಯಾರ. ೦೨೪ ಟೀಕೆ). [ ಚಿತ್ತ + ಕ್ಷೋಭೆ ]

**ಚಿತ್ತಗ** (ನಾ). ಚಿರತೆ : ಇದೆ ಬಗ್ಗನನಿಕ್ಕು ! ಮೋಣಿದ ಚಿತ್ತಗನಂ ತುಡು! (ರಾಮಾಶ್ವ. ೮೪-೧೩). [ <ಸಂ. ಚಿತ್ರಕ ]

**ಚಿತ್ತಗೊಡು** 'ಚಿತ್ತಂಗುಡು' ನೋ.

**ಚಿತ್ತಗ್ಲಾನಿ** (ನಾ). ಮನಸ್ಸಿನ ನೋವು ; ಅಸಂತೋಷ ; ಖಿನ್ನತೆ : ನದೀಸುತನೇನನೆಂದನು ತನ್ನ ಚಿತ್ತಗ್ಲಾನಿಯನು ಬಿಸುಟೇನ ನುಡಿದನು (ಕುಮಾವ್ಯ. ೦-೩೩) : ಅವರಿಗೆ ತಮ್ಮ ಕುಟಿಲತೆಯ ನೆನಪಾಗಿ ಚಿತ್ತಗ್ಲಾನಿ ಉಂಟಾಗುತ್ತಿತ್ತು (ಪ್ರೇಮಾಶ್ರ. ೪೯). [ ಚಿತ್ತ + ಗ್ಲಾನಿ ]

**ಚಿತ್ತಚಾಂಚಲ್ಯ** (ನಾ). ಮನಸ್ಸಿನ ಅಸ್ಥಿರತೆ : ಪುಂಸವನಸೀಮಂತಮಂ ತಾಂ ಚಾರುಲೋಚನಗೆ ವಿಸ್ತರಿಸಿದಂ ಚಿತ್ತಚಾಂಚಲ್ಯಮಿಲ್ಲದೆ (ಕೃಮಿಶಾ. ೦೮-೩೭) : ಈ ಬಗೆಯ ಸಂತೋಷವೂ ಲಕ್ಷ್ಮಿಯೂ ಆತನಿಗೆ ಇದುವರೆಗಿದ್ದ ಚಿತ್ತಚಾಂಚಲ್ಯವನ್ನು ಹೆಚ್ಚಿಸಿದುದು (ಕವಿಕ. ೪೦). [ ಚಿತ್ತ + ಚಾಂಚಲ್ಯ ]

**ಚಿತ್ತಜ** (ನಾ). ೧. ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ ; ಕಾಮ. ಚಿತ್ತಜಸನ್ನಿಭಂ ದ್ವಿಜವರಂ (ದಶಳು. ೦೦-೦೦೪). ೨. [ಜೈನ] ಬಾಹುಬಲಿಯ ಹೆಸರುಗಳಲ್ಲಿ ಒಂದು : ಚಿತ್ತಜಂ ಚಿತ್ತಭವಂ . . . ಎನೆನೆಗಲ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೮-೫೩) ; [ ಸಂ. ]

**ಚಿತ್ತಜಕೇಳಿ** (ನಾ). ಕಾಮಕೇಳಿ; ಸಂಭೋಗ: ನೆನೆಯದೆ ಪೋದುವಂತವರ್ಗೆ ಚಿತ್ತಜಕೇಳಿಗಳಿಂದೆ ಪೊಟ್ಟುಗಳ್ (ಚಂದ್ರಪು. ೬-೮೫).
[ ಚಿತ್ತಜ + ಕೇಳಿ$_2$ (= ಕೇಲಿ) ]

**ಚಿತ್ತಜನ್ಮ** (ನಾ). = ಚಿತ್ತಜ ೧ : ಕೋಡಿದೆ ವಾಸುಪೂಜ್ಯಮುನಿಯೊಳ್ ಮರುಳಾದಪೆ ಚಿತ್ತಜನ್ಮ ನೀಂ ನೋಡ ನಿಜಾಪ್ತವರ್ಗದಳಿಪಂ (ಜಂಗಾಮಾ. ೦-೨೩). [ ಚಿತ್ತ + ಜನ್ಮ ]

**ಚಿತ್ತಜಾಂತಕ** (ನಾ). ಮನ್ಮಥನನ್ನು ಸಂಹರಿಸಿದವನು ; ಶಿವ ; ಈಶ್ವರ : ನಿತ್ಯನಹ ಚಿತ್ತಜಾಂತಕರೂಪ ಚರಲಿಂಗ ಹಸ್ತದೊಳು ನಿರವಯಲ ನಿಜಸಮಾಧಿ (ಪ್ರಾಠಶಾ. ೨-೨೧). [ ಚಿತ್ತಜ + ಅಂತಕ ]

**ಚಿತ್ತಜಾತ** (ನಾ). = ಚಿತ್ತಜ ೧ : ಚಿತ್ತಜಾತನ ಕಾತ ಕಾತರವಿಲ್ಲದೈತಂದ (ಕೌಶಿರಾ. ೨-೪೪). [ ಚಿತ್ತ + ಜಾತ ]

**ಚಿತ್ತಜಾರಿ** (ನಾ). ಮನ್ಮಥನ ಶತ್ರು; ಶಿವ; ಈಶ್ವರ : ಚಿತ್ತಜಾರಿಯಖಂಡದೀಪವನೆತ್ತುವಂ (ಬಸಪು. ೯-೩೬) ; ಚಿತ್ತಜಾರಿಯ ಗಿರಿಯ ಬಲುಹಿಂ ಕಿತ್ತ ಗರ್ವವನಿಲ್ಲಿ ಮಾಡದೆ ಇತ್ತು ಕಾಂಬುದು ಲೇಸು ಸೀತೆಯನು (ಕೌಶಿರಾ. ೩೮-೦೭). [ ಚಿತ್ತಜ + ಅರಿ$_6$ ]

**ಚಿತ್ತಜ್ಞಾನ** (ನಾ). ಮನಸ್ಸಿನಲ್ಲಿರುವ ನಿಜದ ಅರಿವು ; ಆತ್ಮಜ್ಞಾನ : ಅನುಭಾವ ಭಕ್ತಿಸಂಬಂಧವಾಗಿಹುದು ಪ್ರಾಣಲಿಂಗಿಸ್ಥಲವೆಂಬುದೀಗ ಚಿತ್ತಜ್ಞಾನವೆಂಬ ಶಬ್ದಕ್ಕರ್ಥ (ಅಶೌಸೂ. ೭೪-೫೧ ಟೀಕು). [ಚಿತ್ತ+ಜ್ಞಾನ]

**ಚಿತ್ತಣಿಸು** 'ಚಿತ್ತೈಸು' ನೋ.

**ಚಿತ್ತನಾಥ** (ನಾ). ಮನಸ್ಸಿನ ಒಡೆಯಂ ; ನಲ್ಲ : ಚಿತ್ತನಾಥನೊಳ್ ಬೆರಸುವೆನೆನ್ನದಾಂ ಬೆರಪೆನೆಂಬುದಿದಾಗದು (ಕವಿರಾ. ೨-೦೦೫). [ ಚಿತ್ತ + ನಾಥ ]

**ಚಿತ್ತನಿರೋಧ** (ನಾ). ಮನಸ್ಸಿನ ಹತೋಟಿ,-ನಿಗ್ರಹ : ಮನಮೊಸ ದೆರಡಿಲ್ಲದೆ ಚಿತ್ತನಿರೋಧಂಗೆಯ್ದು (ಜಿನಾಕ. ೨೬-೨೬) ; ಚಿತ್ತನಿರೋಧಂ ತಪಂ (ಸಮಹ. ೬-೧೮). [ ಚಿತ್ತ + ನಿರೋಧ ]

**ಚಿತ್ತಪಲ್ಲಟ** (ನಾ). ಮನಸ್ಸು ಬದಲಾಗುವಿಕೆ : ಅದಂ ಬಿಟ್ಟಕಣ್ಣಿಂ ಸಾವಧಾನವಾಗಿ ಕೇಳ್ದುದರ್ಕೆ ಚಿತ್ತಪಲ್ಲಟವಾಗಿ (ಪಂಚತಂ. ೩೦೩-೬). [ ಚಿತ್ತ + ಪಲ್ಲಟ ]

**ಚಿತ್ತಪ್ಪಕೆಱೆ** (ನಾ). ಒಂದಂ ಕೆರೆಯ ಹೆಸರು : ಮಂಜುಗಱೆಯಾರ್ ಚಿತ್ತಪ್ಪಕೆಱೆಯಂ ಕಟ್ಟಿಸಿ ನಾಲ್ಕಳಿವೆಯ ಭಾಗಂ ಬಿತ್ತುವಾಟಂ ಕೆಱೆಗೆ ಕುಡುವುದು (ಎಕ. XI, ಹಿರಿಯೂ. ೩೩-೩ ; ಸು. 890). [ ಚಿತ್ತಪ್ಪಂ + ಕೆಱೆ ]

**ಚಿತ್ತಪ್ರಿಯ** (ನಾ). ಮನಸ್ಸಿಗೆ ಪ್ರಿಯನಾದವನು ; ಮನೋವಲ್ಲಭ : ಚಿತ್ರಾಸನೆ ತಚ್ಚಿತ್ತಪ್ರಿಯಂಗೇಂ ಮೆಱೆದಳೊ ಸುರತಕ್ರೀಡೆಯಂ ಪ್ರೌಢಿಯಿಂದಂ (ಕಾವ್ಯಸಾ. ೬೩೯). [ ಚಿತ್ತ + ಪ್ರಿಯ ]

**ಚಿತ್ತಭವ** (ನಾ). ೧. = ಚಿತ್ತಜ ೧ : ಕಾಮಿನೀಜನಕೇಳೀವಿಭವಕ್ಕೆ ಚಿತ್ತಭವ ನಿರ್ಪ್ಪನ್ನಿರ್ಪ್ಪವಂ (ಸೌಇ. XX, ೬೯-೨೬ ; 1112). ೨. = ಚಿತ್ತಜ ೨ : ಚಿತ್ತಭವಂ . . . ಅಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್ (ಆದಿಪು. ೮-೫೩). [ ಚಿತ್ತ + ಭವ ]

**ಚಿತ್ತಭ್ರಮಣೆ** (ನಾ). = ಚಿತ್ತಭ್ರಮೆ : ಇದೇನು ಚಿತ್ತಭ್ರಮಣೆಯೋ ಯಿಲ್ಲವೆ ನನಗೆ ಸ್ವಪ್ನಾವಸ್ಥೆಯೋ (ಅಳಸಮಾ. ೦೨೯) ; ಶಾಂತಲಾದೇವಿಯ ಕಳೇಬರವನ್ನು ತೆಗೆದುಕೊಂಡು ಹೋಗಿರುವ ಪ್ರಭುಗಳಿಗೆ ಚಿತ್ತಭ್ರಮಣೆ ಯಾಗಿರಬಹುದು (ಶಾಂತಲಾ. ೩೯೮). [ ಚಿತ್ತ + ಭ್ರಮಣೆ ]

**ಚಿತ್ತಭ್ರಮೆ** (ನಾ). ಮನಸ್ಸಿನ ಭ್ರಾಂತಿ ; ತಲೆಕೆಡುವುದು ; ಹುಚ್ಚು : ಪಿತ್ತೋದ್ರೇಕಂ ಪುಗುಟುಂ ಚಿತ್ತಭ್ರಮೆಯಂಬವಕ್ಕುಮಂಗಮ[ದುಂ] ತಾನೆತ್ತಂ ಹಳದಿಯ ವರ್ಣಂಬೆತ್ತಿರ್ಪುದು ಪೈತ್ತಮೆನಿಪ ಬಾಧ್ಯದ ಭೇದಂ (ಖಮುದ. ೦೫-೫); ಪಿತ್ತಭ್ರಮೆಯಿದ್ದವಗೆ ಚಿತ್ತಭ್ರಮೆಯಾಗದೇ ? (ಗಾದೆ). [ ಚಿತ್ತ + ಭ್ರಮೆ ]

**ಚಿತ್ತಭ್ರಾಂತಿ** (ನಾ). = ಚಿತ್ತಭ್ರಮೆ: ಚಿತ್ತಭ್ರಾಂತಿಕ್ರಾಂತಂ ಪೊತ್ತುದುಮಂ ತಡವಿ ನೋಡುತುಂ (ಪಂಚತಂ. ೧೯೬-೦೨). [ ಚಿತ್ತ + ಭ್ರಾಂತಿ ]

**ಚಿತ್ತಮುರಕ** (ನಾ). ಒಂದಂ ಬಗೆಯ ಬಳ್ಳಿ (?) : ಚಿತ್ತಮುರಕನ ಬಳ್ಳಿ ಎತ್ತ ಹಬ್ಬಿದರೇನ ಚಿತ್ತ ಬ್ಯಾರವಳ ಬಗೆ ಬ್ಯಾರೆ (ಗರತಿ. ೦೫೨). [ ? ]

**ಚಿತ್ತಮೋಹನ** (ನಾ). ಮನಸ್ಸಿಗೆ ಉಂಟಾಗುವ ಭ್ರಾಂತಿ, - ಭ್ರಮೆ : ಚಿತ್ತಮೋಹನಂ ಭ್ರಮಮುಮಕ್ಕುಂ (ಕಾವ್ಯಾವ. ೬೦೮). [ ಚಿತ್ತ + ಮೋಹನ ]

**ಚಿತ್ತಯಿಸು, ಚಿತ್ತಯ್ಸು, ಚಿತ್ತವಿಸಂ, ಚಿತ್ತೈಸಂ** (ಕ್ರಿ). ೧. ಮನಸ್ಸಿಗೆ ತಂದುಕೊಳ್ಳು ; ಲಕ್ಷಿಸು ; ಗಮನಿಸು : ಪಟ್ಟಬದ್ಧನ ಚಿತ್ತಯಿಸು (ಬಸವಪು. ೫೫-೩) ; ದೇವರು ಚಿತ್ತಯಿಸುವುದು ಹೊತ್ತುಗಳೆಯದೆ ಎನ್ನ ಕಳುಹಿ (ಕುಮಾರ್ದ್ರೂ. ೪-೯೫) ; ಉತ್ತರೋತ್ತರ ಜೀಯ ಶಕುನ ಮುಂತಾದುವ ಚಿತ್ತಯಿಸುವುದು (ಮೋಹತ. ೬-೧೨). ೨. ಮನಸ್ಸನ್ನು ಸೆಳೆ ; ಆಕರ್ಷಿಸಂ : ಇತ್ತಜದೊಳು ನಿಂದಿಹ ಜೀವರನ್ನದ ಪುತ್ತಳಿಗಳು ಸೊಡರ್ವಿಡಿದು ಮುತ್ತಡಿ[ಡ]ಸಿದ ಮಹದುಪಕರಣಗಳಿಂದೆ ಚಿತ್ತಯಿಸಿದುವಲ್ಲಲ್ಲಿ (ಮೋಹತ. ೨೨-೯). ೩. (ಅಲಂ) ದಯಮಾಡಂ ; ಆಗಮಿಸು ಅಥವಾ ಹೋಗಂ : ಆದರೂ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಅವರು ಇಲ್ಲಿವರೆಗೆ ಚಿತ್ತಯಿಸಿದರು (ವೀರಲಿಂ. ೯೩) ; ಕಾರ್ಯಕ್ರಮಕ್ಕೆ ಸ್ವಾಮಿಗಳು ಚಿತ್ತಯಿಸಿದರು (ರೂಢಿ). **ಚಿತ್ತಯ್ಸು** : ೧. ತೃತೀಯಜನ್ಮದ ವೃತ್ತಕ ಮೊಂದುಂಟು ನಿನಗದಂ ಪೇಟ್ವೆನಾಂ ಚಿತ್ತಯ್ಸು [ಪಾಠಾಂ. ಚಿತ್ತೈಸಿ] ಕೇಳ್ (ಚಂದ್ರಪ್ರ. ೫-೮೬) ; ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾಯಸಮಂ ಚಿತ್ತಯ್ಸು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪು ದೆನ್ನಂ (ರಕ್ಷಶ. ೩) ; ಜೀಯ ಚಿತ್ತಯ್ಸು [ಪಾಠಾಂ. ಚಿತ್ತೈಸಾ]ದೊಡಿನ್ನವಿಳ ಸಾಮ್ರಾಜ್ಯಮಾಯಿತೆಂಬುತ್ಸವಂ ತನಗಿಲ್ಲ (ಜೈಮಿಭಾ. ೨-೨೦) **ಚಿತ್ತವಿಸು** : ೧. ಇದೆ ಚತುರಂಗಬಲಂ ಬಂದುದು ಮನ್ನಥಭೂಪ ನೋಡು ಚಿತ್ತವಿಸು (ಗಿರಿಕ. ೭-೪೩) ; ಭೂತಳಾಧಿಪ ಚಿತ್ತವಿಸು ಖಳ ಕೌತುಕದ ಕಾಳಗದಿ ಗೆಲುವನು (ಕೌಶಿಕ. ೩೬-೨೦) ; ಉಸುರಲಮ್ಮೆನು ಜೀಯ ಸುರರಾಯಸವ ಚಿತ್ತವಿಸು [ಪಾಠಾ. ಚಿತ್ತೈಸು] (ತೊರರಾ. ೧-೮-೫೯) ; ಚಿತ್ತವಿಸಿ ಮುನಿನಾಥಯೆನಗದ ಬಿತ್ತರಿಸಿ ಪೇಳು (ನಳಚ. ೩-೧೧) ; ಸಂಕಲ್ಪ ವಿದೆಂದು ಸೂಚಿಸಿದರೆ ಸ್ತ್ರೀಸ್ವಭಾವ ಚಾಪಲ್ಯವೆಂದು ಚಿತ್ತವಿಸನೊ(ಸೌಗಂಧಿ. ೨೫೯-೧೯). **ಚಿತ್ತೈಸು** : ೧. ನಿಮ್ಮಡಿ ಚಿತ್ತೈಸಿ ಕೇಳಿವಿನಾತಂ ಸಂಸಾರ [ ಭೀರುವಾಗಿ ಜಿನದೀಕ್ಷೆಯಂ ಬಯಸಿ ]ಬಂದಂ (ಧರ್ಮಾಮೃ. ೭-೦೨೭) ; ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಬಿರ. ೧-೭೬) ; ಧುರದ ವೃತ್ತಾಂತವನು ಚಿತ್ತೈಸರಸ ತಿಳುಹುವೆನು (ಕುಮಾರ್ಭೀ. ೦-೫೬) ; ವಾರ ನಾರಿಯರ ಚಿತ್ತೈಸು ಸತ್ಕುಮಾರಕಂಠೀರವರುಗಳ ಚಿತ್ತವಿಸು (ಮೋಹತ. ೨೦-೫೫) ; ಭೂಭೃನ್ನಾಥ ಚಿತ್ತೈಸೊಳಗೀಕ್ಷಿಸೆ ಶ್ರೀಭೃತನಾತ್ಮ ತೋಱುವನು (ಧರಚ. ೨-೭೩) ; ಚಿತ್ತೈಸು ಮದನಮೋಹಿನಿ . . . ಈ ಪಟ್ಟಣದೊಳ ಗೊರ್ವನುತ್ತಮನಾಯಕನಿಹನು (ಕಂಸವಿ. ೯-೪೫). ೩. ನಿನ್ನ ಬರವನು ನೆನೆದೆನ್ನನು ನಿನ್ನ ಬಳಿಗೆ ಕಳುಹಿದಳು ಜನಪ ಚಿತ್ತೈಸುವವನಕೆ (ಜೀವಂಸಾಂ. ೦೮-೦೦) ; ಜನನಾಥ ನೋಡ ಚಿತ್ತೈಸಬೇಕೆಂದು ತದ್ವನಪಾಲ ಬಿನ್ನಯಿಸಿದನು (ಮೋಹತ. ೪-೫೦) ; ಸಭಾಮಂಟಪಕ್ಕೆ ಚಿತ್ತೈಸಬೇಕು (ಸೌಗಂಧಿ.೦೯೭-೩); ನೀವು ಇಲ್ಲಿಂದ ಚಿತ್ತೈಸಿದ ಬಳಿಕ ಇಲ್ಲಿ ನಡೆದ ಅನರ್ಥವಂ ಹೇಳುವದಕ್ಕೆ ಶಕ್ಯವಲ್ಲ (ಮುದ್ರಾಮಂ. ೦೫). ೪. ಅನುಗ್ರಹಿಸು ; ದಯಪಾಲಿಸಂ ; ಕೊಡಂ : ಆದಡೆಲೆ ರಾಜೇಂದ್ರ ನಿಮ್ಮಯ ಪಾದುಕೆಯ ಚಿತ್ತೈಸಿ ದೇವರ ಪಾದವೆಂದೇ ಕಂಡು ಸೇವೆಯ ಮಾಡಿಕೊಂಡಿಹೆನು (ತೊರರಾ. ೨-೭-೩೩). ೫. ಕೇಳಿಕೊಳ್ಳು ; ಬೇಡಿಕೊಳ್ಳು ; ಗಮನಕ್ಕೆ ತರಂ : ಕಾಪಿನ ಹಲರ ಸಹಾಯದಿಂದ ಧರ್ಮಕ್ಕೆ ಪೊಂದು ಕ್ಷೇತ್ರವನು ಕೊಡಬೇಕು ಯೆಂದು ಚಿತ್ತೈಸಲಾಗಿ (ಎಕ. XX, ೮-೩೫ ; 1556). [ ಚಿತ್ತ + - ಇಸು ]

**ಚಿತ್ತಯ್ಸು** 'ಚಿತ್ತಯಿಸು' ನೋ.

**ಚಿತ್ತರ, ಚಿತ್ತಾರ** (ನಾ). ೧. ವಸ್ತ್ರ, ಗೋಡೆ, ಕಾಗದ ಮುಂತಾದುವು ಗಳ ಮೇಲೆ ಬರೆದ ಪ್ರತಿಕೃತಿ,-ಆಕೃತಿ ; ಚಿತ್ರ : ಕಡುಚೆಲುವಿನ ಚಿತ್ತರ ಸಲೆ ಸುಭಗತೆಯ ಪುತ್ಥಳಿ (ಶ್ರೀಪಾಲ. ೨-೭); ಪಗಲೊಳೆಸೆವ ಸುದೀಪ ಕಾಂತಿಯೊ ಹೊಗೆ ಬಡಿದ ಚಿತ್ತರದ ಬೊಂಬೆಯೊ [ಪಾಠಾಂ. ಹೊಗೆ ಯೊಳೆಸಗಿದ ಚಿತ್ರಪ್ರತಿಮೆಯೊ] ಹೇಳಲೇನವಳ (ನಳಚ. ೭-೨೪): ಚಿತ್ತರದ ಬೊಂಬೆಗಳಂತೆ ನಿಂತಿರುವ ರಾಕ್ಷಸರ ಗುಂಪು (ಸೌಗಂಧಿ.೩೩೮-೧೯); ಅನುಜರಿಂ ಕೂಡಿ ತಂದೆ ಚಿತ್ತರವೊಂದೆ ಕಾಣುವ ಮಂದಿರಕ್ಕೈತಂದು (ರಘುವಂ. ೦೫೩-೦೫) ; ನಕ್ಷತ್ರಾರತಿಯಂದದಿ ಹೂಗಳ ಗೊಂಚಲನಿತ್ತಿರುವ ಮಾವಿನ ಮರವಿದು ಮರವೋ, ನಭದಲಿ ಬರೆದರೊ ಚಿತ್ತರವ? (ರಾಮನ. ೦೪-೨೦): ನಿತ್ಯದಲಿ ಕೀತಯ್ಯ . . . ಚಿತ್ತರದ ಬುಟ್ಟಿ ಮೊರ ಹೆಣೆದು ಮಾರುವವನು (ಕನ್ನಜಾ. ೨೬೩). ೨. ಸುಂದರವಾದುದು ; ಸೊಗಸಾದುದಂ : ಹೆತ್ತಾಯಿ ನಿನ ಕರುಳ, ಮತ್ತಿಲ್ಲಿ ದೊರೆತಾವ ಚಿತ್ತರ ಬಗೆಯ ಮಕ್ಕಳಿಗೆ (ಕನ್ನಜಾ. ೧೦೫); ಏನು ಎತ್ತರ ಏನು ಬಿತ್ತರ ಏನು ಚಿತ್ತರವೀ ಪುರ

(ಕರುಣಾ. ೨೬-೧) ೩. ಆಶ್ಚರ್ಯ : ಬಾಹುಬಲಿಪಂಡಿತದೇವರ ವಚನ ವಿಳಾಸಂ ಚಿತ್ರ[ಪಾಠಾಂ. ತ್ರಿ]ರಮಂ ಸುರಸಾರ್ಥಲೀಲೆಯಂ ಪೆರ್ಚಿಸುಗುಂ (ಶಾಧಮ. ೧-೩೧) ; ಬಿತ್ತುವರ್ ಕಿವಿಯಲ್ಲಿ ಬೆಳಸುವರದೆಯೊಳು ಚಿ[ಪಾಠಾಂ. ಬಿ]ತ್ತರವೇನೊ ಪಿಸುಣವಿದ್ಯ (ಕವಿಚ. II, ೪೫ ; ಸೂಬಸೋ. ೦೩-೫೪ ಸೂ).

**ಚಿತ್ತಾರ**$_1$ : ೧. ಭಿತ್ತಿ ಇಲ್ಲದೆ ಬರೆಯಬಹುದೆ ಚಿತ್ತಾರವ (ಬಸವ. ೩೯೮) ; ಚಿತ್ತಾರದೋಳ್ಪರದ ಪ್ರತಿಮೆಯಂತಿಹುದ ನೋಡು (ಕುರಂಗ. ೭೮-೦೦) ; ಬಾಸ್ಸಟದಿ ಮಸಿಯ ಚಿತ್ತಾರಮಂ ಕಂಡರಿಸಿದರ್(ಶ್ರೀರಾಮಾ. ೨೮೯-೦೦೪). [ <ಸಂ. ಚಿತ್ರ ]

**ಚಿತ್ತರಗಂಬ** (ನಾ). ಚಿತ್ರಗಳನ್ನುಳ್ಳ ಕಂಬ ; ಕಂಡರಣೆಯ ಕಂಬ : ಪೊನ್ನ ಪುತ್ತಳಿಯಂತೆ ಚಿತ್ತರಗಂಬವಮಂ ನೆವ್ಸಿ (ಚಿಳವಿ. ೪-೪೦). [ ಚಿತ್ತರ + ಕಂಬ$_1$ (<ಕಂಭ) ]

**ಚಿತ್ತರಗೈ** (ಕ್ರಿ). ಚಿತ್ರವನ್ನು ಬರೆ ; ಚಿತ್ರಿಸು : ನರ್ತನ ಕೋಲಾಟ ಹೊನ್ನಂಡೆಗಳನಾಂತು ಪುತ್ತಳಿ ಮದನಕ್ಕೆಯಡೆಯ ಚಿತ್ತರಗೈದಿರ್ದ ಬಿನ್ನಾಣಗಳ ನೋಡಿ ಚಿತ್ತೈಸಿದನು ಕೃಷ್ಣ (ಮೋಹತ. ೦೪-೩೦). [ ಚಿತ್ತರ + ಗೈ (<ಕೆಯ್$_1$) ]

**ಚಿತ್ತರಟೆ, ಚಿತ್ತರಟ್ಟೆ** (ನಾ). ಒಂದು ಬಗೆಯ ಗಿಡ : "ರುಚಿ ಚಿತ್ತರಟಿ [ಪಾಠಾಂ. ತೆ] ಸಿಂಹಿಕಾಖ್ಯಂ" (ಮಂಗರಾ. ೩೯-೨೮). **ಚಿತ್ತರಟ್ಟೆ** : ಬೆದಕ ದಿರು ಬೆದಕದಿರು ಬೆದಕಿದಡೆ ಹುರುಳಿಲ್ಲ ಚಿತ್ತರಟ್ಟೆಯಂ ಕಾಯಲ್ಲಿ ಮತ್ತೇನ ನಿಜಸಂವಿರಯ್ಯಾ (ಬಸವ. ೨೮). [ ? ]

**ಚಿತ್ತರಟೆಹಳ್ಳಿ** (ನಾ). ಒಂದು ಸ್ಥಳದ ಹೆಸರು : ಪೆರ್ಗಡೆ ನಾಕಿಯ ಚಟ್ಟಯ್ಯಂ ಚಿತ್ತರಟೆಹಳ್ಳಿ ಓಟೂರ್ಗ್ಗೆ ಮಾಲಿಗನ್ (ಎಕ. VIII, ಸೊರಬ. ೭೦-೧೧ ; ೮೩೪). [ ಚಿತ್ತರಟೆ$_3$ + ಹಳ್ಳಿ (<ಪಳ್ಳಿ$_1$) ]

**ಚಿತ್ತರಟ್ಟೆ** 'ಚಿತ್ತರಟೆ' ನೋ.

**ಚಿತ್ತರಿಗ** (ನಾ). ಚಿತ್ರವನ್ನು ಬರೆಯುವವನು ; ಚಿತ್ರಗಾರ : ತತ್ಕರ್ತೃ ಸಂಬಂಧದೊಳ್ ಚಿತ್ರಿಗನಲ್ಲದನಂ ಚಿತ್ರಮಂ ಬರೆವುದಜಿಂ ಚಿತ್ತರಿಗ ನೆಂಬುದು(ಶಶಿ. ೧೦೩ ಪರಿ.). [ ಚಿತ್ತರ + - ಇಗ ]

**ಚಿತ್ತವಂತ** (ನಾ). ಗಮನವಿಟ್ಟು ನೋಡುವವನಂ ; ಲಕ್ಷಿಸುವವನು ; ಗೂಢಚಾರ : "ಚಿತ್ತವಂತಂ ಪ್ರಣಿಧಿಯಕ್ಕು" (ಮಂಗರಾ. ೭೯-೭). [ ಚಿತ್ತ + -ವಂತ ]

**ಚಿತ್ತವಿಕೃತಿ** (ನಾ). ಮನೋವಿಕಾರ ; ಭ್ರಮೆ ; ಹುಚ್ಚು : ಚಿತ್ತವಿಕೃತಿ ಅಪರಾಧ ಅಥವಾ ದುರ್ವರ್ತನೆ (ಭಾರಾಜ. ೧೯೨). [ ಚಿತ್ತ + ವಿಕೃತಿ ]

**ಚಿತ್ತವಿಕ್ಷೇಪ** (ನಾ). ಮನಸ್ಸನ್ನು ಚದರಿಸುವಿಕೆ ; ಗಲಿಬಿಲಿ : ದೃಷ್ಟಿ ಎಂಬುದು ನಮ್ಮ ಕೆಲಸಕ್ಕೆ ಸಹಾಯಮಾಡುವದಕ್ಕಿಂತ ಹೆಚ್ಚಾಗಿ ಅದು ಎಷ್ಟೋ ಪಟ್ಟು ಚಿತ್ತವಿಕ್ಷೇಪವನ್ನೇ ಉಂಟುಮಾಡುತ್ತದೆ (ಅಪ್ಪಳ. ೨೦೬). [ ಚಿತ್ತ + ವಿಕ್ಷೇಪ ]

**ಚಿತ್ತವಿಡು** (ಕ್ರಿ). ೧. ಮನಸ್ಸಿಡಂ ; ಗಮನವಿಡು: ಗುರುಗಳ ಮಾತನ್ನು ಚಿತ್ತವಿಟ್ಟು ಕೇಳು (ರೂಢಿ). ೨. ಪ್ರೀತಿಸಂ : ಅತ್ತಲಾ ದಮಯಂತಿ ನಳನಲಿ ಚಿತ್ತವಿಟ್ಟಳು (ನಳಚ. ೨-೪೯). [ ಚಿತ್ತ + ಇಡು$_1$ ]

**ಚಿತ್ತವಿಭ್ರಮ** (ನಾ). ೧. = ಚಿತ್ತಭ್ರಮೆ : ನನ್ನ ಚಿತ್ತವಿಭ್ರಮ ಭಾವೋದ್ರೇಕಕ್ಕೆ ಏರಿತು (ಶಾಂತಲಾ. ೩, ೫೦೪). ೨. ಒಂದು ಬಗೆಯ ಸನ್ನಿಪಾತ ರೋಗ : ಮತ್ತಮಾ ತ್ರಯೋದಶ ಸನ್ನಿಪಾತಮಾವುದೆಂದೊಡೆ :-ಸಂಧಿಗ . . . ಚಿತ್ತವಿಭ್ರಮ (ಸಕವೈ. ೧೫೧). [ ಚಿತ್ತ + ವಿಭ್ರಮ ]

**ಚಿತ್ತವಿಮೋಹನ** (ನಾ). ಮನಸ್ಸನ್ನು ಮರುಳುಗೊಳಿಸುವಿಕೆ : ಸಮುಲ್ಲಸಜ್ಜ್ವಪತಾಕೆಯನಿಪ್ಪಪೊಲಾಂತಳಾಕೆಯಾ ಪ ಸ ದ ನ ದೊ ಳ್ ಜಗತ್ತಿತ್ರಯ ಚಿತ್ತವಿಮೋಹನ ಶಕ್ತಿಯೇಟ್ಗಿಯಂ (ಚಂದ್ರಪ್ರ. ೩-೬೩). [ ಚಿತ್ತ + ವಿಮೋಹನ ]

**ಚಿತ್ತವಿಶುದ್ಧಿ** (ನಾ). ಮನಸ್ಸಿನ ಪರಿಶುದ್ಧತೆ : ಮೋಕ್ಷಲಕ್ಷ್ಮಿಯಂ ಸಾಧಿಸ ಲಟ್ಟಿಯುಂ ಬಗೆಯುಮುಳ್ಳೊಡೆ ಚಿತ್ತವಿಶುದ್ಧಿಯಿಂದಮಾರಾಧಿಸು ಭವ್ಯ (ಶಾಪುಂಪು. ೩-೧೯). [ ಚಿತ್ತ + ವಿಶುದ್ಧಿ ]

**ಚಿತ್ತವಿಸು** 'ಚಿತ್ತಯಿಸು' ನೋ.

**ಚಿತ್ತವಿಹ್ವಲ** (ನಾ). ಮನಸ್ಸಿನಲ್ಲಿ ಭ್ರಮೆಯನ್ನು ಹೊಂದಿದವನಂ ; ಕಳವಳಗೊಂಡವನು : ಕಂಗಳಿನ ಮಿಂಚಿನ ಹಿಳುಕಿನೆಡೆ ನಡೆಗೆಟ್ಟು ನಿಂದರು ಚಿತ್ತವಿಹ್ವಲರು (ಕುಮಾವ್ಯಾ. ೧-೨೫). [ ಚಿತ್ತ + ವಿಹ್ವಲ ]

**ಚಿತ್ತವೃತ್ತಿ** (ನಾ). ೧. ಮನಸ್ಸಿನ ವ್ಯಾಪಾರ ; ಯೋಚನೆ ; ಭಾವನೆ ; ಮನೋಧರ್ಮ : ಭಟ್ಟಾರಕನ ಚಿತ್ತವೃತ್ತಿಯನಾ ಮಹಾತ್ಮನಾವ ಮಾಟ್ಕೆಯೊಳಜಿದು (ಆದಿಪು. ೧೦-೭ ಪ) ; ಮೆಲ್ಲಗೆ ಮಚಿದೊಂದಿದಂತು ಸಿರದಾಗಿರೆ ಕೂಟದ ಚಿತ್ತವೃತ್ತಿಯಂ ಬಗೆಯಂ (ಶಾಂತಿಪು. ೮-೯೨) ; ಪೋಗ ಲಿರ್ಪ ಶ್ರಿಜನಂದು ಕನ್ನಡಿಸಿದಂ ಸುವಿಧೀಶನ ಚಿತ್ತವೃತ್ತಿಯಂ (ಪುಷ್ಪಪು ೧೩-೫೯) ; ಚಿತ್ತವೃತ್ತಿಯುನಜಿದು ಹತ್ತೆವಿಡಿದೋಲಯಿಸು (ಸರ್ವಜ್ಞ. ೭೩೧). ೨. ಏಕಾಗ್ರತೆ ; ಮನಸ್ಸನ್ನು ಕೇಂದ್ರೀಕರಿಸುವುದು : ನೃತ್ಯ ಗೀತಂಗಳಿಂದತಿಶೋಭನಮಾಗೆ ಚಿತ್ತವೃತ್ತಿಯಂ ಶಿವನಂ ಭಜಿಸಿ (ಹರಿಶ್ಚ. ೨-೩೩ವ). [ ಚಿತ್ತ + ವೃತ್ತಿ$_2$ ]

**ಚಿತ್ತವೇದ್ಯ** (ನಾ). ಮನಸ್ಸಿಗೆ ತಿಳಿಯುವುದು ; ಮನಸ್ಸಿಗೆ ಗೊತ್ತಾಗುವುದು : ಚಿತ್ತವೇದ್ಯವಾಗದು ಸದ್ಗುರುವಿನ ಕರಣಕ್ಕಲ್ಲದೆ (ಬಸವ. ೮೦೬). [ ಚಿತ್ತ + ವೇದ್ಯ ]

**ಚಿತ್ತವೈಕಲ್ಯ** (ನಾ). ಮನಸ್ಸಿನ ಹದ ಕೆಡುವುದು ; ಬುದ್ಧಿವಿಕಲತೆ ; ಹುಚ್ಚು : ಕೋಪಮೆಂಬುದೆ ಸಕಲಸನ್ಮಾರ್ಗದಾರಣಂ ಚಿತ್ತವೈಕಲ್ಯಕರಣಂ (ಮಂಕಾರಾ. ೨-೯-೦೬). [ ಚಿತ್ತ + ವೈಕಲ್ಯ ]

**ಚಿತ್ತಶಯ** (ನಾ). ಮನಸ್ಸಿನಲ್ಲಿರುವವನು ; ಮನ್ಮಥ : ಚಿತ್ತಶಯ ನಾಮಮಂ ಪುರುಷೋತ್ತಮಸುತನಾಳ್ದಂ (ಪುಷ್ಪಪು. ೬-೩೧). [ ಸಂ. ]

**ಚಿತ್ತಶುದ್ಧ** (ನಾ).=ಚಿತ್ತಶುದ್ಧಿ : ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದರತ್ತ ಲಕ್ಷ್ಮಿ ತಾನಾಗಿಪ್ಪಳು (ವಚಸಂ. ೨೯೭-೧೪). [ ಚಿತ್ತ + ಶುದ್ಧ ]

**ಚಿತ್ತಶುದ್ಧಿ** (ನಾ). ಮನಸ್ಸಿನ ನಿರ್ಮಲತೆ : ಚಿತ್ತಶುದ್ಧಿಯನ್ನೈದಿದವರತ್ತತ್ತಲಿರೆ ಭಯವಿಲ್ಲ (ಗಗಜಾ. ೧೪-೪೨) ; ಈ ವೇದಾಂತದ ಆಚರಣೆಗೆ ಚಿತ್ತಶುದ್ಧಿ, ಪ್ರಾಮಾಣಿಕತೆ, ಆತ್ಮವಿಶ್ವಾಸ ಇವು ಆವಶ್ಯಕವಾದ ಗುಣಗಳು (ಶಕ್ತಿ. ೧೦೨). [ ಚಿತ್ತ + ಶುದ್ಧಿ ]

**ಚಿತ್ತಸಂಭವ** (ನಾ).=ಚಿತ್ತಜ ೧. : ಅಗಲುಂ ಸೊಗಯಿಸುಂ ಶೋಭಾವಹಂ ಚಿತ್ತಸಂಭವಲಕ್ಷ್ಮೀನಿಳಯಂ ಸಮಸ್ತಜನಚೇತೋಹಾರಿ ಶಯ್ಯಾಗೃಹಂ (ಪಂಚತಂ. ೧೨೩-೭). [ ಚಿತ್ತ + ಸಂಭವ ]

**ಚಿತ್ತಸಮುನ್ನತಿ** (ನಾ). ೧. ಆತ್ಮಗೌರವ ; ಅಭಿಮಾನ. ೨. ಗರ್ವ; ಅಹಂಕಾರ. [ ಚಿತ್ತ + ಸಮುನ್ನತಿ ]

**ಚಿತ್ತಸ್ಖಲನೆ** (ನಾ).=ಚಿತ್ತಚಾಂಚಲ್ಯ: ತ್ರೈಪುರವನೊಳಪೊಕ್ಕು ವಿಷ್ಣು ದುರ್ಬೋಧಕಂ ಆ ಪತಿವ್ರತೆಯರಂ ಕೋಟಿಕಾಮರ ಗೆಲ್ವ ರೂಪಿನಿಂದೇ ಕಾಂತದಲ್ಲಿ ಚಿತ್ತಸ್ಖಲನೆಗಳ ಮಾಡಿದಂ (ವೀಕ್ಷಪು. ೨-೧೧-೨೪). [ ಚಿತ್ತ + ಸ್ಖಲನೆ ]

**ಚಿತ್ತಸ್ಥೈರ್ಯ** (ನಾ). ಮನಸ್ಸಿನ ಧೈರ್ಯ,-ಬಲ : ಮಕ್ಕಳ ಮುಂದಿನ ಜೀವನದಲ್ಲಿ ಚಿತ್ತಸ್ಥೈರ್ಯ ಇರುವುದಿಲ್ಲ (ಶಿಕ್ಷರ. ೭೪). [ಚಿತ್ತ+ಸ್ಥೈರ್ಯ]

**ಚಿತ್ತಸ್ವಾಸ್ಥ್ಯ** (ನಾ). ಮನಸ್ಸಿನ ಶಾಂತಿ : ನೆಮ್ಮದಿ : ಆ ಪ್ರದೇಶ ಒಡೆಯನಿಗೆ ಚಿತ್ತಸ್ವಾಸ್ಥ್ಯ ತಪ್ಪಿತ್ತು (ಒಡಳ. ೧) : ಕಾವ್ಯನಿರ್ಮಾಣಕ್ಕೆ ಕಾರಣಗಳನ್ನು ಹೇಳುವಾಗ ನಮ್ಮ ಆಲಂಕಾರಿಕರು 'ಚಿತ್ತಸ್ವಾಸ್ಥ್ಯ' ವನ್ನು ಹೇಳುತ್ತಾರೆ (ವಿಮರ್ಶ. ೦೬). [ ಚಿತ್ತ + ಸ್ವಾಸ್ಥ್ಯ

**ಚಿತ್ರಹತ್ಯೆ** (ನಾ). ತನ್ನ ಮನಸ್ಸಿಗೆ ತಾನೇ ವಂಚನೆ ಮಾಡಿಕೊಳ್ಳುವುದು; ಆತ್ಮವಂಚನೆ: ಹತ್ತುಸಾವಿರ ಜನರು ಸುತ್ತಲಿದ್ದೊಡವೇನು ಚಿತ್ರಹತ್ಯೆಕೆ ಯಾರು ತಡೆಯ ಕಟ್ಟುವರಯ್ಯ ? (ಶಾಂಡಿ. ೪೧-೪). [ ಚಿತ್ತ + ಹತ್ಯೆ ]

**ಚಿತ್ರಳಿ** (ನಾ). ಸಣ್ಣಚೂರು ; ಚಿಕ್ಕಚೂರು : ಮತ್ತಮೊಂದಕ್ಕೆ ಮಜ್ಜಿಗೆ ಯಿಱಿದು ಕರಿಬೇವು ಕೊತ್ತುಂಬರಿಯಕ್ಕಿ ನೀರುಳ್ಳಿ ಶುಂಠಿಗಳ ಚಿತ್ರಳಿಯ [ಪಾಠಾಂ.ಸಿ]ಹಾಕಿಯಂತದ ವಗ್ಗರಣೆ ಮಾಡಿ(ಸೂಪಶಾ. ೩-೩೮). 'ಚಿತ್ರಳಿಸು' ಪರಾ. [ ? ]

**ಚಿತ್ರಳಿಸು, ಚಿತ್ರಣಿಸು** (ಕ್ರಿ). ಸಣ್ಣಸಣ್ಣ ಚೂರಾಗಿ ಮಾಡು: ಚಿಕ್ಕದಾಗಿ ಕತ್ತರಿಸು : ಎಳನೀರೊಳಿನಿಸು ಸಕ್ಕರೆಯಿಕ್ಕಿ ನೇಱಿಲೆಳೆದಳರುಮಂ ಕುಡಿಯುಮಂ ಚಿತ್ರಳಿ[ಪಾಠಾಂ. ರಿ]ಸಿ ಹಾಕಿ (ಸೂಪಶಾ. ೨-೩೮). **ಚಿತ್ರಣಿಸು:** ಕಿಱುಸೊಜ್ಜಿಗೆಯನು ಬರಬರನಟ್ಟು ಚಿತ್ರಣಿಸಿ ಕತ್ತರಿಸಿದಲ್ಲ ನೀರುಳ್ಳಿ ಸಹಿತಂ ಕಲಸಿ (ಸೂಪಶಾ. ೧-೨೫) [ ಚಿತ್ರಳಿ + - ಇಸು₂ ]

**ಚಿತ್ತಾಕರ್ಷಕ** (ನಾ). ಮನೋಹರವಾದುದು ; ಮನಸ್ಸನ್ನು ಸೆಳೆಯು ವಂಥದು : ತಾನೂ ಪ್ರೀತಿಸಿ, ತನ್ನನ್ನೂ ಪ್ರೀತಿಸಿದ ಚಿತ್ತಾಕರ್ಷಕನಾದ ತರುಣವ್ಯಕ್ತಿ (ಪುನರು. ೦೯೩). [ ಚಿತ್ತ + ಆಕರ್ಷಕ ]

**ಚಿತ್ತಾಗಾರ, ಚಿತ್ತಾರ₂** (ನಾ). ಚಿತ್ರಿಸಿದ ಆಕಾರ, - ಸ್ವರೂಪ : " ಚಿತ್ರಾಕಾರ–ಚಿತ್ತಾಗಾರ" (ಶಮದ. ೨೬೧ ಪ್ರಯೋ). **ಚಿತ್ತಾರ₂** : "ಚಿತ್ರಾಕಾರ–ಚಿತ್ತಾರ" (ಶಮದ. ೨೯೫ ಪ್ರಯೋ). [ <ಸಂ. ಚಿತ್ರಾಕಾರ ]

**ಚಿತ್ತಾಭೋಗ** (ನಾ). ಸುಖಾದಿ ಇಚ್ಛೆಯಲ್ಲಿ ತತ್ಪರವಾದ ಮನಸ್ಸು : " ಮನಸ್ಕಾರಃ, ಚಿತ್ತಾಭೋಗಃ – ಮನಸ್ಸಿನ ವಿಶಾಲತೆ ಅಂದರೆ ಇಚ್ಛೆಯ ಹೆಸರು" (ಸಿದ್ಧಾಂತಿ. ೪೨). [ ಚಿತ್ತ + ಆಭೋಗ ]

**ಚಿತ್ತಾರ₁** 'ಚಿತ್ತರ' ನೋ.

**ಚಿತ್ತಾರ₂** 'ಚಿತ್ತಾಗಾರ' ನೋ.

**ಚಿತ್ತಾರಿ** (ನಾ). ಚಿತ್ರಗಳನ್ನು ಬರೆಯುವವನು; ಚಿತ್ರಕಾರ ; ಚಿತ್ರಶಿಲ್ಪಿ : ಸಾಮಂತಚೂಡಾಮಣಿಯ ಮಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದು ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು (ಶಂಪಶಾ. ೨-೩೯ ವ) ; ಚಿತ್ತಾರಿ ಪರ್ಲೋಜಂಗೆ ಮತ್ತರು[೧೨] (ಸೌಇಇ. VIII, ೩೬೬-೨೫ ; ?). [ ಚಿತ್ತಾರ₁ (<ಚಿತ್ತರ) + - ಇ₂ ]

**ಚಿತ್ತಾರಿಗ** (ನಾ).=ಚಿತ್ತಾರಿ : ಸುಕೇಶಿನಿಯು ಮಾಡದ ಕೇರ್ಗಳೆಲ್ಲಾ ಯೆಡೆ ಗಳೊಳಂ ವ್ಯಾಳಂಗಳಪ್ಪಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದು (ವಡ್ಡಾರಾ. ೩೪-೧೨) ; ನಾನಾರೂಪಂ ಬರೆವ ಚಿತ್ತಾರಿಗನಂತೆ ನಾನಾ ಭೇದಮಪ್ಪ ನಾಮಕರ್ಮ (ಹೂಾರ. ೯೪-೧೭).

[ ಚಿತ್ತಾರ₁ (<ಚಿತ್ತರ) + - ಇಗ ]

**ಚಿತ್ತಾರಿವಿದ್ಯೆ** (ನಾ). ಚಿತ್ರಗಳನ್ನು ಬರೆಯುವವನ ವಿದ್ಯೆ: ಚರಕವಿದ್ಯೆ, ಸಾಮುದ್ರಿಕೆಯ ಲಕ್ಷಣ, ಚಿತ್ತಾರಿವಿದ್ಯೆ . . . ಮೊದಲಾದ ನಾನಾವಿದ್ಯೆ ಗಳನು . . . ಅರಿತು (ಪಕಳಾ. ೮). [ ಚಿತ್ತಾರಿ + ವಿದ್ಯೆ ]

**ಚಿತ್ತಾವಧಾನ** (ನಾ). ಏಕಚಿತ್ತತೆ ; ದೃಢಗಮನ : ಕೇಳಿರ್ಯ ನೆರೆದಖಿಳಜನ ಚಿತ್ತಾವಧಾನದಲಿ (ಕುಮಾ.ಸ. ೮-೩೪). [ ಚಿತ್ತ + ಅವಧಾನ ]

**ಚಿತ್ತಿ** (ನಾ). ಬುದ್ಧಿ; ಪ್ರಜ್ಞೆ. [ ಸಂ. ]

**ಚಿತ್ತಿನಿ** (ನಾ). [ಕಾಮಶಾ] ಪದ್ಮಿನಿ, ಚಿತ್ತಿನಿ, ಹಸ್ತಿನಿ, ಶಂಖಿನಿ ಎಂಬ ನಾಲ್ಕು ಬಗೆಯ ಸ್ತ್ರೀಜಾತಿಗಳಲ್ಲಿ ಒಂದು ಮತ್ತು ಆ ಜಾತಿಗೆ ಸೇರಿದ ಹೆಣ್ಣು : ನಿತಂಬಂ ಮನಂಗೊಳಿಕುಂ ಬೆಟ್ಟಿತುವಾಗೆ ಚಿತ್ತಿನಿಗೆ ನಿಂಬಾ ಮೋದಮಕ್ಕುಂ (ಮದತಿ. ೨-೪) : ನೆರೆದುನಿಂದ ಕೀರಾಳಿಗೆ ಕಾಮಾದ್ವೈತ ಶಾಸ್ತ್ರಸೂತ್ರಮಂ ಪಾಠಮೋದಿದ ಪರಿಜ್ಞಾನದಿಂ ಮಱೆವ ಚಿತ್ತಿನಿಯರಿಂ (೧೧ಶ. ೬-೧೦ ವ); ಮೂಡಲದು ಹಸ್ತಿನಿಗೆ ಬಡಗಲದು ಚಿತ್ತಿನಿಗೆ (ಸರ್ವಜ್ಞ. ೧೬೩೦). [ <ಸಂ. ಚಿತ್ರಿಣೀ ]

**ಚಿತ್ತು₁** (ನಾ). ೧. ಜ್ಞಾನಸ್ವರೂಪವಾದುದು; ಆತ್ಮ; ಚೈತನ್ಯಸ್ವರೂಪ: ಮುಕ್ತಿಯ ಮುಗುಳಂತೆ ಚಿತ್ತಿನ ಬಿತ್ತಿನಂತೆ ಸತ್ತದ ಸಾರದಂತೆ . . . ಅದ್ವಿತೀಯನೊಪ್ಪುತಿರ್ದಂ (ಶಬಶಂ. ೧-೮೦ ವ): ಜೀವದ ಚಿತ್ತು ಜಗತ್ತಿನ ಸತ್ತು ತಿಳಿದಾನಂದದ ಸಂವಿತ್ತು (ಅರಳು. ೨೩೮-೧). ೨. ಬುದ್ಧಿಶಕ್ತಿ; ಮೇಧಾಶಕ್ತಿ. ೩. ಬುದ್ಧಿಶಕ್ತಿಯುಳ್ಳ ಜೀವ: ಚಿತ್ತುಗಳಲ್ಲದ ಗೋವಿತ್ತ ಪಾಲ್ಕುತ್ತು ಕತ್ತುರಿಗಳು ಪವಿತ್ರ ಗಡಾ ಚಿತ್ತು ಮೆಯ್ಯಾದಾತ್ಮವಸ್ತು ಮೈಯೊಳಗಿದ್ದರುತ್ತಮನೆಂದರೇಕೆಣಿಕೆ (ಭರತ. ೬೯-೯೩). [<ಸಂ. ಚಿತ್]

**ಚಿತ್ತು₂** (ನಾ). ೧. ಬರೆಯುವಾಗ ಮಸಿಯಿಂದ ಆಗುವ ಕಲೆ : ಗಗನಕೆದುರು ನಿಂತಿದೆ ತರು ಮಸಿಯ ಚಿತ್ತಿನಂದದಿ (ಅನಿಕೇ. ೦೪-೪). ೨. ಬರೆದುದರಲ್ಲಿ ಸರಿಯಲ್ಲವೆಂದು ಹೊಡೆದು ಹಾಕಿದ ಭಾಗ,-ಹೊಡೆದು ಹಾಕುವುದಕ್ಕಾಗಿ ಮಾಡಿದ ರೇಖೆ ಮೊದಲಾದುವುಗಳ ಚಿಹ್ನೆ: ಸರಿಯಾಗಿ ಬಂದದ್ದು ಚಿತ್ರ. ಅಲ್ಲದ್ದು ಚಿತ್ತು; ಬರವಣಿಗೆಯಲ್ಲಿ ಹೊಡೆದು ತಿದ್ದಿಯೋ ಮಸಿ ಬಿದ್ದು ಕೆಟ್ಟೋ ಆಗಿರುವ ಭಾಗ (ನಮ್ಮನು. ೦೦೨). ೩. ಕರಡುಪ್ರತಿ : (೬).

**ಚಿತ್ತುಮಾಡು₁**=ಕಲೆಯಾಗುವಂತೆ ಬರೆ; ಗೀಚು: ನಾಗೇಂದ್ರ ತಾನು ಬರೆದಿದ್ದನ್ನು ಚೆನ್ನಾಗಿ ಹೊಡೆದುಹಾಕಿ ಚಿತ್ತುಮಾಡಿದ (ಕಂಕಣ. ೧೭೪) ; ಗುರುತಿಸಬೇಕಾದ ಅಂಶಗಳನ್ನು ಸಕಾಲದಲ್ಲಿ, ನಿಖರವಾಗಿ ಚಿತ್ತುಮಾಡದೆ ಗುರುತಿಸಬೇಕು (ತಿಳ್ಪದ. ೩೬೬). [ ←ಹಿಂ. ಚಿಟ್ರೀ ; ಮರಾ. ಚಿತಡ ]

**ಚಿತ್ತು₃** (ನಾ). ೧. ಬೆನ್ನು ಕೆಳಗಾಗಿ ಬೀಳುವಿಕೆ ; ಅಂಗತ್ತನಾಗಿ ಬೀಳು ವಿಕೆ ; (ಕುಸ್ತಿಯಲ್ಲಿ) ಸೋಲು : ಮಲ್ಲಾರಿ ಚಿತ್ತಾದ–ಸೋತ. (ಛಮುಕಾ. ೩). ೨. (ಗಂಜೀಫು, ಇಸ್ಪೀಟು ಮುಂತಾದ ಆಟಗಳಲ್ಲಿ) ಮಂಗುಚಿದ ತನ್ನ ಆಟದ ಎಲೆಗಳನ್ನು ಬೆನ್ನು ಕೆಳಗಾಗಿ ಹಾಕಿ ತೋರಿಸುವುದು : ನೆತ್ತ ಚದುರಂಗ ಪಗಡೆಯು ಚಿತ್ತಾಯಂಬಯ್ದು ದಾಯ ಬಿಡಿಬಿಲ್ ಸೊಗುಳೀಯುತ್ತಮರಾಡರು ಅದಲ್ಲೈತ್ತಲೆಯಹ ಭಂಗ ಬಪ್ಪನೆಂಬುದು ಪುಸಿಯೆ (ನೀತಿಸಾ. ೬೦೦).

**ಚಿತ್ತುಮಾಡು₂**=೧.ಅಂಗತ್ತನಾಗಿ ಬೀಳಿಸು; ಕುಸ್ತಿಯಲ್ಲಿ ಸೋಲಿಸು: ಭೈರವನು . . . ಸುಲೇಮಾನನನ್ನು 'ಚಿತ್ತು' ಮಾಡಿಬಿಟ್ಟನು (ಬಾಳಹೊ. ೦೦೩). ೨. (ಇಸ್ಪೀಟಾಟದಲ್ಲಿ) ಮಂಗುಚಿದ ತನ್ನ ಆಟದ ಎಲೆಗಳನ್ನು ಬೆನ್ನು ಕೆಳಗಾಗಿ ಹಾಕಿ ತೋರಿಸು : ಆಟವು ಪೂರೈಸಿದ ನಂತರ ಮಡಿಚಿದ ಪಟ್ಟುಗಳನ್ನೆಲ್ಲ ಅವನು ಚಿತ್ತು ಮಾಡಿ ತೋರಿಸಿದನು (ಋಣ).

[ ←ಹಿಂ. ಚಿತ್ ; ಮರಾ. ಚಿತ್, ಚೀತ್ ]

**ಚಿತ್ತು₄** (ನಾ). ಚಿಲ್ಲದ ಮರ ಮತ್ತು ಅದರ ಬೀಜ : ಚಿಲ್ಲದ ಬೀಜ, ಚಿತ್ತು, ಚಲಿಬೀಜ (ಮೃಶಿಗಿ. ೭೩-೦೯೮೪). [ ? ]

**ಚಿತ್ತೂರ್** (ನಾ). ಒಂದು ಊರಿನ ಹೆಸರು : ಅದೆಯಱಿನಾತ ಚಿತ್ತೂರ ಮೋನಿಗುರವಡಿಗಳ ಶಿಷ್ಯತ್ತಿಯರ್ ನಾಗಮತಿಗನ್ತಿಯರ್ ಮೂಱು ತಿಙ್ಗಳ್ ನೋನ್ತು ಮುಡಿಪ್ಪಿದರ್ (ಎಕ. II, ೨೦-೧ : ಕ್ರಿ. 700).

[ ? + ಊರ್ ]

**ಚಿತ್ತೆ** (ನಾ). ೧. ಒಂದು ನಕ್ಷತ್ರದ ಹೆಸರು; ಚಿತ್ರಾನಕ್ಷತ್ರ: ಜಯನಿನದಂ ಸುರದುಂದುಭಿಜಯನಿನದಂ ಪುಷ್ಪವರ್ಷಮೊರ್ಮೆಯೆ ಸಕಲೋರ್ವಿಯ ನೆಯ್ದೆ ಪರ್ವುತಿರೆ ಚಿತ್ತೆಯ ಸರಿಯಂತೆಱಗಿ ಪೋದುದಮರಸಮಾಜಂ(ಆದಿಪು. ೦೪-೦೪೭); ಚಿತ್ತೆಯ ಮಳೆ ಹೊಯಿದು ಮುತ್ತಾಗಬಲ್ಲುದೇ (ಸರ್ವಜ್ಞ. ೫೭೮) ; ಕುರುಡುಪ್ರೀತಿಯ ಹಾಂಗ ಕುರುಡು ಚಿತ್ತೆಯ ಮಳೆಯ (ಸಖೀಗೀ. ೮೫-೨). ೨. ಸೂರ್ಯನು ಚಿತ್ರಾನಕ್ಷತ್ರದಲ್ಲಿ ಸಂಚರಿಸುವಾಗ ಬರುವ ಮಳೆ ; ಸಾಮಾನ್ಯವಾಗಿ ಆಶ್ವಯುಜ ತಿಂಗಳಲ್ಲಿ ಬರುವ ಮಳೆ : ಚಿತ್ತೆ ಮುತ್ತಿನೋಪಾದಿಯಲಿ (ಭಾಸ್ಕರ. ೬೦-೪). 'ಕುರುಡುಚಿತ್ತೆ' ಪರಾ.

[ <ಸಂ. ಚಿತ್ರಾ ]

**ಚಿತ್ತೈಕಾಗ್ರತೆ** (ನಾ). ಮನಸ್ಸಿನ ಏಕಾಗ್ರತೆ : ಮಗಳ ಚಿತ್ತೈಕಾಗ್ರತೆಗೆ ಸಂತೋಷವಡುತ್ತ ಸತಿಪತಿಯರು . . . ಕುಳಿತರು (ಶಾಂತಲಾ. ೧೪): ಚಿತ್ತೈಕಾಗ್ರತೆಯನ್ನು ಭಂಗಗೊಳಿಸುವಂಥ ಪ್ರಲೋಭನೆಗಳಾವುವೂ ಅಲ್ಲಿಲ್ಲದುದರಿಂದ, ಅವನು ಆ ಜಾಗವನ್ನಾರಿಸಿಕೊಂಡಿದ್ದನು (ಪುನರು. ೫೪).
[ ಚಿತ್ತ + ಏಕಾಗ್ರತೆ ]

**ಚಿತ್ಸೈಸು** 'ಚಿತ್ತಯಿಸು' ನೋ.

**ಚಿತ್ತ್ರೋಡಿ** (ನಾ). ಒಂದು ಬಗೆಯ ಗಿಡ: ಉದ್ದಿ, ವುಡಿಗ, ಗೂಡುಮುರ್ಕಿ, ಚಿತ್ತ್ರೋಡಿ, ಉದುರೆ (ವೃಜಿಗಿ. ೩೨-೬೦೧). [ ? ]

**ಚಿತ್ತೋದ್ಭವ** (ನಾ).=ಚಿತ್ತಜ ೧ : ಚಿತ್ತೋದ್ಭವನನೆಸೆಯೆ ತೂರ್ಯತ್ರಿಕಂ ಹಾಸವುಷ್ಪಾಂಜಳಿಯಿಂ ತತ್ಕಾಂತೆ ದೇಹದ್ಯುತಿ ಜವನಿಕೆಯಿಂ ನಾಟ್ಯರಂಗಂ ಬೆಳಗಿರ್ದಪ್ಪೆ (ಅಜಿಪು. ೨-೪೦) ; ಚಿತ್ತೋದ್ಭವನರಮನೆ ನೃಪಸುತರಿಂ ಕವರ್ತೆವೋದಂತೆ ಬಿನ್ನನಾಯ್ತುದ್ಯಾನಂ (ಶಾಂತಿಪು. ೮-೫೮).
[ ಚಿತ್ತ + ಉದ್ಭವ ]

**ಚಿತ್ತೋದ್ವೇಗಕರ** (ಗು). ಮನಸ್ಸಿಗೆ ಕಳವಳವನ್ನುಂಟುಮಾಡುವ : ಆತನಿಗೆ ಚಿತ್ತೋದ್ವೇಗಕರವಾದ ಅವ ಪ್ರಶ್ನೆಯನ್ನೂ ನಾನು ಹಾಕುವುದಿಲ್ಲ (ಬೆನ್ನಟೀ. ೯೭). [ ಸಂ. ]

**ಚಿತ್ಪಿಂಡ** (ನಾ). ಜ್ಞಾನಸ್ವರೂಪಿ ; ಶಿವ : ಜಲಂಧರವಧಾಕಥನವೆನುತ ಚಿತ್ಪಿಂಡಂಗೆ ಹತ್ತನೆಯ ಲೀಲೆಯಿದು ವುಗಿಯಿತ್ತು (ವೀಶೈಪು. ೨-೧೩-೪೫); ವಿವುಳ ವಿಳಸಿತಧವಳಾತುಳಾಖಂಡ ಚಿತ್ಪಿಂಡ ವೃಷಭೇಶ್ವರನಂ ಕಂಡು (ಹಮ್ಮಿರ. ೫-೪ ಪ). [ ಸಂ. (ಚಿತ್ + ಪಿಂಡ) ]

**ಚಿತ್ಪುರುಷ** (ನಾ). ಜ್ಞಾನಸ್ವರೂಪ ; ಪರಮಾತ್ಮ : ಸುರತರು ಸುರಭಿ ಚಿಂತಾಮಣಿ ನೀನೆಂದು ವಿರಚಿಸಲೆಲ್ಲರ ಮೆಚ್ಚು ತರು ಪಶು ಪಾಷಾಣ ಸಾಟಿಯಿಲ್ಲಾತ್ಮ ಚಿತ್ಪುರುಷನೆಂದರೆ ನಿನ್ನ ಮೆಚ್ಚು (ಭರತ. ೨-೫೮). [ ಸಂ. (ಚಿತ್ + ಪುರುಷ) ]

**ಚಿತ್ಯ** (ನಾ). ೧. ರಾಶಿ ಹಾಕುವುದು. ೨. ಹೆಣವನ್ನು ಸುಡಲು ಏರ್ಪಡಿಸಿರುವ ಸೌದೆಯ ಒಟ್ಟಲು; ಚಿತೆ: "ಚಿತ್ರ ಚಿತ್ಯ[ಪಾಠಾಂ. ಚಿತೆ, ಚಿತ್ಯ] ಯೆನಲು ಸಿದ್ಧಿಗೆಯದೆನಿಕ್ಕುಂ" (ಮಂಗರಾ. ೧೧೮-೭). [ ಸಂ. ಚಿತ್ಯ ]

**ಚಿತ್ರ** (ಗು). ೧. ಎದ್ದು ಕಾಣುವ; ಸ್ಪಷ್ಟ; ಸುವ್ಯಕ್ತ. ೨. ಪ್ರಕಾಶಮಾನವಾದ ; ಕಣ್ಣನ್ನು ಕೋರೈಸುವ ; ಮನೋಹರವಾದ. ೩. ವಿವಿಧ ವರ್ಣಗಳನ್ನುಳ್ಳ; ಶಬಲವಾದ ; ಚುಕ್ಕೆಗಳಿಂದ ಕೂಡಿದ. 'ಚಿತ್ರ ಕಂಬಲ' ಪರಾ. ೪. ಆಶ್ಚರ್ಯಕರವಾದ. 'ಚಿತ್ರಪ್ರಪಂಚ', 'ಚಿತ್ರ ಸಂಪುಟ' ಪರಾ. (ನಾ). ೫. ಚಿತ್ರಲೇಖನದ ಮೂರು ಬಗೆಗಳಲ್ಲಿ ಒಂದು : ಚಿತ್ರ ಚಿತ್ರಾರ್ಧ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ . . . ಪರಿಭಾವಿಸಿ ನೋಡಿ (ಮಲ್ಲಿಪು. ೫-೪೨). ೬. ಬರೆದ ಆಕೃತಿ ; ತಸವೀರು ; ಚಿತ್ತಾರ': ಕೇರಿಲ್ಲದೆ ಚಿತ್ರಮಂ ಬರೆವೆನೆಂಬ . . . ಪಟ್ಟಪಸಿಯೊಗ್ಗನಂ ಪೋಲ್ಕುಂ (ಧರ್ಮಾಮೃ. ೧-೬೭); ಆ ಪೂಜೆಯು ಆ ಮಾಟವು ಚಿತ್ರದ ರೂಹು ಕಾಣಿರಣ್ಣಾ (ಬಸವ ೦೨೬): ಭಿತ್ತಿಯ ಚಿತ್ರದಲಿ ತತ್ವ ತಾ ನೆರೆದಿಹುದೆ ಚಿತ್ರತ್ವ ತನ್ನ ನಿಜದೊಳಗೆ ತ್ರೈಜಗದ ತತ್ವ ತಾನೆಂದ (ಸರ್ವಜ್ಞ. ೩೨೬) : ಒಂದೆರಡು ಚಿತ್ರಗಳನ್ನೂ ಪುಸ್ತಕದಲ್ಲಿ ಸೇರಿಸಬೇಕು (ಬಾಲಲ.೬, ಕಥಾಮುಖ); ಸೆಮಿಟಿಕ್ ವರ್ಣಮಾಲೆಯ ಎಲ್ಲ ಲಿಪಿಗಳೂ ಮೊದಲಿಗೆ ಚಿತ್ರದ ಸಂಕೇತವನ್ನೇ ಹೊಂದಿದ್ದವು (ದ್ರಾವಿವಿ. ೫೦). ೭. ಆಶ್ಚರ್ಯ ; ಸೋಜಿಗ ; ಅದ್ಭುತ: ನಿನ್ನ ಚರಿತ್ರಂ ಚಿತ್ರಮೆಂದು ಪೊಗಟ್ಟುವುದು ಜಗಂ (ಜನಾಲಿ. ೩-೩) : ಪುತ್ರಮುಖಾಬ್ಜಾಲೋಕನ ಮಾತ್ರದೊಳಂ ಪಿತೃ ತಪಕ್ಕೆ ಪೋಕುಂ ಚಿತ್ರಂ (ಸುಕುಮಾ. ೯-೦೦೦); ತಾನು ಆದಟರಕ್ಕಸನ ಮೇಲಿರದೆ ಸಂಗ್ರಾಮವನೊದವಿಸಿದುದು ಚಿತ್ರವಲ್ತೆ (ಶ್ರೀಪುಸಾಂ. ೩-೩೪) : ಇಂದು ದುಶ್ಶಾಸನನ ಶೋಣಿತದೊಂದು ಕುಡಿತೆಯಲಾ ಮಹಾಶಿಖಿ ನಂದಿತೇನಿದು ಚಿತ್ರವಲ್ಲಾ ಸೂತ (ಕುವ್ಯಾ೪. ೦೯-೪೦). ೮. ಭದ್ರ; ಶಂಭ. ೯. ಲೋಹ. ೧೦. ಬೊಟ್ಟು : "ತಿಲಕದೊಳು ಚಿತ್ರದೊಳು ಪುಂಡ್ರಮಕ್ಕು" (ಮಂಗರಾ. ೧೩೨-೫೬). ೧೧. ಒಂದು ಬಗೆಯ ಮೂಲಿಕೆ. ೧೨. ವಾಯು ; ಮಾರುತ. ೧೩. ಚಲನಚಿತ್ರ; ಸಿನಿಮಾ: ಕನ್ನಡದಲ್ಲಿ ಈಚೀಚೆಗೆ ಬಹಳ ಚಿತ್ರಗಳು ತಯಾರಾಗುತ್ತಿವೆ (ರೂಢಿ). ೧೪. = ಚಿತ್ರಕವಿತ್ವ: ವ್ಯಂಗ್ಯಾರ್ಥವೇ ಇಲ್ಲದೆ ಇದ್ದರೆ 'ಚಿತ್ರ' ಅಥವಾ 'ಅಧಮಕಾವ್ಯ'ವಾಗುವುದು (ಕೈಬಿ. ೧೮೨) ; ಮಿಕ್ಕುದೆಲ್ಲವೂ 'ಚಿತ್ರ'ವೆಂದೇ ಮುಂದೆ ಪ್ರತಿಪಾದಿಸಲಾಗುತ್ತದೆ (ಧ್ವನ್ಯಾಲೋ. ೨೭). ೧೫. [ಕಾವ್ಯವಿಮ] ಒಂದು ಅರ್ಥಾಲಂಕಾರ ; ಚಿತ್ರಾಲಂಕಾರ : ಏನಾನುಮನೊಂದು ಸಂಸ್ಥಾನದಿನನುಕರಿಸುವಂತು ಭಂಗ್ಯಂ ತರದಿಂ ಪೀನವೊಡಂಬಡೆ ವಿರಚಿಸೆ ನಾನಾ ವಿಚ್ಛಿತ್ತಿ ಚಿತ್ರಮೆನಿಕುಂ ಪೆಸರಿಂ(ಕಾವ್ಯಾವ. ೫೬೮); ಭಾವಿಸಿ ನೋಡೆ ಪ್ರಶ್ನೋತ್ತರ ಪದಂಗಳ್ಗೊಂದೇ ಶೀವಿದುತ್ತರವುಸುರೆ ಚಿತ್ರ (ಕಾವಲ. ೧೫೦-೦). ೧೬. [ಛಂದ] ತ್ರಿಪದಿಯಲ್ಲಿ ಒಂದು ಬಗೆ : ಭುಜಗಪಕ್ಷಗತಿ ಶಿಖಿವ್ರಜಪದಗಣದೊಳಗಜರಸದ ಶದೊಳ್ಪೆಱವೆಡೆಯೊಳಗಧೋಕ್ಷಜಗಣಮಾದೊಡದು ಚಿತ್ರಂ (ಛಂದೋಂಬು. ೫-೨೪೯) ; "ಮಾರುತ ಶುಭ ಲೋಹಾದ್ಭುತ ತಾರಕಿ ಮೂಲಿಕೆಯ ಭೇದ ಸಾಧನ ತಿಲಕಂ ಸಾರದೆ ಬಟೀಕೆಯುಂಟುಂ ಧಾರುಣಿಯೊಳು ಚಿತ್ರಶಬ್ದಮೆನಿಕುಂ ನಿಜದಿಂ" (ನಾನಾಕಂ.೩೭).

**ಚಿತ್ರವೆಡಂಗ** = ಒಂದು ಬಿರುದು. ರಾಷ್ಟ್ರಕೂಟ ಖೊಟ್ಟಿಗದೇವನ ಬಿರುದು : ರಟ್ಟಕನ್ದರ್ಪ್ಪಂ ಚಿತ್ರವೆಡೆ(ಡ)ಂಗ[ಂ] ಶ್ರೀಮತ್ ಕೊಟ್ಟಿಗದೇವ[ಂ] (ಇಆ. XII, ೨೫೬-೫ : 971). [ ಸಂ. ]

**ಚಿತ್ರಂಬರೆ** (ಕ್ರಿ). ಚಿತ್ರವನ್ನು ಬರೆ ; ಚಿತ್ರಿಸು : ದಿನೇಶ್ವರಸುತನ ರೂಪು ಚಿತ್ರಂಬರೆದಂತಿರ್ದಪುದು ಚಿತ್ರಭಿತ್ತಿಯೊಳೆನ್ನಾ (ಗದಾಯು. ೫-೩೪).
[ ಚಿತ್ರ + ಬರೆ$_1$ ]

**ಚಿತ್ರಕ** (ನಾ). ೧. ಚಿತ್ರವನ್ನು ಬರೆಯುವವನು : "(ರಂ)ಗಾಜೀವ ಚಿತ್ರಿಯೆನೆ ಚಿತ್ರಕಂ" (ಮಂಗರಾ. ೧೧೧-೨) ; ಚಿತ್ರಕನುಂ ತಾನು ಮಲ್ಲದೆ ಪೆಱರಱಿಯದಂತು ಕರುವಿಡಿಸಿ (ಶಂಕಾಮಾ. ೩-೨೫ ವ) ; ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳಿಟ್ಟರದಾತ್ಮಲೀಲೆಯಿಂ ಸುಕವಿಕದಂಬಕಂ . . . ಚಿತ್ರಕವ್ರಜಂ (ಪುಷ್ಪಪು. ೫-೨೦). ೨. ಚಿರತೆ. ೩. ಹುಲಿ. ೪. ಹಣೆಗೆ ಇಡುವ ತಿಲಕ,-ಬೊಟ್ಟು: "ಚಿತ್ರಕಂ ಪುಂಡ್ರಂ ಲಲಾಟಿಯೆನಲು ತಮಾಲ ಪತ್ರಮೆನೆ ತಿಲಕವದು" (ಮಂಗರಾ. ೯೯-೨೦). ೫. ಚಿತ್ರಮೂಲ ಎಂಬ ಗಿಡ ಮತ್ತು ಅದರ ಬೇರು: "ಚಿತ್ರಮೂಲಂ ವ್ಯಾಳವಗ್ನಿ ಚಿತ್ರಕವಕ್ಕು" (ಮಂಗರಾ. ೩೯-೨೬) : ಚಿತ್ರಕವುಂ ತನಿವಾಲಿನಲ್ಲಿ ಪೊಯ್ದೊಡೆ ಪೆಱತೇನೊ ಸಂಪಗೆಯ ಗಂಧಮನೀಟ್ಟುಳಿಕೊಳ್ಗುಮಾ ಪೊಸರ್ (ಲೋಕೋಪ. ೮-೯೮). ೬. ಹರಳಿನ ಗಿಡ. ೭. [ಕಾಮಶಾ]ಮದನ, ಚಿತ್ರಕ, ದಮನ ಮತ್ತು ಮಾಳವ ಎಂಬ ಪುರುಷರ ನಾಲ್ಕು ಬಗೆಗಳಲ್ಲಿ ಒಂದು : ಘನಕೃಶ ಸೂಕ್ಷ್ಮದೀರ್ಘ ವಿಕೃತಿತ್ವಮನೆಯ್ದದ ಹೇಮಪುತ್ರಿಕಾ ತನು ವಿವಿಧಾಂಬರಾಭರಣ ಭೂಷಣವಾಜಿದ ಕತ್ತುರಿಗಂಪು ದಿವ್ಯಭೋಜನರುಚಿ ರೋಮಸಂಜನಿತ ಜಂಘೆಯನಂಗಮತೋಕ್ತಿ ಚಿತ್ರಿನೀಸ್ತನಪರಿರಂಭಮುಖ್ಯ ಬಹುಭೋಗದೆ ಚಿತ್ರಕನಾಮವೊಪ್ಪುಗುಂ (ಮನ್ಮವಿ. ೨-೧೩). [ ಸಂ. ]

**ಚಿತ್ರಕಂಠ** (ನಾ). ೧. ಪಾರಿವಾಳ. ೨. ಚಾಲುಕ್ಯರ ಒಂದನೆಯ ವಿಕ್ರಮಾರ್ಜುನನ ಒಂದು ಕುದುರೆಯ ಹೆಸರು : ಸತ್ಯಾಶ್ರಯ ಶ್ರೀ ಪೃಥಿವೀವಲ್ಲಭ ಮಹಾರಾ[ಜಾ]ಧಿರಾಜ ಪರಮೇಶ್ವರಸ್ಯ ಪ್ರಿಯತನಯಃ ಚಿತ್ರಕಣ್ಠಾಸ್ಯ ಪ್ರವರತುರಙ್ಗಮೇಣೈಕೇನೈವ ಪ್ರತಿತಾನೇಕ ಸಮರಮುಖೇ . . . ನಿಜಭುಜವಿಜಿತವಿಜಿಗೀಷುಃ (ಪ್ಯಆರಿ. ೦೯೩೯, ೩೦-೦೦ ; 670) ; (ಸೌಇಇ. XX, ೩-೭ ; 780 ನೋ). [ ಚಿತ್ರ + ಕಂಠ$_1$ ]

**ಚಿತ್ರಕಂಬಲ** (ನಾ). ಪಟ್ಟೆಪಟ್ಟೆಯಾದ ಕಂಬಳಿ ; ನಾನಾವಿಧವಾದ ಬಣ್ಣಗಳಿಂದ ಕೂಡಿದ ಕಂಬಳಿ ; ರತ್ನಗಂಬಳಿ : ಆಸ್ತರಣ=ಆನೆಯ ಮೇಲೆ ಹಾಸುವ ಚಿತ್ರಕಂಬಲ (ನಾಚಿರಾ. ೬). [ ಚಿತ್ರ + ಕಂಬಲ ]

**ಚಿತ್ರಕಂಬಳಿ** (ನಾ). = ಚಿತ್ರಕಂಬಲ : ಪ್ರವೇಣೀ . . : ಕುಥಃ–ಸಿ ಆನೆಯ ಬೆನ್ನು ಮೇಲೆ ಹಾಸುವ ಆನೆಗೆ ಹೊದಿಸುವ ಚಿತ್ರಕಂಬಳಿಗೂ ಚೀನಾಂಬರಕ್ಕೂ ಹೆಸರುಗಳು (ಸಿದ್ಧಾಂತಿ. ೨೦೪). [ ಚಿತ್ರ + ಕಂಬಳಿ ]

**ಚಿತ್ರಕಥೆ** (ನಾ). ೧. ಆಶ್ಚರ್ಯಕರವಾದ ಕಥೆ ; ವಿಚಿತ್ರವಾದ ಕಥೆ : ಸುಮತಿ ಚಿತ್ರಕಥೆಯನಿಂತೆಂದು ಪೇಟಲ್ವಗುಲ್ದಲ್ (ಸುಕುಮಾ. ೬-೧೬ ವ). ೨. ಚಿತ್ರಗಳ ಸಹಾಯದಿಂದ ನಿರೂಪಿಸಿರುವ ಕಥೆ : ಪತ್ರಿಕೆಗಳಲ್ಲಿ ಮಕ್ಕಳಿಗಾಗಿ ಚಿತ್ರಕಥೆಗಳನ್ನು ಪ್ರಕಟಿಸುತ್ತಾರೆ (ಋಢಿ). ೩. ಚಲನಚಿತ್ರಕ್ಕೆ ಅಳವಡಿಸಿದ ಕಥೆ : ಈ ಚಿತ್ರದ ದಿಗ್ದರ್ಶಕರೇ ಚಿತ್ರಕಥೆಯನ್ನೂ ಬರೆದಿದ್ದಾರೆ (ಋಢಿ). [ ಚಿತ್ರ + ಕಥೆ ]

**ಚಿತ್ರಕರ** (ನಾ). ಚಿತ್ರ ಬರೆಯುವವನಂ ; ಚಿತ್ರಕಾರ : ಸಕಳಾಳಾವಕಳಾ ಕಳಾವಕಥಿತ ವ್ಯಾವೃತ್ತಿಯೊಳ್ಕೂಡಿ ಚಿತ್ರಕರಂಬೊಲ್ವರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯಿಂ ಪ್ರಕಟಂ ಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ (ಕವಿರಾ. ೧-೧೪೪). [ ಸಂ. ]

**ಚಿತ್ರಕರ್ಮ** (ನಾ). ೧. ಚಿತ್ರವನ್ನು ಬರೆಯುವುದು ; ಚಿತ್ರರಚನೆ : ರಸಭಾವಕಂಚುಕಿತ ಚಿತ್ರಕರ್ಮಂಗಳಿಂದದೊರ್ಮೆ . . . ಕಳೆವನಿಂತು ಪೊಲ್ತುಂ ನೃಪಂ (ಶಾ ದ ಂ ಪು. ೨೦). ೨. ಬರೆದ ಆಕೃತಿ ; ಚಿತ್ರ : ದುರ್ವಹಮಹಮಿಂದ್ರರೇಂ ಸುಖದ ಲೆಪ್ಪಮೊ ಪುಣ್ಯದ ಚಿತ್ರಕರ್ಮಮೋ (ಶಾಂತಿಪು. ೯-೩೪). ೩. ಕೆತ್ತನೆಯ ಕೆಲಸ; ಕುಸುರಿಗೆಲಸ : ವಟಿಸಿದುವೂ ಚಿತ್ರಕರ್ಮಂಚಿತ್ತ ದೈತ್ಯಕುಲ ದೇವತಾಮೂರ್ತಿಗಳ್ ? (ಶ್ರೀರಾಮಾ- ೪೭೨-೬೨೨): ಸ್ವರ್ಣಕಾರನೆ ಬಲ್ಲನುಳಿದವರರಿಯರು ಚಿನ್ನದ ಚಿತ್ರಕರ್ಮವನು (ಅಂಜಾಪ. ೬೬-೨೩). [ ಸಂ. ಚಿತ್ರಕರ್ಮನ್ ]

**ಚಿತ್ರಕಲೆ** (ನಾ). ಚಿತ್ರವನ್ನು ಬರೆಯುವ ವಿದ್ಯೆ : ಕೆಲವು ಕಡೆಗಳಲ್ಲಂತೂ ಚಿತ್ರಕಲೆಯನ್ನು ಸರ್ವಕಲೆಗಳಿಗೂ ಆಧಾರಭೂತವಾದುದೆಂದು ಹೊಗಳಲಾಗಿದೆ (ಕಲಾಅ. ೪೩೪). [ ಚಿತ್ರ + ಕಲೆ₃ ]

**ಚಿತ್ರಕವಿತ್ವ** (ನಾ). [ಕಾವ್ಯಮಿಾ] ಚಮತ್ಕಾರಪೂರ್ಣವಾದ ಶಬ್ದವೈಚಿತ್ರ್ಯವುಳ್ಳ ಕಾವ್ಯ : ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧ' ವೆಂದೂ ಹೆಸರು (ಕೃಬಿಡಿ. ೨೩೪). [ ಚಿತ್ರ + ಕವಿತ್ವ ]

**ಚಿತ್ರಕಶಕ್ತಿ** (ನಾ). ಚಿತ್ರವನ್ನು ಕಲ್ಪನೆ ಮಾಡಿಕೊಳ್ಳುವ ಶಕ್ತಿ ; ಕಲ್ಪನಾಶಕ್ತಿ : ನನ್ನ ಚಿತ್ರಕಶಕ್ತಿ ಉತ್ಪ್ರೇಕ್ಷೆಯನೇರಿ ಬಣ್ಣಬಣ್ಣದ ಬಣ್ಣನೆಗೆ ಒಲಿದಿತು (ಸಚೀಗೀ. ೨೩-೪೪೩) ; ಇಲ್ಲಿನ ವಿಶೇಷತೆ, ಚಿತ್ರಕಶಕ್ತಿ (Fancy) ಯಿಂದ ಪ್ರತಿಮಾನಿರ್ಮಾಣದವರೆಗೆ ಈ ಕಲ್ಪನಾಸೌಂದರ್ಯದಲ್ಲಿ ಮಜಲುಗಳಿವೆ (ಸೌಂದಸ. ೨೪). [ ಚಿತ್ರಕ + ಶಕ್ತಿ ]

**ಚಿತ್ರಕಾಯ** (ನಾ). ೧. ಸುಂದರವಾದ ದೇಹ. ೨. ಹುಲಿ : "ವ್ಯಾಘ್ರಃ . . . ಚಿತ್ರಕಾಯಃ, ಮೃಗಾರಿಃ–ಈ ೭ ಹುಲಿ" (ಹಲಾಯು. ೩೪-೭೬) : ಚಿತ್ರಕಾಯನಂ ತಕ್ಕಿಸಿ ತಂದು ತೋಱಿ ಬಿಡು ಪೋಪ ವ್ಯಾಗಾಳಿಗ (ಅದ್ಭುಟ. ೨-೩೦). ೧, ೨ : ಮತ್ತಮಾ ಮಹಾವನಂ ಯೌವನದಂತೆ ಮದನೋತ್ಕಳಿಕಾಕಮನೀಯಮುಂ ಚಿತ್ರಕಾಯಶೋಭಾಪ್ರಾಯಮುಂ (ಚಂದ್ರಪು. ೩-೩೨ ವ) : ಮತ್ತಮಾ ಮಂಟಪಂ . . . ಚಿತ್ರಕಾಯಾಶ್ರಿತಮಾಗಿಯುಂ ಮೃಗಮದಸಮೃದ್ಧಿಭಾಜನಮುಂ (ಧಾಆಕೀ. ೮-೮ ವ). ೩. ಚಿರತೆ. [ ಚಿತ್ರ + ಕಾಯ ]

**ಚಿತ್ರಕಾಯಾಜಿನ** (ನಾ). ಹುಲಿಯಂ ಚರ್ಮ,-ತೊಗಲು: ಮುಂದೆ ಚಿತ್ರಕಾಯಾಜಿನದ ಸುಲಿವಲ್ಲ ಭಸಿತದ ಜಟಾಭರದ ಮುನಿನಾಥನು . . . ಪರಿಕರಂಗಳಂ ಸವಕಟ್ಟುತಿರಲು ಭೂಪತಿ ಕಂಡನು (ಹಠಕಾ. ೩-೩೪). [ ಚಿತ್ರಕಾಯ + ಅಜಿನ ]

**ಚಿತ್ರಕಾರ** (ನಾ). ಚಿತ್ರವನ್ನು ಬರೆಯುವವನು. [ ಸಂ. ]

**ಚಿತ್ರಕಾವ್ಯ** (ನಾ). [ಕಾವ್ಯಮಿಾ] ವ್ಯಂಗ್ಯಾರ್ಥರಹಿತವಾದ ಕಾವ್ಯರಚನೆ: ರೀತಿಗುಣಾಲಂಕಾರಗಳಿಂದ ಮಾತ್ರ ಕೂಡಿದ ಶಬ್ದಾರ್ಥಗಳು ಒಂದು ಪಕ್ಷ ಕಾವ್ಯವಾದರೂ 'ಚಿತ್ರಕಾವ್ಯ' ವಾಗಬಹುದೇ ಹೊರತು ಉತ್ತಮಕಾವ್ಯವಾಗಲಾರವು (ಕೃಬಿಡಿ. ೦೭೩) ; ವ್ಯಂಗ್ಯಾರ್ಥಶೂನ್ಯವಾದ 'ಚಿತ್ರಕಾವ್ಯ' ವೆಂಬ ಜಾತಿಯನ್ನು ಕುರಿತು ಮಾತಾಡುತ್ತಾ . . . ಎನ್ನುತ್ತಾನೆ (ಭಾರಮಿಾ. ೬೬). [ ಚಿತ್ರ + ಕಾವ್ಯ ]

**ಚಿತ್ರಕುಟಿ** (ನಾ). ಡೇರೆ; ಗುಡಾರ: "ಚಿತ್ರಕುಟಿ ಗುಣಲಯನಿ ದೂಷ್ಯಮನೆ ಗುಡಿಯಕ್ಕು" (ಮಂಗರಾ. ೫೩-೨೭). [ ಚಿತ್ರ + ಕುಟಿ₂ ]

**ಚಿತ್ರಕೃತಿ** (ನಾ). ೧. ಚಿತ್ರರಚನೆ ; ಚಿತ್ರ. ೨. ವೈವಿಧ್ಯಪೂರ್ಣವಾದ ಕೃತಿ. ೧,೨: ಚಿತ್ರಕರಂಬೊಲ್ವರಭಾಗಭಾವವಿಲಸದ್ವರ್ಣಕ್ರಮಾವೃತ್ತಿಯಿಂ ಪ್ರಕಟಂಮಾಡಿರೆ ಪೇಟ್ದ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ (ಕವಿರಾ. ೧-೧೪೪). [ ಚಿತ್ರ + ಕೃತಿ₁ ]

**ಚಿತ್ರಗತಿ** (ನಾ). ಆಶ್ಚರ್ಯಕರವಾದ ಚಲನೆ,-ಗಮನ : ಬರಿಕೈಯ ಲೌಡಿಯ ವಜ್ರಮುಷ್ಟಿಗಳ ನಾಳಿವಿಲುಗಳ ರಾಯಹೋಧರ ಮೇಳವಣೆಗಳ ಚಿತ್ರಗತಿ ಶುಂಡಾಲವನು ನೋಡಿದರು ಗಜಸೇನಾಸಮುದ್ರದಲಿ(ಕುಮಾ.ಉ. ೧೧-೧೪): ಉರುತೆಱದ ಮೂದೆಱದ ಕೈದುಕಾಱರು ಸಿಂಗವಱಿಗಳೆನೆ ಕಡುಕೆಯಿದು ಹೊಣಿಸಿ ಪಟಾರಿಸುತೆ ಮಾಗಿತಿ(ನಿ) ಚಿತ್ರಗತಿಯಿಂ (ಸಾಳ್ವಭಾ. ೨೩.೦೪) ; ಪದ್ಯಕಾವ್ಯದ ಶಬ್ದಯೋಜನೆಯಲ್ಲಿ ಧ್ವನಿಯ ಮಾತೊಂದು ಹುದುಗಿ ಬರುವದು, ಚಿತ್ರಗತಿಯ ಮಾತೊಂದು ಸಮರಸವಾಗಿ ಸೇರಿ ಬರುವದು (ಸಾಹಿವಿ. ೬೨). [ ಚಿತ್ರ + ಗತಿ ]

**ಚಿತ್ರಗಾರ** (ನಾ).=ಚಿತ್ರಕಾರ : ನನ್ನ ಚಿತ್ರದೊಳಿರುವ ಚಿತ್ರಗಾರನು ಬರೆದ ಚಿತ್ರಕೆ ಬಹದೆಂದೊ ಜೀವಕಳೆ? (ಸಚೀಗೀ. ೨೮-೩೨೦) ; ಅವನು ನಮ್ಮ ಪತ್ರಿಕೆಯ ಚಿತ್ರಗಾರನಾಗಬಹುದು (ಶಾಈಮ. ೪೩) ; ಕತ್ತೆ ಚಿತ್ರಗಾರನ ವಿಂಡ (ಗಾದೆ). [ <ಸಂ. ಚಿತ್ರಕಾರ ]

**ಚಿತ್ರಗೀತೆ** (ನಾ). ಚಲನಚಿತ್ರದ ಗೀತೆ ; ಸಿನಿಮಾಹಾಡು : ಆ ಚಿತ್ರಗೀತೆಯು ಬಿಟ್ಟಾವುದಿದ್ದರು ಶ್ರವಣಾರ್ಹವಲ್ಲವೆನ್ನುವರು (ಚಂದ್ರವೀ.೨-೯೬). [ ಚಿತ್ರ + ಗೀತೆ ]

**ಚಿತ್ರಗುಪ್ತ** (ನಾ). ೧. ಮಂನುಷ್ಯರು ಮಾಡುವ ಪಾಪಪುಣ್ಯದ ಕರ್ಮಗಳನ್ನು ಬರೆದಿಡುವನೆಂದು ನಂಬಲಾದ ಯಮಲೋಕದ ಗುಮಾಸ್ತ: ಯಮನ ಭಟರು ಕರುಣರಸಮಯರೆ ಮಱವೆಯೆ ಚಿತ್ರಗುಪ್ತರಿಗೆ (ಕೃವಲ್ಲ. ೩೯-೨) ; ನಿನ್ನ ಕೃಪೆ ಎಂದಾಗ'ಬ್ರಿಟಿಷ್'ಪ್ರಭುತ್ವ ಎಂದೇ ಇತ್ತು ಎಂದು ಚಿತ್ರಗುಪ್ತನು ಬರೆದುಕೊಂಡನಂತೆ (ಪುಷ್ಪ. ೫೦). ೨. (ಆಲಂ) ಚಾಡಿಕೋರ ; ಪಿಸುಣ : ಅಧಿಕಾರವಲಯಗಳಲ್ಲಿ ನಡೆಯುವ ಘಟನೆಗಳನ್ನು ಈ ಚಿತ್ರಗುಪ್ತನು ಮೇಲಧಿಕಾರಿಗಳಿಗೆ ವರದಿ ಮಾಡುತ್ತಾನೆ (ಋಢಿ). [ ಸಂ. ]

**ಚಿತ್ರಗೃಹ** (ನಾ). ಚಿತ್ರಗಳನ್ನು ಬರೆದಿಡುವ ಸ್ಥಳ ; ಚಿತ್ರಶಾಲೆ : ಅದೇ ಮನೆಯ ಚಿತ್ರಗೃಹದಲ್ಲಿ ಅವನನ್ನು ಬಂದಿಯಾಗಿ ಮಾಡಿದ್ದನು (ಬಂಕಿಮ. ೦೮೦). [ ಚಿತ್ರ + ಗೃಹ ]

**ಚಿತ್ರಗೆಲಸ** (ನಾ). ಚಿತ್ರಗಳನ್ನು ಬರೆಯುವ ಕೆಲಸ ; ಕುಸುರಿಗೆಲಸ : ಬರಿಸು ನಾನಾದೇಶದ ಚಿತ್ರಗೆಲಸದವರ ವಿಶ್ವಕರ್ಮ ಸಂತತಿಯ (ಕಂನವಿ. ೨೦-೮). [ ಚಿತ್ರ + ಕೆಲಸ ]

**ಚುರಿಮುರಿ** 'ಚುರುಮುರಿ' ನೋ.

**ಚುರುಕ** (ನಾ). ಚುರುಕುಳ್ಳವನು; ಜಾಣ; ಕುಶಾಗ್ರಮತಿ: ಶಾನಭಾಗರು ಆಟದಲ್ಲಿ ತುಂಬ ಚುರುಕರು (ಮೂರುದಾ. ೮) : ತಮ್ಮ ಕೆಲಸದಲ್ಲಿ ಇವರು ಇಷ್ಟು ಚುರುಕರಿರಬಹುದು ಎಂದು ಅನಿಸಿರಲೇ ಇಲ್ಲ (ಅಬೋಲೀ. ೦೦೩). [ ಚುರುಕು (<ಚುಱುಕು) + – ಅ$_7$ ]

**ಚುರುಕು** 'ಚುಱುಕು' ನೋ.

**ಚುರುಕುಗೊಳಿಸು** (ಕ್ರಿ). ತೀಕ್ಷ್ಣಗೊಳಿಸು ; ಜಾಗ್ರತಗೊಳಿಸು ; ತೀವ್ರಗೊಳಿಸು: ಬರಲಿರುವ ಅನುಭವವನ್ನು ಸಮಗ್ರವಾಗಿ ಸ್ವೀಕರಿಸಲು ಇಂದ್ರಿಯಗಳನ್ನೆಲ್ಲಾ ಚುರುಕುಗೊಳಿಸಿ ಕುಳಿತಿದ್ದರು (ಬೆಕಂಬಾ. ೨); ನಡೆಯನ್ನು ಮತ್ತಷ್ಟು ಚುರುಕುಗೊಳಿಸಿ, ಆ ಬಾಲಕನನ್ನು ಸಮಿಪಿಸಿ (ಬೆಕಂಬಾ. ೨೬). [ ಚುರುಕು (<ಚುಱುಕು) + ಕೊಳ್$_1$ + – ಇಸು$_3$ ]

**ಚುರುಕುತನ** (ನಾ). ಚಾಣಾಕ್ಷತೆ ; ಬುದ್ಧಿವಂತಿಕೆ ; ಚಾಲಾಕಿ : ಅವಳಿಗೆ ಬಹಳ ಚುರುಕುತನವಿದೆ (ರೂಢಿ). [ ಚುರುಕು (<ಚುಱುಕು) + – ತನ ]

**ಚುರುಕುದೃಷ್ಟಿ** (ನಾ). ತೀಕ್ಷ್ಣವಾದ ನೋಟ ; ಸೂಕ್ಷ್ಮವಾದ ದೃಷ್ಟಿ : ಇತರ ಪ್ರಾಣಿಗಳು ನಮಗಿಂತ ಚುರುಕುದೃಷ್ಟಿಯನ್ನು ಹೊಂದಿವೆ (ಮನೋಸಂ. ೦೮೩). [ ಚುರುಕು (<ಚುಱುಕು) + ದೃಷ್ಟಿ ]

**ಚುರುಕುಬುದ್ಧಿ** (ನಾ). ಕುಶಾಗ್ರಬುದ್ಧಿ ; ಸೂಕ್ಷ್ಮಬುದ್ಧಿ : ಅವನು ಚುರುಕುಬುದ್ಧಿಯವನು (ರೂಢಿ). [ ಚುರುಕು(<ಚುಱುಕು) + ಬುದ್ಧಿ ]

**ಚುರುಕೆ** (ನಾ). ಒಂದು ಬಗೆಯ ಔಷಧಿ ಸಸ್ಯ : ಬೆಳ್ಳುಳ್ಳಿ ಚುರುಕೆಯ ಸೊಪ್ಪು ಇವಂ ಸಮಭಾಗ ಮಾಡಿ ಅರೆದು (ಅಶ್ವಶಾ. ೫೧-೧೧). [ ? ]

**ಚುರುಕೆನ್** (ಕ್ರಿ). ೧. ಬಿಸಿಯಾಗು ; ಕಾವೇರು. ೨. ಸಂಕಟವಾಗು : ತಳಮಳವಾಗು : ಈ ವಿಧದ ಕಷ್ಟಮಂ ಏಕೆ ನೀ ಕೊಟ್ಟೆ ನೋಡುವರ ಮನವೆಂತು ನಿಮಗೆ ಚುರುಕೆನದೆ (ಶರಲೀ. ೦೬೧-೦೩) ; ತನ್ನಯ ವಡಲು ಚುರುಕೆನದೆ (ಶರಿಶ. ೯೬-೯). [ ಚುರುಕು (<ಚುಱುಕು) + ಎನ್$_1$ ]

**ಚುರುಗುಟ್ಟು** (ಕ್ರಿ). ೧. ನೋಯು ; ಸಂಕಟವಾಗು : ಒಂದೊಂದು ಸಂಗತಿಯನ್ನೂ ಕೇಳುತ್ತ ಹೋದಂತೆ, ನನ್ನ ಹೃದಯವು ಚುರುಗುಟ್ಟುತ್ತ ನಡೆಯಿತು (ಅನಜೀ. ೩೩) ; ಆ ಮಾತಿಗೆ ಶೆಟ್ಟರ ಹೃದಯ ಒಮ್ಮೆ ಚುರುಗುಟ್ಟಿದಂತಾಗಿತ್ತು (ಹೊಸಕ್ಷ. ೩೪). ೨. ಹಸಿವೆಯಾಗು : ಬಸ್ಸಿನ ಪ್ರಯಾಣದಿಂದ ಅರ್ಧ ಹೊಟ್ಟೆ ಚುರುಗುಟ್ಟುತ್ತಿತ್ತು (ಬದುಬ್ಬಿ. ೨೦); ಹೊಟ್ಟೆ ಚುರುಗುಟ್ಟಿದಾಗಲೊಮ್ಮೆ ಆ ಸಮಸ್ಯೆ . . . ಹೆಡೆಯಾಡುತ್ತಿತ್ತು (ಹಾಡುಹು. ೨೨). [ <ಚುಱುಕು + ಕುಟ್ಟು$_1$ ]

**ಚುರುಗುಡು** (ಕ್ರಿ). ಬಿಸಿ ತಾಗು ; ಸುಡು : ಭಾದ್ರಪದ ಮಾಸ. ಮೈ ಚುರುಗುಡುವಂತಹ ಬಿಸಿಲು (ಜಮೀನ್ನಾ. ೧). [ <ಚುಱುಕು +.ಕುಡು$_1$(<ಕೊಡು$_1$) ]

**ಚುರುಚುರಕೆಗಿಡ** (ನಾ). ಒಂದು ಬಗೆಯ ಔಷಧಿ ಸಸ್ಯ : (ಮೃಶಿಗಿ. ೬೬-೦೩೬೪). [ ಚುರುಚುರಕೆ$_0$ + ಗಿಡ(<ಗಿಡು) ]

**ಚುರುಚುರು** (ನಾ). ೧. ಕುದಿಯುವ ಇಲ್ಲವೆ ಉರಿಯುವ ಸದ್ದು ೨. ಸುಡುವ ವಸ್ತುವನ್ನು ಮುಟ್ಟಿದಾಗ ಉಂಟಾಗುವ ನೋವನ್ನು ಸೂಚಿಸುವ ಅನುಕರಣ ಶಬ್ದ : ಬೆಳಗಿನ ಎಂಟುಗಂಟೆ ಬಿಸಿಲು ಇನ್ನೂ ಚುರುಚುರು ಅನ್ನುವುದಿಲ್ಲವಲ್ಲಾ ಎಂದು ವಟಗುಟ್ಟುತ್ತಿದ್ದರು (ಹುಟ್ಟುಹ. ೦೬೬) ; ಬೆಂಕಿ ತಗುಲಿ ಕೈ ಇನ್ನೂ ಚುರುಚುರು ಎನ್ನುತ್ತಿದೆ (ರೂಢಿ).

**ಚುರುಚುರುಗುಟ್ಟು** (ಕ್ರಿ). ೧. ಬಿಸಿ ಮುಟ್ಟಿ ಬಾಧೆಯಾಗು; ಉರಿ ತಾಗಿ ನೋವಾಗು: ಬೆಂಕಿಗೆ ಕೈ ತಗುಲಿ ಚುರುಚುರುಗುಟ್ಟುತ್ತಿದೆ (ರೂಢಿ). ೨. ತೀವ್ರವಾದ ವೇದನೆಗೊಳಗಾಗು : (೬). [ ಚುರುಚುರು+ಕುಟ್ಟು$_1$ ]

**ಚುರುಚುರೆನ್ನು** (ಕ್ರಿ). = ಚುರುಚುರುಗುಟ್ಟು ೨ : (೬). [ ಚುರುಚುರು + ಎನ್ನು(<ಎನ್$_1$) ]

**ಚುರುಟು**, ಚಿರೂಟು, ಚುಟ್ಟ$_1$, ಚುಟ್ಟಾ, ಚುರೂಟು (ನಾ). ಒಂದು ಬಗೆಯ ಹೊಗೆಬತ್ತಿ; ಹೊಗೆಸೊಪ್ಪನ್ನು ಎಲೆಯಲ್ಲಿ ಸುತ್ತಿ ಮಾಡಿದ ಬೀಡಿ : ಚುರುಟು ಬಾಯಿಗಿಟ್ಟು ಬೆಂಕಿಪೆಟ್ಟಿಗೆ ಹುಡುಕುವವನು . . . ಕಡ್ಡಿ ಹಚ್ಚಿ ಚುರುಟು ಹೊತ್ತಿಸುವವನು (ಜೀವಮ. ೯೩). **ಚಿರೂಟು :** ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ, ತ್ರಿಪುಂಡ್ರಕಧಾರಿಯಾದ ಔರಂಗಜೇಬನೂ ಇತಿಹಾಸಕ್ಕೊಂದು ಹೊಸಮುಖವನ್ನು ತಂದುಕೊಟ್ಟರು (ಗಾಳಿಪ. ೭೦); ಎಡ ಬದಿಯಿಂದ ಚಿರೂಟಿನ ವಾಸನೆಯ ಜೊತೆಗೆ ಒಂದು ಗಂಡಸು-ಧ್ವನಿ ಅವಳನ್ನು ಇಂಗ್ಲಿಷಿನಲ್ಲಿ ಕೇಳಿತು (ಕೃತಿಜ. ೪). **ಚುಟ್ಟ$_1$ :** ಅವನು ಚುಟ್ಟ ಸೇದುತ್ತಿದ್ದಾನೆ (ರೂಢಿ). **ಚುಟ್ಟಾ :** ಕೆಲವರು . . . ಚುಟ್ಟಾ ಸಿಗರೇಟುಗಳನ್ನು ಸೇದುತ್ತಾ ಊರಿನ ಸಮಾಚಾರಗಳನ್ನು ಚರ್ಚಿಸುತ್ತಲಿದ್ದರು (ನಿಷ್ಕಾಮ. ೧೧) ; 'ಚುಟ್ಟಾ' ಸೇದುವದನ್ನು ಒಮ್ಮೆ ನಿಶ್ಚಯಿಸಿ ಬಿಟ್ಟಿದ್ದಾನೆ (ಹಿಂದುಟಿ. ೩೪). **ಚುರೂಟು :** ಬಹಳ ಆದರದಿಂದ ಸರ್ವೋತ್ಕೃಷ್ಟವಾದ ಚುರೂಟುಗಳನ್ನು ಮುಂದಿಟ್ಟನು (ಕಳ್ಳಕಾ. ೩೪). 'ಸುರುಂಟು' ಪರಾ. [ <ಸುರುಂಟು./ತಮಿ. ಮಲ. ಚುರುಟ್ಟು./ಇಂ. Cheroot ]

**ಚುರುಮರಿ** 'ಚುರುಮುರಿ' ನೋ.

**ಚುರುಮುರಿ**, ಚುನಮರಿ, ಚುರಮರಿ, ಚುರಮುರಿ, ಚುರಿಮುರಿ, ಚುರುಮರಿ (ನಾ). (ಉಕ) ನೆನಸಿದ ಬತ್ತವನ್ನು ಹುರಿದು ಮಾಡುವ ಅರಳು ; ಮಂಡಕ್ಕಿ ; ಪುರಿ : ವೇಣಾ ಅಲ್ಲಿ ಹೊತ್ತು ಮಾರುತ್ತಿದ್ದವನಿಂದ 'ಅಲ್ಲೀಪಾಕ–ಚುರುಮುರಿ' ಕೊಂಡುಕೊಂಡಿದ್ದಳು (ನಿರೀಕ್ಷೆ. ೯೬) ; ಅವರ ಮೇಲೆ ಚುರುಮುರಿ ಬತ್ತಾಸು ತೂರಿದರು (ಕಥಪು. ೬-೧೯). **ಚುನಮರಿ :** ಥಳಿ ಮೇಲೆ ಡಬ್ಬಿಯೊಳಗೆ ಉಂಡಿ, ಚುನಮರಿ . . . ಅದಾವ ತಂದುಕೊಡು (ಅಹೋಳ. ೪೦). **ಚುರಮರಿ :** ವಿಠಾಯಿಗಾರನಲ್ಲಿ ಚುರಮರಿಯನ್ನು ಕೊಂಡರು (ಹೂಬಿಸಿ. ೩) ; ಹೌದಿನೊಳಗೆ ಮಿಾನಗಳಿದ್ದವು. ಅವಕ್ಕೆ ಚುರಮರಿ ತಿನ್ನಿಸುವುದು ಇವರ ಒಂದು ಕೆಲಸವಾಗಿತ್ತು (ಇಪ್ಪಕ. ೩೦೬). **ಚುರಮುರಿ :** ಅವಲಕ್ಕೀ ಕುಟ್ಟುವದು, ಚುರಮುರೀ ಹುರಿಯುವದು, ಇವೇ ಇವರ ಕಾಲದ ಹೋರಿಗೆಗಳು (ಕಭಾಗಿ. ೦೦೩): ಗುರವ್ವನ ಅಂಗಡಿಗೆ ಹೋಗಿ ಒಂದು ಪಾವು ಚುರಮುರಿ ತಕ್ಕೊಂಡು ಬಾ (ತಿಡುಗು. ೪೬). **ಚುರಿಮುರಿ:** ಚುರಿಮುರಿಯೆಂದು ಅವಲಕ್ಕಿಯನ್ನು ಶರ್ಕರೆ ಸಹಿತ ದೇವರಿಗನ್ನು ಮಾಡಿರಿ (ಕವಿಚ. III, ೧೬೯ ಮುನ್ನಾಣಿಸ್ಕ). **ಚುರುಮರಿ :** ಅವನು ಚುರುಮರಿ ದಾಣೆಗಳನ್ನು ಸಂಗ್ರಹಿಸಿ ತನ್ನ ಹತ್ತಿರ ಇಟ್ಟುಕೊಳುತ್ತಿದ್ದ (ಭಲಸಂ. ೧೮) ; ಬಿಸೀ ಚುರುಮರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ (ನಂಮು. ೦೩-೩). [ ←ಮರಾ. ಚುರ್‌ಮುರಾ, ಕುರ್‌ಮುರಾ ]

**ಚುರುಳೊಮುದು** (ನಾ). ವೀಳೆಯದೆಲೆ ಮತ್ತು ಅಡಿಕೆ ; ತಾಂಬೂಲ : ಆ ಕೈಂಕರ್ಯಗಳ ದಾನಗಟ್ಟಳೆಯು ವಿವರ ಪ್ರತಿದಿನ ೧ಕ್ಕೆ . . . ಅರ್ಧ ಪರಪಮುದು ಕಟಿಯಮುದು ನೈಯಮುದು ಚುರುಳೊಮುದು ಸಹ ವರ್ಷ ೧ಕ್ಕೆ ಸಲುವುದು (ಎಕ. XIV, ಶ್ರೀರಂಗ. ೯೩-೨ ; 1535). [ ←ತಮಿ. ಚುರುಳಮುದು ]

**ಚುರೂಟು** 'ಚುರುಟು' ನೋ.

**ಚುರ್ಕಿ** 'ಸುರ್ಕಿ' ನೋ.

**ಚುರ್ಕಿಗಾರೆ** 'ಸುರ್ಕಿಗಾರೆ' ನೋ.

**ಚುರ್ಚೆ** (ನಾ). ಕಣ್ಣು ಉರಿಯುವ ಒಂದು ಬಗೆಯ ರೋಗ ; ಉರಿಗಣ್ಣು : ಮೃಲಿಗೆಗಣ್ಣೊ ವಾತದಿಂ ಬಲಿದ ಕಣ್ಣೊ ಕುಟಿಯಗಣ್ಣೊ ಚುರ್ಚೆಯಗಣ್ಣೊ . . . ಇದಕ್ಕೆ ತಿಳಿಯೆನೇನಂ ಮರ್ದಂ (ಮಹಾವಿ. ೬-೩೦). [ <ಚುರ್ಚು$_2$ ]

**ಚುರ್ಚು₁**, ಚುಚ್ಚು₁ (ಕ್ರಿ). ೧. ಆಯುಧ, ಮುಳ್ಳು, ಕೊಕ್ಕು ಮುಂತಾದುವುಗಳಿಂದ ತಿವಿ,—ಇರಿ : " ಸುಡುವಲ್ಲಿ ತಿವಿವಲ್ಲಿ ಚುರ್ಚು " (ಶಬ್ದಮಂ. ೮೬); ಸೇನೆಯುಂ ಮುತ್ತಿದುವು ಕುತ್ತಿದುವು ರವಿರಥತುರಂಗಮಂ ಚುರ್ಚಿದುವು . . . ಬಾಣಂಗಳು (ಜಬಪು. ೨೫-೧೮) : ಚುರ್ಚೆ ಮಹಿಶೂರ ಬಾಣಮಿದಿರ್ಚದೆ ಕೆಟದಿಯುವರೆಬಿಗಿ ನರಪತಿಗೆ ಕರ್ಚಿದರಡಿಯುಂಗುಟಮಂ (ಅಪ್ರತಿ. ೫೮-೫೩) ; ಚುಚ್ಚುಗವನ್ನು ಚುರ್ಚಿ ತೆಗೆದಳು. ಅದರ ಜೊತೆಗೆ ವಿಡಿನಾಗರ ಹಾವು ಬಂದಿತು! (ಚಂದಜೀ. ೦೨೩). **ಚುಚ್ಚು₁** : ೧. ನಿಡಿಯ ನಾಲಗೆಯುಂ ಪಿಡಿದು ಪೆಡತಲೆಯುಂ ತೆಗೆದೆರಡು ಕೆಯ್ಯೊಳ್ ಮುಚ್ಚಿ ಚು[ಪಾಠಾಂ. ಮು]ಚ್ಚುತ್ತುಂ (ಅಜಿಪು. ೧೧-೧೦ ವ) ; ಮೆಲ್ಲಮೆಲ್ಲನೆ ಸೀಳಿ ರೆಮ್ಮಯ್ಯ ದಮ್ಮಯ್ಯ ಮೆಲ್ಲಮೆಲ್ಲನೆ ಚುಚ್ಚಿರೆಮ್ಮಯ್ಯ ದಮ್ಮಯ್ಯ (ಸಾನಂದ. ೪-೩೧೦) ; ಶರದಲಿ ಚುಚ್ಚಿದನು ಜೀಕುಳಿಯ ಬಿಟ್ಟನು ನೆತ್ತರನು ನೆಲಕೆ (ಕುವ್ಯಾಳ. ೩-೩೧) ; ಮೊನೆನೋಟದಿಂ ಚುಚ್ಚಿ ಬೆಳ್ಳಿ ನೋಡುವಳು (ಕಾಲೂರ. ೪೨-೫೪) ; ಪ್ರಾಣಿಗಳ ಚರ್ಮದೊಳಕ್ಕೆ ಚುಚ್ಚಿ . . . ರಕ್ತ ವನ್ನು ಹೀರುತ್ತವೆ (ಕೀಟಬಿ. ೭೪). ೨. ತೂತುಮಾಡು ; ರಂಧ್ರಮಾಡು: ಒತ್ತಿ ಮೂಗಂ ಚುಚ್ಚಿ ನಸ್ಸಿತಂ (ಮಂಗರಾ. ೫೩-೨) ; ಇಪ್ಪೊತ್ತು ಮಗುವಿಗೆ ಕಿವಿ ಚುಚ್ಚಲಾಯಿತು (ರೂಢಿ). ೩. ಕಟಕಿಯ ಮಾತನಾಡು : ಬಸವಂತಿ ಕೂತು ಮಯ್ಯಲಿಕೆ ಬಂದವಳೆಂದು ಚುಚ್ಚುತ್ತಿದ್ದಳು (ದೀಪಹ. II, ೧೪೧).

**ಚುಚ್ಚಿಕೊಡು** = ೧. ಚಾಡಿಹೇಳು ; ಎತ್ತಿಕಟ್ಟು ; ಪ್ರಚೋದಿಸು : ಒಚ್ಚತಯಿಲ್ಲೆನಲಾಗುವುದು ಕಾಲವೊಂದಚ್ಚಿ ಕರ್ಮಗಳತ್ತ ತಹುದು ಚುಚ್ಚಿ ಕೊಡುವರಂತೆ ಪುದ್ಗಲಪರಿಣತಿಗಚ್ಚಾದ ಕಾರಣದಿಂದ (ಭರತ. ೬೮-೪೨) ; ನೆರೆಹೊರೆಯ ಹೆಂಗಸರು ನಾಗಮ್ಮನಿಗೆ ಚುಚ್ಚಿಕೊಡುತ್ತಿದ್ದುದಲ್ಲದೆ ಆ ಗುಂಡಪ್ಪನ ನಾಚಿಕೆ ಇಲ್ಲದೆ ವರ್ತನೆಗೆ ಹೇಸುತ್ತಿದ್ದರು (ಜಾಗಿನ. ೩೨). ೨. ಹೇಳಿಕೊಡಂ ; ಗುಟ್ಟಾಗಿ ತಿಳಿಸು : ತರಗತಿಯಲ್ಲಿ ಉತ್ತರ ಚುಚ್ಚಿ ಕೊಡುವ ವಿಷಯವಾಗಿ ದೊಡ್ಡ ದೊಂದು ಚರ್ಚೆಯೇ ನಡೆಯಿತು (ಜಾಲಿಮ. ೨೦). **ಚುರ್ಚಿನುಡಿ, ಚುಚ್ಚುನುಡಿ** = ಮನಸ್ಸಿಗೆ ನಾಟುವಂತೆ ಮಾತನಾಡು : " ಚುರ್ಚಿನುಡಿ—ಮರ್ಮೋದ್ಘಾಟನೆಯ ಮಾತುಗಳ ನ್ನಾಡು, ಒತ್ತಿಹೇಳು " (ಪ್ರಭಣ್ಣ) ; ನೃಪನ ಮರ್ಮವ ಚುಚ್ಚಿನುಡಿದನು ಘಾಸಿ ಮಾಡಿದನಾ ನೃಪಾಲಕನ (ಕುವ್ಯಾಳ. ೦೩-೨೯) ; ಹುಚ್ಚನೆಂದರು, ಲುಚ್ಚನೆಂದರು . . . ಚುಚ್ಚಿ ನುಡಿದರು (ಕಏಪು. ೨೦-೨).

[ ದೇ.॥ ತುಳು. ಚುಚ್ಚು ; ತೆಲು. ಚೊರ್ಚು, ಚೊಚ್ಚು ; ಕೊಲಾ. ಚೊಚ್ಚಿಲ್ಲು, ಚೊಟ್ಟೆಂಚು, ಚೊಸ್ಸು ]

**ಚುರ್ಚು₂**, ಚುಚ್ಚು₂, ಚುಟ್ಟು (ಕ್ರಿ). ಸುಡು ; ದಹಿಸು : " ಚುರ್ಚು ದಾಹೇ (ಉರಿ) " (ಶಮಧಾ) ; " ಸುಡುವುದುಂ ಚುರ್ಚಿನಲ್ಕುವ್ಪುದು " (ಕದ್ವಿಳ್ಳ. ೧೪) ; " ಚುರ್ಚೆಂಬುದು ತಾನೊಗೆಗುಂ ದಹಿಪರ್ಥದಲ್ಲಿಯತಿಭರ ದಿಂದಂ " (ಕವಿಕಂ. ೩೫) ; ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚು ವರುಂ (ಆದಿಪು. ೫-೮೫ ವ) ; ಚುರ್ಚಿದವೊಲ್ ಬಿಸಿಲಳುರೆ ಕಿಮುಟ್ಟಿದ ತಳಿರಂತೆ ನೊಂದು (ಶಮದ. ೨೪ ಪ್ರಯೋ); ನರಿ ನಾಯ್ ಮೊದಲಾದುವಡಸಿ ಪಿಡಿದೆಡೆಯೊಳ್ ನೆತ್ತರನೊತ್ತಿ ಕಳೆದು ಬಟಿಯುಂ ಭರದಿಂ ಚುರ್ಚುವುದು ಕಾಯ್ದ ಕರ್ಬುನದಿಂದಂ(ಶಮದ. ೧೩-೪); ವಿರಹಶಿಖಿ ದವಶಿಖಿ ಚುರ್ಚುಗುಂ (ರಾಜಶೇ. ೭-೮೩) ; ನೀರೊಳ್ ಕಿರ್ಚು ಚುರ್ಚುಗುಮೇ ? (ರಾಮಾಶ್ವ.೩-೧). **ಚುಚ್ಚು₂** : " ಚುಚ್ಚಿನಲು ಸುಡುವುದುಂ " (ಕಶರ. ೩೬) ; ಕೊಳ್ಳಿಯೊಳ್ ಪಿರಿದುಂ ಚುಚ್ಚುವುದುಂ (ಸುಕುಮಾ. ೦೧-೪೭ ವ) ; ಬಾಗಿಲಿಕ್ಕಿದು ಹೊಟಗೆ ಮುದ್ರಿಸಿ ಕಿಚ್ಚ ಚುಚ್ಚುವ ಪರುಠವಣೆಯಲಿ ಖಳ ಪುರೋಚನ ನಂದು ನಿರ್ಮಿಸಿದ (ಕುವ್ಯಾಆ. ೮-೭೦). △ **ಚುಟ್ಟು** : ಚುಟ್ಟಿದ ತೆಱದಿಂ ಪುಸಿಗಳನುಟ್ಟುವನಿವನೆಂದು ಕಾಯ್ದ ಕರ್ಬುನದಿಂದಂ ಚುಟ್ಟಿ (ಸುಕುಮಾ. ೦೧-೪೪). [ ? ]

**ಚುರ್ಚುಂಗೊಳ್ಳಿ**, ಚುಂರ್ಚುಗೊಳ್ಳಿ (ನಾ). ಉರಿಯುವ ಕೊಳ್ಳಿ; ಸೂಟಿ ಚುರ್ಚುಂಗೊಳ್ಳಿ, ಇರ್ಕುಂಗೂಟ್ (ಶಮದ. ೦೭೦ ಪ್ರಯೋ) : ಚುರ್ಚುವ ಕೊಳ್ಳಿ, ಚುರ್ಚುಂಗೊಳ್ಳಿ (ಶಬ್ದಾನು. ೩೪೫ ಪ್ರಯೋ). **ಚುರ್ಚುಗೊಳ್ಳಿ** : ಎಂತು ಪಿಡಿದ ಚುರ್ಚುಗೊಳ್ಳಿ ಗಾಳಿ ಸೋಕೆ ಸುಡುವುದೋ . . . ಅಂತು ಪೆಣ್ಣ ಸೇರ್ಕೆ ಕೇಡಿಗಕ್ಕುಮಲ್ತೆ (ಸಾನಂದ. ೮-೬೦). [ಚುರ್ಚು₂ + ಕೊಳ್ಳಿ₁]

**ಚುರ್ಚುಗೊಳ್ಳಿ** 'ಚುರ್ಚುಂಗೊಳ್ಳಿ' ನೋ.

**ಚುರ್ಚುವಾಯ್** (ಕ್ರಿ). ತಿವಿಯಲೆಂದು ಮೇಲೆ ಬೀಳಂ,—ಎದುರಿಗೆ ಬರು : ಶತಜೀವಿ ಎಂಬಾದೇಶಮಂ ಕೇಳ್ದು ಭರದಿಂದಂ ಚುರ್ಚು ವಾಯ್ದುಂ ಪೊಗಳೆ ಬಾಧಜನಂ ಬಂದ ಕಾವೇರಿಯೊಳ್ . . . ಅಸ್ತು ಚುರ್ಚುವಾಯ್ದು ಬದ್ದುರ್ಜಿಕ್ಕಿದನ್ (ಎಕ. VII, ಶಿಮೊ. ೪-೪೦; 1122).

[ ಚುರ್ಚು₁ + ಪಾಯ್₁ ]

**ಚುರ್ಚೆ** (ನಾ). ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ . . . ಚುರ್ಚೆ, ಬೆಳ್ಳಾಲೆ . . . ಮುಂತಾದ ಗಗನಚುಂಬಿತ ವೃಕ್ಷಗಳು (ಹಂಜಪಂ. ೨). [ ? ]

**ಚುಲ್** 'ಸೂಲ್' ನೋ.

**ಚುಲಕ**, ಚುಳಕ₂ (ನಾ). ಅಂಗೈ; ಕುಡಿತೆ: ಕಯ್ಪಿಟ್ಟಿ, ಚುಲಕದ ಮುದ್ರಿಕೆ ಯನ್ನಾತನಿಗೆ ನೀಡುವನು (ಮಂತ್ರಶ. ೧೩೦-೧೧). **ಚುಳಕ₂** : ಚುಳಕ ಪ್ರಮಾಣಮಾದೊಡಮುಳಿಯದವೋಲ್ ದುಗ್ಧವಾರ್ದಿಜಳಮಂ ಮೊಗೆ ದರ್ . . . ದಿವಿಜರ್ (ಬಾಥಪು. ೮-೯೭). 'ಚುಳಕಪಾನ' ಪರಾ. [ಸಂ.]

**ಚುಲಕತನ** 'ಚುಲುಕುತನ' ನೋ.

**ಚುಲಕಬುದ್ಧಿ** 'ಚುಲುಕಂಬುದ್ಧಿ' ನೋ.

**ಚುಲುಕ**, ಚುಳುಕ (ನಾ). ೧. = ಚುಲಕ : ಬಿಸಿಲ ನಡಗೆಯಲಿ ಜನಿತ ವಿಸ್ಮೃತಿಯ್ಯದೆ ಮಸ್ತಕವನು ಚುಲುಕಸಲಿಲದೊಳಗೊತ್ತಲು (ವಿವೇಕ. ೮-೫). **ಚುಳುಕ** : ೧. ದಿಗ್ಗಜಮಂ ಪಡೆ ಪಾಯ್ದ ವಾರ್ಧಿಯಂ ಚುಳುಕ ದೊಳಾಂಪ . . . ಅಳವಂ ಸಮಂತು ತಳೆದು (ಚಂದ್ರಪು. ೬-೨೮) ; ಅಗಸ್ತ್ಯಂಗೆ ಚುಳುಕಮಾತ್ರಂ ಭವಸಾಗರಶತಂ (ಅನಂಪು. ೧೭-೪೪). ೨. ಕಾಡಿಗೆ, ಮುಲಾಮು ಮುಂತಾದುವುಗಳನ್ನು ಹಾಕಿಡುವ ಸಣ್ಣ ಪಾತ್ರೆ ; ಭರಣಿ. [ ಸಂ. ]

**ಚುಲುಕು** 'ಚುಳುಕು' ನೋ.

**ಚುಲುಕುಗಾಣು** (ಕ್ರಿ). ಹಗುರವಾಗಿ ಕಾಣು ; ಕಡೆಗಣಿಸು ; ಅಲಕ್ಷ್ಯ ಮಾಡು : ಬೆಳೆವಾಗ ಗೆಲವು ವಿಡಾಯುಗಳವಗೊಡವೆಳೆದು ಬಂದುವು ಸಾಜವಾಗಿ ಬೆಳೆದ ಮೇಲೀ ಸಿರಿ ಬಂದ ಮೇಲವನಾರ ಚುಲು[ಪಾಠಾಂ.ಳು]ಕು ಗಾಣನೆ (ಭರತ. ೩೦-೨೪).

[ ಚುಲುಕು (<ಚುಳುಕು) + ಕಾಣು (<ಕಾಣ್) ]

**ಚುಲುಕುತನ**, ಚುಲಕತನ (ನಾ). ಗಂಭೀರವಲ್ಲದ ನಡತೆ; ಹಗುರವಾದ ನಡತೆ ; ಲಾಘವ : (ಕ). **ಚುಲಕತನ** : (ಕ).

[ ಚುಲುಕು(<ಚುಳುಕು) + – ತನ ]

**ಚುಲುಕುಬುದ್ಧಿ**, ಚುಲಕಬುದ್ಧಿ (ನಾ). = ಚುಲುಕುತನ : (ಕ). **ಚುಲಕಬುದ್ಧಿ** : (ಕ). [ ಚುಲುಕು (<ಚುಳುಕು) + ಬುದ್ಧಿ ]

**ಚುಲುಕೋದಕ**, ಚುಳುಕೋದಕ (ನಾ). ಅಂಗೈಯಲ್ಲಿ ಹಿಡಿಯುವಷ್ಟು ನೀರು ; ಮುಕ್ಕುನೀರು : ಮಹಾತ್ಮ ಜಹ್ನು ತಾಂ ಮೊಗೆಯೆ ಸುಹಸ್ತ ದಲ್ಲಿ ಚುಲುಕೋದಕವಾದಳದೊಮ್ಮೆ ಗಂಗೆ (ಹಂದಶ. ೮೨-೧೦೩). **ಚುಳುಕೋದಕ** : ಚುಳುಕೋದಕಂಗಳಿಂ ಕಿಂಚಿದ್ ದಳಂಗಳಿಂ ಸಲಿದು ಗಂಗಾಂಬು ಶೇಖರನ ಪೂಜಿಸಿದಂಗೆಯೊಲಿದಿಂದ್ರನರಮನೆಯ ಸಿರಿ ಬಂದು ತೊತ್ತಾಗಿ ಯಿರ್ಪಳೆಂಬುದೆ ನಿಶ್ಚಯಂ (ಗುರುಪಾ. ೫-೫೭). [ ಚುಲುಕ + ಉದಕ₂ ]

**ಚುಲ್ಕಾರಿ** 'ಚಿಲ್ಪೇರಿ' ನೋ.

**ಚುಲ್ಲ$_1$**, ಚಿಲ್ಲ$_3$, ಚಿಳ್ಳ (ಗುಂ). ೧. ಕೀಳಾದ; ಕ್ಷುದ್ರವಾದ. 'ಚುಲ್ಲವಮಾತು' ಪರಾ. (ನಾ). ೨. ಅಲ್ಪತನ; ಕ್ಷುದ್ರತೆ : ಈ ಪಳ್ಳಿ ಪಟ್ಟಣದ ಜನರೆಲ್ಲ ಚುಲ್ಲಮುಳಿದು ಕಳೆಗೊಳ್ಳುವರು (ಜಾಂಥಾ. ೩-೮೧). **ಚಿಲ್ಲ$_3$:** ೩. ಕೀಳಾದ ಆಳು ; ಹೀನ : ವಾತಾತ್ಮಂ ಚಿಲ್ಲನೂನಂ ಪಿಸುಣಗನಳಿಪಂ (ಮದಕ. ೩-೦೪); ಮಲ್ಲಮರ್ಗಾನಾಳುಗಳೆಕ್ಕಟಿಗರ್ಚಿ[ಪಾಠಾಂ. ಬಿ]ಲ್ಲಗೋರ್ಳಾಯಿಲ ಪೇಟಕರ್ . . . ಎಸೆದರ್ (ಮದೇಪು. ೧೯-೩). **ಚಿಳ್ಳ:** ೩. ಗೆಲ್ಲ ಸೋಲ ಬಲ್ಲವಂಗೇಕೆ ಅದು ಚಿಳ್ಳರ ಗುಣ (ಸಗಲಿಹ. ೪೫); ಎಳ್ಳನಿತು ಈ ಭೂಪತೀಶನು ಸುಳ್ಳ ಪೇಳುವನಲ್ಲ ಮನುಜರೆ ಕಳ್ಳ ಚಿಳ್ಳನು ಅಲ್ಲ (ಹಮಕ. ೧೧೪). [ <ಪ್ರಾ. ಚುಲ್ಲ. / ಸಂ. ಕ್ಷುಲ್ಲ ]

**ಚುಲ್ಲ$_2$** (ನಾ). ೧. ನೀರು ಸುರಿಯುವ ಕಣ್ಣು ; ಸೋರುಗಣ್ಣು ; ಮಂಜಂಗಣ್ಣು : ನಾನಾ ಕಂಟಕದೋಷಂ ಚುಲ್ಲ ಚಿಲ್ಲಂ ಪಿಟಕಪಿಲ್ಲಾದಿಗಳು ತೊಂಬತ್ತಾರೆನಿಸುತಿಹುವೂ (ವಿವೇಕ. ೩-೪೫). ೨. ಮಂಜಾಗಣ್ಣನವನು; ಸೋರುಗಣ್ಣನವನು : "ಪಿಲ್ಲ, ಚಿಲ್ಲ, ಚುಲ್ಲ–ಈ ೩ ಅಟಿಗಣ್ಣಾಮಂ" (ಹಲಾಯು. ೯೯-೪೫೩). [ ಸಂ. ]

**ಚುಲ್ಲಕ**, ಚುಲ್ಲಿಕ, ಚುಲ್ಲಾಕ (ಗು). ೧. ಕೀಳಾದ ; ಕ್ಷುಲ್ಲಕವಾದ : "ಚುಲ್ಲಕ–ಕಟ್ಟ, ಕ್ಷುದ್ರ" (ಶಬ್ದಮ). **ಚುಲ್ಲಿಕ:** ೧. ಶ್ರೀವಿಜಯವಿಠಲನ ಕರುಣದಿಂದ ಚುಲ್ಲಿಕ ನಡತೆ ಪೋಗಿ ಒಳ್ಳೆ ಫಲ ದೊರಕುವದೂ (ತೀರ್ಥಮ. ೨೦೧). **ಚುಲ್ಲಾಕ:** (ನಾ). ೨. ಕೀಳುಮನುಷ್ಯ ; ಅಲ್ಪ : ಅವರ ಕಾರ್ಯಮ ಲೇಸುಂ ಎಂದುಸಿರೆ ಚು[ಪಾಠಾಂ. ಚಿ]ಲ್ಲಾಕರ್ (ಹಾರಾಸ. ೪-೧೫-೭೦). [ <ಸಂ. ಕ್ಷುಲ್ಲಕ ]

**ಚುಲ್ಲಮಾತು** (ನಾ). ಅಲ್ಪವಾದ ಮಾತು; ಕ್ಷುದ್ರವಾದ ಮಾತು : ನಿಲ್ಲಿಸಲು ಧರಣಿಪನ ಮಾರ್ಗದಿ ಚುಲ್ಲಮಾತುಗಳಾಡಿ ಕೌಶಿಕ (ಹಮಕ. ೦೩೪). [ಚುಲ್ಲ$_1$ + ಮಾತು$_1$ ]

**ಚುಲ್ಲಿ** (ನಾ). ಬೆಂಕಿ ಉರಿಸುವ ಸಲಕರಣೆ; ಒಲೆ: "ಚುಲ್ಲೀ, ಅಶ್ಮಂತಕಂ, ಉತ್ತಾನಂ, ಅಧಿಶ್ರಯಣೀ – ಈ ೪ ಒಲೆ" (ಹಲಾಯು. ೫೨-೦೫೪): ಅಡಿಗಡಿಗೆ ಚುಲ್ಲಿಯೊಳಿಡುವ ಸೌದೆ ಸಿಡಿವುತ್ತ ಕಿಡಿಗಳ್ ಕಿದಱಿತಿರ್ಪವಂ ಬಿಟ್ಟು (ವೀಶೈಪು. ೭-೧೧-೩೭); ಚುಲ್ಲಿ ಪೇಷಣ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು (ಆರ್ಯಧ. ೧೮೭). [ ಸಂ. ]

**ಚುಲ್ಲಿಕ** 'ಚುಲ್ಲಕ' ನೋ.

**ಚುಲ್ಲಾಕ** 'ಚುಲ್ಲಕ' ನೋ.

**ಚುಲ್ಲುವಾಸ್ತ್ರ** (ನಾ). (?) : ಸ್ತ್ರೀಯರಲ್ಲದಡೆ ಕಡೆಸಾರು ಹೆಂಗಳೆಡಿದನ ಮೇಲೆ ಚುಲ್ಲುವಾಸ್ತ್ರಗಳಿಂದ ದಾನವನ ಕೊಳಚುದಕದಲ್ಲಿ ತೇಲ್ಮುಳುಗು ತಬ್ಧಿಯ ಪಾಯ್ವನೆಂಬ ಮರುಳೇನೆನ್ನೊಳುಳಿಯೆಂದನು (ಜಿನಮು. ೩೭-೨೨). [ ? + ಅಸ್ತ್ರ ]

**ಚುಸ್ತ** (ನಾ). ೧. ಸುಟ್ಟ ಅಥವಾ ಕರಿದ ಮಾಂಸ. ೨. ಮಾಂಸವನ್ನು ಸುಟ್ಟಾಗ ಅಥವಾ ಕರಿದಾಗ ಅದಕ್ಕೆ ಉಂಟಾಗುವ ಕರಿಕಾದ ಹೊರಪದರ : (ಶ). [ ಸಂ. ]

**ಚುಳಕ$_1$** (ಗು). ಸೂಕ್ಷ್ಮವಾದ: ಸಕಲ ನಿಷ್ಕಲ ಉಭಯಾಕಾರವ ಅಖಿಲಾಂಡ ಗಳನೊಳಕೊಂಡೊಪ್ಪುವ ಚುಳಕ ಚಿದಾನಂದವನು (ಷಟ್ಸ್ಥಲಾರ. ೦೩೯-೨). [ <ಚುಳುಕು ]

**ಚುಳಕ$_2$** 'ಚುಲಕ' ನೋ.

**ಚುಳಕಪಾನ** (ನಾ). ಅಂಗೈಯಲ್ಲಿ ತುಂಬುವಷ್ಟು ನೀರು ; ಬೊಗಸೆ ಯಷ್ಟು ನೀರು : ಅಂತಸ್ಸ್ಫುರದತಿಸ್ಫಾರಸಮರೋಷ್ಮಸಂತಪ್ತಜಲ ತೃತ್ತೈಕಚುಳಕಪಾನಮಾತ್ರಜಾನುದಘ್ನಜಲದುರ್ಗನುಮಾಗಿ ನಡೆದು (ಅದಿಪು. ೦೪-೫೨ ವ). [ ಚುಳಕ$_2$ (<ಚುಲಕ) + ಪಾನ ]

**ಚುಳಕಿತ** (ನಾ). ಅತಿಸೂಕ್ಷ್ಮವಾದಂವಂ (?) : ಅಳಿಕನೇತ್ರಾಶ್ರಮಕೆ ನಮಿಸುತ ಗಣಂ ಕೂಡೆ ಪುಳಕಿಸುತ ಬರಲು ಶಶಿರವಿಕೋಟಿಕಿರಣದಿಂ ಚುಳಕಿತವನತಿಗಳದ ಕೈವಲ್ಯಮಂ ಕಂಡ ಕುಳಕಪ್ರಸಾದಿ ವೃಷಭಾ (ಲಿಂಗಪು. ೭-೩೫). [ ಸಂ. ಚುಲಕಿತ ]

**ಚುಳಕು** (ನಾ). ತೀಕ್ಷ್ಣತೆ (?) : ಚರಲಿಂಗಂ ಚಾತುರ್ಭುಜ ವಂದಿತ ಚಿರ ಕಾಯಾ ಚೇಲಾಳ ಸುರಕ್ಷಕ ಗರಳಾಂಕಾ ಚುಳಕಿಲ್ಲದ ಶಾರ್ವರಿವರ ಚೂಡಾ ಮಕುಟ (ಪ್ರಭುಪು. ೩-೪). [ ? ]

**ಚುಳಕೆ** 'ಚುಳಿಕೆ' ನೋ.

**ಚುಳಿ** 'ಚೂಳಿ$_1$' ನೋ.

**ಚುಳಿಕೆ**, ಚುಳಕೆ (ನಾ). ೧. ಉಕ್ಕಿನ ಅಥವಾ ಕಬ್ಬಿಣದ ತುದಿಯುಳ್ಳ ಬೆತ್ತ,–ಕೋಲು : ಕವಣೆಕಲ್ಬಿಂಗಲ್ಲು ವಣಿಕೆಯು ವಿವರಿಸಲ್ಬಡಿಗೆಗಳು ಚುಳಿಕೆಯು (ಜ್ಞಾನಸಿಂ. ೨-೩೫). **ಚುಳಿಕೆ:** ೨. "ಹತ್ತಿ ಬಡಿಯುವ ಬೆತ್ತ" (ಜಾನಕೋ. ೫೭). [ ←ತಮಿ. ಚುಳಿಕ್ಕು ]

**ಚುಳುಕ** 'ಚುಲುಕ' ನೋ.

**ಚುಳುಕಾಡು** 'ಚುಳ್ಕಾಡು' ನೋ.

**ಚುಳುಕಿ** (ನಾ). ಕಿರುತೊಳೆ; ಸೋಲೆ: ಹಣ್ಣು ಹಿಸಿದು ಇಬ್ಬಾಗವಾಗಿ ತನ್ನ ಹೊಟ್ಟೆಯ ತೊಳೆ ಚುಳುಕಿಗಳನೆಲ್ಲ ಬಯಲಿಗೆ ಹಾಕಿತು (ಮಲಮ. ೪೩೧). [ ←ಮಲ. ಚೂಳ ]

**ಚುಳುಕು**, ಚುಣುಕು$_2$. ಚುಲುಕು, ಚುಳ್ಕು (ನಾ). ೧. ಅತಿ ಸೂಕ್ಷ್ಮ ವಾದುದಂ ; ತೀರ ಸಣ್ಣದಾಗಿರುವುದು : ಅಗೋಚರ ಅಪ್ರತಿಮ ಲಿಂಗವೆ . . . ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ (ಬಸವ. ೭೪೩); ಘನಮಹಿಮಲಿಂಗವೆ ಅನುಪ್ರಾಣಿ ಎನ್ನ ಕರವನಡಕ್ಕೆ ಬಂದು ಚುಳು ಕಾದಿರಲ್ಲ (ಸುಸಾರ. ೦೦ ಪಲ್ಲವಿ); ತಮ್ಮ ಬುದ್ಧಿಯ ಅಂಗೈಯಲ್ಲಿ ಲಿಂಗದಂತೆ 'ಚುಳುಕಾ'ಗಿ ಬರುವದೆ ನನ್ನ ಹಾದಿ (ಸುಸಾಹಿ. ೩). **ಚುಣುಕು$_2$:** ೧. ನಿಮ್ಮ ಹೊಟ್ಟೇ ಕರುಳಿನಾ ತುಣುಕು ಅಂತನ ಚುಣುಕು ತೋರಿಸಿದಿರಿ ಮಿಣುಕು (ಹಾಡುಪಾ. ೪೩-೫). **ಚುಲುಕು:** ೨. ಲಾಘವ ; ಹಗುರವಾದ ನಡತೆ. 'ಚುಲುಕುತನ' ಪರಾ. **ಚುಳ್ಕು:** ೩. ಕುಳ್ಳು ; ಗಿಡ್ಡು : ಮೈಯಲ್ಲಿ ನೀನು ಸ್ವಲ್ಪ ಚುಳ್ಕು. ಆದ್ದರಿಂದ ನಿನ್ನ ವಯಸ್ಸು ಥಟ್ಟನೆ ತಿಳಿಯುವದಿಲ್ಲ (ಮೂರುದಾ. ೪೩). [ದೇ.॥ ತಮಿ. ಚುಳುವು; ಮಲ. ಚುಲುಂಗ; ತೆಲು. ಚುಲುಕ, ಚುಲ್ಕ]

**ಚುಳುಕೋದಕ** 'ಚುಲುಕೋದಕ' ನೋ.

**ಚುಳ್ಕಾಡು**, ಚುಳುಕಾಡು (ಕ್ರಿ). ನೀರಿನಲ್ಲಿ ತುಳುಕಾಡು,–ತೇಲಾಡು : ಕೌಂಗಿನ ಪೊಂಬಾಟೆಯ ನಟ್ಟಗಂಪುಗಡಲೊಳ್ ಚುಳ್ಕಾಡಿ ಚುಳ್ಕಾಡಿ . . . ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಟೆಗುಂ ಕಾಸಾರತೀರಂಗಳೊಳ್ (ಅನಂಪು. ೩-೧೦); ತೊಳಗುವ ತಿಳಿನೀರ್ಗೊಳದೊಳು ಚುಳ್ಕಾಡಿ ಬಳಿಕ ಮುಳುಗಿ ಮೇಲಕೇಳಲಾ ಲಲನೆಯ ಮುಖಮೊಪ್ಪಿತು ಪಾಲ್ಗಡಲೊಳು ಪೊಳೆದುದಯಿಪ ಚಂದ್ರನಂತೆ (ಶ್ರೀಪಾಲ. ೫-೫೪). **ಚುಳುಕಾಡು:** ಮುನ್ನ ಕಣ್ಬೇಟದವಳ್ ತುಳುಕಿದೆಡೆಗೆಯ್ದಿ ಚುಂಬಿಸಿ ಚುಳುಕಾಡೆ ಮರಳ್ಚಿ ಮೂಡಿದಂ ಸ್ಮರನೊರ್ವಂ (ಅನಂಪು. ೭-೩೮). [ < ತುಳ್ಕಾಡು ]

**ಚುಳ್ಕು** 'ಚುಳುಕು' ನೋ.

**ಚುಳ್ಕೋದಕ** (ನಾ).=ಚುಲುಕೋದಕ : ಪ್ರಕಟಂ ಹಾರೀತಿಮಂತ್ರಾತ್ಮಕ ನನುಪಮಿತಂ ಕೊಟ್ಟ ಸನ್ಮಾರ್ಘ್ಯ ಚುಳ್ಕೋದಕದಿಂದಂ ಪುಟ್ಟ ಚಾಳುಕ್ಯ ಕುಳರೆನಿಸಿ (ಸಾಂದೇಶ್. ೨೩-೪ ; 1122). [ < ಚುಲುಕೋದಕ ]

**ಚುಳ್ಳನೆ** (ಅ). ನೋವಾಗುವಂತೆ : ಇಱುಂಪೆ ಊಱಲು . . . ಗಂದೆ ನೆಸೆದುದೊ ನೊಂದು ಚುಳ್ಳನುರಿದುದೊ ತಂದೆ (ಉದ್ಭರ. ದೇ. ೨೦೪-೩). [ ಚುಳ್$_0$ + – ಅನೆ$_1$ ]

**ಚುಳ್ಳಿ$_1$** (ನಾ). ೧. ಒಂದು ಬಗೆಯ ಸಾಗವಾನಿ ಮರ: (+). ೨. ಒಂದು ಬಗೆಯ ಮುಳ್ಳುಪೊದೆ. 'ಕರಿಚುಳ್ಳಿ' ಪರಾ.

[ ದೇ.॥ ತಮಿ. ಮಲ. ತುಳು. ಚುಳ್ಳಿ ]

**ಚುಳ್ಳಿ$_2$** (ನಾ). ವಿಕಾರ; "ತಂಟೆಗಳನ್ನು ಚುಂಚಿನಂತೆ ನೀಡುವುದು" (ಸಿರಿಕೋ. ೧೮೮): ಅಚ್ಯುತ ಅಳುಕಳುಕಿ, ನಾಚಿ, ನಾಚಿ ತನ್ನ ಮುಖವನ್ನು ಚುಳ್ಳಿ ಮಾಡಿಕೊಂಡು . . . ಕಾರ್ಯೋದ್ದೇಶವನ್ನು ವಿವರಿಸಿದ (ಮುಗಿಯು. ೧೮೩). 'ಚುಳ್ಳಿಸು' ಪರಾ. [ ? ]

**ಚುಳ್ಳಿಮುಳ್ಳಿಗಿಡ** (ನಾ). ಒಂದು ಬಗೆಯ ಔಷಧಿಸಸ್ಯ: ಗುಬ್ಬಚ್ಚಿಗಿಡ, ಚುಳ್ಳಿಮುಳ್ಳಿಗಿಡ (ವೃಜಿಗಿ. ೦೧-೦೯೮). [ಚುಳ್ಳಿಮುಳ್ಳಿ$_0$+ಗಿಡ (<ಗಿಡು)]

**ಚುಳ್ಳಿಸು** (ಕ್ರಿ). ಕಿವುಚು; ವಿಕಾರಮಾಡು: ಆಕೆ ಕೊಂಚವೂ ಮುಖ ಚುಳ್ಳಿಸದೆ ನಗುನಗುತ್ತ ತನ್ನ ಕಠಾರಿಯನ್ನು ಬೀಸುತ್ತಿರುತ್ತಾಳೆ (ಶ್ರವಾಇ. II, ೨೯೯). [ ಚುಳ್ಳಿ$_2$ + – ಇಸು$_3$ ]

**ಚುಙ್** (ನಾ). ಒಂದು ಅನುಕರಣ ಶಬ್ದ. 'ಚುಂಙ್ಙನ್' ಪರಾ.

**ಚುಙಚಿ** 'ತುಂಙುಚಿ' ನೋ.

**ಚುಙುಕು, ಚುರುಕು** (ನಾ). ೧. (ಚಾಕು ಮುಂತಾದುವುಗಳಂತೆ) ತೀಕ್ಷ್ಣವಾಗಿರುವಿಕೆ; ಮೊನಚಾಗಿರುವಿಕೆ; ಹರಿತವಾಗಿರುವಿಕೆ: ಒಳಗೊಳಗೆ ನಲ್ಲನ ಪಲ್ಲುಗುರ್ಗಳ ಚುಙುಕುಗಳನಱಿದು ಬೈವುತಂ ಬರುತಿರ್ದರಾತ್ಮಮಂದಿರಕಂದು ಬಂಧಕಿಯರು (ಜಬಪು. ೯-೧೭). **ಚುರುಕು**: ೨. ತೀಕ್ಷ್ಣವಾದುದು; ಹರಿತವಾದುದು: ಹೆಂಗಸರಿಗೆ ಈ ವಿಷಯದಲ್ಲಿ ಬುದ್ಧಿ ಬಹಳ ಚುರುಕು (ಅಲಹೂ. ೪೧); ರೋಜಕಿಯ ಕಿವಿ ತುಂಬ ಚುರುಕು (ಮಹಾಕ್ಯಾ. ೨೨); ಜನಗಳ ಬುದ್ಧಿಯ ಚುರುಕಿನ ಮೇಲೆ, ಪ್ರಮಾಣಿಕತೆಯ ಮೇಲೆ ಅದರ ದೊಡ್ಡಸ್ತಿಕೆ ಹೊಂದಿಕೊಂಡಿದೆ (ಅಳನಿ. ೦೩೭).೩. ಸೂಕ್ಷ್ಮವಾದುದು; ಚಾಲಾಕಾದುದು: ಪೇಟೆಯ ಮಕ್ಕಳು ಬಹಳ ಚುರುಕು (ತ್ಯಾಗಮು. ೦೮೦). ೪. ಕಾವು; ಬಿಸುಪು: ಪ್ರಶಾಂತ ಮತ್ತು ತಂಪಾದ ಕೋಣೆ ಹೊರಗಿನ ಬಿಸಿಲಿನ ಚುರುಕನ್ನು ಮರೆಯಿಸಿ, ಕೆಲಸಕ್ಕೆ ಪ್ರೋತ್ಸಾಹಿಸುತ್ತಿದ್ದವು (ಅಪನಾ. ೨೧). ೫. ವೇಗ; ಲಗುಬಗೆ: ಚುರುಕಿನ ಕಡಲೆಡೆ ಗಾಳಿಗಳೆಮ್ಮನ್ ಕರೆತಂದಿರ್ದಪುವೆಂತೋ ಎಮ್ಮನ್ (ಬದ್ಧಪ್ರ. ೯-೧೭೯): ಹುಕ್ಕರಾಯನು . . . ಯುದ್ಧಸಿದ್ಧತೆಗಳನ್ನು ಚುರುಕಿನಿಂದ ನಡೆಯಿಸುತ್ತಿದ್ದನು (ಶ್ರೀವಿದ್ಯಾ. ೮೬): ಚುರುಕಾಗಿ ಹೋದರೆ ಹೊತ್ತು ಮುಳುಗುವುದರಲ್ಲಿ ಹೋಗಿಬಿಡಬಹುದು (ಚಂಗಾಳ್ಯ ೩೩). ೬. ಪದಾರ್ಥಗಳ ಬೆಲೆಯಲ್ಲಿ ಏರಿಕೆ; ವಸ್ತುಗಳು ತುಟ್ಟಿಯಾಗುವಿಕೆ: (+). (ಗು). ೭. (ಕತ್ತಿಯಂತೆ) ಹರಿತವಾದ; ಹದನಾದ; ತೀಕ್ಷ್ಣವಾದ: ಚುರುಕು ಶಬ್ದಪ್ರಯೋಗದಲ್ಲಿಯೂ, ಅದಕ್ಕಿಂತ ಚುರುಕಾದ ತಿನಿಸುಗಳಲ್ಲಿಯೂ ಆಕೆ ತುಂಬ ಆಸಕ್ತಳು (ಹಾಸಮೂ. ೮೪). ೮. ಚತುರ; ಚಾಲಾಕಾದ: ಎಂತಹ ಚುರುಕು ಹುಡುಗಿ (ಮಹಾಕ್ಯಾ. ೯೨).

ಚುರುಕಿನವ = ಬುದ್ಧಿವಂತ; ಚಾಲಾಕು ವ್ಯಕ್ತಿ: ಹುಡುಗ ಒಳ್ಳೇ ಚುರುಕಿನವನಾಗಿದ್ದ (ಕಾವೇರಿ. ೧೯೦). **ಚುರುಕುಮಾಡು**=ವೇಗಗೊಳಿಸು; ಶೀಘ್ರಗೊಳಿಸು: ಕುದುರೆಯನ್ನು ಚುರುಕುಮಾಡಿದರು (ಕಳಹು. ೫). **ಚುರುಕುಮುಟ್ಟಿಸು**=(ಆಲಂ) ಹಿಂಸೆಮಾಡು; ನೋಯಿಸು: ಪೋಲೀಸರು ಅವನಿಗೆ ಚನ್ನಾಗಿ ಚುರುಕುಮುಟ್ಟಿಸಿದರು (ರೂಢಿ). **ಚುರುಕುಮೆಣಸಿನಕಾಯಿ**=೧. ಒಂದು ಬಗೆಯ ಮೆಣಸಿನಕಾಯಿ; ಲವಂಗ ಮೆಣಸಿನಕಾಯಿ: ಒಂದಷ್ಟು ಚುರುಕುಮೆಣಸಿನಕಾಯಿ ಕೊಂಡುಕೊಂಡು ಬಾ (ರೂಢಿ). ೨. (ಆಲಂ) ಚಟುವಟಿಕೆಯಿಂದ ಕೂಡಿರುವವನು: ಆ ಹುಡುಗ ಚುರುಕುಮೆಣಸಿನಕಾಯಿ (ರೂಢಿ).

[ ದೇ.॥ ತಮಿ. ಚುರುಚುರುಪ್ಪು; ಮಲ.ಚುರುಕ್ಕು; ತುಳು. ಚುರುಕು; ಕೊಡ. ಚುರೀಕೀ; ತೆಲು. ಚುಙುಕು ]

**ಚುಙುಚುಙಿಗ** (ನಾ). ಚುರುಕಾದ ನಡಗೆಯುಳ್ಳವನು; ವೇಗಶಾಲಿ: "ಉತ್ತಾಳಃ, ತ್ವರಿತಃ–ಈ ೨ ಚುಙುಚುಙಿಗಂ" (ಕರಾಯು. ೬೦-೨೧೫).

[ ಚುಙುಚುಙು$_0$ + – ಇಗ ]

**ಚುಙ್ಙನೆ** (ಅ). ವೇಗವಾಗಿ; ರಭಸದೊಡನೆ: ಅಚ್ಚುಳಕೋಲಿಂ ತಿಙ್ಙನೆ ತಿರಿಪಿ ದುರಾತ್ಮರ್ ಚುಙ್ಙನೆ ಕೆನ್ನೆತ್ತರೊಗೆಯೆ ತೊಲಗದೆ ಬಡಿದರ್ (ಧರ್ಮಾಮೃ. ೩-೧೯೧); ಚುಙ್ಙನೆ ಕೊಂದಿಕ್ಕಿದವು (ಜಂಪ್ರಸಾಂ. ೮-೫೨).

**ಚುಙ್ಙಚುಙ್ಙನೆ** (ದ್ವಿರುಕ್ತಿ): ಕಡುಗಾಯ್ದ ತೀವ್ರಖರಕರಪ್ರಕರಮಂ ಚುಙ್ಙಚುಙ್ಙನೆ [ಪಾಠಾಂ. ಚುಟಚುಟನೆ] ಸುಡೆ (ಗಿರಿಕ. ೯-೨೭ ವ).

[ ಚುಙ್ + – ಅನೆ$_1$ ]

**ಚುಙ್ಙಿನ್** (ಕ್ರಿ). ಚುರುಗುಡು; ಸುಡು: ಮಹಾಕ್ಷುಧಾಗ್ನಿಯೋಟಕ್ಕೆಗೆ ಬಿಸಿಲಟ್ಟಿ ಪೆರ್ಚುವ ಪಿಪಾಸೆಗೆ ಚುಙ್ಙಿನುತಿರ್ಪ ಕಲ್ಲಬೆಂಕೆಗೆ ಬಿಡದೊಂದು ಮಗ್ಗುಲಿರವಿರಂಗನಿತಟ್ಟದೆ . . . ಹೃದಯಂ ಕುಳಿಕೊಳ್ಳುತುಮಿರ್ದುದು (ವರ್ಧಪು. ೧೨-೩೫). [ ಚುಙ್ + ಎನ್$_1$ ]

△**ಚುಟ್ಟು** 'ಚುರ್ಚು$_2$' ನೋ.

**ಚೂ** (ನಾ). ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಹೇಳುವ ಮಾತು. 'ಚೂಬಿಡು' ಪರಾ.

**ಚೂಕ** (ನಾ). ತುಚ್ಛನಾದವನು; ಅಲ್ಪ; ನೀಚ: ಸೇರದಿವರ ಸಂಗ . . . ಲೋಕಾಪವಾದವ ಸೈರಿಸುವ ಚೂಕ ಗಳಿಗೆನುತಸುರಾರಿ ನಗುತಿರ್ದ (ಅಕ್ರೂಚ. ೬-೬೭). [ <ಸಂ. ಶೂಕ./ತಮಿ. ಚೂಕ್ಕ ]

**ಚೂಕಿ** 'ಚೂಕು' ನೋ.

**ಚೂಕು, ಚುಕಿ, ಚೂಕಿ** (ನಾ). ತಪ್ಪು; ನ್ಯೂನತೆ; ಲೋಪ: "ಚೂಕು = ತಪ್ಪು; ಅಪರಾಧ" (ಜಾನಕೋ. ೫೭). **ಚುಕಿ**: (ಕೈಸಗೆ. II, ೫೯೬). **ಚೂಕಿ**: (ವ್ಯಗಪ. IV, ೭೬೭): ಚೂಕಿಯಲ್ಲಿ ಯಾರ ಲುಕಸಾನಿ ಇದ್ದಾಗ್ಯೂ ತತ್ಕಾಲವೇ ಬರಿದು ತಿಳಿಸಬೇಕು (ಮುಂಬಪ್ಯಾ. ೯೩).

[ ←ಹಿಂ. ಮರಾ. ಚೂಕ್./ಪ್ರಾ. ಚುಕ್ಕ ]

**ಚೂಕುನ್ನ** (ನಾ). ೧. ಚೂ ಎಂದು ಅಟ್ಟುವ ನಾಯಿ. ೨. (ಆಲಂ) ಹೇಳಿದಂತೆ ಕೇಳುವವನು: ಧರ್ಮಜಗೆ ಪಟ್ಟವಾದರೆ ರಾಜ್ಯದ ಕನ್ನೆಗರಸಹರವರ ಪಾರಂಪರೆಯ ಪುತ್ರರಿನ್ನು ಸಂದೇಹಮೇತಕೆಯಿಕ್ಕು ಪಡಿಯ ಚೂಕುನ್ನರಾದೆವೆ ಮಹಾದೇವ (ಲಕ್ಷ್ಮಭಾ. ೩೨-೮).

[ ಚೂ + <ಕುನ್ನಿ$_1$ ]

**ಚೂಚಕ$_1$** 'ಸೂಸಕ' ನೋ.

**ಚೂಚಕ$_2$** (ನಾ). = ಚೂಚಂಗ: ಇಂಬೊಪ್ಪುವ ಕುಕ್ಷಿ ಚೆಲ್ವನೊಳಕೊಂಡಾ ಚೂಚಕಂ (ಲೋಕೋಪ. ೧೦-೭೦); ಬೆಳೆದು ಕೊಬ್ಬಿದ ನಡುವನು ಕಂಡು ಮೊಗಗಂದಿದೊಲು ಚೂಚಕಗಳೊಪ್ಪಿದವು (ಜಂಪ್ರಸಾಂ. ೪-೪೩).

[ <ಸಂ. ಚೂಚುಕ ]

**ಚೂಚಿಸು** (ಕ್ರಿ). ನೋಡು; ತಿಳಿ; ಪರೀಕ್ಷಿಸು (?): ದಶಮುಖ ನೊರ್ಮೆಯೆ ಚೂಚಿಸಲಾಟಿಸಿ ದಶಮುಖನಳಿಪಿಂ ನೋಡುತ್ತಿರ್ದಂ (ಕುಮುರಾ. ೯-೮). [ ಚೂಚು ? + –ಇಸು$_3$./ತೆಲು. ಚೂಚು ]

**ಚೂಚು$_1$** 'ಚುಂಚು$_2$' ನೋ.

**ಚೂಚು$_2$** (ಗು). ಚೂಪಾದ; ಮೊನಚಾದ. 'ಚೂಚುಗದ್ದ' ಪರಾ.

[ ? ]

**ಚೂಚುಕ** (ನಾ). ಮೊಲೆಯ ತೊಟ್ಟು: ಪೊಂಗೊಡನಂ ತಮಾಳಪಲ್ಲವದೊಳ್ ಮುಚ್ಚಿದಂದದೊಳೆ ಚೂಚುಕಮಾತುದು ಕರ್ಪಂ (ಪಂಪಭಾ. ೧-೧೨೫); ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್ (ಚಂದ್ರಪು. ೩-೮೭): ಚೂಚುಕಂ ಕರ್ಪಂ ತಳೆಯೆ (ರಾಮಾಶ್ವ. ೨೧-೭).

[ ಸಂ. ]

**ಚೂಚುಗದ್ದ** (ನಾ). ಚೂಪಾಗಿರುವ ಗದ್ದ ; ಮೊನಚಾದ ಗದ್ದ : ಒಂದೆರಡು ಕೆಂಪುಹನಿಗಳು ಅವರ ಚೂಚುಗದ್ದದ ಮೇಲೆ ಕುಳಿತಿದ್ದವು (ರಂಗರೋ. ೭೭). [ ಚೂಚು₂ + ಗದ್ದ (<ಗದ್ದ₁) ]

**ಚೂಟ್** (ನಾ). ಬಿಟ್ಟುಬಿಡುವುದು; ಬಿಟ್ಟು ಹೊರಡಂವಿಕೆ. 'ಚೂಟಾಟ' ಪರಾ. [ ←ಹಿಂ. ಛೂಟ್ ]

**ಚೂಟಾಟ**, ಚೂಡಾಟ, ಜೂಟಾಟ (ನಾ). ಒಂದು ಬಗೆಯ ಆಟ ; ಚೂಟ್ ಎಂದು ಹೇಳಿದ ಕೂಡಲೆ ಒಬ್ಬರು ಉಳಿದವರನ್ನು ಅಟ್ಟಿಸಿಕೊಂಡು ಹೋಗಿ ಮುಟ್ಟುವ ಆಟ; ಮುಟ್ಟಾಟ : ಚಂದ್ರ ಮೋಡಗಳೊಡನೆ ಚೂಟಾಟವಾಡುತ್ತಾ ದಿಗಂತದ ಕಡೆಗೆ ಓಡುತ್ತಿದ್ದ (ಮುರುಳಿ. ೩೨); ಒಂದರ ಹಿಂದೆ ಒಂದು ಮುಟ್ಟಿಟ್ಟುಕೊಳ್ಳುತ್ತಾ ಅವು ಚೂಟಾಟವಾಡುತ್ತಿರುವಂತೆ ಕಾಣುತ್ತಿದ್ದವು (ಜ್ಞಾನಿಮ. ೨೭). **ಚೂಡಾಟ**: ಎಳೆಗಾಳಿಗೆ ಚೂಡಾಟವಾಡುತ್ತಿದ್ದ ನೀಳಕೇಶ ಹಾರಿ ನಾಗೇಂದ್ರನ ಮೊಗಕ್ಕೆ ಕಚಕುಳಿಯಿಟ್ಟವು (ಸಿಡಿಲು. ೩೭). **ಜೂಟಾಟ**: ಒಂದು ಸಂಜೆ ಹುಡುಗಿಯರೆಲ್ಲರೂ ಜೂಟಾಟವಾಡುತ್ತಿರುವಾಗ ಮಾಧವಿಯು . . . ಬಿದ್ದುಬಿಟ್ಟಳು (ಪೂಗ್ಗು. ೪೭) ; ಮಕ್ಕಳೆಲ್ಲರೂ ಜೂಟಾಟ ಆಡುತ್ತಿದ್ದರು (ರೂಢಿ).

[ ಚೂಟ್ + ಆಟ ]

**ಚೂಟಿ₁** 'ಸೂಟಿ₁' ನೋ.

**ಚೂಟಿ₂** (ನಾ). ಗುರಿ ; ಲಕ್ಷ್ಯ : (ಕ).

[ ದೇ.೩ ತುಳು. ಚೂಟ ; ತೆಲು. ಸೂಟ ]

**ಚೂಟಿ₃** 'ಸೂಟಿ₂' ನೋ.

**ಚೂಟಿಕಾತಿ** (ನಾ). ಚುರುಕಾಗಿರುವವಳು; ಚತುರೆ: ಬೇಟದ ಪದನೇನು ಕೂಟದ ಕುಜುಹೇನು . . . ರಂಗಾಯೆಂಬ ಚೂಟಿಕಾತಿಯನೆಂದೀಕ್ಷಿಪೆನೊ (ಕಶಸಾಂ. ೨೯-೩೩). [ ಚೂಟಿ₁ (<ಸೂಟಿ₁) + – ಕಾತಿ₆ ]

**ಚೂಟು₁** 'ಚಿವುಂಟು' ನೋ.

**ಚೂಟು₂** 'ಸೂಟಿ₁' ನೋ.

**ಚೂಟುಗಾರ** (ನಾ). ಚದುರ ; ಉಪಾಯಗಾರ : (ಕ).

[ ಚೂಟು₂(<ಸೂಟಿ₁) + – ಗಾರ (<–ಕಾಱ) ]

**ಚೂಡ₁** (ನಾ). ೧. ಶಿಖೆ ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ,–ಕೊಟ್ಟು: "ಶಿಖಾ ಚೂಡಮೆನಲಾ ಕೊಟ್ಟು" (ಮಂಗರಾ. ೩೦-೩). ೩. ಶಿಖರ ; ತುದಿ. 'ಚೂಡಾಗ್ರ' ಪರಾ. [ <ಪ್ರಾ. ಚೂಡಾ. / ಸಂ. ಚೂಡಾ ]

**ಚೂಡ₂** (ನಾ). ಗಂಟುಗಂಟಾಗಿರುವ ಕೂದಲು ; ಜಡೆಗಟ್ಟಿರುವ ಕೂದಲು : "ಚೂಡ ಜೂಟ" (ಚಕುನಿ. ೯೩) : ಹರನ ಚೂಡದಲ್ಲಿ ಹಾರುತ್ತಿದ್ದ ಆ ಸುಧಾಂಶುಲೇಖೆಯು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಕಾಣಿಸಲಿಲ್ಲ (ಕೋಹಿನೂ. ೭). [ <ಸಂ. ಜೂಟ ]

**ಚೂಡಕ** (ನಾ). ಜಡೆಯಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಜಡೆಬಿಲ್ಲೆ : (ಕ). [ ಸಂ. ]

**ಚೂಡಾ** 'ಚಿವಡಾ' ನೋ.

**ಚೂಡಾಂತ** (ನಾ). ಅತ್ಯಂತ ಕೊನೆಯದು; ತುತ್ತತುದಿ: ಜಗತ್ತಿನಲ್ಲೇನು ನನ್ನ ಪ್ರಾರ್ಥನೆ ಒಂದೇ ಚೂಡಾಂತವೆ ? (ಇಪ್ಪಳ. ೨೨೩).

[ ಸಂ. (ಚೂಡಾ + ಅಂತ) ]

**ಚೂಡಾಕರಣ** (ನಾ).(ಮೊದಲನೆಯ ಬಾರಿಗೆ) ಗಂಡುಮಕ್ಕಳಿಗೆ ತಲೆಯ ಕೂದಲನ್ನು ತೆಗೆಸುವ ವಿಧಿ ; ಚೌಲ. ☞ ಷೋಡಶಸಂಸ್ಕಾರಗಳಲ್ಲಿ ಒಂದು: ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ ಚೂಡಾಕರಣಾದಿ ಕ್ರಿಯಾಕಲಾಪಮುಮಂ ಮಾಡುತ್ತುಂ (ಕಾದಂಪೂ. ೪೩೩).

[ ಸಂ. (ಚೂಡಾ + ಕರಣ) ]

**ಚೂಡಾಕರ್ಮ** (ನಾ).=ಚೂಡಾಕರಣ : ಆ ಅರಸುಮಕ್ಕಳಿಗೆ ಐದು ವರ್ಷ ತುಂಬುತ್ತಲೆ . . . ಚೂಡಾಕರ್ಮವನ್ನು ಮಾಡಿಸಿ (ಛೀಪ್ಕ.೩೦); ಅವರವರ ಕುಲಾಚಾರದ ಪ್ರಕಾರ ಆಯಾಕಾಲದಲ್ಲಿ ಚೂಡಾಕರ್ಮವನ್ನು ಮಾಡುವುದು (ಆರ್ಯಧ. ೧೨೩). [ ಸಂ. (ಚೂಡಾ + ಕರ್ಮ) ]

**ಚೂಡಾಗ್ರ** (ನಾ). ಶಿಖರದ ತುದಿ,–ಕೊನೆ : ಆಮ್ರಕುಂಜದ ಮೇಲ್ಭಾಗದಲ್ಲಿ ಬೆಳ್ದಿಂಗಳದ ಗುಣ್ಪಿಗೆ ನುಣ್ಪಾಗಿ ಕಂಗೊಳಿಸುವ ನಮ್ಮ ಕಿಲ್ಲೆಯ ಚೂಡಾಗ್ರ ಭಾಗ (ಇಪ್ಪಳ. ೧೯೨). [ ಸಂ. (ಚೂಡಾ + ಅಗ್ರ) ]

**ಚೂಡಾಟ** 'ಚೂಟಾಟ' ನೋ.

**ಚೂಡಾಮಣಿ** (ನಾ). ೧. ತಲೆಯಲ್ಲಿ ಧರಿಸುವ ರತ್ನ,–ರತ್ನದ ಆಭರಣ; ಬೈತಲೆಬಟ್ಟು : "ಶಿರದ ರತ್ನ ಚೂಡಾಮಣಿಯೆನಿಕ್ಕುಂ" (ಮಂಗರಾ. ೯೮-೧೯); ಪ್ರಣತ ರಿಪುನೃಪತಿಚೂಡಾಮಣಿರಂಜಿತಪಾದಂ (ಕಾದಂಪೂ.೦೯); ಹನುಮಂತನು ಒಬ್ಬ ಸೀತೆ ಗುರುತಿಗೋಸ್ಕರ ಕೊಟ್ಟ ಚೂಡಾಮಣಿಯನ್ನು ತೆಗೆದುಕೊಂಡು ರಾವುನ ಬಳಿಗೆ ಹೋದನು (ನೀತಿಚಿಂ. VII, ೨೦). ೨. (ಅಲು) ಶ್ರೇಷ್ಠವಾದ ವ್ಯಕ್ತಿ ಅಥವಾ ವಸ್ತು: ವಿಶದಾತ್ಮೀಯ ವಂಶಕ್ಕೆ ಚೂಡಾಮಣಿಯಂ . . . ಬಂದು ಕಂಡು (ಶಂಪಭಾ. ೬-೯೫) ; ಉಪಮಾತೀತಂ ಕೃತಿ ಶಾಂತಿಪುರಾಣಂ ಸಲೆ ಪುರಾಣಚೂಡಾಮಣಿಯೆಂದು ಪಶಮದಿಂ ಬರೆಯಿಸಿ (ಶಾಂತಿಪು ೦-೩೮) ; ಸಕಳದಿಗನ್ತರಪ್ರವರ್ತ್ತಿತಕೀರ್ತ್ತಿಯನ್ಪಬ್ಬುರ ಚೂಡಾಮಣಿ (ಶಾಇಇ. XX, ೪೭-೧೯ ; 1072) ; ನೀನು ಶೀಲಸಂಪನ್ನೆಯಾಗಿ ಕನ್ನಡಕನ್ಯೆಯರ ಚೂಡಾಮಣಿಯಾಗಿರುವೆ (ದಾನಚಿಂ.೧೭೭).

[ ಸಂ. (ಚೂಡಾ + ಮಣಿ) ]

**ಚೂಡಾಯುತ** 'ಚೂಡಾಯ್ತ' ನೋ.

**ಚೂಡಾಯ್ತ**, ಚೂಡಾಯುತ (ನಾ). ಒಂದು ಬಗೆಯ ಆಯುಧ (?) : 'ಜೋಡು ಸೀಸಕವಾಂತ ಸಬಳಿಗರೊತ್ತಂಡ ಚೂಡಾಯ್ತ ಹರಿಗೆ ಬಲ್ಲವರ ಖೇಡೆಯವಡೆದ ರಾವುತ ಜೋದ ರಥಿಕರ ನೋಡ (ಮೋಹತ. ೨೦-೩೪). **ಚೂಡಾಯುತ**: ಕಡಿತಲೆ ಚೂಡಾಯುತ ಕಾಗಿನ ಕಾಸೆ ಉಡಿಗೆ ಬದ್ದುಗೆಯ ಕಠಾರ ಹಿಡಿದ ಹರಿಗೆ (ಶ್ರೀಪಾಲ. ೦೩-೭೩) ; ರನ್ನದ ಬಾಕು ಕಯ್ಯಂಬು ಹೊನ್ನ ಚೂಡಾಯುತ ಮೆಱೆಯೆ (ಕುಲಾಸಾಂ. ೧೧-೨೧). [ ? ]

**ಚೂಡಾರತ್ನ** (ನಾ). ೧.=ಚೂಡಾಮಣಿ ೧: ವರತನುವಿನ ಕೈಯೊಳಭೇದ್ಯಕವಚಮುಮಂ ಚೂಡಾರತ್ನ[ಪಾಠಾಂ. ಚೂಡಾಮಣಿರತ್ನ]ಮುಮಂ ರತ್ನಕಟಕಂಬೆರಸು ಪಲವುಂ ಪರಾರ್ಧ್ಯ ರತ್ನಂಗಳಂ ಕೊಂಡು (ಆದಿಪು. ೧೩-೩ ವ); ಹೆಂಗಸರು ತೊಟ್ಟುಕೊಳ್ಳುತ್ತಿದ್ದ ಒಡವೆಗಳ ವೈವಿಧ್ಯ ದಂಗುಬಡಿಸುವಂಥದ್ದಾಗಿದೆ . . . ಚೂಡಾರತ್ನ, ನೂಪುರ, ನೇವುರ (ನಂಜುಂಡ. ೧೨೭). ೨.=ಚೂಡಾಮಣಿ ೨: ಕವಿಜನ ಚೂಡಾರತ್ನಂ ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ (ಅಜಿಪು. ೧-೮೦) ; ಯಾಕವುಬ್ಬೆಗಂ ಜನಿಯಿಸಿದಂ ಖ್ಯಾತಂ ಧರೆಯೊಳು ಪೆರ್ಗ್ಗಡೆ ಬೇತಂ ಮಂತ್ರಿಜನಮಕುಟ ಚೂಡಾರತ್ನಂ (ಕಇಇ. ೭೧-೦೩-೪೦ ; 1117). [ ಸಂ. (ಚೂಡಾ + ರತ್ನ) ]

**ಚೂಡಾಲ** (ನಾ). ಒಂದು ಬಗೆಯ ಸುವಾಸನೆಯ ಹುಲ್ಲು ; ಕೊಡನಾರಿ ಹುಲ್ಲು ; ಭದ್ರಮುಸ್ತೆ: "ಚೂಡಾಲ–ನಾಗರಮುಸ್ತೆ, ಉಚ್ಚಟಿಗೆ" (ಓಷಧಿ. ೫೮). [ ಸಂ. ಚೂಡಾಲಾ ]

**ಚೂಡಾಲು** 'ಚೌಡಾಲು' ನೋ.

**ಚೂಡಿ₁** 'ಸೂಟಿ₁' ನೋ.

**ಚೂಡಿ₂** 'ಸೂಟಿ₁' ನೋ.

**ಚೂಡಿಕೆ** (ನಾ). ತುದಿ ; ಶಿಖರ ; ಅಗ್ರಭಾಗ: ಷೋಡಶಪ್ರತಿಯ ಕರಣಿಕರೊಳಗ್ರಣಿಯೆನಿಪ ಗಾಡಿಕಾಱಂ ವಿರೂಪಾಕ್ಷನಿರವಂ ಮನಶ್ಚೂಡಿಕಾಪಟದೊಳಂಕಿಸಿ ಬಳಿಕುಳಿದ ಬಾಹ್ಯವೃತ್ತಿಯಂ ಬಳಸುವಚಲಂ (ಪದ್ಮರಾ.೩-೬).

[ ಸಂ. ಚೂಡಿಕಾ ]

**ಚೂಡೆ** (ನಾ). ೧. ಶಿಖೆ ; ಜಂಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ,–ಗೊಂಡೆ : "ಶಿಖಾ, ಚೂಡಾ–ಈ ೨ ನವಿಲ ಕೊಟ್ಟು" (ಹಲಾಯು. ೪೧-೯೯). ೩. ಸಿರಪೇಶು; ಕಿರೀಟದ ತುದಿಯ ಗುಚ್ಛ,–ಕುಚ್ಚು. ೪. ತಲೆ; ಶಿರಸ್ಸು: "ಚೂಡಾ, ಶಿಖಾ – ಈ ಎರಡಜಲ್ಲಿಯುಂ ಶಿರಸ್ಸೆಂಬುದು" (ಹಲಾಯು. ೧೩೩ ೧೩). ೫. ಶಿಖರ ; ತುದಿ. ೬. ಒಂದು ಬಗೆಯ ತೋಳುಬಳೆ ; ವಂಕಿ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು ಪೊಂಬಳೆದೋರೆ ಕಂಕಣಂ ಚೂಡೆಯು (ನವಮೋ. ೧೦-೨೩) ; ಕಂಕಣ ಚೂಡೆವ ವಂಕಿ ಬಾಜುಬಂದ ಬಂಗಾರ ಬಳಿಯು ತಗಿರೆಂದ (ಕೋಳಗೀ. ೨೧೨).

[ ಸಂ. ಚೂಡಾ ]

**ಚೂಡೋದಯ** (ನಾ).=ಚೂಡಾಕರಣ : ಪಿಕವಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯ ಚೂಡೋದಯಾನಕರಾವಂ . . . ಚಾತಕೋದಕಕೇಳೀಕೃತ ತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ (ಚಂದ್ರಪು. ೪-೩೩).

[ ಸಂ. (ಚೂಡಾ + ಉದಯ) ]

**ಚೂಣಿ** 'ಚೂಳಿ$_1$' ನೋ.

**ಚೂಣಿಗ** (ನಾ). ಸೈನ್ಯದ ಮುಂಭಾಗದಲ್ಲಿ ನಿಂತು ಕಾದುವವನು ; ಮುಂದಳದ ಯೋಧ : ಭಲರೆ ಭಲರತಿಬಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣಿ[ಪಾಠಾಂ. ಣೆ]ಗರನು (ಕುಮಾ.ಭೀ. ೪-೩) ; ರಕ್ತಪ್ರವಾಹ ಮಾದುದು ರಣಂ ಸಾಹಸವಿರಕ್ತರಾದರ್ ಖಳನ ಚೂಣಿಗರ್ (ಜಿಬಪು. ೨೪-೧೩) ; ಚೂಣಿಗರ ಚೌಕಳಿಸಿ ಕೆಡಹುತಂ (ನಂದಿಮೂ. ೧೩-೫೦).

[ ಚೂಣಿ(<ಚೂಳಿ$_1$) + – ಗ$_2$ ]

**ಚೂಣಿಗಾಳಗ** 'ಚೂಣಿಗಾಳೆಗ' ನೋ.

**ಚೂಣಿಗಾಳೆಗ, ಚೂಣಿಗಾಳಗ** (ನಾ). ಸೈನ್ಯದ ಮುಂಭಾಗದಲ್ಲಿ ನಡೆಯುವ ಯುದ್ಧ ; ಮುಂಚೂಣಿಯುದ್ಧ: ತೊಡಗಿತ್ತು ಚೂಣಿಗಾಳೆಗ [ಪಾಠಾಂ. ಕಾಳಗ]ದಲ್ಲಿ ತನತನಗೆ (ವೀರರ. ಹ. ೯೯೩-೨೩) ; ಚೂಣಿಗಾಳೆಗದ ಭಟರ್ ಎತ್ತಿದರೆ ಪಂಥ ಪಾಡುಗಳನು (ಜೈಮಿಭಾ. ೯-೧೩). **ಚೂಣಿಗಾಳಗ:** ಅಸುರದ ಭಟರವುಕಿ ಹಿಡಿದರು ಚೂಣಿಗಾಳಗವ (ಕೌಶಿರಾ. ೩೩-೧೩).

[ ಚೂಣಿ(<ಚೂಳಿ$_1$) + ಕಾಳೆಗ ]

**ಚೂಣಿನೋಟ** (ನಾ). ಕುಡಿನೋಟ ; ಕಟಾಕ್ಷ : ರಾಣಿಯರೋಲಗ ಹರೆದುದು ಪೆಣ್ಮೊಡೆಮಾಣಿಕವಹ ಪಟ್ಟದರಸಿ ಚೂಣಿನೋಟದ ಸೊಬಗಿಂದೆ ಪೂಗೋಲನ ಕಾಣಿಸಿದಳು ಕಾಂತನೆದೆಗೆ (ಮೋಹತ. ೨೨-೧೬).

[ ಚೂಣಿ (<ಚೂಳಿ$_1$) + ನೋಟ ]

**ಚೂಣಿಯಾಳ್** (ನಾ).=ಚೂಣಿಗ: ಕಾದವ ಪಾಣ್ಡ್ಯಾದಿಗಳು ಕಾದಿ ಗೆಲ್ದಂ ನರಸಿಂಹ್ವಂ ಚೂಣಿಯಾಳೋಳಾ ತಿಮಿಳವಡೆ ಪಡಲ್ವತ್ತಡಳ್ಕಾಡೆ ಪಾಣ್ಡ್ಯಂ ಸರಿದಂ (ಎಕ. XVI, ಚಿಕ್ಕನಾ. ೭೦-೬ : 1285).

[ ಚೂಣಿ (<ಚೂಳಿ$_1$) + ಆಳ್$_3$ ]

**ಚೂತ** (ನಾ). ಮಾವಿನ ಮರ ; ಸಹಕಾರ : ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ (ಜಗವಿ. ೧-೧೩) ; ಪಾಡುವೆಳ ಕೋಗಿಲೆಗಳಲಿ ರಂಜಿಸುವುದಿದು ಚೂತ (ನಿಭಾಗ. ೧೦-೨೩-೨೩). [ ಸಂ. ]

**ಚೂತಕ** (ನಾ). ಸಣ್ಣ ಜಲಾಶಯ ; ಬಗರಗೆ ; ಹೊಂಡ : "ಚುರೀ, ಚುಂಡೀ, ಚೂತಕಃ – ಈ ೩ ಬಗರಗೆ" (ಹಲಾಯು. ೧೦೩-೬೨). [ ಸಂ. ]

**ಚೂತಕುಜ** (ನಾ). ೧. ಮಾವಿನ ಮರ. ೨. [ಛಂದ] ಪ್ರತಿಯೊಂದು ಚರಣದಲ್ಲಿ ಇಪ್ಪತ್ತೆರಡು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು: ಅನಿಲಂ ಭೂಚಕ್ರವಾಕಂ ಶ್ವಸನ ಶೀತಕರಾಗ್ನಿಯುಗ್ಮಂಗಳಿಂ ಮುಂದೆ ನೆಗಟ್ದಾ ಭೂತೇಶಂ ನಿಲಲ್ . . . ಚೂತಕುಜಾಹ್ವಯಂ ನಾಮ ವೃತ್ತಮಕ್ಕುಂ (ಛಂದೋಂಬು. ೨-೧೮೭). [ ಚೂತ + ಕುಜ ]

**ಚೂತಡಿಂಭ** (ನಾ). ಮಾವಿನ ಕುಡಿ,–ಚಿಗುರು ; ಮಾಂದಳಿರು : ಜೋಕೆ, ಜೋಕೆ, ಚೂತಡಿಂಭ, ನಿನ್ನ ಕಂಡರಯ್ಯೋ ಎಂಬ ಒಬ್ಬ ಕೂಡ ಇಲ್ಲದಿಂದು ನೀನು ನನ್ನಿ ಬೆಳಕ ತಂದು ತಮವ ಕೆಣಕಿ ಮುಳಿವುದೇನೊ ? (ಮಾಂದಳಿ. ೩೬-೪). [ ಚೂತ + ಡಿಂಭ ]

**ಚೂತತತಿ** (ನಾ). ಮಾವಿನ ಮರಗಳ ಗುಂಪು ; ಮಾವಿನ ತೋಪು : ತೊಳಪೆಳವೆಲೆಯುಂ ಮೊರೆವಳಿಕುಳಂಗಳುಂ . . . ಮುಳಿಸಂ ಕಟಲ್ಚಿ ಕಳೆದುವು ಕಳಿಕಾಂಕುರ ಚೂತತತಿಗಳುಂ ಕಾಮಿಗಳಾ (ಕವಿಕಾ. ೨-೭೯).

[ ಚೂತ + ತತಿ$_2$ ]

**ಚೂತದ್ರುಮ** (ನಾ). = ಚೂತಕುಜ ೧ : ರಕ್ತಾಶೋಕ ಚೂತದ್ರುಮ ಸಮುದಿತ ಬಾಲಪ್ರವಾಳ ಧ್ವಜಂ ಬಂದುದು ಚಂಚಚ್ಚಂಚರೀಕ ಪ್ರಕರಶುಕ ಕುಲಾಲಾಪ ಕಾಂತಂ ವಸಂತಂ (ಕಾದಂಬ. ೭೭೮). [ ಚೂತ + ದ್ರುಮ ]

**ಚೂತನಂದನ** (ನಾ). ಮಾವಿನ ತೋಟ,–ವನ : ಚಂಪಕಗಂಧಿ ಮಂದಮನದೊಳ್ ಕಟ್ಪಲ್ ಬರೆ ಮಾಣ್ದು ಮಾರುತೋತ್ಕಂಪಿತ ಚೂತನಂದನದೊಳಿನ್ನಿರು ನೀನೆನೆ ಮಾವಿನಳ್ಕಿಗೊಂಬಂ ಪಿಡಿದೊಂದು ಕೆಯ್ಯೊರಸು ಮೆಯ್ಗರೆದಳ್ (ಶಾಂತಿಪು. ೮-೯೩). [ ಚೂತ + ನಂದನ ]

**ಚೂತಲತೆ** (ನಾ). ಮಾವಿನ ಮರ : ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ ಚೂತಲತೆ ಪೂತುದು (ಜೈಮಿಭಾ. ೨೯-೩೦). [ಚೂತ + ಲತೆ]

**ಚೂತವನ** (ನಾ). = ಚೂತನಂದನ : ಕಿಕ್ಕಿಱಿಗಿಱಿದು ಬೆಳೆದಡರ ಕೊಳೆಪೂತ ಚೂತವನಮೆ ಬಾಟ್ಕೋಲಿಯಾಗೆ ಪೊದರ್ತಗುಟ್ದು ಕವಲ್ತೆಳದಳಿಸುವ ಲಸದಶೋಕೋದ್ಯಾನ ಮಧ್ಯದೊಳ್ (ಶಾಂತಿಪು. ೪-೯೩ ವ) : ವಿರಚಿಸಿದಂ . . . ಸದ್ವಿನುತ ಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶನೆಂಬೊರ್ವನು . . . ವಿಮಲಜೈಮಿನಿಭಾರತದ ಕಥೆಯಾಸು (ಜೈಮಿಭಾ. ೦-೧೧). [ ಚೂತ + ವನ ]

**ಚೂತಾಂಕುರ** (ನಾ). ಮಾವಿನ ಚಿಗುರು : ಪಂಜರದ ಗಂಡುಕೋಗಿಲೆಗಳ್ಗೆ ಚೂತಾಂಕುರದ ಕುಟುಕನಿಕ್ಕಲುಂ (ಕಾದಂಪೂ. ೧೧೦೬) ; ನೀಂ ಬರಂ ಬವರಂ ಬರ್ಕುಮೆ ಸೋಲಿಸಲ್ಕುನಿಪನಂ ಚೂತಾಂಕುರಂ ಸಾಲದೇ (ಮಲ್ಲಿಪು. ೧೯-೩೬) : ಎಲೆ ಚೂತಾಂಕುರ ನಿನ್ನಂ ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತೆಂ . . . (ಎಂದು ಮಾವಿನ ಮೊಗ್ಗನ್ನು ಎಸೆಯುವಳು) (ಶಾಕುಂತ. ೫೦-೧೩೪).

[ ಚೂತ + ಅಂಕುರ ]

**ಚೂತೋತ್ಕರ** (ನಾ). = ಚೂತತತಿ : ಸಕಳೋದ್ಯಾನಂಗಳೊಳ್ ಸಂತತ ಸರಸಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ ಖರ್ಜೂರವೃಂದಂ . . . ಚೂತೋತ್ಕರಂ ದಾಡಿಮತತಿ (ಪುಷ್ಪಪು. ೯-೧೩). [ ಚೂತ + ಉತ್ಕರ ]

**ಚೂಪು$_1$** (ನಾ). ೧. ನೋಟ ; ಕಾಣ್ಕೆ ; ದೃಶ್ಯ : (ಕ). ೨. ಕಣ್ಣು ; ನೇತ್ರ : (ಕ). [ ←ತೆಲು. ಚೂಪು ]

**ಚೂಪು$_2$** 'ಚೇಪು$_2$' ನೋ.

**ಚೂಪುಗಲ್ಲು** (ನಾ). ಚೂಪಾದ ಕಲ್ಲು ; ಮೊನಚಾದ ಕಲ್ಲು : ಅವನು ಕೈಯಲ್ಲಿ ಒಂದು ಚೂಪುಗಲ್ಲು ತೆಗೆದುಕೊಂಡು ಬೇವಿನ ತೊಗಟೆ ಕೆತ್ತ ಹತ್ತಿದನು (ಬಾಲಲ. ೨೬). [ ಚೂಪು$_2$ (<ಚೇಪು$_2$)+ಕಲ್ಲು (<ಕಲ್$_3$) ]

**ಚೂಪುಗಾರಿಕೆ$_1$** (ನಾ). ತೋರಿಕೆ ; ಆಡಂಬರ ; ಬೂಟಾಟಿಕೆ : "ನೀನು ಚೂಪುಗಾರಿಕೆಯ ಕೆಲಸ ಇದು ಎಂದು ತಿಳಿದಿದ್ದೆಯೋ ?" ಎಂದು ಹೀಯ್ಯಾಳಿಕೆ ಮಾಡಿದ (ಕೊನೆಛೇ. ೨೧೬).

[ ಚೂಪು$_1$ + – ಕಾರ$_1$ (< – ಕಾಱ) + – ಇಕೆ ]

**ಚೂಪುಗಾರಿಕೆ$_2$** (ನಾ). ಕುಶಲತೆ; ಚಾಲಾಕುತನ : ಆ ಪೊಡವಿಪಾಲಕನ ಸಂಭವಂ ಗಡ ತಾಯ ಚೂಪುಗಾರಿಕೆಯೊಳಂ ಏರ್ದುತ್ತಮಾಶ್ವಮಂ (ಪರಶು. ೩೮-೪೭).

[ ಚೂಪು$_2$ (<ಚೇಪು$_2$) + – ಕಾರ$_1$ (< – ಕಾಱ) + – ಇಕೆ ]

**ಚೂಪುಗೊಳಿಸು** (ಕ್ರಿ). ಹರಿತಗೊಳಿಸು; ಹದನುಗೊಳಿಸು : ಕತ್ತಿ ಕತ್ತರಿಯನು ಸಾಣೆಯ ಹಿಡಿವರು ಸೂಜಿಯ ಚೂಪುಗೊಳಿಸುವರು (ಇಂಬಾಪ. ೭೧-೪೨). [ ಚೂಪು$_2$ (<ಚೇಪು$_2$) + ಕೊಳ್$_1$ + – ಇಸು$_3$ ]

**ಚೂಪುಗೋಲು** (ನಾ). "(ಬೇಲಿ, ಮೊ.ಗಳಿಗೆ ಉಪಯೋಗಿಸುವ) ಮರದ ಚೂಪುಗೋಲು ; ದಸಿ " (Pale. ಇಂಕನಿ).

[ ಚೂಪು$_2$ (<ಚೇಪು$_2$) + ಕೋಲು$_1$ (<ಕೋಲ್$_1$) ]

**ಚೂಪೇಣು**(ನಾ). ಹರಿತವಾದ ಮೊನೆ ; ಮೊನಚಾದ ತುದಿ : " ಬೆಣೆಯಾಕಾರದ ಹಲಗೆಯ ಚೂಪೇಣು " (Feather-edge. ಇಂಕನಿ).

[ ಚೂಪು$_2$ (<ಚೇಪು$_2$) + ಏಣು (<ಏಣ್) ]

**ಚೂಬಿಡು** (ಕ್ರಿ). ೧. ನಾಯಿಯನ್ನು ಮತ್ತೊಬ್ಬರ ಮೇಲೆ ನುಗ್ಗುವಂತೆ ಮಾಡು : ಅವನ ಮೇಲೆ ನಾಯಿಯನ್ನು ಚೂಬಿಟ್ಟನು (ರೂಢಿ). ೨. (ಅಲಂ) ವಿರುದ್ಧವಾಗಿ ನಿಲ್ಲಿಸು ; ಎತ್ತಿಕಟ್ಟು ; ಪ್ರೇರಿಸು : ಪಕ್ಕದ ಮನೆಯವರ ಮೇಲೆ ಇವರನ್ನು ಚೂಬಿಟ್ಟನು (ರೂಢಿ). [ ಚೂ+ಬಿಡು$_1$ ]

**ಚೂರ್** (ಕ್ರಿ). ಹರಿತವಾಗು ; ತೀಕ್ಷ್ಣವಾಗು. 'ಚೂರ್ಮೊನೆ' ಪರಾ.

[ <ಕೂರ್$_2$ ]

**ಚೂರಡಿಕೆ** (ನಾ). ಹೋಳು ಅಡಕೆ ; ಚೂರು ಮಾಡಿದ ಅಡಕೆ : ಎಲೆಗೆ ಸುಣ್ಣ ಹಚ್ಚಿ ಚೂರಡಿಕೆಯೊಂದನ್ನು ಬಾಯಿಗೆ ಹಾಕಿಕೊಂಡಳು (ರೂಢಿ).

[ ಚೂರು$_3$ + ಅಡಿಕೆ (<ಅಡಕೆ$_1$) ]

**ಚೂರಣ** (ನಾ). ಪುಡಿ ; ಹುಡಿ : " ಚೂರಣ – ಚೂರ್ಣ = ಹುಡಿ " (ಕದ್ರಕೋ. ೧೩). 'ಚೂರಣಿಸು' ಪರಾ. [ <ಸಂ. ಚೂರ್ಣ ]

**ಚೂರಣಿಸು** (ಕ್ರಿ). ಪುಡಿಯಾಗುವಂತೆ ಮಾಡು : ತೇರು ಬ್ಯಾರಿನದಂತೆ ಸರ್ವವ ಚೂರಣಿಸಿ ಚಯನಿಚಯ ನೋಡೊಳತೂರುವನಿಗಂಡಾಳಿದ ದನುಜರು ಪಾರಲಾಗಸಕೆ (ಜಿರಾಮಾ. ೭೮-೫೨). [ ಚೂರಣ + – ಇಸು$_3$ ]

**ಚೂರಿ, ಚುರಿ**$_1$ (ನಾ). ಸಣ್ಣ ಕತ್ತಿ ; ಸುರಿಗೆ : ರಮಣನಿಲ್ಲದ ನಾರಿ . . . ಹಡೆದವಳ ಎದೆ ಕೊರಳ ಕೊಯ್ವಂಥ ಚೂರಿ (ಪುರಂದ. ೧-೧೪೮ ಅನುಪಲ್ಲವಿ); ಇಱಿವ ಬಲ್ಲಹದಿಂದ ತಱಿವ ಖಂಡೆಯ ಮೂಗ ಕೊಱಿವ ಕರದ ಚೂರಿಯಿಂದ . . . ಬಲ ನೊಂದು (ಕಂನವಿ. ೩-೭೭); ಚೂರಿಯನು ಬಾಳನ್ನು ಶೂರತ್ವದಿಂ ಪಿಡಿದು ಸಾರಿ ರಣದೊಳಗೆ ಸಾಗಲಾ ಚೂರಿಯ ಸೂಟಿ[3] ನೋಡೆಂದ (ಸರ್ವಜ್ಞ. ೭೧೭); ಚೂರಿ ಹದ ಆದರೂ ಗಿಡ ಕಡಿಯಲಾರದು (ಗಾದೆ). **ಚುರಿ**$_1$ : ಪರಶು ತೋಮರ ಕೊಂತ . . . ಬಿಂಡಿವಾಳಿಟ್ಟ ಚುರಿ ಛಾಕು (ಜಿನಮು. ೩೮-೧೨).

**ಚೂರಿಯಿಡು** = ಚೂರಿಹಾಕು : ಕಂಡ ದೃಶ್ಯ ಅವರ ಎದೆಗೇ ಚೂರಿಯಿಟ್ಟಂತಿತ್ತು (ಹೊಸಕ್ಕ. ೨೨). **ಚೂರಿಹಾಕು** = ಚೂರಿಯಿಂದ ಇರಿ : ಯಾವನೊಬ್ಬ ಚೂರಿಹಾಕಿ ಅಂತೆ ಮಸಣದಲ್ಲಿ ನೂಕಿ (ಪಯಣ. ೬೧-೧೨) : ನೀನು ಚೀರಿಕೊಂಡೆಯಾದರೆ ಚೂರಿ ಹಾಕುತ್ತೇನೆ. ಇದು ನೋಡು (ಹೇಮಂತ. ೧೪೫). [ <ಸಂ. ಛೂರೀ ]

**ಚೂರಿಕೆ** (ನಾ).ತೀಕ್ಷ್ಣತೆ ; ಉಗ್ರತೆ(?) : ಭರದಿ ಸುತ್ತುತ ಬಿಗಿದು ಕಚ್ಚುತ ತೆರೆದು ಫಣಗಳ ಕಣಾಗಳಿಂದಲೆ ಸುರಿವ ಕಿಡಿಗಳ ಚೂರಿಕೆಯೊಳೊಪ್ಪಿರಲು ಕಾಳಿಯನು ನೆರೆದ ಗೋಪೀಜನವು ಕಾಣುತ ತರಳಗೀ ವಿಧಿಯಾಗಲೆವಿಷ್ಣಾಹರಣವೇಕೆಂದೆನುತ ಮಡುವೊಗಲೆದ್ದರವರಂದು (ಕೃಕರ್ಣಾ. ೨-೪೧).

[ ಚೂರ್ + – ಇಕೆ ]

**ಚೂರಿತ** (ನಾ). = ಚುರಿತಕ (?) : ಕೊರಳು ಕಂಗಳೊಳಿರಲು ನಖದಲಿ ಬೆರಟು ಎರಡಕೆಯೊಯಿದು ಬಂದಡೆ ಹಿರಿದು ಮರ್ದಿಸೆ ಕರುಣೆ ಸುಖಿಪಳು ಬಹಳವೆಯಿದವಳು ಮೆರೆವ ಮೆಲ್ಲೆದೆಗೆಯಿ ತ್ರಾಡಣ ವರ ಸುನಾಭಿಗೆ ಬರಲು ಚೂರಿತ ಸ್ಮರನ ಮಂದಿರ ಜಘನಕೆಯಿತರೆ ಬೆರಳ ನಖಗಳನು (ಕಳಶ್ರೀಕ. ೧೧-೫೯). [ ? ]

**ಚೂರಿಪಾನ** 'ಸೂರಿಪಾನ' ನೋ.

**ಚೂರಿಸು**$_1$ (ಕ್ರಿ). ೧. ಚೂರುಚೂರುಮಾಡು ; ಪುಡಿಮಾಡು ; ನಾಶಗೊಳಿಸು : ಎಡಬಲಕೆ ತೂಳುವ ಮದೇಭವ ಕಡಿದು ಹರಹಿದನೌಕಿ ಚೂ[ಪಾಠಾಂ. ಭೂ]ರಿಸಿ ಗಡಣಿಸುವ ಭೂಪರಿಗೆ ಮಾಡಿದನಮರಪದವಿಯನು (ಕುವ್ಯಾದ್ರೋ. ೧೧-೧೩) : ಅಶ್ವವನ್ನೆದೆ ಮಿಾಂಟಿ ಕೂರಸಿಯಿಂ ಚೂರಿಸುತೊಳಪೊಕ್ಕುರುಬುವ ಯವನ ಸಮೂಹಾಧೀಶನುರುಬೆಗಂದಿದಿರಾಂತಂ (ಕಳನ್ನ. ೨-೩೭). ೨. ಕಾಡು ; ಪೀಡಿಸು : ಬಾರಿಪರಿದು ಚಿಂತಿಸಿ ಚೀಱಿ ತಱಿಚುತ ಚೂರಿಸದಿಚ್ಚೆ ಚೈತನ್ಯ ಚೋರತ್ವವೆತ್ತಿದೆಯೆನೆ(ಶತಸಾಂ.೭೫-೮೩).

[ ಚೂರು$_3$ + – ಇಸು$_3$ ]

**ಚೂರಿಸು**$_2$ (ಕ್ರಿ). ೧. ಇರಿ ; ತಿವಿ : ಪಾರ್ಥನ ಕಟ್ಟಳವಿಯಲಿ ಚೂರಿಸಿದ ರುಬ್ಬಣದ ಮೊನೆಗಳಲಿ (ಕುವ್ಯಾಅ. ೨೦-೨೪) : ದುಶ್ಯಾಸನನ ಮಗನಿದಿರಾಗಿ ಖಡುಗದ ಮೊನೆಯ ಚೂರಿಸಿ (ಕುವ್ಯಾದ್ರೋ. ೬-೫೭) ; ಚತುರಂಗದ ಚಡಾಳತೆಯಿಂದ ಚೂರಿಸುವಸ್ತ್ರಶಸ್ತ್ರದಲಿ (ತೊರರಾ. ೬-೧೭-೨೯) ; ಚೂರಿಸುವ ಖಂಡೆಯದ ಕರದ ಬಹು ರೌದ್ರರಸಧಾರಣಾನನದ ಕಣ್ಗಳ ಕಿಡಿಯ (ಜಬಪು. ೪೨-೪೫). ೨. ಹರಡು ; ಚಾಚು ; ನೀಡು : ಕಾನಿಡುವ ಕಬ್ಬೊಗೆಯ ಚೂರಿಸುವಾನನದ . . . ಬಸಿವ ವಿಷದಲಿ ಬಾದುದುರಗಾಸ್ತ್ರ (ಕುವ್ಯಾಕ. ೨೫-೧೮) ; ಚೂರಿಸುವ ನಿಡುನಾಲಗೆಯ ಪೂತ್ಕಾರರವದಕ್ಷಿಗಳಲುಬ್ಬುವ ತೋರಗಿಡಿಗಳ ದಾಡೆಗಳ (ತೊರರಾ. ೬-೧೫-೩೩) ; ಜಿಹ್ವೆಯಂ ಚೂರಿಸು ತಲುರಿ ಮಸಗಿ ಕಡಲಂತೆ ಗರಳಮಂ ಕಾರಿ (ಕುರಂಗ. ೬೯-೪೦).

[ ಚೂರಿ + – ಇಸು$_3$ ]

**ಚೂರು**$_1$ 'ಸಿವುಱು$_1$' ನೋ.

**ಚೂರು**$_2$ 'ಸೂರ್' ನೋ.

**ಚೂರು**$_3$ (ನಾ). ೧. ತುಂಡಂ ; ಭಾಗ ; ಹೋಳಂ : " ಭಿತ್ತಂ, ಶಕಲಂ, ಖಂಡಂ, ಅರ್ಧಃ–ಳ ಮುರುಕು ಚೂರುಗಳ ಹೆಸರು " (ಸಿದ್ಧಾಂತಿ. ೨೯) ; ಆ ರೊಟ್ಟಿಯನ್ನು ಮುರಿದು ಏಳು ಚೂರು ಮಾಡಿ, ತೀರ ಸಣ್ಣ ಚೂರು ತನಗೆ ಇಟ್ಟುಕೊಂಡು, ಉಳಿದ ಆರು ಚೂರುಗಳನ್ನು ಆರು ಮಂದಿ ಮಕ್ಕಳಿಗೆ ಕೊಟ್ಟನು (ಮುಂಬಯಿ. ೪-೭೫) ; ಕಲ್ಲಿನ ಚೂರು ಮೊಳಕೆಯನ್ನು ಉತ್ಪತ್ತಿ ಮಾಡಲಾರದು (ತತ್ವಪ್ರಾ. ೧೯೭). ೨. ತುಸು ; ಸ್ವಲ್ಪ ; ಕೊಂಚ : ಅವಳಿಗೆ ಒಂದು ಚೂರು ನಾಚಿಕೆಯಿಲ್ಲ (ರೂಢಿ): ಒಂದು ಚೂರು ಇಲ್ಲಿಗೆ ಬಂದುಹೋಗು (ರೂಢಿ).

**ಚೂರುಚೂರು**(ದ್ವಿರುಕ್ತಿ) : ಮಡಕೆ ಕೆಳಗೆ ಬಿದ್ದು ಚೂರುಚೂರಾಯಿತು (ರೂಢಿ). **ಚೂರುಚಾರು, ಚಾರುಚೂರು** = ಅಲ್ಪ ಸ್ವಲ್ಪ ; ಚಿಕ್ಕಪುಟ್ಟ : ತನ್ನ ಮೈಮೇಲಿನ ಚೂರುಚಾರು ವಸ್ತುಗಳನ್ನು ಮುರಿಸಿ . . . ಅವನಿಗೆ ವಿದ್ಯಾಭ್ಯಾಸ ಮಾಡಿಸಿದಳು (ಮುಂಬಯಿ. ೪-೫೦): ಮೈಮೇಲಿದ್ದ ನಾಲ್ಕಾರು ಚೂರುಚಾರು ಒಡವೆಗಳು . . . ಹೋಗಿಬಿಟ್ಟವು (ಸಂಚಿತ್ರ. ೩೧) ; ಸ್ವಪ್ನವಾರ್ತೆಯನ್ನು ಚೂರುಚಾರು ಬಿಡದಂತೆ ನಿವೇದನ ಮಾಡಿದರು (ಕಥವಿ. II, ೦೭೪); ಉಪಾಧ್ಯಾಯರಿಗೆ ಕಾಯಿಪಲ್ಯ, ಕಾಳುಕಡ್ಡಿ ತಂದು ಕೊಡುವವರಿಗೆ, ಅವರ ಮನೆಯ ಚಾರುಚೂರು ಕೆಲಸ ಮಾಡಿ ಕೊಡುವವರಿಗೆ . . . ಶಿಕ್ಷಕರ ಬೆತ್ತವು . . . ನಿಂತು ಬಿಡುತ್ತಿತ್ತು (ನಾಡಿಗೇ. ೧೦೫).

[ <ಪ್ರಾ. ಚೂರ ]

**ಚೂರ್ಣಗೊಳಿಸು** (ಕ್ರಿ). ಏಕಾಗ್ರವಾಗಿಸು ; ಒಮ್ಮುಖವಾಗಿಸು ; ಚೂಪುಮಾಡು (?) : ಉರೆ ಶ್ರದ್ಧೆಯಿಂ ಕನಕವಿಷ್ಟರದಲಿ ಮಂಡಿಸಿರೆ ಮಾರ್ತಾಂಡಂಗೆ ನೀರ್ಚಲ್ಲಿ ವಿದ್ಯುಕ್ತದಿಂ ನಮಿಸಿ ಕರಣಮಂ ಚೂರ್ಣಗೊಳಿಸುನ್ಮೀಲನೇತ್ರವಾಗಿ . . . ಮೈದೋರ್ದನು ' (ಪರಕು. ೨೯-೬).

[ ಚೂರ್ಣ$_0$ + ಕೊಳ್$_1$ + – ಇಸು$_3$ ]

**ಚೂರ್ಣ$_1$** (ನಾ).ಒಂದು ಬಗೆಯ ಗೆಡ್ಡೆ ; ಸುವರ್ಣಗೆಡ್ಡೆ : "ಅರ್ಶೋಘ್ನಃ, ಸೂರಣಃ, ಕಂದಃ–ಕಿ ಚೂರ್ಣದ ಗಡ್ಡೆ " (ಸಿದ್ಧಾಂಕೌ. ೦೩೦) : ಗಡ್ಡೆಗಳು : ಚೂರ್ಣ, ಕೆಸವೆ, ಗೆಣಸು (ನಮ್ಮನು. ೨೩೭). [ <ಸಂ. ಸೂರಣ ]

**ಚೂರ್ಣ$_2$** (ನಾ). ೧. ಸುಣ್ಣ : ಸ್ಥೂಲವಡಿಕೆಯಾದಂತೆ ಸೂಕ್ಷ್ಮ ವರ್ಣವಾದಂತೆ ಕಾರಣ ಚೂರ್ಣವಾದಂತೆ ಮೂಱು ಕೂಡಿದ ಮತ್ತೆ ಬಣ್ಣವಾಯಿತ್ತು ರಜ (ಮೋಹಮು. ೧೦೪–೪೩೦) : ಪೊಂಬರಿಯಣದಿ ಪೋಳ್ಮಣಿಮಯವಡೆದಿರ್ದ ಸಂಬಳಿಗೆಯ ಪರ್ಣ ಚೂರ್ಣ ಕೊಂಬ ಕರ್ಪೂರಕರಂಡವಸ್ಥರನ ತಲೆಗಿಂಬಿನೊಳ್ ತಂದಿರಿಸಿದರು (ಪ್ರೋಹಚ. ೧೬–೨೭).೨. ಪುಡಿ ; ಹುಡಿ : ಸೂಸುವ ನವ ಪಟವಾಸದ ಚೂರ್ಣಂ ಮಾಸರಮಾದುದು ದಿಕ್ಪರಿಪೂರ್ಣಂ (ಚಂದ್ರಪ್ರ. ೪–೬೩ ರಗಳೆ) : ವೈಯೊಡ್ಡುವಡೆ ಪಂಚಾಗ್ನಿಯುಂಟು ತಲೆಮುಡಿಯಾಗಿ ನಿಲುವಡುಕ್ಕಿನ ಸೂಜಿಯುಂಟು ಮೆಲುವೊಡೆ ಲೋಹಚೂರ್ಣವುಂಟು (ಹಕಶಾ. ೮–೬೨) ; ಚೂರ್ಣ, ಘೃತ, ತೈಲ . . . ತಯಾರಿಸುವಾಗ ಕೆಂಪು ಚಂದನವನ್ನೂ ಉಪಯೋಗಿಸಬೇಕು (ಸಕಪ್ರ. XII, ಪ್ರಸ್ತಾವನೆ). ೩. ಸುವಾಸನೆಯ ಪುಡಿ; ಪರಿಮಳದ ಹಂಡಿ : ಕಣ್ಣಿಗೆ ಅಂಜನ, ತುಟಿಗೆ ಕೆಂಪು, ಮುಖಕ್ಕೆ ಚೂರ್ಣಗಳನ್ನು ಆಧುನಿಕ ರೀತಿಯಲ್ಲಿ ಅಲಂಕಾರಕ್ಕಾಗಿ ನಿಯೋಜಿಸುತ್ತಿದ್ದರು (ಭಾರದ. ೦೩). ೪. ತಂಡು; ಚೂರು : ತಮ್ಮ ಪತ್ರದ ಚೂರ್ಣಮೆಲ್ಲಮುಮನುಡುಗುತಂ (ಸಂಚಿರ. ೭–೯೦). ೫. ಚೋರವಿದ್ಯೆಗಳಲ್ಲಿ ಒಂದು ; ಪುಡಿ ಎರಚಿ ಮಂತ್ರ ಹಾಕುವುದು. 'ಚೂರ್ಣಯೋಗ' ಪರಾ. ೬. [ಕಾವ್ಯವಿ] ಗದ್ಯದ ಒಂದು ಭೇದ : "ಸುಲಭವಾದ ಗದ್ಯ ಶೈಲಿಗೆ 'ಚೂರ್ಣ'ವೆಂದು ಹೆಸರು. ಇದರಲ್ಲಿ ಪದಗಳು ಸಮಾಸವಾಗದೇ (ಅಥವಾ ದೊಡ್ಡ ಸಮಾಸಗಳಿರದೆ) ಬಿಡಿಬಿಡಿಯಾಗಿ ಇರುತ್ತವೆ" (ಕೃಬಿಡಿ. ೧೭೮). [ ಸಂ. ]

**ಚೂರ್ಣಂಗೆಯ್** (ಕ್ರಿ). ಪುಡಿಮಾಡು; ಅರೆ: ಇವನೆಲ್ಲ ಚೂರ್ಣಂಗೆಯ್ದು ಸೇವಿಸೆ (ಸಕಪ್ರ. ೨೩೮). [ ಚೂರ್ಣ$_2$ + ಕೆಯ್$_1$ ]

**ಚೂರ್ಣಕ**(ನಾ). ೧. ಅರೆಯುವುದು; ಪುಡಿಮಾಡುವುದು, ೨."ಪದಾರ್ಥಗಳನ್ನು ಪುಡಿಮಾಡುವ ಯಂತ್ರ ; ಚೂರ್ಣಕ " (Disintegrator. ಇಂಕನಿ): ೩.=ಚೂರ್ಣ$_2$ ೬. : ಕೆಲವರು ಮುಕ್ತಕ, ವೃತ್ತಗಂಧಿ ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕು ಭಾಗ ಮಾಡಿ . . . ಚೂರ್ಣಕವು ಅಲ್ಪಸಮಾಸಕವೆಂದೂ ಹೇಳುತ್ತಾರೆ (ಕೃಬಿಡಿ. ೦೭೯ ಅಡಿಟಿ). [ ಸಂ. ]

**ಚೂರ್ಣಕುಂತಲ, ಚೂರ್ಣಕುಂತಳ** (ನಾ). ಮುಂಗುರುಳು ; ಸುಳಿಗೂದಲು : ಹದವಡೆದ ಬೇರವಿೞಸೆಗೂ, ನಿರಿನಿರಿಗೊಳಿಸಿರುವ ಚೂರ್ಣಕುಂತಲಕ್ಕು-ಪರಮ ನಾಪಿತವ್ರತ ! (ಮುಂತ್ರಿಕ ೯೨–೨೪). **ಚೂರ್ಣಕುಂತಳ**: ಶ್ಲೋಂಕೃತಿಯಿಲ್ಲದಳಿವಿಂಡುಗಳೋಯೆನಲಾ ನೀಱಯಾ ತೊಳಪ ಮುಡಿ ಚೂರ್ಣಕುಂತಳಮೆಸೆದವೆಯ್ದೆ ಕಂಗಳಿಗೆ (ಗುಥಚ. ೨೩–೮). [ ಸಂ. ]

**ಚೂರ್ಣಕುಂತಳ** 'ಚೂರ್ಣಕುಂತಲ' ನೋ.

**ಚೂರ್ಣಗಡ್ಡೆ, ಚೂರ್ಣಗೆಡ್ಡೆ** (ನಾ). ಸೂರಣಗಡ್ಡೆ ; ಸುವರ್ಣಗೆಡ್ಡೆ : " ಅರ್ಶೋಘ್ನಃ, ಸೂರಣಃ, ಕಂದಃ–ಕಿ ಚೂರ್ಣಗಡ್ಡೆ, ಸೂರಣದ ಗಡ್ಡೆ " (ಸಿದ್ಧಾಂಕೌ. ೦೩೦). **ಚೂರ್ಣಗೆಡ್ಡೆ** : ಸುವರ್ಣಗೆಡ್ಡೆ, ಚೂರ್ಣಗೆಡ್ಡೆ, ಸೂರ್ಯನ ದಂಟು (ಮುಕ್ತಿಶಿ. ೩–೧೦೦). [ ಚೂರ್ಣ$_1$ + ಗಡ್ಡೆ ]

**ಚೂರ್ಣಗೆಡ್ಡೆ** 'ಚೂರ್ಣಗಡ್ಡೆ' ನೋ.

**ಚೂರ್ಣನ** (ನಾ). ಅರೆಯುವುದು ; ಪುಡಿಮಾಡುವುದು : ಚೂರ್ಣನ ವಿಮುಖೀಕರಣ ದುರ್ಭೋಗ್ಯ ನಾನಾ ವಿಧಾಸಂಖ್ಯಾತ ತೀವ್ರ ವೇದನಾರೂಪಂಗಳಾಗಿ (ವಿವೇಕ. ೦೮೦). [ ಸಂ. ]

**ಚೂರ್ಣನೀಯ** (ಗು). ಪುಡಿಮಾಡಲು ಬರುವ ; ಪುಡಿಗೊಳಿಸುವುದಕ್ಕೆ ಸಾಧ್ಯವಾದ : ಅನಿಷ್ಟಕೋಷ್ಠಪುಟಮಧ್ಯಸಂಧಾರಣಮಾತ್ರ ಚೂರ್ಣನೀಯ ಶಾಕವರ್ತಿಕಮುಂ (ಆದಿಪು. ೧೧-೨೬ ವ). [ ಸಂ. ]

**ಚೂರ್ಣಮಾಡು**(ಕ್ರಿ).=ಚೂರ್ಣಂಗೆಯ್: ಸೈಂಧವಲವಣ, ಕೊನ್ನಾರಿಗಡ್ಡೆ . . . ಇವಂ ಚೂರ್ಣಮಾಡಿ ನಸ್ಯಮಂ ಮಾಡೆ ಶೀತಜ್ವರಂ ಮಾಣ್ಗುಂ (ಸಕಪ್ರ. ೭೯). [ ಚೂರ್ಣ$_2$ + ಮಾಡು$_1$ ]

**ಚೂರ್ಣಯೋಗ** (ನಾ). (ಮಂತ್ರಿಸಿದ) ಹುಡಿಯನ್ನು ಚೆಲ್ಲಿ ಮರುಳುಗೊಳಿಸುವುದು : ಚೂರ್ಣಯೋಗ ಘುಟಿಕಾಂಜನಮೆಂದಿವು ಮಾಡಲಾಗೊಡೆಯ ತಸ್ಕರ ಶಾಸ್ತ್ರಂಗಳೊಳ್ (ವಡ್ಡಾರಾ. ೧೨೨–೦೭).

[ ಚೂರ್ಣ$_2$ + ಯೋಗ ]

**ಚೂರ್ಣವಾಸ** (ನಾ). ವಾಸನೆ ಕಟ್ಟಿದ ಪುಡಿ ; ಸುವಾಸನೆಯ ಪುಡಿ : ಮಾಗನ ಮಯ್ಯಂ ಚೂರ್ಣವಾಸದಿನುದ್ವರ್ತಿಸಿ ಮಂದರಾಭಿಷೇಕಾರ್ಹನಾಗೆಂದು ಪರಸಿ (ಚಾವುಂಪು. ೨೩೩). [ಚೂರ್ಣ$_2$ + ವಾಸ$_3$ ]

**ಚೂರ್ಣಾಳಕ** (ನಾ). = ಚೂರ್ಣಕುಂತಲ : ಸೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿವುತ್ತಿರೆಯುಂ (ರಾಜಶೇ. ೭–೧೭ ವ).

[ ಚೂರ್ಣ$_2$ + ಅಳಕ$_3$ ( = ಅಲಕ) ]

**ಚೂರ್ಣಿ** (ನಾ). ೧. ನೂರು ಕವಡೆಗಳ ಮೊತ್ತ. ೨. ಉತ್ತರವನ್ನು ಕೊಡಲು ಸಾಧ್ಯವಾಗದಿರುವಂಥ ತರ್ಕವನ್ನು ಅರಿಸುವಿಕೆ. [ಸಂ. ]

**ಚೂರ್ಣಿಕೆ** (ನಾ). ೧. ಸುಲಭ ಶೈಲಿಯ ಒಂದು ಗದ್ಯ ಪ್ರಕಾರ : ಚೂರ್ಣಿಕೆ ಲತಿಕೆ . . . ಚಿತ್ರಮೆಂಬ ಗದ್ಯಬಂಧದೊಳಂ (ಅಸಂಪು. ೧೦–೨೮ ವ) : ಗಣೇಶ ಪ್ರಾರ್ಥನೆಯಾದ ತರುವಾಯ ಸಭಾಪೂಜೆ ನಡೆಯುತ್ತದೆ. ತರುವಾಯ ಚೂರ್ಣಿಕೆ(ಭಾರದ.೩೩೬) ; ಈಗಲೂ ಚೂರ್ಣಿಕೆ ಮತ್ತು ಶ್ಲೋಕ ವೃತ್ತಗಳ ರಾಗ ರಾಗದ ಹಾಡಿಕೆ ದೇವಪೂಜಾಸಮಯದಲ್ಲಿ ರೂಢಿಯಲ್ಲಿದೆ (ಸಂಗೀಚಂ. ೭೭). ೨. ಮದುವೆಯ ಸಂದರ್ಭದಲ್ಲಿ ಹಾಡುವ ಒಂದು ಶೋಭನ ಗೀತ (?) : ಶೋಭವ ಕೊಱದು ದಿಬ್ಬಣಿಗರ ಹೇಮ ವಸ್ತ್ರಾಭರಣದೊಳೊಲ್ದು ತಣಿಪಿ ಶೋಭನ ಮಾಡದೆ ಚೂರ್ಣಿಕೆ ಮಾಳ್ಪಾಗ ಲಾಭದ ಪರದರುತ್ಸವವೆ (ಭರತ. ೩೮–೦೨೮).

[ ಸಂ. ಚೂರ್ಣಿಕಾ ]

**ಚೂರ್ಣಿಗ** (ನಾ). ಪುಡಿ ಮಾಡುವವನು ; ನಾಶಮಾಡುವವನು : ಅಡಸಿ ವೈರವ ಭಾವ ಪರಿಯೊಳು ಕೆಡುಕ ಹಡೆವರು ನೂರುಮಂದಿಯ ನಿಡಿವನಾ ಚೂರ್ಣಿಗನ ತೆರದೊಳಗೆ (ಜನಭಾ. ೭-೦೩).

[ ಚೂರ್ಣ$_2$ + – ಇಗ ]

**ಚೂರ್ಣಿಸು** (ಕ್ರಿ). ಪುಡಿಮಾಡು : ಕಲ್ಲುಕಂಬವ ಚೂರ್ಣಿಸಿದ ಪರಾಕ್ರಮವಿೀಗಳೆಲ್ಲಿ ಪೋದುದು (ಶಾಂತೀಶ. ೨-೦೧೬) ; ಅಂಜನಗಿರಿಯಂ ಚೂರ್ಣಿಸಿ ಕುಂಡಳಮಷ್ಟಂತೆಯಾದಂ . . . ಕರಂಡದೊಳಂಜನಮಂ ತುಂಬಿ ಬೊಮ್ಮನಿರಿಸಿದನೋ (ಹಮ್ಮೀರ. ೩-೦೩). [ ಚೂರ್ಣನ + – ಇಸು$_3$ ]

**ಚೂರ್ಣೀಕರಿಸು** (ಕ್ರಿ). = ಚೂರ್ಣಿಸು : ವನದೊಳಗಿದ್ದ ಗೋಮಯಮುಂ ಚೂರ್ಣೀಕರಿಸಿ ದಹಿಸಿ ಮಾಡಿಕೊಂಬುದೇ ಅನುಕಲ್ಪವೆನಿಸುವದು (ವಿವೇಕ. ೬೩). [ ಚೂರ್ಣೀಕರಣ$_0$ + – ಇಸು$_3$ ]

**ಚೂವೊರ್ಣೆ** (ನಾ.) ಹರಿತವಾದ ತುದಿ ; ತೀಕ್ಷ್ಣವಾದ ಧಾರೆ : ನೀರ್ಗಾದ್ರ್ರಿತೆ ಮುಳ್ಳ ಚೂವೊರ್ಣೆ ಭವಟ್ಟಿತ್ತಕ್ಕೆ ತತ್ತ್ವಜ್ಞಾತಾವಿಭವಂ ಸಾಜಂ (ಶಾಂತಿಪು. ೧೧–೯೪). 'ಕೂವೊರ್ಣೆ' ಪರಾ. [ಚೂರ್+ಮೊನೆ$_1$]

**ಚೂವೊರ್ಣೆಗೊಳ್** (ಕ್ರಿ). ಹರಿತವಾದ ತುದಿಯನ್ನು ಹೊಂದು,-ಪಡೆ : ವನಿತಾಪಾದಪಯೋಜಸಂಗಸುಖದಿಂದಂಗಕ್ಕೆ ರೋಮಾಂಚಮಾಯ್ತೆನೆ ನಟ್ಟಂತಿರೆ ಸೂಸೆ ಸೂಜಿಗಳನಾ ಪೊಂಜಾಜಿಯೊಂದೊಂದು ಚೂವೊರ್ಣೆಗೊಂಡೊಂದಲರಾಯ್ತು ಕೋದ ತೆಱದಿಂದಿರ್ದಂತು ಪುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩-೯೯).

[ ಚೂವೊರ್ಣೆ + ಕೊಳ್$_1$ ]

**ಚೂರ್** 'ಸೂರ್' ನೋ.

**ಚೂಲ,** ಚೂಳ₂ (ನಾ). ೧. ಜುಟ್ಟು : ಶಿಖೆ. ೨. ತುದಿ : ಶಿಖರ. ಇಲ್ಲಿ ಕವಿಕರ್ಮ ಸಾರ್ಥಕತೆಯ ಚೂಲವನ್ನು ಮುಟ್ಟಿದೆ (ಧಾವಗೀ. ೧೩೭) : ಆನಂದವೇ ಸಮಸ್ತ ವ್ಯಾಪಾರಗಳ ಮೂಲ ಮತ್ತು ಚೂಲ (ಸೌಂದಸ. ೧೦೦). **ಚೂಳ₂ :** ೨. ಖೇಚರ ಚಕ್ರವರ್ತಿ ಧರಣೀಧ್ವಜನಸ್ಮದಧೀಶನು ದ್ವಿತಾರಾಚಳಚೂಳಶೇಖರಂ (ಚಂದ್ರಪ್ರ. ೬-೧೯) : ನಿವಿಧ್ದರ್ದುದೀ ಕಾಂಚನ ಶೈಳಂ ಋತುವಿಮಾನ ಚುಂಬಿತಚೂಳಂ (ಪುಷ್ಪಪು. ೧೧-೫೬). [ ಸಂ. ]

**ಚೂಲಿಕೆ,** ಚೂಳಿಕೆ (ನಾ). ೧. (ಆನೆಯ) ಕಿವಿಯ ಬುಡ,- ತಳಭಾಗ : ಮೃದುಸುವೃತ್ತ ಬಹಲಪ್ರಲಂಬ ಶಿವಾತರ ಮಹಾಸ್ರೋತೋಪರಿಧಿನ್ನಾಂ ತಸುತ್ಕೃಷ್ಟಾವಿಪುಲ ಚೂಲಿಕಾದುಂದುಭಿನಿರ್ಘೋಷಕರ್ಣನುಂ (ಆದಿಪು. ೧೨.೫೬ ವ). ೨. ಹುಂಜದ ತಲೆಯಲ್ಲಿರುವ ಕೊಟ್ಟು; ತುರಾಯಿ. ೩. ಬೆಟ್ಟ, ಮರ ಮುಂತಾದುವುಗಳ ತುದಿ,-ಶಿಖರ. ೪. ಮುಂಭಾಗ ; ಮುಂಬದಿ. ೫. [ಕಾವ್ಯಮಿ] ನಾಟಕದಲ್ಲಿ ಬರುವ ವಿಷಯಗಳನ್ನು ತೆರೆಯ ಹಿಂದಿನಿಂದ ಸೂಚಿಸುವುದು : ಚೂಲಿಕಾ-ಪಾತ್ರಗಳು ರಂಗಕ್ಕೆ ಬರದೆ ತೆರೆಯ ಹಿಂದೆಯೇ ಇದ್ದು ಮಾತನಾಡಿ ಯಾವುದಾದರೂ ಒಂದು ಸಂಗತಿಯನ್ನು ಸೂಚಿಸುವುದು (ಕೃ ಹಿ ತ. ೨೦೬). ೬. [ಜೈನ] ದೃಷ್ಟಿ ವಾದದ ಐದು ಪ್ರಕಾರಗಳಾದ ಪರಿಕರ್ಮ, ಸೂತ್ರ, ಪ್ರಥಮಾನು ಯೋಗ, ಪೂರ್ವಗತ ಮತ್ತು ಚೂಲಿಕೆ ಎಂಬುವುಗಳಲ್ಲಿ ಕೊನೆಯದು: ಆ ದೃಷ್ಟಿವಾದು ಪರಿಕರ್ಮಮುಂ ಸೂತ್ರಮುಂ ಪ್ರಥಮಾನುಯೋಗಮುಂ ಪೂರ್ವಗತಮುಂ ಚೂಲಿಕೆಯುಂ ಎಂದು ಪಂಚಪ್ರಕಾರಮಕ್ಕುಂ (ಕರ್ಣ್ಣಪ್ರ. ೬೦). **ಚೂಳಿಕೆ :** ೧. "ಕರ್ಣಮೂಲಂ, (ತು) ಚೂಳಿಕಾ-ಈ ೨ ಕಿವಿಯ ಮೊದಲ್" (ಹೆಲಾಯು. ೩೬-೩೪). ೩. ಆ ಚೂಳಿಕಾಭಾಗದಾದಲೆಯೊಳ್ ನಿಂದವುದೂರ್ಧ್ವಲೋಕಮನೆ . . . ಶ್ರೀಸುಂದರಂ ಮಂದರಂ (ಆದಿಪು. ೧-೩೦) ; ಕನಕಾಚಲ ಚೂಳಿಕೆಯಿಂ ಕನಲ್ದು ಗರ್ಜಿಸುತುಮೆಟ್ಟ ಸಿಂಗದ ಪೋಲ್ . . . ಉತ್ತಂಸ ಕಿರಣ ಕೇಸರನೆಟ್ಟಂ (ಶಂಶಾಮಾ. ೯-೫೨) : ಚೂಳಿಕೆಯುಗ್ರಭಾಗದಿಂ ಸ್ವರ್ನಿಳಯಂಬರಂ ನಿವಿರ್ದು . . . ಮೇರುಗಿರಿ ವೃಟ್ಟಿಸುತ್ತಿರ್ದದಗುರ್ವ ನಾವಗಂ (ಶಾ ಧ ಪು. ೧-೬೩). ಹೆ ಮ ವ ತ್ಕೂಳುವತಿರಥರಾಜಿಗಳ ಗಿರಿಚೂಳಿಕೆಯುಲೇ ಚೆಲ್ಲಬಡಿದಮರಾಳಿಹೊಗಳಲು ಕಾದಿದರು ನೀಲಾಂಗದಾದಿಗಳು (ತೊರಠಾ. ೬-೩೪-೩೦). ೪. ಧಾಳಿಯಟ್ಟುದು ರಾಯದಳ ಪಾಂಚಾಲದೇಶಕೆ ಮುಂದೆ ಹೊಕ್ಕುದು ಚೂಳಿಕೆಯಲಿ ಸುಯೋಧನಾದಿಗಳೂರನರವಣಿಸಿ (ಕು ಭಾ, ಅ. ೬-೩೪). ೬. ಅಮ್ಮು ಚೂಳಿಕೆಯಂಮನಾಜಿವಧಿಯುಮಂ. . . ಜೆಸಗೊಂಡು (ಅದಿಪು. ೩-೪೦ ವ). ೭. ಕೂದಲು; ಕೇಶ. 'ಚೂಳಿಕಾವರ್ಧನ' ನೋಡಿ. [ ಸಂ. ಚೂಲಿಕಾ ]

**ಚೂಲು** 'ಸೂಲ್' ನೋ.

**ಚೂಷೆ** (ನಾ). ತೊಗಲಿನಿಂದ ತಯಾರಿಸಿದ ಆನೆಯ ನಡುಕಟ್ಟು. [ ಸಂ. ಚೂಷಾ ]

**ಚೂಳ₁,** ಚೂಟ (ನಾ). ಜುಟ್ಟು ; ಶಿಖೆ : "ಚೂಳ (ಚಂಡಿಕೆ) -ಚೂಡಾ= ಶಿಖೆ" (ಶಬ್ದಮಣೀ. ೦೩). △ **ಚೂಟ :** ಈಡಿತಂ, ಈಬ್ತಂ ; ಚೂಡಾ, ಚೂಟಂ (ಶಬ್ದಾನು. ೦೪೦ ವ್ಯಾಖ್ಯಾ). [ <ಸಂ. ಚೂಡಾ ]

**ಚೂಳ₂** 'ಚೂಲ' ನೋ.

**ಚೂಳಯ** 'ಚೂಳೆಯ' ನೋ.

**ಚೂಳಾಕರಣ** (ನಾ).=ಚೂಡಾಕರಣ: ಚೂಳಾಕರಣದಿನಶ್ವಲೆ ಭಾಳಚ್ಛಾಯೆ ಯೊಳೆ ಭಂಗಮಂ ಪಡೆದರಿಭೂಪಾಳರ್ಗೆ ದೀನವೃತ್ತಿಯ ಚೂಳಾಕರ್ಮಮ ನೊಡರ್ಚಿದಂ ನೃಪತನಯಂ (ಮಲ್ಲಿಪು. ೪-೧೩೬). [<ಸಂ. ಚೂಡಾಕರಣ]

**ಚೂಳಾಕರ್ಮ** (ನಾ).=ಚೂಡಾಕರ್ಮ: ಅರಿಭೂಪಾಳರ್ಗೆ ದೀನ ವೃತ್ತಿಯ ಚೂಳಾಕರ್ಮಮನೊಡರ್ಚಿದಂ ನೃಪತನಯಂ (ಮಲ್ಲಿಪು. ೪-೧೩೬).

[ <ಪ್ರಾ. ಚೂಲಾಕಮ್ಮ./ಸಂ. ಚೂಡಾಕರ್ಮ ]

**ಚೂಳಾಮಣಿ** (ನಾ). = ಚೂಡಾಮಣಿ : ಶ್ರೀಜಿನಮಾರ್ಗ್ಗನೀತಿಸಮ್ಪನ್ನ ಸ್ಪರ್ಪ ಚೂಳಾಮಣಿ (ಎಕ. II, ೪೪೩ ; ಹು. 700).

[ <ಪ್ರಾ. ಚೂಲಾಮಣಿ./ಸಂ. ಚೂಡಾಮಣಿ ]

**ಚೂಳಾಯ್ತು** 'ಸೂಳಾಯ್ತು ನೋ.

**ಚೂಳಿ₁,** ಚೂಣೆ, ಚುಳಿ, ಚೂಣಿ(ನಾ). ೧. ಮುಂಭಾಗ; ಮುಂದಿನ ಸಾಲು: ಚೂಳಿಯೊಳ್ ಮೃದೋಜಿದಿಂ ಮಂದಮಾರುತಂ ಪಾಳಿಯಿಂ ನಡಸಿದಂ ಸೇನೆಯಂ ಸೇನಾನಿ (ಚಿಲಪು. ೩೩-೧೨). ೨. ಆರಂಭ ; ಮೊಟ್ಟಮೊದಲು : ಬಾಳ್ವ ಮಾತಿನ್ನೇಕೆ ಚೂಳಿಲಿ ಬಂದ ಸ್ತ್ರೀಯಳಿಯೆ (ಕಪೋತ. ೧೬-೩೪). ೩. (ಯುದ್ಧದಲ್ಲಿ) ಎಲ್ಲಕ್ಕೂ ಮುಂದೆ ಇರುವ ಸೈನ್ಯ ; ಮುಂದಳ; ಅಗ್ರಗಾಮಿ ದಳ: ಒದವಿದರಾ ಚೂಳಿಯ ಬಲುಗಾಜರು (ಪರ್ವತ. ೬-೮೫); ಚೂಳಿಯ ಭಟರ ಕೈಯಿಂದ ಭೋರ್ಗರೆದ್ದೆದಿ ಮೇಲಕ್ಕೆದುವ ಬಾಣಗಳ ದಾಳಿಯೊಟ್ಟಿದುದು (ಕೌಸಪಿ. ೧೨-೨೧) ; ಎಸೆದುದು ಸಂಜೆಗೆಂಪೆನಿಪ ಕಾಪಸ ಚೂಳಿಯ ದೂಳ ದಾಟಿಗಂ . . . ಪೊಣ್ಮುವ ಪಿರಂಗಿಯ ಗುಂಡೆನೆ ಚಂದ್ರ ಮಂಡಲಂ (ಚಿಕಪಿ. ೬-೧೬); ಸಮುದ್ರದ ತಟದಿ ನಿಂದು ಚೂಳಿಯ ಕಳುಪಲೋಷಧಿಪ್ರಸ್ಥಪುರಕೆ (ಶಂಗಪು.೧೦-೪೬). **ಚುಣೆ:** ೨.ಚುಣೆಗೆ ಮೂರ್ತಿ ಸ್ಥಾಪನಾ ಮಾಡಿದವರು ನಮ್ಮ ಜನರು (ಹೊಸಂಶಾ. ೨೯) ; ಚುಣೇಗೆ ಈ ಊರಿಗೆ ಗಂಟಿನ ಬ್ಯಾನಿ ಬಂತು (ಅಮಸಿ. ೪). **ಚುಳಿ :** ೪. ಕೊಕ್ಕು ; "ಚುಂಚು" (ಚಾಸಕೋ. ೫೬). **ಚೂಣಿ :** ೧. ಪಂಚಪರುಷವಸುಳ್ಳ ಬಸವನು ಸಂಚಿಸಿದ ಸಾಧನಸಮಗ್ರತೆ ಮುಂಚೆ ಜೀರ್ಣಿಸಿ ಹೋದುದೂಟದ ಮೊದಲ ಚೂಣಿಯಲಿ (ಪ್ರಭುಲೀ. ೨೩-೪೩); ಸುಮನಸ ರೊಬ್ಬುಳಿಯ ಚೂಣೆಯಲಿ ಮುನಿಗಳು ಬೆಬ್ಬಳಿಸಿದರು (ತೊರಠಾ. ೧-೧೧-೯); ರಂಗದಿಂದ ಚೂಣಿಗೆ ಬರುವಾಗ ಆರತಿಯಾಗುವಾಗ ಬೇರೆ ಬೇರೆ ಪದಗಳನ್ನು ಹೇಳುವರು (ಯಕ್ಷಗಾ. ೩೪). 'ಚೂಣಿಗಾಳೆಗ' ನೋಡಿ. ೩. ರಾಯನ ಚೂಣಿ ಹೋದಹುದೀಸು ಸಂದಣಿ ಕಾಣೆವು (ಬಸಪು. ೩-೩೪) ; ಚೂಣಿ ಹಳಚಿತ್ತುಭಯದಳದಲಿ ರೇಣು ಮುಸುಕಿತು ದಿಕ್ಕುದೆಸೆಗಳ (ಕಾ ತಿ ಹಾ. ೨೦-೧೪) ; ಚೂಣಿ ಬಿದ್ದುದು ಜವನ ದೂತಶ್ರೇಣಿಯೆದ್ದುದು (ತೊರಠಾ. ೬-೩೮-೪). ಇತ್ತಲ್ ದಮನಂ . . . ತನ್ನ ಮಯ್ಯಾವಲ ಕಿಜುವಡೆಗೆ ಕೈವೀಸಿ ಚೂಣಿಯೊಳೆ ನಿಂದು ತಾಗಿದಂ (ರಾಮಾಶ್ವ. ೯೦-೧೯). ೪. ತಂದಿ ; ಅಗ್ರ ; ಕೊನೆ. 'ಚೂಣಿನೋಟ' ನೋಡಿ.

**ಚೂಣಿಯ ಬಲಿ** = ಯುದ್ಧರಂಗಕ್ಕೆ ಕೊಡುವ ಬಲಿ,-ಆಹುತಿ : ದುರುಳ ದಾನವ ನಿಮ್ಮ ನನ್ನ ಖಡ್ಗಾಹುತಿಗೆಯರದೆ ಚೂಣಿಯ ಬಲಿಯ ಕಳುಹಿದನೆ (ಅಕಮಹೀ. ೦೩-೪೦).

**ಚೂಳಿ₂** (ನಾ). ೧. ಚವರಿ ; ಹೆರಳು : ಒಡಲಿಚಿಂ ತನ್ನ ಬೆದೆಗಾರ್ತಿಯ ಚೂಳಿಯ ಸಿಂಗರಕ್ಕೆಂದು ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ . . . ಎಸೆವ ಜೋಳದ ಪಾಟಿಯಂ (ರಾಮಾಶ್ವ. ೧೦೦-೫೬). ೨. ರಾಜ ಚಿಹ್ನೆಗಳಲ್ಲಿ ಒಂದು : ಕಾಳಿ ದಮಾಮಿ ಟಕ್ಕೆಯ ಸಾಲಸತ್ತಿಗೆ ಚೂಳಿ [ಪಾಠಾಂ. ಚೌರಿ]ಸೂರೇಪಾನ್ಗಳಿಂದ ಮೇಲಾದ ಸಾವಿರ ಕುದುರೆಯ ಸಹ ಬಂದ ಗಾಲಿಯನೇನ ಬಣ್ಣಿಪೆನು (ಕೌಸಪಿ. ೧೮-೮೨).

[ <ಸಂ. ಚೂಲ, ಚೂಡಾ ]

**ಚೂಳಿಕಾವರ್ಧನ** (ನಾ). ಗರ್ಭಿಣಿಯರಿಗೆ ಮಾಡುವ ಮಂಗಳಶಾಸ್ತ್ರ : ಸೀಮಂತೋನ್ನಯನ; ಸೀಮಂತೋತ್ಸವ: ಘನಗರ್ಭಾಶಾವಧೂಪುಂ ಸವನದೆಸೆವ ತೂರ್ಯಸ್ವನಂ ಚೂಳಿಕಾವರ್ಧನಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯಘೋಷಂ . . . ಘೂರ್ಣಿಸಿದುದಘನಪಾಂಭೋದ ಗಂಭೀರ ನಾದಂ (ಶಂಶಾಮಾ. ೭-೦೫೦).

[ ಸಂ. ಚೂಲಿಕಾವರ್ಧನ (ಚೂಲಿಕಾ + ವರ್ಧನ) ]

**ಚೂಳಿಕೆ** 'ಚೂಲಿಕೆ' ನೋ.

**ಚೂಳಿಗಲಹ** (ನಾ). ಸೈನ್ಯದ ಮುಂಭಾಗದಲ್ಲಿ ನಡೆವ ಯುದ್ಧ ; ಮುಂಚೂಣಿಯುದ್ಧ : ಸೂಳು ಮತ್ಸರ ಬಿರುದು ಪಾಡಿನ ಚೂಳಿಗಲಹದ ಕದಡು ಜೂಜಿನ ತೋಳುವಲರೊಳತೋಟಿ ಮಸಗಿತು ದಿವಸ ದಿವಸದಲಿ (ಕುವ್ಯಾಅ. ೮-೦). [ ಚೂಳಿ$_{1}$ + ಕಲಹ ]

**ಚೂಳಿಗಾಳಿ** (ನಾ). ಮುಂಭಾಗದಿಂದ ಬೀಸುವ ಗಾಳಿ : ಚೂಳಿಗಾಳಿಯ ದನಿಯನಾಲಿಸುತೆ ನೆಲದೊಳಗೆ ಪೊಳ್ದಿರ್ದ ತನುಗಳಂ ಕೀಳಲಾಱದೆ . . . ಮುಮ್ಮಲಂ ಮಱುಗಿದರ್ ತತ್‌ಕ್ಷಣದೊಳು (ಜಬಪು. ೩೩-೧೪). [ ಚೂಳಿ$_{1}$ + ಗಾಳಿ$_{1}$ ]

**ಚೂಳೆಯ,ಚೂಳಯ, ಜೂಳಯ, ಜೂಳೆಯಂ, ಜೋಳಯ, ಜೋಳೆಯ** (ನಾ). ೧. ಬೈತಲೆಗೆ ಇಡುವ ಮುತ್ತಿನ ಆಭರಣ; ಬೈತಲೆಮುತ್ತು; ಹಣೆಬೊಟ್ಟು : ಕಂಕಣ ಚೂಳೆಯ ತೊಳಪ ಕಾಲುಂಗುರದೆ . . . ಬರುತಿರ್ದರು (ಕುಮುರಾ. ೦೩-೬೩); ಮುತ್ತಿನ ಮುಡಿಕಟ್ಟು ಚೂಳೆಯ ಭುಜಕೀರ್ತಿ . . . ದೇಸೆವೆತ್ತಿರೆ ಮೆಱೆದಳಾ ನೀಱೆ (ಕುರಾಸಾಂ. ೨೯-೯೩). **ಚೂಳಯ** : ೨. ಹಣೆಗೆ ಇಡುವ ಕುಂಕುಮಂದ ತಿಲಕ; ನೇರವಾದ ಬೊಟ್ಟು : ಲಲಾಮಕವನ್ನೋಸರಿಸಿ ಸಿಂದುರದ ಚೂಳಯವನ್ನು ತಿದ್ದಿ ಉಗುರಿಂಸಿ ನೇವರಿಸಿಕೊಳ್ಳುತ್ತ (ಕುಂತ್ರಶ. ೦೧೨-೨). **ಜೂಳಯ** : ೨. ಜೂಳಯ ತಿಂಗಳಿಗೆಯನಲ್ ನೇರಬೊಟ್ಟಿಗೆ ಪೆಸರ್ (ಅಭಿಶ್ಯ. ೨೩) ; "ಜೂಳಯವೆನಲುಂ ಮೆಱೆವ ಬೊಟ್ಟು" (ಅಭಿಮಂ. ೭೩) ; "ಜೂಳಯಂ ತಿಲಕಮಕ್ಕುಂ" (ಕಶಕ. ೪೦). **ಜೂಳೆಯ**: ೧. "ಮುತ್ತಿನ ಬೈತಲೆಯಾಕ್ಕು ಜೂಳೆಯಂ" (ಕವಿಕಂ. ೧೬೨); ನೂಪುರಂ ಮೇಖಲೆ ಪೊಸಕಡಗಂ ಜೂಳೆಯಂ (ದಶಕು. ೬-೮೦); ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯ ಜೂಳೆಯಾಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ (ಕುವ್ಯಾದ್ರೋ. ೭೩೩. ಶಾ. ೨೬೮) ; ಜೂಳೆಯ ಚಿನ್ನ ಪೂ ಕಮಲ ಪೂ ಚಳಿಕಿಗೆ ತಾಳೆಹೂ . . . ಆಭರಣವೊಪ್ಪಿದುವು (ಭರಶ. ೪೦-೬೩). ೨. ನೊಸಲ ಚಿಲ್ವಿಕೆಗೊಂದು ಕಡೆಯ ಜೂಳೆಯುವಿಟ್ಟು ಹಸಿ ಬಾಳೆಯಲೆಯ ಹಸೆಯಲಿ ಮಲಗಿಸಿದರು (ಕಾಲೂಅ. ೦೮೩-೪೦೩). ೩. ಕೊರಳ ಸರ,-ಪಟ್ಟಿ: ಬಿರುದಿನ ಪೊಂಬಾವಡೆ ಸೆಡಕಿನ ವಲ್ಲಿ ಕೊರಳ ಮುತ್ತಿನ ಜೂಳೆಯಾದ . . . ಭೂಷಣಗಳಿಂತಿಹ ಹಯ ಖುರವೆತ್ತಿ ಕುಣಿಯುತ್ತಿದ್ದುವು (ಕಂಸವಿ. ೧೩-೦೪). ೪. ಕೈಗೆ ತೊಡುವ ಮುತ್ತಿನ ಆಭರಣ : ಪೊಳೆವ ಕಂಕಣವಲೆಯ ಮುದ್ರಿಕೆಯ ಬೆರಳ ಜೂಳೆಯ ಕಡಗಗಳ್ ಮೆರೆಯೆ (ಕುರಂಗ. ೪-೨೯). **ಜೋಳಯ**: ೧. ಮುತ್ತಿನ ಬೊಟ್ಟು, ಮುತ್ತಿನ ಮೂಕುತಿ . . . ಜೋಳಯ, ಭುಜಕೀರ್ತಿ (ಕುದೂಶಾಂ. ೩೭೮). **ಜೋಳೆಯ**: ೧. ಮುಡಿಗೆ ಜೋಳೆಯ ತೆಲ್ಲಟಿಯೆಂಬ ನಾಟ್ಟುಡಿಯಂತೆ ಪಾಪಮನೆ ಪೆರ್ಚಿಸಿ (ಧರ್ಮಾಮೃ. ೬-೦೭೩ ವ). ೪. ತೋಳಬಂದಿಯ ಮಣಿಖಚಿತ ಕೇಯೂರದ ಪುಷ್ಯರಾಗ ಜೋಳೆಯದ (ಧರ್ಮಾಪ. ೨-೨೩ ವ); ಕೀಲಕಡಗದ ವಜ್ರಲಹರಿಯ ಜೋಳೆ [ಪಾಠಾಂ. ಲೆ] ಯದ ಕಂಕಣದ ರವೆಯದ ತೋಳಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ . . . ಮೇಲು ಶೃಂಗಾರದ ಸಖೀಜನ ಸಂದಣಿಸಿತು (ಕುವ್ಯಾಅ. ೧೩-೩೨). [ <ಪ್ರಾ. ಚೂಲಿಯಾ, ಚೂಲಾ ]

**ಚೂಱಕಾಱ** 'ಸೂಱೆಗಾಱ' ನೋ.

△ **ಚೂಟ** 'ಚೂಳ$_{1}$' ನೋ.

**ಚೆಂ$_{1}$, ಚಂ** (ಗು). ಕೆಂಪು ಎಂಬುದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ಸಂಕ್ಷಿಪ್ತರೂಪ. 'ಚೆಂಗಣಗಿಲೆ', ಪರಾ. **ಚಂ** : 'ಚಂಗಾವಿ' ಪರಾ. [ ದೇ.॥ ತಮಿ. ಮಲ. ಚೆವ್ ; ತುಳು. ಚನ್ನ ; ತೆಲು. ಚೆಂ ]

**ಚೆಂ$_{2}$** (ಗು). 'ಚೆನ್ನು' ಎನ್ನುವ ಪದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ಸಂಕ್ಷಿಪ್ತರೂಪ. 'ಚೆಂಕೊನ್ನಿಗ', 'ಚೆಂಗಾಲ' ಪರಾ. [ <ಚೆನ್ನು ]

**ಚೆಂಕೊನ್ನಿಗ** (ನಾ). ಸುಂದರನಾದ ಪರಾಕ್ರಮಿ (?): ಪನತರುಗಳ ಪಣ್ಣಲಿಗಳ್ ಕಟಲೆ ಕಳಿಂಕೆಗಳ್ ತಾರಕೆಗಳಂತೊಗೆಯೆ ಕೊನೆಗಳ್ ಚೆಂಕೊನ್ನಿಗ [ಪಾಠಾಂ. ಚೆಂಕೊಂಗ]ರಬ್ಬೆಯಂತೆ ನಿಮಿರೆ ತಳಿರನಂಗನ ಬಾಳಂತೆ ಪೊಳೆಯೆ (ದಂಹರಿ. ೫-೫ ವ). [ ಚೆಂ$_{2}$ + ಕೊನ್ನಿಗ ]

**ಚೆಂಗಟ್ಟು** (ನಾ). ಸುಂದರವಾದ ಚೌಕಟ್ಟು,-ಆವರಣ : ಚೆಂಗಟ್ಟಂ ಧನುವಂತೆ ಕೊಂಕಿಯೆಸೆಗುಂ ಮೋಗೆಟ್ಟಿ ಮುಮ್ಮಾಡಮುಂ (ಪ್ರಸೂಮ. ೫-೦೬). [ ಚೆಂ$_{2}$ + ಕಟ್ಟು$_{2}$ ]

**ಚೆಂಗಣಗಿಲೆ, ಚಂಗಣಗಿಲೆ, ಚಂಗಣೆಗಿಲ್, ಚಾಗಣೆಗಿಲು, ಚೆಂಗಣೆಗಲು, ಚೆಂಗಣೆಗಿಲ್, ಚೆಂಗಣೆಗಿಲು, ಚೆಂಗಣೆಗಿಲೆ** (ನಾ). ೧. ಕೆಂಪು ಕಣಗಿಲೆ. ೨. ತಾವರೆ; ಕಮಲ: "ಚೆಂಗಣಗಿಲೆ, ಸೌಗಂಧಿಕ, ಕಲ್ಹಾರ, ಹಲ್ಲಕ, ರಕ್ತಸ್ಕಂಧಕ" (ನಾಚಿರಾ. ೬). **ಚಂಗಣಗಿಲೆ**: ೨. ಸುಕರ್ಪೂರಂ ತಮಾಲದಳ ಚಂಗಣಗಿಲೆಯು ಕೋಷ್ಠಸಾರ ಕಸ್ತೂರಿ ಲಾಮಂಚಸಂಯುಕ್ತ ಶಿವಗಂಧಾಷ್ಟಕಂ ಲೇಸು (ಗುರುಚಾ. ೬-೫). **ಚಂಗಣೆಗಿಲ್**: ೨. "ಕಲ್ಹಾರಂ ಸುಗಂಧಿಕಂ ಚಂಗಣೆಗಿಲೆ[ಪಾಠಾಂ. ಕನ್ನೈದಿಲೆ, ಕನ್ನೈದಿಲೆ]ನಿಸಿಕ್ಕು" (ಮಂಗರಾ. ೦೨೪-೦೬). **ಚಂಗಣೆಗಿಲು** : ೨. ಪನ್ನೀರಿಂದ ತೇದ ಚಂಗಣೆಗಿಲಾದಿಯಾದ ಪರಿಮಳಪುಷ್ಪಗಳಿಂದ ವಾಸಿತವಾದ ಶ್ರೀಗಂಧವನ್ನು ಧರಿಸಿದಲ್ಲಿ ಜನರುಗಳ ತಾಪವನ್ನು ಪರಿಹರಿಸಿ . . . ಮನ್ಮಥನ ನಿದಾನಸ್ಥಾನವಾಗಿರುವುದು (ಶಕವ್ಯ. ೪೦). **ಚೆಂಗಣೆಗಲು** : ೨. "ಸೌಗಂಧಿಕಂ, ಕಲ್ಹಾರಂ, ಹಲ್ಲಕಂ, ರಕ್ತಸ್ಕಂಧಕಂ – ಈ ೪ ಚೆಂಗಣೆಗಲ ಹೂವಿನ ಹೆಸರು" (ನಾಚಿರಾ. ೧೦೧) ; "ಕಲ್ಹಾರಂ – ಚೆಂಗಣೆಗಲು ಬಿಳಿಯ ನೈದಿಲು, ಈಚಲು ತುರುಕುಡಿ ?" (೬ಷಧಿ. ೨೨). **ಚೆಂಗಣೆಗಿಲ್** : ೧. ಆದಿಶ್ಯವಂ ದೇವದೇವೇಶ್ವರನ ಪೂಜೆಯನು ಮಾಡಲೊಂದು ಚೆಂಗಣೆಗಿಲಿಂಡೆಯ ಕೊಂಡು ಹೋಗುತಿರಲು (ಸೌಂದಪು. ೩-೧೯). ೨. ಸಿಂಗಾರದ ವನಸಿರಿಗೆ ನೆಲೆಯನೀವ ತುಂಗಭದ್ರೈಕಶಾಲನವು ಚೆಂಗಣೆಗಿಲ ಮಡು ಕಮಲಾಕರಗಳು ಕಂಗೆ ಮಂಗಳವಾಗಿಹವು (ಅಂಬಶ. ೩-೩೬) ; ಚೆಂಗಣೆಗಿಲ ದಿವ್ಯಪರಿಮಳಕೆಱಗುವ ಭೃಂಗವಿಂಡುಗಳ ಝೇಂಕಾರ (ಕಂಸವಿ. ೫-೧೦೨). **ಚೆಂಗಣೆಗಿಲು** : ೨. "ಪದ್ಮಕಂ—ಪದ್ಮಕ, ತಾವರೆ, ಶ್ರೀಗಂಧ, ಚೆಂಗಣೆಗಿಲು, ಕೋಷ್ಠ" (೬ಷಧಿ. ೯೦) ; ಚೆಂಗಣೆಗಿಲು ನೈದಿಲು ಹೊಂದಾವರೆ ಪೊಂಗಿದ ಸರಸಿಗಳಿಂದ . . . ರಾಜಿಸುತಿಹುದು (ಕಂಸವಿ. ೨-೪೯). **ಚೆಂಗಣೆಗಿಲೆ** : ೨. ಚೆಂಗಣಗಿಲೇ ಬಾರ ಲಿಂಗದೊಲವೇ ಎನುತ . . . ಕೊಳಂಗಳ ಜಳಂಗಳೊಳು ಪೋಗಿರ್ದು ಮಂಗಳವೆನಿಪ್ಪ ಹೂವಂ ಕೊಂಡು (ಪುಷ್ಪರ. ಹ. ೫೨೫-೦೬) ; ಚೆಂಗಣೆಗಿಲೆಯೆಳೆಯಲರ್ವಾಸಿಗಕೆ ಮನಂಗೊಳಿಸುವ ಮೃಗಮದದಣ್ಪಂ ಲಲಿತಾಂಗಿಯದೊರ್ವಳ್ ತೊಡೆದು (ಜಯುಕಾ. ೧೯-೨೨). [ ಚೆಂ$_{1}$ + ಕಣಗಿಲೆ$_{1}$ ]

**ಚೆಂಗಣೆಗಲು** 'ಚೆಂಗಣಗಿಲೆ' ನೋ.

**ಚೆಂಗಣೆಗಿಲ್** 'ಚೆಂಗಣಗಿಲೆ' ನೋ.

**ಚೆಂಗಣೆಗಿಲು** 'ಚೆಂಗಣಗಿಲೆ' ನೋ.

**ಚೆಂಗಣೆಗಿಲೆ** 'ಚೆಂಗಣಗಿಲೆ' ನೋ.

**ಚೆಂಗದಿರ್, ಚಂಗದಿರ್** (ನಾ). ಕೆಂಪಾದ ಕಿರಣ ; ಕೆಂಬೆಳಕು : ಅಳಿಯೆ ತಮಮಿಂದು ಚೆಂಗದಿರ್ಗಳನುಳಿದಮಳಾಂಶುಗಱೆವವೋಲ್ ರಿಪುಗರ್ವಂ ಕಳಿಯೆ (ರಾಜಶೇ. ೬-೧೩೩). 'ಚೆಂಗದಿರ' ಪರಾ. **ಚಂಗದಿರ್** : 'ಚಂಗದಿರ' ಪರಾ. [ಚೆಂ$_{1}$ + ಕದಿರ್$_{2}$ ]

**ಚೆಂಗದಿರ, ಚಂಗದಿರ** (ನಾ). ಕೆಂಪಾದ ಕಿರಣಗಳಿಂದ ಕೂಡಿದವನು ; ಸೂರ್ಯ : "ಚೆಂ[ಪಾಠಾಂ. ಬೆಂ]ಗದಿರನುಂ ನೇಸಱು ಪೊಟ್ಟುಮನೆ ಸೂರ್ಯನುಂ" (ಅಭಿಶ್ಯ. ೧೧) ; ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮತಿಸ. ೧). **ಚಂಗದಿರ** : "ಚಂಗದಿರನೆನಲಕ್ಕು ದಿನಪಂ" (ಕಶಕ ೩೫). [ ಚೆಂಗದಿರ್ + – ಅ$_{7}$ ]

**ಚೆಂಗಣೆ**, ಚಂಗನೆ (ಅ). ಚಕ್ಕನೆ : ಕೂಡಲೆ ; ತಟ್ಟನೆ: ಮರದಿಂದ ಕೆಳಕ್ಕೆ ಚೆಂಗನೆ ಹಾರಿದನು (ಬೂಕೆ). **ಚಂಗನೆ:** ಸೇವಕನು ಚಂಗನೆ ಹಾರಿ ಅಧಿಕಾರಿಯನ್ನು . . . ತನ್ನ ಕಠಾರಿಯಿಂದ ಇರಿದನು (ಒಡೆಕೆ. ೨೪).

**ಚೆಂಗಚೆಂಗನೆ, ಚಂಗುಚಂಗನೆ** (ದ್ವಿರುಕ್ತಿ): ಚೆಂಗಚೆಂಗನೆ ಲೇಜ ತೆಗೆಯೆ ದ್ವಾದಶಯೋಜನಾಂಗಣಪರ್ಯಂತ ಹರಿದು . . . ನಿಂದುದು ತೊಟ್ಟನಲ್ಲಿ (ಭರಜ. ೨೪-೩೦) ; ಚೆಂಗುಚೆಂಗನೆ ಓಡುತ್ತಾ ಬಂದಳು (ಬೂಕೆ).

[ ಚೆಂಗು$_{2}$ + – ಅನೆ$_{1}$ ]

**ಚೆಂಗಯ್** (ನಾ). ಕೆಂಪಾಗಿರುವ ಕೈ; ಅಂಗೈ: ಕೆಂಬಾಯ್ಗೆ ಚೆಂಗಯ್ಗೆ ಬಡ ಮೆಯ್ಗೊಲ್ದು ಬಾಯ್ಗೆಂತು ಬಂತಂತೆ ಬಣ್ಣಿಸುತೆ ಚದುರರೆಯ್ದೆರೆ ಪೆಂಡಿರೆಳ್ತಂದರು (ಉದ್ಯದೀ. ೫-೨೩). [ ಚೆಂ$_{1}$ + ಕಯ್$_{2}$ (<ಕೆಯ್$_{2}$) ]

**ಚೆಂಗಲವೆ**, ಚೆಂಗಲವೆ, ಚೆಂಗಳವೆ (ನಾ). ಕೆಂಪು ತಾವರೆ, ಕೆಂದಾವರೆ : "ಚೆನ್ನೈದಿಲೆಯುಂ ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೩). **ಚೆಂಗಲವೆ:** "ಅವಲೆಂದುಂ, ಚೆಂಗಲವೆಯೆಂದುಂ, ಚೆನ್ನೆಯ್ದಿಲ್" (ಕಕಸಾ. ೯-೧೮೬) ; "ಚೆಂಗಲವೆಯಾವಲೆಂದು ಚೆನ್ನೈದಿಲ್ಗೆ . . . ಪೆಸರಪ್ಪುದು" (ಶಲ್ಯಮುಂ. ೨೭). **ಚೆಂಗಳವೆ :** "ಮಿಗೆ ಚೆಂಗಳವೆಯಾವಲೆಂದೆನಲ್ ಚೆನ್ನೈದಿಲಿಗೆ ಪೆಸರ್" (ಕಬ್ಬಿಕೈ. ೨೧). [ ಚೆಂ$_{1}$ + ಕಲವೆ ]

**ಚೆಂಗಲ್ಲು** (ನಾ). ಕೆಂಪುಬಣ್ಣದ ಕಲ್ಲು ; ಕೆಂಗಲ್ಲು : ಉಳಿಮುಟ್ಟದ ಶಿರೆಯಲ್ಲವು ಕಲೆಯಾಯಿತು ಇಲ್ಲಿ . . . ಚೆಂಗಲ್ಲೇ ಮಾಂಗಲ್ಯಕೆ ಸೆಲೆಯಾಯಿತು ಇಲ್ಲಿ (ಕರುಣಾ. ೭೧-೧೧). [ ಚೆಂ$_{1}$ + ಕಲ್ಲು (<ಕಲ್$_{3}$) ]

**ಚೆಂಗಳ್ಳು** (ನಾ). ಕೆಂಪು ಬಣ್ಣದ ಮದ್ಯ,–ಹೆಂಡ: ವೇಣುವೀಣೆಗಳಿಂಪುದನಿ ಕರ್ಣಕಮೃತಮಂ ಸೂಸುತಿರೆ, ಚೆಲ್ವು ಚೆಂಗಳ್ಳಾಯ್ತು ನರಪತಿಯ ಮತಿಗೆ (ಶ್ರೀರಾಮಾ. ೭೭-೩೫೧). [ ಚೆಂ$_{1}$ + ಕಳ್ಳು (<ಕಳ್$_{3}$) ]

**ಚೆಂಗಾಟ**, ಚಂಗಾಟ (ನಾ). ಚೆಲ್ಲಾಟ : "ನಗೆದಾಟ : ಜಗಿದಾಟ" (ಜಾನಕೋ. ೫೩). **ಚಂಗಾಟ :** ಬೆಕ್ಕಿಗೆ ಚಂಗಾಟ, ಇಲಿಗೆ ಪ್ರಾಣಸಂಕಟ (ಗಾದೆ). [ ಚೆಂಗು$_{2}$ + ಆಟ ]

**ಚೆಂಗಾಯ್** (ನಾ). ಕೆಂಪುಬಣ್ಣದ ಕಾಯಿ : ಚೆಂದಳಿರ್, ಕೆಂದಳಿರ್ ; ಚೆಂಗಾಯ್, ಕೆಂಗಾಯ್ (ಕಜ್ಞಾಸು. ೩೪೨ ಪ್ರಯೋ).

[ ಚೆಂ$_{1}$ + ಕಾಯ್$_{4}$ ]

**ಚೆಂಗಾರೆ** (ನಾ). ಕೆಂಪು ಕಾರೆಯ ಹಣ್ಣು : ಜಲವುಳ್ಗಳನಾವಗು ಜಿದಕಿತಿಂದಾ ಬಟ್ಟೆಯೊಳ್ ಬಟ್ಟನೇಱಲ ಚೆಂಗಾರೆಯ ಮೆಲ್ದುಗುಟ್ಟ ಸಹಕಾರೋಚ್ಛಿಷ್ಟ ಪಕ್ಷಿಂಗಳಂ (ಸುಕುಮಾ. ೪-೫೭). [ ಚೆಂ$_{1}$ + ಕಾರೆ$_{1}$ ]

**ಚೆಂಗಾಲ** (ನಾ). ಒಳ್ಳೆಯ ಕಾಲ ; ಚೆನ್ನಾದ ಕಾಲ : ಚಂಡಿ ಚಾಮುಂಡಿಯರ್ ನರಶಿರಗಳೊಂದರ್ಬುದದ ಹರಡಿ ಧ್ರುವದಿಂದ ಧ್ರುವಬರಂ ಬೀಸುಗಾಲಿಂದೊದೆದು ಕ್ರೀಡಿಸುವ ಕೆಂಗಾಲ ಚೆಂಡಿಕೆಯ ತೆಗೆದ ಚೆಂಡಿನೊಳಿಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯ ಚೆಂಗಾಲ ! (ನವ್ಯಕ್ಷ.೧೨-೩).

[ ಚೆಂ$_{2}$ + ಕಾಲ ]

**ಚೆಂಗಾವಿ**, ಚಂಗಾವಿ (ನಾ). ೧. ಕೆಂಪು ಬಣ್ಣ ; ಕಾವಿ ಬಣ್ಣ : ಚೆಂಗಾವಿಯಂಶುಕದಿನುಜ್ವಳವಾಗಿ . . . ಸಾರಂಗಾಕ್ಷಿಯಂಗಜನನರ್ಚನೆಗೆಯ್ಗುಂ (ಮಿತ್ರಗೋ. ೧೫-೨೯); ಆ ಜೋಗವಟ್ಟಗೆಯುವಾ ಬೆಳ್ಪಡೆಯು ವಾಬೆಂಬೂದಿಯ ಪೂಸುವಾ ಚೆಂಗಾವಿಗಪ್ಪಡದುಡೆಯುಂ (ರಾಮಾಶ್ವ. ೫೬-೧೩) : ಚೆಂಗಾವಿಯ ನಿಲುವಂಗಿಯನ್ನು ಧರಿಸಿದ್ದಾನೆ (ತುಂಗಭ. ೨). ೨. ಕೆಂಪುಬಣ್ಣದ ಸೀರೆ : ಚೆಂಗಾವಿಯನ್ನುಟ್ಟು ಬಾಗಿನಗಳನಾಂತು ನಿನ್ನನೆ ನೋಳ್ಪೆನೆಂದು (ಗಾಥಾಸ. ೮೨-೨೮). **ಚಂಗಾವಿ :** ೧. ಖಳಗೆ ಬೆಂಬಲಮಾಗಿ ಸಂಧ್ಯಾಸುರಕ್ಕಸಿಯು ಚಲುವ ಚಂಗಾವಿ ಸೀರೆಯನುಟ್ಟು ಬಪ್ಪಂತೆ . . . ಸಂಜೆಗೆಂಪಡರ್ದುದು (ನವಮೋ. ೧೧-೨೩). [ ಚೆಂ$_{1}$ + ಕಾವಿ ]

**ಚೆಂಗಾಳ್ವ** 'ಚಂಗಾಳ್ವ' ನೋ.

**ಚೆಂಗಿಸು**, ಚಂಗಿಸು. ಜಂಗಿಸು (ಕ್ರಿ). ೧. ಉಕ್ಕಿಬರು ; ಹೆಚ್ಚಾಗು : ಹೆಂಗಸಿನ ಕೈಯಿಂದಲಿ ಸಮರಾಂಗಣದಿ ಬಳಿಕೆಂದು ಊರ್ವಶಿ ಚೆಂಗಿಸಿದ ಕೋಪದಲಿ ಶಾಪವ ಕೊಡಲು (ಅಂಬಿಕಾ. ೮-೩೩). **ಚೆಂಗಿಸು:** ೨. ಹಾರು: ಕುಪ್ಪಳಿಸು : ನೆಗೆ : ಬಂದಿತು ಬಂದಿತು ಬಂದಿತು ಹೊವ್ಮ್ಮಗ . . . ಕೊಂಗಿಸಿ ಕುಣಿಯುತ ಚಂಗಿಸಿ ಪಾರಿ (ಹಮಜ. ೨೨). **ಜಂಗಿಸು :** ೨. ಸಿಂಗಂ ಪೆಱುತಿರಲಾ ಶಿಶುವಂ ತಾಯಂಗದಿ ತಲೆ ಹೊರಟುದಯಿಪ ಸಮಯಕೆ ಮುಂಗಡೆದೊಂದು ಮತಂಗದ ಮಱಿಯಿರೆ ಕಾಣುತ ಕಡು ಮುಳಿದು ಜಂಗಿಸಿಯಾವೊಡಲಿಂದದನವಱಿತು (ಜಯಕಾ. ೧೫-೩೨).

[ ಚೆಂಗು$_{2}$ + – ಇಸು$_{3}$ ]

**ಚೆಂಗು$_{1}$**, ಚಂಗು$_{1}$ (ಕ್ರಿ). ಹಾರು ; ನೆಗೆ ; ಕುಪ್ಪಳಿಸು : ಏರೊಡೆದು ಚೆಂಗಿದಂ ತಲೆಗೆದರ್ದ ಶಾಕಿನಿಗೆ ಕೈಸಿಲ್ಕದೆ (ಪರಶು. ೩೧-೪೨) ; ಕಂಗಳಿಗೆ ಕಾಣದಲೆ ಚೆಂಗು ನೀ ಮಾಯದಲಿ (ಹಮಜ. ೧೭೫); ಮರುತ್ತನಯನತ್ತಣ್ಗೆ ಚೆಂಗಿದನಭ್ರ ಮಾರ್ಗದೊಳು (ಸಂರಾಜಂ. ೧೧೯). **ಚೆಂಗು$_{1}$** : (ಕ).

[ ದೇ.೪ ತಮಿ. ಚಿಮ್ಮು. ]

**ಚೆಂಗು$_{2}$**, ಚಂಗು$_{2}$ (ನಾ). ಹಾರುವಿಕೆ ; ನೆಗೆತ ; ಜಿಗಿತ: (ಕ). **ಚಂಗು$_{2}$ :** ಚಂಗು ಹೊಡೆದು ನುಣಾಚಿಕೊಳ್ಳುತ್ತಿದ್ದ (ಪದಿರೀ. ೫೮). [ <ಚೆಂಗು$_{1}$ ]

**ಚೆಂಗು$_{3}$** 'ಚುಂಗು$_{1}$' ನೋ.

**ಚೆಂಗು$_{4}$**, ಚಂಗು$_{3}$, ಜಂಗು$_{2}$ (ನಾ). ಒಂದು ಬಗೆಯ ತಂತಿವಾದ್ಯ : ಚೆಂಗು ದಂಡಿಗೆ ತಿತ್ತಿ ಮುಖವೀಣೆ ಜಂತ್ರವುಪಾಂಗ ಮುಂತಾದುವನಾಂತು (ಭರಜ. ४೭-೪೭); ಜೇಗಟೆ ಘಂಟೆ ವರತಂತಿ ಚೆಂಗು ಮೊದಲಾದವಗ್ನಿಯ ವಂಶ (ಗುರುಚಾ. ೭-೩೬) : ಕೂಗುತಿಹವು ಸರ್ವಕಾಲದಿ ಜಾಗಟೆ ಕೊಳಲು ದಪ್ಪಟೆ ಚೆಂಗು ಕೊಂಬು ತಾಳ ರವಗಳಿಂದ (ಅದಾವ. ೫೧-೨). **ಚೆಂಗು$_{4}$ :** ಅವಜ ಚೆಂಗು ಶ್ರೀಮುಖವೀಣೆಗಾಱರು ತಾವಾಗ ತಂತವ್ಮ ಕಲೆಯ ಭಾವ ಭಿನ್ನಣದೋಱ ಕೇಳಿಸಿದರು (ನಾಗಕು. ೨೨-೭೦) ; ಉತ್ತಮ ಸುತಾಳ ವೀಣಾಮೃದಂಗಂ ಚೆಂಗು ತಿತ್ತಿಯುಮುಪಾಂಗದಾ ಮೇಳಗಳ (ಪ್ರಭುಪು. ४-೩೬) ; ಚೆಂಗ ಬಾಜಿಸುವ ಫಣಿವೇಣಿಯರ ತತಿ (ರಾಘಶ. ೭-೮೩). **ಜಂಗು$_{2}$ :** ಜಂಗು ಗೆಜ್ಜೆ ಮೃದಂಗ . . . ವೀಣೆಗಳ ನುಡಿನುಡಿಸುವಾ (ಪರಶು. ೧೧-೨೮). [ ←ಪಾರ. ಚಂಗ್. / ತೆಲು. ಚೆಂಗು ]

**ಚೆಂಗುಡಿ**, ಚಂಗುಡಿ (ನಾ). ೧. ಕೆಂಪಾದ ಚಿಗುರು–ಕುಡಿ: ಚೆಲ್ವಿಂಗಳುಚಿದಾಸಣಿಸಿದಂತೆವೊಲ್ಟಿಂದಳಿರ್ ಚೆಂಗುಡಿಯನಾ ಸುದಿಂಬಂ ಪ್ರಕಾಶಮಾನಿಳಿಪ ರಂಗದಾ ರೋಷಾತಿಶಯ ಕಾಂತಿಯಾ (ಶಂದಿಮಾ. ೦೭-೩೯) : ಸಂತಸದ ಕೂಟಗಳು ಕಂಗೊಳಿಪ ನೋಟಗಳು ಚೆಂಗುಡಿಗಳುಯ್ಯಲೆಗಳೆಲ್ಲ ಹೋಗಿಹವು (ಮೋಗೀ. ೩೨-೨೦). ೨. ಹವಳ ; ಪ್ರವಾಳ : "ಚೆಂಗುಡಿಯೆಂದು ಪ್ರವಾಳಂ" (ಕಕಸಾ. ೮-೦೪೮) ; ಸಿಂಗರಂಬಡೆದ ಮೊಗ ಚೆಂಗುಡಿಯ ಕುಡಿಯೊಲೆಸೆವಧರ (ಸಂದಿಮಾ. ೨೩-೩೭) : ಚೆಂಗುಡಿಯ ಕುಡಿಗಳಿಂದಿನೆಗಮಣಂ ಮಿನುಮಿನನೆ ಮಿನುಗುತಿರ್ದುವು ನನೆದೀವಿದ ಪಾಟಲೀದ್ರುಮಂಗಳ ಕೊನೆಗಳ್ (ದಶುಶ್ವ. ೧-೮೫). **ಚಂಗುಡಿ:** ೨. "ಚಂಗುಡಿಯೆನಲ್ ವಿದ್ರುಮಂ" (ಕಬ್ಬಿಕೈ. ४೭); "ಚಂಗುಡಿಯೆ ಹವಳಮಕ್ಕುಂ" (ಕಳರ. ೩೫).

[ ಚೆಂ$_{1}$ + ಕುಡಿ$_{3}$ ]

**ಚೆಂಗುಲಾಬಿ**, ಚಂಗುಲಾಬಿ (ನಾ). ಕೆಂಪು ಗುಲಾಬಿ : ಚೆಂಗುಲಾಬಿ, ಮಲ್ಲಿಗೆಯು, ಬಕುಳ ಸೇವಂತಿ ರಂಗು ತಾಳಿ (ನಂಮು. ೩೫-೦೪). **ಚಂಗುಲಾಬಿ :** ಚಂಗುಲಾಬಿಯ ಅರೆ ಅರಳಿದ ಪುಷ್ಪಗಳನ್ನು ಎತ್ತಿಕೊಂಡು (ಚಂದುಚು. ೦೭). [ ಚೆಂ$_{1}$ + ಗುಲಾಬಿ ]

**ಚೆಂಗೂದಲು** (ನಾ). ಕೆಂಪಗಿರುವ ಕೂದಲು : ಅವಳ ದುಂಡುಮುಖದ ಮೇಲೆ ಚೆಂಗೂದಲು ಗುಂಗುರುಗುಂಗುರಾಗಿ ಕುಣಿಯುತ್ತಿತ್ತು (ಪುನರು. ೩೮೫). [ ಚೆಂ$_{1}$ + ಕೂದಲು (<ಕೂಂದಲ್) ]

**ಚೆಂಗೂಲಿ,** ಚಂಗೂಲಿ (ನಾ). ೧. ಕೈಗೂಲಿಮಾಡುವವನು; ದಿನಗೂಲಿಯವನು ; ಆಯಾ ದಿನದ ಕೂಲಿಯನ್ನು ಅಂದೇ ಪಡೆದು ಕೆಲಸ ಮಾಡುವವನು: ಕಾಮಾಟಿ ಚೆಂಗೂಲಿಗಳು ಸಹಾ ಅವರವರ ಸದ್ವಿವಾಲರ ಸಮೇತ ಸಮಯ ಬಿದ್ದ ಹಾಗೆ ಕೆಲಸ ಮಾಡಲು ಬರುತ್ತಿರಲಿ (ಪಾಲಿಮಾ. ೩). ೨. ಸೂಳೆ ; ವೇಶ್ಯೆ: ಯಾಕೆ ಚೆಂಗೂಲಿ ಆಡಿದ ಹಾಗೆ ಆಡುತ್ತಿರುವೆ ? (ರೂಢಿ). **ಚಂಗೂಲಿ:** ೧. ಗುಮಾಸ್ತರು . . . ಚಂಗೂಲಿ ಪಹರೆಯವರು ಮುಂತಾದ ಜನಗಳನ್ನೂ . . . ನೇಮಕ ಮಾಡಿಸಿ (ಮಹಾಚಂ. I, ೦೨೭) ; ಆಂಗ್ಲೇಯರು ಭಾರತೀಯರನ್ನು ಚಂಗೂಲಿಗಳನ್ನಾಗಿಸಿ . . . ಶ್ರೀಮಂತರಾಗಲಾರಂಭಿಸಿದರು (ಹೊಸಹು. ೬೮).

[ ದೇ.॥ ತಮಿ. ಚೆಯ್‌ಕೂಲಿ; ತೆಲು. ಚೇಕೂಲಿ ]

**ಚೆಂಗೆಂಡ** (ನಾ). ಕೆಂಪಗಿರುವ ಕೆಂಡ ; ನಿಗಿನಿಗಿಯಾದ ಕೆಂಡ : ವಿಷಯ ವಿಂದ್ರಿಯದೊಡನೆ ತಾಗೆ ಚೆಂಗೆಂಡವನು ಕೆದರಿ ಚೇತವ ಸುಡುತ ಇರವನರುಹುವುದು (ಮಲೆದೇ. ೨೩-೭). [ ಚೆಂ$_1$ + ಕೆಂಡ ]

**ಚೆಂಗೊಕ್ಕು** (ನಾ). ಕೆಂಪಗಿರುವ ಕೊಕ್ಕು, – ಮೂತಿ: ಕಳವೆಯ ಪೊಂದೆನೆಯಿಂ ಸಂಗಳಸಿರೆ ಚೆಂಗೊಕ್ಕು ಪಚ್ಚೆಯಂತೆವೊಲಿರೆ ಮಯ್ಗಳಿಗಳ ಸಾಲ್ಬಭದೊಳ್ಕಣ್ಗೊಳಿಸಿತ್ತಾಗಳ್ಸುರೇಂದ್ರಚಾಪದ ತೆರದಿಂ(ಮಹಾಕ. ೫-೩೦).

[ ಚೆಂ$_1$ + ಕೊಕ್ಕು$_2$ ]

**ಚೆಂಗೊಡೆ** (ನಾ). (?) : ಇಡಿದುದ್ದಂ ಬೆಳೆದೇಟ್ಗೆವಟ್ಟದ ಬದಿಗಾರ್ಡೆಲ್ಲವಂ ಬೇಗೆ ನಿಚ್ಚಟರ್ದವರ್ನಂತಿರ್ದುದು ಸಂಜೆಗೆಂಪದಱ ಬಿತ್ತೊಂದೊಂದರರ್ ತೋರ್ಪನಂ ಪಿಡಿದಂತಿರ್ದುವು ನಟ್ಟ ಬಾಂದೊಱೆಯ ಮಿಾನೆಲ್ಲಂ ಕಟಲ್ ತಂದ ಚೆಂಗೊ [ಪಾಠಾಂ. ಜೇನೊ]ಡೆಯಂತಿರ್ದುವು ಪಕ್ಕೆವಟ್ಟಿದೆಡೆಯೊಳ್ ನೀಹಾರರುಚ್ಯಂಡಲಂ (ಸೂಕ್ತಿಸು. ೯-೧೨).

[ P ಇದು 'ಜೇಂಗೊಡ'ಎಂಬುದರ ಅಪಲಿಖಿತವಿರಬಹುದು ]

**ಚೆಂಗೊರಲ್** (ನಾ). ಕೆಂಪಾದ ಕೊರಳು, – ಕಂತ್ತಿಗೆ : ಚಕಾರಕ್ಕೆ – ಚೆಂಗಣಗಿಲೆ . . . ಚೆಂಗೊರಲ್, ಚೆಂದುಟಿ (ಕಮುದ. ೦೮೨ ಪ್ರಯೋ).

[ ಚೆಂ$_1$ + ಕೊರಲ್ ]

**ಚೆಂಗೋಟು** (ನಾ). ಅಂಕಂಡೊಂಕಾಗಿರುವುದು ; ವಿಶೇಷವಾಗಿ ಪಕ್ರವಾಗಿರುವುದು (?) : ಮೊಳಕಾಲಿಕ್ಕುತ್ತೆಱಗುತೆ ನಿಲುತಂ ಕಾಲುಂ ಕೆಯ್ಯುಂ ಚೆಂಗೋಟಾ [ಪಾಠಾಂ. ಚೆಂಗೊಱಡಾ]ಗಿರೆ ಮೇಲುಂ ತಳವುಂ ಕೆಲವುಂ ಡೊಂಕಿರೆ ಕುಳ್ಳಿರ್ದೇಳುತ್ತುಂ ಬೀಳುತ್ತುಂ (ಭ್ರಂಗೀಅ. ಹ. ೪೭೩-೨).

[ ? ]

**ಚೆಂಗೋಲ್** (ನಾ). ಕೆಂಪಾದ ಕೋಲು : ಚಕಾರಕ್ಕೆ – ಚೆಂಗಣಗಿಲೆ . . . ಚೆಂಬೊನ್, ಚೆಂಗೋಲ್ (ಕಮುದ. ೦೮೨ ಪ್ರಯೋ). [ ಚೆಂ$_1$ + ಕೋಲ್$_1$ ]

**ಚೆಂಚ$_1$,** ಚಂಚ, ಚಂಚು$_1$ (ನಾ). ಬೇಡ ; ಬೇಟೆಗಾರ ; ಶಬರ : ಥಟ್ಟ ಚೆಂ[ಪಾಠಾಂ. ಚಂ] ಚರು ಬಂದು ಚಪ್ಪಳೆಗುಟ್ಟಿಯೆಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನು(ಬಸವು. ೦೮-೧೫); ಬಿಲ್ಲುಗಳಗೆ ತಿರುವಿಡುವ ಚೆಂಚರ್ಕಳಿಹ ಗೂಳಿಯಾಂ (ರೇವಣ. ೩೭-೦೧); ನರೆತೆರೆಯರತ ಚೆಂಚರಿಂ ಚೆಂಚಿತಿಯರಿಂ (ರೇವಣ. ೦೦೯-೨೦). **ಚಂಚ :** ಹೀನಮಾನವರನೀ ಬೇಡರಂ ಚಂಚರಂ . . . ಏನೆಂದು ಅಯ್ಯಯ್ಯಯೆಂದು ಬಾಯ್ಬಿಟ್ಟೆಂದಡೇನಪ್ಪುದು (ಸಿದ್ಧರಾ.೨-೬೩). **ಚಂಚು$_1$ :** 'ಚಂಚುದೊಡ್ಡಿ' ಪರಾ. [ ದೇ.॥ ತೆಲು. ಚೆಂಚು ]

**ಚೆಂಚ$_2$** (ನಾ). ಒಂದು ಬಗೆಯ ಸಸ್ಯ : "ಅಸಿಸಿಂಬಿ–ಚೆಂಚ" (ಒಷಧಿ. ೫).

[ ? ]

**ಚೆಂಚಲಿ,** ಚಂಚಲಿ, ಚರಿಚಲಿ, ಚರಿಜಲಿ (ನಾ). ಒಂದು ಬಗೆಯ ಸಸ್ಯ: ಚೆಂಚಲಿಸೊಪ್ಪು (ವೃಕ್ಷಗಿ. ೩೦-೫೮೩). **ಚಂಚಲಿ :** ಗೊರಜಿ, ಚಂಚಲಿ, ಚರಿಜಲಿ, ಶಾಳಿಸಪತ್ರ (ವೃಕ್ಷಗಿ. ೩೭-೭೩೩). **ಚರಿಚಲಿ :** (೬). **ಚರಿಜಲಿ :** ಮೇಲಿನ 'ವೃಕ್ಷಗಿ' ಪ್ರಯೋಗವನ್ನು ನೋಡಿ. [ದೇ.॥ ತೆಲು.ಚಂಚಲಿ]

**ಚೆಂಚಿತಿ,** ಚಂಚಿತಿ (ನಾ). ಬೇಡರ ಹೆಂಗಸು ; ಬೇಡಿತಿ ; ಶಬರಿ : ಮಜ್ಜುವುಲ್ಲೆಯ ಕಣ್ಮಂಚಂ ಕೆದಱುವ ನೋಟದ ಚೆಂ[ಪಾಠಾಂ. ಚಂ]ಚಿತಿಯಂ ವಿಪ್ರರಾಜವಧು ಕಂಡು (ಪುಣ್ಯಾಸ್ರ. ೧೨-೩೨) ; ನರೆತೆರೆಯರತ ಚೆಂಚರಿಂ ಚೆಂಚಿತಿಯರಿಂ (ರೇವಣ. ೦೦೯-೨೦). **ಚಂಚಿತಿ :** ಹಗಲುವಿಾರುಳುಂ ಚಂ[ಪಾಠಾಂ. ಚೆಂ]ಚಿತಿಯರೊಡನಗಲದೆಡೆಯಾಡುತ್ತ ಬಂದು(ಬಸವು. ೪೯-೭).

[ ಚೆಂಚ$_1$ + –ಇತಿ$_1$ (< – ಇತ್ತಿ) ]

**ಚೆಂಚು** 'ಸಂಚು' ನೋ.

**ಚೆಂಜಂಜೆ** (ನಾ). ಕೆಂಬಣ್ಣದ ಸಂಜೆ : ಕೆಂಜಂಜೆ, ಚೆಂಜಂಜೆ: ಕೆಂದಳಿರ್, ಚೆಂದಳಿರ್ (ಶಬ್ದಾನು. ೩೪೩ ಪ್ರಯೋ). [ ಚೆಂ$_1$ + ಸಂಜೆ ]

**ಚೆಂಜೇನು** (ನಾ). ಕೆಂಪು ಬಣ್ಣದ ಜೇನುತುಪ್ಪ : ಅಚ್ಚಹಸು ಕರೆದ ಈ ಇನಿದಾದ ಬೆಳ್ವಾಲು, ಹೂಗೆಲಸಿ ಚಿಟ್ಟಜೇನಿಳಸಿದೀ ಚೆಂಜೇನು (ಪಾರಸಿ. ೨೩-೫೨೦); ಬೆಳಕು ಮರಳಿತು, ಹೂವು ಅರಳಿತು, ಚೆಂಜೇನಾಯಿತು ಬಿಳಿ ಹಾಡು (ಶಿರಾಂಲ. ೬೧-೩). [ ಚೆಂ$_1$ + ಜೇನು(<ಜೇನ್) ]

**ಚೆಂಟಕಣ್ಣೆ** (ನಾ). ಒಂದು ಬಗೆಯ ಮರ: ಮರಗಳು: ಹೆಸವ, ಹೆಬ್ಬಲಸು . . . ಚೆಂಟಕಣ್ಣೆ, ಚಟ್ಟುತಂದ್ರಿ, ಬೇವು, ಹುಚ್ಚುಬೇವು (ನಮ್ಮನು. ೨೩೭).

[ ? ]

**ಚೆಂಡಕನರಿ,** ಚಂಡಕನರಿ (ನಾ). ಒಂದು ಬಗೆಯ ನರಿ ; ಗುಳ್ಳೆನರಿ : (೬). **ಚಂಡಕನರಿ :** ಒರ್ವ ರಾಯಭಾರಿಯೊಲಿನ್ನೊರ್ವ ಚಂಡಕನರಿ ಸಾಲು (ಚಂಡನ. ೬೨-೦೯). [ ಚೆಂಡಕ ? + ನರಿ$_1$ ]

**ಚೆಂಡಲರು** (ನಾ). ಒಂದು ಬಗೆಯ ಹೂವು ; ಚೆಂಡುಹೂವು : ಸತಿಯರ್ಗೆ . . . ಚೆಂಡಲರಿನ ಪೊಟ್ಟಣ ದಿವ್ಯಚಂದನದುಂಡೆಗಳನು ಕೊಟ್ಟು ನಗುತ(ಮೋಹತ. ೦೯-೩೯). [ಚೆಂಡು(<ಸೆಂಡು)+ಅಲರು$_2$(<ಅಲರ್$_2$)]

**ಚೆಂಡಾಟ** 'ಸೆಂಡಾಟ' ನೋ.

**ಚೆಂಡಾಟಗಾರ** (ನಾ). ಚೆಂಡಿನಿಂದ ಆಟವಾಡುವವನು : ಚೆಂಡಾಟಗಾರರಲ್ಲಾಗಲೀ ಅಥವಾ ಒಂದು ಜೇನುನೊಣದ ಶರೀರದಲ್ಲಾಗಲೀ–ಜಯ ಮತ್ತು ಪ್ರಗತಿ ಸಾಧ್ಯ (ಕೀಟಜೀ. ೦೦).

[ ಚೆಂಡಾಟ(<ಸೆಂಡಾಟ) + – ಗಾರ(<– ಕಾಱ) ]

**ಚೆಂಡಾಡು** 'ಸೆಂಡಾಡು' ನೋ.

**ಚೆಂಡಾಲ** (ನಾ). ಒಂದು ಬಗೆಯ ಮರ : ಕೆಂದಾಳೆ, ಸುಗಡೆಕೆಂದಾಳೆ, ಚೆಂಡಾಲ (ವೃಕ್ಷಗಿ. ೬೮-೦೩೯೫). [ ? ]

**ಚೆಂಡಿ$_1$** 'ಚೆಂಡೆ$_2$' ನೋ.

**ಚೆಂಡಿ$_2$** 'ಚಂಡಿ$_1$' ನೋ.

**ಚೆಂಡಿಕಸ** (ನಾ). ಬತ್ತದ ಗದ್ದೆಯಲ್ಲಿ, ಪೈರಿನ ನಡುವೆ ಬೆಳೆಯುವ ಒಂದು ಬಗೆಯ ಕಳೆ,–ಹುಲ್ಲು: (೬). [ ಚೆಂಡಿ$_1$(<ಚೆಂಡೆ$_2$) + ಕಸ ]

**ಚೆಂಡಿಕೆ,** ಚಂಡಿಕೆ$_1$(ನಾ). ಜುಟ್ಟು; ಶಿಖೆ: "ಶಿಖಾ, ಕಾಕಪಕ್ಷಃ, ಶಿಖಂಡಿಕಾ– ಈ ೩ ಚೆಂಡಿಕೆ" (ಹಲಾಯು. ೮೮–೩೭೮) ; ಪೊನ್ನ ಪಂಜರವುಂ ಪೊತ್ತಿರ ದೇಟ್ಟುಂದು ಚೆಂ[ಪಾಠಾಂ. ಚಂ] ಡಿಕೆವೆರಸಿದ ಚಂಡಾಲ ಬಾಲಕಂ(ಕಾದಂಪೂ. ೩೭) ; ನಂದಿನಿಯ ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಚೆಂಡಿಕೆ ಬೆಳೆದಪ್ಪುದು (ಜಗವಿ. ೩-೫೧); ಚೆಂದದಿಂ ಚೆಂ[ಪಾಠಾಂ. ಚಂ]ಡಿಕೆವಿಡಿದು ಮಗಳನುತ್ತರಿಸು ವಂದದಿಂ (ಮಾನಸ. ಹ. ೬೯-೦೪) ; ಚೆಂ[ಪಾಠಾಂ. ಚಂ]ಡಿಕೆಗಳ ಬಾಲಕರ ಮಂಡಳಿಯನು . . . ಕಂಡಳಾ ಕಮಲದಳಾಕ್ಷಿ (ಕುರಾಪಾಂ. ೭-೫೪). **ಚಂಡಿಕೆ$_1$:** ಕಪ್ಪೆಗೆ [ಸಲೆ] ಚೆಲ್ವಾಗಿಯೆ ಚಂಡಿಕೆ ನೆಗೆದೊಡಮಾಗವು ಮಾಟ (ಅಟ್ಟಮ. ೫-೨) ; ಕೆಂಡದಂಥವಯನ್ನ ಗಂಡ ಕಂಡರೆ ಹಿಡಿದುಕೊಂಡು ಚಂಡಿಕೆಯ ದಂಡಿಸದೆ ಬಿಡ (ಪುರಂದ. ೧-೭೫-೫) ; ಅಂದವಾಗಿ ಚಂಡಿಕೆ ಕಟ್ಟಿ ಹಣೆಗೆ ತಿಲಕವನ್ನು ಇಟ್ಟುಕೊಂಡು ದೇವರಿಗೆ ವಂದಿಸುವನು(ಕಥಾವು. ೫-೩೩).

[ <ಸಂ. ಶಿಖಂಡಿಕಾ ]

**ಚೆಂಡಿಕೆವುಣುಸೆ** (ನಾ). ಒಂದು ಬಗೆಯ ಹುಣಿಸೆ (?) : ಚಾವಗಾವುಣ್ಡನ ಸೋಭನಗಾವುಣ್ಡನ ಪೊಲದೊಳ್ [ಚೆ] ಣ್ಡಿಕೆ [ವು] ಣುಸೆಯಿಂ ಮೂಡಂ ಮು[ಟ್]ಯಂಗೇರಿ ಸೀಮೆಯಿಂ ಬಡಗಣ ದೆಸೆಯೊಳ್ (ಸೌಇಇ. XX, ೩೮-೩೦ : 1068). [ ಚೆಂಡಿಕೆ$_0$ + ವುಣುಸೆ(<ವುಣಸೆ) ]

**ಚೆಂಡಿಗೊಳ್ಳು** 'ಚಂಡಿಗೊಳ್' ನೋ.

**ಚೆಂಡಿಸು, ಚಂಡಿಸು**$_1$ (ಕ್ರಿ). ೧. ತಲೆ ಕತ್ತರಿಸು : ಈ ಕ್ಷಿತಿಮಂಡಲದೊಳು ಉದ್ದಂಡ ದೈತ್ಯರ ಚೆಂಡಿಪ ನರಹರಿಯೆ (ಪುರಂದ. ೦-೦೬೬-೨). **ಚೆಂಡಿಸು**$_1$ : ೨. ಉತ್ಸಾಹಿಸು ; ಪುಟನೆಗೆ : ಕಂಡು ಕನಸಿನೊಳು ರೂಪ ಜಯಂತನ ಪುಂಡರೀಕಾಕ್ಷಿ ಪುಳಕದೆ ಚೆಂಡಿಸಿ ಮೇಲ್ವಾಯ್ದವನೆಂದೇ ತಬ್ಬಿಕೊಂಡಳು ಬಯಲನೇನೆಂಬೆ (ಕಂಪವಿ. ೯-೧೬೬). [ ಚೇಡು (<ಸೆಂಡು) + – ಇಸು$_3$ ]

**ಚೆಂಡು** 'ಸೆಂಡು' ನೋ.

**ಚೆಂಡುಕಾರೆ** (ನಾ). ಕಾರೆಗಿಡದಲ್ಲಿ ಒಂದು ಬಗೆ : ಬೆಟ್ಟದ ಕಮ್ಮಗಗ್ಗರ ಚೆಂಡುಕಾರೆ (ಮೃಶಿಗಿ. ೮೮-೦೩೦೯). [ ಚೆಂಡು (< ಸೆಂಡು) + ಕಾರೆ$_1$ ]

**ಚೆಂಡುಗ** (ನಾ). ಒಂದು ಬಗೆಯ ಮರ : " ಅಕ್ಷಃ–ತಾಡಿಕವಡೆ, ಚೆಂಡುಗ, ದೇವಸಾಸಿವೆ " (ಒಷಧಿ. ೦). [ ? ]

**ಚೆಂಡುಚೇಣಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೃಶಿಗಿ ೨೬-೩೨೬).
[ ಚೆಂಡು$_0$ + ಚೇಣ$_1$ + ಹುಲ್ಲು(<ಪುಲ್) ]

**ಚೆಂಡುಮಲ್ಲಿಗೆ**, ಚಂಡುಮಲ್ಲಿಗೆ (ನಾ). ಒಂದು ಬಗೆಯ ಗುಂಡಾದ ಹೂ : ಸೀಮೆ ಶಾವಂತಿಗೆ, ಚೆಂಡುಮಲ್ಲಿಗೆ (ಮೃಶಿಗಿ. ೬೩-೦೩೦೧). **ಚೆಂಡುಮಲ್ಲಿಗೆ** : (ಕ). [ ಚೆಂಡು(<ಸೆಂಡು) + ಮಲ್ಲಿಗೆ ]

**ಚೆಂಡುವೂ**, ಚೆಂಡುಹೂವು, ಚೆಂಡುಹೂ (ನಾ). ಒಂದು ಬಗೆಯ ಹಳದಿ ಹೂ : 'ನೀನೊಂದು ಪೂವಿನ ಚೆಂಡು' ಎನುತೆನ್ನ ಮುದ್ದಾಡು ತಿರ್ದನ್ 'ಚೆಂಡುವೂ !ಚೆಂಡುವೂ !' ಎಂದಟ್ಟಹಾಸಂ ಮೊಳಗಲದ್ಭುತಂ ನಗುತೆ (ಶ್ರೀರಾಮಾ. ೬೦೪-೧೪೬). **ಚೆಂಡುಹೂವು** : ಚೆಂಡು ಹೂವಿನಲ್ಲಿ . . . ಬಹಳ ಪ್ರಕಾರ ಕುಲಗಳುಂಟು (ಕೃಷಿಶಾ. ೨೦೦). **ಚೆಂಡುಹೂ** : ಗೌರೀಮುಡಿ, ಚೆಂಡುಹೂಗಳಂಥ ಬಣ್ಣಬಣ್ಣದ ಹೂಗಳಿಗೆ ಬಡತನವೇ ಆ ಎರೆಯಲ್ಲಿ ? (ಕಳುಮ. ೧೩). [ ಚೆಂಡು(<ಸೆಂಡು) + ಹೂ$_2$(<ಪೂ$_2$) ]

**ಚೆಂಡುಹೂ** 'ಚೆಂಡುವೂ' ನೋ.

**ಚೆಂಡೆ**$_1$, ಚಂಡೆ$_1$ (ನಾ). ಒಂದು ಬಗೆಯ ಚರ್ಮವಾದ್ಯ : ಚೆಂಡೆಯ ತಾಳಕ್ಕನುಗುಣವಾಗಿ . . . ಕುಣಿವುದನ್ನು ನೋಡುತ್ತಿದ್ದರೆ, ನೋಡು ತ್ತಿದ್ದವರಿಗೆ ಆಡುತ್ತಿರುವ ಕಥೆಯೇ ಮರೆತುಹೋಗುತ್ತಿತ್ತು (ಎಸಡು. ೦೯). **ಚಂಡೆ**$_1$ : ಮೇಳದವರ ಚಂಡೆಯ ಧ್ವನಿ ಉಕ್ಕೇರಿ ಹರಡುತ್ತಿದೆ (ಸಂಸ್ಕಾರ. ೦೪೨). [ದೇ.॥ ತಮಿ. ಚೆಣ್ಟೈ ; ಮಲ. ಚೆಣ್ಡ ; ತುಳು. ಚೆಂಡೆ]

**ಚೆಂಡೆ**$_2$, **ಚೆಂಡಿ**$_1$ (ನಾ). ೧. ಒಂದು ಬಗೆಯ ಗಂಧದ್ರವ್ಯ; ಕರಿಕಚೋರ : "ಗಣಹಾಸಕಃ–ಚೆಂಡೆಯೆಂಬ ಗಂಧದ್ರವ್ಯ" (ಒಷಧಿ. ೪೬). **ಚೆಂಡಿ**$_1$ : ೨. ಒಂದು ಬಗೆಯ ಸಸ್ಯ : (ಕ). [ <ಸಂ. ಚಂಡಾ ]

**ಚೆಂತಲಪಲ್ಲಿ** (ನಾ). ಒಂದು ಊರಿನ ಹೆಸರು ; P ಈಗಿನ ಬಾಗೇಪಲ್ಲಿ ತಾಲ್ಲೂಕಿನ ಚೆಂತನಪಲ್ಲಿ : ಪಲ್ಲವಮಹಾರಾಜ ಪ್ರಿಥುವೀರಾಜ್ಯಂಗೆಯ ಚೆನ್ತಲಪಲ್ಲಿನ ಊರಿಕೆ ದೇವಿನಮ್ಮ . . . ಚೆ ನ್ತ ಕ ಪು ಲ್ಲ ನಾ ಟಿ ಕಾ ರ (ಎಕ. X, ಬಾಗೆಪ. ೬೬-೪ ; ಸು.೯೦೦). [ ಚೆಂತಲ ? + ಪಲ್ಲಿ$_2$(<ಪಳ್ಳಿ$_1$) ]

**ಚೆಂದ**$_1$ 'ಚಂದ$_1$' ನೋ.

**ಚೆಂದ**$_2$ 'ಚಂದ$_2$' ನೋ.

**ಚೆಂದಂಗೆಡು** 'ಚಂದಗೆಡು' ನೋ.

**ಚೆಂದಂಬಡೆ** (ಕ್ರಿ). ಅಂದವನ್ನು ಪಡೆ ; ಸೊಗಸನ್ನು ಹೊಂದು : ಪಾರ್ವರ ಕೇರಿಯಂತೆ ಚೆಂದಂಬಡೆದ ಮಡದಿನೆಸೆದುಂ ತೇರೆಸಿಸಂ (ಕಬ್ಬಿಗಕಾ. ೩೦).
[ ಚೆಂದ$_1$(<ಚಂದ$_1$) + ಪಡೆ$_1$ ]

**ಚೆಂದಕಾಣಿಸು** 'ಚಂದಕಾಣಿಸು' ನೋ.

**ಚೆಂದಕಾಣು** 'ಚಂದಕಾಣು' ನೋ.

**ಚೆಂದಗಲೆ** (ನಾ). ಚಂದ್ರನ ಕಳೆ ; ಚಂದ್ರಬಿಂಬ : ದೇವರಾದಿತ್ಯನಂ ಪೊಸ ಚೆಂದಗಲೆಯು ಹುಟ್ಟಂಗೆಯ್ದನಂ (ಉದ್ಯದೀ. ೩-೩೦).
[ ಚೆಂದ$_2$(<ಚಂದ$_2$) + ಕಲೆ$_3$ ]

**ಚೆಂದಗೇಡಿ** 'ಚಂದಗೇಡಿ' ನೋ.

**ಚೆಂದಗೇಡಿತನ** 'ಚಂದಗೇಡಿತನ' ನೋ.

**ಚೆಂದಬಾಳು** (ನಾ). ಸೊಗಸಾದ ಬದುಕು,–ಜೀವನ : ಒಂದಿರಿತಕಿಂದೆ ನೀನೆಲ್ಲರೆದೆಯನ್ . . . ಚೆಂ ದ ಬಾ ಳ ನ್ ಮೆಚ್ಚುವೆಲ್ಲರೆದೆಯನ್ ! (ಹೊಂಗಳು. ೨೬–೨೦). [ ಚೆಂದ$_1$(<ಚಂದ$_1$) + ಬಾಳು$_2$(<ಬಾಟ್$_2$) ]

**ಚೆಂದಮಿಟ್** (ನಾ). ಶುದ್ಧವಾದ ತಮಿಳುಭಾಷೆ : (ಕ).
[ ಚೆಂ$_3$ + ತಮಿಟ್./ತಮಿ. ಚೆನ್ತಮಿಟ್ ]

**ಚೆಂದಲ್** (ನಾ). ಒಂದು ಬಗೆಯ ಭತ್ತ,–ನೆಲ್ಲು : ನವಗಂಧೋದ್ಗಮ ಗಂಧಶಾಳಿ ಶುಕಲೀಲಾಳಾಪದಿಂದಾದವೊಪ್ಪುವ ಚೆಂದಲ್ ಸಹಕಾರಪಕ್ವರಸ ಸಾರಾಸಾರ ಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ ತೋರ್ಪ ಕಳಮಂ (ಸುಕುಮಾ. ೦-೬೪). 'ಕೆಂದಳಗ' ಪಠಾ. [ ? ]

**ಚೆಂದಲ** (ನಾ). ಒಂದು ಬಗೆಯ ಮರ: ಮರಗಳು : ಹೆಸವ, ಹೆಬ್ಬಲಸು . . . ಸಾಗಡೆ, ಚೆಂದಲ (ಸಮ್ಮನು. ೨೩೬). [ ? ]

**ಚೆಂದವ** 'ಚಂದವು' ನೋ.

**ಚೆಂದವಗಲ್** (ನಾ). ಚಂದ್ರಕಾಂತಶಿಲೆ: ಕಿಸುವೊನ್ನ ಪಂಜರಿಯ ಚೆಂದವಗಲ್ಲ ಕೋಂಟೆಯ ಮಾಣಿಕದ ಮನೆಗಳಿಂದೊಳಗೆ ಕರ್ಪುಣಿಯ ನೆಲೆಗಟ್ಟಿಂ ಪಳಿಕಿನಟಿಯ ಭಿತ್ತಿಯಿಂ (ರಾಮಾಶ್ವ. ೩೪-೦೯). 'ಚಂದಗಲ್' ಪಠಾ.
[ ಚೆಂದವ (<ಚಂದವು) + ಕಲ್$_3$ ]

**ಚೆಂದವೇರು** (ಕ್ರಿ). ಸೊಗಸು ಹೆಚ್ಚಾಗು ; ಅಂದವೇರು : ಸಾರಣೆ ಕಾರಣೆ ಸುಣ್ಣಬಣ್ಣಗಳಿಂದೆ ಗುಡಿಸಲು ಚೆಂದವೇರುವೊಲು (ಇಂಚಾಪ. ೨೩೩-೫೩). [ ಚೆಂದ$_1$ (<ಚಂದ$_1$) + ಏರು$_1$ (<ಏಱ್) ]

**ಚೆಂದಳ**,ಚಂದಳ (ನಾ).ಕೆಂಪಾಗಿರುವ ಅಂಗೈ: ನುಣ್ಗೊಡನಂ ಮುಗುದೆಯ ರೆರಡುಂ ಚೆಂದಳದಿಂದವೆ ನೆಗಪಿ ಮನೋರಾಗದಿ ರಂಜಿಪ ಸಿರಿದಲೆ ಯೊಳಗೇಱಿಸಲು (ಜಯುಶಾ. ೯-೦೫) ; ಚೆಂದಳವ ನೊಸಲೆಡೆಗೆ ತಂದೊಲಿ ಏದ ನೆಗೆದಪ್ಪಿದಳು ಪರಸುತ ಕಂದದನು ಮಾಜಗದ ಸಿರಿ ಕೈಸಾರ್ದ ತೆಱವಾಗೀ (ಸಾಳ್ವಭಾ. ೩೦-೪೪). **ಚಂದಳ** : ಚೈತ್ರಮಿತ್ರನ ಪಟಯಿಗೆಯ ತಳಿರ್ಗಳಂ ಪಡೆವ ಚಂದಳದಿಂದಶೋಕೆಯ ಕೊನೆದಳಿರನಾಣುತು ಪಸುಳೆಗೋಗಿಲೆಗಳಂ ಪೊರೆವ ವೀಣಾನಿನಾದೆಯರಿಂ (ಉದ್ಯಟ. ೦-೬೮ ವ).
[ ಚೆಂ$_1$ + ತಳ$_3$ (= ತಲ$_3$) ]

**ಚೆಂದಳಿರ್**, ಚಂದಳಿರ್, ಚೆಂದಳಿರು (ನಾ). ಕೆಂಪು ಚಿಗುರು ; ಎಳೆಯಂ ಚಿಗುರು : ಮಧುಮಿ[ದುಱ್] ಸೊಕ್ಕನಾಳ್ದ ಕೀರಳಿಯರ ಕದಪಿನ ಬಣ್ಣಮಪ್ಪ ಚೆಂದಳಿರ್ದುಱುಗಲ್ (ಶಾದಂಪೂ. ೯೬); ಚೆಂದಳಿರ್ ಪೊಸನನೆಗಳುಕ್ಕರಲ್ ಕಸುಗಾಯ್ ಕರಂದೋಱಿ (ಶದ್ಯರಾ. ೮-೪) : ಎಳವೆಯನುಳಿಯದ ಚೆಂದಳಿರೆನೆಯಿನಿದುಟಿ ಸೊಗಯಿಸಿತು (ಜಯುಶಾ. ೩-೪೧) ; ಗಿಡುಗಳೆಲ್ಲಂ ತಳಿರ್ಚೆಂದಳಿರೆಳದಳಿರೆ ಬೆಳ್ಳಿಲೆ ಪಸುರೆಲೆ ಪಣ್ಣೆಲೆ ಗಳಿಂ ರಂಜಿಸೆಯುಂ (ರಾಮಾಶ್ವ. ೦೬-೨೫). **ಚಂದಳಿರ್** : ಸೋಮರ್ಪಾಡಿ ಚಂ[ಪಾಕಾಂ ಚೆಂ]ದಳಿರೆಳಲತೆ (ಚತುನಿ. ೦೨೨) **ಚೆಂದಳಿರು** : ಚೆಂದಳಿರು ದಿನದಿನವುಮೊಗೆಯೆ ನೀರೆರೆದು (ಮಂಕುಳ. ೨೫೩); ವೃಕ್ಷಲತೆಗಳೆಲ್ಲ ಹೊಸ ಚೆಂದಳಿರ ಉಡಿಗೆಯಿಂದೊಪ್ಪಿವೆ (ಕಾಂಕರಾ. ೪೦).
[ ಚೆಂ$_1$ + ತಳಿರ್$_3$ ]

**ಚೆಂದಳಿರು** 'ಚೆಂದಳಿರ್' ನೋ.

**ಚೆಂದಳಿರ್ಗೈ** (ನಾ). ಕೆಂಪು ಚಿಗುರಿನಂತಿರುವ ಕೈ; ಅಂಗೈ: ಚೆಂದಳಿರ್ಗೈಯ ಕುಮಾರಿಯ ರೂಪವನದೇನಂ ಬಣ್ಣಿಪೆನು (ಅಯುಕಾ. ೩-೬೨) ; ಸುದತಿಯರಧಿನಾಯಕಿಯ ಸುಣ್ಣೋಳ್ಗಳಗ್ರದೊಳು ಚೆಂದಳಿರ್ಗೈಯ್ಗಳೆಸೆದವು (ಕೃಘುತಿ. ೭೦-೫೩). [ ಚೆಂದಳಿರ್ + ಕೈ$_2$ (<ಕೆಯ್$_2$) ]

**ಚೆಂದಳಿರ್ದೊಂಗಲ್** (ನಾ). ಕೆಂಪಾದ ಚಿಗುರುಗಳ ಗೊಂಚಲು,-ಗುಂಪು : ಚೆಂದಳಿರ್ದೊಂಗಲಿಂ ಏಸುವಶೋಕೆ ಫಲಾವಳಿ ತೀವಿ ತೋರ್ಪ ಮಾಕಂದಂ . . . ಒಪ್ಪಿರೆ ನಂದನವಲ್ಲಿ ರಂಜಿಕುಂ (ಕಬಕಃ. ೨-೪೧). [ ಚೆಂದಳಿರ್ + ತೊಂಗಲ್ ]

**ಚೆಂದಳಿರ್ವಾಸು** (ನಾ). ಕೆಂಪು ಚಿಗುರಿನಿಂದ ಮಾಡಿದ ಹಾಸಿಗೆ : ಚೆಂದಳಿರ್ವಾಸಿನೊಳತ್ತಮಿತ್ತ ಚಲ್ಪಿಂಗೆಡೆಯಾಗಿ ಸೂಸಿದರಲಂ ನಱುದಂಬುಲವುಂ . . . ದೇವದಂಪತಿಯ ಕೂಟವನೇಂ ಪಿಸುಣಾಡ ಲಾರ್ತುವೊ? (ಕಬಕಃ. ೧-೫೦). [ ಚೆಂದಳಿರ್ + ಪಾಸು$_1$ ]

**ಚೆಂದಾವರೆ** (ನಾ). ಕೆಂಪಾದ ತಾವರೆ ; ಕೆಂದಾವರೆ "ರಕ್ತೋತ್ಪಲಂ-ಚೆಂದಾವರೆ" (ಒಷಧಿ. ೧೩೩) [ ಚೆಂ$_1$ + ತಾವರೆ (<ತಾವುರೆ) ]

**ಚೆಂದಿರ** (ನಾ). ಚಂದ್ರ : ಚೆಂದಿರಗೆಣೆಗಿ ದೇವಾಂಗದಳೆದೆಗೆದು ಮಧುವ ನೊಲವಿಂದೆ ಮನ್ನಿಸಿ (ಹದ್ಯಶಾ. ೯-೯೩) ; ಇಂದ್ರಿಯದ ಆಶೆಗಳ ಬಂಧಿಸದೆ ಕೊಂದವನು ಸುಂದರನು ಅಕ್ಕ ಸುಖಿಯಕ್ಕ ಲೋಕಕ್ಕೆ ಚೆಂದಿರನು ಅಕ್ಕ (ಸರ್ವಜ್ಞ. ೫೪೩). [ <ಸಂ. ಚಂದಿರ ]

**ಚೆಂದಿರುಳು** (ನಾ). ಉತ್ತಮವಾದ ತಿರುಳು ; ಚೆನ್ನಾದ ಸಾರ : ಪೆರುಮಾಳನ ಕೆಂದಾವರೆ ಬೆಳಕಿನ ಚೆಂದಿರುಳೇ ಬಾಳಿನ ತಿರುಕೋಡೊಳಗಿನ ಬಲು ಅರಿವಿನ ಅರುಳೇ (ಅರಳು. ೨೨೫-೯). [ ಚೆಂ$_2$ + ತಿರುಳು (<ತಿರುಳ್) ]

**ಚೆಂದುಗೋಳಿ** (ನಾ). ಒಂದು ಸ್ಥಳದ ಹೆಸರು (?) : ವಿಕ್ರಮಾದಿತ್ಯ ಭಟರಕ x x x ಚೆನ್ದುಗೋಳಿ ವಳಿಯರಾದಿಲಿ x x ಳಿಗಳ್ಗೆ ಕೊಟ್ಟ ಭೂಮಿ ವಿವರ (ಎಕ. VIII, ಸಾಗರ. ೯೩-೩ ; ಸು. ೬೮೦ ?). [ ? ]

**ಚೆಂದುಟ, ಚಂದುಟ** (ನಾ). ಕೆಂಪಗಿರುವ ತುಟಿ ; ಕೆಂದುಟಿ : ಅವಳ ಚೆಂದುಟಿಯಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿತೆನುತ (ಅದ್ಭುಟ. ೬-೭೪) ; ಅವಳು ಚೆಂದುಟಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು (ಎರಚಿ. ೧೭). **ಚಂದುಟ** : ತಳಿರ್ಗೊಯ್ವ ಎಳೆಯಳ ಚ[ಪಾಠಾಂ ಚೆ]ಂದುಟದಳೆರಂ ತಳಿರ್ಗೆತ್ತು ಕರ್ದುಂಕಿದುದು ಕಿಳಿ (ರಾಜಶೇ. ೧೦-೫೪). [ ಚೆಂ$_1$ + ತುಟಿ$_2$ ]

**ಚೆಂದುಡಿಗೆ** (ನಾ). ಕೆಂಪುಬಣ್ಣದ ಬಟ್ಟೆ,-ಉಡಿಗೆ: ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಚಿತ. ೧). [ ಚೆಂ$_1$ + ತುಡಿಗೆ (<ತೊಡುಗೆ) ]

**ಚೆಂದುಳ್ಳಿ** 'ಚೆಂದೊಳ್ಳಿ' ನೋ.

**ಚೆಂದುಳ್ಳೆ** 'ಚೆಂದೊಳ್ಳೆ' ನೋ.

**ಚೆಂದೆಂಗಾಯ್** (ನಾ). = ಚೆಂದೆಂಗು : ಎಸೆವ ಚೆಂದೆಂಗಾಯ್ಗಳೊಂದೊಂದ ನೊಡೆಯೊತ್ತಲೊಸರಿ ಸೋರ್ವೆಳನೀರ್ಗಳೆರ್ಥ್ಯಂಗಳಾಗೆ ರಂಜಿಸುವ ಬನದೇವಿ (ಕ್ರಮಿಥಾ. ೩-೨೭). [ ಚೆಂ$_1$ + ತೆಂಗಾಯ್ ]

**ಚೆಂದೆಂಗು, ಚಂದೆಂಗು** (ನಾ). ಕೆಂಪು ಬಣ್ಣದ ತೆಂಗು ಮತ್ತು ಅದರ ಕಾಯಿ: ಕಾಯ್ಗುಬುಗಲಂ ಪೇರ್ಚಿರ್ದ ಚೆಂದೆಂಗು ಕಟ್ಟಲಿಸುತ್ತಿರ್ಪಲೆವ್ಳೆ . . . ಎಸೆಗುಂ (ಆದಿಪು. ೧-೬೭) ; ಭೂಲತಾಂಗಿ ತೆಗೆದಿಟ್ಟ ರಸರತ್ನವೋ ಎನಿಸಿ ಫಲಿತ ಚೆಂದೆಂಗೆಸೆದುವು (ಹರಿಶಾ. ೩-೨೮) ; ಒಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್ (ಕಲ್ಯಿಕಾ. ೨೦); ಮೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್ (ರಾಮಾಶ್ವ. ೮-೨೨). **ಚಂದೆಂಗು** : (ಕಿ). [ ಚೆಂ$_1$ + ತೆಂಗು$_3$ ]

**ಚೆಂದೊಂಗಲ್** (ನಾ). ಕೆಂಪಾದ ಗೊಂಚಲು ; ಚಿಗುರಿನ ಗೊಂಚಲು : ಅಗ್ನಿ ನೀಡಿದನಲ್ತೆ ತನ್ನಂಗಳದ ಮರದ ಮಾಂದಳಿರ ಚೆಂದೊಂಗಲಂ ? (ಶ್ರೀರಾಮಾ. ೪೮-೫೫೦). [ ಚೆಂ$_1$ + ತೊಂಗಲ್ ]

**ಚೆಂದೊರಳೆ** (ನಾ). ಕೆಂಪಾದ ಗುಲ್ಮ,-ಪ್ಲೀಹ : ಕರುಳ ಪೂಗೊಂಚಲು ಖಂಡದ ಕಳಿಕೆ ಬಂಧುರದಲು ಶಾಖೆಗಳಾಗೆ ಪಿರಿದು ಚೆಂದೊರಳೆದಳೆ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಷವಿ. ೦೩-೫೧).
[ ಚೆಂ$_1$ + ತೊರಳೆ$_1$ ]

**ಚೆಂದೊಳ್ಳೆ** 'ಚಂದೊಳ್ಳೆ' ನೋ.

**ಚೆಂದ್ರಕಾಳಿ** 'ಚಾಂದ್ರಕಾಳಿ' ನೋ.

**ಚೆಂಬಕ** 'ಚಂಬಕ' ನೋ.

**ಚೆಂಬಕವಱಿ** 'ಚಂಬಕವಱಿ' ನೋ.

**ಚೆಂಬಟ್ಟೆ** (ನಾ). ಕೆಂಪು ಬಟ್ಟೆ,-ವಸ್ತ್ರ : ಬಾಲೆಯುರದೊಳೊಂದಿದ ಪೊಸ ಬೆವಮುರ್ಮುತ್ತು ಬೀಳಲುಳಿದ ಚೆಂಬಟ್ಟೆಯ ನೂಲಂತೆ ಕಂಗೆಸೆದುದು ತೋರವೊರೆಗಳ ಮೇಲೆ ರಂಜಿಪ ನೀಲ ನಖರೇಖೆ (ಕೃಘುತಿ. ೦೩-೬೪).
[ ಚೆಂ$_1$ + ಬಟ್ಟೆ$_2$ ]

**ಚೆಂಬಡಿ** (ನಾ). ಒಂದು ಪ್ರದೇಶದ ಹೆಸರು (?) : ಅನ್ತೆ ತೆ[೦]ಕ ಅತ್ತಿಯೋಡು ಪಳ್ಳಂ[ಬೆ]x ಗಾಲು ಚೆವ್ಬಡಿ (ಎಕ. X, ೬೭-೯೪; ಶಿನಯ ೫೩).
[ ? ]

**ಚೆಂಬಣ್ಣ** (ನಾ). ೧. ಕೆಂಪುಬಣ್ಣ : ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿಪರ್ಣ ಪುಷ್ಪಗಳು . . . ಬನದಿ ರಂಜಿಸಿತು (ಪ್ರೋಹಕ. ೪-೪೯): ಬಾಯ್ದೆಱೆಬಳದ ಚೆಂಬಣ್ಣಮಿಂತು ಬನ್ನಂಬಡಿಕುಂ (ಚಿಳಪಿ. ೬-೩೩). ೨. ಕೆಂಪುಬಣ್ಣದ ವಸ್ತ್ರ,-ಬಟ್ಟೆ : ಕುಂಭಾಂಡ ಮಂತ್ರಿಶೇಖರ ಮುಖ್ಯ ದೈತ್ಯರ್ಗೆ ಚೆಂಬಣ್ಣವನುಡಿಸಿದನು (ಪ್ರೋಹಕ. ೩೮-೪). [ ಚೆಂ$_1$+ಬಣ್ಣ ]

**ಚೆಂಬಣ್ಣು** (ನಾ). ಕೆಂಪಾದ ಹಣ್ಣು ; ಪಕ್ವವಾದ ಹಣ್ಣು : ಚೆಂಬಣ್ಣು ಗಾಯ್ಗಳಂ ತೊಡವಿಟ್ಟು ಹೂವಿಟ್ಟು ಕಾಣಿಯುವಳ್ (ಕಾಲೂಶ. ೧೨೦-೨೫೦). [ ಚೆಂ$_1$ + ಪಣ್ಣು$_3$ (<ಪಣ್$_3$) ]

**ಚೆಂಬದುವ** (ನಾ). ಕೆಂಪು ಕಮಲ : ಅದಱ ಮೊದಲ್ ಸುವರ್ಣಘಟಿತಂ . . . ಚೆಂಬದು(?)ವದ ಫಂಟಕಾಪಟಕಮಂ ತಳೆದಿಂತೊಗೆದಿರ್ಪುದು (ಶಾಂತೀಶ್ವ. ೦೩-೩೨). [ ಚೆಂ$_1$ + ಪದುವ (<ಪದುಮ) ]

**ಚೆಂಬರಣೆ** (ನಾ). ಕೆಂಪು ಭರಣೆ : ಏಂ ಬಱಿದೆ ಪರವುವ್ವೆ ಪಲವುಂ ಬರಣಿಯನಿರಿಸು ಕೆಲಕೆ ನೆರೆವೆರೆವೇಟಾ ಪೊಂಬರಣಿಗಳೆರಡರ್ಕಂ ಚೆಂಬರಣಿಗಮಿನಿತಱಿಂದೆ ತಣಿದಪವೀಗಳ್ (ಚಿಳಪಿ. ೬-೫೦).
[ ಚೆಂ$_1$ + ಬರಣಿ ]

**ಚೆಂಬರಿಗೆ** (ನಾ). ಚೆನ್ನಾದ ಗುರಾಣಿ : ಕಚಂ ಸಾರಮನಿಪ್ಪ ಚೆಂಬರಿಗೆಯಂ ನಳಿತೋಳಸಿಯಂ ಸಮಂತು ಪೋಲ್ವಾ ರಮಣೀನಿಕಾಯದಿನನಂಗನ ನಚ್ಚಿನ ದಿವ್ಯಶಸ್ತ್ರ ಭಂಡಾರದ ಗೇಹಮಂ ನೆಱೆಯೆ ಪೋಲ್ವುದು ಭೂವನಿ ತೇಶನೋಲಗಂ (ಧರ್ಮಾಮೃ. ೪-೦೪೦). [ಚೆಂ$_2$ + ಪರಿಗೆ$_3$ ]

**ಚೆಂಬವಳ** (ನಾ). ಕೆಂಪು ಹವಳ : ಕರ್ಪುಗಸರದೊಳ್ ಚೆಂಬವಳಮಂ ಕೋದಂತಿರೆ . . . ತಿರುಳ್ಗನ್ನಡದೊಳೆ ಕತೆಯನುಸಿರ್ವೆಂ (ರಾಜಾಶ್ವ. ೬-೦೫) ; ನಡುವಿನಿಂದ ಜಗ್ಗುತ್ತಿದ್ದ ಚೆಂಬವಳದ ಒರೆಯನ್ನು ನಡುಪಟ್ಟಿಯ ಸಮೇತ ಕಳಚಿ (ಸವತಿ. ೪೮). [ ಚೆಂ$_1$ + ಪವಳ ]

**ಚೆಂಬಳದಿ** (ನಾ). ಕೆಂಪು ಮಿಶ್ರಿತವಾದ ಹಳದಿಯ ಬಣ್ಣ : ಬಿರುಕು ದೋರ್ದೊರ್ಳ್ಕುದುದು ಪೊನಲ್ ಚೆಂಬಳದಿಯಾ ಮತಂಗನ ಪೆಸರ ಮಡುವಿ ನೊಳ್ ನೀರು ಓಕುಳಿಯಾಯ್ತು (ಶ್ರೀರಾಮಾ. ೨೯೫-೬). [ ಚೆಂ$_1$+ಪಳದಿ ]

**ಚೆಂಬಾನ್** (ನಾ). ಕೆಂಪಾದ ಆಕಾಶ : ಚೆಂಬಾನ ಕುಂಬಿದುವ ಬೆಟ್ಟಗಳ ಸಾಲು (ಕಾಲೂಶ. ೨೫-೦೨). [ ಚೆಂ$_1$ + ಬಾನ್$_3$ ]

**ಚೆಂಬಾಯ್** (ನಾ). ಕೆಂಪಾಗಿರುವ ಬಾಯಿ: ಆ ಸತಿಗೆದ್ದಂಬಡೆದವು ನಗೆ ಮೊಗವಾಸುರವಡಗಿದ ಚೆಂಬಾಯ್ ನಱುಸುಯ್ ಸೂಸುವ ನಾಸಿಕ (ಉದ್ಭದೀ. ೨-೫೬) : ಚೆಂಬಾಯ್ವೀನನೀಂಟುತ್ತುಂ (ಚಕವಿ. ೬-೨೫೩). [ ಚೆಂ$_1$ + ಬಾಯ್ ]

**ಚೆಂಬಾಯ್ದೆಱೆ**(ನಾ). ೧. ಕೆಂಪನೆಯ ತುಟಿ. ೨. ಕೆಂಬಣ್ಣ ಬಳಿದ ಬಾಗಿಲು. ೧, ೨: ಕಾಣದೆ ಚೆಂಬಾಯ್ದೆಱೆಯುಂ ಮಾಣನ್ನೀ ಪರಿಯ ಮನದ ಬಱುಸಂದೆಯಮಂ (ಚಕವಿ. ೬-೬೨). [ ಚೆಂ$_1$ + ಬಾಯ್ದೆಱೆ ]

**ಚೆಂಬಾವುಗೆ** (ನಾ). ಕೆಂಪಾದ ಪಾದುಕೆ,-ಹಾವುಗೆ: ಲಾಲಿತ ಚೆಂಬಾವುಗೆ ಮೆಟ್ಟಿ . . . ಸಲೀಲೆಯಿಂದೆದ್ದಳಾ ಕುವರಿ (ಕೋಹಕ. ೨೮-೬). [ ಚೆಂ$_1$ + ಪಾವುಗೆ ]

**ಚೆಂಬಾವುಡೆ** (ನಾ). ಕೆಂಪು ಬಣ್ಣದ ವಸ್ತ್ರ : ಚೆಂಬಾವುಡೆಯುಡಿವಸನವ ತೋಯ್ದು . . . ಮೆಱೆಯೆ ಪೀತಾಂಬರ ನೋಡಿ ಹಿಗ್ಗಿದನು (ಕೋಹಕ. ೧೪-೫೮). [ ಚೆಂ$_1$ + ಪಾವುಡೆ (<ಪಾವುಡ) ]

**ಚೆಂಬಾಟೆ** (ನಾ). ಬಾಳೆಯಲ್ಲಿ ಒಂದು ಬಗೆ; ಕೆಂಪುಬಾಳೆ; ಚಂದ್ರಬಾಳೆ: ಪಣ್ತ ಪೊಂಬಾಟೆಯ ಚೆಂಬಾಟೆಯ ರಂಗಬಾಟೆಯ ತೋಂಟದಿನೊಳಗೊಳಗೆ ಬಾಂಬಟ್ಟೆಗರ್ ಪೊಟಲ ಸೊಬಗಂ ನಿರುಕಿಸಲ್ಕೆಂದು (ರಾಮಾಶ್ವ. ೦೦೦-೨೯). [ ಚೆಂ$_1$ + ಬಾಟೆ ]

**ಚೆಂಬಿಸಿಲ್, ಚೆಂಬಿಸಿಲು** (ನಾ). ಕೆಂಪು ಬಣ್ಣದ ಬಿಸಿಲು : ಕೆಂದಾವರೆ ಚೆಂಬಿಸಿಲಿಂದೊಂದುವ ತೆಱದಿಂದೆ ನಿನ್ನ ಮೃದುಪದಯುಗಮೆಂದಂದಿನ ಪೊಲಲಕ್ತಕ ರಸದಿಂದಂ ಪೇೞೆಂದಿತ್ತಿಲ್ಲಿದೇನಿಂದುಮುಖೀ (ಶಾ ದಂ ಪು. ೩೩೨) ; ಪೊಸರನ್ನದ ಲೋಲಾಂಶು ಪುರಗೋಪುರಗಳ ಮೇಲೆ ಚೆಂಬಿಸಿಲಂತೆ ಚಂದ್ರಿಕೆಯಂತೆ ತಮಾಲದಂತೆಸೆದವು (ಶ್ರೀಖಂ. ೨-೨೫) ; ಇನಬಿಂಬ ಕಂದಿ ಚೆಂಬಿಸಿಲಿಷ್ಟು ಮಾಸೆ ಮಾರ್ದನಿಗೊಟ್ಟುವೆಂಟುದಿಕ್ಕುಗಳು (ಭರತ. ೫೦-೦೧೬). **ಚೆಂಬಿಸಿಲು** : ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು ಎದೆಯನ್ನ ತುಂಬಿಸಲು ಬಿಂಬಿಸುತಿರೆ (ಭಾವಜೀ. ೨೦-೪೦೫). 'ಕೆಂಬಿಸಿಲ್' ಪರಾ. [ ಚೆಂ$_1$ + ಬಿಸಿಲ್ ]

**ಚೆಂಬಿಸಿಲ** (ನಾ). ಕೆಂಪಾದ ಬೆಳಕಿನಿಂದ ಕೂಡಿದವನು ; ಸೂರ್ಯ : ಚೆಂಬಿಸಿಲನಂ ಪಾಲ್ಗಡಲನುರುಮುದಗಜವಂ . . . ಕನಸಿನೊಳು ನಿಟ್ಟಿಸಿದಳಾ ಬೆಳಗಪ್ಪ ಜಾವದೊಳ್ (ಜಾಳ್ಮಘಾ. ೩-೩೮). [ ಚೆಂಬಿಸಿಲ್$_1$ + - ಅ$_7$ ]

**ಚೆಂಬಿಸಿಲು** 'ಚೆಂಬಿಸಿಲ್' ನೋ.

**ಚೆಂಬು$_1$, ಚಂಬು, ಚೊಂಬು** (ನಾ). ೧. ತಾಮ್ರ ಮೊದಲಾದ ಲೋಹಗಳಿಂದ ಮಾಡಿದ ಬಾಯಿ ಕಿರಿದಾಗಿರುವ ಗುಂಡನೆಯ ಪಾತ್ರೆ; ತಂಬಿಗೆ : ಸಾದಿನ ಭರಣಿ ಪನ್ನೀರ ಚೆಂಬುಗಳು . . . ತೈಲದ ಕುಪ್ಪಿಗೆಗಳಾ ಗೃಹದೊಳು ಬಿಡಿಬಿಡಿಯಾಗಿಹವು (ಅಂಜಿಹ. ೩-೦೦೬) ; ಪನ್ನೀರ ಚೆಂಬು ಗಂಧೋದಕ ಹೂಡೆ . . . ತಲೆಗಿಂಬಿನೊಳ್ ತಂದಿರಿಸಿದರು (ಕೋಹಕ. ೨೭-೩೫). ೨. ಗೋಪುರದ ಕಲಶ: ಯಿೂ ಹೊನು ಮಹಾದೇವರ ಚೆಂಬಿನ ಒಡಿಲು ಹೊನ್ನಕಳಶಕೆ ಮಾಡಿದ ಧರ್ಮ (ಶಾಇಇ. IX-ii, ೪೫೦-೨೨; 1444); ಬಿಂಮಣ ಭಂಡಾರಿಯ ಮೊಂಮಗಳ ಮಗಳು ಸಂಕಂಮವೊದಲಿಶಿ ಮಹಾದೇವರ ಚೆಂಬಿನ ಕೆಲಸಕ್ಕೆ ಕೊಟ್ಟ ದೊಡವರಹ (ಶಾಇಇ. IX-ii, ೪೭೯-೦೯ ; 1510). ೩. ತಾಮ್ರ : 'ಚೆಂಬು' ಅಂದರೆ ತಾಮ್ರ ಮತ್ತು ತಾಮ್ರದ ಪಾತ್ರೆ (ಸಂಕೋಧ. ೮೮). 'ಚೆಂಬುಂಕಂಟಿಗ' ಪರಾ. **ಚಂಬು** : ೧. ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂಪವಿ. ೫-೫೫) ; ಹಸಿರು ಪೇಯದಿಂದ ತುಂಬಿದ ಕಟ್ಟಿಗೆಯ ಚಂಬನ್ನು ನಮಗೆ ಕೊಟ್ಟು ಕುಡಿಯ ಹೇಳಿದರು (ಮೋದಿಮು. ೦೧೨); ಅಂಬು ಬಿಡಲಿಕ್ಕೆ ತಿಳಿಯದೇ ಇದ್ದರೆ ಚಂಬು ಮುಣಾಗಿಸ ತಿಳಿಯದೇ (ಗಾದ). **ಚೊಂಬು** : ೧. ಚಂದ್ರಕಾಂತಶಿಲೆಯ ಚೊಂಬುಗಳ ಬಾಯಿ ಕಟ್ಟಿ (ಶಾಗಂಧಿ. ೨೦೫-೦೦).

ಚಂಬಿನವೋಗ=ನೀರನ್ನು ತಂದು ಕೊಡುವ ಊಳಿಗ : ದೇವರಾಜ ಒಡೆಯರ್ಯ್ಯನವರ ಚವ್ಕಿನ ವೋಗದ ಚಲುವವ್ವೆಯವರ ಕುಮಾರರಾದ ದೊಡ್ಡದೇವ್ವೆಯ್ಯನವರು (ಎಕ. III ಶ್ರೀರಂಗ. ೦೪-೯೬ ; 1686). [ ದೇ.೫ ತಮಿ. ಚೆಮ್ಬು; ಮಲ. ತುಳು. ಚೆಂಬು; ಕೊಡ. ಚೆಂಬೀ; ತೆಲು. ಚೆಂಬು ]

**ಚೆಂಬು$_2$** (ನಾ). ಸೋರೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ : "ತುಂಬೀ-ಚೆಂಬು, ಸೋರೆ, ತುಂಬೆ" (ಓಷಧಿ. ೭೧). [<ಸಂ. ತುಂಬ ]

**ಚೆಂಬುಕ** 'ಚಂಬಕ' ನೋ.

**ಚೆಂಬುಕುಟಿಗ, ಚಂಬುಕುಟ್ಟಿಗ, ಚಂಬುಕುಟ್ಟಿಗ** (ನಾ). ತಾಮ್ರದ ಕೆಲಸ ಮಾಡುವವನು ; ತಾಮ್ರಕಾರ : "ತಾಮ್ರಕುಟ್ಟಕ" (ನಾಚಿರಾ. ೬). **ಚಂಬುಕುಟ್ಟಿಗ**: "ಶೌಲ್ಬಿಕಃ, ತಾಮ್ರಕುಟ್ಟಕಃ-೨ ಚಂಬುಕುಟ್ಟಿಗನ ಪೆಸರುಗಳು" (ಸಿದ್ಧಾಂತಿ. ೨೬೭). **ಚಂಬುಕುಟ್ಟಿಗ**: ಚಂಬುಕುಟ್ಟಿಗನೊಬ್ಬನ ಲಯಬದ್ಧವಾದ ಸುತ್ತಿಗೆಯ ಏಟನಂತೆ ಕೇಳಿಸುತ್ತದೆ (ಹೋಮುದು. ೨). [ ಚೆಂಬು$_1$ + - ಕುಟಿಗ$_1$ ]

**ಚೆಂಬುಗೆಂಪು** (ನಾ). ತಾಮ್ರದ ಬಣ್ಣ ; ಕೆಂಬಣ್ಣ : ನಿಜಬಿಂಬಂ ಚೆಂಬುಗೆಂಪೇಱೆ . . . ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರ ಪ್ರಾಂತಮಂ (ಅನಂಪು. ೩-೬೬). [ ಚೆಂಬು$_1$ + ಕೆಂಪು$_1$ ]

**ಚೆಂಬುಡಿ** (ನಾ). ಕೆಂಪುಹುಡಿ,-ದೂಳು : ಭೂರಮೆಯ ಸಸಿಂಧೂರ ಸೀಮಂತ ರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ (ರಾಜಶೇ. ೩-೨೦ ವ). [ ಚೆಂ$_1$ + ಪುಡಿ ]

**ಚೆಂಬುರುಳ್** (ನಾ). ಸೊಗಸಾದ ಅರ್ಥ ; ಪರಮಸತ್ವ : ಹುಟ್ಟೆಂಬ ಹೆದ್ದತನ ಹರಿಯೆ ಹಿರಿದೆಂಬ ಚೆಂಬುರುಳ ಕಾಣುವುದೆ ಅಱಿವು (ಕುಱಳ್. ೧-೩೬-೪). [ ಚೆಂ$_2$ + ಪುರುಳ್ ]

**ಚೆಂಬುಳುಕಾಯಿ** (ನಾ). ಒಂದು ಬಗೆಯ ಮರ : ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ವೃಕ್ಷಗಿ. ೩೫-೬೮೩). [ ? ]

**ಚೆಂಬೂ** (ನಾ). ಕೆಂಪು ಬಣ್ಣದ ಹೂ : ಇಳಾತಳದ ತಾರಗೆಯಂತುಪಹಾರಮಾದ ಚೆಂಬೂಗಳಳುಂಬಮಾಗೆ ನಯನೋತ್ಸವಮಾದುದು ತತ್ಪುರೋತ್ಸವಂ (ಚಂದ್ರಪು. ೩-೯೬). [ ಚೆಂ$_1$ + ಪೂ$_2$ ]

**ಚೆಂಬೂತ** 'ಚೆಂಬೋತ' ನೋ.

**ಚೆಂಬೆಣ್ಣೆಗರುಗ** (ನಾ). ಗರುಗದಲ್ಲಿ ಒಂದು ಬಗೆ: "ಬಲಾ, ವಾಟ್ಯಾಲಕಃ ಈ ೨ ಚೆಂಬೆಣ್ಣೆಗರುಗ" (ನಾಚಿರಾ. ೧೧೦). [ ಚೆಂ$_1$ + ಬೆಣ್ಣೆಗರುಗ ]

**ಚೆಂಬೆರಲ್** (ನಾ). ಕೆಂಪನೆಯ ಬೆರಳು : ಸರ್ವಪುರುಷಾರ್ಥಕ್ಕಂ ವಿಧಿಸ್ಥಾನವೆನಿಪ ಪದಮೆಂಬಂತಿರೆ ಚೆಂಬೆರಲ್ಗಡಿಗಳಂ ಕೀಲ್ಮಾಡಿ ಸಸ್ನೇಹಹಸ್ತದೆ ಶೇಷಾದ್ರಿಯೆ ಮುನ್ನಮಪ್ಪೆಡೆಗಳೊಳ್ ಪಾದಾಬ್ಜಮಂ ತೋಱುವೈ (ವಸ್ತ್ರಪಂ. ೦೨-೮೮). 'ಕೆಂಬೆರಲ್' ಪರಾ. [ ಚೆಂ$_1$ + ಬೆರಲ್ ]

**ಚೆಂಬೆಲರ್** (ನಾ). ದಕ್ಷಿಣದ ಗಾಳಿ; ತೆಂಗಾಳಿ: ವನಲಕ್ಷ್ಮಿಯ ನರ್ತಕಿಯಂತೆ ಚೆಲ್ವನಾಳ್ದುದು ಫಲಭಾರಕುಂಬುಲತೆ ಚೆಂಬೆಲರ್ಪೊಯ್ಲಿನ ಲೋಲವೃತ್ತಿಯಿಂ (ಶಾಂತೀಶ್ವ. ೦೦-೮೯). [ ? ಇದು 'ತೆಂಬೆಲರ್' ಎಂಬುದರ ಅಪಲಿಖಿತವಿರಬಹುದು. ]

**ಚೆಂಬೆಳಕು** 'ಚೆಂಬೆಳಗು' ನೋ.

**ಚೆಂಬೆಳಗು, ಚೆಂಬೆಳಕು** (ನಾ). ಕೆಂಪುಬಣ್ಣದ ಕಾಂತಿ,-ಪ್ರಭೆ,-ಪ್ರಕಾಶ: ಪಡುಗಡಲ ತಡಿಯ ಯೆಡೆಯೊಳಿಡಿದ ವಿದ್ರುಮಲತೆಯ ಕುಡಿಯ ನಿಡು ಚೆಂಬೆಳಗೊ (ಪಂದಿಮಾ. ೧೮-೧೮). **ಚೆಂಬೆಳಕು**: ಅಂಬುಜಸಖಂ ಬಂದನಂಬರದಲಿ ತುಂಬಿದ್ದ ಬಲು ಕತ್ತಲೆಂಬ ಕಂಬಳಿ ಕಳಚಿ, ಚೆಂಬೆಳಕು ಹಾಸಿ ನಿಂದುಪ್ಪವಡಿಸಿ (ಕಎಪು. ೨೬-೪). 'ಕೆಂಬೆಳಗು' ಪರಾ. [ ಚೆಂ$_1$ + ಬೆಳಗು$_2$ ]

**ಚಂಬೊಂಗಟ್ಟು** (ನಾ). ಚಿನ್ನದಿಂದ ಮಾಡಿದ ಕಟ್ಟು,-ಚೌಕಟ್ಟು : ಭಟಶ್ರೇಣಿಯ ಚಂಬೊಂಗಟ್ಟು ತಳ್ಪಡ್ಡಣದ ಪೊಳೆವು ಕಂದೂಳಿಯಿಂದೂಂದಿ ಕೆಂಬಟ್ಟೆಯ ಮೇಲ್ಲಿಟ್ಟಾದುದು (ಅನಂಪು. ೧೩-೭೪).
[ ಚಂಬೊನ್ + ಕಟ್ಟು₂ ]

**ಚಂಬೊಂಗಳಸ** (ನಾ). ಚಿನ್ನದ ಕಲಶ : ಒಪ್ಪಂಬೆತ್ತ ಚಂಬೊಂಗಳಸ ದಳವಿಸಿಲ್ ಸಂತತಂ ವ್ಯೋಮಗಂಗಾಬ್ಜದ ವೆರ್ಚಂ ಮಾಡೆ (ಜಗವಿ. ೯-೯೩); ಚಂಬೊಂಗಳ ಸಜ್ಜಳಂ ಹರಿಹರ ಶ್ರೀಗೇಹಮಂ ಕೂಡೆ ಮಾಡಿಸಿದಂ (ಎಕ. XI, ದಾವಡ. ೨೩-೬೨ : 1224). [ ಚಂಬೊನ್ + ಕಳಸ₁(=ಕಲಸ) ]

**ಚಂಬೊಗರ್** (ನಾ). ಕೆಂಪು ಬಣ್ಣದ ಕಾಂತಿ : ಬಂದುಗೆಪೂವಿನ ಪರಾಗಮಂ ಕಳೆಚಿ ಪೊರಳ್ದು ಚಂಬೊಗರನಾಂತು . . . ಚರಿಸುವಂ ಮೆಲ್ಲ ಮೆಲ್ಲನೆ ಮಂದಮಾರುತಂ (ನಂದಿಮಾ. ೩-೨೬) ; ಚಂಬೊಗರಿಂ ರಂಗೇರಿಹ ಜಲದಾಬ್ಜಮುಖಿ ತುಸ ತುಟಿತೆರೆದು ಶಿಶುಚಂದ್ರನ ನಗೆ ನಗುವಳು(ಗಹಿಕ. ೩೦-೨). 'ಕೆಂಬೊಗರ್' ಪರಾ. [ ಚಂ₁ + ಪೊಗರ್ ]

**ಚಂಬೊನ್**, ಚಂಬೊನ್, ಚಂಬೊನ್ನು (ನಾ). ೧. ಚಿನ್ನ ; ಬಂಗಾರ ; ಅಪರಂಜಿ : "ಸೊನ್ನೆ, ಕಸವರಂ, ಚಂಬೊನ್, ಮಿಸುನಿ-ಈ ೪ ಸುವರ್ಣಂ" (ಕಕಸಾ. ೩-೬೧) ; ಚಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡು ಮುತ್ತಿನ ಸೇಸೆಗಳುಂ ಬೆರಸು ಮಹತ್ತರ ದೇವಿಯರ್ ಬಂದು ಪೊಡೆಮಟ್ಟು (ಆದಿಪು. ೨-೬೭ ವ) ; ಚಂಬೊನ್ನ ದೋಣಿಗಳೊಳಮಳಂಕರಿಸಿದ ವಳುಕಿನ ವಟ್ಟವಣಿಗಳೊಳಂ (ಕಾದಂಪೂ. ೭೦) ; ಚಂಬೊನ್ನ ಘಟಂಗಳನ ವ್ಯತಾಂಬುಧಿಯಂಬುಗಳನಾಂತು (ಪಾರ್ಶ್ವಪು. ೧೪-೮೪). ೨. ತಾಮ್ರ : ನಲ್ ಸಮೆದ ಚಂಬೊನ್ನ ಕೊಡಮೆತ್ತಿ ಮೂಜಱ ತಣಿಯಱ್ದು ಮುಡಿಗೆಯ್ವಳಾ ಮಣಿಕೆ (ಅಂಕಿಗೂ. ೨೦-೪೧೬). ೩. ಚಿನ್ನದ ನಾಣ್ಯ : ಚಂಬೊಂಗಳನೋರಂತಿರೆ ಬೇಡಿಕೊಳ್ವೆನೆನ್ನಾರ್ಜಿತಂ (ಧರ್ಮಾಮೃ. ೦-೧೩೭) ; ತುಂಬುರನ ಕಯ್ಯಿಂದ ಹತ್ತೆಂಟು ಸಾವಿರದ ಚಂಬೊನ್ನ ಜಾಳಿಗೆಯ ಕುಡಲೆಂದು ತರಿಸೆ (ಸಾಂಗಪು. ೧೩-೯೬). **ಚಂಬೊನ್** : ೨. ಚಂಬೊನ್ನ ತಾಳ ಕಿನ್ನರಿಗಳನಾಂತು ನಿತಂಬಿನಿಯರುಗಳಿಯ್ದಿದರು (ಜೀವಂಸಾಂ. ೧೦-೩೯). **ಚಂಬೊನ್ನು** : ೧. "ಚಂಬೊನ್ನನಲು ಸುವರ್ಣಂ" (ಕಕಶ. ೩೬) ; ನಿನ್ನ ಕೃಪಾರಸದಿಂದ್ಯೆಸೆಯಾನು ಕರ್ಬೊನ್ನು ಚಂಬೊನ್ನಾದಂತೆ . . . ಭಾಗ್ಯೋನ್ನತಿಯೊಡಗೂಡಿಹೆನು (ಹದಿಬ. ೦-೩೩).
[ ಚಂ₁ + ಪೊನ್./ತಮಿ. ಚೆಮ್ಪೊನ್ ]

**ಚಂಬೊನ್ನು** 'ಚಂಬೊನ್' ನೋ.

**ಚಂಬೊಳೆಪು** (ನಾ).=ಚಂಬೊಗರ್ : ಪೊಳೆವ ಪಳಿಕಿನ ಜವಸರಂ ಕುಸುಮಮಾಗೆ ಚಂಬೊಳೆವಾಂತ ಜಡೆಗಳೆಲದೀರ್ದೊಂಗಲಾಗೆ . . . ಮುನಿಕುಲ ಮೊಪ್ಪಿತಾ ಮಹಾಕಾನನದೊಳು(ನಂದಿಮಾ. ೨-೨೪). [ ಚಂ₁ + ಪೊಳೆಪು ]

**ಚಂಬೋತ**, ಚಂಬೋತ, ಚಂಬೂತ (ನಾ). ಒಂದು ಬಗೆಯ ಕೆಂಪು ಬಣ್ಣದ ಪಕ್ಷಿ ; ಕೆಂಪು ಕಾಗೆ ; ಸಂಬಾರಗಾಗೆ : "ಧೂಮ್ರುಪ್ಯದುಂ ಚಂಬೋತ[ಪಾಠಾಂ. ಕೆಂಬೋತ] ಮೆಂದೆನಿಕ್ಕುಂ" (ಮಂಗರಾ. ೩೨-೦೦) ; ಅಂಚೆಯು ಚಂಬೋತನ ಚಿಲಕಾಲಿಯ ಕೊಂಚೆಯ(ಹಮ್ಮಿರ. ೪-೧೨ ರಗಳೆ) ; **ಚಂಬೋತ:** ಸಾಳುವ ಚಿಲಿಮಿಲಿಗ ಚಂ[ಪಾಠಾಂ. ಚೆಂ]ಬೋತ ಮಿಣ್ಣುಲಿಗ . . . ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುಮಾರಾಅ. ೨೦-೩೩); ಮರಕುಟಿಗ ಚಂಬೋತ ಶುಕ . . . ಸರಟ ಸಾರ ಸಮೂಹ ಮೇಳಗಳಿತ್ತಲಿವೆ (ಕೂರರಾ. ೩-೧-೩೨). **ಚಂಬೂತ** : ಪಿಕ್ಕುಳಿಕ ಚಂಬೂ[ಪಾಠಾಂ. ಬೋ]ತ ಗೀಜಗ . . . ಕೆಂಡವಕ್ಕಿಗಳವಱೊಳೊಪ್ಪಿದುದು (ಸಾಳ್ವಭಾ. ೩-೨೨) ; ಕಾಗೆ ಪಿಕನಂ ಚಂಬೂತ ಮಯೂರನಂ . . . ಮೆಚ್ಚದೊಡದೇಂ ಭಂಗಗಳೇ ಧಾತ್ರಿಯೊಳ್ (ನೀತಿಸಾ. ೭೦೨). 'ಕೆಂಬೋತ' ಪರಾ.
[ ದೇ.೩ ತಮಿ. ಮಲ. ಚೆಮ್ಬೋತ್ತು ]

**ಚೆಕ್** 'ಚೆಕ್ಕು₂' ನೋ.

**ಚೆಕ್ಕಂದ** 'ಚಕ್ಕಂದ' ನೋ.

**ಚೆಕ್ಕನೆ** (ಅ). ಥಟ್ಟನೆ ; ಬೇಗನೆ ; ಕೂಡಲೆ : "ಭೋಂಕನೆ ಚೆಕ್ಕನೆ . . . ಬೆಚ್ಚರ ಬೆಚ್ಚರಮುಂ ಕೂಡಿರೆ ತಮ್ಮೊಳೊದವುಗುಂ ಶೀಘ್ರಾರ್ಥಂ "(ಕಮಿದ. ೩೦೩); ಉರೋಭಾಗಮಂ ಪಾದದಿಂ ಪೊಗೊದೆಯುತ್ತುಂ ಕೋಟ್ಕಳಂ ಚೆಕ್ಕನೆ ಕಿಟ್ಕಿ (ಜಗವಿ. ೬-೩೩) ; ಕೊಳದೊಳು ಕಾಲಂ ತೊಳೆಯಲ್ಪುಗೆ ಯಲ್ಲಿರ್ದ ನಕ್ರಂ ಚೆಕ್ಕನೆ ಚರಣಮಂ ಪಿಡಿಯೆ (ಪುಣ್ಯಾಸ್ರ. ೬-೧೪ ವ) ; ಕಣ್ಬಿಟ್ಟು, ಚೆಕ್ಕನೆದ್ದು ಹೊರಟು ಹೋಗುವವನು (ಬಟ್ಟಅ. ೨೨-೦೦). **ಚೆಕ್ಕಚೆಕ್ಕನೆ** (ದ್ವಿರುಕ್ತಿ) : ಪಟ್ಟವನು ಚೆಕ್ಕಚೆಕ್ಕನೆ[ಪಾಠಾಂ. ಚಕ್ಕಚಕ್ಕನೆ] ಕಟ್ಟಿಯವರವರಕ್ಕಱಿನ ಖಾಂಡಕ್ಕವರ ಪೆಸರಿಕ್ಕಿ (ಮದೀಪು. ೩-೬೬).
[ ದೇ.೩ ತಮಿ.ಚಿಕ್ಕನ್ ; ಮಲ. ಚಿಕ್ಕೆನ್ನು, ಚಿಕ್ಕನೇ ; ತುಳು. ಚಕ್ಕ ]

**ಚೆಕ್ಕವತ್ತ** 'ಚಕ್ಕವತ್ತಿ' ನೋ.

**ಚೆಕ್ಕಿತ** (ನಾ). ಸ್ಪಷ್ಟ, ನಿರ್ದಿಷ್ಟ : ಚೆಕ್ಕಿತಹ ಮಾರ್ಗದೊಳು ಬಹುಜನ್ಮಕ್ಕೆ ಸಾಧನವಹ ಭವಂಗಳನೊಕ್ಕಲಿಕ್ಕುವ ಭೇದವನು ಕೃಪೆಯಿಂದ ಲೆನ್ನೊಳಗೆ ಮಿಕ್ಕು ಬೆರಸಲ್ವೇಕೆನುತ ಮ್ಯೆಯಿಕ್ಕಿ ಬಿನ್ನೈಸಿದರೆ ಶಿಷ್ಯಂಗಕ್ಕಱಿಂ ಬೆಸಸಿದನು ಸದ್ಗುರುನಾಥನುಚಿತದಲಿ (ಸದ್ಗುರು. ೧-೧೩); ಮಾತಿನಲ್ಲಿ ಮತ್ತು ನಡವಳಿಕೆಯಲ್ಲಿ ಚೆಕ್ಕಿತವಾಗಿದ್ದರೆ ಜೀವನದಲ್ಲಿ ಕಷ್ಟಗಳು ಬರುವುದಿಲ್ಲ (ರೂಢಿ). [ <ಖಚಿತ ? ]

**ಚೆಕ್ಕಿಸು** (ಕ್ರಿ). ಹಿಂದಕ್ಕೆ ಅಟ್ಟು ; ಹಿಮ್ಮೆಟ್ಟಿಸು : ಅದರಿಂದ ಕೈಗಾಯ್ದು ನಲ್ಲದೊಡೆ ನಿಲಿಸಿ ಬಾಜಿಯಲಿ ಚೆಕ್ಕಿಸದೆ ಬಿಡೆ (ವಂಕಾರಾ. ೬-೧೦-೪೨).
[ ಚೆಕ್ಕು₀ + - ಇಸು₃ ]

**ಚೆಕ್ಕು₁** 'ಸೆಕ್ಕೆ₁' ನೋ.

**ಚೆಕ್ಕು₂**, ಚೆಕ್₂, ಚೆಕ್ಕು₃, ಚೆಕ್ (ನಾ). ೧. ಚೌಕುಳಿ ಬಟ್ಟೆ ; ಚೌಕುಳಿ ಆಕೃತಿಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ : ಚೌಕುಳಿಬಟ್ಟೆ, ಪಪ್ಪಳಿಬಟ್ಟೆ; ಚೆಕ್ಕು ಬಟ್ಟೆ (Check. ಇಂಕನಿ). **ಚೆಕ್₂** : ೨. ತಾಳೆ ನೋಡುವುದು ; ಸರಿ ನೋಡುವುದು : ಲೆಕ್ಕ ಚೆಕ್‌ಮಾಡಿ ಆಮೇಲೆ ಹಣ ಕೊಡು (ರೂಢಿ). **ಚೆಕ್ಕು₃** : ೧. ಚೆಕ್ಕು ಸೀರೆ ಈಗಿನ ಹೊಸ ಫ್ಯಾಶನ್ನು (ರೂಢಿ). **ಚೆಕ್** : ೨. ಅವರು 'ಚೆಕ್' ಮಾಡಿದ ಬಳಿಕ . . . ರಾತ್ರಿ ಎಂಟರ ವರೆಗೆ ಕೆಲಸ (ನಾಪೋಲೀ. ೮೬). [←ಇಂ. Check ]

**ಚೆಕ್ಕು₃**, ಚೆಕ್ಕು₄ (ನಾ). ಬ್ಯಾಂಕುಗಳಿಂದ ಹಣ ಪಡೆಯಲು ಕೊಡುವ ಆದೇಶಪತ್ರ ; ದರ್ಶನಿ ಹುಂಡಿ ; ಧನಾದೇಶ : ಆರು ಸಾವಿರದ ಇನ್ನೂರೈವತ್ತು ರೂಪಾಯಿಗಳಿಗೆ ರಂಗಾಚಾರಿಯ ರುಜು ಇದ್ದ ಒಂದು ಚೆಕ್ಕು ಇತ್ತು (ಇಲದು. ೧೩೭) ; ಸಮಯಕ್ಕೆ ದೊರೆಯುವ ರೂಪಾಯಿ ಚಿಲ್ಲರೆ ನೂರರ ಚೆಕ್ಕಿಗೆ ಮಿಗಿಲು (ಚಂದ್ರವೀ. ೧೪೯-೯೩). **ಚೆಕ್ಕು₄** : ಈಗ ತಾನೇ ನನಗೆ ಒಂದು ಸಾವಿರ ರೂಪಾಯಿಗೆ ಚೆಕ್ಕು ಬಂದಿದೆ (ರೂಢಿ). 'ಚೆಕ್ಕು ಹುಂಡಿ' ಪರಾ. [ ←ಇಂ. Cheque ]

**ಚೆಕ್ಕುದಱ್**, ಚೆಕ್ಕುದಱ್ (ಕ್ರಿ). ಚೂರಾಗುವಂತೆ ಕಡಿ ; ಚೆಕ್ಕೆಯಾಗುವಂತೆ ಕತ್ತರಿಸು : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ ಚೆಕ್ಕುದಱ್ ದಂತಾಗೆ ತಳ್ತ ಕೂರಾಳ್ಗಳಂ . . . ಬಗಿದು (ಇಹರು. ದೇ. ೪೨-೩). **ಚೆಕ್ಕುದಱ್** : ಕೂರಸಿಯೆಸಕಕ್ಕೆ ಚೆಕ್ಕುದಱ್ಯಲುಱ್ ಮಾವಪನೆಂದೆನುತ್ತೆ ಗರ್ಜಿಸಿ ಜಡಿದೆಟ್ಟಿದನಾ ಯಮಸೂನು ಕರಾಗ್ರದ ಖಡ್ಗಧೇನುವಂ (ಮಹಾನೇ. ೭-೦೩). [ ಚೆಕ್ಕು₁(<ಸೆಕ್ಕೆ₁) + ತಱ್₁ ]

**ಚೆಕ್ಕುಲಗುಲಿ** 'ಚಕ್ಕಲಗುಳಿ' ನೋ.

**ಚೆಕ್ಕುಲಿ** 'ಚಕ್ಕುಲಿ' ನೋ.

**ಚೆಕ್ಕೆ** 'ಸೆಕ್ಕೆ₁' ನೋ.

**ಚೆಕ್ಕವತ್ತ** 'ಚಕ್ಕವತ್ತಿ' ನೋ.

**ಚಿಗಳ್**, ಚಗಳು (ನಾ). ಉತ್ಪನ್ನ ; ಫಸಲು (?) : ಪಗಲಾದಿತ್ಯಂ ಮಕರಂಬುಗುವೊಡೆ ಕರಮೊಳ್ಳಿತಾಗಿ ಜೋಳಂ ಬೆಳೆಗುಂ ನೆಗಟ್ಟಂದಿರುಳುಂ ಪೊಕ್ಕೊಡೆ ಚಿಗಳಗಣಿತಮಲ್ಲಿ ಜೋಳನಾಡೆಯೊಂದು ಬಟ್ಟಂ (ಬಟ್ಟಿಕು. ೮-೨೦೪). **ಚಗಳು :** ಆ ಯೆರಡುತೋಟದ ಒಳಗುಳ ಹಲಸು ಮಣಸು ಮಾವು ಬೆಳುವೊಟಿಯ ಮೊದಲಾಗಿ ಯೇನು ಉಳಂಥಾ ಬೆಳೆಯ ಚಗಳ ನೆಲ್ಲವನು ಆಗು ಮಾಡಿಕೊಂಡು (ಎಕ. VIII, ತೀರ್ಥಹ. ೩೨-೪೬ ; 1418 ?).
[ ? ]

**ಚಿಗಿಚಿ** (ನಾ). ನುಗ್ಗೆಮರ ; "ಶೋಭಾಂಜನ" (ಶಂಡಿಕ).
[ ?./ಮರಾ. ಶೇಗಟ, ಶೇಗವಾ ]

**ಚಿಗತಳಿ** 'ಚಗತಿಳಿ' ನೋ.

**ಚಿಚ್ಚರ** 'ಚಚ್ಚರ' ನೋ.

**ಚಿಚ್ಚರಂ** 'ಚಚ್ಚರಂ' ನೋ.

**ಚಿಚ್ಚರಿಕೆ** (ನಾ). ಚಳಕ; ನೈಪುಣ್ಯ ; ಕೌಶಲ ; ವೇಗ : ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವು[ಕಿ೯೦] ಕೆಯ್ ಚಿಚ್ಚರಿಕೆಯು ಚಲದಿಂ ಕೆಯ್ ಚಳಿವಿನಮಿಱಿದರೆರಡು ಬಲದೊಳಮದಟರ್ (ಪಂಪಭಾ. ೧೩-೩೪).
[ ಚಿಚ್ಚರ(<ಚಚ್ಚರ) + – ಇಕೆ ]

**ಚಿಚ್ಚರಿಗ** 'ಚಚ್ಚರಿಗ' ನೋ.

**ಚಿಚ್ಚರಿತ** (ನಾ). ಜಾಗರೂಕನಾದವನು ; ಜಾಗ್ರತನಾದವನು : ಪೊಚ್ಚಪೊಸಗಂಪನೀಯುತುಮಚ್ಚಿಗೊಳಿಪ್ಪಮಲಧೂಪಮಂ ಶಾಂತಂಗಂ ಚಿಚ್ಚರಿತ ನರ್ಪಿಸುತ್ತುಂ ಸಚ್ಚಿನ್ಮಾದವಾಂತು ರಂಜಿಸಿದಂ (ಉದ್ಭಟ. ೦೦-೩೮).
[ <ಚಿಚ್ಚರ ]

**ಚಿಚ್ಚರಿಸು** (ಕ್ರಿ). ಎಚ್ಚರಿಕೆಯಿಂದಿರು ; ಜಾಗ್ರತೆಗೊಳ್ಳು : ಪನ್ನಗರಾಜನ ನೊತ್ತಿ ಕಟ್ಟಿ ಚಿಚ್ಚರಿಸಿ ಕರಾಗ್ರದೊಳ್ ನಿಱಿವನೋ ಓಡಿದೇಱುವನೋ ಸುರೇಭಮಂ (ಧರ್ಮಾಮೃ. ೯-೧೮೨). [ಚಿಚ್ಚರ (<ಚಚ್ಚರ) + – ಇಸು$_1$]

**ಚಿಚ್ಚರು** 'ಚಚ್ಚರ' ನೋ.

**ಚಿಚ್ಚು$_1$** 'ಚಚ್ಚು$_1$' ನೋ.

**ಚಿಚ್ಚು$_2$** 'ಚಚರ್$_1$' ನೋ.

**ಚಿಜಕರ** (ನಾ). ಒಂದು ಬಗೆಯ ಜೋಳ : ಈ ಜಿಲ್ಲೆಯಲ್ಲಿ ಪೊಟ್ಟಿಗೆ ೧೮ ಪ್ರಕಾರದ ಜೋಳ ಬೆಳೆಯುವದು . . . ಅವುಗಳ ಹೆಸರುಗಳು – ಮೂರ ತಿಂಗಳ ಜೋಳ . . . ಚಿಜಕರ, ಕಾಗಿಜೋಳ (ಕಥಾಗಿ. ೨೬೦). [ ? ]

**ಚಿಜ್ಜ** 'ಧಜ್ಜ' ನೋ.

**ಚಿಜ್ಜೆ$_1$** 'ಸೆಜ್ಜೆ$_1$' ನೋ.

**ಚಿಜ್ಜೆ$_2$** 'ಸೆಜ್ಜೆ$_2$' ನೋ.

**ಚಿಜ್ಜೆ$_3$** (ನಾ). ಒಂದು ಬಗೆಯ ವಾದ್ಯ (?) : ಚಿಜ್ಜೆದನಿ ಕೇಳಿ ಎದ್ದು ಮಜ್ಜಣ ಮಾಡು ರುದ್ರಾಕ್ಷಿ ತೊಟ್ಟು ಮಡಿಯುಟ್ಟು ಸಿದ್ಧರ ಊರಿಗದ ಶಿವಗುಡಿಗೆ ನೀನು ಹೋಗವ್ವ (ಕಕಹ. ೨೦). [ ? ]

**ಚಿಟಿಗೆ** (ನಾ). ಒಂದು ಬಗೆಯ ಆದಾಯ (?) : ಅರಮನೆಗೆ ತೆಱುವ ಸಂಬಳ ಸರತಿ ಕುಡಿಕೆ ಚಿಟಿಗೆ ಅಧಿಕಾರಿ ಸೇನಬೋವರ ಸಂಬಳ ಎಲ್ಲವನು ಬಿಟ್ಟೆವು (ಎಕ. III,ಮಳವ. ೬೬-೫ ; 1550 ?). [ <ಚಟ್ಟಿಗೆ ? ]

**ಚಿಟ್ಟ$_1$** 'ಚರಟ' ನೋ.

**ಚಿಟ್ಟ$_2$** 'ಚಟ್ಟ$_3$' ನೋ.

**ಚಿಟ್ಟಬೆಳಗು** (ಕ್ರಿ). ಚರ್ಮವನ್ನು ಸುಲಿ; ಹಿಂಸೆಮಾಡು : ಅವರು ಚಿಟ್ಟ ಬೆಳಗದಿದ್ದರೂ ಅವರು ಬಿಡುವ ಎಚ್ಚರಿಕೆಯ ಹುಸಿಗುಂಡಿಗೇ ತಮ್ಮಾಜಿ ಗತಪ್ರಾಣನಾಗುತ್ತಿದ್ದ (ದೀಪಹ. I, ೩೮).
[ ಚಿಟ್ಟ$_1$ (<ಚರಟ) + ಬೆಳಗು$_1$ ]

**ಚಿಟ್ಟಿ$_1$** 'ಚಟ್ಟಿ$_1$' ನೋ.

**ಚಿಟ್ಟಿ$_2$** 'ಭಟ್ಟಿ' ನೋ.

**ಚಿಟ್ಟಿ$_3$** (ನಾ) ಒಂದಂ ಬಗೆಯ ಪಕ್ಷಿ : "ಟಟ್ಟಿಭಾಃ, ಕ್ಷುದ್ರ ಪಕ್ಷಿಕಾಃ – ಈ ೨ ಚಿಟ್ಟಿ [ಪಾಠಾಂ. ಚಿಟ್ಟಿ]" (ಹಲಾಯು. ೪೨.೯೯). [ ? ]

**ಚಿಟ್ಟಿಗೆ** (ನಾ). ತೊತ್ತು ; ದಾಸಿ : ಚಿಟ್ಟಿಗೆಯ ಮಗ ಮಲ್ಲನಂ ಕರೆದು ನೊಸಲಲ್ಲಿ ಕಟ್ಟುಗ್ರವಾಗಿ ರಾಜಿಪ ಅಗ್ನಿನೇತ್ರವನು . . . **ತೋಱಿಸಲ್ಕೆ** (ಪ್ರಾರಶಾ. ೦೪-೩೮). [ <ಸಂ. ಚೇಟಿಕಾ ]

**ಚಿಟ್ಟಿಸು** (ಕ್ರಿ). ಚೇಷ್ಟಿಸು ; ಕೆಲಸ ಮಾಡು: ತ್ರಿಜಗವನೆತ್ತುವ ವೀರ್ಯಂ ನಿಜವಾಗಿಹುದವರ್ಗೆ ಚಿಟ್ಟಿಸದೆ ತೆಪ್ಪನಿಹಂ ತ್ರಿಜಗದ ಸುಖಕಧಿಕ ಸುಖಂ ನಿಜವಾಗಿಹುದೆಂತುಟೆಂತು ನುಡಿಯಲಸಕ್ಕಂ (ತ್ರಿಲೋಕ. ೧೦೬).
[ <ಚೇಷ್ಟಿಸು ]

**ಚಿಟ್ಟೆಱ್** 'ಚಟ್ಟೆಱ್' ನೋ.

**ಚಿಟ್ಟು$_1$** 'ಚಟ್ಟು$_1$' ನೋ.

**ಚಿಟ್ಟು$_2$** 'ಚಟ್ಟು$_2$' ನೋ.

**ಚಿಟ್ಟು$_3$** 'ಚಟ್ಟು$_6$' ನೋ.

**ಚಿಡಿಯಕ್ಕ** (ನಾ). ಒಬ್ಬಾಕೆಯ ಹೆಸರು : ಗೋವಿನ್ದ ಮಾಧವರಸರ್ ಕೂಡಲೂರಾ ಮೂವತ್ತುಮಾಳೆ ಚಿಡಿಯಕ್ಕಂ ಪೊಯ್ದು ಮುಣ್ಣು ಇರ್ಕ್ಕಣ್ಣಾಗಂ (ಎಕ. XII, ಪುಗ್ಗಿ. ೫೦-೫ ; ಸು. 960 ?).
[ ಚಿಡಿ$_0$ + ಅಕ್ಕ$_1$ ]

**ಚಿಡ್ಡಿ** 'ಚಡ್ಡಿ$_1$' ನೋ.

**ಚಿಣತಿ** (ನಾ). ಹಿಮ್ಮೇಳದ ವ್ಯಕ್ತಿ (?) : ಇನ್ನಾಡುವೆ ಜಂಗಮ ಬಹುರೂಪ . . . ಇಲ್ಲನ್ನೋ ಮದ್ದಳೆಗ ಒಲ್ಲೆ ಎನ್ನೋ ಕಹಳೆಕಾಱ ಬಂದವ ಹರಿದು ನಿಂದು ಹಾಡಿರೋ ಚಿಣತಿಯರಿರಾ (ಸರ್ವವ. ೪೮-೨೫೫) 'ಚಿಹಣಿ' ಪರಾ.
[ ? ]

**ಚಿಣ್ಣವೂರ್** (ನಾ). ಒಂದು ಊರಿನ ಹೆಸರು : ಅವರಾಳ್ಚಿಣ್ಣವೂರೊಳೆ ಎಱಮ್ಮನಾಸನ್ನಿ ಅಳಿ (ಎಕ. VI, ಕಡೂರು. ೧೪೫-೪ ; ಸು. 750).
[ ಚಿಣ್ಣ? + ಊರ್ ]

**ಚಿದರಿಸು** 'ಕೆದಱಿಸು' ನೋ.

**ಚಿದಱು** 'ಕೆದಱ್$_1$' ನೋ.

**ಚಿದಾಕ** (ನಾ). ಒಂದು ಬಗೆಯ ಮರ (?) : ಚಿಟ್ಟ ಕಿಬ್ಬಿಯಲ್ಲಿ ಚಿದಾಕದ ತಾಳಲ್ಲಿ ಈಶಾನ್ಯ ಮುಖವಾಗಿ ನಟ್ಟ ಕಲ್ಲು ೧ (ಎಕ. XIV, ನಂಜನ. ೨೯೫ ಪುಟ. ೧೫೦-೩೩ ; 1716). [ ? ]

**ಚಿದುರು$_1$** 'ಕೆದಱ್$_1$' ನೋ.

**ಚಿದುರು$_2$** 'ಚದುರ್' ನೋ.

**ಚಿದುಱಿಸು** 'ಕೆದಱಿಸು' ನೋ.

**ಚಿದುಱು** 'ಕೆದಱ್$_1$' ನೋ.

**ಚಿನ್ನ**, ಚನ್ನ$_1$ (ನಾ). ೧. ಸುಂದರನಾದವನಂ ; ಚೆಲುವನಾದವನು : ಪೊನ್ನುಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾವ. ೬೦); ಚಲದಭಿರಾಮನಣ್ಣನ ತವರ್ಮ್ಮನೆ ಚಿನ್ನರ ಚಕ್ರವರ್ತ್ತಿ (ಎಕ. VIII. ಸೊರಬ. ೨೬೬-೪೨ ; ಸು. 1165) ; ಎನ್ನಾನಂದಸುಧಾಬ್ಧಿವರ್ಧನ ಕಳಾ ಸಂಪನ್ನನಂ ಚಿನ್ನನಂ . . . ಕಂಡೆಂ (ಪಂಪಾಶ. ೩೫) ; ಚೆಲುವರ ಚೆಲ್ವ ಚಿನ್ನಿಗರ ಚಿನ್ನ ಸುವೀರರ ವೀರ (ಅಪಶ. ೧೨೨). ೨. ಶೂರ; ಪರಾಕ್ರಮಿ: ಚಿನ್ನರನಡಿಗೊತ್ತಿ ಮಂಡಳಿಕರಂ ಬೆಸಕೆಯ್ಸಿ (ಪಂಪಭಾ. ೬-೦೮). 'ಚೆನ್ನ ಪೊಂಗ' ಪರಾ. ೩. ಒಳ್ಳೆಯದು : ತಾನು ಒಬ್ಬ ತಳವಾರನಾಗಿದ್ದರೆ ಎಷ್ಟು ಚಿನ್ನ (ಧರ್ಮಾಶಾ. ೬೩). ೪. ಚೆಲುವು; ಸೌಂದರ್ಯ; ಸೊಗಸು: ಬಿಸುಗದಿರಳಿದಹಿಮಕಿರಣನಂತೆ ನೋಳ್ಪರ ಕಣ್ಗೆ ಚಿನ್ನಬಪವಂ ಚಿನ್ನಮಂ ತಳೆದನು (ಚಂಪು. ೫-೪೨). ೫. ಅಂದವಾದಂದು ; ಮನೋಹರ

ವಾದಂದು : ಭೃಂಗಕೋಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೧-೯೦). (ಗು). ೬. ಅಂದವಾದ ; ಚೆಲುವಾದ : ಧರಣೀನಾಥನ ಚೆನ್ನ ಹೊನ್ನ ಕರುಮಾಡಂ ಮಾಳ್ಪುದಾಶ್ಚರ್ಯಮಂ (ಶಾಂತಿಪು. ೪-೩೨). 'ಚೆನ್ನಪೂ' ಪರಾ. ಚನ್ನ$_1$: (ಕ). [ ಚೆನ್ನು + – ಅ$_7$ ]

**ಚೆನ್ನಂಗಿ,** ಚನ್ನಂಗ, ಚನ್ನಂಗಿ$_1$, ಚೆನ್ನಗೆ$_1$, ಚೌನಂಗಿ (ನಾ). ಒಂದು ಬಗೆಯ ಮರ : "ಚೆನ್ನಂಗಿ ಚಲಿಯುಕ್ಕುಂ" (ಮಂಗರಾ. ೩೭-೧೯) ; ಹಲಸಾಲಂ ತಡಸಾಸು . . . ಚೆನ್ನಂಗಿ ಬೊಬ್ಬುಲಿ (ಪಾರ್ಶ್ವಪು. ೦೨-೫೮) ; ಕರುವಿಡಿದಿರ್ಪಾ ಚೆನ್ನಂಗಿಯ ತರು ಡಾಣೆಗೆ (ಕಮದ. ೬೨ ಪ್ರಯೋ) ; ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ (ಹಮ್ಮಿರ. ೪-೬೯) ; ತೇಗ ಚೆನ್ನಂಗಿ ಬನ್ನಿ ಪಾದ್ರಿಯು . . . ಮೆರೆದವರಣ್ಯದಿ (ಗೋಹಾಡು. ೪). **ಚನ್ನಂಗ :** (ಕ). **ಚನ್ನಂಗಿ$_1$ :** ಹೂಲಿ ಮಾಲಿನಿ ಬನ್ನಿ ಹೊನ್ನೆ ಚನ್ನಂಗಿ [ಪಾಠಾಂ. ಸೊಗಡಗಿಲು] (ಸೋಮಶ. ೩-೨) ; ಹೊನ್ನೆ ಹೊನ್ನಯ್ಯಗಳ ಮಗನಂ ಮನ್ನಿಸಾ ಚ[ಪಾಠಾಂ. ಚೆ]ನ್ನಂಗಿಯೇ ಅ ಚೆನ್ನಯ್ಯಂಗೊಲಿದಭವನೆಂದಿಗೆ ಚೆನ್ನಮಾಡುವನು (ಬಸಪು. ೪೫-೩೭) ; ಚನ್ನಂಗಿ (ಚೊಂದಾರ) . . . ಇಮಾರತಿಗೆ ಮೇಲಾದದ್ದು (ಶಭಾಗ. ೩೯). **ಚೆನ್ನಗೆ$_1$ :** ಎಲವದ ಬೇಲ ಚೆನ್ನಗೆಯ ಪೊನ್ನೆಯ ಕವ್ಮರದ (ಲೀಲಾವ. ೬-೨೭). **ಚೌನಂಗಿ:** ಮರಗಳು: ಹೆಸವ, ಹೆಬ್ಬಲಸು . . . ಗೊರವಿ, ಹೆಣ್ಣುಗೊರವಿ, ಚೌನಂಗಿ, ಮಡ್ಡಿ (ನಮ್ಮನು. ೨೩೬). [ ದೇ.೫ ತೆಲು. ಚೆನ್ನಂಗಿ, ಚೆನಂಗಿ ]

**ಚೆನ್ನಂಗಿಬಿದಿರು, ಚನ್ನಂಗಿಬಿದಿರು** (ನಾ). ಒಂದು ಬಗೆಯ ಬಿದಿರು : ಅಣ್ಣ ತಮ್ಮರು ಕೂಡಿ ನಿನ್ನೆ ಗುಡ್ಡವನೇರಿ ಚೆನ್ನಂಗಿಬಿದಿರ ಕಡಿದಾರ (ಕನ್ನಹಾ. ೦೮). **ಚನ್ನಂಗಿಬಿದಿರು :** ಅಣ್ಣ ತಮ್ಮ ಕೂಡಿ ನಿನ್ನೆ ಗುಡ್ಡಾ ಏರಿ ಚನ್ನಂಗಿಬಿದಿರ ಕಡಿದಾರೊ (ಹಳ್ಳಿಯು. ೩೧).

[ ಚೆನ್ನಂಗಿ$_0$ + ಬಿದಿರು$_2$ (<ಬಿದಿರ್$_3$) ]

**ಚೆನ್ನಕ್ಷಿ** (ನಾ). ಒಳ್ಳೆಯ ಕಣ್ಣು ; ದೋಷರಹಿತವಾದ ಕಣ್ಣು : ನಿನ್ನ ನಯನದೊಳೆನ್ನ ಚೆನ್ನಕ್ಷಿಯುನಮರ್ಚುವೆನು (ಬಸಪು. ೧೮-೬೦).

[ ಚೆನ್ನ + ಅಕ್ಷಿ ]

**ಚೆನ್ನಗಂಡ** (ನಾ). ಸುಂದರನಾದ ವೀರ ; ಚೆಲುವನಾದ ಸಾಹಸಿ : ಮಿಡಿದುಟುಣ್ಮ ಪುಷ್ಪಕೃತ ಶೇಖರದಂತಿರೆ ಕೊಂಡು ಪೋದರಚ್ಚರಸಿಯರಣ್ಮ ಸತ್ತ ಭಟರಂ ಕೊನೆವಿಮಾಸೆಯ ಚೆನ್ನಗಂಡರಂ (ಗದಾಯು. ೪-೨೨).

[ ಚೆನ್ನ + ಗಂಡ$_1$ ]

**ಚೆನ್ನಗೆ$_1$** 'ಚೆನ್ನಂಗಿ' ನೋ.

**ಚೆನ್ನಗೆ$_2$** (ನಾ). (ಕರಾ) ಬಾಯಿಕಟ್ಟಿರುವ ಚೀಲದಲ್ಲಿರುವ ಧಾನ್ಯವನ್ನು ಪರೀಕ್ಷಿಸುವುದಕ್ಕಾಗಿ ಸ್ವಲ್ಪ ಹೊರಗೆ ತೆಗೆದುಕೊಳ್ಳಲು ಸಂದಿಯಲ್ಲಿ ಚೂಪಾಗಿದ್ದು ಕೊಳವೆಯಂತಿರುವ ಕಬ್ಬಿಣದ ಸಾಧನ ; ಸಕ್ಕರೆ ಗುತ್ತಿ : ಅಕ್ಕಿ ಪರೀಕ್ಷಿಸಲು ಚೆನ್ನಗೆ ಸಾಲದೆ (ರೂಢಿ). [ ? ]

**ಚೆನ್ನಡಿ,** ಚನ್ನಡಿ (ನಾ). ೧. ಚೆಲುವಾದ ಪಾದ ; ಮನೋಹರವಾದ ಪಾದ : ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ (ಚಬಪು. ೩೭-೪೦) ; ಎನ್ನ ಜನ್ಮಕ್ಕೆ ಸಾಫಲ್ಯಮಾದುದು ನಿನ್ನ ಚೆನ್ನಡಿಯೂಳಿಗದಿಂದ (ಹದಿಬ. ೧-೩೯) ; ಚೆನ್ನಡಿ ಬಣ್ಣೊಡೆ ಬಡನಡು (ಚಳವಿ. ೩-೯೦). ೨. ಮೇಲಾದ ಪಾದ ; ಶ್ರೇಷ್ಠವಾದ ಪಾದ : ಸನ್ನುತ ಕವಿ ಪಂಪರಾಜಸು ಮೊದಲರ ಚೆನ್ನಡಿಗಳಿಗೆಱಗುವೆನು (ಅಂಜನ. ೦-೩೯). ೩. ಚೆನ್ನಾದ ಅಡಿಭಾಗ,– ತಳಭಾಗ : ಗೂಳಿಯ ಪಂದಿಯ ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣ ವೆಡ್ಡಮಾಗೆ ಮೂದಲಿಸಿ ಪೊಡರ್ಪು ಮೆರ್ಚೆ ಕಿಲರುಕರ್ಗುಡಿಗಳ್ ತಱಿಸಂದು ಕಾದಿದರ್ (ಕಬ್ಬಿಕಾ. ೨೭೨). **ಚನ್ನಡಿ:** ೨. ಸನ್ನುತ ಚತುರ್ವಿಂಶತಿ ಜಿನರಾಜರ ಚನ್ನಡಿಗಳಿಗೆಱಗುವೆನು (ತ್ರಿಪುಸಾಂ. ೦-೬). [ ಚೆನ್ನ + ಅಡಿ$_1$ ]

**ಚೆನ್ನನಾಯಿ** (ನಾ). (ಕರಾ) ಒಂದು ಬಗೆಯ - ಕಾಡುನಾಯಿ ; ಹುಲಿಯನ್ನು ಹೆದರಿಸುವ ಒಂದು ಬಗೆಯ ನಾಯಿ.

[ ←ತುಳು. ಚೆನ್ನನಾಯಿ=ತೋಳ ]

**ಚೆನ್ನನೆ** (ಅ). ಅಂದವಾಗಿ ; ಮನೋಹರವಾಗಿ : ಸುರಹೊನ್ನೆಯ ಚೆನ್ನನಪ್ಪರಲನೊತ್ತರದೆ ಸುತ್ತಿ ತೆತ್ತಿಸಿದ ಕೈರವದ ಕರ್ಣಪೂರಂಗಳುಮಂ (ಜಗವಿ. ೬-೦೬ ವ).

**ಚೆನ್ನಚೆನ್ನನೆ** (ದ್ವಿರುಕ್ತಿ) : ಸನ್ನಿ ತೆಱಪುಗೊಡಿ ಸಾಗಿ ಮೆಲ್ಲಗೆಯೆಂದು ಚೆನ್ನಚೆನ್ನನೆ ಸೊಲ್ಲಿಸಿದರು (ಭರತ. ೮-೯೫). [ ಚೆನ್ನ + – ಅನೆ$_1$ ]

**ಚೆನ್ನಪೂ** (ನಾ). ಅಂದವಾದ ಹೂವು : ವಿಳಿರ್ಪ ಕುರುಳ್ಗಳೊಳ್ ತೊಡರ್ದು ದೇಸಿಯನಾವಗವಿಪಾವ ಚೆನ್ನಪೂಗಳನವನೊಯ್ಯನೋಸರಿಸುತುಂ (ಪಂಪಭಾ. ೨-೦೭) ; ತೊಳಗುವ ಚೆನ್ನಪೂಗಳಲಕಾವಳಿಯೊಳ್ಮೆಱುಗಲ್ (ಕಾದಂಪೂ. ೭೫೪). [ ಚೆನ್ನ + ಪೂ$_2$ ]

**ಚೆನ್ನಪೊಂಗ** (ನಾ). ೧. ಸುಂದರನಾದ ವೀರ; ಚೆಲುವನಾದ ಪರಾಕ್ರಮಿ: ಕೊಂಡು ಪೋದರಚ್ಚರಸೆಯರಣ್ಮ ಬಿಟ್ಟ ಭಟರಂ ಕೊನೆವಿಮಾಸೆಯ ಚೆನ್ನಪೊಂಗರಂ (ಕಾವ್ಯಾವ. ೮೩೪); ಕವಿ ಪಂಡಿತರೋದುವ ಕೊಂಕು ಚೆನ್ನಪೊಂಗರ ಕುಡಿಮುಂಜೆಱಂಗು ನಿಡುಬಯ್ತಲೆ ಬಾರ್ತೆಯೆ (ಅನಂಪು. ೮-೪೯) ; ಮಾಧವಂ . . . ಗಾಡಿಯಿಂ ಬರ್ಪ ಚೆನ್ನಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ (ರಾಮಾಶ್ವ. ೫೭-೧೫). ೨. ಉತ್ತಮನಾದ ವೀರ ; ಶ್ರೇಷ್ಠನಾದ ಕಲಿ : "ಚೆನ್ನಪೊಂಗಂ–ವೀರಂ" (ಕಮದ. ಪರಿ. ೨) ; ಕುರುಬಲದೊಳ್ ಕರಂ ನೆಗಟ್ದ ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟ ಪಣ್ ಕೆದಱಿದಂತೆ ನಿರಂತರಮಾಜಿರಂಗದೊಳ್ ಪರೆದಿರೆ (ಪಂಪಭಾ. ೮-೧೦೬) . [ ಚೆನ್ನ + ಪೊಂಗ ]

**ಚೆನ್ನಭಕ್ತಿ, ಚನ್ನಭಕ್ತಿ** (ನಾ). ಉತ್ತಮವಾದ ಭಕ್ತಿ : ಅಭವಂ ನಗುತ್ತಾ ನಿಂಬಿಯಕ್ಕನ ಚೆ[ಪಾಠಾಂ. ಚ]ನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸಪು. ೨೪-೭೫). **ಚನ್ನಭಕ್ತಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೆನ್ನ + ಭಕ್ತಿ ]

**ಚೆನ್ನಭಾಷಿತ** (ನಾ). ಸೊಗಸಾದ ಮಾತು ; ಉತ್ತಮವಾದ ಮಾತು ; ಸುಭಾಷಿತ : ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇಟ್ದೀ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ).

[ ಚೆನ್ನ + ಭಾಷಿತ ]

**ಚೆನ್ನಲರ್** (ನಾ). ಅಂದವಾದ ಹೂವು : ಅಮರರು ಚೆನ್ನಲರ್ಮಳೆಯು ಕಱೆದರು (ಭರತ. ೪೭-೦೦೯). [ ಚೆನ್ನ + ಅಲರ್$_2$ ]

**ಚೆನ್ನಸರ** (ನಾ). ಚೆನ್ನಾಗಿರುವ ಕಂಠಹಾರ ; ಸುಂದರವಾದ ಹಾರ : ಲಾಳಿದಾರ ಕಂಠಿ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವಾಕಳಾವು (ಕುಠಾಸಾಂ. ೪೨-೨೩) ; ಹರಳೋಲೆ ಕಟ್ಟಾಣಿಮುತ್ತಿನ ವೆಂಟೆಯ ಮಿಱುಗುವ ಚೆನ್ನಸರಗಳು (ಕಂಸವಿ. ೯-೭೫). [ ಚೆನ್ನ + ಸರ$_6$ ]

**ಚೆನ್ನಸುಗೆ** (ನಾ). ಸುಂದರವಾದ ಅಶೋಕವೃಕ್ಷ : ಚೆನ್ನಸುಗೆಯ ನೆಬಲಡಿಯ ನುಣ್ಮಟಲೊಟ್ಟಲೊಳ್ ಕೆಂದಳಿರಿಂ ನಲ್ವಾಸುಗೆಯ್ದು (ರಾಮಾಶ್ವ. ೩೧-೨೫). [ ಚೆನ್ನ + ಅಸುಗೆ ]

**ಚೆನ್ನಳಗ** (ನಾ). ಚೆಲುವಾದ ಹವಳದ ಬಣ್ಣದ ಕುದುರೆ : ಜನ್ನ ಜಿನ್ನಾರ ಚೆನ್ನಳಗ ಚೆಲುವ ಚೀರ ತನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಱಿ ನೃಪಕುಲರನ್ನರಿಗಂದು ತೋಱಿದರು (ಅಂಜನ. ೬-೮೩).

[ ಚೆನ್ನ + ಅಳಗ$_1$ ]

**ಚೆನ್ನಾಕಳ್** (ನಾ). ಉತ್ತಮವಾದ ಹಸು; ಒಳ್ಳೆಯ ಜಾತಿಯ ಗೋವು: ಖುತ್ತಿಜರೆಲ್ಲರ್ . . . ರನ್ನಮಂ ಪೊನ್ನ ಹೇಱಂ ಚೆನ್ನಾಕಳಂ ಪ್ರತಿಗ್ರಹಿಸಿ ತಾಮುಮನಂ ಪರಸಿ ಬೀಟ್ಕೊಂಡರ್ (ರಾಮಾಶ್ವ. ೦೩೬-೦೩). [ಚೆನ್ನ+ಆಕಳ್]

**ಚೆನ್ನಾಟ** (ನಾ). ಲೀಲೆ ; ವಿಲಾಸ ; ವಿನೋದ : ಊಟವ ಮಾಡಿದು ವಧುಬಂಧುಗಳು ಚೆನ್ನಾಟದಿ ಕೃಷ್ಣ ಕೈದೊಳೆದು . . . ಕರ್ಪೂರಕೂಟ ವೀಟಿಕೆಯನು ಸವಿದು (ಪ್ರೋಹಹ. ೧೪-೦೬). [ ಚೆನ್ನ + ಆಟ ]

**ಚೆನ್ನಿ, ಚನ್ನಿ** (ನಾ). ಚೆಲುವೆ ; ಸುಂದರಿ : ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ ಹೋಗೇತಿ ಎತ್ತೆತ್ತ (ಗರಿ. ೧೧೧-೩). **ಚನ್ನಿ** : "ಚನ್ನಿ=ಚೆಲ್ವೆ" (ಶಾಶಕ್ಕ. ೩೯) ; ಚನ್ನಿಗೆ ನಾರಿಕುಲರನ್ನಿಗೆ ಭಾಗ್ಯಸಂಪನ್ನಿಗೆ ಸಗರಕುಲ ಪಾವನೆಗೆ (ತೀರ್ಥಮು. ೧೪). [ ಚೆನ್ನ + – ಇ₃ ]

**ಚೆನ್ನಿಕೆ** (ನಾ). ಚೆಲುವು ; ಸೌಂದರ್ಯ : ಕಲಿ[ತ]ನದುರ್ಕೆ ಜೌವನದ ಚೆನ್ನಿಕೆ ರೂಪಿನೊಳೊಲ್ಪೆ × ಳ್ದು ಮಾರ್ವ್ವಲಿದದಟರ್ದ್ದ ವೀರ್ಯ್ಯ ವಿರದಾಯದೊಳಿನ್ನು ಮ ನ ಕ್ಕೆ ಸಂಕೆಯನ್ನೊಲಗಿಸಿದಂ (ಶಾಇಇ. XI-I, ೪೦-೩೩; 969). [ ಚೆನ್ನ + – ಇಕೆ ]

**ಚೆನ್ನಿಗ, ಚನ್ನಿಗ** (ನಾ). ೧. ಚೆಲುವನಾದವನು; ಸುಂದರ; ಸ್ಫುರದ್ರೂಪಿ: ತಮ್ಮ ವಿಭೂತಿಯ ತಮ್ಮ ತಮ್ಮ ಚೆಲ್ವುಗಳ ವಿಲಾಸದುರ್ಮೆಗಳೊಳಾವೆವ ಗಾಗಿಪೆವೆಂದು ಬಂದ ಚೆನ್ನಿಗರು ಮನಾಸೆ ಕಾ ಟ ರು ಮ ನೊ ಲ್ಲ ದೆ (ಪಂಪಭಾ. ೧-೧೧೬); ಕಡುಗೂರ್ಪ ಮಾಡದಿಯ ಮತ್ತೊಬ್ಬ ಚೆನ್ನಿಗ ಕೊಂಬ (ಬಸವ. ೪೦) ; ಧರೆಗೆ ಕಾಮನೆ ಚೆಲ್ವ ಕಾಮನಿಂದಾ ಚಕ್ರಧರನೆ ಚೆನ್ನಿಗ ನೆನಲೆಸೆದಾ (ಭರತ. ೫೦-೬೪). ೨. = **ಚೆನ್ನಿಗರಾಯ** : ನೆಟಿ ನಂಬಿದೆನು ಬೇಲೂರ ಚೆನ್ನಿಗನ (ಪುರಂದ.೧-೯೦-೩). **ಚನ್ನಿಗ**: ೧. ಚ[ಹಾಕಾ. ಚೆ]ನ್ನಿಗನು ಮಡಿದನು ಶಿವಶಿವಾ ಎನ್ನದೆ (ಬಸಪು. ೪೮-೧೧) ; ಬನ್ನಿರೈ ನೀವ್ ಘಟ್ಟ ಬೆಟ್ಟದ ಚನ್ನಿಗರು (ತೊರೆರಾ. ೬-೧೪-೨೯). [ ಚೆನ್ನ + – ಇಗ ]

**ಚೆನ್ನಿಗತನ, ಚನ್ನಿಗತನ** (ನಾ). ಚೆಲುವು; ಸೌಂದರ್ಯ: ಗಜ ಕಿಟ್ಟ ಕೀತ ಬಾವಲ ತೆಜದಿಂ ಬೀಭತ್ಸಮಪ್ಪೊಡಲ್ಗೆ ಕಿಲರ್ ಬೇಸಟುತುಂ ನೆನೆವರ್ ಮುನ್ನಿನ ವೆಜರಂಗನೆಯರ್ಗೆ ಮಟಿವ ಚೆನ್ನಿಗತನವಂ (ವರ್ಧಪು. ೧೦-೩೯). **ಚನ್ನಿಗತನ**: ಮನಂ ವೆಜರಂಗನೆಯರ್ಗೆ ಮಟಿವ ಚನ್ನಿಗತನವಂ (ಜ್ಞಾನಚಂ. ೨೦-೮). [ ಚೆನ್ನಿಗ + – ತನ ]

**ಚೆನ್ನಿಗರಾಯ, ಚನ್ನಿಗರಾಯ** (ನಾ). ವಿಷ್ಣುವಿನ ಒಂದು ಮೂರ್ತಿ ; (ಬೇಲೂರಿನ) ಚನ್ನಕೇಶವ : ಕಂತುಪಿತನು ವೇಲಾಪುರದ ಚೆನ್ನಿಗರಾಯ ಎಂಥಾ ಗಾಡಿಗಾರನೆ (ಪುರಂದ. ೧-೦೬೦ ಪಲ್ಲವಿ) ; ಮದನನ ಹೆತ್ತವನು ವರಪುರದರಸ ಚೆನ್ನಿಗರಾಯ (ನಳಚ. ೨-೪೯) ; ಮಂಗಳಂ ಬೇಲೂರು ಚೆ[ಹಾಕಾ. ಚ]ನ್ನಿಗರಾಯ ಕೇಶವಗೆ (ಹರಿಸಾ. ೧೧೧). **ಚನ್ನಿಗರಾಯ** : ಮೇಲಿನ 'ಹರಿಸಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೆನ್ನಿಗ + ರಾಯ ]

**ಚೆನ್ನಿತು** 'ಚೆನ್ನಿತ್ತು' ನೋ.

**ಚೆನ್ನಿತ್ತು, ಚನ್ನತು, ಚೆನ್ನಿತು** (ಗು). ೧. ಸುಂದರವಾದ ; ರಮಣೀಯ ವಾದ : "ರಯುಃ, ರಯಣಂ, ರಯ್ಯಂ, ರಯಣೀಯಂ, ಈ ೪ ಚೆನ್ನಿತ್ತು" (ಶಾಶಕ್ಕ. ೧೧೧). **ಚನ್ನತು**: ೨. ಒಳ್ಳೆಯ ; ಚೆನ್ನಾದ : ಈ ಸುದಿನ ಚನ್ನತಾಹವವೀರರೆಂಬುದನ್ನರಿಯನಾ (ತುರಂಗ. ೬೩-೧೧). **ಚೆನ್ನಿತು** : ೩. ದಪ್ಪವಾದ ; ಪುಷ್ಟವಾದ : "ಮೇದಸ್–ನೆಣಂ; ಮೇದುರಂ-ಚೆನ್ನಿತು" (ಶಾಶಕ್ಕ. ೦೩೦). [ < ಚೆನ್ನು ]

**ಚೆನ್ನೀರ್** (ನಾ). ನೆತ್ತರು ; ಕೆನ್ನೀರು ; ರಕ್ತ : ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡುನರ ಹರಿದು ಚೆನ್ನೀರ್ಗಳು ಹರಿದು (ಕಂನವಿ. ೧೪-೮೬). 'ಕೆನ್ನೀರ್₁' ಪರಾ. [ ಚೆಂ₁ + ನೀರ್₁ ]

**ಚೆನ್ನು, ಚನ್ನು** (ನಾ). ೧. ಅಂದ ; ಸೊಗಸು ; ಚೆಲುವು : ಸೂಳೆಯಂತೆ ಚೆನ್ನ ಮೆಚಿಯದೆ (ಧರ್ಮಾಮೃ. ೩-೯೯) ; ಬಣ್ಣ ರೂಪವಹ ಚೆನ್ನುವ ಹರಿದಲ್ಲಿ ಅದನಲ್ಲಿಯೇ ಮಾಡಬಹುದು (ಮೋಕ್ಷಮಾ. ೯೩-೩೭೬) ; ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ (ಅರಿರ. ಹ. ೧೨೩-೦೪); ಉಚ್ಚಾರಣೆಗೆ ಚೆನ್ನಲ್ಲವೆಂಬುದನ್ನು ಲಕ್ಷಿಸಿಯೇ . . . ಕನ್ನಡಕ್ಕೆ ಸಹಜವೆನಿಸುವಂತೆ ಅನುಸ್ವಾರವನ್ನಾಗಿ ಇಟ್ಟುಕೊಂಡರು (ಸಂಶೋಧ. ೫೦). ೨. ಸರಿ ಯಾಗಿರುವಿಕೆ; ನೇರ್ಪು; ಋಜುತೆ : ಚೆನ್ನೇವುದೋ ಸಚ್ಚರಿತಂ ಚೆನ್ನಲ್ಲದ ದೇಹಿಗೆ (ಸಮುಪ. ೬-೪೪) ; ಚೆನ್ನಿಂ ನಮಸ್ಕರಿಸಿ (ಪದ್ಮಚಾ. ೬-೨೨). **ಚನ್ನು**: ೧. "ಚೆಲುವಿಕೆ" (ಜಾನಕೋ. ೫೫). ೩. ನೆಟ್ಟಗಿರುವುದು: ನೇರವಾಗಿರು ವುದು : ನಾಯ ಬಾಲ ಸಡೆಯಂ ಕಟ್ಟಲ್ಕೆ ಚ[ಹಾಕಾ. ಚೆ]ನ್ನಪ್ಪುದೆ (ಸೋಮೇಶ. ೪೭).

**ಚನ್ನಹ** = ಅಂದವಾದ ; ಚೆಲುವಾದ : ಚನ್ನಹ ಮಾಡವಂ ಬಿನ್ನಣ ದಿಂದಡರ್ದು (ಹಾಲಾಸ್ಯ. ೧-೦೬-೪೭). **ಚೆನ್ನಾಗಿ, ಚನ್ನಾಗಿ** = ಸೊಗಸಾಗಿ ; ಸಂಪೂರ್ಣವಾಗಿ ; ಹದವಾಗಿ : ಚೆನ್ನಾಗಿ ತಿಳಿದು ಪಾಪಾನುರಾಗವಂ ಪತ್ತುವಿಟ್ಟು (ಧರ್ಮಾಮೃ. ೨-೯೧) ; ಮುನ್ನ ಬೆಸಸಿದ ಸದಾಚಾರಗಳುಂ ಚೆನ್ನಾಗಳವಟ್ಟವು (ದೀಕ್ಷಾಬೋ. ೦೨೬-೮) ; ನಿನ್ನೊಡವುಟ್ಟಿದರಾದಿ ಯಾದವರೆಲ್ಲ ಚೆನ್ನಾಗಿರ್ದಪರೀಗ (ಅಂಜಚ. ೧೧-೦೫೫) ; ನಿಮ್ಮ ಊರು ಚೆನ್ನಾಗಿದೆ (ಹಾಮುಳ. ೫೦); ಜನ್ನಿಗೆಯು ಪಾಲಂ ತೆಗೆದು ಚ[ಹಾಕಾ. ಚೆ]ನ್ನಾಗಿ ಕಾಸಿದ ನಂತರದೊಳು (ಬಸಪು. ೦೪-೫) ; ಚ[ಹಾಕಾ. ಚೆ]ನ್ನಾಗಿ ನೀವನು ನಯದಿ ನೋಡಲು ರೋಗಿಯಾದವನುಂ ನಿರೋಗಿಯನಲ್ಕೆ ಬಾಳ್ವನರಾ (ಬಸಪು. ೪೭-೬೫) **ಚೆನ್ನಾಗು**=ಅಂದವಾಗು; ಸೊಗಸಾಗು : ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯೆನೆ ತೆಲುಗ (ಭರತ. ೦-೭) ; ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತೆವಿಡಿದುದಾಸ್ಥಾನ (ಕಂನವಿ. ೮-೧೧). [ ದೇ.೩ ತೆಲು. ಚೆನ್ನು ]

**ಚೆನ್ನುಗೆಡು** (ಕ್ರಿ). ಅಂದಗೆಡು ; ಹಾಳಾಗು: ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನುಗೆಟ್ಟರಯ್ಯಾ (ಪ್ರೋಕ್ಷಮಾ. ೨೪೪-೭೯೩).

[ ಚೆನ್ನು + ಕೆಡು₁ ]

**ಚೆನ್ನುಡಿ** (ನಾ). ಒಳ್ಳೆಯ ಮಾತು ; ಸೂಕ್ತಿ : ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರವೆಂಬ ತನ್ನ ಚೆನ್ನುಡಿಯಂತೆ ನಿರಹಂಕಾರದ ಮೂರ್ತಿಯಾಗಿ (ಶರಚ. ೪೧೪). [ ಚೆನ್ನ + ನುಡಿ₂ ]

**ಚೆನ್ನುಡೆ** (ನಾ). ಸೊಗಸಾದ ಉಡುಗೆ : ಚೆನ್ನುಡೆಯ ಹೊಂಬಣ್ಣದ ಬಿಚ್ಚು ಗೂದಲ . . . ಹೆಣ್ಣಾಮಗು (ಪುನರು. ೪೪೦). [ ಚೆನ್ನ + ಉಡೆ₂ ]

**ಚೆನ್ನೆ₁, ಚನ್ನೆ** (ನಾ). ಚೆಲುವೆ ; ಸುಂದರಿ : ಚೆನ್ನೆ ಪೊನ್ನೆಯರಲಂ ಕೊಯ್ದರ್ (ಆದಿಪು. ೧೧-೧೦೨) ; ವೆಜರಂ ತನ್ನಂತು ಬಗೆದು ಲೋಗರ ಚೆನ್ನೆಯರಂ ಬಯಸಲಾಗದೆಳುಳ್ಳ ನರಂ (ಸಮುಪ. ೫-೬೨) ; ಕಬ್ಬಿಳದ ಕನ್ನಡಿಯ ಚೆನ್ನೆಯರ್ವರ್ರಸು ಇಚ್ಚೆಗಾರ್ತಿ ನಡೆವಾಗಳ್ (ಕಬ್ಬಿಗಕಾ. ೩೨೪). **ಚನ್ನೆ** : ಚ[ಹಾಕಾ. ಚೆ]ನ್ನೆಯ ಕಣ್ಮಲರೊಳ್ ಕಾಡಿಗೆಯ ನೆಚ್ಚಿದರ್ ಮತ್ತೊರ್ವ್ವರ್ ರ್ (ಪಂಪರಾಮಾ. ೩-೮೫) ; ಪೊಗಳ್ಗುಂ ಭೂಮಂಡಳಂ ಸಂತತಂ ಪಿರಿದುಂ ಮಾಳಲದೇವಿಯುಂ ಬಹುಕಳಾಸಂಪನ್ನೆಯುಂ ಚನ್ನೆಯುನ್ (ಶಾಇ. IV, ೦-೩೮; 1206); ವರಪತಿವ್ರತೆ ಚನ್ನೆಯರ ಗರುವೆನಿಸಿ ನಡೆದಳು (ಶುಪ್ರಾಆ. ೦೭೩. ೩೩-೨೦). [ ಚೆನ್ನ + – ಎ₂ ]

**ಚೆನ್ನೆ₂** (ನಾ).=ಚೆನ್ನಂಗಿ : ಅರಳೆಯಿಂದೆಕ್ಕೆಯಿಂ ಕಕ್ಕೆಯಿಂ . . . ಬನ್ನಿಯಿಂ ಚೆನ್ನೆಯಿಂ (ನಂದಿಮಾ. ೦೩-೦೨) ; ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚವಮಾಚಂ ಪುಲಿಂಗಿನ್ (ರಾಜಶೇ. ೫-೩೬). [ < ಚೆನ್ನಂಗಿ ]

**ಚೆನ್ನೆ₃** (ನಾ). (ಕರಾ) ಎರಡು ಸಾಲುಗಳಲ್ಲಿ ಏಳೇಳು ಗುಣಿಗೆಗಳನ್ನುಳ್ಳ ಮಣೆಯ ಮೇಲೆ ಕವಡೆ ಅಥವಾ ಹುಣಿಸೆಬೀಜಗಳಿಂದ ಆಡುವ ಒಂದು ಬಗೆಯ ಆಟ ; ಅಟ್ಟುಗುಳಿಮಣೆ ಆಟ : ಚೆನ್ನೆಯಾಡದ ಶತಮಾನವೇ ಕಳೆದುಹೋದಂತಿತ್ತು ನನಗೆ (ಕಳಮು. ೧೨); ಗೊಂಬೆಮದುವೆಯನ್ನೊಮ್ಮೆ ಮಾಡಿ. ಚೆನ್ನೆಯಕ್ಕಡಿಯೊಮ್ಮೆ ಹೂಡಿ (ಗೀವಿಂ. ೭೧-೧೪).

[ ←ತುಳು. ಚೆನ್ನೆ ]

**ಚೆನ್ನಕಾಯಿ** (ನಾ). ಚೆನ್ನ ಆಟದಲ್ಲಿ ಬಳಸುವ ಬೀಜ,-ಕಾಯಿ : ಚೆನ್ನ ಕಾಯಿಗಳು ನನ್ನ ಕೈಯಿಂದ ಮೆಲ್ಲಮೆಲ್ಲನೆ ನಡುಗಿ ನಡುಗಿ ಚೆನ ಗುಳಿಗೆ ಬೀಳುತ್ತಿದ್ದುವು (ಹಳಮು. ೧೨). [ ಚೆನ್ನ$_3$ + ಕಾಯಿ$_4$ (<ಕಾಯ್$_4$) ]

**ಚೆನ್ನೆಗ್ಗಿಲು, ಚನ್ನೆಗ್ಗಿಲು** (ನಾ). ಕೆಂಪು ನೆಗ್ಗಿಲುಗಿಡ ; ಕೆನ್ನೆಗ್ಗಿಲು : "ಕಪಿಪಿಪ್ಪಲಿ–ಚೆನ್ನೆಗ್ಗಿಲು, ಗಜಗಿಪ್ಪಲಿ" (ಒಷಧಿ. ೨೬) ; ಬಿಳಿಕೊಮ್ಮೆ ಬೇರನೂ ಚೆನ್ನೆಗ್ಗಿಲ ಬೇರನೂ ನೀರಲ್ಲಿ ಅರೆದು ಮುಖಕ್ಕೆ ಲೇಪಿಸಲು ಸ್ತ್ರೀಯರುಗಳ ಮುಖದ ಕರಿಬಂಗು ಶಮನವಹುದು (ವೈದ್ಯಸಾ. II, ೦೪೬). **ಚನ್ನೆಗ್ಗಿಲು :** ಕಡವದ ಬೇರು, ಚನ್ನೆಗ್ಗಿಲು, ಹಿಟ್ಟುಳುಕನ ಬೇರು ಇವಂ ಹಸುವಿನ ಹಾಲೊಳರೆದು . . . ಕೊಳ್ಳಲು ಕಲ್ಲುಕಟ್ಟು ಮೂತ್ರಕೃಚ್ಛ್ರ ಸಹ ಮಾಣ್ಗುಂ (ಸಳವ್ಯ. ೩೭೯). [ ಚೆಂ$_1$ + ನೆಗ್ಗಿಲು (<ನೆಗ್ಗಿಲ್) ]

**ಚೆನ್ನೆನಪು** (ನಾ). ಸರಿಯಾದ ನೆನಪು : (+). [ ಚೆನ್ನ + ನೆನಪು ]

**ಚೆನ್ನಮಣೆ, ಚನ್ನಮಣೆ** (ನಾ). (ಕರಾ) ಚೆನ್ನೆ ಆಟವಾಡುವ ಮಣೆ ; ಅಟ್ಟುಗುಳಿಮಣೆ : ಆ ಚೆನ್ನಮಣೆ ಇಲ್ಲಿ ತಾ (ಹಳಮು. ೧೨). **ಚನ್ನಮಣೆ:** ಚನ್ನಮಣೆಗೆ ಹಾಲುವಾಣದ ಕಾಳು, ಪೆಟ್ಲಗೆ ಗಜ ಒದಗಿಸುತ್ತಿದ್ದವರು ರಾಗಜ್ಞ (ಪ್ರಕೃ. ೮೬). [ ಚೆನ್ನ$_3$ + ಮಣೆ ]

**ಚೆನ್ನೆಯ್ದಿಲ್, ಚನ್ನೆಯ್ದಿಲ್, ಚನ್ನೈದಿಲು, ಚೆನ್ನೈದಿಲ್, ಚೆನ್ನೈದಿಲೆ** (ನಾ). ಕೆಂಪು ನೈದಿಲೆ ; ರಕ್ತೋತ್ಪಲ : "ಸೌಗಂಧಿಕಂ, ಕಲ್ಹಾರಂ– ಈ ೨ ಚೆನ್ನೆಯ್ದಿಲ್"(ಹಲಾಯು.೧೧೨-೫೯); ಅಲರ್ದ ಚೆನ್ನೆಯ್ದಿಲ್ಗಳೊಳ್ಗಂಪಿ ನಿಂಪನಲಂಪಿಂ ತೆಗೆದೊಟ್ಟಿಕೊಂಡು . . . ತೀಡಿತ್ತೊಂದು ಮಂದಾನಿಲಂ (ಕಾದಂಕಾ. ೪೨೮). **ಚನ್ನೆಯ್ದಿಲ್ :** "ಆವಲೆಂದುಂ ಚೆಂಗಲವೆಯೆಂದುಂ ಚ[ಪಾಠಾಂ. ಚೆ]ನ್ನೆಯ್ದಿಲ್" (ಕಕಸಾ. ೯-೧೬೬). **ಚನ್ನೈದಿಲು :** ಒಂದು ಹೂ ಮಂದಾರವುತ್ಪಲ ಒಂದು ಚನ್ನೈದಿಲು [ಪಾಠಾಂ. ಚೆನ್ನೆಯ್ದಿಲು] ಬಕುಳ ವೊಂದೊಂದು ಅರವಿಂದ (ಲಸಪು. ೧೯-೬೫).**ಚೆನ್ನೈದಿಲ್:** ಚೆನ್ನೈದಿಲ ಕಂಪ ನೆಯ್ದಿಲಾರ್ಪುವೆ ಪೂಗಳ್ (ಆದಿಪು. ೦೧-೦೨೩); ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್ . . . ಪೂಜಿಸಿ(ಧರ್ಮಾಮೃ. ೫-೨೩೨) : ಚೆನ್ನೈದಿಲಲರ ಮಾಲೆ (ಕೀವಂ. ೯೮-೪೩). **ಚೆನ್ನೈದಿಲೆ :** "ಚೆನ್ನೈದಿಲೆಯು ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೫). 'ಕೆನ್ನೆಯ್ದಿಲೆ' ಪರಾ. [ ಚೆಂ$_1$ + ನೆಯ್ದಿಲ್ ]

**ಚೆನ್ನೆಯ್ದಿಲ್ಗೊಳ, ಚೆನ್ನೈದಿಲ್ಗೊಳ** (ನಾ). ಕೆಂಪುನೈದಿಲೆಗಳನ್ನುಳ್ಳ ಕೊಳ : ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ(ಆದಿಪು. ೦-೩೭). **ಚೆನ್ನೈದಿಲ್ಗೊಳ :** ಚೆನ್ನೈದಿಲ್ಗೊಳದಪೊಲಂಬಿಯಾ, ಸಂಜೆಗೆಂಪಿನಿಂ ಗಗನತಳಂ (ಕಾದಂಪೂ. ೫೦೦). [ ಚೆನ್ನೆಯ್ದಿಲ್ + ಕೊಳ$_2$ ]

**ಚೆನ್ನೇಸರ್, ಚೆನ್ನೇಸಱು** (ನಾ). ಕೆಂಪು ಬಣ್ಣದ ಸೂರ್ಯ : ಚೆನ್ನೇಸಱಿ ದಿಂಬಂ ಬಿಸುಪನುಳಿದು ಭೂವಿಯಾತಳಕಂಬರದಿಂದಿಳಿತರ್ಪಂದದಿಂ (ಜಯಲಾ. ೩-೬೭). **ಚೆನ್ನೇಸಱು :** ಚೆನ್ನೇಸಱು ಮೂಡಗಡೆ ಬೆಳೆವಂದದಿ ಸನ್ನುತ [ಶಿ] ವೆತ್ತು ಬೆಳೆದನು (ನೇಮಿಸಂ. ೫-೦೧೨). [ ಚೆಂ$_1$ + ನೇಸರ್ ]

**ಚೆನ್ನೇಸಱು** 'ಚೆನ್ನೇಸರ್' ನೋ.

**ಚೆನ್ನೈದಿಲ್** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲೆ** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲ್ಗೊಳ** 'ಚೆನ್ನೆಯ್ದಿಲ್ಗೊಳ' ನೋ.

**ಚೆನ್ನೊಪ್ಪು** (ಕ್ರಿ). ಚೆನ್ನಾಗಿ ಶೋಭಿಸು : ತಿರೆಯುಂ ಮಟಿಚಿಳಿಗಳಿಂ ಚೆನ್ನೊಪ್ಪಿ ಬಣಿಗಾಲವುಂ ಕಾಣದಾಯ್ತು (ಅದ್ಭುತ. ೭-೨೧).
[ ಚೆನ್ನ + ಒಪ್ಪು$_1$ ]

**ಚೆನ್ನೌಡಲ** (ನಾ). ಒಂದು ಬಗೆಯ ಔಡಲ; ಕೆಂಪು ಹರಳಿನ ಗಿಡ : "ಉತ್ತಾನ(ಪತ)ಪತ್ರ – ಹೇರೌಡಲ, ಚೆನ್ನೌಡಲ" (ಒಷಧಿ. ೦೭).
ಚೆಂ$_1$ + ಔಡಲ (<ಅವುಡಲ) ]

**ಚೆಪ್ಪಗೊಡಲಿ** 'ಚಪ್ಪಗೊಡಲಿ' ನೋ.

**ಚೆಪ್ಪರಿ** 'ಚಪ್ಪರಿ' ನೋ.

**ಚೆಪ್ಪಲಿ** 'ಚಪ್ಪಲಿ' ನೋ.

**ಚೆಪ್ಪಾಳೆ** 'ಚಪ್ಪಳೆ' ನೋ.

**ಚೆಪ್ಪು** 'ಚೇಪು$_3$' ನೋ.

**ಚೆಪ್ಪೆ** 'ಚಪ್ಪೆ$_1$' ನೋ.

**ಚೆಪ್ಪೆಜಾಡ್ಯ** 'ಚಪ್ಪೆಜಾಡ್ಯ' ನೋ.

**ಚೆಪ್ಪೆವಡೆ** (ಕ್ರಿ). ಚಪ್ಪಟೆಯಾಗು : ಪೊಡವಿಯು ಪೊತ್ತ ಫಣೀಂದ್ರನ ತಲೆ ಚೆಪ್ಪೆವಡೆದುದು (ನೇಮಿಸಂ. ೨೬-೦೦೫). [ ಚೆಪ್ಪೆ (<ಚಪ್ಪೆ$_1$) + ಪಡೆ$_1$ ]

**ಚೆಪ್ಪೋಡು** 'ಚಪ್ಪೋಡು' ನೋ.

**ಚೆಬ್ಬೆ** 'ಸಬ್ಬೆ' ನೋ.

**ಚೆಮ್ಮ** 'ಚಮ್ಮ' ನೋ.

**ಚೆಮ್ಮಣಿ** (ನಾ). ಕೆಂಪು ರತ್ನ ; ಮಾಣಿಕ್ಯ ; ಪದ್ಮರಾಗ : ಕಡಲೊಡೆಯನು ನಿಟ್ಟಿಪ ಚೆಮ್ಮಣಿಗಯ್ಕೆ ಪಿ[ಪಾಠಾಂ. ಚೆನ್ನಮಣಿಗನ್ನ, ಚನ್ನಮಣಿ ಗೈಪಿ]ಡಿಯೆನೆ . . . ಪಗಲಾಣ್ಮನೆಸದನು (ಕೊಲಸೊ. ೯-೭).
[ ಚೆಂ$_1$ + ಮಣಿ$_3$ ]

**ಚೆಮ್ಮಣಿಗೆ** 'ಚವಮ್ಮಾಳಿಗೆ' ನೋ.

**ಚೆಮ್ಮಣಿವಟ್ಟು, ಚಮ್ಮಣಿವಟ್ಟು** (ನಾ). ೧. ಬೈತಲೆಯ ಮಣಿ (?) : ಭಳಿರೆ ಜಡ ಪಾರಜಂಗುಳಿಯ ನಟ್ಟ ನಡುವಲೆಗಿಟ್ಟ ಚೆಮ್ಮಣಿವಟ್ಟೆ ಮುಟ್ಟದಿರೆನಲು ಬೆಜ್ಜರವಟ್ಟು ನಿಟ್ಟಿಸುತ್ತಿರಲು ತದ್ಗೃಹಗಾಂಗನೆಯು ಕೊಗುಳೆ (ಮುದೇಪು. ೬-೦೫). **ಚಮ್ಮಣಿವಟ್ಟು :** ೨. ಕುಂಕುಮದ ಬಟ್ಟು; ಕೆಂಪು ತಿಲಕ: ಕಮಳದಳನೇತ್ರೆ ಕಲಧೌತಗಾತ್ರೆ ರಮಣಿಯರ ನುಣ್ಣೊಸಲ್ಗ ಮರ್ದ ಚಮ್ಮಣಿವಟ್ಟೆ ಕುಮತಿಯೆಂದಿಟ್ಟಸದಿರೆನ್ನನೆಂದ (ಮುದೇಪು. ೮-೧೩).
[ ಚೆಮ್ಮಣಿ + ಬಟ್ಟು$_1$ (<ಬಟ್ಟ$_1$) ]

**ಚೆಮ್ಮಾವುಗೆ** 'ಚವಮ್ಮಾವುಗೆ' ನೋ.

**ಚೆಮ್ಮಾಳಿಗೆ** (ನಾ). ಚಂದವಾದ ಮಾಳಿಗೆ: ಹಣ್ಣಡಿಕ್ಕಾಸುವಂಚ ಕುಶಲದ ತಲೆಗಿಂಬು ಚೆಮ್ಮಾಳಿಗೊಳಗೆ ತೆನೆಯಾದ ರಾಜನವ ನಿಮ್ಮ ರಾಯರು ಬಿತ್ತಿ ಬೆಳೆದರು (ನಾಪದ. ೬೫). [ ಚೆಂ$_2$ + ಮಾಳಿಗೆ ]

**ಚೆಮ್ಮೂಗು** (ನಾ). (ಗಿಳಿಯ) ಕೆಂಪಾದ ಮೂಗು,-ಕೊಕ್ಕು : ದಾಳಿಂಬ ದೊಳ್ಪಣ್ಣನೊಡೆದು ಚೆಮ್ಮೂಗಿಟ್ಟು ಹೇಟಲಳವಡದ ಸಲ್ಲೀಲೆಯೊಳಗಳ ವಟ್ಟು (ಅದ್ಭುತ. ೩-೯೫). [ ಚೆಂ$_1$ + ಮೂಗು$_1$ ]

**ಚೆಮ್ಮೊಗ** (ನಾ). ಕೆಂಪಾದ ಮುಖ : ಏದುತ್ತೇದುತ್ತ ಸೇದನೀರಲ್ಲಿ ಮಿಂದ ಚೆಮ್ಮೊಗವನ್ನು ಚೇಲಾಂಚಲದಿಂದ ತೊಡೆದುಕೊಂಡು (ಮುಂತ್ರಕ. ೬೪-೦೫).
[ ಚೆಂ$_1$ + ಮೊಗ ]

**ಚೆಯ್$_1$** 'ಚಯ್$_2$' ನೋ.

**ಚೆಯ್$_2$** 'ಸಯ್$_2$' ನೋ..

**ಚೆಯಿಪಲ್ಲ** (ನಾ). ಒಂದು ಮನೆತನದ ಹೆಸರು (?) : ಸುಸೌಖ್ಯಸಂಗಮಂ ಕೋಮಳಗಾತ್ರ ತಮ್ಮ ಮಲ್ಲಿರಾಯನು ಸ್ವರ್ಗಮನೆಯ್ದೆ ಚೆಯಿಪಲ್ಲದಾಮ ದೇವಂ ಮದಶೋವಿಭ[ತಮ್ಮಂ]ಮನೆ ಸಂಪರಿಸಿದು(ಕಇ. I, ೩೮-೯; 1408).
[ ? ]

**ಚೆಯ್ಗುಡು, ಚೈಗುಡು** (ಕ್ರಿ). ಲಲ್ಲೆಯಾಡು ; ಮುದ್ದಾಡು ; ಪಡೆಯದ ಬಕರ್ಮೋ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೆಯ್ವ ನಣ್ಪಿಡಿದನುರಾಗದಿಂ ನಗಿಸುವಳ್ಕಟಿಜೊಳೊಪ್ಪುವ ನೆತ್ತಿಯೊಡ್ಡಿ ಚೆಯ್ಗು[ಪಾಠಾಂ. ಚೈಗು]ಡುವ . . . ಸೈಪು ಸರೋರುಹೇಕ್ಷಣೆ (ವೃಷಾವಿ. ೨-೩೩). **ಚೈಗುಡು :** ಚೈಗುಡುವ ಪೆಣ್ಮಣಿಯ ಸೈಪಿಂಗೆ ತಿಳಿವಡೆಣೆಯುಂಟೆ (ಕರೀಡೇ. ೨-೨೮).
[ ಚೆಯ್$_1$ (<ಚಯ್$_2$) + ಕುಡು$_1$ (<ಕೊಡು$_1$) ]

**ಚೆಯ್ಮುಂಡಾಡು, ಚೈಮುಂಡಾಡು** (ಕ್ರಿ). ಮುಂದ್ಲಾಡು ; ಲಲ್ಲೆಯಾಡು: (೬). **ಚೈಮುಂಡಾಡು :** ತೆಗೆದು ತಕ್ಕೈಸಿ ಬೋಳೈಸಿ ಚೈಮುಂಡಾಡಿ ಒಗುವಿಗೆಯ ಸುಖಸುಧಾನಂದದೊಳಗೋಲಾಡಿ (ರೀಶ್ವಚೋ. ೧೪೪-೬) ; ದಾ ಎನುತ ಚೈಮುಂಡಾಡಿ [ಪಾಠಾಂ. ಕೈಮುದ್ದಾಡಿ] ಮುಂದಲೆ ಎಡಿದು ಕುಣಿಕುಣಿದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ (ಪ್ರಭುಲೀ. ೩-೨೯) ; ಒಸೆದು ಚೈಮುಂಡಾಡುತಾಲಿಂಗಿಸಿದಳನುರಾಗ ಪ್ರಪಂಚದ ಕೊಸಚಿಕೆಯ ಕಳವಳದ ಪ್ರೇಮಜಿವೆಯಲಿ ಮಸ್ತಕವ (ಕೊರಟಾ. ೬-೧೨-೩೦). [ ಚೆಯ್$_1$ (<ಚಯ್$_2$) + ಮುಂಡಾಡು ]

**ಚೆಯ್ಯಾಕ** (ನಾ). ಒಂದು ಬಗೆಯ ತಾಳವಾದ್ಯ : ಚೆಯ್ಯಾಕಗಳು ಚೆಯ್.. ಚೆಯ್ ಎಂದು ಕುಟ್ಟುತ್ತಿರುವುವು (ಕನ್ನಹಾ. ೧೪). [ ? ]

**ಚೆಯ್ಯಾಟ** 'ಚಯ್ಯಾಟ' ನೋ.

**ಚೆಯ್ಯಾಡು** 'ಚಯ್ಯಾಡು' ನೋ.

**ಚೆರಗ** 'ಚರುಗ' ನೋ.

**ಚೆರಪು** 'ಸೆಱಪು' ನೋ.

**ಚೆರಿಗೆ** 'ಚರಿಗೆ$_1$' ನೋ.

**ಚೆರೆ** 'ಚರೆ' ನೋ.

**ಚೆರೆಮದ್ದು** (ನಾ). ಸಿಡಿಮದ್ದು ; ಚರೆ : ಅದರಲ್ಲಿ ತುಂಬಿಸುವುದು ಮಾತ್ರ ಚೆರೆಮದ್ದು (ಚಟ್ಟಿಶೀ. ೫೮). [ ಚೆರೆ (<ಚರೆ) + ಮದ್ದು$_1$ (<ಮರ್ದು) ]

**ಚೆಲ್, ಚೆಲು** (ಗು). ಚೆಲುವಾದ ; ಸುಂದರವಾದ. 'ಚೆಲ್ಗದಿರ್', 'ಚೆಲ್ವಡೆ' ಪರಾ. **ಚೆಲು :** ಹುಣ್ಣಿಮೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದಸೆಂದೀಕ್ಷಿಸಿತು ಪುರಜನವು (ಶಾಕ್ಯಧಾ. ೧೮-೯೬). 'ಚೆಲುಕಾಂತಿ' ಪರಾ. [ <ಚೆಲ್ವು$_1$ ]

**ಚೆಲಂಕು** 'ಚಲಂಕು' ನೋ.

**ಚೆಲಂಗು** 'ಚಲಂಕು' ನೋ.

**ಚೆಲದಿ** 'ಸೆಲಂದಿ' ನೋ.

**ಚೆಲಪಿಳೆರಾಯ** 'ಚೆಲ್ವಪಿಳ್ಳೆರಾಯ' ನೋ.

**ಚೆಲಬಾಗೆ** (ನಾ). ಒಂದು ಬಗೆಯ ಗಿಡ: ಚೆಲಬಾಗೆ. ಚೀಲ. ಎಲೆಸುಜ್ಜಲ ಬಾಗೆ (ವೃಕ್ಷಶಿ. ೪-೬೩). [ ? ]

**ಚೆಲವೆ** 'ಚಲುವೆ$_3$' ನೋ.

**ಚೆಲು** 'ಚೆಲ್' ನೋ.

**ಚೆಲುಕಾಂತಿ** (ನಾ). ಅಂದವಾದ ಕಾಂತಿ,-ಶೋಭೆ : ಕಣ್ಣದಿಂದ ಚೆಲು ಕಾಂತಿ ಚೆಲ್ಲುವ ಸೆರೆಗಣ್ಣು (ನಿಮ್ಮರ್ಥ. ೫). [ ಚೆಲು (<ಚೆಲ್) + ಕಾಂತಿ ]

**ಚೆಲುಗಬ್ಬ** (ನಾ). ಸುಂದರವಾದ ಕಾವ್ಯ : 'ಕಾಲೂರ ಚೆಲುವೆ' ಒಂದು ಚೆಲುಗಬ್ಬ (ಕಾಂಜೂರ. ೧೧ ಹರಳ). [ ಚೆಲು (<ಚೆಲ್) + ಕಬ್ಬ$_1$ ]

**ಚೆಲುಬಿಸಿಲು** (ನಾ). ಅಂದವಾದ ಬಿಸಿಲು : ಬಂಗಾರದ ಚೆಲುಬಿಸಿಲ ಕಿರೀಟದ ಶೃಂಗಾರದ ತಲೆ ಎತ್ತುವವನು (ಕಪಪು. ೫-೩).
[ ಚೆಲು (<ಚೆಲ್) + ಬಿಸಿಲು (<ಬಿಸಿಲ್) ]

**ಚೆಲುವ$_1$** 'ಚೆಲ್ವ' ನೋ.

**ಚೆಲುವ$_2$** (ನಾ). ಒಂದು ಬಗೆಯ ಪಕ್ಷಿ: ಹಲುಬುವ ಗೌಜು ಕರ್ಕಟ ಕಪ್ಪುರಸಿಟ್ಟ ಚೆಲುವ ಬೆಳವ ಕುಕ್ಕುಟಗ (ಮೋಹತ. ೬-೦೭). 'ಸಾಳುವ' ಪರಾ. [ ? ]

**ಚೆಲುವಳಿ, ಚಲುವಳಿ** (ಕ್ರಿ). ಅಂದಗೆಡು ; ವಿಕಾರವಾಗು : ಹೊರಟು ಪಾಂಡ್ಯನ ಚೆ [ಪಾಠಾಂ. ಚ]ಲುವಳಿದು ನೆಟ್ ಹೊರಟು ನೆಲೆಗೊಂಡಿದ್ದ ಬೆನ್ನಿನ ಹೊರಟು ಹೋಗಲು ವಿಧ್ಯೆಯಾಯಿತು (ಬಸಪು. ೫೦-೩೦). **ಚಲುವಳಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಚೆಲುವು (<ಚೆಲ್ವು$_1$) + ಅಳಿ$_1$ (<ಅೞ್$_1$) ]

**ಚೆಲುವಾನ್, ಚಲುವಾನ್** (ಕ್ರಿ). ಚೆಲುವನ್ನು ಹೊಂದು ; ಅಂದವನ್ನು ಪಡೆ: ಚೆಲುವಾಂತ ರಾಜಮಂದಿರಗಳೆಸೆದಿಹ ಕೇರಿಯಲಿ ಮಲ್ಲನೈತಂದು (ಮಂಕಾರಾ. ೫-೩-೩೫). **ಚಲುವಾನ್ :** ಮೋಹನದೆ ಇರ್ಪುದು ಕರ್ಣಾಟಕ ರಾಜ್ಯ ಚಲುವಾಂತುವೊಪ್ಪುವ ಸಕಲ ಸಂಭ್ರಮದೆ (ಕಂಸವಿ. ೨-೧೦).
[ ಚೆಲುವು (<ಚೆಲ್ವು$_1$) + ಆನ್$_1$ ]

**ಚೆಲುವಿಕೆ** 'ಚೆಲ್ವಿಕೆ' ನೋ.

**ಚೆಲುವು** 'ಚೆಲ್ವು$_1$' ನೋ.

**ಚೆಲುವುತನ** (ನಾ). ಅಂದಗಾರಿಕೆ : ಸೊಗಸುತನ ; ಚೆಲ್ವಿಕೆ : ಚೆಲುವುತನವಿರ್ದೊಡೇನು ಚೆಲೆವೆಣ್ಗೆ (ರೀವಣ. ೩೬-೨೫). 'ಚೆಲ್ವತನ' ಪರಾ. [ ಚೆಲುವು (<ಚೆಲ್ವು$_1$) + -ತನ ]

**ಚೆಲುವೆ$_1$** 'ಚೆಲ್ವೆ' ನೋ.

**ಚೆಲುವೆ$_2$** 'ಚಲುವೆ$_3$' ನೋ.

**ಚೆಲುವೆಣ್ಣು** (ನಾ). ಸುಂದರಿ ; ಚೆಲುವೆ : ಅಣ್ಣಾವಳಿಯದೆ ಬಣ್ಣಗುಂದದೆ ಹುಣ್ಣಿಮೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದಸೆಂದೀಕ್ಷಿಸಿತು ಪುರಜನವು (ಶಾಕ್ಯಧಾ. ೧೮-೯೬).
[ ಚೆಲು (<ಚೆಲ್) + ಪೆಣ್ಣು (<ಪೆಣ್) ]

**ಚೆಲ್ಗದಿರ್** (ನಾ). ಸುಂದರವಾದ ತೆನೆ : ಉಬ್ಬಿದೊಡಲೇಂ ಪೊಲಂ ಚೆಲ್ಗದಿರ್ ಪಾಲ್ ಪಡೆದು ತುಂಬಿ ಬೆಳೆದಿದೆ (ಕಾಂಜೂರ. ೪೧-೫೧).
[ ಚೆಲ್ + ಕದಿರ್$_1$ ]

**ಚೆಲ್ನಡೆ** (ನಾ). (?): ಸೋಮರ್ಗಡಿ ಪದಿರ್ಮಡಿ ಸೋಗೆಗೆ ಪುರ್ಪು ಕೊರ್ಪು ಚೆಲ್ನಡೆಗೆ ನಖಂ ಮುಖಂ ಪಕಿಗೆ ತೋಳ್ ಕರವಾಳ್ ಮದನಂಗೆ ಕಾಂತೆಯಾ (ಪುಷ್ಪಪು. ೯-೪೩). [P ಇದು 'ಬೆಳ್ನಡೆ' ಎಂಬುದರ ಅಪಲಿಖಿತವಿರಬಹುದು.] [ ಚೆಲ್ + ನಡೆ$_2$ ]

**ಚೆಲ್ಲ$_1$** 'ಚಲ್ಲ$_1$' ನೋ.

**ಚೆಲ್ಲ$_2$** 'ಸೆಳ್ಳ' ನೋ.

**ಚೆಲ್ಲಂಗೆಯ್** (ಕ್ರಿ). ಸರಸವಾಡು ; ವಿನೋದವಮಾಡು : ಕಳವಾಳಿ ಯೆಸೆದುವಲ್ಲಲ್ಲಿ ಚೆಲ್ಲಂಗೆಯ್ಯುತುಂ ಕಾಯ್ದು ವಲ್ಲವಿಯರಿಂ (ಪದ್ಮರಾ. ೮-೦೪). [ ಚೆಲ್ಲ$_1$ (<ಚಲ್ಲ$_1$) + ಕೆಯ್$_1$ ]

**ಚೆಲ್ಲಂದೋಱು** (ಕ್ರಿ). ವಿನೋದವನ್ನು ತೋರು ; ಸರಸವಾಡು : ಇಲ್ಲಿ ಪಲವುಂ ಚೆಲ್ಲಂದೋಱುವೆಂ ನಿಲ್ಲಿಂ (ಚಿಳವಿ. ೬-೦೩೩ ವ).
[ ಚೆಲ್ಲ$_1$ (<ಚಲ್ಲ$_1$) + ತೋಱು ]

**ಚೆಲ್ಲಂಬೀಱು** (ಕ್ರಿ). ವಿಲಾಸವನ್ನು ಬೀರು ; ಒಯ್ಯಾರ ಮಾಡು : ಚೆಲ್ಲಂಬೀಱುವವೊಲಿರ್ದುವವಯವವನಿತುಂ (ಧರ್ಮಾಪು. ೧೩-೦೦೨).
[ ಚೆಲ್ಲ$_1$ (<ಚಲ್ಲ$_1$) + ಬೀಱು ]

**ಚೆಲ್ಲಂಬೆರಸು** 'ಚಲ್ಲಂಬೆರಸು' ನೋ.

**ಚೆಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಕೇತನ** (ನಾ). ಒಂದು ಬಿರುದು: ವಿಜಯಲಕ್ಷ್ಮೀನಿವಾಸಿತ ಚೆಲ್ಲಕೇತಕ ಶ್ರೀಮತ್ ಬಂಕೆಯರಸ (ಕಇ. I, ೦೫-೫ ; ?). 'ಚಲ್ಲಧ್ವಜ' ಪರಾ.
[ ಚೆಲ್ಲ$_6$ + ಕೇತನ ]

**ಚೆಲ್ಲಗಣ್** 'ಚಲ್ಲಗಣ್' ನೋ.

**ಚೆಲ್ಲಗಣ್ಪೊಣರ್** (ನಾ). ವಿಲಾಸವನ್ನು ಬೀರುವ ಕಣ್ಣುಗಳ ಜೊತೆ : ತನ್ನಯ ಚೆಲ್ಲಗಣ್ಪೊಣರ ಲೀಲೆಯನೇಟಪ ಬಾಳೆಮಾನ್ಗಳಂ (ಪುಷ್ಪಪು. ೯-೯೯). [ ಚೆಲ್ಲಗಣ್ (<ಚಲ್ಲಗಣ್) + ಪೊಣರ್$_2$ ]

**ಚೆಲ್ಲಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಗಾರ್ತಿ** 'ಚಲ್ಲಗಾರ್ತಿ' ನೋ.

**ಚೆಲ್ಲಣ** 'ಚಲ್ಲಣ' ನೋ.

**ಚೆಲ್ಲನೆ** (ಅ). ಶೀಘ್ರವಾಗಿ ; ಕೂಡಲೆ : ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೆೞ್ಗಿಯೆಂಬಿನಿತ್ತಱ ಪುಡಿಯಂ ಚೆಲ್ಲನೆ ಮೂಗಿನೊಳೂಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ(ಖಮುರ. ೬-೫೩). [ಚೆಲ್$_0$ + – ಅನೆ$_1$]

**ಚೆಲ್ಲಪಯ್ಯ** (ನಾ). ಒಬ್ಬಾತನ ಹೆಸರು : ಇವರುಭಯ ಸನ್ಮಥದೊಳ್ ಬರದೊಂ ಚೆಲ್ಲಪಯ್ಯಂ (ಎಕ. XI, ಹೊಳಲ್ಕೆ. ೩೦–೧೩ ; 964). [ ಚೆಲ್ಲಪ$_0$ + ಅಯ್ಯ$_1$ ]

**ಚೆಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲವತ್ತ** 'ಚಲ್ಲವತ್ತ' ನೋ.

**ಚೆಲ್ಲವಾಡು** 'ಚಲ್ಲವಾಡು' ನೋ.

**ಚೆಲ್ಲವೆರು** (ಕ್ರಿ). ವಿಲಾಸವನ್ನು ಪಡೆ ; ಸರಸದಿಂದ ಕೂಡಿರು : ಚೆಲ್ಲವೆತ್ತೋರೆನೋಟಕ್ಕೆಡೆಯಾಗೇಕಾಂತಮಂ ಪೇಳ್ವವೊಲೆ ಜನುಗುತಿರ್ದಪ್ಪೆ ಕರ್ಣಾಂತದೊಳ್ (ಶಾಕುಂತ. ೧೧–೨೪). [ ಚೆಲ್ಲ$_1$ (<ಚಲ್ಲ$_1$) + ವೆರು (<ಪೆಱು$_1$) ]

**ಚೆಲ್ಲವೊತ್ತ** 'ಚಲ್ಲವತ್ತ' ನೋ.

**ಚೆಲ್ಲಾಟ$_1$** 'ಚಲ್ಲಾಟ$_1$' ನೋ.

**ಚೆಲ್ಲಾಟ$_2$** 'ಚಲ್ಲಾಟ$_2$' ನೋ.

**ಚೆಲ್ಲಾಡಿಸು** (ಕ್ರಿ). ಚದರಿಸು : ಇರಲಿ ನೋಡುವೆ, ಚೆಂಗಾಳ್ವರನ್ನು ಚೆಲ್ಲಾಡಿಸುತ್ತೇನೆ ಎಂದರು (ಚಂಗಾಳ್ವ. ೨೫). [ ಚೆಲ್ಲಾಡು$_1$ (<ಚಲ್ಲಾಡು$_1$) + – ಇಸು$_3$ ]

**ಚೆಲ್ಲಾಡು$_1$** 'ಚಲ್ಲಾಡು$_1$' ನೋ.

**ಚೆಲ್ಲಾಡು$_2$** 'ಚಲ್ಲವಾಡು' ನೋ.

**ಚೆಲ್ಲಾಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿ** 'ಚಲ್ಲಿ$_3$' ನೋ.

**ಚೆಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿಸು$_1$** 'ಚಲ್ಲಿಸು$_1$' ನೋ.

**ಚೆಲ್ಲಿಸು$_2$** 'ಚಲ್ಲಿಸು$_2$' ನೋ.

**ಚೆಲ್ಲು$_1$** 'ಚಲ್ಲು$_1$' ನೋ.

**ಚೆಲ್ಲು$_2$** 'ಚಲ್ಲ$_1$' ನೋ.

**ಚೆಲ್ಲುತನ** 'ಚಲ್ಲುತನ' ನೋ.

**ಚೆಲ್ಲುಮಲ್ಲಿ**(ನಾ). ಗಾಂಭೀರ್ಯವಿಲ್ಲದವಳು ; ಚೆಲ್ಲಗಾತಿ : ಈ ಹುಡುಗಿ ಶುದ್ಧ ಚೆಲ್ಲುಮಲ್ಲಿ (ಸಿಂಧೂರ. ೬೦). [ ಚೆಲ್ಲು$_2$ (<ಚಲ್ಲ$_1$) + ಮಲ್ಲಿ ]

**ಚೆಲ್ಲೆ, ಚೆಲ್ಲೆ$_1$** (ನಾ). ೧. ಉದ್ದ ; ನೀಳ ; ದೀರ್ಘತೆ : "ಚೆ[ಪಾಠಾಂ. ಚ]ಲ್ಲೆಯನೆ ನಿಡಿದು" (ಕಬ್ಬಿಗ. ಕಾಂ. ೫೦). (ಗು). ೨. ಉದ್ದವಾದ ; ದೀರ್ಘವಾದ. 'ಚೆಲ್ಲೆಗಣ್' ಪರಾ. ಚೆಲ್ಲೆ$_1$ : ೧. "ಚಲ್ಲೆಯನೆ ನಿಡಿದು" (ಕರ್ನಾಟಕ. ೫೦). 'ಚಲ್ಲೆಗಣ್' ಪರಾ.

**ಚೆಲ್ಲೆಗಣ್, ಚಲ್ಲೆಗಣ್** (ನಾ). ನೀಳವಾದ ಕಣ್ಣು ; ಅಗಲವಾದ ಕಣ್ಣು : ಬಂದರ್ ನಗೆಗಣ್ಗಳ ಚೆಲ್ಲೆಗಣ್ಗಳಲರ್ಗಣ್ಗಳ ಪಿಡುಗಣ್ಗಳ ಬೆಡಂಗಿಯರ್ (ಜಗವಿ. ೪–೦೨೪) ; ಮದದಿಯರ ಚೆಲ್ಲೆಗಣ್ಗಳವಿಂಚಿನಂತಿರಲು (ಸಂಬಿಕ. ೦೩–೬೬); ನಲ್ಲರೂಪಿಲ್ಲೆಂದಡೀಕ್ಷಿಸು ಚೆಲ್ಲೆಗಂಗಳಿಂ (ಬಸಪು. ೪೦–೧೪). ಚಲ್ಲೆಗಣ್ : ಚಲ್ಲೆಗಣ್ಣ ತುಱುಗೆವೆಯ ವಿಶಾಲಗಂಡಸ್ಥಳದ . . . ವಾರನಾರೀಕದಂಬಂ (ಧರ್ಮಾಮೃ. ೮–೧೯೩) ; ಆತನ ಚಲ್ಲೆಗಣ್ಗಳಾತನ ಬಗೆಗೊಳ್ವ ಪದೆರ್ದಡೆಗಳ್ (ಜಗವಿ. ೧೧–೦೩) ; ಶ್ರುತಿಯುವತಿ ಸೂಸುವ ಚಲ್ಲೆಗಂಗಳ ಮೊನೆಗೆ ಮಿಸಲುಗುಡದ ಮೈಸಿರಿಯ (ಕುಮಾರ. ೪–೪೦). [ ಚೆಲ್ಲೆ + ಕಣ್ ]

**ಚೆಲ್ಲೆಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲೆನೋಟ** 'ಚಲ್ಲೆನೋಟ' ನೋ.

**ಚೆಲ್ಲೆಯ** 'ಸೆಲ್ಲೆಹ' ನೋ.

**ಚೆಲ್ಲೆಹ** 'ಸೆಲ್ಲೆಹ' ನೋ.

**ಚೆಲ್ಲೆಹೋಗು** (ಕ್ರಿ.) ಚೆಲ್ಲಾಟಕ್ಕೆ ಹೋಗು (?) : ಚನ್ದ್ರವನದಲ್ಲಿ ಕೋಣಪ್ಪಜಟ್ಟಿಯೊಡನೆ ಚೆಲ್ಲೆಹೋಗಿಯಿದ್ದು ರಾತ್ರಿ ಕಾವಲಿದ್ದದ್ದಕ್ಕೆ (ಚಟ್ಟಿ. ೫೬–೦). [ <ಚೆಲ್ಲ$_1$ + ಹೋಗು$_1$ (<ಪೋಗು$_1$) ]

**ಚೆಲ್ವ, ಚಲುವ, ಚಲ್ವ, ಚೆಲುವ$_1$** (ನಾ). ೧. ಅಂದವಾದಂದು ; ಸುಂದರವಾದುದಂ; ಚೆನ್ನಾದುದಂ ; ಉತ್ತಮಂಪಾದುದು : ಮತ್ತಾ ಪುರಂ ಚೆಲ್ವನಾಪುರಮಿಂಬಾಪುರವೊಳ್ಳಿತಾಪುರಂ (ಅನಂಪು. ೧–೧೨೦). ೨. ಅಂದ; ಚೆಲುವು; ಸೌಂದರ್ಯ: ಮೊದಲ ಪದಂ ನ್ಯೂನಾಕ್ಷರಂ . . . ಇದಱಂ ಛಂದೋಭಂಗಂ ಪದನಱದದನಿಂತು ಸಮಱ ಪೇೞ್ದೊಡೆ ಚೆಲ್ವಂ (ಕವಿರಾ. ೦–೯೨). ೩. ಸುಂದರನಾದವನು ; ಸ್ಫುರದ್ರೂಪಿ : ಚೆಲ್ವರ್ಕಳಭಿಜನರ್ಕಳ್ಗುಣಿಗಳ್ (ಕವಿರಾ. ೨–೨೬) ; ಪುಷ್ಪಸಂಕುಳದೊಳ್ ನೀನೇ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ (ಆದಿಪು. ೧೧–೯೮) ; ಕರ ಚೆಲ್ವ[ಪಾಠಾಂ. ಚೆಲುವ] ಶ್ರೀಶೈಲಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ (ಮಹಾದೇ. ಬ. ೧೪೪–೩೨೮). ೪. ಒಬ್ಬಾತನ ಹೆಸರು : ಇಪ್ಪತ್ತಿತ್ತನಪ್ಪ ಪೊಲೊಕ್ಕುಪ್ರಿಯ ಚೆಲ್ವ . . . ಚೆಲ್ವ ಸಂಪನ್ನ (ಎಕ. IX, ೭೦–೪ ; ). 800 **ಚಲುವ** : ೧. ನಿಮ್ಮ ಕರುಣವೇ ಕರ ಚಲುವ ಸಕಳೇಶ್ವರಯ್ಯ (ಸಮಾಜ. ೫–೧೮) ; ಚ[ಪಾಠಾಂ. ಚೆ]ಲುವವಹ ಮೃದುತರ ವೆಸಿವ ಪರಿಮಳದ ಪೊಸಮಿಂಡಂಗಳಂ ಸವಿಗೊಳುತ (ಬಸಪು. ೧೮–೨೯). ೩. ಚಲುವ [ಪಾಠಾಂ. ಸುಜನ]ರುಬ್ಬಿಗೆ ರೂಪಿನ ಮದವಂ (ಸಮುಚ. ೪–೦೦೮) ; ಸಾವಿಲ್ಲದ ಕೇಡಿಲ್ಲದ ಚ[ಪಾಠಾಂ. ಚೆ]ಲುವಂಗಾನೊಲಿದೆನವ್ವಾ (ಮಹಾದೇ. ಬ. ೧೨೨–೨೮೩). (ಗು). ೫. ಅಂದವಾದ ; ಸೊಗಸಾದ ; ಉತ್ತಮವಾದ : ಬೇಱೊಂದು ನಾತೊಡೆ ಚಲುವ ಚಂದನದ ಪಡಿಯೆನಿಸದದೆ (ಬಸಪು. ೨೭–೪) ; ಚಲುವ ವಧು ಕೇಳೆಲೆ ದುರಾತ್ಮಕರಳಿವರೇಯೆನ್ನನು (ಕುಮಾವ್ಯಾ. ಓರಿ. ೨–೩೦). **ಚಲ್ವ** : ೧. ಚ[ಪಾಠಾಂ. ಚೆ]ಲ್ವವಹ ಮೃದುವಪ್ಪ ಗಂಧಂ ನಿಲ್ಲ . . . ಬಿಲ್ವಪತ್ರಿಯನೆಯ್ದೆ ಕೊಯ್ದು (ಬಸಪು. ೪೩–೨೬). ೩. ಚಲ್ವನೇ ಹರನಂ ಮೋಹಿಸಲಾರ್ಪ್ಪನೆಂತುವಧಿಕಂ ಶ್ರೀವಿಷ್ಣು ಭೂಪಾಳಕಂ (ಎಕ. V, ಬೇಲೂರು. ೫೮–೩೯; 1117). **ಚೆಲುವ$_1$** : ೧. ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ ಸಂಗದೊಳಗೆ ಶರಣರ ಸಂಗವೆ ಚೆಲುವ (ಅವಕಾ. ೦೧೯–೩೩೮). ೩. ನೀಲೋತ್ಪಲನಿಭಾಂಗದ ಮುದ್ದುವದನದ ಚೆ[ಪಾಠಾಂ. ಚ]ಲುವ ದೇವರ ದೇವನೆಸೆದನು ಬಾಲಕೇಳಿಯಲಿ (ಕೃಷ್ಣರಾ. ೦–೯–೮೦) ; ಚೆಲುವರರಸನರ್ಜುನಾದ್ರುಮ್ಮವೆರಸಿ ನಿರ್ಮೂಲಯೋಗಿಪಥಕ್ಕೆದಿದನು (ಭರತ. ೩–೭). ೫. ಪೂಸಿದ ವಿಭೂತಿ ಕಯ್ಯೊಳು ಪಾತ್ರೆಯೇಕ ಜಡೆ ಭಾಸುರದ ಪುಲಿದೊವಲು ಲಾಕುಳಂ ಚೆಲುವ ನಡೆ (ತಿರುರ. ದೇ. ೦೦–೧೧).

**ಚಲುವಾನೆಗಳ್ವ**=ಒಳ್ಳೆಯ ಆನೆಗಳನ್ನು ಹಿಡಿಯುವವನು; ಒಂದು ಬಿರುದು : ಕೋಡೂರ್ಪ್ಪುರರವರೇಶ್ವರಂ ಚಲುವಾನೆಗಳ್ವಂ ವೈರಿ [ಹೃತ್ಶೆಲ್ಲಂ] (ಕಇಕ. ೦೨೬–೩೭–೯ ; 1107). [ ದೇ.೩ ತಮಿ. ಚೆಲ್ವ ; ತೆಲು. ಚಲುವ, ಚೆಲ್ವ ]

**ಚೆಲ್ವಕಾಱ** (ನಾ). ಅಂದಗಾರ ; ಚೆಲುವ ; ಸುಂದರ : ಚೆಲ್ವಕಂಗಳ ಚೆಲ್ವ ಕಾಱ ನೋಡ ಬಂದೆ ನಿನ್ನ ಬಳಿಸಾರ ಬಂದೆ (ಶನಕ. ೧೨೫ ಪಲ್ಲವಿ). [ ಚೆಲ್ವ + – ಕಾಱ ]

**ಚೆಲ್ವಡೆ** (ಕ್ರಿ). ೧. = ಚೆಲ್ವುವಡೆ : ತೆಳ್ಪೊಡೆ ಕಡು ಚೆಲ್ವಡೆದು ಮು (ಅನಂಪು. ೬–೫). ೨. ಅಂದವನ್ನುಂಟು ಮಾಡು : ಕರಮ ಚೆಲ್ವಡೆದು ಸಿಂಗರಮಾಡಿ ವಾಮೇತರಹಸ್ತದೊಳು ಖಡ್ಗಮಿತ್ತ (ಶ್ರೀಪಾಂ. ೮–೩೮). [ ಚೆಲ್ + ಪಡೆ$_1$ ]

ಗರುಡನಂ ಗಜಱುವಂತೆ ದುಂದುಭಿಗಭೀರ :ಹೇಷಾರವಂಗಳೊಗೆಯೆ (ಪುಷ್ಪಪು. ೨-೯೦ ವ) ; ಸೂಜಿಗಲ್ಲಿದಿರ ಕಾಬ್ಬೊನ್ನಂತೆ ತಿರುಗಿದೆಡೆಗಾ ಜವದೊಳೊಡದಿರುಗಿ (ಚಿಬಪು. ३೦-३೦). ೨. ಶಕ್ತಿ; ಸಾಮರ್ಥ್ಯ; ಸತ್ತ್ವ: ಸವತಿ ನೂಕಿದಳೆನ್ನನಡವಿಗೆ ಜವವುಳಿವುತ್ಕೃತಂದೆನಟಿಸುತ ನಿನ್ನ ಸನ್ನಿಧಿಗೆ (ನಿಘಾಗ. ೪-೭-೪೩). 'ಜವಂಗಿಡಿಸು', 'ಜವಂಗೆಡಂ' ಪರಾ. ೩. ಹೆಚ್ಚಾದ ವೇಗದಿಂದ ಕೂಡಿದವನು: "ಜವನುಂ ತಾಂ ವಾಯುವೇಗಯುತನುಂ ಯಮನುಂ" (ವಸ್ತುಕೋ. ೦೦೮-೩).

ಜವಂಜವ (ದ್ವಿರುಕ್ತಿ) : ವಜ್ಜ ೪ ಸು ತ ರಿ ಲೊಂ ದು ಬಾನ್‌ಪಟ ದೊಳುರಿದುರಿದು . . . ಜವಂಜವದಿಂದೆ ಮರೆಯಾಯ್ತು ಮುಳುಗಿ (ಶ್ರೀರಾಮಾ. ೦೦೩-೮೮). [ ಸಂ. ]

ಜವಂಗಿಡಿಸು, ಜವಗಿಡಿಸು, ಜವಗೆಡಿಸು (ಕ್ರಿ). ಸತ್ತ್ವವನ್ನು ಕುಗ್ಗಿಸು ; ಶಕ್ತಿಗುಂದಿಸು ; ಸೋಲಿಸು : ತೆಱಪಱಿದೋಪನಪ್ಪೊಡೆ ಮೆಯ್ಮಱೆ ವಪ್ಪು ಸಡಿಲ್ಪುದಕ್ಕೆ ಮೆಯ್ಮಱಿವ ಪೊದಟ್ಟು ಬಾಯ್ಗಿಗೆ ಮೆಯ್ಮಱಿ ವಂತದು ಮೆಲ್ಲನಾಗೆ ಮೆಯ್ಮಱಿವ ಜವಂ ಜವಂಗಿಡಿಸೆ ಮೆಯ್ಮಱೆವಾಸನ ವಲ್ಲಟಕ್ಕೆ ಮೆಯ್ಮಱಿವೆಡೆ ಸಾವ ಪುಟ್ಟುವೆಡೆಯಾದುದವಳ್ಗೆ ರತಾತಿರೇಕ ದೊಳ್ (ಲೀಲಾವ. ೧೩-೩೦) ; ಜವನ ಬಲ್ಪಂ ಜವಂಗಿಡಿಸುವಂ (ಅದ್ಭುತ. ೯೯-೩). ಜವಗಿಡಿಸು : ಅಡಸಿದರು ಚತುರಂಗಬಲವನು ಕಡಿದು ಧರಹಿ ವಿರಾಟನನು ಜವಗಿಡಿಸಿ (ಕುಮಾರವ್ಯಾ. ೦೭-೩೩) ; ಅವರ ಲಾವಣ್ಯಾಬ್ಧಿ ವಿಟರ ಕಣ್ಮೀಂಗಳ ಜವಗಿಡಿಸಿದುವು ಗೋಪ್ಯದಲಿ (ಮೋಹತ. ३೪-३೭) ; ಜವನಂ ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಗಳದ ಕಾಲ್ದಾಳ್ಗಳ ಪಡೆಯ (ರಾಮಾಶ್ವ. ೯೪-೧೭). ಜವಗೆಡಿಸು: ತೇಜಿಯು ಜವಗೆಡಿಸಿ ತಲೆಯಾರ ತಡೆದರು ತುಡುಕಿದ್ದರು ನೊಗನ (ಕುಮಾರವ್ಯಾ. ೦೪-೦೪); ಜವಗೆಡಿಸಿ ಸೇನೆಯುಂ ಮುತ್ತಿದುವು ಕುತ್ತಿದುವು . . . ಸುಭಟರಂ ಬಾಣಂಗಳು (ಚಿಬಪು. ३೩-೨೪) ; ಕೃತವರ್ಮ ಸಾಂಬಾನುಸಾಲ್ವರಂ ಜವಗೆಡಿಸಿ (ಕೃಮಿಥಾ. ೦೪-೩).

[ ಜವ$_2$ + ಕಿಡಿಸು (< ಕೆಡಿಸು) ]

ಜವಂಗಿಡು 'ಜವಂಗೆಡು' ನೋ.

ಜವಂಗುಂದಿಸು (ಕ್ರಿ).=ಜವಂಗಿಡಿಸು: ಜವಂಗಿಡದ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೦೩-೮೮). [ ಜವ$_2$ + ಕುಂದಿಸು ]

ಜವಂಗುಂದು, ಜವಗುಂದು (ಕ್ರಿ). ಶಕ್ತಿಗುಂದು ; ಸತ್ತ್ವವಳಿ : ಅಮಿತ ಬಲದೆರಡು ಕಡೆಗಂ ನಿವಿರ್ವ ಜವಗುಂದಿ ಪಾಯ್ತು ಕಳವಳಿದು ತುರಂಗಮ ಸ ಮಿ ತಿ ಯೊ ಳ ಯೊ ಳ ಂ (ಕಾವ್ಯಸಾ. ४६६ ಚೂಡ್ರಾಳ) ; ಒಂದು ಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ವಂದು ಪೊಯ್ಗೆ ಜವಂಗುಂದಿ ಸಿಡಿಲ್ದು . . . ಬೀಟ್ ದಿಗ್ಗಜವಂ ಪೋಲ್ವ ಗಜಂಗಳ್ ಪಲವುಮಂ ಕೊಂದಂ ಮರುನ್ನಂದನಂ (ಕಂಪಥಾ. ೦೮-೦೦೨) . ಜವಗುಂದು: ಮಧ್ಯಾಹ್ನದುರಿ ಬಿಸಿಲೊಳಿದ ಬಿರಿಯೆ ಜವಗುಂದಿ ತಲೆ ಕುಸಿದು ನಡೆಗೆಟ್ಟು ಬಾಯಾಱಿ (ಹಚಿಶಾ. ೧೨-೭) ; ಎಲ್ಲಿಯದು ಹೆಬ್ಬಂದಿ ಮುನಿವಧೆಯಲ್ಲಿ ಕೂಡಿತೊ ಯೋಗವೆಂದೆದೆ ರಥಿಲ್ಲನಲು ಜವಗುಂದಿ ಲಕ್ಷ್ಮಣನೊಲದನವಯುವವ (ತೊರರಾ. ೩-೩-३३). [ ಜವ$_2$ + ಕುಂದು$_1$ ]

ಜವಂಗೆಡು, ಜವಂಗಿಡು, ಜವಗಿಡು, ಜವಗೆಡು (ಕ್ರಿ). ೧.= ಜವಂಗುಂದು: ಭಯಮನೆಡಗಲಿಸಿ ಬೆಳ್ಕೋಟವೋಡಿ ಜವಂಗೆಟ್ಟು ಕಾಲ್ ವೆಡಂಗಲಸೆ ಬೀಳುತ್ತುಮೇಳುತ್ತುಮಂತಾನುಮೆಯ್ದು (ಶಾಂತಿಪು. ೭-೯೦ ವ) ; ಇನ್ನೆತ್ತಂ ಪೋಪೆಂ ಕುದುರೆಯುಂ ಜವಂಗೆಟ್ಟುದು (ಪಂಚತಂ. ೦೦೭-೯) ; ಅಂತು ಪಲವು ಸೂಟ್ ಕಾದಿ ನಾಡೆಯುಂ ಬಟಲ್ದು ಕಡೆಯ ಸೂಟ್ಗೊಳೆ ಜವಂಗೆಟ್ಟು (ನೇಮಿಪು. ४-೦೦೭ ವ). ಜವಂಗಿಡು: ೧. ಜವಂಗಿಡದೆ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೦೩-೮೮) ; ಇನ್ನಿವಱ ಪೋರ್ದು ಜವಂಗಿಡದೆ ಪಪ್ಪುಕ ಮಾದಂದವುಮಂ ಕೇಳ್ (ಶಾಂತಿಪು. ೯-೪೯ ವ). ಜವಗಿಡು : ೧. ಜವಗಿಡದೆನ್ನೊಳು ಕಡಿದಾಡಬಪ್ಪುದೆಂದವಗಡಿಸಿದನಾರ್ಭಟದಿ (ಮೋಹತ. ३೯-३). ಜವಗೆಡು: ೧. ರವಿರಶ್ಮಿಗಾಱದೆ ಜವಗೆಡುವ ಹಿಮವನ್ನಗೇಂದ್ರದ ಘನತರವದೆನಿತು (ಬಸಪು. ೦೯-३೭). ೨. ವೇಗ ಕುಗ್ಗು,-ಮಂದವಾಗು; ತಡವಾಗು: ಪೊಳ್ತಂ ಸನ್ನೆಯುಂ ಜಾತಿಯುಂ ಜವಗೆಡ [ಪಾಠಾಂ. ಜವಂಗೆಡ] ದಱಿವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೩-೦೦೪ ವ).

[ ಜವ$_2$ + ಕೆಡು$_1$ ]

ಜವಂಜವ (ನಾ). ಹುಟ್ಟುಸಾವುಗಳ ಪರಂಪರೆ ; ಸಂಸಾರ : "ಭವ ಸಂಸೃತಿ ಸಂಸರಣಂ ಜವಂಜವಂ ಜನ್ಮವೆಂಬುದದು ಸಂಸಾರಂ" (ವಸ್ತುಕೋ. ೧೮-೧); ಜವನಂ ಜವಂಗುಂದಿಸಲ್ . . . ಪೆಱರ್ಗೆ ತೀರ್ಗುಮೇ ತೀರದಾ ಜವಂ ಜವಜವಾಗಿ ಮುಟ್ಟುಗಿಡುವನ್ನವಿನ್ನಾ, ಜವಂಜವ ವ್ಯಸನಪುಂಜವುಂ ಕಿಡಿಪುದಾದಿತೀರ್ಥೇಶ್ವರಾ (ಆದಿಪು. ೦೩-೮೮) ; ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಾಕ್ರಮಣದಿಂ ಬಂದು (ಶಾಂತಿಪು. ೭-೪೨ ವ). 'ಅಜವಂಜವ' ಪರಾ. [ ? ]

ಜವಂಬೆಱು (ಕ್ರಿ). ವೇಗಗೊಳ್ಳು ; ತ್ವರಿತವಾಗು : ಪೊದಳ್ದ ದೇಶಿ ವ್ಯೈವೆತ್ತಿರೆ ತೇನತೇನವೊದಗುತ್ತಿರೆ ತಾನರವಂ ಲಯಂ ಜವಂಬೆತ್ತಿರೆ ಮೂರ್ಛನಾಪ್ರಸಾರವೊಂದಿರೆ (ವ್ಯಕವಿ. ೧೦-೮). [ ಜವ$_2$ + ಪೆಱು$_1$ ]

ಜವಕ (ನಾ). ತಡ ; ನಿಧಾನ (?) : ಸಾಹಿತ್ಯ ಸಾರೋದಯಂಗೀ ದೂದವ ಜತ್ರಕವಂ ನುಡಿದು ಜವಕಮಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ (ಅನಂಪು. ೮-೨೯ ವ). [ < ಸಂ. ಯಾಪಕ ]

ಜವಕಣೆ (ನಾ). ಒಂದು ಬಗೆಯ ತಂತೀವಾದ್ಯ : (ಎಸಮ್ಮ. XVII, ३೦).

[ ? ]

ಜವಕಾರ (ನಾ). ಒಂದು ಬಗೆಯ ಉಪ್ಪು; ಯವಕ್ಷಾರ : "ಜವಕಾರ - ಯವಕ್ಷಾರ" (ತದ್ಭಕೋ. ೦೪). [ < ಸಂ. ಯವಕ್ಷಾರ ]

ಜವಗ (ಗು). ವೇಗವಾಗಿ ಓಡುವ : ಜವಗ ಚತುರೀಕಲಕ ಪ್ರವಿಮಳ ಶೃಂಗಾರಸಾರ ಜಾತ್ಯಶ್ವಂಗಳ್ (ಹಮ್ಮೀರ. ३-೦೦). [ ಸಂ. ]

ಜವಗತಿ (ನಾ). ವೇಗವಾದ ನಡಗೆ ; ಓಟ : ಮದದ್ಕೆಕ್ಕಲನ ಕುಕ್ಕುರಿಪ ಲುಳಿಯ ಜಂಘೆಯ ಜವಗತಿಯ . . . ನಾಯ್ತುಡುಕಿದವು ತಡೆದಖಿಳ ಮೃಗಕುಲವ (ತೊರರಾ. ३-३-೧೪). [ ಜವ$_2$ + ಗತಿ ]

ಜವಗಾತಿ (ನಾ). ಬಹಳ ವೇಗವುಳ್ಳವಳು; ವೇಗದಿಂದ ನಡೆಯುವವಳು: ಪವನವೇಗವ ಕೀಳ್ಪಡಿಸಿ ದೂವಾಳಿಪ ಜವಗಾತಿಯ ಬೆನ್ನೊಳಿರ್ದು ಕುವರ ಕಂಗೆಟ್ಟು ತಕ್ಕೆಗೊಂಡವಳ ನುಣ್ಗೊರಲೆಯ ಬಲ್ಪಿಡಿದ (ಮೋಹತ. ३೦-३೭).

[ ಜವ$_2$ + - ಕಾತಿ$_2$ ]

ಜವಗಿಡಿಸು 'ಜವಂಗಿಡಿಸು' ನೋ.

ಜವಗಿಡು 'ಜವಂಗೆಡು' ನೋ.

ಜವಗುಂದು 'ಜವಂಗುಂದು' ನೋ.

ಜವಗೆಡಿಸು 'ಜವಂಗಿಡಿಸು' ನೋ.

ಜವಗೆಡು 'ಜವಂಗೆಡು' ನೋ.

ಜವಚರ (ನಾ). ಓಡುತ್ತ ಹೋಗಿ ಸಮಾಚಾರವನ್ನು ತಿಳಿಸುವ ಸೇವಕ; ಹರಿಕಾರ : ಬಹರಾಗಮನವನರಿದು ಜವಚರರಿಂದ ಶ್ರೀವರ್ಮನಾಗ ಗಿರಿಪುರಕಪ್ಪವಂಗಲವ ರಚಿಯಿಸಿದ (ಜಿನಮು. ३-२२).

[ ಸಂ. ]

ಜವಜವ (ನಾ). ೧. ಶಿಥಿಲವಾದುದು ; ಶಕ್ತಿಗುಂದಿದುದು. ೨. ಮಂದ ವಾದುದು. 'ಜವಜವಾಗು' ಪರಾ. [ ? ]

ಜವಜವನೆ (ಅ). ದುರ್ಬಲವಾಗುವಂತೆ ; ಕುಗ್ಗುವಂತೆ.

**ಜವಜವಜವನೆ** (ದ್ವಿರುಕ್ತಿ) : ಜವನಟ್ಟಿ ಕೊಲ್ವ ಕೊಲೆಗಾ ಜವಂಜವ ಸ್ಥಿತಿಗೆ ಮೆಯ್ಮ ನೀರ್ತಗೆವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿಪು. ೨-೬೯). ಜವಜವನಾಗು = ಜವಜವಾಗು : ಬಟ್ಟೆಯ ಕಱುಗಲ್ಲ ಬಡಿಯ ಕೋಟಿಂದಂ ಕಾಲ್ ಕೆಟ್ಟುವು ಜವಜವನಾದುವು ನೆಟ್ಟನೆ ಮೆಯ್ (ಧರ್ಮಾಮೃ. ೬-೮೯).

[ ಜವಜವ + – ಅನ್$_{1}$ ]

**ಜವಜವಾಗು** (ಕ್ರಿ). ೧. ದುರ್ಬಲವಾಗು ; ಜರ್ಜರಿತವಾಗು : ಆ ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ ಜವಂಜವವ್ಯಸನವುಂಜವಮಂ ಕಿಡಿಪುದಾದಿ ತೀರ್ಥೇಶ್ವರಾ (ಆದಿಪು. ೧೩-೮೮) ; ಕುರವದಿಂ ಕೂಡೆ ನೆತ್ತರ್ ತೆರಳ್ದುಣ್ಮುವಿನಂ ಮೆಯ್ಯೆಯಲ್ಲವಂ ಜರ್ಜರಿಸಿ ಜವಜವಾಗಿರ್ದನಂ ಗುರ್ದಿ (ಸುಕುಮಾ. ೬-೩೫). ೨. ಆಲಸ್ಯವಾಗು ; ಮಾಂದ್ಯವಾಗು : ಬಳುವಳ ಬಳೆಯೆ ತೆಳುವಸಿಕ್ರೋಮಳಾಂಗವುಂ ಜವಜವಾಗೆ ಬೆಳೆದುದು ಗರ್ಭಂ (ಕೊಲ್ಹಾ. ೦೫-೫೦ ; 1186). [ ಜವಜವ + ಆಗು$_{1}$ ]

**ಜವಣ** 'ಜೀವಣ' ನೋ.

**ಜವಣ** 'ಜೀವಣ$_{1}$' ನೋ.

**ಜವಣಿಗೆ** (ನಾ). ಉದ್ದವಾದ ಬಿದಿರಿನ ಕೋಲು; ಜಲ್ಲೆ: ಜವಣಿಗೆಯನ್ನು ತೆಗೆದುಕೊಂಡು ಅನುಭವಶಾಲಿಗಳಾದ ಬೆಸ್ತರು ನಡುಗೆರೆಯನ್ನೆಲ್ಲ ಕೆದಕಿದರು (ದೂರಸ. ೨೬೮). [ <ಜವಣೆ ]

**ಜವಣೆ** 'ಜಳವೆ' ನೋ.

**ಜವತುರಂಗ** (ನಾ). ವೇಗವಾಗಿ ಓಡುವ ಕುದುರೆ : ಸಾಸಿರ ಗೋವುಗಳ ಜವತುರಂಗವ ಬ್ಯಾಸರಿಯದೆ ತಂಗಿಗಿತ್ತ (ಕರ್ನಾಕ. ೨೮೨).

[ ಜವ$_{2}$ + ತುರಂಗ$_{1}$ ]

**ಜವತೂಣ** (ನಾ). ಯಮನನ್ನು ಹಿಂಸಿಸಿದವನು; ಶಿವ : ಏಣಾಂಚಿತಧರ ಜವ ತೂಣಾ ಶರಣಜನ ಪ್ರಾಣಾ . . . ಜಿತಸೌರಭಬಾಣಾ ರಕ್ಷಿಸು (ಉದ್ಭದೇ .೯-೩) [ ಜವ$_{1}$ (<ಜಮ) + ತೂಣ$_{4}$ ]

**ಜವತ್ಸವಡಿ** (ನಾ). ಮಲ್ಲಯುದ್ಧದ ಒಂದು ವರಸೆ: ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ . . . ಎನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ತ್ರಿಷುವಿ. ೨೬-೦೮). [ ? ]

**ಜವದಂಡ** 'ಜಮುದಂಡ' ನೋ.

**ಜವದಂಡೆ** 'ಜಮುದಂಡೆ' ನೋ.

**ಜವದಾಡೆ** 'ಜಮುದಾಡೆ' ನೋ.

**ಜವನ** (ನಾ). ೧. ವೇಗ ; ರಭಸ. ೨. ವೇಗವುಳ್ಳುದು ; ವೇಗಶಾಲಿಯಾದಂದು ; ಚುರುಕಾದುದಂ: ಜವನಮೆನಿಸಿರ್ದ ನಿಜದಶ ಜವನಧಃಕರಿಸೆ ವಿಳಯಜಳಧರಕುಳಭೈರವರವಮನಿಳಿಸೆ (ಪಾರ್ಶ್ವಪು. ೯-೦೦೩). ೩. ವೇಗವಾಗಿ ಓಡಬಲ್ಲವನಂ; ಹರಿಕಾರ: "ಜಂಘಾಳಃ, ಜವನಃ, ವೇಗೀ– ಈ ೩ ಹರಿಕಾಱಂ" (ಹಲಾಯು. ೫೯-೨೦೩). ೪. ವೇಗವುಳ್ಳ ಕುದುರೆ.

[ ಸಂ. ]

**ಜವನಿಕೆ** (ನಾ). ೧. ತೆರೆ : ಕಾಂಡಪಟ : ಪರದೆ : "ಅಪಟೀ ಪ್ರತಿಸೀರಾ ಕಾಂಡಪಟೆ ತಿರಸ್ಕರಿಣಿಕಾಪಿ ಜವನಿಕೆಯಕ್ಕುಂ " (ವಸ್ತುಕೋ. ೯೯-೨೩) : "ಜವನಿಕೆ ಮುಸುಕುಂ" (ಭಾರವಿ. ೦೫) ; ಅನಂಗಜಂಗಮಲತೆವೊಲ್ ನಿಲ್ತು ಜವನಿಕೆಯ ಮಱೆಯೊಳ್ ಪೊಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಆದಿಪು. ೯-೨೦) ; ಹರನ ಶಾಂತಿಯ ಜವನಿಕೆಯನೋಸರಿಸುವಂತೆ (ಸೀದಿರ. ದೇ. ೬೬-೧೨); ಮೇಲೆ ಜವನಿಕೆಯಂ ಪಿಡಿದು ಸಮ್ಮೇಳನದೊಳಿರ್ಪ್ಪಂದು (ಬಸವು. ೦೨-೯೯). ೨. ಮರೆ ; ಮುಚ್ಚು ಮರೆ: ಜೀಯ ಜವನಿಕೆಯೇಕೆ ನೀವೆಂದೀಯ ಶೇಷಗುಣಂಗಳಾ ಕಾತ್ಯಾಯಿನೀಪತಿಗುಂಟು (ತೊರಹಾ. ೯-೦೨-೦೦). ೩. (ಅಲಂ) ಮಿಥ್ಯೆ ; ನಟನೆ ; ಮಾಯೆ : ಇದು ಕಣಾ ಜಗದೀಶ್ವರನ ಜನನದ ಜಗದ್ವ್ಯಾಪಾರ ಜವನಿಕೆಯುಂದಿಸಿ ತೋಱಿದನೆಂಬುದಿದು ಮಿಥ್ಯಾಪ್ರಪಂಚವಲೆ (ತೊರಹಾ. ೦-೮-೬೨). ೪. ಕತ್ತಲೆ (?) : ಜವನಿಕೆಯೋಡಲಿರ್ವ್ವಲದ ವೀರ ಭಟಾವಳಿ ನೋಡೆ ಖಳ್ಗದಿಂದವೆ ಕಲಿರತ್ನಪಾಳನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತು ತಜ್ಜವನಿಕೆಗೊಂಡ ಗಂಡಪೆರುಮಾಳೆ ಚಮೂಪತಿಗಿಂತು ಸಾದ್ರ್ಭದಾ ಜವನಿಕೆನಾರಣಾಂಕ ವಿದುರಾಉತರಾಯನುದಗ್ರ ದೋರ್ವ್ವಲಂ (ಎಕ. XI, ಚಿತ್ರದು. ೧೨-೯ ; 1286).

[ < ಪ್ರಾ. ಜವಣಿಆ./ಸಂ. ಯವನಿಕಾ ]

**ಜವನಿಕೆಗಳೆ** (ಕ್ರಿ). ಮುಸುಕನ್ನು ತೆಗೆ ; ತೆರೆಯನ್ನು ಸರಿಸು : ಆ ಜಯಸೇನೆ ರಂಗಂಬೊಕ್ಕನಂಗಶಸ್ತ್ರಾಧಿದೇವತೆಯ ಮುಖವಸ್ತ್ರಂಗಳೆದುವೆನಿಸಿ ಜವನಿಕೆಗಳೆದು . . . ನರ್ತಿಸೆ (ನೇಮಿಪು. ೩-೦೮೦ ವ).

[ ಜವನಿಕೆ + ಕಳೆ$_{1}$ ]

**ಜವನಿಕೆದೆಗೆ** (ಕ್ರಿ). = ಜವನಿಕೆಗಳೆ : ಮೊಗದ ಜವನಿಕೆದೆಗದು ನೆತ್ತಿಯ ಬಗಿದು (ಕುವ್ಯಾದ್ರೋ. ೩-೦೩) : ಸುರುಚಿರ ಸೂತ್ರಧಾರಕ ತತ್ತ್ವಕಾರವ ವಿರಚಿಸಿ ಜವನಿಕೆದೆಗೆಯೆ . . . ಸುಪ್ರೌಢೆಯರುರು ಪುಷ್ಪಗಳ ಸೂಸಿದರು (ಕಂಸವಿ. ೮-೬೦). [ ಜವನಿಕೆ + ತೆಗೆ$_{1}$ ]

**ಜವಪುರ** (ನಾ). ಯಮನ ಪಟ್ಟಣ : ಜವಪುರಕೆ ಬಿದ್ದವರಿಗಹುದೈ ಅವಧರಿಸಲಾ ಪಿಂಡಶ್ರಾದ್ಧವು (ಕುವ್ಯಾದ್ರೋ. ೩-೦೩).

[ ಜವ$_{1}$ (<ಜಮ) + ಪುರ$_{3}$ ]

**ಜವಪುರಿ** (ನಾ). = ಜವಪುರ : ವಿಂದಾನುವಿಂದರ ಜೀವ ಧುಮ್ಮಿಕ್ಕಿದುದು ಜವಪುರಿಗೆ [ಪಾಠಾಂ. ರಕೆ] (ಕುವ್ಯಾಕ. ೩-೦೦).

[ ಜವ$_{1}$ (<ಜಮ) + ಪುರಿ$_{6}$ ]

**ಜವಪ್ರಸರ** (ನಾ). ವೇಗದ ಹೆಚ್ಚಳ : ಪವಮಾನಾತ್ಮಜನಂ ಜವಪ್ರಸರದಿಂ . . . ಮಿಗುವ ಜಾತ್ಯಶ್ವಂಗಳ್ (ಪುಷ್ಪಪು. ೨-೫೮). [ ಜವ$_{2}$ + ಪ್ರಸರ ]

**ಜವರಕ್ಕೆ** (ನಾ). ಕವಚ ; ಚಿಲಖತ್ತು : " ಕವಚಕಿಂತೊಪ್ಪುವುದು ಜವರಕ್ಕೆ [ಪಾಠಾಂ. ಕಂಚಕಿಂತೊಪ್ಪುವುದು ಚವರವುಂ] ಅವುತೆಯೆಂಬೀ ಪೆಸರ್ " (ಅಭ್ಯಕ. ೯೩). [ P 'ಜೀವರಕ್ಕೆ' ಎಂಬುದರ ಅಪಲಿಖಿತ ]

**ಜವರಾಜ** (ನಾ). ಯಮರಾಯ : ಕೋಪಕ್ಕೆ ಯಮರಾಜ ಪಾಪಕ್ಕೆ ಜವರಾಜ ಕೋಪಪಾಪಗಳ ಅಳಿದಂಗೆ ಯಮನು ತಾ ಕೂಪನಾಗಿಹನು (ಸರ್ವಜ್ಞ ೯೬೮). [ ಜವ$_{1}$ (<ಜಮ) + ರಾಜ ]

**ಜವರಾಯ** (ನಾ). = ಜವರಾಜ : ಮಿಗೆ ದೀರ್ಘಾಯುಮಿರೆ ಮುನಿದು ಕಲಿ ಜವರಾಯಂ ಕೊಲಲಾಱಂ (ಹಮ್ಮಿರ. ೮-೨೮) ; ಸಾಯುವನ ಕಣ್ಣಿಗೆ ಸುಳಿದವನೇ ಜವರಾಯ (ಗಾದೆ). [ ಜವ$_{1}$ (<ಜಮ) + ರಾಯ ]

**ಜವರುಜಂಗಿ** 'ಜಬರುಜಂಗಿ' ನೋ.

**ಜವವಳಿ** (ಕ್ರಿ). ಕಸುವು ಕಡಮೆಯಾಗು ; ಶಕ್ತಿಗುಂದು ; ದುರ್ಬಲವಾಗು ; ಜವವಳಿಯಲಿಂತಾದೊಡಂ ಶಿವಶಿವಯೆನುತ ನಡೆಯಂ ನಡೆವೆ ನಾನವನಿಯೊಳಗೆ (ಬಸವು. ೯೯-೦೨) ; ಪವನಸುತನವತರಿಸೆ ಪಾರ್ಥಿವನಿವಹ ನಡುಗಿತು ದೈತ್ಯಗಣವುಱೆ ಜವವಳಿಯೆ (ಸಂಭಾಷ. ೦೫-೫೬).

[ ಜವ$_{2}$ + ಅಳಿ$_{1}$ (<ಅೞ$_{1}$) ]

**ಜವವೇಳು** (ಕ್ರಿ). ಒತ್ತರಿಸಿ ಬರು ; ತೀವ್ರವಾಗಿ ಬರು : ಬಲಿದ ತೂಕಡಿಕೆಗಳ ನಸು ಬೆದಱೆಲಹುಗಳ ಜವವೆದ್ದ ರೆಘೂಮ್ಮಿನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುವ್ಯಾದ್ರೋ. ೦೬-೯).

[ ಜವ$_{2}$ + ಏಳು$_{1}$ (<ಏೞ್$_{1}$) ]

**ಜವಪೊಳಲ್** (ನಾ). = ಜವಪುರ : ಈ ಸನ್ನಿಪಾತಂ ಮುಟ್ಟಿದ ಪುರುಷನು ಜವಪೊಳಲ್ಗೈದುವನೆಂದು ಪೇಳಿಹುದು (ಸಳಪ್ಪ. ೦೬೫).

[ ಜವ$_{1}$ (<ಜಮ) + ಪೊಳಲ್ (<ಪೊೞಲ್) ]

**ಜವಹೀನ** (ನಾ). ವೇಗವಿಲ್ಲದುದು; ವೇಗವಾಗಿ ಓಡಲಾರದುದು: × × × ಅಧಿಕವಲ್ಪಮುಲಮವ್ಪೊಡಂತು ನೊಸಲಸಿದಾಗುವುದುಮದು ಕಳೆಯಲಾಗದು ಜವಹೀನಂ ವಾಜಿ ನಾಲ್ಕು ಸಂವತ್ಸರಮಂ (ಅಶ್ವಶಾ. ೬-೫). [ ಜವ₂ + ಹೀನ ]

**ಜವಹುರ** (ನಾ).=ಜವಪುರ : ಎರಡು ಪದಂಗಳಪಭ್ರಂಶಕ್ಕೆ–ಅಚ್ಚಸ್ಪಟಿಕ–ಅಚ್ಚವಳಿಕು . . . ಯಮಪುರ–ಜವಹುರ (ಶಮದ. ೨೮೮ ಪ್ರಯೋ); ಆ ಜವಹುರಕೆಯಿಂಬುಮಾಡುವ ನಿಷ್ಠುರಪರಿಗ್ರಹವನ್ನು ನಂಬಿದೆನಾನಿಂದುವರ (ಶ್ರೀಪಾಲ. ೦೯-೯೨); ಜವಹುರದ ಜಕ್ಕಂದೊಟಲಿಯಂ ಗೆಲೆವರ್ಪ ಕಾಟೆಗ್ರೋಣಿವಳಗದಿಂದೆಯುಂ (ರಾಜಾಶ್ವ. ೩-೨೩). [ <ಸಂ. ಯಮಪುರ ]

**ಜವಹುರಿ** (ನಾ).=ಜವಪುರ : ಜವದಿಂದಂ ಜವಹುರಿಗೆ ಗಳಪುವವೊಲಾದವ ಕಾಳಿಕೆ ತೆಂಕದೆಸೆಯ ವೊಗವಾಗಿರ್ಪ್ಪಳು (ಜಾಸಶ. ೮೮). [ <ಸಂ. ಯಮಪುರೀ ]

**ಜವಳ₁** 'ಜವಂಳ' ನೋ.

**ಜವಳ₂** (ನಾ). ತೂಕದ ಒಂದು ಪ್ರಮಾಣ.–ಅಳತೆ: ಧಾರಾಪೂರ್ವಕವಾಗಿ ಕೊಟ್ಟಾಯಮೆಂತೆಂದೊಡೆ ಅಡಕೆ ಹೇಱಿಂಗೆ ಅಯ್ವತ್ತು ಜವಳಕ್ಕೆರ್ಪತ್ತು . . . ಹತ್ತಿ ಮಳವೆಗಯ್ವಲಂ ಭಂಡಿಯ ಕರುಸೆಯ ಮಳವೆಗೆರಡು ಬೀಸಗೆ ಜವಳಕ್ಕೆ ಪಲಂ ಪತ್ತು (ಎಇ. XIX, ೩೩-೨೬ ; 1186); ಸು(ಶು)ಕ್ರವಾರದ ಸಂತೆಯಂ ಮಾಡಿ ಬಿಟ್ಟಾಯಮೆಂತೆ[ಂ]ದೊಡೆ ಮಾಱಿದ ಅಡಕೆಯ [ಜವ] ಳಕ್ಕಡಕೆಯಿರ್ಪ್ಪತ್ತು . . . ಎತ್ತಿನ ಜವಳಮಂ ಬಿರಿಚಿದಲ್ಲಿಯಡಕೆಯ ಯ್ವತ್ತು (ಎಇ. XIX, ೪೮-೨೨, ; 1144); ಮೆಳಸಿನ ಹೇಱಿಂಗೆ ಮೆಳಸೊಮ್ಬ್ರ್ಗನಂ ಆ ಜವಳಕ್ಕೆ ಅರೆವಾನಂ (ಎಇ. XIII, ೨೦-೫೫ ; 1204); ಬಿಟ್ಟ ಜವಳಕ್ಕ ಹತ್ತಡಕೆ ಅರಸಿನ ಆಲ ಸರ್ಕ್ಕರೆ ಬಿಟ್ಟ ಜವಳಕ್ಕೆ ಅಯ್ವಲ ಹತ್ತಿಯ ಮಳವೆಗೆಯ್ವಲಂ (ಸೌಇಇ. XX, ೨೮೯-೯; 12ನೆಯ ಶತ). [ ? ]

**ಜವಳಂಗೊಳ್, ಜವಳಿಗೊಳ್** (ಕ್ರಿ). ಬೆರೆ ; ಕೂಡಿಕೊಳ್ಳು ; ಸೇರು : ಗರುಗ, ಹುರುಳಿ, ನೀಲಿ, ಈ ಮೂರನ್ನು ಜವಳಂಗೊಳ್ಳೆ ಕಳರಿ ಎಂಟು ಹಲ ನೀರಿಂದ ನೆನೆಯಲಿಡುವುದು (ವಿಕ್ರವಿ. ೩೦೮). **ಜವಳಿಗೊಳ್** : ಬಂದರಂದು ಬಲ್ಗೋಕೆವಡೆದು ಸಿಂಗರದಿಂಗಡಲ ತೆರೆಯ ಸಾಲ್ಜವಳಿಗೊಂಡ ವೊಲ್ (ಅದ್ಭುಪು. ೫-೨೬). [ ಜವಳ₁ (<ಜವಮಳ) + ಕೊಳ್₁ ]

**ಜವಳಂಬು** (ನಾ). ಬಾಣಗಳ ಜೊತೆ ; ಎರಡು ಬಾಣ : ಕಾದುವಲ್ಲದ ಕಲಹವಲ್ಲದೀಕ್ಷಣವೆಂದು ಜವಳಂಬನಿಟ್ಟು ಲವನು ಪಾದಕೊಂದನೆಗೈದು (ಜನಮು. ೩೯-೯೯). [ ಜವಳ₁ (<ಜಮಳ) + ಅಂಬು₂ ]

**ಜವಳಗೆಯ್** (ನಾ). ಒಂದು ಪ್ರದೇಶದ ಹೆಸರು (?) : ಮಣ್ಣಾಳಕಂ ಕಾಟಿಯಣಂ ಜವಳಗೆಯ ಮೂಡವೊಲದಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರ್ವವತ್ತು (ಎಇ. XXVII, ೬೩-೫೦; 1114). 'ಜವಳಿ₅' ಪರಾ. [ ಜವಳ? + ಕೆಯ್₄ ]

**ಜವಳಾಗು** (ಕ್ರಿ). ಜೊತೆಯಾಗು ; ಕೂಡು : ಧವಳ ಸರೋಜಾಕ್ಷ ತಾನಲ್ಲ ದನ್ಯರೊಳ್ ಜವಳಾಗದಂತೆ ವೈಸಿಕದ ಕವಳವ ಕುಡುವಂತೆ ರತ್ನಸಂಬಳಿಗೆ ದಾಳ್ದವರ್ದಳತಿಸಮ್ಮುದದಿ (ಕೋಚಕ. ೯-೬). 'ಜವಳಂಗೊಳ್' ಪರಾ. [ ಜವಳ₁ (<ಜಮಳ) + ಆಗು₁ ]

**ಜವಳಿ₁, ಜವುಳಿ₁, ಜೌಳಿ** (ನಾ). ಬಟ್ಟೆ ; ಅರಿವೆ ; ವಸ್ತ್ರ : "ಸೀರೆಗಂ ಜುಗದೊಳಂ ಜವಳಿ" (ಶಬ್ದಮಂ. ೦೦೩); ಮೆಟ್ಟುವೆಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಯಿಗೆಯ ಚಿತ್ರಾವಟಿಯ . . . ಬಣ್ಣದ ಕಣದ ಬಣ್ಣವಣ್ಣಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಅದಿಪು. ೯-೩೪ ವ); ತುಡುವ ತೊಡಿಗೆಗಳುಂ ಉಡಲ್ಕುಡುವ ಜವಳಿಗಳುಂ . . . ಪೂಜಿಸುವ ಕಣಶಂಗಳುಮೆಸೆಯ (ರಾಜಾಪ. ೬-೩೮ ವ); ಮಂಗಳಾರತಿ ಗಳೆತ್ತಿದರು ನಿವಾಳಿಯ ಮಂಗಳ ಜವಳಿ ಚಲ್ಲಿದವು (ಕುಶಾಸಾಂ. ೯೦-೮೦); ಎತ್ತುವಾರತಿ ನಿವಳಿಪ ಜವಳಿಯ ದಿಂಡು ಮುತ್ತುರತ್ನಗಳ ಕಾಣಿಕೆಯ ಇತ್ತು (ಪೋಚಕ. ೨೫-೯೩). **ಜವುಳಿ₁** : ಮಂಗಳ ಜವುಳಿ ರಘುಳಂಬ ಮನುಂಗುರವಾ ಕರ್ಣಶೋಭೆಯಂ ಪ್ರಿಯದಿಂ ವೈದ್ಯಂಗಿತ್ತು (ಅಶ್ವಶಾ. ೮-೩೦); ವಿಶೇಷವಾಗಿ ಜವುಳೀವ್ಯಾಪಾರವು ನಡಿಯುತ್ತದೆ (ಭೂಗೋಳ. ೯೪). **ಜೌಳಿ** : ಜನಿಸಿ ಜೌಳಿ ಮುಂನ್ನಾದರಿಂದ (ಎಕ. I, ೦೭-೨೪ ; 1820); ಅಡೋನಿ (ಆದಿವಾನಿ) ಎಂಬ ಊರು ಜೌಳೀವ್ಯಾಪಾರದಿಂದ ಪ್ರಸಿದ್ಧವಾದದ್ದು (ಭೂಗೋಳ. ೮೪).

**ಜವಳಿಯ ಮಳಿಗೆ**= ಬಟ್ಟೆಯಂ ಅಂಗಡಿ : ನಾನಾವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಕಂಸವಿ. ೬-೭೦). **ಜವಳಿಯರು** = ವಸ್ತ್ರದ ವ್ಯಾಪಾರಿಗಳಂ : ಹೊಳೆವ ಹೊಂಬಣ್ಣದ ಹೊದಕೆಯ ಮಾರುವ ಜವಳಿಯರಿರ್ದರೊಂದೆಸೆಯ (ಅಭ್ಯಲಿ. ೩-೭೯). [ ದೇ.; ತಮಿ. ಮಲ. ಚವಳಿ ; ತುಳು. ಜವಳಿ, ಜವುಳಿ, ಜೌಳಿ ; ತೆಲು. ಜವಳಿ ]

**ಜವಳಿ₂** 'ಜವುಳು' ನೋ.

**ಜವಳಿ₃** 'ಜಮಳಿ' ನೋ.

**ಜವಳಿ₄** 'ಚವಳಿ' ನೋ.

**ಜವಳಿ₅** (ನಾ). ಒಂದು ಬಗೆಯ ಭೂಮಿ (?) : ಹೊಂನ ಜವಳಿಯಾಗಿ ಹತ್ತು ಕೇರಿ ಕಟ್ಟಳೆಯ × × (ಸೌಇಇ. ೦೯೩೨, ಉಡುಪಿ. ೩೦೩-೦೨; 1397); ಅಣ್ಣಸಟಿಯ ಹಿರಿಯ ಗದ್ದೆಯಿಂದಂ ಪಡುವಲು ತೆಂಕಲು ಹೆಗ್ಗಡಿತಿಯ ಮೂಲದ ಜವಳಿಯ ಕಾಟಿ ಗಡಿಯಿಂದಂ ಬಡಗಲು (ಸೌಇಇ. IX-ii, ೪೨೯-೨೪ ; 1401); ಮೂಂನ್ನ ಹೊಂನ ಜವಳಿಯೆಂದು ಪಾಲಿಸಿದು (ಸೌಇಇ. ೦೯೩೦, ಉಡುಪಿ. ೫೮೫-೦೩ ; ?). [ ? ]

**ಜವಳಿಅಂಗಡಿ** 'ಜವಳಿಯಂಗಡಿ' ನೋ.

**ಜವಳಿಕ** (ನಾ). ಬಟ್ಟೆಯ ವ್ಯಾಪಾರಿ ; "ದೂಸಿಗ" (ಕಪುಸಿ. ೩. I, ೮೩). [ ಜವಳಿ₁ + – ಕ₂ ]

**ಜವಳಿಕಾಯಿ** 'ಚವಳಿಕಾಯಿ' ನೋ.

**ಜವಳಿಕಾರ** (ನಾ).=ಜವಳಿಕ: (೩). [ಜವಳಿ₁ + – ಕಾರ₁ (< – ಕಾಱ)]

**ಜವಳಿಗ** (ನಾ). = ಜವಳಿಕ : ಹೊಂಬಣ್ಣದ ಹೊದಕೆಯ ಮಾರುವ ಮಳಿಗೆ ಯೊಳ್ ಜವಳಿಗರಸೆಯ[ಪಾಠಾಂ. ಜವಳಿಯರಿರ್ದರೊಂದೆಸೆಯ] (ಅಭ್ಯಲಿ. ೩-೭೯). [ ಜವಳಿ₁ + – ಗ₂ ]

**ಜವಳಿಗಟ್ಟು** (ನಾ). ಎರಡನ್ನು ಕೂಡಿಸಿ ಕಟ್ಟಿದ ಕಟ್ಟು ; ಜೊತೆಕಟ್ಟು : ಪುರ್ವಂಬ ಜವಳಿಗಟ್ಟಿನ ಕರ್ವಿನ ವಿಲ್ಲಳ್ಗೆ ಭಿಗಿದ ಮಧುಕರಮಾಲಾ ಮೌರ್ವಿಯೆನೆ . . . ಮೆಱಿದುದವರ ತಳ್ತಿಮೆದುಟಗಳ್ (ಮುಕೋಚ. ೨-೨೬). [ ಜವಳಿ₃ (<ಜಮಳ) + ಕಟ್ಟು₂ ]

**ಜವಳಿಗದ** 'ಜವಳಿಗದವು' ನೋ.

**ಜವಳಿಗದವು, ಜವಳಿಗದ, ಜವಳಿಗದಹು** (ನಾ). ಎರಡಂ ಪಡಿ ; ಜೋಡಿ ಕದ : ಒಂದು ಶಿವಲಿಂಗವಂ ತಂದನೆರಡೆಮೆಯೆಂಬ ಜವಳಿಗದವಿನ ಬೀಯಗದ ಕೈಯ ತರ್ವಾಂತಿರೆ (ಸೋಮುಕ. ೦-೮೮). **ಜವಳಿಗದ**: ಜವನಿಕೆಯ ಸೆಱಗು ಸರಿವಂತೆ ಘಳಘಳಿಲೆಂದು ಜವಳಿಗದದೆಗೆಯೆ (ಸೋಪುಕ. ೫-೩೫); ಜವಳಿಗದವಂ ದ್ವಾರವಟ್ಟದ ಹವಣಗಾ ಬಾಗಿಲೊಳಮರ್ಚಿಸಿ (ಬಸಪು. ೦೬-೯); ಎನ್ನಧರ ಜವಳಿಗದ ಎನ್ನ ನಾಸಾಪುಟವು ನಿನ್ನಿಯಿಂ ಸೌರಭ್ಯ ರಸಘಟಿತವು (ಸುಶಾರ. ೦೭-೩). **ಜವಳಿಗದಹು** : ಅಲರ್ಗಣ್ಣೆವೆಯ ಜವಳಿ ಗದಹುಗಳನುಗಿದೆದ್ದು ನಿಂದು (ಸಾಂಗಪು. ೦೨-೯೨). 'ಅಮಳ್ಗದ' ಪರಾ. [ ಜವಳಿ₃ (<ಜವಮಳ) + ಕದವು₁ ]

**ಜವಳಿಗದಹು** 'ಜವಳಿಗದವು' ನೋ.

**ಜವಳಿಗವಾಟ** (ನಾ).=ಜವಳಿಗದವು: ಜವಳಿಗವಾಟದ ಬೀಯಗದ ಬಲು ಲಾಳವಿಂಡಿಗೆಯ ಹುಲಿಮುಖದ ಹರಿಯುಗವ ಸುತ್ತಲು ನಿಲಿಸಿ . . . ರಾಜಾಲಯದ ಬಲ್ಮೆಯ ನೋಡಿ ಬೆಱಗಾದ (ಪ್ರಭುಲಿ. ೩-೩೦).
[ಜವಳಿ$_3$ (<ಜಮಳ) + ಕವಾಟ]

**ಜವಳಿಗಹಳೆ, ಜವಳಿಗಾಳೆ** (ನಾ). ಜೋಡಂಕಹಳೆ: ಧವಳಶಂಖಂ ಕರೆವ ಜವಳಿಗಹಳೆಗಳಲ್ಲಿ . . . ನೆರೆದುದು ಚಾತುರಂಗಬಲ (ಇಹರ. ದೇ. ೩೮-೧). **ಜವಳಿಗಾಳೆ:** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ . . . ಕೋಲಾಹಳಂ ನೆಗಳೆ (ಗಿರಿಕ. ೬-೬೩ ವ).
[ಜವಳಿ$_3$ (<ಜಮಳ) + ಕಹಳೆ]

**ಜವಳಿಗಾಳೆ** 'ಜವಳಿಗಹಳೆ' ನೋ.

**ಜವಳಿಗುಳ** (ನಾ). ಎರಡು ಬಗೆಯ ತೆರಿಗೆ: ಧರ್ಮ್ಮಗುರುಗಳಲ್ಲಿ ಜವಳಿ[ಗು]ಳವಂ ಮನ್ನಣೆ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೀಱಿಯ[ಕೆ]ಯ್ಯುವುಂ . . . . ಪಡೆದು (ಸೌಇಇ. XI-1. ೩೪-೦೬; 1028).
[ಜವಳಿ$_3$ (<ಜಮಳ) + ಕುಳ$_2$]

**ಜವಳಿಗೊಡೆ** (ನಾ). ಜೋಡು ಕೊಡೆ,-ಛತ್ರಿ: ಲಲನೆಯ ಬಾಸೆಯ ಕರ್ಪೇಂ ಗೆಲೆವಂದುದೊ . . . ವೊಲೆಯೆಂಬ ಜವಳಿಗೊಡೆಗಳ್ಗಲರಂಬಂ ತಿರ್ದಿ ಪಿಡಿದ ನೀಲದ ಕಾವಂ (ಅನಂಪು. ೧೨-೭೪). 'ಅವಳ್ಗೊಡೆ' ಪರಾ.
[ಜವಳಿ$_3$ (<ಜಮಳ) + ಕೊಡೆ$_2$]

**ಜವಳಿಗೊಳ್** 'ಜವಳಂಗೊಳ್' ನೋ.

**ಜವಳಿಗೊಳಿಸು** (ಕ್ರಿ). ಜೊತೆಗೂಡಿಸಂ; ಸೇರಿಸಂ: ಸಜ್ಜೆಯ ಮನೆಯ ಸಿರಿಮಂಚದ ಹಂಸತೂಳತಳ್ಪದೊಳ್ಜವಳಿಗೊಳಿಸಿ ತಾನುಂ ಸಖೀಜನವುಮಂ ಜಾಣಂ ಜಾಱಿಲ್ (ಮಲುರ. ಹ. ೧೬೯-೨೪); ಅಗಲ್ದೋರ್ಪರ್ಗಿದು ಜವಳಿಗೊಳಿಪ ಮಂತ್ರದ ಸದನಂ (ಪೀರವಿ. ೦-೩೪). [ಜವಳಿಗೊಳ್ + -ಇಸು]

**ಜವಳಿಜಂತ್ರ** (ನಾ). ಜೋಡಿ ಯಂತ್ರ; ಅವಳಿಯಾಗಿರುವ ಯಂತ್ರ: ಸಾನಂದದಿಂದೆ ನೆರೆದವರ್ನಿರ್ಮಾಣಾಂಕನ. ಜವಳಿಜಂತ್ರವೆಂಬಿನವಿನಿಯರ್ (ಉದ್ಭಟ. ೮-೦೦೬); ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆಯೆನಲೀರ್ವರು ಮಱಿದರೊಡಲ (ಸಾಳ್ವಭಾ. ೦೪-೩೭). 'ಅವಳ್ಜಂತ್ರ' ಪರಾ. [ಜವಳಿ$_3$ (<ಜಮಳ) + ಜಂತ್ರ]

**ಜವಳಿಜೀವ** (ನಾ). ಒಂದೇ ಬಗೆಯಾದ ಎರಡು ಜೀವ; ಅವಳಿಜೀವ: ಹವಣಿಗೆ ನಿಲ್ಲುವದೇ ಕೊನರಿ ಕೊಬ್ಬಿದ ಸ್ನೇಹದಧವಳನು ತೊರೆಯೆಂದರೆನಗೆ ಜವಳಿಜೀವಗಳಂತೆ ಸುರತದೊಳಿರ್ದೆಲ್ಲದಿವತಿಯನೆಂತು ಪೊಲಿಸುವೆ (ಸೌಂದಕಾ. ೪-೬೩). [ಜವಳಿ$_3$ (<ಜಮಳ) + ಜೀವ]

**ಜವಳಿಝುಣಂಬ** (ನಾ). ಒಂದು ಬಗೆಯ ಜೋಡಿ ವಸ್ತ್ರ,-ಗೌರವದ ಉಡಂಗೊರೆ: ಜವಳಿಝುಣಂಬವಮಂ ಕೊಡೆಯನನ್ನಳವುಮಂ ಚಮರೀರುಹಂಗಳಂ (ಬೊಂಕಶಾ. ೦೯೩೪, ಹಿರೇಕೆರೂರ್. ೨೦-೨೪; 1121).
[ಜವಳಿ$_3$ (<ಜಮಳ) + ಝುಣಂಬ (<ಜಳಂಬ)]

**ಜವಳಿದಟ್ಟೆ** (ನಾ). ತಟ್ಟೆಗಳ ಜೊತೆ; ಎರಡು ತಬಕ: ಜವಳಿದಟ್ಟೆಗಳು ಗೋಮುಖವು ದೀವಸ್ತಂಭ ಚವುರಿಸತ್ತಿಗೆಗಳು (ಕೃಷ್ಣವಿ. ೨-೪೩).
[ಜವಳಿ$_3$ (<ಜಮಳ) + ತಟ್ಟೆ]

**ಜವಳಿದಲೆ** (ನಾ). ಜೋಡಿತಲೆ; ಎರಡುತಲೆ: ಬೇರೊಂದಱಿನೆರಡಾದ ಲತಿಕೆಯೋ ಮಾರಾನಲನ ಜವಳಿದಲೆಯೋ . . . ಎಂಬಂತೆ (ಜಯಶಾ. ೨-೯). 'ಜವಳಿದಲೆಗ', 'ಜವಳಿದಲೆವಕ್ಕಿ' ಪರಾ.
[ಜವಳಿ$_3$ (<ಜಮಳ)+ ತಲೆ$_1$]

**ಜವಳಿದಲೆಗ** (ನಾ).=ಜವಳಿದಲೆವಕ್ಕಿ: ಜವಳಿದಲೆಗನಳಲಿಸಿ ಬಂದು ತಾಂ ಗಜದ ಮೆಯ್ಮೆಳಲ ಸಾರ್ದು ಸೈತಳಿಸುವುವು (ನಂದಿಮಾ. ೨-೨೫).
[ಜವಳಿದಲೆ + -ಗ$_2$]

**ಜವಳಿದಲೆವಕ್ಕಿ** (ನಾ). ಎರಡು ತಲೆಯ ಹಕ್ಕಿ; ಗಂಡಭೇರುಂಡ: ಜವಳಿದಲೆವಕ್ಕಿಗಳಿನೇಳ್ಗೆವೆತ್ತುದು (ಶೀವಜ. ೩೬-೭). 'ಅವಳ್ದಲೆವಕ್ಕಿ' ಪರಾ. [ಜವಳಿದಲೆ + ಪಕ್ಕಿ$_1$]

**ಜವಳಿದುಂಬಿ** (ನಾ). ತುಂಬಿಗಳ ಜೋಡಿ: ಎಕ್ಕಲದುಂಬಿಯುಂ ಜವಳಿದುಂಬಿಯುಂ . . . ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೦೦-೦೦). [ಜವಳಿ$_3$ (<ಜಮಳ) + ತುಂಬಿ$_1$]

**ಜವಳಿದುಮ್ಮಾನ** (ನಾ). ಇಮ್ಮಡಿಯಾದ ದುಃಖ, - ಚಿಂತೆ: ದುರ್ಯೋಧನನ ಜನನಿಯು ಜವಳಿದುಮ್ಮಾನವನು ಬಣ್ಣಿಸಲಱಿಯೆ (ಕುವ್ಯಾಆ. ೭-೪೬). [ಜವಳಿ$_3$ (<ಜಮಳ) + ದುಮ್ಮಾನ]

**ಜವಳಿದೆಗೆ** (ಕ್ರಿ). ದ್ರವವಿಲ್ಲದಂತಾಗು; ಒಣಗಿಹೋಗು: ತವಕ ತಗ್ಗಿತು ಭಟರ ಕಾಳಗ ಜವಳಿ[ಪಾಠಾಂ. ದ್ರವವ]ದೆಗೆದುದು ಮನಕೆ ಭೀತಿಯ ಗವಸಣಿಗೆ ಘಾಡಿಸಿತು ಜಾಳಿಸಿತದಟರ ಪಸರಣ (ಕುವ್ಯಾದ್ರೋ. ೦೫-೩೮).
[ಜವಳಿ$_2$ (<ಜವುಳು) + ತೆಗೆ$_1$]

**ಜವಳಿನುಡಿ** (ನಾ.) ೧. ಎರಡು ಮಾತು; ಎರಡು ಶಬ್ದ: ಅವಿರತಂ ಕಲ್ಯಾಣದೊಳಗೆಣಿಸುವರೆ ಜಿನನುಂ ಬಸದಿಯೆಂಬೀ ಜವಳಿನುಡಿಯುಳ್ಳೆನಲು ಹುಡಿಹುಡಿಮಾಡಿ . . . ಅತಿಶೌರ್ಯ ಗುಣವರ್ಧನನೆನಿಸಿದ(ಬಸಪು. ೩೨-೪೪). ೨. ಇಬ್ಬಗೆಯಾದ ಮಾತು; ಮೊದಲು ಆಡಿದುದನ್ನು ಅಲ್ಲಗಳೆಯುವ ಎರಡನೆಯ ಮಾತು: ಜವಳಿನುಡಿಗಂಜುವೆನು ಘನ ಪಾಪವನು ಪೂಡಿದವಂಗೆ ಮಗಳನು ಜವದಿ ಕುಡುವಾ ಭಾಷೆ ತನ್ನದು (ರಾಮಾಸಂ. ೧-೪-೨೩).
[ಜವಳಿ$_3$ (<ಜಮಳ) + ನುಡಿ$_2$]

**ಜವಳಿಪಡಿ** 'ಜವಳಿವಡಿ' ನೋ.

**ಜವಳಿಮದ್ದಳೆ** 'ಜವಳಿವದ್ದಳೆ' ನೋ.

**ಜವಳಿಯಂಗಡಿ,ಜವಳಿಅಂಗಡಿ** (ನಾ).ಬಟ್ಟೆಯಂಗಡಿ: ಚಳಚಳಿಸುತಿರ್ದವಾ ಜವಳಿಯಂಗಡಿಗಳತಿ ಸಿಂಗರಿಸಿ ಸೊಬಗುವೆರಸಿ (ಗುರುಚಾ. ೦-೩೨). **ಜವಳಿಅಂಗಡಿ:** ಝುಗಝುಗಿಸುವ ಜವಳೀಅಂಗಡಿ ಸಾಲುಗಳಿಂದಲಹ (ಸೌಗಂಧಿ. ೫೦೯-೦೨). [ಜವಳಿ$_1$ + ಅಂಗಡಿ (<ಅಂಗಾಡಿ)]

**ಜವಳಿವಡಿ, ಜವಳಿಪಡಿ** (ನಾ).=ಜವಳಿಗದವು: ಎಳದಂಗಿನೆಳೆಯೊಳೆಯನವರ್ಕವಡೆಯ ಪೆಣೆದು ಸಂಪಗೆಯ ಮುಗುಳ ನಗೆ[ನೆ]ಗಳಂ ಕೆತ್ತಿಸಿ ಬಿತ್ತರುಬಡೆದ ಜವಳಿವಡಿಗಳೊಳಂ (ಚಂದ್ರಪು. ೭-೯೫ ವ). **ಜವಳಿಪಡಿ:** ಪಚ್ಚೆಯ ಲೋವೆ ಪವಳದ ಪೊಳೆವ ಜವಳಿಪಡಿಯಿಂದ . . . ಇಳೆಗತಿ ಚಲುವಾಗಿಹುವು (ಅಂಜಕ. ೩-೦೦೨). [ಜವಳಿ$_3$ (<ಜಮಳ) + ಪಡಿ$_2$]

**ಜವಳಿವದ್ದಳೆ, ಜವಳಿಮದ್ದಳೆ** (ನಾ). ಜೋಡಿಮದ್ದಳೆ; ಮದ್ದಳೆಗಳ ಜೊತೆ: ಯಮಳಮರ್ದಳ - ಜವಳಿವದ್ದಳೆ (ಕಮುದ. ೨೯೩ ಪ್ರಯೋ). **ಜವಳಿಮದ್ದಳೆ:** ಬೀಣೆಯ ಜವಳಿಮದ್ದಳೆಯ ಕಂಸಾಳೆಯ ಸಂಕಿನ ಕಾಳೆಯದ ಮೇಳದವರ್ (ರಾಮಾಶ್ವ. ೭೮-೦೯).
[ಜವಳಿ$_3$ (<ಜಮಳ) + ಮದ್ದಳೆ (<ಮದ್ದಲಿ)]

**ಜವಳಿವಸರ** (ನಾ).=ಜವಳಿಯಂಗಡಿ: ನಮ್ಮಂತೆ ಧರೆಯೊಳಗೆ ಪೆಣ್ಗಳೆಡುಗಳ ಲಜ್ಜೆಯಂ ಕಾಯ್ವ ಪಿರಿಯತನವೆಲ್ಲಿಯದೆನಿಪ್ಪ ಪೆರ್ಮೆಯೊಳಲ್ಲಿ ಜವಳಿವಸರಗಳೆಸೆದುವು (ಚಿಬಪು. ೦೦-೪೫). [ಜವಳಿ$_1$ + ಪಸರ]

**ಜವಳಿವಾತು** (ನಾ). = ಜವಳಿನುಡಿ ೨: ಬಿಡು ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ (ಕುವ್ಯಾಕ. ೨೨-೨೪).
[ಜವಳಿ$_3$ (<ಜಮಳ) + ಮಾತು$_1$]

**ಜವಳಿವಿಡಿ** (ಕ್ರಿ). ಜೊತೆಯಾಗಿ ಹಿಡಿ; ಜೋಡಿಸಿ ಹಿಡಿ: ಹರಿ ನಗುತೆರಡು ಕೈಯಲಿ ಜವಳಿವಿಡಿದಿಬ್ಬರನು ವರಕೈಲಾಸಪರ್ವತಕೆ ಅವದಿರನು ತಿರಿಹಿಟ್ಟಡೆ . . . ಬಿದ್ದರು (ನಿಶಾಗ. ೦೦-೫೬-೦೩).
[ಜವಳಿ$_3$ (<ಜಮಳ) + ಪಿಡಿ$_1$]

**ಜವಳಿಬೆಟ್ಟು** (ನಾ). ಎರಡು ಬೆಟ್ಟ; ಬೆಟ್ಟಗಳ ಜೋಡಿ: ಜವಳಿಬೆಟ್ಟುಗಳ ಮೇಲೆ ಮಳೆಗಱೆವ ಮೇಘಗಳಂತೆ ಕರ್ಣ ಧುರ್ಯೋಧನರ ಮೇಲೆ ಬಾಣದ ಮಳೆಯಂ ಕಱೆವುತ್ತುಂ (ಭಾರತಾ... ೮). [ಜವಳಿ₂ (<ಜವಳ) + ಬೆಟ್ಟು₂]

**ಜವಳಿವೆಱೆ** (ನಾ). ಚಂದ್ರರ ಜೋಡಿ: ಜವಳಿವೆಱೆ ಮನುಜರೂಪದಿ ನವನಿಯೊಳೊಗೆದಂತೆ ಕಾಂತಿ ಮೆಱೆವವುವಿಂದೀತಿವರ್ಗಳ ಚೆಲ್ವಿಕೆ (ಯಶೋಚ. ೧-೬೨): ಪೊಳೆವಮರ್ದಂ ಕಾಂಚನಯುಗ ಕಳಶಕ್ಕಂ ಜವಳಿ ವೆಱೆಯ ಕಱೆವಂತೆರಡುಂ ಬಿಳಿಯಾನೆ ಮಿಸಿಸೆ . . . ಲಕ್ಷ್ಮಿಯಂ ಸತಿ ಕಂಡಳ್ (ಅನಂಪು. ೪-೧೦೩). [ಜವಳಿ₂ (<ಜವಳ) + ವೆಱೆ]

**ಜವಳಿಸು** (ಕ್ರಿ). ಜೊತೆಗೂಡು; ಒಂದೆಡೆ ಸೇರು; ಕೂಡಿಕೊಳ್ಳು: ಎಳೆಮುತ್ತುಗಳ ಚಂದ್ರಿಕೆ ಜವಳಿಸಿದವೊಂದೊಂದನೌಕಿದವವಿರಳಿತ ಮಣಿ ಕಿರಣವೇಣೀಬಂಧಬಂಧುರದಿ (ಕುಮಾ.ಸ. ೧೩-೨೬); ಒಸೆದೆರಡುಕಡೆಯಾನೆ ಗಳು ಜವಳಿಸಿ ಬರಲು ಹರವೀಥಿಯಲಿ ಈಕ್ಷಿಸುವ ಜನಗಳ ಕಣ್ಣ ವೃಂದ ಪುಂಜವೆನಿಸಿದರು (ಶಾಶ್ವಧಾ. ೦೩-೧೦). [ಜವಳ್₁ (<ಜವಳ)+ -ಇಸು₂]

**ಜವಳು** 'ಜವುಳು' ನೋ.

**ಜವಳೆ** 'ಜಳವೆ' ನೋ.

**ಜವಳೆಪಾದ** (ನಾ). ಗಳುವಿನಂತಹ ಕಾಲು; ಉದ್ದವಾಗಿದ್ದು, ತೆಳು ವಾಗಿರುವ ಕಾಲು (?): ಆವ ಸ್ತ್ರೀಯು ವಿದ್ರೂಪವು ಬೆಳ್ಳಗಿಯುದ್ದವಳು ಜವಳೆಪಾದವುಳ್ಳವಳು . . . ಪುರುಷಂಗೆ ವೈರಮನೆಯ್ದುವರು (ಸಾಮುಲ. ೩೬-೦೩). [ಜವಳೆ (<ಜಳವೆ) + ಪಾದ]

**ಜವಾಜಿ** 'ಜವಾದಿ' ನೋ.

**ಜವಾಜಿಮಿಗ** 'ಜವಾದಿಮಿಗ' ನೋ.

**ಜವಾದಿ, ಜವಾಜಿ, ಜವ್ವಾಜಿ, ಜವ್ವಾದಿ** (ನಾ). ಒಂದು ಬಗೆಯ ಸುಗಂಧದ್ರವ್ಯ; ಪುನುಗು: "ಪುಣುಗು ಮಾರ್ಜಾಲಿಯೆನೆ ಜವಾದಿ ಯೆನಿಕ್ಕು" (ಮಂಗರಾ. ೯೯-೨೨); ಮೃಗಮದದ ಚಂದನದ ಕರ್ಪೂರದಗಿಲು ಸಾದು ಜವಾದಿಗಳ ಸಿಂಪುಗಳೆನೆಸೆದುದು ನೋಡೆವಾರವಧೂಟಿಕಾನಿಳಯ (ಬಸಪು. ೦೨-೧೦); ವರ ಜವಾದಿ [ಪಾಠಾಂ. ಜಿ]ಯ ಶೃಂಗಗಳ ಕರ್ಪೂರದ ತವಳಾಯಿಗಳ ಸಾದಿನ ಭರಣಿಗಳ ಮೃಗನಾಭಿಗಳೆನಡಕಿದರು ಬಂಡಿಯಲಿ (ಕುಮಾ.ಆ. ೦೨-೦೬). **ಜವಾಜಿ**: ಅಗಿಲು ಸಾದು ಜವಾಜಿ [ಪಾಠಾಂ. ದಿ] ಚಂದನ ಮೃಗಮದಂ ಘನಸಾರ ಗಂಧಾದಿಗಳನೆಲ್ಲಂ ತೆಗೆದು ಪನ್ನೀರಿಂದ ಮೇಳಯಿಸಿ (ಬಸಪು. ೪-೩೨); ಸಾಧು ಜವಾಜಿ ಕಸ್ತುರಿ ಗಂಧಲೇಪದಲಿ . . . ಆಹವಕ್ಕನುವಾದನಭಿಮನ್ಯು (ಕುಮಾ.ದ್ರೋ. ೪-೪೯). **ಜವ್ವಾಜಿ**: ಕಪ್ಪುರಕೆ ಕುರುಡು ಎಂಬುದು ಪೊಪ್ಪುವ ಜವ್ವಾಜಿಗೆ ವಂಕಿ ಚಿನ್ನ ಬೆಳ್ಳಿಗೆ ತೂಕಂ (ವ್ಯವಹಾ. ೩-೦೬ ಅನು. ೦); ಶ್ರೀಗಂಧವನ್ನು ಕರಿ ಅಗರುಗಂಧ ದಿಂದಲೂ, ಜವ್ವಾಜಿ, ಕಸ್ತೂರಿ ಮುಂತಾದವುಗಳನ್ನು ಸೇರಿಸಿ ಧರಿಸಿದಲ್ಲಿ ಹೆಚ್ಚು ವಾತಾದಿ ದೋಷಗಳು ಪರಿಹಾರವಾಗುವುವು (ಸಕವೈ.೯೦). **ಜವ್ವಾದಿ**: ಓರಣದ ಬೀದಿಯಲಿ ತಳಿತುವು ತೋರಣಂಗಳು ಹಲವು ಪರಿಯಲಿ ಸಾರಿಸಿತು ಮುಗಿಲುಗಳು ಸಾದು ಜವ್ವಾದಿ ಕೆಸಱಿನಲಿ (ಸಂಧಶ ೨೦-೯೯).

**ಜವಾದಿಕೋಲಾಹಲ, ಜವಾದಿಕೋಲಾಹಳ, ಜಾವಾದಿಕೋಲಾಹಳ** = ಜವಾಜಿಯ ಪರಿಮಳದಂತೆ ಪಸರಿಸಿದ ಕೀರ್ತಿಯುಳ್ಳವನು; ಒಂದು ಬಿರುದು: ನರಲೋಕದಲ್ಲಣಂ . . . ನೃಪತಿಕೋಲಾಹಲಃ; ಜವಾದಿ ಕೋಲಾಹಲಂ (ಶಬ್ದಾಮ. ೨೯೩ ವ್ಯಾಖ್ಯಾ); ಜವಾದಿಕೋಲಾಹಳ ಪೇಸಾಳಿ ಹನುಮಪ್ಪಾರಸಂಗ ಮೊವೆಗಾಬಿ ಗೇಣಾಂಕ (ಪ್ರ್ಯಅರಿ. ೦೯೯೬, ೩೫-೨; 1495); ಜವಾದಿಕೋಲಾಹಳ! ಫೇಣಾಂಕ ಚಕ್ರೇಶ್ವರ! (ಬಿರುಗಂ. ೨೮-೦೮); ಶ್ರೀವೀರ ಫೇಣಾಂಕಚಕ್ರೇಶ್ವರ ಜಾವಾದಿಕೋಲಾಹಳ ಪೇಸಾಳಿ ಹನುಮ ಗಜ ಬೇಂಟೆಗಾಬಿ ಬಿರುದುಂ (ಎಳ. XIV, ಎಳಂದೂ. ೦೫-೯; ?).

[←ಹಿಂ. ಮರಾ. ಜವಾದೀ; ಪಾರ. ಜಬಾದ್; ಅರ. ಜಬ್ಬಾದ್]

**ಜವಾದಿಮಿಗ, ಜವಾಜಿಮಿಗ** (ನಾ). ೧. ಪುನುಗಿನ ಬೆಕ್ಕು. ೨. ಕಸ್ತೂರಿ ಮೃಗ: (ಕ). ಜವಾಜಿಮಿಗ: (ಕ). [ಜವಾದಿ + ಮಿಗ]

**ಜವಾಧಿಕ** (ಗುಂ). ಹೆಚ್ಚಾದ ವೇಗವುಳ್ಳ; ಬಲು ಚುರುಕಾದ: (ಕ). [ಜವ₂ + ಅಧಿಕ]

**ಜವಾನ** (ನಾ). ಸೇವಕ; ಆಳು; ಚಪರಾಸಿ: ಉಡುಪಿನಿಂದಲೂ ರುಮಾಲಿನಿಂದಲೂ ಸರ್ಕಾರಿ ಜವಾನರೆಂದು ತಿಳಿಯಿತು (ಹೊಂಗಾಳ್ಯ. ೦೦೦); ತಮ್ಮ ಮನೆಯ ಜವಾನನಿಗೆ ಬಟ್ಟೆಗಳನ್ನು ಒಗೆದು ಇಸ್ತ್ರೀ ಮಾಡಿಕೊಡು ವಂತೆ ಹೇಳಿದನು (ಕಲಾಸಾ. ೩). [←ಪಾರ. ಹಿಂ. ಮರಾ. ಜವಾನ್]

**ಜವಾನಿ** (ನಾ). ಕೆಲಸದವಳು; ಒಕ್ಕಲಗಿತ್ತಿ: ಕುಸುಮಳ ಮನೆಯ ಜವಾನಿ ಬಂದಳು (ಬಿಳಾಂಗಿ. ೦೦೪). [ಜವಾನ + -ಇ₂]

**ಜವಾಬ್** 'ಜವಾಬು' ನೋ.

**ಜವಾಬ್‌ಸವಾಲ್, ಜಬಾಬುಸವಾಲು** (ನಾ). ಪ್ರಶ್ನೆ ಕೇಳುವುದು ಮತ್ತು ಉತ್ತರವನ್ನು ಪಡೆಯುವುದು; ಪ್ರಶ್ನೋತ್ತರ; ವಿಚಾರಣೆ: ಈ ಪ್ರಕಾರ ಜವಾಬ್‌ಸವಾಲ್ ಆಗುತ್ತಾ ಇರುವಾಗ್ಗೆ (ರಾಜೇಂದ್ರ. ೧೦). **ಜಬಾಬುಸವಾಲು**: ಜಬಾಬುಸವಾಲು ಮಾಡುವ ನಿಮಿತ್ತಾ ಹೈದರಲ್ಲಿ ಖಾನರು ದಿಂಡಿಗಲ್ಲಿಂದ ಪಟ್ಟಣಕ್ಕೆ ಬಂದರು (ಹೈದರ್. ೬೩).

[←ಪಾರ. ಹಿಂ. ಜವಾಬ್‌ಸವಾಲ್; ಮರಾ. ಜವಾಬ್‌ಸವಾಲ್, ಜಬಾಬ್‌ಸವಾಲ್]

**ಜವಾಬದಾರ** 'ಜವಾಬುದಾರ' ನೋ.

**ಜವಾಬದಾರಿ** 'ಜವಾಬುದಾರಿ' ನೋ.

**ಜವಾಬು, ಜಬಾಬು, ಜವಾಬ್** (ನಾ). ೧. ಉತ್ತರ; ಮರು ನುಡಿ; ಎದುರುನುಡಿ: ಆ ಮೈಸೂರವರು ಮಾಡಿದ್ದಕ್ಕೆ ಪ್ರತಿಜವಾಬು ಕೊಡುವ ಬಗ್ಗೆ . . . ನಾವು ಹಾಜರು ಇದ್ದೇವೆ (ರಾಜೇಂದ್ರ. ೩); ಮಾತಿಗೆ ಮಾತು ಜೋಡಿಸಿಕೊಂಡು ನನಗೆ ಜವಾಬು ಹೇಳುತ್ತಿದ್ದಳು (ಹೊಂಗಾಳ್ಯ. ೦೩೪). ೨. ಮೊಕದ್ದಮೆಯ ವಿಚಾರಣೆಯಲ್ಲಿ ಆರೋಪಿ ಅಥವಾ ಸಾಕ್ಷಿ ದಾರನು ನೀಡುವ ಹೇಳಿಕೆ: ರಾಮಪ್ಪನ ತಾಯಿ ಅಕ್ಕ ಇಬ್ಬರ ಜವಾಬನ್ನೂ ಈಗಲೇ ತೆಗದುಕೊಂಡು ಬಿಡೋಣ (ನಾಪೋಚೀ. ೨೦೨). ೩. ಹೊಣೆ; ಜವಾಬ್ದಾರಿ. 'ಜವಾಬುದಾರಿ' ಪರಾ. ೪. ಪತ್ರ; ಕಾಗದ: ಕಾಗದ ಬರೆದು ಹತ್ತುದಿನಗಳಾದರೂ ಜವಾಬು ಬರಲೇ ಇಲ್ಲ (ರೂಢಿ). **ಜಬಾಬು**: ೧. 'ಜಬಾಬುಸವಾಲು' ಪರಾ. **ಜವಾಬ್**: ೧. ಸಿಡಿಲಿಗೆ ಸಿಡಿಲಾಗಿ ಜವಾಬ್ ಕೊಡುವುದು ತಾನೆ (ಕೊನಕ್ಕ. ೧೮).

[←ಅರ. ಪಾರ. ಹಿಂ. ಜವಾಬ್; ಮರಾ. ಜವಾಬ್, ಜಬಾಬ್]

**ಜವಾಬುದಾರ, ಜವಾಬದಾರ, ಜವಾಬ್ದಾರ** (ನಾ). ಜವಾಬುದಾರಿ ಯುಳ್ಳವನು; ಹೊಣೆಗಾರ: ಮನೆಯ ಖರ್ಚಿಗೆಲ್ಲಾ ಅವನೇ ಜವಾಬು ದಾರನಾಗಿದ್ದಾನೆ (ರೂಢಿ). **ಜವಾಬದಾರ**: ಇವನು ಅರಸನಿಗೆ ಜವಾಬ ದಾರನಾಗಿದ್ದನು (ಹಿಂದುಇ. ೧೫೦); ಅವನ ತರುವಾಯ ವ್ಯವಹರಿಸಿದ ಯಾವತ್ತರು ಹುಂಡಿಯ ಹಣವನ್ನು ಕೊಡಲಿಕ್ಕೆ ಜವಾಬದಾರರಿರುತ್ತಾರೆ (ಮೋಹಿಪೀ. ೩೦). **ಜವಾಬ್ದಾರ**: ಇಂತಹ ಗ್ರಾಮಗಳಲ್ಲಿ ಮೊದಲನೆ ಚೀಫ್ ಕರಣೀಕರುಗಳೇ ಹಣ ವಸೂಲಿ ಲೆಖ್ಖಗಳಿಗೆ ಜವಾಬ್ದಾರರಾಗಿರುವರು (ಗ್ರಾಮಾಳ. ೩). [←ಪಾರ. ಹಿಂ. ಮರಾ. ಜವಾಬ್‌ದಾರ್]

**ಜವಾಬುದಾರಿ, ಜವಾಬದಾರಿ, ಜವಾಬ್ದಾರಿ** (ನಾ). ಹೊಣೆ; ಹೊಣೆ ಗಾರಿಕೆ: ನಿಮ್ಮ ಜವಾಬುದಾರಿಯನ್ನು ತಿಳಿದುಕೊಂಡು ವರ್ತಿಸಿರಿ (ರಂಗರೋ. ೩೮). **ಜವಾಬದಾರಿ**: ನಮ್ಮ ಕಣ್ಣ ಮುಂದ ಇದ್ದ ಮ್ಯಾಲೆ ಜವಾಬದಾರಿ ಹೊತಗೊಳ್ಳಬೇಕಾಗತದ (ವ್ಯಸಿ. ೩೦೨). **ಜವಾಬ್ದಾರಿ**: ಮನೆಯವರಿಗೆ ಅನ್ನ-ಪಾನಗಳನ್ನು ತಯಾರಿಸಿಕೊಡುವ ಜವಾಬ್ದಾರಿಯು ಮನೆಯ ಗೃಹಿಣಿಯದು (ಅಡುಸಾ. ೩೬). [←ಮರಾ. ಜವಾಬ್‌ದಾರೀ]

**ಜವಾಬ್ದಾರ** 'ಜವಾಬುದಾರ' ನೋ.

**ಜವಾಬ್ದಾರಿ** 'ಜವಾಬುದಾರಿ' ನೋ.

**ಜವಾಬ್ದಾರಿಕೆ** (ನಾ). = ಜವಾಬುದಾರಿ: ಒಂದೊಂದು ಸಲ ಆ ಜವಾಬ್ದಾರಿಕೆಯ ಬಿಕ್ಕಟ್ಟು ಬಂದಾಗ (ಮುಂಗಾಮು. ೧೦೦) ; ಜವಾಬ್ದಾರಿಕೆ ವ್ಯವೇಲೆ ಹಾಕಿಕೊಂಡುದುದರಿಂದ . . . ನಗಲೂ ನನಗೆ ಸಾಧ್ಯವಿಲ್ಲ (ನಡಿದಾ. II, ೯೩೦). [ ಜವಾಬ್ದಾರ (<ಜವಾಬುದಾರ) + – ಇಕೆ ]

**ಜವಾಯಿಲ, ಜವಾಯ್ಲ** (ಗು). ಚುರುಕಾದ ; ವೇಗವುಳ್ಳ; ವೇಗಶಾಲಿಯಾದ. 'ಜವಾಯಿಲತನ' ಪರಾ. ಜವಾಯ್ಲ : ಜೋಡಿಸಿದನಂದು ಜವಾಯ್ಲ ಪಾಯಿಲನ (ಕುಮಾ.ಆ. ೦೩-೦೯) : ಆಯುಧದ ಮಳೆಗಳಿಲಿ ನನೆದ ಜವಾಯ್ಲ ತೇಜಿಗಳ . . . ಕರೆಕರೆದು ಬವರಕೆ ಕಳುಹಿಸಿದನು (ಕುಮಾದ್ರೋ. ೦೫-೦೭). [ ಜವ₂ + – ಆಯಿಲ₂ ]

**ಜವಾಯಿಲತನ** (ನಾ). ಚುರುಕುತನ; ಚಟುವಟಿಕೆ; ವೇಗ : ಹಾಱದವು ಹಂಸಾವಳಿ ಜವಾಯಿಲತನದಿ ಜಗುಳ್ದವು ಜಕ್ಕವಕ್ಕಿಗಳು (ಕುಮಾ.ಗ. ೩-೨). [ ಜವಾಯಿಲ + – ತನ ]

**ಜವಾಯ್ಲ** 'ಜವಾಯಿಲ' ನೋ.

**ಜವಾರಿ₁** (ಗು). ಸ್ವದೇಶದಲ್ಲಿ ಹುಟ್ಟಿ ಬೆಳೆದ ; ದೇಶೀಯ ; ನಾಟಿ : ಸಣಬು ಜವಾರಿ ಚಲೋ ಕಾಗದಗಳನ್ನು ಮಾಡುವದಕ್ಕೂ ಗಟ್ಟಿನ ಹದಕ್ಕೂ ಬರುತ್ತದೆ (ಕೃಷಿಶ್ರ. ೫೭)'; ಇಲ್ಲಿಯೇ ಹುಟ್ಟಿ ಬೆಳೆದ ದನಗಳಿಗೆ ಜವಾರಿ ದನಗಳೆನ್ನುವರು (ಪಶುಪ. ೩೨); ಮುಂದೆ ಬಣ್ಣಬಣ್ಣದ ಸಮವೇಷದಲ್ಲಿದ್ದ ಬ್ಯಾಂಡಿನವರು, ಅವರ ಹಿಂದೆ ಜವಾರಿ ಬಜಂತ್ರಿಯವರು (ಅಣ್ಣ. ೨೬೦). [ ←ಮರಾ. ಜವಾರೀ, ಜವಾರ್ ]

**ಜವಾರಿ₂** 'ಜವಾಹಿರಿ' ನೋ.

**ಜವಾರಿಬಟ್ಟೆ** (ನಾ). ಸ್ವದೇಶಿ ಬಟ್ಟೆ : ಕೆಲವರು ಉರುಟಾಗಲೀ ತುಟ್ಟಿಯಾಗಲಿ ಜವಾರೀಬಟ್ಟೆಗಳನ್ನೇ ಉಪಯೋಗಿಸುತ್ತಾರೆ (ಮುಂಬಯಿ. ೪-೦೬೦). [ ಜವಾರಿ₁ + ಬಟ್ಟೆ₂ ]

**ಜವಾರಿಮಂದಿ** (ನಾ). ಗ್ರಾಮೀಣ ಜನ ; ಹಳ್ಳಿಯ ಜನ : ಜವಾರಿ ಮಂದಿಗೆ ಅವೆಲ್ಲ ತಿಳಿಯೋದುಲ್ಲ (ಧನಂಜ. ೩೨). [ಜವಾರಿ₁ + ಮಂದಿ₁]

**ಜವಾಹಿರ** 'ಜವಾಹಿರಿ' ನೋ.

**ಜವಾಹಿರಿ, ಜವಾರಿ₂, ಜವಾಹಿರ, ಜವಾಹಿರು, ಜವಾಹೀರ₁, ಜವಾಹೀರು** (ನಾ). ೧. ಬೆಲೆಯುಳ್ಳ ಮಣಿ; ರತ್ನ : ಇದ್ದ ನಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಿಸಿ (ಕೃದರ. ೧೧೪). ೨. ರತ್ನಖಚಿತವಾದ ಒಡವೆ,–ಆಭರಣ : ಮೈಸೂರಿನ ಅರಮನೆಯ ಕರ್ಮಚಾರಿಗಳು ಜವಾಹಿರಿಗಳೆಲ್ಲವನ್ನೂ ತಂದು ಹಜಾರದಲ್ಲೆಲ್ಲಾ ಅಣಿಮಾಡಿಟ್ಟಿದ್ದರು (ಶ್ರೀಣಾಹು. ೨೬೩) ; ಸಂಜೆ ಜವಾಹಿರಿ ಅಂಗಡಿಗೆ ಕರೆದುಕೊಂಡು ಹೋಗುತ್ತಾರೆ (ಹಂಗೂಲಿ. ೦೯೯). ಜವಾರಿ₂ : (ಕ). ಜವಾಹಿರ : ೧. ಮುತ್ತು ಹವಳ ಮುಂತಾದ ಜವಾಹಿರ ಮಾಲಿನ ಖರೀದಿಗೆ ಅಡತಿ ಹಾಂಗು ಧರ್ಮಾದಾಯ (ಮುಂಬಯಿ. ೩೨, ಪ್ರಸ್ತಾವನೆ). ಜವಾಹಿರು : ೨. ಖಜಾನೆ ಹಣ ಜವಾಹಿರು ದೇವಸ್ಥಾನದ ವಡವೆಗಳು ಮುಂತಾಗಿ ವಂದು ಹಿಸ್ಸೆ ಸರಿ ಮಾಡಿಕೊಟ್ಟು (ಕೃದರ. ೬೨): ಜವಾಹೀರ₁: ೧. ಜವಾಹೀರ (ರತ್ನ, ಹರಳು ಮುಂತಾದವುಗಳು) (ಮುಂಬಯಿ. ೦೫೮). ಜವಾಹೀರು: (ಕ). [←ಅರ. ಫಾರ. ಜವಾಹಿರ್, ಜೌಹರ್; ಹಿಂ. ಜವಾಹಿರ್, ಜವಾಹರ್ ; ಮರಾ. ಜವಾಹೀರ್, ಜವಾಹರ್]

**ಜವಾಹಿರಿಹಿಡಿ** (ನಾ). (ಕತ್ತಿಯ) ರತ್ನಖಚಿತವಾದ ಹಿಡಿ : ಇದರಲ್ಲಿದ್ದ ಜವಾಹಿರಿಹಿಡಿ ಮತ್ತು ಮಖಮಲ್ ಒರೆ ಸಹಿತವಾದ ಒಂದು ಕತ್ತಿಯು ಹೋಳ್ಕರ್ ಮಹಾರಾಜರದೆಂದು ತಿಳಿಯಬಂತು (ಮಹಾಪಂ. II, ೪೯). [ ಜವಾಹಿರಿ + ಹಿಡಿ₂ (<ಹಿಡಿ₁) ]

**ಜವಾಹಿರು** 'ಜವಾಹಿರಿ 'ನೋ.

**ಜವಾಹೀರ₁** 'ಜವ್ಹಾಹಿರಿ' ನೋ.

**ಜವಾಹೀರ₂** (ನಾ). ೧. ರತ್ನಪಡಿ ವ್ಯಾಪಾರಿ: ಪೇಟೆಯಲ್ಲಿ ಗಂಧೀಜನರ, ಜವಾಹೀರರ . . . ಅಂಗಡಿಗಳು ಅಂದವಾಗಿ ಕಾಣುತ್ತವೆ (ಮುಂಬಯಿ. ೪). ೨. ರತ್ನಪರೀಕ್ಷಕ. [ ←ಫಾರ. ಜೌಹರೀ; ಹಿಂ. ಜವಾಹರೀ, ಜೌಹರೀ ]

**ಜವಾಹೀರು** 'ಜವಾಹಿರಿ' ನೋ.

**ಜವಿ₁, ಜವೆ₁, ಜವೆ₁** (ನಾ). ಕೂದಲು; ಕೇಶ : ಓಡಿದ ಗೋವಳಿಗೋಲ ಮಾಲೆಗಳ ಹಾಹೆಯಿಂ ತೊಡರ ಬಾವುಲಿಯೊಳಗೆ ಜವಿ . . . ಎಸೆವುತಿರೆ ಬಂದು ಮಹವನೆಯ ಗೋವಳಂ (ಬಸವ. ೯-೧೪) ; ತುದಿಯು ಬಾಲದ ಜವಿಯ ಬಿಡದವರಧಟನಿಂದಟ್ಟಿದರು (ಜನಧಾ. ೫೭-೨೨) ; ಅವುಗಳ ಕತ್ತಿನ ಮೇಲಿನ ಕೂದಲು ಕತ್ತರಿಸಿರಲಿಲ್ಲ . . . ಆ ಜವಿಯು ಎಳೆಬಿಸಿಲಿನಲ್ಲಿ ಹೊಳೆಯುತ್ತಿತ್ತು (ಹಂಗಾಳ್ಳ. ೬೨೦). ಜವೆ₁ : (ಕ). ಜವೆ₁ : ಈ ಗಾದಿಯೊಳಗೆ ಕುದುರೆಯ ಜವೆಯನ್ನು ತುಂಬಿರುವ ಕಾರಣ (ಮುಂಬಯಿ. ೫-೨೦೬) ; ಜವೆ ಕತ್ತರಿಸುವವರು ನಿನಗೆ ನೆನಪಿದೆಯೆ (ಬಾದ್ಸ.ಕ. ೪೩ ಮಿಂಂದ). 'ಜವೆಗೊಂಕು' ಪರಾ. [ ದೇ.₁ ತೆಲು. ಜವ್ವಿ ]

**ಜವಿ₂** (ಗು). ೧. ಚುರುಕಾದ; ವೇಗಶಾಲಿಯಾದ; ವೇಗವಾಗಿ ಓಡುವ. (ನಾ). ೨. ವೇಗವುಳ್ಳವನು; ವೇಗವಾಗಿ ಓಡುವವನು: ಅವನಿವಲ್ಲಭನನ್ನ ಮಕ್ಕಳ ಯುವತಿಯರ್ಕಳ ಜಯಿಸಲಱಿಯದೆ ಜವಿಗಳವಗತಮಾನರೈದಿದರಾತ್ಮಗಳ (ಕತಿಪ. ೨-೪). ೩. ಕುದುರೆ. ೪. ಒಂಟೆ. [ ಸಂ. ಜವಿನ್ ]

**ಜವಿವಲೆ** (ನಾ). ಒಂದು ಬಗೆಯ ಬಲೆ : ಜೋಯಿಸರ ಜವಿವಲೆ[ಪಾಠಾಂ. ಜವನಿಕೆ]ಗೆ ಸಿಲುಕಿನೆನುತ್ತ ಹೊಱವಂಟ (ಕುಮಾ.ಆ. ೨೨-೪) ; ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ (ಸಾಳ್ವಭಾ. ೫-೦೯). [ ಜವಿ ? + ಬಲೆ₁ ]

**ಜವುಗಿಡು, ಜೌಗಿಡು**(ಕ್ರಿ). ತೇವವಾಗು; ಆರ್ದ್ರವಾಗು: ಇಟ್ಟ ಕತ್ತುರಿಯ ತಿಲಕದ ಕಪೋಲದೊಳು ಜವುಗಿಟ್ಟೊ[ಪಾಠಾಂ. ಚಲುವಿಟ್ಟ]ಸರುವಂ ತೊಟ್ಟಿಕೊಂಡ ಪುನಾಗಿನ ಕಂಪನೊಟ್ಟೈಸಿ (ಸೋಮಶ. ೩-೦೭). ಜೌಗಿಡು: " ಜೌಗಿಡು—ಜೌಳಿಸು, ದ್ರವಿಸು, ಜಿನುಗು, ಜವುಳಿಸು " (ಪ್ರಕಣ್ಣ). [ ಜವುಗು + ಇಡು₁ ]

**ಜವುಗು, ಜೋಗು₂, ಜೌಗು** (ನಾ). ೧. ತೇವ ; ಒದ್ದೆ ; ಜಿನುಗು : ಉಚ್ಚೆಯ ಜವುಗಿನ ಬಚ್ಚಲ ತಂಪಿನಲ್ಲಿ ನಿಚ್ಚಕ್ಕೆ ನಿಚ್ಚ ಹೊರಳುವ ಹೀಹಂದಿಯಂತೆ (ಅವಹಂ. ೬೦-೩೦೭); ನೆಲನೆಲ್ಲ ಜವುಗಾಯ್ತು ಮೊದಲು ಮತ್ತಾಱಿ ತೇದು ತೊಳೆದುಹೋದುವು ಬಡ ಬೆಟ್ಟ (ಧರಣ. ೩೪-೬೦) ; ಕೆಳಗಡೆಗೆ ಜವುಗಾಗಿ ನೀರು ಜಿನುಗಿ (ಕಲ್ಯಾ.ಹ. ೭೬). ೨. ಯಾವಾಗಲೂ ನೀರು ಒಸರುವ ಪ್ರದೇಶ; ಜಿನುಗುವ ಭೂಮಿ;ಸದಾ ತೇವವಾಗಿರುವ ನೆಲ: (ಕ). ಜೋಗು₂ : ೧. ಉರ್ವೀತಳಮದು ನೆಱೆ ಜೋಗಿರ್ದು ಮೆಟ್ಟಲ್ಕೆ ಬಲ್ಲೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೆನೆದು (ಕುಸುಮಾ. ೬-೩೫). ಜೌಗು : ೧. ಸರ್ವಾಯುಧ ಪ್ರೋಚ್ಚಳಿತ ಪ್ರದ್ಯೋತದಿಂ ಭೂತಳಮದು ನೆಱೆ ಜೌಗಾಗೆ (ಕುಸುಮಾ. ೦೫-೦೦೩) ; ಸುರಿವ ಕರುಳೊಳಿಯಿಂ ಮಡಿದ ತುರಗಾಳಿಯಿಂ ಬಿಡುವಿಪದುಳ ಜೌಗಿನಿಂದೆ . . . ರಣಭೂಮಿ ಕಣ್ಗೆಸೆದುದು (ಜಲಪು. ೪೪-೪೦) ; ಅಲ್ಲಿ ಜೌಗು ಹೆಚ್ಚು, ಪಾಚಿ ಕಟ್ಟಿದೆ, ಎಚ್ಚರಿಕೆ ! (ಶಾಂತಲಾ. ೨೯೭). 'ಜೌಗೇಟ್' ಪರಾ. [ದೇ.₁ ತೆಲು. ಜವುಕು, ಜೌಕು]

**ಜವುಗೇಳ್** 'ಜವುಗೇಟ್' ನೋ.

**ಜವುಗೇಟ್, ಜವುಗೇಳ್, ಜೌಗೇಳು, ಜೌಗೇಟ್** (ಕ್ರಿ). ೧. ಒಸರು; ಜಿನುಗು ; ತೇವವಾಗು. ೨. ಬಗ್ಗಡವಾಗು ; ರಾಡಿಯಾಗು : 'ಜವುಗೇಱಿಸು' ಪರಾ. ಜವುಗೇಳ್ : ೧. ಝುಲ್ಲನೆ ಸೂಸೆ ಪೂವಳೆ

ಮಕರಂದರಸಂ ಜವುಗೇಳೆ ತುಂಬಿಗಳ್ ನಿಲ್ಲದೆ ರಭುಂಕೃತಿಧ್ವನಿಯನೀಯೆ (ಹಾಲಾಸ್ಯ. ೦-೩-೨೯). ೨. ಬೀದಿಬೀದಿಗೂ ತೀವಿ ಕಾಲುವೆಗಟ್ಟಿ ಹರಿಯೆ ಗಜಾವಳಿಯುವದಘಟ್ಟಣದಿ ಜವು[ಪಾಠಾಂ.ಜೌ]ಗೆದ್ದ ಕೆಸಱ್(ಬಸವು. ೦೦-೩). ಜೌಗೇಳು : ೨. ನೆಣವಸೆ ಕರುಳ್ಗಳ್ ಸುತ್ತಲುಂ ತೀವಿ ಜೌಗೆದ್ದಡಿಯಿರ್ಕಲ್ ಬಾರದೆಂಬಂತಿರೆ (ಸಕವ್ಯ. ೩. ಪ್ರಸ್ತಾವನೆ). ಜೌಗೇಟ್ : ೨. ಬಡಹಂ ಕೈಕೊಂಡುದುರ್ವಿನೀತಳವಾದು ನೆಱ ಜೌಗೆಟ್ಟು ಮೆಟ್ಟಲ್ಕೆ ಬಲ್ದೊಂದೆಡೆ ಯಿಲ್ಲೆಂಬಂತೆ ಕಂಪಲ್ಮಸಗೆ (ಶಾಂತೀಶ್ವ. ೦೨-೫೬). [ ಜವುಗು + ಏಟ್$_1$]

ಜವುಗೇಟಿಸು,ಜೌಗೇಟಿಸು (ಕ್ರಿ).ಬಗ್ಗಡಗೊಳಿಸು; ರಾಡಿಯಾಗುವಂತೆ ಮಾಡು: ದೆಸೆಯಂ ಖಡ್ಗಾಂಶುಜಾಲಂ ಬೆಳಗೆ ಧರಣಿಯಂ ದಾನಧಾರಾಂಬು ಜವು[ಪಾಠಾಂ. ಜೌ]ಗೇಟಿಸೆ . . . ಮಾಮಸಕಂಗೊಂಡೆತ್ತಿ ಬಂದಂ (ಚಂದ್ರಪು. ೦೦-೫೮). ಜೌಗೇಟಿಸು : ದಂತಿದಾನಪ್ಲವದಿನವನಿಯಂ ಕೂಡೆ ಜೌಗೇಟಿ ಸುತ್ತುಂ ಇಳೆ ಕಂಪನಗೊಳ್ವಿನಂ ಸಂಭ್ರಮದಿ ನಡೆತರುತ್ತಿರ್ಪ ಸೇನೆ (ಶಾಂತೀಶ್ವ. ೦೫-೦೦೮). [ ಜವುಗೇಟ್ + – ಇಸು$_3$ ]

ಜವುಳಿ$_1$ ‘ಜವಳಿ$_1$’ ನೋ.

ಜವುಳಿ$_2$ ‘ಜವಳ’ ನೋ.

ಜವುಳಿಗ (ನಾ). (?) : ತಳವಾರನು ಸೂಳೆಗಾರ ಜವುಳಿಗ ಭಂಗಿಗ ಕಳುಗುಡಿ ಜೂಜಿಗ (ಶರಿಶ. ೦೦೯-೦೦). [ ? ]

ಜವುಳು, ಜವಳಿ$_2$, ಜವಳು, (ನಾ). ೧. ತೇವ ; ಒದ್ದೆ : ಹೊಳೆಗಳ ದಂಡೆಗಳಲ್ಲಿಯೂ ನೀರಿನ ಜವುಳು ಆಡುವ ಸ್ಥಳಗಳಲ್ಲಿಯೂ ಮೂರು ಜಾತಿಯ ಕಬ್ಬು ಒಳಿತಾಗಿ ಬೆಳೆಯುತ್ತದೆ (ಕೃಷಿಗ. ೨೭೩). ೨. ತೇವವಾದುದು ; ಒದ್ದೆಯಾದುದು : ಜವುಳ ಆಡವಿಯಲ್ಲಿಯೂ ಕೊಬ್ಬೇರಿ ಬೆಳೆದ ಹುಲ್ಲಿನಲ್ಲಿಯೂ ಅವು ಮೇಯುವುದಿಲ್ಲ (ಮುಂಬಯಿ. ೩-೧೦); ಗುಡ್ಡದ ಓರೆಯಲ್ಲಿ ಜವುಳ ಹಳ್ಳದೊಳಗೆ ಸಾವಿರಾರು ಕಪ್ಪೆಗಳು ಇರುತ್ತಿದ್ದವು (ಕನಾಕ. I, ೦೩೮). ಜವಳಿ$_2$: ೧. ‘ಜವಳಿದೆಗೆ’ ಪರಾ. ಜವಳು: ೨. ನಿನ್ನ ಸೇವಕರು ಜವಳುಪ್ರದೇಶವೆಂದು ತಿಳಿದು ನಿನ್ನ ತೀರ್ಥೋದಕಗಳಿಗಾಗಿ ತೋಡಿ ಸಿದ್ಧಪಡಿಸಿರುವರು (ತುಳಸಿ. ೨೦೦) ; ಮಡವುಗಟ್ಟಿ ಮಲೆತು . . . ಒಂದು ಅಸಹ್ಯ ಜವಳುರಾಡಿಯ ವಿಸ್ತಾರವನ್ನೇ ಉಂಟುಮಾಡಿದವು (ವಿಜಾಪ. ೦೬); ಜವಳು ಭೂಮಿಗಳಲ್ಲದೆ ಮಾರ್ಗದಲ್ಲಿ ಬೇರೆ ಮನೋಹರವಾದದ್ದು ಏನೂ ಕಾಣಲಿಲ್ಲ (ಮೋಡಿಮ. ೦೭೯). [ <ಜವುಗು ]

ಜವುಳುಗೊಳಿಸು (ಕ್ರಿ). = ಜವುಗೇಟಿಸು; ಶೀತಹವೆಯಲ್ಲಿ ಭಾರವಾದ ಬಂಡಿಗಳ ಚಕ್ರಗಳು ಅವುಗಳನ್ನು ಉತ್ತು ಜವುಳುಗೊಳಿಸುತ್ತಿದ್ದವು (ಬೆಂಜನ್. ೨೦೦). [ ಜವುಳು + ಕೊಳ್$_1$ + – ಇಸು$_3$]

ಜವುಳೇಳು (ಕ್ರಿ). = ಜವುಗೇಟ್ ೨ : ಜವದಿ ಕಾರ್ಮೇಘ ಒಡ್ಡೈಸಿ ಪೆರ್ಮಳೆ ಸುರಿದು ಜವುಳೇ[ಪಾಠಾಂ. ಗೇ]ಳೆ ಮೂರುದಿನ ಬಿಡದಿರಲು ದೂಷಕರು ತವತವಗೆ ಬಂದು ಪದಾಂಬುಜಕ್ಕೆಱಗುತಿರೆ (ಗುರುಚಾ. ೦೦-೩೭).

[ ಜವುಳು + ಏಳು$_1$ (<ಏಟ್$_1$) ]

ಜವೆ$_1$ ‘ಜವಿ$_1$’ ನೋ.

ಜವೆ$_2$ (ನಾ). ೧. ಒಂದು ಬಗೆಯ ಧಾನ್ಯ ; ಯವಧಾನ್ಯ ; ಜವೆಗೋಧಿ : “ಯವೆಯೆನಲು ಜವೆ” (ಮಂಗರಾ. ೦೦೦-೩) ; ಜವೆಯ ಪಾಗರದೊಳಂ ಮಲವರ್ಗಡಿನ ಜಗಲಿಯೊಳಂ (ಕಾದಂಬ. ೭೮೩) ; ಜವೆ ಜೋಳಂ ಕೊಱ ಮೊದಲಾದುವರ್ಕೆ ಗಣೆವೊಂದು ತೆನೆಗಳೆರಡಾದಂದುಂ . . . ಅಱಗೆ ತತ್ಪತಿಯಟಿವಂ (ಲೋಕೋಪ. ೪-೩೬) ; ಜವೆ ದಿವ್ಯೌಷಧಿ ಪಾರಿಜಾತ ಕುಸುಮಂ ಸಿದ್ಧಾರ್ಥಮಾದ್ರಾರ್ಕ್ಷತಂ . . . ಕಸ್ತೂರಿ ಕಾಶ್ಮೀರಮೆಂಬಿವಱಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುವಾ ಸದ್ಮದೊಳ್ (ಜಗವಿ. ೦೦-೯೮). ೨. ಒಂದು ಯವೆಯ ಕಾಳಿನಷ್ಟು ತೂಕ: ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ಒಂದು ಜವೆ ಕೊಱತೆಯಾದರೆ ಎನ್ನನದ್ದಿ ನೀನೆದ್ದು ಹೋಗು (ಬಸವ. ೪೪೦). ೩. ಉದ್ದವನ್ನು ಅಳೆಯುವ ಒಂದು ಪ್ರಮಾಣ ; ಅಂಗುಲದ ಎಂಟನೆಯ ಒಂದು ಭಾಗ : “ಕಿರಿ ಸಾಸಿವೆಯಾಗಲೊಂದು ಜವೆಯೆನಿಸಿಕುರ್ಗಂ ಕಿರಿ ಜವೆಯಾಗಲ್ಕಂಗುಲ” (ವ್ಯವಹಾ. ೮-೩೯ ಅನು. ೦).

ಜವೆಯ ಕೆಯ್ = ಯವೆಯನ್ನು ಬೆಳೆಯುವ ಹೊಲ : “ಜವೆಯ ಕೆಯ್ ಯವ್ಯಮೆಂಬುದು” (ಹಲಾಯು. ೨೭-೮).

[ <ಪ್ರಾ. ಜವ./ಸಂ. ಯವ ]

ಜವೆ$_3$ (ನಾ). (ಮಾಟದ) ಮಂತ್ರ ; “ಮಾಯೆ” (ಪ್ರಕಟ) : ಎವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ ಜವೆಯ ಮೋಜವ ಕಲ್ಪಿಸಿದಳು (ಮೋಹತ ೨೯-೮). ‘ಜವೆಬೂದಿ’ ಪರಾ.

[ <ಪ್ರಾ. ಜವ./ಸಂ. ಜಪ ]

ಜವೆಗೊಂಕು (ಕ್ರಿ). (ಆಲಂ) ಕೂದಲು ಕೊಂಕಂ ; ತೊಂದರೆಯಾಗು : ರವಿಸುತನಿಂತು ರಕ್ಷಿಸಿದ ಕಾರಣದೆ ಕೌರವನಂದು ರಾಯಕುವರಿಯ ಜವೆಗೊಂಕದಂತಿರೆ ಸೆಱಗೊಂಡು ನಾಗಪುರವ ಪೊಕ್ಕನತಿ ಹರುಷದೊಳು (ಕರ್ಣವ್ಯ. ೫-೨೨).

[ ಜವೆ$_1$ (<ಜವಿ$_1$) + ಕೊಂಕು$_1$ ]

ಜವೆಗೋದಿ, ಜವೆಗೋಧಿ (ನಾ). ಗೋಧಿಯಲ್ಲಿ ಒಂದು ಬಗೆ; ಯವ: “ಜವೆಗೋದಿ – ಯವಗೋಧೂಮ” (ತದ್ಭಕೋ. ೦೪). ಜವೆಗೋಧಿ ; ಜವೆಗೋಧಿ ಬಗೆಬಗೆಯ ನೆಲ, ಬಗೆಬಗೆ ವಾಯುಗುಣಗಳಿರುವ ಪ್ರದೇಶಗಳಲ್ಲಿ ಬೆಳೆಯುತ್ತದೆ (ಭೂವಿಪ. ೦೮೭).

[ ಜವೆ$_2$ + ಗೋದಿ$_1$ (<ಗೋದುವೆ) ]

ಜವೆಗೋಧಿ ‘ಜವೆಗೋದಿ’ ನೋ.

ಜವೆಬೂದಿ (ನಾ). ಮಂತ್ರಿಸಿದ ಬೂದಿ ; ಮಂಕುಬೂದಿ : ಅಸುರಮಾಯಾಮಂತ್ರಮಂ ಜಟಿಪ ಫಣೆಯೊಳಂ ಭಸಿತವನು ಧರಿಸಿ ದಿಗ್ಬಂಧನಂಗಳಗೈದು ಶಶಿಯ ಮಂಡಲಕೆ ಕಾವಳಗೈಸಿ ಗ್ರಹಗಣರ ಕಂಗಳಿಗೆ ಜವೆಬೂದಿಯಾ ಸಸಿನೆ ಚೆಲ್ಲುತ ದುರ್ಗಿ ಭೈರವರ ಬಲಗೊಂಡು (ನವಮೋ. ೨೭-೧೩). [ ಜವೆ$_3$ + ಬೂದಿ ]

ಜವ್ವನ, ಜೌವನ (ನಾ). ೧. ಹರಯ; ಪ್ರಾಯ; ಯೌವನ; ತಾರುಣ್ಯ: ಕಲಿತನದುರ್ಕು ಜವ್ವನದ ಸೊರ್ಕು ನಿದೇಶನ ನಚ್ಚು . . . ಕರ್ಣನಿನಗುಳ್ಳನಿತೇನೆನಗುಂಟೆ (ಪಂಪಭಾ. ೦೦-೨೩); ಸಿರಿಯೊಂದೊದವಂ ಜವ್ವನಭರಮಂ ನಚ್ಚಿದುರ್ ಕೆಡುವರ್ (ಧರ್ಮಾಮೃ. ೩-೨೦೨) ; ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯ (ಬಸವ. ೫೦೭) ; ಏನೆಂಬೆನುತ್ಕಟದ ಜವ್ವನಂ ಬರುತಮಿರೆ (ಸಂಬಿರ. ೩-೨); ನೀನು ಮಿಗೆ ಮೇಲಱಿಯ ಜವ್ವನ ದುಬ್ಬುಗೊಬ್ಬಿನಲಿ (ಕುಮಾರ. ೧-೩೭) ; ಸಿರಿಯು ಬಂದರೆ ಲೇಸು ತಿರದ ಜವ್ವನ ಲೇಸು (ಸರ್ವಜ್ಞ. ೧೨೯). ೨. ಮೊಲೆ ; ಸ್ತನ: “ಜವ್ವನಮೆಂದು ಕುಚಂ” (ಕಕಸಾ. ೨೦-೪೩೦); “ಜವ್ವನಮೆನಲ್ಕೆ ಕುಚಮಕ್ಕು” (ಕಬ್ಬಿಗ. ೩೧); ಅಚ್ಚ ಜವ್ವನಮೆಂಬ ದರ್ಪಕಪಟ್ಟಕುಂಜರಕುಂಭಮಂ ಚೆಚ್ಚರಂ ರತಿದೇವಿ ಸರ್ವಲತಾಂತಮಾಲಿಕೆಯಿಂ ಸಮಂತರ್ಚಿಪಂತೆಳವೆಣ್ಣದೊರ್ವಳಮರ್ಚಿ ದಿಳ್ಪಲರನ್ನದೊಳ್ವಚ್ಚವಂ ನಲಿದಾ ಕುಮಾರಿಯ ಪೀವರ ಸ್ತನಭಾಗದೊಳ್ (ಉದ್ಭಟ. ೮-೩೪) ; ಚುಂಬಿಸೆಸ್ನಧರವ ಚುಬುಕಾಗ್ರವಿಡಿಯುತ ತುಂಬು ಜವ್ವನಕೆ ಕೈನೀಡಿ ನಂಬಿಸಿ (ಕಶಸಾಂ. ೩೨-೭೯). ಜೌವನ: ೧. ಪೋದುದು ಜೌವನಂ ಕ್ರಮದಿನಾದುದು ಮುಪ್ಪು (ಆದಿಪು. ೨-೩೫) ; ಉದಯಿಸಿ ಜೌವನಮಂ ತಳೆದೊದವಿದ ಮುಖ್ಯನೊಳೆ ಕಟಿವರಿಲ್ಲಿಂ ಬಟಿಯಂ (ಪಂಪರಾಮಾ. ೦-೮೪); ಜೌವನದೇಟ್ಗೆ ಕಯ್ಗೆ ಕನ್ನಡಿಯೆನಿಸಿತ್ತು (ಕಬ್ಬಿಗಕಾ ೪೭) ; ಜೌವನವಾದುದು ಮತ್ತನುಜೆಗೆ (ಅಯುಕಾ. ೩-೭೦).

[ <ಪ್ರಾ. ಜೋವ್ವಣ. / ಸಂ. ಯೌವನ ]

**ಜವ್ವನಂನೆಱೆ³, ಜೌವನಂನೆಱೆ³** (ಕ್ರಿ). ಯೌವನ ತುಂಬು ; ಪ್ರಾಯಕ್ಕೆ ಬರು : ಎಂತಂತೇಱೆ²ಗೆಯ ಜವ್ವನಂನೆಱೆ³ಗುಮಂತಂತೆಸೊಪ್ಪೆ ಲಾವಣ್ಯಂ (ಶಾಂತಿಪು. ೯-೧೭) ; ದಿವ್ಯವಸ್ತ್ರಭೂಷಣಮಣಿಮಾಳಿಗಳ್ನೆಱೆ³ದು ತನ್ನೊಡ ವುಟ್ಟಿರೆ ಬೇಗವೇಗಮಾ ಕ್ಷಣದೊಳೆ ಜವ್ವನಂನೆಱೆ³ಯೆ ನಟ್ಟನೆ ತೊಟ್ಟನೆ ಬಂದು ಪುಟ್ಟಿದಂ (ಸುಕುಮಾ. ೯-೧೮). **ಜೌವನಂನೆಱೆ³** : ಜೌವನಂನೆಱೆ³ದ ಪ್ರಭಾವತಿಯನಾರ್ಗೆ ಕುಡುವಮೆಂದು . . . ಆಲೋಚಿಸಿ (ಜಾವುಂಪು. ೯೦-೨೩). [ ಜವ್ವನ + ನೆಱೆ₁ ]

**ಜವ್ವನಂಬಡೆ** (ಕ್ರಿ). ತಾರುಣ್ಯವನ್ನು ಹೊಂದು: ಗೆಲ್ಲಂಪಡೆದ ಪಂದೆಯಂತೆ ಜವ್ವನಂಬಡೆದ ಮುದುಪನಂತೆ (ಧರ್ಮಾಮೃ. ೩-೦೨೩). [ಜವ್ವನ+ಪಡೆ₁]

**ಜವ್ವನವೆಱು** (ಕ್ರಿ). = ಜವ್ವನಂಬಡೆ : ತಿಣ್ಣ ಜವ್ವನವೆತ್ತ ಕೆಳದಿ ಕೇಳ್ (ಮೋಹತ. ೩೦-೨೪). [ ಜವ್ವನ + ಪೆಱು₁ ]

**ಜವ್ವನಿ** (ನಾ).=ಜವ್ವನೆ: ಕನ್ನೆವೇಟಕ್ಕೆ ತನ್ನಂ ಮಾಱುಗೊಟ್ಟು ಪಾಱುಗೆಯ್ವುದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವು ಮಾಡಿ ಮೆಱೆ³ವುದನವ ಕೊಡನಾಡಿ ನೋಡಿ ಕಂಡು (ಚಂದ್ರಪು. ೮-೩೩ ವ). [ ಜವ್ವನ + -ಇ₂ ]

**ಜವ್ವನಿಕೆ** (ನಾ). ಹರಯ ; ತಾರುಣ್ಯ ; ಯೌವನ : ತನ್ನ ಜವ್ವನಿಕೆಯ ಕಾಲದಲ್ಲಿ ಉಳ್ಳವರ ಒಕ್ಕಲಾಗಿದ್ದಳು (ದೀಶಹ. II, ೧೯೩).
[ ಜವ್ವನ + - ಇಕೆ ]

**ಜವ್ವನಿಗ, ಯುವ್ವನಿಗ** (ನಾ). ಹರಯದವನು ; ತರುಣ ; ಯುವಕ : "ದಾರಕಃ, ತರುಣಃ, ಯುವಾ–ಈ ೩ ಜವ್ವನಿಗಂ" (ಹಲಾಯು ೬೩-೩೪೯); ಪೆಸರೇನಾರ್ಗೀತನೀ ಜವ್ವನಿಗ ತವಸಿ (ಕಾದಂಪೂ. ೭೭೦) : ಪಾಂಥರೊಳಗೆ ಬಳಲ್ದು ಬರ್ಪ ಜವ್ವನಿಗನಂ ಕಂಡು (ಗಿರಿಜಾ. ೨-೦೭ ವ). **ಯುವ್ವನಿಗ** : ಇವನಸುರ ಮಧುಗುಡಿಗ ಯುವ್ವನಿಗ ಮದನಗ್ರಹವ್ಯಾಧಿಗಂ (ನವಮೋ. ೯-೦೭). [ ಜವ್ವನ + - ಇಗ ]

**ಜವ್ವನಿಗಿತಿ** (ನಾ).=ಜವ್ವನೆ: ಆರೂಕಿರಿಯ ಜವ್ವನಿಗಿತಿಯರು ಇಲ್ಲವಾಗಿದೆ (ಬಟ್ಟಲ. ೧೮೧-೪). [ ಜವ್ವನಿಗ + - ಇತಿ₁ (< - ಇತ್ತಿ) ]

**ಜವ್ವನಿಗೆ** (ನಾ).=ಜವ್ವನೆ : ಈ ತೆಱದ ಮೆಱೆ³ವ ವಿಟಜಿಗರ ಮುಱುಕವಾ ದೊರೆಯು ಭರದ ಜವ್ವನಿಗೆಯನವ್ವಾ ಕೆಯ್ಸಾರಲಿತ್ತಪ್ಪುದೆ (ವರ್ಧಪು. ೯-೪೩ ವ). [ ಜವ್ವನಿಗ + - ಎ₂ ]

**ಜವ್ವನೆ, ಜೌವನೆ, ಯುವ್ವನೆ** (ನಾ). ಯುವತಿ ; ತರುಣಿ : "ವಧೂಟೀ, ಚಿರಂಟೀ – ಈ ೨ ಜವ್ವನೆ" (ಹಲಾಯು. ೭೯-೩೩೦); ಜವ್ವನೆ ಗಡವಾಡಲ್ ಪಾಡಲವಳ್ ಬಲ್ಲಳ್ (ಅಜಪು. ೩-೯೩) ; ಜವ್ವನೆಯ ಮೊಲೆಯಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೦೨೨); ಎನ್ನ ಮನೆಯೊಳ್ ತುಂಬಿದ ಜವ್ವನೆಯನಿರಿಸಲಣ್ಮೆಂ (ದಕಳು. ೧೧-೭೬). **ಜೌವನೆ** : "ಪಡ್ಡಾ–ಜೌವನೆ" (ಶಾಶಕ್. ೨೪). **ಯುವ್ವನೆ** : ಬಾಲಕಿಯರುಂ ಯು[ ಪಾಠಾಂ. ಯೌ ]ವ್ವನೆಯರುಂ . . . ವಯೋ ಧರ್ಮಂಗಳಂ ತಿಳಿದು (ಬಸವು. ೪೦-೦೮). [ ಜವ್ವನ + - ಎ₂ ]

**ಜವ್ವರಿಸು, ಚವ್ವಲಿಸು** (ಕ್ರಿ). ಶೋಭಿಸು ; ವಿಜೃಂಭಿಸು: ಜವ್ವನ ಜವ್ವನ ಕೊಪ್ಪುವಲಂಕಾರ ಜವ್ವರಿಸುವ [ಪಾಠಾಂ. ಚವ್ವಲಿಸುವ] ಹಾವಭಾವ ಕವ್ವರಿಸುವ ಕಾಂತಿರಸದಿಂದ ನೃಪನ ಕಣ್ಣುವ್ವಳಿಸುವವೊಲೆಸೆದರು (ಹೇರಿಕ. ೧೩-೩೩). **ಚವ್ವಲಿಸು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ?. / ತೆಲು. ಜುವ್ವರಿಂಚು = ವಿಜೃಂಭಿಸು ]

**ಜವ್ವಾಜಿ** 'ಜವಾದಿ' ನೋ.

**ಜವ್ವಾದಿ** 'ಜವಾದಿ' ನೋ.

**ಜಷ್ಟೆ** (ನಾ). ಉದಾಸೀನತೆ; ಆಲಸ್ಯ; ಸೋಮಾರಿತನ: ಜೇಷ್ಠ ಮೂಲ ಹಿಡಿದರೆ ಜಷ್ಟೇ ಮುಚ್ಚಿದ ಹಾಗೆ (ಎಸಹ್ಸ್. XV, ೩೨); ಸ್ವಲ್ಪ ತಲೆ ಬಾಚು ಅಂದರೆ ಏನೋ ಜಷ್ಟೆ (ರೂಢಿ). [ <ಸಂ. ಜ್ಯೇಷ್ಠಾ ]

**ಜಸ₁, ಝಸ₁** (ನಾ). ೧. ಒಳ್ಳೆಯ ಹೆಸರು ; ಯಶಸ್ಸು ; ಕೀರ್ತಿ : "ಜಸಂ ಕೀರ್ತಿಯೆ" (ಕರ್ಣಾನಿ. ೩೨) ; ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳೆಂಬುಗಳ್ಕನಿಸಿಜನಾ ಜಸವುಱೆ³ಯೆ ಸುಡುವುದ(ವೆ)ರ್ದೆಯಂ (ಕವಿರಾ. ೩-೦೩೪) ; ಕೇಸವಯ್ಯನವಾಪ್ಪೂರ್ಗಳರ್ನೆ ಗಟ್ಟಿಗುಪಮಾಗಿ ಜಸಂ ಭುವನಾನ್ತರಾಳದೊಳ್ (ಎಕ. III, ನಂಜನ. ೭೮-೦೮; ಸು. ೯೦೦); ಒಡಲುಂ ಪ್ರಾಣಮುಮೆಂದಿವು ಕಿಡಲಾದುವು ಜಸಮ ದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗೞ್ದೆಂ (ಪಂಪಭಾ. ೧೨-೦೮೧) ; ಜಸಮ ತನಗೆ ಮೆಯ್ಸಿರಿಯೆಂಬುದನಱೆ³ವಂತೆ ಪೂಸಿದ ಬೂದಿಯೊಳಂ . . . ಚೆಲ್ವನಾಂತು (ಶಬ್ದಿಕಾ. ೧೬೭) ; ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ ಜಸವು ಜನಜೀವನಕೆ (ಮಂಕುಕ. ೩೨೨). ೨. ಶೋಭೆ : ವೈಭವ: ಹಸಿವು ವೆಸನ ತೃಷೆಯಾಲಸ್ಯಮೋಹಮಂಬೆಸಕವುಳ್ಳುದು ನರದೇಹ ಉಸಿರಿದ ಕೃತಿಯೊಳು ಮಱೆ³ದೆಡಹಿರೆ ತಿದ್ದಿ ಜಸವ ಮೆಱೆ³ವುದು ಕೋವಿದರು (ಶಂನವಿ. ೧-೦೩) ; ಮಿಸುನಿನಿಗಂಬದ ವಟ್ಟಸಾಲೆ ನಾನಾ ಬಗೆಯೆಸೆವ ಮೇಲ್ಕಟ್ಟುಗಳಿಂದ ಜಸವ ಬೀಱೆ³ದುವು ನಾಟಕಶಾಲೆಯ ಬಲೆಯಾರೆಸೆದಿಹ ಮಣಿಮಯ ಭವನ (ಶಂನವಿ. ೭-೪೩). **ಝಸ₁** : ೧. ಬಿರುದಿನ ಬಿಂಕದಂಕದ ವಿರೋಧಿಗಳಂ ತಱೆ³ದಿಕ್ಕಿ ದಿಕ್ಕರಿಪರಿಯನ್ತಮುಂ ಝಸವನಾರ್ಜಿಸಿ ವೀರರಸಂ ತುಳ್ಕಾಡಿ ಕಾದಿದಂ (ಶಾಸಾಇ. XX; ೧೬೯-೧೩ ; 1183).
[ <ಪ್ರಾ. ಜಸ / ಸಂ. ಯಶಸ್ ]

**ಜಸ₂, ಝಸ₂** (ನಾ). ವಿಮಾನು ; ಝಡಿತಿ – ಜಡಿತಿ; ಝಷ – ಜಸ (ಶಬ್ದಾನು. ೦೪೩ ಪ್ರಯೋ). **ಝಸ₂** : 'ಝಸಕೇತು' ಪರಾ.
[ <ಪ್ರಾ. ಝಸ / ಸಂ. ಝಷ ]

**ಜಸಂದಳೆ** (ಕ್ರಿ). ಕೀರ್ತಿಯನ್ನು ಪಡೆ ; ಯಶಸ್ಸನ್ನು ಹೊಂದು : ಆವ ನರನಾವ ಕೃತ್ಯಂಗೆಯ್ಯಲು . ಬೀಯದ ಜಸಂದ[ಪಾಠಾಂ. ಬ]ಳೆವುದಿಲ್ಲಿ ನಾರಕದ ಬಿಱುಬೇಯದ ಸುಖಂ ಪರದೊಳೆಂತು ದೊರಕೊಂಬುದೆಂಬೀ ಯವಸ್ಥೆಯನೆನಗೆ ವಿಸ್ತರಿಸಿ ಪೇಳ್ವುದು(ಜೈಮಿಭಾ. ೩-೪೮). [ಜಸ₁+ತಳೆ₁]

**ಜಸಂಬಡೆ, ಜಸವಡೆ, ಝಸಂಬಡೆ** (ಕ್ರಿ). ಹೆಸರುವಾಸಿಯಾಗು ; ಹೆಸರಾಗು ; ಪ್ರಸಿದ್ಧವಾಗು: ನವ್ಮೊವಜರ್ ಜಸಂಬಡೆದ ಭಾರ್ಗವರ್ (ಕಂಪಭಾ. ೦೨-೩೭) ; ತನ್ನೊಡಮೆಯನನವರತ ದಾನದಿಂ ತವಿಸಿ ಜಸಂಬಡೆದಲ್ (ಅಜಪು. ೧-೦೫೧); ವಾಜಿವಂಶದಜ್ಞಾದುವಿನಂ ಜಸಂಬಡೆದ ನೆಂಬುದು ಧಾರಿಣಿ ನಾಗರಾಜನ (ವಾಂದೇಜ. ೨೩-೩೨ ; 1122) ; ಗುಣಾಂ ಗೊಂಡಂ, ಜಸಂಬಡೆದಂ, ಕಳಸವಿಟ್ಟಂ(ಛಾಶಾಭೂ. ೧೬೪ ಉದಾ).**ಜಸವಡೆ**: ಮೂಜಗದೊಳೆನಿಸು ಜಸವಡೆದೊಡಂ ಗುಹ್ಯಕಾಸ್ಪದಮೆನಿಪುದಳಕಾ ಪುರಂ (ಜೈಮಿಭಾ. ೩-೧೫) ; ಎಸೆವಾ ಕಾವೇರಿಯ ತಟದೊಳು ಬಹು ಪುಣ್ಯದೆಸಕದ ದಿವ್ಯಸ್ಥಳಗಳು ಜಸವಡೆದಿಹುವು (ಶಂನವಿ. ೨-೨೧); ಸಕಲ ವೇದಾವಳಿಯೊಳು ಜಸವಡೆದ ಪಾವನಚರಿತೆಯು . . . ವಂದಿಪೆನು (ಹರಿಬ. ೮-೨). **ಝಸಂಬಡೆ**: ಶಂಕರನಾರಾಯಣನ ಪೆಸರಿಂ ಕದುರ್ಝಸಂಬಡೆದ ಭೂಸುರನಿಂ ಕೃತವಿದಧ್ಯಾತ್ಮರಾಮಾಯಣಂ (ಅಧ್ಯಾರಾ. ೧-೨).
[ ಜಸ₁ + ಪಡೆ₁ ]

**ಜಸಯುತ** (ನಾ). ಕೀರ್ತಿಶಾಲಿಯಾದವನು ; ಯಶೋವಂತ : ಕರಣ ತ್ರಯಂಗಳೊಳ್ ಜಸಯುತನೊಳ್ ಗೃಹೋಪಕರಣಂಗಳೊಳುತ್ತಮ ಕಾರ್ಯದಲ್ಲಿ ವರ್ತಿಸುವುದು ಸಾಧನಾಹ್ವಯ (ನಾನಾರ. ೦೦೩).
[ ಜಸ₁ + ಯುತ ]

**ಜಸವಂತ** (ನಾ). ಕೀರ್ತಿಶಾಲಿ ; ಕೀರ್ತಿವಂತ : ವಂತ ಪ್ರತ್ಯಯಕ್ಕೆ – ಸಿರಿವಂತಂ, ಜಯವಂತಂ, ಜಸವಂತಂ (ಶಮದ. ೨೦೭ ಪ್ರಯೋ) ; ಜಸಮುಂಟೀತಂಗೆ, ಜಸವಂತಂ (ಶಬ್ದಾನು. ೪೦೦ ಪ್ರಯೋ).
[ ಜಸ₁ + - ವಂತ ]

**ಜಸವಡು** (ಕ್ರಿ). ಅಂದವಾಗು; ಶೋಭಿಸು: ಮಿಸುನಿಯ ಹಡಪ ಚಾಮರ ಕುಂಚ ಕಾಳಾಂಜಿ. ಪೊಸವಟ್ಟೆಯ ಪಾವಡೆಯ ಜಸವಟ್ಟೊಳಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂನವಿ. ೨೨-೮೮).
[ ಜಸ$_1$ + ಪಡು$_1$ ]

**ಜಸವಡೆ** 'ಜಸಂಬಡೆ' ನೋ.

**ಜಸವೆಟು** (ಕ್ರಿ). = ಜಸಂಬಡೆ : ಜಸವೆತ್ತ ಗರುಡಬಾಣದಿ ಕೃಷ್ಣರಾಯ ಖಂಡಿಸಲದು ಬಯಲಾದುದು (ಮೋಹತ. ೩೯-೨೮) ; ಜಸವೆತ್ತು ಪೆರ್ಮೆ ವಿಗೆ ರಂಜಿಸೆ (ರಾಜಶೇ. ೦-೬೯). [ ಜಸ$_1$ + ಪೆಱು$_1$ ]

**ಜಸೆ** 'ದಸೆ$_1$' ನೋ.

**ಜಸ್ತು** (ನಾ). ತವರ ಮತ್ತು ಸೀಸಗಳಿಂದಾದ ಒಂದು ಬಗೆಯ ಮಿಶ್ರ ಧಾತು : ಎಣ್ಣೆಯ ಪೀಪಾಯಿ ಮತ್ತು ಜಸ್ತಿನ ಡಬ್ಬಿಯಲ್ಲಿಯ ತುಪ್ಪ (ಮುಂಬಬ್ರಾ. ೮೦). [ ←ಮರಾ. ಜಸ್ತ್ ; ಹಿಂ. ಜಸ್ತಾ/ಹ್ರಾ. ಜಸದ. ]

**ಜಹಂಗೀರು** 'ಜಹಾಂಗೀರು' ನೋ.

**ಜಹಗೀರದಾರ** 'ಜಹಗೀರುದಾರ' ನೋ.

**ಜಹಗೀರಿ** 'ಜಹಗೀರು' ನೋ.

**ಜಹಗೀರು**, ಜಹಗೀರಿ, ಜಾಗಿರಿ, ಜಾಗೀರ್, ಜಾಗೀರಿ, ಜಾಗೀರು (ನಾ). ೧. ಮಾನ್ಯವಾಗಿ ದೊರೆತ ಭೂಮಿ, ಗ್ರಾಮ ಮೊದಲಾದುವು: ನಿನಗೆ ಹರದನ ಹಳ್ಳಿಯನ್ನು ಜಹಗೀರು ಕೊಡಿಸುತ್ತೇವೆ (ಹೈದರ. ೩೪) ; ಆ ಜಹಗೀರಿನ ವಾರ್ಷಿಕ ವರಮಾನವು ಒಳ್ಳೆ ಸಾವಿರಗಳಷ್ಟು ಇದ್ದಿತು (ಕುಶಾತ. ೫). **ಜಹಗೀರಿ:** ೧. ಕೊಡಗರ ಭೂಮಿ ಮನೆಯನ್ನು ಆ ಮುಸಲ್ಮಾನರಿಗೆ ಜಹಗೀರಿ ಆಗಿ ಕೊಟ್ಟು (ರಾಜೇಂದ್ರ. ೦೬). (ಗು). ೨. ಜಹಗೀರಿಗೆ ಸಂಬಂಧಿಸಿದ: ಶೀಮೆಯೇನಾದರೂ ಜಹಗೀರಿ ಇನಾಮಾಗಿ ಬೇಕೆಂಬ ಅಪೇಕ್ಷೆಯೂ ಇಲ್ಲಾ (ರಾಜೇಂದ್ರ. ೧೦೩). **ಜಾಗಿರಿ :** ೧. ಒಂದು ಜಾಗಿರಿನಲ್ಲಿಯ ಜಾಗಿರದಾರರು ತಮ್ಮ ಹಳ್ಳಿಯ ಜನರ ಮೇಲೆ ನಡೆಸುವ ಕ್ರೂರವಾದ ಒತ್ತಾಳಿಕೆ (ಸಾಸಮಾ. ೬೮). **ಜಾಗೀರ್ :** ೧. (ಕೃಸಗೆ. II, ೫೫೦). **ಜಾಗೀರಿ :** ೧. ಅಖಂಡ ಜಾಗರದ ಜಾಗೀರಿ ಸನದನ್ನು ಪಡೆದವರಂತೆ (ದೀಪಹ. II, ೨೨೯). **ಜಾಗೀರು :** ೧. 'ಜಾಗೀರುದಾರ' ಪರಾ.
[ ←ಮರಾ. ಜಹಾಗೀರ್, ಜಾಹಾಗೀರ್ ; ಪಾರ. ಹಿಂ. ಜಾಗೀರ್, ಜಾಗೀರಿ ]

**ಜಹಗೀರುದಾರ**, ಜಹಗೀರದಾರ, ಜಹಾಗೀರದಾರ, ಜಾಗೀರದಾರ, ಜಾಗೀರುದಾರ, ಜಾಗೀರ್ದಾರ್ (ನಾ). ಜಹಗೀರನ್ನು ಪಡೆದವನು; ಜೋಡಿದಾರ: ದೊಡ್ಡದೊಡ್ಡ ಜಹಗೀರುದಾರರು ತಮ್ಮತಮ್ಮೊಳಗೆ ಯುದ್ಧಮಾಡಿಕೊಳ್ಳುತ್ತಿದ್ದರು (ಯೋಧಪು. ೦). **ಜಹಗೀರದಾರ :** ಸಾವಿರಾರು ಜಹಗೀರದಾರರು ತಾಲೂಕುದಾರರು . . . ದುರ್ದೆಶೆಗೀಡಾಗಿದ್ದರು (ಪ್ರಬಂಧ. ೫೪). **ಜಹಾಗೀರದಾರ :** ಆ ಜಹಾಗೀರದಾರರ ಮನೆಯ ವಿಷಯವಾಗಿ ನೀನು ವಿಚಾರಿಸುತ್ತಿಯಷ್ಟೇ ? (ಮೋಹಿನೀ. ೩). **ಜಾಗೀರದಾರ :** ಅಗರ್ಭಶ್ರೀಮಂತರು . . . ಜಾಗೀರದಾರರು !! (ಇತಿಶ್ರೀ. ೬). **ಜಾಗೀರುದಾರ:** (೬). **ಜಾಗೀರ್ದಾರ್:** (ಕೃಸಗೆ.II, ೫೫೦).
[ ←ಮರಾ. ಜಹಾಗಿರದಾರ್, ಜಾಗೀರ್ದಾರ್ ; ಪಾರ. ಹಿಂ. ಜಾಗೀರ್ದಾರ್ ]

**ಜಹಜು**, ಜಾಜ್ಯು (ನಾ). ಹಡಗು : ಫರಾಶೀಸರ ದೊಡ್ಡ ಜಹಜು ಹದಿಮೂರು ಇಂಗ್ರೇಜಿಯವರ ಜಹಜು ಹದಿಮೂರು (ರಾಜೇಂದ್ರ. ೬೦) ; ಸಮುದ್ರದಲ್ಲಿ ಒಂದು ಪ್ರಚಂಡಮಾರುತ ಪ್ರಾರಂಭವಾಗಿ ಅನೇಕ ಜಹಜುಗಳು ಕಷ್ಟಕ್ಕೆ ಒಳಗಾದವು (ಇಬದು. ೯೦). **ಜಾಜ್ಯು :** ಅವರು ಇಳಿದು ಜಾಜು ಹತ್ತಿ ಹೋದರು (ರಾಜೇಂದ್ರ. ೧೬).
[ ←ಅರ. ಹಿಂ. ಮರಾ. ಜಹಾಜ್ ]

**ಜಹದಜಹಲ್ಲಕ್ಷಣ** (ನಾ). [ಕಾವ್ಯಮೀ] ಮೂರು ಬಗೆಯ ಲಕ್ಷಣಾವೃತ್ತಿಯ ಒಂದು ಪ್ರಕಾರ ; ವಾಚ್ಯಾರ್ಥದಲ್ಲಿ ಒಂದು ಅಂಶವನ್ನು ಬಿಟ್ಟು ಒಂದು ಅಂಶವನ್ನು ಬಿಡದಿರುವುದು: ಸೋಯಂಶಬ್ದಂಗಳಿಂದ ದೇವದತ್ತ ಗತವಾದ ಐಕ್ಯಮಂ ಲಕ್ಷಿಸಿ ಬಳಿಕೀತನೆ ಆತನು ಆತನೇ ಈತನೆಂದು ಪರಸ್ಪರಾಭೇದ ತಾದಾತ್ಮ್ಯಂ ಘಟಿಸುವಂತೆ ಬೋಧಿಪುದೇ ಜಹದಜಹಲ್ಲಕ್ಷಣ (ವಿವೇಕ. ೪೬); ವಾಚ್ಯಾರ್ಥದಲ್ಲಿ ಏಕದೇಶವ ಬಿಟ್ಟು ಏಕದೇಶದಲ್ಲಿ ಪ್ರವರ್ತಿಸುವದು ಜಹದಜಹಲ್ಲಕ್ಷಣವೆಂತಾ ಹೇಳಲ್ಪಡುವದು (ಕುಶ್ರಸ್ಯ. ೨೦-೮).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹದಜಹಲ್ಲಕ್ಷಣಾವೃತ್ತಿ** (ನಾ). = ಜಹದಜಹಲ್ಲಕ್ಷಣ : ಲಕ್ಷಣಾವೃತ್ತಿಯಿಂದ ಬೋಧಿತವಾಗುವ ಅರ್ಥವು ಶಕ್ಯಾರ್ಥದ ಏಕದೇಶವಾಗಿರುವ ಕಲ್ಪದಲ್ಲಿ ಆ ಲಕ್ಷಣಾವೃತ್ತಿಯು ಜಹದಜಹಲ್ಲಕ್ಷಣಾವೃತ್ತಿ ಎನ್ನಿಸುವುದು (ಭಾತತ್ತ್ವ. ೬೦೦). [ ಸಂ.(ಜಹತ್ + ಅಜಹತ್ + ಲಕ್ಷಣಾವೃತ್ತಿ) ]

**ಜಹದಜಹಲ್ಲಕ್ಷಣೆ** (ನಾ).=ಜಹದಜಹಲ್ಲಕ್ಷಣ: ಜಹದಜಹಲ್ಲಕ್ಷಣೆಯೆಂದರೆ, ಪದಗಳ ಸಹಜವಾದ ಅರ್ಥದಲ್ಲಿ ಒಂದಂಶವನ್ನು ಬಿಟ್ಟು ಒಂದಂಶವನ್ನು ಬಿಡದಿರುವುದು (ಹಿಂದಸಾ. ೨೦೬).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹಪನಾ** 'ಜಹಾಪನಾ' ನೋ.

**ಜಹರ್** 'ಜೋಹರ್$_2$' ನೋ.

**ಜಹಲ್ಲಕ್ಷಣೆ** (ನಾ). [ಕಾವ್ಯಮೀ] ಲಕ್ಷಣಾವೃತ್ತಿಯ ಒಂದು ಪ್ರಕಾರ; ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳುವುದು : "ಕೇರಿಯೆಲ್ಲ ಕಣ್ಣೀರು ಸುರಿಸಿತು" . . . "ಕೇರಿ" ಎಂಬುದರಲ್ಲಿ ವಾಚ್ಯಾರ್ಥವು ಪೂರ್ತಿಯಾಗಿ ತಿರಸ್ಕೃತವಾಗುತ್ತದೆ ; ಅದಕ್ಕೆ ಸಂಬಂಧಪಟ್ಟದ್ದರೂ ಅದನ್ನೊಳಕೊಳ್ಳದೆ ಬೇರೆಯಾಗಿರುವ "ಜನರು" ಎಂಬ ಅರ್ಥವು ಲಕ್ಷಿತವಾಗುತ್ತದೆ. (ಜನರು ಕಣ್ಣೀರು ಸುರಿಸಿದರೇ ಹೊರತು, ಕೇರಿ ಕಣ್ಣೀರು ಸುರಿಸಲಿಲ್ಲ.) ಈ ಬಗೆಯ ಲಕ್ಷಣೆಗೆ "ಜಹಲ್ಲಕ್ಷಣಾ" ಎಂದು ಹೆಸರು (ಭಾರಮೀ. ೨೫೨). [ ಸಂ. ಜಹಲ್ಲಕ್ಷಣಾ (ಜಹತ್ + ಲಕ್ಷಣಾ) ]

**ಜಹಾಂಗೀರು**, ಜಹಂಗೀರು, ಜಾಂಗೀರು (ನಾ). ಉದ್ದಿನ ಹಿಟ್ಟಿನಿಂದ ಸುತ್ತುಸುತ್ತಾಗಿ ಮಾಡಿ, ಸಕ್ಕರೆಯ ಪಾಕದಲ್ಲಿ ನೆನೆಸಿದ ಒಂದು ಬಗೆಯ ಸಿಹಿಖಾದ್ಯ : ನನಗೆ ಜಹಾಂಗೀರು ಕೊಡಿಸು (ಒಂ). **ಜಹಂಗೀರು:** ನೀವು ಮಾಡಿರುವ ಜಹಂಗೀರು ತುಂಬ ಚೆನ್ನಾಗಿದೆ (ಒಂ). **ಜಾಂಗೀರು:** ಜಲೇಬಿ . . . ಜಾಂಗೀರು, ಹೋಳಿಗೆ (ಕೂಶಸಂ.೦೬).
[ ←ಪಾರ. ಹಿಂ. ಜಹಾಂಗೀರೀ = ಒಂದು ಬಗೆಯ ಹಸ್ತಾಭರಣ ]

**ಜಹಾಗೀರದಾರ** 'ಜಹಗೀರುದಾರ' ನೋ.

**ಜಹಾದ್** (ನಾ). ಧರ್ಮಯುದ್ಧ : ನಿನ್ನ ಭಿಕ್ಷಾಪಾತ್ರವನ್ನು ಎತ್ತಿ ಹಿಡಿದು ಜಹಾದ್ ಜಹಾದ್ ಎಂದು ಕೂಗುತ್ತ ಉತ್ತರಾಭಿಮುಖವಾಗಿ ಹೋಗಬೇಕಾಗಿದೆ (ಕೈಲಾಕ. ೬೮). [←ಪಾರ. ಜಹಾದ್, ಜಿಹಾದ್ ]

**ಜಹಾಪನಾ**, ಜಹಪನಾ (ನಾ). ಚಕ್ರವರ್ತಿ, ಮಹಾಪ್ರಭು ಎಂಬಂತೆ ಸಾರ್ವಭೌಮರನ್ನು ಸಂಬೋಧಿಸುವಾಗ ಬಳಸುವ ಶಬ್ದ : ಜಹಾಪನಾ! [ಮಹಾಸ್ವಾಮಿ!] ಈ ದಾಸಿಯು ಶುಭಸಮಾಚಾರ ವನ್ನು ತಂದು ಹೇಳಿದಳು (ಕಪಾಕುಂ. ೬೯) ; ಹಾಗಲ್ಲ ಜಹಾಪನಾ, ಗುದಾಮಿನ ಕಾಳೆಲ್ಲ ತೀರಬೇಕೊ ಬೇಡವೊ (ಗಾಂಕ. ೦೨೧). **ಜಹಪನಾ :** ಜಹಪನಾ – ಇಂಗ್ರೇಜಿ ಪಿಶಾಚಿಗಳು ಪಹರ್‌ಗಂಜನ್ನು ಲೂಟಿಗೊಳ್ಳುತ್ತಿದ್ದಾರೆ (ಅಣ್ಣಾಪ. ೨೧). [←ಪಾರ. ಹಿಂ. ಜಹಾಂಪನಾಹ್ ]

**ಜಹ್ನುಜಾಂಬು** (ನಾ). ಗಂಗಾನದಿಯ ನೀರು ; ಪವಿತ್ರವಾದ ನೀರು : ಜಹ್ನುಜಾಂಬುಗಳಿಂದಂ ತುಂಬಿ ಸಹಸ್ರ ಕುಂಭದಭಿಷೇಕಮನಾಗಿಪಂ. (ರಾಜಶೇ. ೩-೨೦). [ ಸಂ. (ಜಹ್ನುಜಾ + ಅಂಬು) ]

**ಜಹ್ನುಜಾತೆ** (ನಾ). ಜಹ್ನುಮುನಿಯ ಮಗಳು ; ಜಾಹ್ನವಿ ; ಗಂಗಾ ನದಿ : ಜಹ್ನುಜಾತೆಯನುತ್ತರಿಸಿ, ನಾವೆಯಿಂದಿಳಿದು (ಶ್ರೀ ರಾ ಮಾ. ೧೨೬-೫೦). [ ಸಂ. ಜಹ್ನುಜಾತಾ (ಜಹ್ನು + ಜಾತಾ) ]

**ಜಹ್ನುಜೆ** (ನಾ).=ಜಹ್ನುಜಾತೆ. 'ಜಹ್ನುಜಾಂಬು' ಪರಾ. [ ಸಂ. ಜಹ್ನುಜಾ ]

**ಜಹ್ನುಸುತೆ** (ನಾ). = ಜಹ್ನುಜಾತೆ : ಹೋಮದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನ ಭಟನ (ಕುಮಾ.ಗ. ೯-೨೩). [ ಸಂ. ಜಹ್ನುಸುತಾ (ಜಹ್ನು + ಸುತಾ) ]

**ಜಳ₁** 'ಜಲ₁' ನೋ.

**ಜಳ₂** 'ಜಲ₂' ನೋ.

**ಜಳಂಬ, ಝುಣಂಬ, ಝುಳಂಬ** (ನಾ). ೧. ಮೇಲ್ಮುಸುಕು ; ಹೊದಿಕೆ; ತೆರೆ : "ಮೇಲುಮುಸುಕಿಗೆ ಜಳಂಬವದು" (ಶಬ್ದಮಂ ೬೦); "ಮುಸುಕೆ ಜಳಂಬಂ" (ಕವಿಕಂ. ೧೬೪). ೨. ಬೀಸಣಿಗೆ. 'ಜಳಂಬಾಯ್ತ' ಪರಾ. **ಝುಣಂಬ:** ೧. ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮಂ ಕೊಂಡೊಂದು ಪ್ರತಿಮುಖಮಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝುಣಂಬಮುಮಂ ತೊಟ್ಟು (ವಡ್ಡಾರಾ. ೧೯-೧೨) ; ಜವಳಿ ಝುಣಂಬವಂ ಕೊಡೆಯನನ್ದಳವಂ (ಬೊಂಕಶಾ. ೧೯೩೪, ಹಿರೇಕೆರೂರ್. ೨೦-೨೪ ; ?). **ಝುಳಂಬ :** ೧. "ಝುಳಂಬವೆಂದು ಮೇಲ್ಮುಸುಕು" (ಕಶಸಾ. ೨೦-೩೯೮) ; ಚಿತ್ರದಣ್ಣಂ ಪಳಿಯೆಸೆವ ಝುಳಂಬಂ ಗಜೇನ್ದ್ರಂ ತುರಂಗಂ (ಎಇ. XIII, ೩೩೦-೧೩ ; ೨೭೭) ; ಬಣ್ಣದ ಸೀರೆ ಮೇಘ ವಣ್ಣಗೆಯ ಝುಳಂಬಮೆಂಬಿವಳವಟ್ಟಿರೆ . . . ನಡೆತಂದನಂದು ನವ ಯೌವನನೊರ್ವನಪೂರ್ವ ಚಿತ್ರಿಕಂ (ಮಲ್ಲಿಕಾ. ೫-೨೯); ಪಟಿಯ ಝುಳಂಬ ಮುಜ್ಜಳಿಪ ಮುದ್ರಿಕೆ ಬಣ್ಣದ ಸೀರೆ . . . ತನ್ನೊಳೊಳ್ಪಳವಡೆ ಬಂದಂ (ಲೀಲಾವ. ೯-೫೫) ; ಕಡಲಾಡಿಗೆಗೊಂಡ ಪೊಡವಿವಣ್ಣಂಬರಾಂಬುಜನೇತ್ರ ನಿತ್ತ ಪೀತಾಂಬರದ ಝುಳಂಬವೆಂಬ ಬೆಡಗನಮರ್ಚೆಯುಂ (ರಾಜಶೇ. ೧೨-೩೯ ವ) ; (ತನ್ನ ಕಯ್ಯಾದರ ಝುಳಂಬವನ್ನು ಸುಲಿಯುತ್ತ ಎಯ್ದಿ ಹೋಗಿ) (ಚಿಕ್ಕಅ. ೧೯೦-೦೪). ೨. 'ಝುಳಂಬಾಯ್ತ' ಪರಾ. [ ?./ಮರಾ. ಝುಳಂಬ ]

**ಜಳಂಬಾಯ್ತ, ಝುಳಂಬಾಯತ, ಝುಳಂಬಾಯ್ತ** (ನಾ). ಬೀಸಣಿಗೆ ಬೀಸುವವನು; ಚಾಮರಿಗ: "ಬಿಜ್ಜಣಿಗೆಯವನೇ ಜಳಂಬಾಯ್ತನಕ್ಕುಂ" (ಶಬ್ದಮಂ. ೪೬); "ಜಳಂಬಾಯ್ತ ಬಿಜ್ಜಣಿಗೆವಿಡಿವಾತಂ" (ಕವಿಕಂ. ೧೬೧); ಅರಮನೆಯೊಳಿರಿಸುವುದು ರಾಯ ಕೇಳ್ಕುಲಪರಂಪರೆಯಿಂದೆ ಬಂದ ವಿಶ್ವಸನೀಯರಪ್ಪ ಪಡಿಯರರಂ ಜಳಂಬಾಯ್ತರಂ ಬೆಜ್ಜರಂ ಸಜ್ಜೆವಳರಂ (ಶೀಷರಾ. ೨-೩೨). **ಝುಳಂಬಾಯತ :** ಪಡಿಯುಅರೆಕ್ಕಟಿಗರ ಲೆಕ್ಕಿಗರೆಸೆವ ಝುಳಂಬಾಯತರ . . . ಮಾಸ್ವಾರರ ಸಂದಣಿ ಸಲೆ ಸೊಗಯಿಸಿತು (ಜಯಕಾ. ೦೨-೧೯). **ಝುಳಂಬಾಯ್ತ :** "ಝುಳಂಬಾಯ್ತನೆಂದು ಬಿಜ್ಜಣಿಗೆ ವಿಡಿವಾತಂ" (ಕಶಸಾ. ೧೬-೩೪೨); ಅಬ್ಧಿಯ ಘೂರ್ಣಿಸುವಂತಾಯ್ತರಮನೆಯೊಳಗೆ ಪುಗುವ ಪೊಱಮಡುವ ಝುಳಂಬಾಯ್ತರ ಸೂಟಾಯ್ತರ ಕಲ್ಲಾಯ್ತರಡಂಗಾಯ್ತರಚ್ಚುಳಾಯ್ತರ ರಭಸಂ (ಶಮದ. ೧೯೮ ಪ್ರಯೋ): ತಿಂತಿಣಿಸಿ ತುಟಲ್ಗೆಯ್ವ . . . ಪಡೆವಳರಂ ಘೋಟಾಯ್ತರಂ ಝುಳಂಬಾಯ್ತರಂ ಪಸಾಯ್ತರಂ ಪ್ರೇಮದಿಂದವರವರಂತರವಱಿತು ಮಧುರೋಕ್ತಿಗಳಿಂ ಸಂತಸವಡಿಸುತ್ತ (ಚಿಕವಂ. ೬೪-೯). [ ಜಳಂಬ + – ಆಯ್ತ ]

**ಜಳಕ, ಜಲಕ, ಝುಳಕ₁** (ನಾ). ಮೈತೊಳೆಯುವುದು; ಮಿಹಾಹ; ಸ್ನಾನ: ಜಳಕವನೇ ಮಾಡಿ ಯೋಗ ಕಂಪನಿಕ್ಕಿ ಹೋದಿಹೆನಯ್ಯ (ಸಿದ್ಧವ. ೪೧ ೨೨೦): ಬೆಡಗಡರೆ ಪಾಕಪ್ರಯತ್ನದ ಕಡೆಯೊಳಾ ಜಂಗಮದ ಜಳಕಕೆ ಹಿಡಿದು (ಬಸವು. ೨೪-೬೦) : ಖಳಕುಲೋತ್ತಮನ ಬಾಣಾರುಣಾಂಬುವಿನಿಂದೆ ಜಳಕವಾದುದು ಕುಮಾರನಿಗೆ (ಮೋಹತ. ೩೪-೦೮) ; ಅವರನ್ನು ಜಳಕದ ಮನೆಗೆ ಕರೆದುಕೊಂಡು ಹೋಗ್ತೀಯಾ (ತುಂಗಭ. ೦೦). **ಜಲಕ:** ಪನ್ನೀರಿನಿಂ ಜಲಕವಂ ಮಾಡಿ (ಸೌಗಂಧಿ. ೧೬೬-೪). **ಝುಳಕ₁ :** ಝುಳಕಂ ಝುಳಪಿಸಿದಂ ಜೊಂಗುಳಿ ಬೊಂಬುಳಿಯಾಳಮಾಳಮಂತೆ ಠಮಾಳಂ . . . ಜಟ ಸಂದೇಹಂ (ಶಮದ. ೨೫): ನಿದ್ರೆ ಪಿಂಗಿ ಎಟ್ದು ಝುಳಕ ದೇವತಾರ್ಚನೆ . . . ಜಪತಪ ಸಮಾಧಿಯುಂ ನಿರ್ವರ್ತಿಸಿ (ಧರ್ಮಪ. ೩-೧೨೧ ವ) : ಝು[ಪಾಠಾಂ. ಜ] ಳಕವನುಲೇಪನ ವಿಭೂಷಣ ವಿಳಸದಮೃತಾಹಾರ ಮೊದಲಹ ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಸಾಕ್ಷಿ ಭಾ. ೩೨-೧೫) ; ಝುಳಕಕ್ಕೆಂದು ಇವರು ಬಚ್ಚಲ ಮನೆಗೆ ಹೋದಾಗ (ಮೂರುದಾ. ೮೩). [ ದೇ.? ತಮಿ. ಚಲಕ, ಚಲಕ್ಕ ; ತೆಲು. ಜಲಕ, ಜಲ್ಕ ]

**ಜಳಕಂ** (ಅ). ಬೇಗನೆ; ಕೂಡಲೆ: "ಜಳಕಂ ಸುಶೀಘ್ರದಲ್ಲಿ" (ಕರ್ಣಾನಿ.೯೦). 'ಜಳಕನೆ' ಪರಾ. [ ? ]

**ಜಳಕಂಗೈ** (ಕ್ರಿ). ಸ್ನಾನ ಮಾಡು: ಜಳಕಂಗೆಯ್ದುಂಡುಟ್ಟುಂ ಬಳಿಕಂ ಕದನಕ್ಕೆ ಖಡ್ಗಫಲಕಂಗಳನಾವಿಳಮತಿಸಿದ್ಧಂ ಪಿಡಿದುಂ ಗಳಿಲನೆ ನಡೆತಂದಂ (ಹಾ ರಾಸ್ಯ. ೨-೧೦-೨೩): ಸರಯೂತೀರಮಂ ಸಾರ್ದು ಜಳಕಂಗೈದು (ರಾಮಾಶ್ವ. ೨೬-೪). [ ಜಳಕ + ಕೈ₁ (<ಕೆಯ್₁) ]

**ಜಳಕಂಬೊಗಿಸು** (ಕ್ರಿ). ಸ್ನಾನವಮಾಡಿಸು ; ಮಿಹಾಯಿಸು : ಸುರಲತೆಗೆ ಸುರನಾರಿಯರ್ ಸುರಭಿಪಯಮಂ ಸುರಿವಂತೆ ಸುರಭಿಸಲಿಲದಿಂ ಜಳಕಂ ಬೊಗಿಸಿ (ವೃಷವಿ. ೫-೧೫ ವ). [ ಜಳಕಂಬೊಗು + – ಇಸು₃ ]

**ಜಳಕಂಬೊಗು, ಝುಳಕಂಬೊಗು** (ಕ್ರಿ). ಮಿಹಾಯು; ಸ್ನಾನ ಮಾಡು : ಚೇರಮಮಹೇಶ್ವರಂ ಜಳಕಂಬೊಗಲ್ಕೆ ತೈಲಾಭ್ಯಂಗನಂ ಮಾಡಿಕೊಳುತಿರ್ದ ಕಾಲದೊಳು (ಚೇರಮ. ೧೦-೩೧) ; ಪರಿಮಳೋದಕದಿಂ ಜಳಕಂಬೊಕ್ಕು ದಣಂಬಮನುಟ್ಟು (ವೃಷವಿ. ೯-೬೦ ವ). **ಝುಳಕಂಬೊಗು :** ಝುಳಕಂ ಬೊಕ್ಕಂ (=ಮಜ್ಜನವಿಡಿದಂ) (ಶಮದ. ನ. ೩೫ ಅಡಿಟಿ). [ ಜಳಕ + ಪೊಗು ]

**ಜಳಕನೆ** 'ಜಲಕ್ಕನೆ' ನೋ.

**ಜಳಕಾಕ** 'ಜಲಕಾಕ' ನೋ.

**ಜಳಕಿಸು** (ಕ್ರಿ). ಹಿಮ್ಮೆಟ್ಟಿಸು : ಧುರದೊಳರಿಭೂಭುಜರನಂಜಿಸುವ ನಡುಗಿಸುವ ಕೊರಗಿಸುವ ಕೋಡಿಸುವ ಬಳುಕಿಸುವ ಜಳಕಿಸುವ [ಪಾಠಾಂ. ಬಾಡಿಸುವ ಬಳುಕಿಸುವ] ಬಿರುದಂಕಮಲ್ಲ ನೀ ನಡುಗಲೇತಕ್ಕೆ (ಹಡಕಾ. ೬-೫೪). [ಜಳಕು + – ಇಸು₃ ]

**ಜಳಕು, ಜಳುಕಂ** (ಕ್ರಿ). ೧. "ಬಳುಕಂ ; ಕಂಪಿಸು" (ಲೋಕಗೀ. ಕೋಶ) : ಕಂಪೀಲಿ ಚೆಲುವೇರ ಪಂಚಸರ ಕೊಪ್ಪೂರ ಒಂಕಿ ಭಾರಕ ಜಳಕೂರ (ಲೋಕಗೀ. ೧೨). ೨. ಹಿಂಜರಿ ; ಹಿಂದೆಗೆ ; ಹಿಮ್ಮೆಟ್ಟು : 'ಜಳಕಿಸು' ಪರಾ: ಜಳುಕು: ೩. ಎಸೆ ; ಬಿಸುಡು: ಅಳುಕಾದೆ ಬಳುಕಾದೆ ಕಳುಕಾದೆ ಮನದೊಳು ಅಳಿನೀಲಕುಂತಳೆವೃರಿಯೋಳ್ ಜಳುಕಾದೆ ತಳುಕಾದೆ ವಳಕೀಸಿ ಬೆದರಾದೆ ದಳನೇತ್ರ ಹರುಷಾದಿ ಪೊರಟು (ಹಮಕ. ೬೦): ಭರದಿ ಕೊಡಗಳ ಜಳುಕಿ ಧರೆಯಲಿ ಕರೆದು ಬಸವನ ಎಲ್ಲ ಬಿಸುಡುಲಿ ಧರೆಗೆ ಬೀಳದೆ ಒಡೆಯದಿರ್ದಡೆ ನೋಡು ಪರಿಕಿಸುತ (ಶರಲೀ. ೨೩೩-೩). 'ಜಳಿಕ' ಪರಾ. [ ? ]

**ಜಳಕೇಳಿ** 'ಜಲಕೇಳಿ' ನೋ.

**ಜಳಕೇಳಿಗೈ** (ಕ್ರಿ). ನೀರಾಟವಾಡು: ಜಳಕೇಳಿಗೈವ ಪನ್ನಗವಿಳಾಸಿನೀಜನಂ (ವೃಷವಿ. ೪-೬೦). [ ಜಳಕೇಳಿ (=ಜಲಕೇಳಿ) + ಕೈ₁ (<ಕೆಯ್₁) ]

**ಜಳಕ್ಕನೆ** 'ಜಲಕ್ಕನೆ' ನೋ.

**ಜಳಕ್ರೀಡೆ** 'ಜಲಕ್ರೀಡೆ' ನೋ.

**ಜಳಖಾತಿಕೆ** 'ಜಲಖಾತಿಕೆ' ನೋ.

**ಜಳಗುಡಿ** (ನಾ). ಒಂದು ಬಗೆಯ ಧಾರಾಗೃಹ; ಕಾರಂಜಿಮನೆ: ಬಾಣಸಿನ ಗುಣನೆಯ ಮಜ್ಜನದ ದೇಹಾರದ ಬೆಂಚೆಯ ಕೊಂಚೆಯದ ಕೊರವದ ಕೊಟ್ಟಗೆಯ ಗುಡಿಯ ಜಳಗುಡಿಯ ಗೊಲ್ಲಣಿಗೆಯ ಮಂಡವಿಗೆಯ ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ). [ ಜಳ₂ (=ಜಲ₂) + ಗುಡಿ₃ ]

**ಜಳಚರ** 'ಜಲಚರ' ನೋ.

**ಜಳಜ** 'ಜಲಜ' ನೋ.

**ಜಳಜಂತ್ರ** 'ಜಲಜಂತ್ರ' ನೋ.

**ಜಳಜದಳ** 'ಜಲಜದಲ' ನೋ.

**ಜಳಜದಳಾಕ್ಷಿ** (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು: ಜಳಜದಳಾಕ್ಷಿಯ ಕಣ್ಮಲರಂದೆಂ ಪೊಟೆಜಳಮಿಂಗಳ ಪೊಣರ್ಗಳ ಚಂದಂ (ಸುಕುಮಾ. ೩-೩೧). [ ಸಂ. ಜಲಜದಲಾಕ್ಷೀ (ಜಲಜದಲ + ಅಕ್ಷಿ + –) ]

**ಜಳಜಭವ** 'ಜಲಜಭವ' ನೋ.

**ಜಳಜಭವಾಂಡ** (ನಾ). ಬ್ರಹ್ಮಾಂಡ: ಜಳಜಭವಾಂಡಂ ಜಂಬೂಫಳರಸದಿಂ ತೀವಿತೆಂಬಿನಂ ಜಗಮಂ . . . ಪರ್ವಿದುದು ಸಾಂದ್ರಸಂಧ್ಯಾರಾಗಂ (ಶಾಂತಿಪು. ೯೬೮). [ ಜಳಜಭವ ( = ಜಲಜಭವ) + ಅಂಡ₂ ]

**ಜಳಜಸಂಭವ** 'ಜಲಜಸಂಭವ' ನೋ.

**ಜಳಜಸಂಭವಗಣ** (ನಾ). [ಛಂದ] ಅಂಶಗಣಗಳಲ್ಲಿ ಒಂದು; ಬ್ರಹ್ಮಗಣ: ಜಳಜಸಂಭವಗಣಮಕ್ಕೆ ಮೊದಲೊಳೆ '. . . ನಡುವಣಕ್ಕರಕೆ ಸಖೀ (ಛಂದೋಂಬು. ೩-೨೪೪). [ ಜಳಜಸಂಭವ ( = ಜಲಜಸಂಭವ) + ಗಣ ]

**ಜಳಜಸಖ** (ನಾ). ಕಮಲದ ಗೆಳೆಯ; ಸೂರ್ಯ: ಜಳಜಸಖನನಿಲಸಖನೆಂದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾನಳರೇವೋ ಸಂತವಿರ್ಪರೆ ಘಳಿಲನೆ ನಿಂದುರಿದು ಹೋಗರೇ ಬೇಸಗೆಯೊಳ್ (ಗಿರಿಕ. ೯-೨೭); ತರುಗಳಲ್ಲಿ ಹಯಖುರಹತಿಯಿಂದಲುರ್ದೆಳ್ದ ಧೂಳಿ ಪರಿಣತ ಜಳಜಸಖಾಭಂ ಪತಂಗತತಿವೊಲ್ ಬೀಳ್ಗುಂ (ಜಾತುಂತ. ೧೭-೩೨). [ ಜಳಜ ( = ಜಲಜ) + ಸಖ ]

**ಜಳಜಳಿಸು** 'ಜಲಜಲಿಸು' ನೋ.

**ಜಳಜಾತ** 'ಜಲಜಾತ' ನೋ.

**ಜಳಜಾತಸಖ** 'ಜಲಜಾತಸಖ' ನೋ.

**ಜಳಜಿನಿ** 'ಜಲಜಿನಿ' ನೋ.

**ಜಳದ** 'ಜಲದ' ನೋ.

**ಜಳದವೃಂದ** (ನಾ). ಮೋಡಗಳ ಸಮೂಹ: ಪೊಳೆವ ಮಿಂಚುಗಳಂತಿರೆ ಕೇತುಗಳ್ ಜಳದವೃಂದದವೋಲಿರೆ ಹಸ್ತಿಗಳ್ (ಕವಿರಾ. ೧-೦೪೩). [ ಜಳದ ( = ಜಲದ) + ವೃಂದ ]

**ಜಳದಾಗಮ** 'ಜಲದಾಗಮ' ನೋ.

**ಜಳದಾಧ್ವ** 'ಜಲದಾಧ್ವ' ನೋ.

**ಜಳದಾನ** 'ಜಲದಾನ' ನೋ.

**ಜಳದಾನಕ್ರಿಯೆ** 'ಜಲದಾನಕ್ರಿಯೆ' ನೋ.

**ಜಳದುರ್ಗ** 'ಜಲದುರ್ಗ' ನೋ.

**ಜಳದೆ** (ನಾ). ನೀರಿನಿಂದ ನೆನೆಸಿದ ಬೀಸಣಿಗೆ; "ಬಾಳದ ಬೇರಿನ ಬೀಸಣಿಕೆ" (ಆದಿಪು. ಕೋಶ): ಕುಳಿರ್ವ ತಿಳಿನೀರನುಡುಗದ ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದುಮ್ಮಳಿಸಿ ಕಳವಳಿಸಿ ವಿರಹಾಕುಳನವೊಲಾ ಖಚರನಿಂತು ತಳವೆಳಗಾದಂ (ಆದಿಪು. ೨-೧೪). [ <ಪ್ರಾ. ಜಲದ್ದಾ. / ಸಂ. ಜಲಾದ್ರಾ ]

**ಜಳದೇವತೆ** 'ಜಲದೇವತೆ' ನೋ.

**ಜಳದೌಘ** (ನಾ). = ಜಳದವೃಂದ: ಜಳದೌಘಶ್ಯಾಮಧೂಮಪ್ರತತಿ ಚಳತಟನ್ಮಾಳಿಕಾಲೋಲ ಕೀಲಾವಳಿ (ಚಂದ್ರಪ್ರ. ೪-೩೯). [ ಜಳದ ( = ಜಲದ) + ಓಘ ]

**ಜಳಧರ** 'ಜಲಧರ' ನೋ.

**ಜಳಧರಪಥ** 'ಜಲಧರಪಥ' ನೋ.

**ಜಳಧರಮಾರ್ಗ** 'ಜಲಧರಮಾರ್ಗ' ನೋ.

**ಜಳಧಾರೆ** 'ಜಲಧಾರೆ' ನೋ.

**ಜಳಧಿ** 'ಜಲಧಿ' ನೋ.

**ಜಳನಿಧಾನ** (ನಾ). ನೀರಿಗೆ ಆಶ್ರಯವಾದುದು; ಕಡಲು; ಸಮುದ್ರ: ವಿನಯಾದಿತ್ಯಾಭಿಧಾನನತ್ಕೀರ್ತಿನಿಧಾನಂ ವಿನತಜನಜಳನಿಧಾನಂ ಜನಿಯಿಸಿದಂ ಶತ್ರುಘಾತಶರಸಂಧಾನಂ (ಎಕ. V, ಬೇಲೂರು. ೧೯೩-೯ : 1161). [ ಜಳ₂ ( = ಜಲ₂) + ನಿಧಾನ]

**ಜಳನಿಧಿ** 'ಜಲನಿಧಿ' ನೋ.

**ಜಳನೀಳಿಕೆ** 'ಜಲನೀಲಿಕೆ' ನೋ.

**ಜಳಪಕ್ಷಿ** 'ಜಲಪಕ್ಷಿ' ನೋ.

**ಜಳಪದ್ಧತಿ** 'ಜಲಪದ್ಧತಿ' ನೋ.

**ಜಳಪಾನ** (ನಾ). ನೀರು ಕುಡಿಯುವುದು: ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ . . . ಭಾವರತಕೇಳೀಸೌಖ್ಯ ಪೀಯೂಷಸಂಕುಳಮಂ ಚಿ ತ್ತ ದಿ ನೀಂ ಟಿ ತದ್ವಿಷಯದಧ್ವನ್ಯರ್ ಮನಂಬೆರ್ಚುವರ್ (ಚಂದ್ರಪ್ರ. ೧-೯೯). [ ಜಳ₂ ( = ಜಲ₂) + ಪಾನ ]

**ಜಳಪಿಸು** 'ಝಳಂಪಿಸು' ನೋ.

**ಜಳಪು** 'ಜಳುಪು' ನೋ.

**ಜಳಪ್ಪ** 'ಝಳಪ್ಪ' ನೋ.

**ಜಳಪ್ರತ್ಯಯ** 'ಜಲಪ್ರತ್ಯಯ' ನೋ.

**ಜಳಪ್ರಸರ** 'ಜಲಪ್ರಸರ' ನೋ.

**ಜಳಪ್ಲವ** (ನಾ). ನೀರಿನ ಪೂರ,–ಪ್ರವಾಹ: ಜಳಪ್ಲವದೊಳ್ ನಸುದೇಂಕು ದೇಕೆ (ವರ್ಧಮಾ. ೮-೯೧); ಅವಳಸಿಯ ಬಾಸಯೆಂಬೀ ನವಯೌವನವನದ ಲತೆಯ ಲಾವಣ್ಯ ಜಳಪ್ಲವಮನೊಳಕೊಳ್ವುದೆಂದಾಳವಾಳಮನೆ ನಿಮ್ನನಾಭಿಮಂಡಲಮೆಸೆಗುಂ (ಮಲ್ಲಿಪು. ೩-೬೨). [ ಜಳ₂ ( = ಜಲ₂) + ಪ್ಲವ ]

**ಜಳಬುದ್ಬುದ** 'ಜಲಬುದ್ಬುದ' ನೋ.

**ಜಳಮಂತ್ರ** 'ಜಲಮಂತ್ರ' ನೋ.

**ಜಳಮನುಷ್ಯ** (ನಾ). ಜಲಪುರುಷ; ನೀರುಮನುಷ್ಯ: ಮನುಜ ಜಳಮನುಷ್ಯಂ ಮಹಾ ಕೂರ್ಮಕೂರ್ಮಂ ವಿಶದಂ ತತ್ಕೀರ್ತಿ ದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದಿ ತೋರ್ಕುಂ (ರಾಜಶೇ. ೩-೩). [ ಜಳ₂ (=ಜಲ₂) + ಮನುಷ್ಯ ]

**ಜಳಮಲ್ಲಿಕೆ** (ನಾ). ಒಂದು ಬಗೆಯ ಗಿಡ: "ಖರಚ್ಛದಾ–ಜ (ಚ?)ಳಮಲ್ಲಿಕೆ" (ಒಷಧಿ. ೪೩). [ ಸಂ. ಜಲಮಲ್ಲಿಕಾ (ಜಲ + ಮಲ್ಲಿಕಾ) ]

**ಜಳಯಂತ್ರ** 'ಜಲಯಂತ್ರ' ನೋ.

**ಜಳಯಾತ್ರೆ** 'ಜಲಯಾತ್ರೆ' ನೋ.

**ಜಳಯುದ್ಧ** 'ಜಲಯುದ್ಧ' ನೋ.

**ಜಳರಂಕು** 'ಜಲರಂಕು' ನೋ.

**ಜಳರಾಶಿ** 'ಜಲರಾಶಿ' ನೋ.

**ಜಳರುಹ** 'ಜಲರುಹ' ನೋ.

**ಜಾರು₂** 'ಜಾಜು₂' ನೋ.

**ಜಾರು₃** (ನಾ). ಕಣ್ಣಿನ ಕೊಳೆ; ಪಿಚ್ಚು; ಪಿಸುರು: ಕಿವಿಯಲ್ಲಿ ಗುಗ್ಗೆ ಕಣ್ಣಿನಲ್ಲಿ ಜಾರು ಮೂಗಿನಲ್ಲಿ ಸುರಿವ ಸಿಬುಳು ಸಿಂಬಳ (ಸಿದ್ಧೇವ. ೫೦-೧೧೨); ಒಂದು ದಿವಸ ಬಿಸಿಲೊಳು ಪೋಗಿ . . . ಮಿಗೆ ಮಲವೃಣ್ಮಲಾ ಕಣ್ಣಿಂದ ಸುರಿವ ಜಾರಿನಿಂದ (ನೇಮಿಷಂ. ೭-೧೦೨). [ ? ]

**ಜಾರುಕವಾಟ** (ನಾ). "ಅಡ್ಡಲಾಗಿ ಸರಿದು ಕಂಡಿಯನ್ನು ಮುಚ್ಚುವ ಅಥವಾ ತೆರೆಯುವ ಕವಾಟ" (Slide-valve. ಇಂಕನಿ): ಉಗಿಯನ್ನು ಕೋಶದೊಳಕ್ಕೆ ಪ್ರವೇಶಿಸಲು ಬಿಡುವ ದ್ವಾರಗಳನ್ನು ಮುಚ್ಚಿ ತೆರೆಯುವ ಕೆಲಸ ಜಾರುಕವಾಟದ್ದಾಗಿರುತ್ತದೆ (ವಿಜ್ಞಾವಿ. ೪೮).
[ ಜಾರು₁ (<ಜಾಜು₁) + ಕವಾಟ ]

**ಜಾರುಗಣ್ಣು** (ನಾ). ಪಿಸುರು ತುಂಬಿರುವ ಕಣ್ಣು; ಕೊಳೆಯಿಂದ ಕೂಡಿರುವ ಕಣ್ಣು; ಪಿಚ್ಚುಗಣ್ಣು: ಕರಕಷ್ಟ ಜಾರುಗಣ್ಣಿಂ ಜಲಜದಳ ವೆಂಬರೆಲೆ ಗುರುವೆ ಕವಿಗಿವಿಗಳು (ಷಠಿಲ. ೩-೫೪); ಕಾವುಗಣ್ಣು, ಉಷ್ಣ ಗಣ್ಣು, ನೀರುಗಣ್ಣು, ಜಾರುಗಣ್ಣು, ಸಂಜೆಗಣ್ಣು (ಹುಳಸ. ೩೨೮).
[ ಜಾರು₃ + ಕಣ್ಣು (<ಕಣ್) ]

**ಜಾರುಗಲ್ಲು** 'ಜಾಜುಂಗಲ್' ನೋ.

**ಜಾರುಗಾಡಿ** (ನಾ). ಹಿಮಾವೃತವಾದ ಸ್ಥಳಗಳಲ್ಲಿ ಜಾರಿಕೊಂಡು ಹೋಗುವ, ಚಕ್ರವಿಲ್ಲದ ಬಂಡಿ; ಜಾರುಬಂಡಿ: ಹಳ್ಳಿಯೊಂದಕ್ಕೆ ಹೋಗುವ ಸಲುವಾಗಿ ಜಾರುಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ದಾರಿ ಅವನು ತಿಳಿಸಿದನು (ಪುನರು. ೫೦೮).
[ ಜಾರು₁ (<ಜಾಜು₁) + ಗಾಡಿ₃ ]

**ಜಾರುಗುಂಡಿ** (ನಾ). ಒಂದು ಬಗೆಯ ಮಕ್ಕಳಾಟ; ಇಳಿಂಕಲ ಮೇಲೆ ತೆವಳುತ್ತಾ ಜಾರುವ ಆಟ: ಕೆರೆಯ ಒಡ್ಡಿನ ಮೇಲೆ ಕುಳಿತು ಜಾರುಗುಂಡಿ ಆಡುವರು (ಅಲ್ಮವಿ. ೧೦೨); ಜಾರುಗುಂಡಿ ಆಡುವ ಮಕ್ಕಳಂತೆ ನುಸುಳಿಕೊಂಡು ಕೆಳಗೆ ಹೋದಂತೆ ಸೊಗಸು ಹೆಚ್ಚು (ಗಾಳಿಪ. ೫೪).
[ ಜಾರು₁ (<ಜಾಜು₁) + ಕುಂಡಿ₁ (<ಕುಂಡೆ₁) ]

**ಜಾರುಗುಪ್ಪೆ** (ನಾ). ೧. ಮಕ್ಕಳ ಆಟಕ್ಕಾಗಿ ಕಟ್ಟಿರುವ ಜಾರುಬಂಡೆ: ಪುಷ್ಪಶರನ ಕಾಂತೆ ನಲಿದಾಡುವ ಜಾರುಗುಪ್ಪೆಯಂದದಲಿ ರಂಜಿಸುತ ಒಪ್ಪುವ ಪೊಜವಾಜ ನೀಜನ ಕರೆ ಬಿಗಿಯಪ್ಪಿಕೊಂಬೆನು (ಕಂನವಿ. ೯-೦೦೪); ಕಾಮನ ಬಿಲ್ಲಿನ ಜಾರುಗುಪ್ಪೆಯೊಳು ಜಾರುತ ಬಂದಳು ಮುಗಿಲಿಂದ (ಅಹಲ್ಯ. ೪-೦೦). ೨. ಜಾರುಬಂಡೆಯ ಆಟ: ಜಾರುಗುಪ್ಪೆ ಆಡುವುದು, ಓಡುವುದು—ಇವೇ ಮುಂತಾದವುಗಳನ್ನು ಮಾಡಲು ಪ್ರೋತ್ಸಾಹಿಸಬೇಕು (ಶಿಕ್ಷಣ. ೧೦೪). [ ಜಾರು₁ (<ಜಾಜು₁) + ಕುಪ್ಪೆ₁ ]

**ಜಾರುಗೊರಡು** (ನಾ). "ಭಾರವಸ್ತುಗಳನ್ನು ಸಾಗಿಸಲು ಉಪಯೋಗಿಸುವ ಉರುಳೆ" (Runner. ಇಂಕನಿ).
[ ಜಾರು₁ (<ಜಾಜು₁) + ಕೊರಡು₁ (<ಕೊಱಡು) ]

**ಜಾರುದಾರಿ** (ನಾ). ಹೆಜ್ಜೆಯ ಹಿಡಿತ ತಪ್ಪಿಸುವ ಹಾದಿ: ಮೊದಲ ಮಳೆಗಾಲ, ಬೆಟ್ಟದ ಜಾರುದಾರಿಯಲ್ಲಿ ಹೋಗುವುದು ಕಷ್ಟ (ರೂಢಿ). ೨. (ಅಲಂ) ಅಪಾಯಗಳನ್ನುಳ್ಳ ವ್ಯವಹಾರಮಾರ್ಗ: ಆದರೆ ಈ ದಾರಿ ಜಾರುದಾರಿ ಎಂಬ ಎಚ್ಚರು ಮಾತ್ರ ಬೇಕು (ತವನಿ. ೨೯).
[ ಜಾರು₁ (<ಜಾಜು₁) + ದಾರಿ ]

**ಜಾರುನಡಿಗೆ** (ನಾ). ಕುದುರೆಯ ಒಂದು ಬಗೆಯ ನಡಿಗೆ,—ಗತಿ: "ಬಿಗುನಡೆ, ಜಾರುನಡಿಗೆ, ನಿಡುನಡಿಕೆ, ವಲ್ಗಿತಂ, ಪ್ಲುತಂ ಈ ನಡಿಕೆಗಳ್ಳೆದೂ ಅಶ್ವಧಾರೆಗಳು" (ಸಿದ್ಧಾಂತಿ. ೩೦೩).
[ ಜಾರು₁ (<ಜಾಜು₁) + ನಡಿಗೆ₁ (<ನಡಗೆ) ].

**ಜಾರುಬಂಡಿ**(ನಾ).=ಜಾರುಗಾಡಿ: ಜಾರುಬಂಡಿಗಳ ಪಂಕ್ತಿ . . . ಗಿಡ್ಡನೆಯ ಫರ್‌ಮರಗಳ ನಡುವೆ ಬಿರುಬಿರನೆ ಉರುಳುತ್ತಿದೆ (ಪುನರು. ೨೨೦).
[ ಜಾರು₁ (<ಜಾಜು₁) + ಬಂಡಿ ]

**ಜಾರುಬಂಡೆ** (ನಾ).=ಜಾರುಗುಪ್ಪೆ ೧: ಜಾರು ಬಂಡೆಯ ಮೇಲೆ ಕುಳಿತು ಜಾರಿದೆ (ನಲಮು. ೬೪-೩). [ ಜಾರು₁ (<ಜಾಜು₁) + ಬಂಡೆ ]

**ಜಾರುಮೆಟ್ಟು** (ನಾ). ಹಿಮದ ಮೇಲೆ ಜಾರಿಕೊಂಡು ಹೋಗುವಾಗ ಹಾಕಿಕೊಳ್ಳುವ ಪಾದರಕ್ಷೆ: ನೀರ್ಗಲ್ಲ ಮೇಲೆ ಜಾರುಮೆಟ್ಟುಗಳಿಲ್ಲದೆ ಓಡಿ ಬಂದು ಎರಡೂ ಕಾಲುಗಳ ಮೇಲೆ ಜಾರಿಕೊಂಡು ಹೋಗು (Slide. ಇಂಕನಿ). [ ಜಾರು₁ (<ಜಾಜು₁) + ಮೆಟ್ಟು₂ ]

**ಜಾರುಹೊಡೆತ** (ನಾ). ೧. ಜಾರಿ ಬೀಳುವ ಏಟು. ೨. "(ಕ್ರಿಕೆಟ್) ಓರೆಯಾಗಿ ತಗಲುವಂತೆ ದಾಂಡನ್ನು ಓಲಿಸಿ ಹೊಡೆದ ಹೊಡೆತ" (Glance. ಇಂಕನಿ). [ ಜಾರು₁ (<ಜಾಜು₁) + ಹೊಡೆತ (<ಪೊಡೆತ) ]

**ಜಾರೂಲ** (ನಾ). ಒಂದು ಬಗೆಯ ಮರ: ಜಾರೂಲ, ಮುತ್ತುಗ, ಗಜನಿಂಬೆಗಳಲ್ಲಿ ಸ್ಪರ್ಧೆ ನಡೆಯುತ್ತಿದೆ (ನಿಬಂಧ. II, ೧೬೫). [ ? ]

**ಜಾರೆ₁** (ನಾ). = ಜಾರವನಿತೆ: "ಪುಂಶ್ಚಲೀ . . . ಸ್ವೈರಿಣೀ, ಪಾಂಸುಲಾ, ಜಾರಾ—ಈ ೯ ಜಾರೆಯ ಪೆಸರು" (ನಾಚಿರಾ. ೧೧೭); ಬೆದೆಗಾರ್ತಿಯು ಪಾಣ್ಬೆಯೆನಲು ಜಾರೆಯರಕ್ಕಂ" (ಕವಿಕಂ. ೧೬೮); ಜಾರೆಯ ಮಗನಂ ಗಡಿಯು ನಾಯಕನಂ ನಂಬಿಸಿ ಕೊಲ್ವವನಂ (ಧರ್ಮಾಮೃ. ೫-೧೨೫); ನಲಿವ ಜಾರೆಯರೊಸರ್ವ ಪಳುಕು ಮೂಡುವ ತಾರೆ . . . ಸಂಜೆಯೊಳೆಸೆದುವು (ಹಡಕಾ.೩-೬೩); ಸೊಗಸು ಬೇಜಿಒಬ್ಬರಲಿ ನೇಹದ ತಗಹು ಬೇಜಿಒಬ್ಬರಲಿ ಸತಿಯರ ವಿಗಡತನವಿದು ಸಹಜ ಜಯವಧು ಜಾರೆ ನೋಡೆಂದ (ಕುಮಾ,ಕ. ೨೪-೨೦). [ ಸಂ. ಜಾರಾ ]

**ಜಾರೆ₂** 'ಝಾರಿ' ನೋ.

**ಜಾರೇಟು** (ನಾ). ೧.=ಜಾರುಹೊಡೆತ. ೨. "ವೇಗವಾದ ಮತ್ತು ಓರೆಯಾದ ಚಲನೆ, ಹೊಡೆತ, ಓರೆಹೊಡೆತ" (Glance. ಇಂಕನಿ).
[ ಜಾರು₂ (<ಜಾಜು₂) + ಏಟು₂ ]

**ಜಾರ್ಜೆಟ್** (ನಾ). ನಯವಾದ ರೇಷ್ಮೆಯ ತೆಳುಬಟ್ಟೆ: ಸ್ಯಾಟೀನ್, ಜಾರ್ಜೆಟ್‌ಗಳನ್ನು ಈ ನೇಯ್ಗೆಯನ್ನುಪಯೋಗಿಸಿ ತಯಾರು ಮಾಡುವರು (ಗೃಹವಿ. ೬೪); ನಿಮ್ಮಣ್ಣಯ್ಯ ನಿನಗೆ ಒಂದು ಮೈಸೂರು ಜಾರ್ಜೆಟ್ ಸೀರೇನೂ ಉಡುಗೊರೆಯಾಗಿ ಕಳುಹಿಸಿದ್ದಾನೆ (ನಿಕಲ. ೭).
[ ←ಇಂ. Georgette ]

**ಜಾರ್ಪುಮರ** (ನಾ). ಒಂದು ಬಗೆಯ ಮರ: (ವೃಕ್ಷಶಿ. ೩೫-೬೯೬).
[ ? + ಮರ₁ ]

**ಜಾಲ₁, ಜಾಳ₂** (ನಾ). ೧. ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣ ಸಣ್ಣ ಕಂಡಿಗಳುಳ್ಳ ಒಂದು ಬಗೆಯ ಸಾಧನ; ಬಲೆ: ಒಂದು ದಿವಸಮಾ ವಿಪಾನ ನೊರ್ವ ಜಾಲಗಾಜಂ ಜಾಲದೊಳ್ಪಿಡಿದು (ಪಂಪಭಾ. ೧-೬೮ ವ); ಮುತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ ಪರಿಣಮಿಸೆ (ರಾಮಾಕ್ವ. ೪೨-೨೫); ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ (ನಾದರೀ. ೮೪-೯). ೨. ಹೆಣೆದು ಮಾಡಿರುವ ಸರಪಳಿಯ ಕವಚ,—ಅಂಗಿ; ಚಿಲಖತ್ತು. ೩. ಕಿಂಡಿ; ಕಿಟಕಿ; ಜಾಲಂದ್ರ; ಗವಾಕ್ಷ. ೪. ಕಪಟ; ಮೋಸ; ಸುಳ್ಳು; ಕಣ್ಕಟ್ಟು: ಬಾಲೆಯರ ಜಾಲಕೊಳಬೀಳದಾ ಜ್ಞಾನಿ ಶೂಲಿಯಂತಕ್ಕು (ಸರ್ವಜ್ಞ. ೪೦೦); ಎಷ್ಟೋ ಸದ್ಗುಣಿಗಳು ಅವರ ಜಾಲದಲ್ಲಿ ಸಿಲುಕಿ ತಮ್ಮ ಶೀಲವನ್ನು ಮಾರಿಕೊಂಡಿರುವರು (ಶ್ರೀಲಮಿ. ೨೦೯). ೫. ಗರ್ವ; ಕೊಬ್ಬು; ಹಮ್ಮು; ಅಹಂಕಾರ. ೬. ಮೊತ್ತ; ರಾಶಿ; ಗುಂಪು: ದರಹಾಸಾವೃತವಾರಿ ಮಜ್ಜನಜಲಂ ದೇಹಪ್ರಭಾ

ಜಾಲಮಂಬರಶೋಭಾವಹಂ (ಅಜಿಪು. ೨-೪೨); ಕರೆಕರೆ ಸಮಸ್ತ ಬೇಂಟೆಯ ಶಬರಜಾಲಮಂ (ಹಪಕಾ. ೫-೧) ; ಗಾನವ ಮಾಡೆ ಅರಸನತಿ ಮೆಚ್ಚಿ ವನಿತಾ ಜಾಲದೊಳು ಕಾಣೆನೆನುತಂ (ಪ್ರಾಥರಾ. ೧೦-೧೩). ೭. ಒಂದು ಬಗೆಯ ಮರ; ಕದಂಬವೃಕ್ಷ: ಆಲಂ ಜಾಲ[ಶಾಕಾಂ.ತಿ.ಲಿ]ಬೇಲಂ ಬೆಳಲರಳಿಯರಂ ಕಕ್ಕೆ ಹೂರಂ ಬೆಳಲ್ (ಗಿರಿಕ. ೦-೭೨) ; ನರುಗುಪ್ಪ ನೆಳಲಾಂತ ಜಾಲ ದಿಂದಾಲದಿಂದೆ (ರಾಘಪ. ೧೮-೫೪) ; ಅತ್ತಿಯಾಲವು ಜಾಲ ಹಾಲೆ ತಾಳೆ ಬಾಳೆ . . . ಮುಂತಾದ ಹೆಮ್ಮರಗಳು (ಸೌಗಂಪ. ೨೩೪). ೮. ಹಂಚಿಕೆ ; ಉಪಾಯಂ : ಇದೇ ಸಮಯವೆಂದು ನಾನು ಒಂದು ಹೊಸ ಜಾಲವನ್ನು ಪಸರಿಸಿದ್ದೇನೆ (ಪ್ರಕಾಶ. ೫೧). ೯. (ಜಾಲರಿಯಂತೆ) ಓತ ಪ್ರೋತವಾಗಿರುವುದಂ ; ಹಾಸುಂಹೊಕ್ಕಾಗಿ ಕೂಡಿರುವುದು : ಸತ್ಯವಿ ಗಳಲ್ಲಿ ರುಷಿಗಳಲ್ಲಿ ಪಾತಿವ್ರತಾಂಗನೆಯರಲಿ ವಿಷ್ಣು ಜಾಲನಾಗಿದ್ರ್ (ಲಕ್ಷ್ಮಿಭಾ. ೫-೨-೩೫). ೧೦. ಗೋವುಗಳ ಗುಂಪು. ೧೧. ಮುಚ್ಚಳ ; ಪಟಲ. ೧೨. ಹೂವಿನ ಮೊಗ್ಗು. ೧೩. ಒಡವೆ ; ಆಭರಣ. ೧೪. ಇಂದ್ರಿಯ. ೧೫. ಆಕಾಶ : "ಆಕಾಶಂ ಬಲೆ ಪಟಲಂ ಪೋಕಂ ಶೃಂಗಾರ ಗೋವುಸಭೆಯೇಳಕ್ಕುಂ ತಾಕಿರೆ ಜಾಲಾಹ್ವಯ ಸಲೆ" (ನಾನಾಕಂ. ೭೬); "ಇಂದ್ರಿಯದೊಳಾಗಸದೊಳ್ಬಲೆಯೊಳ್ ಸಮೂಹದೊಳ್ ಸಿಂಗರ ಗೋನಿಕಾಯ ಪಟಲಂಗಳೊಳಿಂತವು ಜಾಲವಾಚಕಂ"(ನಾನಾರ. ೩೫); ೧೬. ಒಂದು ಬಗೆಯ ಕಣ್ಣಿನ ರೋಗ. 'ಜಾಲಪಟಲ' ಪರಾ. ಜಾಳ$_2$: ೧. ಪಾಸಿದ ನಿರ್ಮಳ ಜಾಳಮೆಂದು ಪಾಲ್ದನೆಗಳ ದೆಸೆಗಂ ಸಾರವಂಜಿ ಕೆಲವರಗಿಳಿಗಳ್ (ಪುಷ್ಪಪು. ೨-೦೮); ಅರ್ಧೇಂದು ಸಮ್ಮೇಳಕ್ಕೆ ಬರುವ ತಾರಕೆಯ ಜಾಳಮೆಂಬಂತೆ (ಮೋಹತ. ೨೩-೩೧). ೨. ಮೇಲೆ ಮಣಿ ಪೊಕ್ಕವನ ದೃಢದಲಿ ಜಾಳ ಬಗೆಯಲಿ ನಂಬಿ ಮಣಿವೊಗು ಪಾಲಿಸುವ ತಿರುವೇಂಕಟೇಶನ ಚಕ್ರದುರುಬೆಯನು (ಕೋಗಘು. ೭-೨೩). ೬. ಇಱುಂಕಿ ನಿಱಿಯಂ ಲುಳಿತಾಳಕ ಜಾಳಮುಂ ಕೊಡಂಕೆಗೆ ತೆಗೆದು (ಕಾದಂಪೂ. ೭೧)

[ ಸಂ. ]

**ಜಾಲ$_2$** 'ಜಲ$_3$' ನೋ.

**ಜಾಲಂದರ,** ಜಾಳಂದರ, ಜಾಳಾಂದರ, ಜಾಳಾಂದ್ರ, ಜಾಳಾಂಧರ (ನಾ). ೧. ಬಲೆಯಂತೆ ಕಿಂಡಿಗಳನ್ನು ಉಳ್ಳ ರಚನೆ ; ಕಿಂಡಿಗಳ ಚೌಕಟ್ಟು: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ (ಸೌಗಂಧಿ. ೩೩೯-೭) ; ಕಿಟಕಿಯ ಜಾಲಂದರಗಳ ಮೂಲಕ ಕಾಣುತ್ತಿದ್ದ ಪ್ರದೇಶಗಳಲ್ಲಿ ದೃಷ್ಟಿಯಿಟ್ಟು ಸ್ವಲ್ಪಕಾಲ ತನ್ನಲ್ಲೇ ಲೋಚನೆ ಮಾಡುತ್ತಾ ಕುಳಿತಿದ್ದಳು (ಭಾರವೀ. ೩೦). **ಜಾಳಂದರ:** ೧. ಜಾಳಂದರದ ಬಾಗಿಲುಗಳಿಂದ ಬರುವ ಕೆಂಪಿನ ರತ್ನದ ಬೆಳಕಿಗೆ ಬಿಸಿಲೆಂದು ಕೈಮಱೆಯ ಮಾಡಿಕೊಳುತಲಿದ್ದೆ (ವಕಕಾ. ೫೧). ೨. ಕಿಟಕಿ ; ಗವಾಕ್ಷ : ಕಾಳಮೇಘ ಮಂದಿರದ ಜಾಳಂದರದ ಮನೆಯಲ್ಲಿ ಪೊಬ್ಬ ಸೂಳೆಯ ಬಾಗಿಲಲ್ಲಿ (ಕಲ್ಯಾಶಾಂ. ೦೦೮-೧೬). **ಜಾಳಾಂದರ:** ೨. ಚಮರನಾಱುಸುವ ಕತದಿಂದ ಬಂದು ಜಾಳಾಂದರದ ಪೊಱಗೆ ತನುಲತೆಯನ್ನೆದೆ ತಂಗಾಳಿಗೊಡ್ಡುವ ಕೋಮಲಾಂಗಿಯರನು (ಹಪಕಾ. ೪-೩೯ ಪರಿ) ; ಕರುಮಾಡದಿ ಖಂಡರಿಸಿದ ಜಾಳಾಂದರದೊಳು ರಾಜಾಂಗನೆಯರು ತರಹರಿಸದೆ ಬಂದು ನೋಡಿದರಂದು (ಕುರಾಸಾಂ. ೪೦-೭೩). ೩. ತೂತಂತೂತಾಗುವುದು : ವೀರದಧಿ ಮುಖನುರವನೊಂದಂಬಿಂದ ಜಾಳಾಂದರವ ಮಾಡಿದನು (ಕೌಶಿರಾ. ೩೨-೩೬). **ಜಾಳಾಂದ್ರ:** ೨. "ಜಾಳಾಂದ್ರ (ಜಾಳಂದ್ರ)–ಜಾಲಂಧರ=ತೂತು ಗಳುಳ್ಳ ಕಿಟಕಿ; ಕಿಂಡಿ" (ತದ್ಭಕೋ. ೫೧); ಬಳಸಿಕೊಂಡಿಹ ರತ್ನ ಜಾಳಾಂದ್ರ ಭಿತ್ತಿಯೊಳಳವಟ್ಟು ಮೋಹವ ಬೀರ್ವ ವಿಲಸಿತ ಪ್ರತಿಮೆಗಳಿಂದಾಗ ಸೌಂದರ್ಯನಿಳಯ ರಾಜಿಸಿದುದು (ಕಂನವಿ. ೭-೪೦) ; ಇಂಪುಗರೆವ ಇಂದುವಿನ ಕಿರಣ ಜಾಳಾಂದ್ರದಿಂದ ಸುರಿಯೆ (ಪುಃಖರೂ. ೨೫). ೪. ಒಂದು ದೇಶದ ಹೆಸರು ; ತ್ರಿಗರ್ತ : ಜಾಳಾಂದ್ರ ದೇಶದ ಅರಸು ಆನೆಯನೇಱಿ (ಸರ್ವವ. ೨೦೫-೯೩೦). **ಜಾಳಾಂಧರ:** ೨. ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಪೀಠ ಜಾಳಾಂಧರ, ದಾರವಂದ (ಎಕ. XII, ಚಿಕ್ಕನಾ. ೨೫-೬ ;1312).

[ <ಸಂ. ಜಾಲಂಧರ ]

**ಜಾಲಂದ್ರ,** ಜಾಳಂದ್ರ (ನಾ). = ಜಾಲಂಧ್ರ : ಸುರಿವ ಕಂಬನಿಗಳಲಿ ಬಾಹುಕ ಮಱುಗುತಿರಲಂದು ಮಱೆಯ ಜಾಲಂದ್ರದಲಿ ಕಂಡಳು ತರುಣಿ (ನಳಚ. ೮-೪೯) ; ಈ ದೇವಾಲಯದ ಜಾಲಂದ್ರಕ್ಕೆ ಸೇರಿರುವ ಗೋಡೆಯ ಮೇಲೆ ವಿಷ್ಣುವರ್ಧನನ ದರ್ಬಾರನ್ನು ಕೆತ್ತಿದೆ (ಭಾರರ. ೫೦೪). ಇವುಗಳ ಮೇಲೆ ದೊಡ್ಡ ವಿಗ್ರಹಗಳೂ ಜಾಲಂದ್ರಗಳೂ ಇವೆ (ಹೊಯ್ಸವಾ. ೧೬). ಜಾಳಂಧ್ರ. 'ಜಾಳಂದ್ರಗೆಯ್' ಪರಾ. [<ಸಂ. ಜಾಲಂಧ್ರ]

**ಜಾಲಂಧರ,** ಜಾಳಂಧರ (ನಾ). ೧.=ಜಾಲಂಧ್ರ. ೨. ಒಂದು ದೇಶದ ಹೆಸರು ; ಭರತಖಂಡದ ವಾಯುವ್ಯ ಪ್ರಾಂತ ; ತ್ರಿಗರ್ತದೇಶ. ೩. ತ್ರಿಗರ್ತದೇಶಕ್ಕೆ ಸಂಬಂಧಿಸಿದುದು. ೪. [ಯೋಗ] ಒಂದು ಬಗೆಯ ಬಂಧ . 'ಜಾಲಂಧರಬಂಧ' ಪರಾ. **ಜಾಳಂಧರ :** ೩. ಕಾಂಬೋಜ ಜಾಳಂಧರು ತುರಗಂ ಮೂಡಣ ಕೊಂಗ ಕೋಶಲ ವರಾಳಂ ಬರ್ಬರಂ (ಅಶ್ವಶಾ. ೬-೭೭). [ ಸಂ. ]

**ಜಾಲಂಧರಬಂಧ** (ನಾ). [ಯೋಗ] ಹಠಯೋಗದ ಒಂದು ಬಂಧ: ಕಂಠಸ್ಥಾನದ ಬಂಧಗಳ ಸಂಕೋಚವನೆಸಗಿ ತನ್ನ ಚುಬುಕವನಿಳುಹಿ ಹೃದಯ ತಾಣದೊಳಗಿಟ್ಟು ಚಲಿಸದಿರಲು ಜಾಲಂಧರಬಂಧ (ಶೈವಲ್ಕ. ೫-೧೫-೩) ; ಆದರೆ ಪೂರಕವಾದ ನಂತರ ಜಾಲಂಧರಬಂಧವನ್ನೂ ಮಾಡಬೇಕು (ಭಾರದ. ೧೬೧). [ ಜಾಲಂಧರ + ಬಂಧ ]

**ಜಾಲಂಧ್ರ** (ನಾ). ಬಲೆಯಂತೆ ಕಂಡಿಗಳನ್ನು ಒಳಗೊಂಡಿರುವ ಕಿಟಕಿ,- ಗವಾಕ್ಷ : "ಜಾಲಂಧ್ರಂ ಬೆಳಕಿಂಡಿ" (ಕಾಶಕ್ಕ. ೧೪೬) : ನೋಡುತಿರ್ದರು ಪುರಜನರು ನೆಲೆಮಾಡದುಪ್ಪರಿಗೆಯಲಿ ಮಿಗೆ ಕರುಮಾಡದೆಡೆಯಲಿ ಸೌಧಗಳ ಜಾಲಂಧ್ರಶಿಖರದಲಿ (ನಳಚ. ೯-೬೧) . [ ಸಂ. ]

**ಜಾಲಕ,** ಜಾಳಕ (ನಾ). ೧. ಬಲೆ ; ಹೆಣಿಕೆ : ಬಿಸಿಲೆಲ್ಲಂ ಬಿಸನಾಳಜಾಲಕದಿನಾಗಳ್ಕೂಡೆ ಪೀತರ್ಂದುದು (ಕಾದಂಉ. ೧೦೩) ; ಕುರುಡು ನಂಬುಗೆಯ ಕುರುಡುವಿಚಾರದ ಜಾಲಕಗಳ ನೀಗಿ (ಚಿಂತನ. ೫೭-೧). ೨. ಕಿಟಕಿ ; ಗವಾಕ್ಷ; ಕಂಡಿ : ಕನಕಹರ್ಮ್ಯಂಗಳೆಡೆಯೊಳಾ ಲೋಕಿಪರು ಕೆಲರು ಜಾಲಕದೆಡೆಗಳೊಳು ಕೆಲರು (ಭಾವಚಂ. ೮-೧೫). ೩. ಜೇಡನ ಬಲೆ. ೪. ಮೊಗ್ಗು. ೫. ಗುಂಪು; ಸಮೂಹ: ವಿಚಕಿಲ ನಲಿನೀಜಾಲಕಂ ಜಾಲಕಂ (ಅನಂಪು. ೮-೨೮). **ಜಾಳಕ :** ೫. ಅಹಿತೋದ್ಯದ್ಭಳ ಜಾಳಕಂ ಕದನದೊಳ್ ಮಾಱಾನ್ತು ತಾಗಲ್ ಮಹಾಮಹಿಮಂ ಸೂಲಿಗೆಗೊಣ್ಡು (ಎಇ. XX, ೧೨-೧೧ : 1167) ; ಅರ್ಚಿಸಿದಂ ಭೂಪಾಳಂ ನಿರ್ಭರಭಕ್ತಿಯ ಜಾಳಕಮನೆ ಮೆಯ್ಯೊಳೊಗೆದ ರೋಮಾಂಚಂಗಳ್ (ಮಲ್ಲಿಪು. ೮-೫). ೨, ೫ : ಎಸೆಯಲ್ ಜಾಳಕ ಜಾಳಕಂ ದೃಢಕವಾಟಂ ದ್ವಾರಶಾಖಾಳಿ ಬಾಣಸು . . . ಮಾಡಿಸಿದನೀ ಬಲ್ಲಾಳ ಭೂಪಾಳಕಂ (ಎಕ . V, ಬೇಲೂರು. ೭೨-೨೭೭ : 1186). ೬. ಒಂದು ಬಗೆಯ ಶಿರೋ ಭೂಷಣ. ೭. ಮೋಸ ; ವಂಚನೆ ; ಮಾಯಾವಿತನ. ೨, ೫, ೬, ೭ : ಜಾಳಕದರ್ಶನ ವಧುಗಳ ಜಾಳಕಮಂ ನೋಡಿ ನಡೆಯೆ ಮುಂದೊಂದೆಡೆ ಯೊಳ್ ಜಾಳಕ ಜನದೊಳ್ಪಣ್ಗಳ ಜಾಳಕಮಂ ನೋಡಿನೋಡಿ ನಡೆದಂ ಭೂಪಂ (ಹಮ್ಮಿರ. ೨-೯೦). ೮. ಅಂಕುರ : ಅನ್ಯೋನ್ಯ ಪ್ರೀತಿ ಬೀಜದಿಂ ಜನಿಸಿದ ನಿರ್ಭರಸ್ವೇದಸಲಿಲಸೇಚನದಿಂ ನಯಂಬಡೆದ ಪುಳಕಜಾಳದಿಂ ಜಾಳಕಮನಪ್ಪುಕೆಯ್ದು (ಜಗವಿ. ೨-೫೨ ವ). ೯. ಬಲೆಯಲ್ಲಿ ಸಿಕ್ಕಿಕೊಂಡ ವನು: ಅಲ್ಲಿ ರವಿ ನಿತ್ಯದೊಳ್ ಜಾಲಕನು ಗಿಡಮರಗಳೆಲ್ಲ ಮಂಜಿನ ಮೊತ್ತಗಳು (ತುರಂಗ. ೯೫-೨). [ ಸಂ. ]

**ಜಾಲಕಾಜ** 'ಜಾಲಗಾಜ' ನೋ.

**ಜಾಲಗಟ್ಟ** (ನಾ). ಒಂದು ಪ್ರದೇಶದ ಹೆಸರು: ಆಗ್ನೇಯಕ್ಕೆ ಕಲ್ಲವುಂಜಗೆ ತೆಂಕಲು ಲಿಂಗದ ಕಲ್ಲು ನೈರಿತ್ಯಕ್ಕೆ ಕಲ್ಲಗುತ್ತಿ ಪಡುವ ಜಾಲಗಟ್ಟದ ಕೆಲೆಯೋ ಶೀವೆ (ಕಇ. I, ೧೭–೪೨; 1065). [ ಜಾಲ$_0$ + ಗಟ್ಟ$_1$ ]

**ಜಾಲಗಾತಿ** 'ಜಾಲಗಾರ್ತಿ' ನೋ.

**ಜಾಲಗಾರ$_1$** 'ಜಲಗಾರ$_2$' ನೋ.

**ಜಾಲಗಾರ$_2$** 'ಜಾಲಗಾಜ' ನೋ.

**ಜಾಲಗಾರನಹಕ್ಕಿ** (ನಾ). ಒಂದು ಬಗೆಯ ಹಕ್ಕಿ; ಬಿಳಿಯ ಬಣ್ಣದ ಎದೆರೋಮವುಳ್ಳ ಮೀಂಗುಲಿಗಹಕ್ಕಿ; ಮೀಂಚುಳ್ಳಿ : (ಕ). [ ಜಾಲಗಾರ$_2$ (<ಜಾಲಗಾಜ) + ಹಕ್ಕಿ$_1$ (<ಪಕ್ಕಿ$_1$) ]

**ಜಾಲಗಾರ್ತಿ**, ಜಾಲಗಾತಿ (ನಾ). ೧. ಬೆಸ್ತರ ಜಾತಿಯ ಹೆಂಗಸು; ಅಂಬಿಗಿತ್ತಿ; ಮೀನುಗಾರ್ತಿ: ಒಗೆದಂ ವ್ಯಾಸಂ ಗಡ ಜಡೆಗಳ್ವೆರಸು' ಜಾ ಲ ಗಾ ತಿ [ಪಾಠಾಂ. ಆ್ತಿ]ಯ ಬಸಿಱೊಳ್ (ಸಮಭ. ೧೧–೭೨೦): ಸಮಾಸ ಲಕ್ಷಣಕ್ಕೆ – ಜಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). **ಜಾಲಗಾತಿ:** ೨. ಮಾಟಗಾತಿ; ಮಾಯ, ಮಂತ್ರ ಮಾಡುವ ಹೆಂಗಸು: (ಕ). [ ಜಾಲಗಾಜ + – ತಿ$_1$(< – ಇತ್ತಿ) ]

**ಜಾಲಗಾಜ**, ಜಲಗರ$_2$, ಜಲಗಾರ$_1$, ಜಲಗಾಜ, ಜಾಲಕಾಜ, ಜಾಲಗಾರ$_2$, ಜಾಲರ (ನಾ). ೧. ಮೀನು ಹಿಡಿಯುವ ವೃತ್ತಿಯನ್ನು ಅವಲಂಬಿಸಿರುವವನು; ಬೆಸ್ತ; ಅಂಬಿಗ: "ಕೈವರ್ತಃ, ದಾಶಃ, ಧೀವರಃ ಈ ಮೂರು ಜಾಲಗಾಜನ ಪೆಸರು" (ನಾಚಿರಾ. ೦೦೦): ಆ ಮೀನನೊರ್ವಂ ಜಾಲಗಾಜಂ ಜಾಲದೊಳ್ ಪಿಡಿದು (ಶಂಕಥಾ. ೦–೬೪ ವ); ಅಲ್ಲಿಗೊಂದು ದಿವಸಂ ಜಾಲಗಾಜರ್ ಬಂದು . . . ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವ ಮೆಂದು (ಶಂಪಕಂ. ೧೫೫–೦೯); ಮುಂದೊಪ್ಪುತಿಹ ಮಲ್ಲ ಜಾಲಗಱರ ಗೃಹ ಚೆಂದದಿಂದೊಪ್ಪುದುವಾಗ (ಕಂಸವಿ. ೬–೫೪). **ಜಲಗರ$_2$:** ೧. ಝಷ ನುಂಗಲದನು ಜಲಗರನು ತಂದಿತ್ತಡೆ (ನವಪೂ. ೧೨–೩೦); P ಇದಂ ಛಂದಸ್ಸಿಗಾಗಿ ಬಳಸಿಕೊಂಡ ರೂಪವಿರಬಹುದು. **ಜಲಗಾರ$_1$:** ಜಲಗಾರರು ಮೀನು ಹಿಡಿಯುತ್ತಿದ್ದರು (ಪಾಲಿಕ್. ೩೬೦). **ಜಲಗಾಜ:** ೧. ಮಾಣಿಕ ಮೆಯ್ವಣ್ಣದ ಛಾಯಮೀನ ಕಂ ಡಾ ಣಿ ಕಾ ಜ ಕೆ ಜಲಗಾಜ ಕ್ಷೋ ಣೀ ಶ್ವ ರ ನಾ ಸ್ಥಾ ನ ಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ಮೋಹತ. ೧೦–೩೪): ವರನಾವೆಯಲಿ ಜನ ದಾಟಿಪ ಜಲಗಾಜರಿರವ ನಾನೇನ ಬ ಣ್ಣಿ ಸು ವೆ (ಕಂಸವಿ. ೫–೫೯). **ಜಾಲಕಾಜ:** ೧. ಕೈವರ್ತಕನ ಮನೆಗೆ ಬಂದಂ ಬೇಗಂ ತು ಹಿ ನ ಗಿ ರಿ ನಂ ದ ನಾ ಪ ತಿ . . . ಜಾಲ ಕಾಜನಾಗುತಂ (ಹಾಲಾಸ್ಯ. ೪–೯–೪೪). **ಜಾಲಗಾರ$_2$:** ೧. ಮಲ್ಲರು, ಜಾಲಗಾರರು ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಜ. ೧೫೭). ೨. ಮೋಸಗಾರ; ವಂಚಕ; ಧೂರ್ತ: ನೂಲೆಳೆಯಿಂದ ಕೊರಳನೆ ಕೊಯ್ಯುವ ಜಾಲಗಾರ ಬೇಡ (ಚಿಂತನ. ೩೬.೯); ಕಕ್ಕಿ, ನೀನು ಊರಿಗೆ ಹೋಗದಿದ್ದರೆ ನಾನು ಆ ನನ್ನ ಜಾಲಗಾರ ಅಣ್ಣನ ಸಂಗಡ ಹೊರಟು ಬಿಡುವೆ (ಇಪ್ಪಳ. ೨೦೮). **ಜಾಲರ:** ೧. ವ್ಯಾಧನಂತೆ ಜಾಲರನಂತೆ ಹೇಮಚೋರನಂತೆ (ಸರ್ವವ. ೦೦೯–೫೮೩). [ ಜಾಲ$_1$ + – ಕಾಜ ]

**ಜಾಲತನ** (ನಾ). ಮೋಸ; ವಂಚನೆ; ಕಪಟ: ಅವಳಾ ಜಾಲತನವಾ ನೋಡುವೆನೂ ಜಾಹ್ನವೀಜನಕಾ (ಶ್ರೀಲೈಪಾ. ೧೦೯). [ ಜಾಲ$_1$ + – ತನ ]

**ಜಾಲತೋರು** (ಕ್ರಿ). ಜಾಲವನ್ನು ತೋರಿಸು; ಮಾಯೆಯನ್ನು ತೋರಿಸು (?): ಬಾಲ ನಾನೆಲೆ ನೆಲಜಲದ; ಸಲೆ ಲೀಲೆಯಾಡುವ ಗಗನದಿ ಜಾಲ ತೋರುವೆ; ಅಡಗಿ ಸಾ ರು ವೆ; ಕಾಲವೆಂಬುದನರಿಯನ್ನೆ (ಶಏಪು. ೩೦–೦೨). [ ಜಾಲ$_1$ + ತೋರು (<ತೋಱು) ]

**ಜಾಲದುಪ್ಪ** (ನಾ). ಒಂದು ವಿಧವಾದ ಔಷಧೋಪಯೋಗಿ ದ್ರವ್ಯ: ಕೆಲವು ಜೀನಸಗಳ ಹೆಸರು:– ರೋಭಾನ ಕಾಚು . . . ಬೇರೋಜಾ (ಜಾಲದುಪ್ಪ), ಪತ್ರಿ (ಮುಂಬಪ್ರಾ. ೧೦೦). [ ? ]

**ಜಾಲಪಟಲ** (ನಾ). ಕಣ್ಣಿನಲ್ಲಿರುವ ಒಂದು ಬಗೆಯ ಪೊರೆ: ನಮ್ಮ ಕಣ್ಣಿನ ಹಿಂಭಾಗದಲ್ಲಿ ರೆಟಿನಾ ಅಥವಾ ಜಾಲಪಟಲವೆಂಬ ನರಗಳಿಂದಾದ ಪೊರೆಯಿದೆ (ಭೌತವಿ. ೧೫೩). [ ಜಾಲ$_1$ + ಪಟಲ$_2$ ]

**ಜಾಲಪಾದ** (ನಾ). ೧. ಈಜಲು ಅನುಕೂಲವಾಗಿ ಬೆರಳುಗಳ ನಡುವೆ ತೆಳುವಾದ ಪೊರೆಯು ಅಂಟಿಕೊಂಡಿರುವ ಕಾಲು: ಬಾತುಕೋಳಿ ಯಂತೆಯ ಜಾಲಪಾದಗಳಿವೆ (ಒಂದೇರಾ. ೧೭); ಅದರ ಹಿಂಗಾಲುಗಳಲ್ಲಿ ಜಾಲಪಾದವಿದ್ದರೂ ಮುಂಗಾಲಿನ ಉಗುರುಗಳು ಬೇರೆಯಾಗಿ ಕಾಣಿಸು ತ್ತಿದ್ದುವು (ಪಾಂಶ್ರ. III, ೦೩೪೬). ೨. ಹಂಸಪಕ್ಷಿ. ೩. ಬಾತುಕೋಳಿ. [ ಜಾಲ$_1$ + ಪಾದ ]

**ಜಾಲಪಾದಿ** (ನಾ). "ಜಾಲಪಾದವುಳ್ಳ (ಪಕ್ಷಿ)" (Palmiped. ಇಂಕನಿ). [ ಸಂ. ಜಾಲಪಾದಿನ್ ]

**ಜಾಲಮಂಗಲ** (ನಾ). ಒಂದು ಊರಿನ ಹೆಸರು: ಇಡಿಗೂರ್ವಿಷಯ ಮಧ್ಯವರ್ತಿನ ಜಾಲಮಂಗಲಂ ನಾಮಧೇಯ ಗ್ರಾಮಂ (ಇಕ. XII, ೧೧೬–೭; 813). [ ಜಾಲ$_0$ + ಮಂಗಲ ]

**ಜಾಲರ** 'ಜಾಲಗಾಜ' ನೋ.

**ಜಾಲರಿ** 'ಝಾಲರಿ' ನೋ.

**ಜಾಲರಿತಾಳ** (ನಾ). ಒಂದು ಬಗೆಯ ಕಂಚಿನ ತಾಳ: ಹೋಲಿಯ ರಾತ್ರಿ ಹಿಂದುಸ್ಥಾನಿ ದರವಾನರ ಜಾಲರಿತಾಳದಂತೆ, ಗಾಳಿಯ ಲಯವು ಕ್ರಮವಾಗಿ ದ್ರುತಕ್ಕೆ ಏರುತ್ತ ಬಂತು (ನಿಬಂಧ. II, ೦೮೩). [ ಜಾಲರಿ (<ಝಾಲರಿ) + ತಾಳ$_1$ (= ತಾಲ) ]

**ಜಾಲರಿಬಟ್ಟೆ** (ನಾ). ಜಾಲರಿಯಂತೆ ರಂಧ್ರಗಳನ್ನು ಒಳಗೊಂಡಿರುವ ಬಟ್ಟೆ: (ಟೋಪಿ, ಮುಖಪರದೆ ಮೊದಲಾದುವುಗಳಿಗೆ ಉಪಯೋಗಿಸುವ) ಒಂದು ಬಗೆಯ ಹತ್ತಿಯ ಜಾಲರಿಬಟ್ಟೆ (Leno. ಇಂಕನಿ). [ ಜಾಲರಿ (<ಝಾಲರಿ) + ಬಟ್ಟೆ$_2$ ]

**ಜಾಲರಿಸೌಟು** (ನಾ). ಎಣ್ಣೆ ತುಪ್ಪಗಳಲ್ಲಿ ಕರಿಯಲು ಉಪಯೋಗಿಸುವ ರಂಧ್ರಗಳನ್ನು ಹೊಂದಿರುವ ಸೌಟು: "ಕೆನೆ ಮೊದಲಾದುವುಗಳನ್ನು ಬಾಚಿ ತೆಗೆಯುವ ಸೌಟು; ಗೋರುಸೌಟು, ಜಾಲರಿಸೌಟು" (Skimmer. ಇಂಕನಿ); ಅಕ್ರೂರನು ಹುರಿದ ಬೋಂಡಾಗಳನ್ನು ಜಾಲರಿಸೌಟಿನಲ್ಲಿ ಎತ್ತಿ ಎತ್ತಿ ಹಾಕುತ್ತಾ ಇರುವಾಗ (ಸಾಹೇಬ್. ೪). [ ಜಾಲರಿ (<ಝಾಲರಿ) + ಸೌಟು (<ಸವುಟು) ]

**ಜಾಲವಾತಾಯನ** (ನಾ). ತಂತಿಯ ಬಲೆಯುಳ್ಳ ಕಿಡಿಕೆ,–ಗವಾಕ್ಷ; ಜಾಳಂದರವಿರುವ ಕಿಡಿಕೆ. [ ಜಾಲ$_1$ + ವಾತಾಯನ ]

**ಜಾಲಾಂತರ** (ಗು). "ಕಿಟಕಿಯಿಂದ್ದಂತೆ ಸಣ್ಣ ಸಣ್ಣ ರಂಧ್ರಗಳಿರುವ; ಕಣ್ಣು ಕಣ್ಣಾದ" (Fenestrate. ಇಂಕನಿ). [ ಜಾಲ$_1$ + ಅಂತರ ]

**ಜಾಲಾಡು** (ಕ್ರಿ). ೧. ಒಂದರಿಯಲ್ಲಿ ಶೋಧಿಸು; ಜರಡಿಹಿಡಿ: ಬಾನ ಜಾಲಾಡುತ್ತ ತಾರೆಗಳನೆಳೆವರಿವು (ಮಲೆದೇ. ೪೮–೩). ೨. ಕೊಳೆ ಹೋಗುವಂತೆ ನೀರಿನಲ್ಲಿ ಚೆನ್ನಾಗಿ ಅಲ್ಲಾಡಿಸು; ಅಲುಬು: ಗದ್ದೆ ತೊ ಳೆ ಯು ವು ದ ಕ್ಕೆ ಇಲ್ಲಿ ನೀರಿಲ್ಲ. ಅಲ್ಲೇ ಹೋಗಿ ನದಿಯ ಪ್ರವಾಹದಲ್ಲಿ ಜಾಲಾಡಿಕೊಳ್ಳಿ (ಗರುಡಾ. ೫೩). ೩. ಪರೀಕ್ಷಿಸು; ಒರೆ ಹಚ್ಚು: ಅವನ ಯೋಗ್ಯತೆಯನ್ನು ತಮಗೆ ತೃಪ್ತಿಯಾಗುವಷ್ಟು ಮಟ್ಟಿಗೆ ಜಾಲಾಡಿದರು (ರಾಗಿಡ. ೧೨೦). ೪. ತಪ್ಪನ್ನು ತೋರಿಸಿ ಮೂದಲಿಸು; ತರಾಟೆಗೆ ತೆಗೆದುಕೊಳ್ಳು: ಆಕೆ ಜನ್ಮ ಜಾಲಾಡಿ ಬಿಡ್ತೇನೆ (ಚಂದಕೋ. ೦೨೭). 'ಜಾಲಿಸು' ಪರಾ. [ ಜಾಲ$_1$ + ಆಡು$_1$ ]

**ಜಾಲಾದ** (ನಾ). ಒಂದು ಬಗೆಯ ವನಸ್ಪತಿ: ಜಾಲಾರಿ, ಜಾಲಾದ (ವೃಶಿಗಿ. ೬೦-೧೪೩೬). [ ? ]

**ಜಾಲಾರಿ** (ನಾ).=ಜಾಲಾದ : ಜಾಲಾರಿ, ಜಾಲಾದ (ವೃಶಿಗಿ. ೬೦-೧೪೩೬); ವರ ಪಾರಿಜಾತ ಬಂಧೂಕ ತಾವರೆಯು ಚಂದ ಜಾಲಾರಿ ಇಂದ್ರವಾಣಿಯು ಬಿಲ್ವ (ಹಮಹ. ೬೮). [ ? ]

**ಜಾಲಿ$_1$** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ; ಬೊಬ್ಬುಳಿ ಮರ; ಗೊಬ್ಬುಳಿಮರ: ಜಾಲಿ ಜೇನೊಡವಿಪ್ಪೆ ಪಿಪ್ಪಲ ಮಾಲೆಯುವ ನೋಡಬಲೆ (ತೊರರಾ. ೩-೦-೨೮); ಜಾಲಿಯ ಮರದಂತೆ ಧರೆಯೊಳು ದುರ್ಜನರು (ಪುರಂದ. ೦-೧೧೬-೧): ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯ ಮರವು ನೆರಳಲ್ಲ ಹೆಣ್ಣಿಗೆ ತಾಯಿಯ ಮನೆಯು ಸ್ಥಿರವಲ್ಲ (ಜಗೀಶ. ೮೮); ಜಾಲಿ ಬಿತ್ತಲು ಕಾಲಿಗೆ ಮೂಲ (ಗಾದೆ).

[ ದೇ.೩ ತಮಿ. ಚಾಲಿ ; ತುಳು. ಜಾಲಿ ]

**ಜಾಲಿ$_2$** (ನಾ). ಪಡವಲ ಬಳ್ಳಿ: "ಜ್ಯೋತ್ಸ್ನೀ, ಪಟೋಲಿಕಾ, ಜಾಲೀ-೩ ಪಡವಲದ ಗಿಡದ ಹೆಸರು" (ಸಿದ್ಧಾಂಶಿ. ೧೨೩). [ ಸಂ. ಜಾಲೀ ]

**ಜಾಲಿ$_3$** (ನಾ). ೧. ಮೋಸಗಾರ; ಮಾಯಾವಿ; ವಂಚಕ: ಹಿಸುಣರ ಜಾಲಿಗಳ[ಪಾಠಾಂ. ಚಾಳಿಗಳ, ಜಾಳಿಗರ]ಚದುರೋಕ್ತಿ ನಮಗೇಕೆ (ತೊರರಾ. ೨-೦-೨೬). ೨. ಬೆಸ್ತರವನು; ಮೀನು ಹಿಡಿಯುವವನು; ಬಲೆಗಾರ: "ಜಾಲಿ–ಬಲೆಗಾರನಲ್ಲಿಯೂ . . . ಸೂತಾಖ್ಯ–ಸೂತ ಎಂದಾಗುವುದು" (ನಾನಾರ. ೩೩ ಟೀಕು). [ ಸಂ. ಜಾಲಿನ್ ]

**ಜಾಲಿಕ$_1$, ಜಾಳಿಕ$_1$** (ನಾ). ೧. ಬಲೆ: "ಜಾಲಿಕಂ ವಾಗುರಂ ಬೆಳ್ಳಾರವೆಸಿಕ್ಕು" (ಮಂಗರಾ. ೦೦೨-೩). **ಜಾಳಿಕ$_2$**: ೨. ಕವಚ; ಚಿಲಖಿತ್ತು: "ಜಾಳಿಕಂ ವಾರಿ ವರ್ಮಂ ಕವಚಂ" (ಮಂಗರಾ. ೮೬-೩೦).

[ ಸಂ. ಜಾಲಿಕಾ ]

**ಜಾಲಿಕ$_2$, ಜಾಳಿಕ$_2$** (ನಾ). ೧. ಬಲೆಗಾರ; ಬೆಸ್ತ: "ಜಾಲಿಕಂ ಧೀವರಂ ಕೈವರ್ತನೆಂದೆನಲು ಜಾಲಗಾಱಂ" (ಮಂಗರಾ. ೦೧೧-೩). ೨. ಜೇಡ; ಜೇಡರ ಹುಳು. ೩. ಮಂತ್ರವಾದಿ; ಜಾದೂಗಾರ; ಮಾಯಾವಿ; ಐಂದ್ರಜಾಲಿಕ: "ಜಾಲಿಕನೆನೆ ಕಾಪಟಿಕಂ" (ವಸ್ತುಕೋ. ೩೪-೬೬): "ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ–ಈ ೧೧ ಮಾಯಾವಿ" (ಹಲಾಯು. ೫೮-೧೪೪); ಗಗನತರಂಗಿಣೀ ವಿಭವವುಂ ಸುರಕಾಂತೆಯುಂ ನಿರೀಕ್ಷಿಸಿಲ್ಲಿಗೆ ತರಲಾರ್ಪನೆನ್ನಧಿಕ ವಿದ್ಯೆಯ ನೆಂದೊಡಲ್ಲು ಜಾಲಿಕಂ (ದಶಕು. ೬-೦೩೩). ೪. ಒಂದು ಜಿಲ್ಲೆಯ ಅಥವಾ ಪ್ರಾಂತ್ಯದ ಅಧಿಪತಿ. **ಜಾಳಿಕ$_1$**: ೧. "ಧೀವರ ಜಾಳಿಕದಾಶನಾಪು ಮೀಂಗುಲಿಗಂ" (ವಸ್ತುಕೋ. ೬೬-೮೪). [ಸಂ.]

**ಜಾಲಿಗ** (ನಾ). = ಜೇಡರ ಹುಳು. 'ಜಾಲಿಗಕೀಟಕ' ಪರಾ.

[ <ಸಂ. ಜಾಲಿಕ ]

**ಜಾಲಿಗಕೀಟಕ** (ನಾ). ಜೇಡರ ಹುಳು: ಬಾಲಂ ಬೀಸದು ಸಂತಾಪಾಲಸ ನಾಗಿರ್ಕುಮಿಕ್ಕುಗುಂ ಮೆಯ್ಯುಂ ಕಣ್ಣಾಲಿಗಳಂ ಬಿಟ್ಟಿರ್ಕುಂ ಜಾಲಿಗಕೀಟಕ ಮನಡಸಿ ಮೆಲ್ಲ ತುರಂಗಂ (ಅಶ್ವಶಾ. ೧೧-೩೦). [ ಜಾಲಿಗ + ಕೀಟಕ$_2$ ]

**ಜಾಲಿಗುಱುವ** (ನಾ). ಜಾಲಿಮರದಿಂದ ಕೂಡಿದ ದ್ವೀಪ: ಒಂದು ದಿನ ಕೆರೆಯ ನಡುವಣ ಜಾಲಿಗುಱುವಕ್ಕೆ ಬಂದು ಪದ್ಮಾಸನದಿ ಕುಳ್ಳಿತ್ತು ಶಿವ ಯೋಗದಿಂದಿರಲು (ರಾಘಶ. ೧೫-೨೯). [ ಜಾಲಿ$_1$ + ಕುಱುವ$_1$ ]

**ಜಾಲಿಗೆ** (ನಾ). ಕೋವಿಯನ್ನು ಹಾರಿಸುವಾಗ ಹತ್ತಿಸಲು ಉಪಯೋಗಿಸುವ ಬತ್ತಿ: ಮಾವಿನ ಚಿಗುರೆಂಬ ಜಾಲಿಗೆಯ ಬತ್ತಿಯಂ ಹತ್ತಿಸಿ (ಸೌಗಂಧಿ. ೧೬೬-೦೩): ಈರಣ್ಣ . . . ಜಾಲೀಗೆ ಬತ್ತೀ ಬಲಗೈಲಿ ಹಿಡ್ಕೊಂಡು ಒಟ್ಟಾನೆ ಹೊಡೆದಾನೋ ದೊರೆಮಗಾ (ಹುಟ್ಟಿಹ. ೪೪). 'ಜಾವುಗೆ' ಪರಾ. [ ? ]

**ಜಾಲಿಜಪ್ಪಟೆ** (ನಾ). ಒಂದು ಬಗೆಯ ಮರ: ಅಂಡ್ರಿಕೆ ಹುಲ್ಲು, ಕಡಗೋಲು ಗಿಡ, ಮುಳ್ಳುಮುತ್ತ, ಜಾಲಿಜಪ್ಪಟೆ–ಇಂಥ ನೂರಾರು ಕಾಡು ಜಾತಿಯ ಹುಲ್ಲು ಹೊದರು ಗಿಡಮರ ಬಳ್ಳಿ (ಕೆಲಸು. ೫೩). [ಜಾಲಿ$_1$ + ಜಪ್ಪಟೆ$_0$]

**ಜಾಲಿನಿ, ಜಾಳಿನಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ; ಹೀರೆ: "ಹೀರೆ ಜಾಲಿನಿ" (ವಸ್ತುಕೋ. ೩೬-೨೧). ಜಾಳಿನಿ: "ಹೀರೆ ಮೃಡಂಗಿ ಫಲಿನಿ ಜಾಳಿನಿಯಕ್ಕು" (ಮಂಗರಾ. ೪೪-೪೪). [ ಸಂ. ಜಾಲಿನೀ ]

**ಜಾಲಿಬಂಕೆ** (ನಾ). ಒಂದು ಬಗೆಯ ಮರ: ಜಾಲಿಬಂಕೆ, ಇಪಿಕಾಕುನ್ನಾ (ವೃಶಿಗಿ. ೬೫-೧೩೧೬). [ ? ]

**ಜಾಲಿಮ, ಜಾಲೀಮ, ಜಾಲೀಮು**(ಗು).೧.ಉಗ್ರವಾದ;ದಾರುಣವಾದ; ತೀಕ್ಷ್ಣವಾದ: ಆದರೆ ಆ ಜಾಲಿಮ ವಿಷದಿಂದ ಅವನ ಹಲ್ಲುಗಳು ಕೂಡ ಗಿಟಕಿರಿದಿದ್ದವಾದ್ದರಿಂದ ಆ ಔಷಧವು ಅವನ ಹೊಟ್ಟೆಯಲ್ಲಿ ಹೋಗಲಿಲ್ಲ (ಅಂಬಿಕ. ೧೬೦). **ಜಾಲೀಮ**: ೧. ಮಕ್ಕಾದ ಕಡೆಗೆ ಮುಖಮಾಡಿ, ನಮಾಜು ಬೀಳುವಾಗಲೇ ಜಾಲೀಮ ಪಣವನ್ನು ಪುಕಾರಿಸಿದರು (ದೀಪಹ. II, ೪೦). **ಜಾಲೀಮು**:(ನಾ).೨. ಉಗ್ರವಾದುದು; ದಾರುಣವಾದುದು: ಕೊಟ್ಟ ಮದ್ದು ತುಸು ಜಾಲೀಮು ಮಾತ್ರ ಇತ್ತೆಂದು ಅದರ ಪರಿಣಾಮದಿಂದ ಅವನು ಕಂಡುಕೊಂಡನು (ಕಾಬಲ. ೮೪). [ ←ಅರ. ಮರಾ. ಜಾಲೀಮ್ ]

**ಜಾಲಿಸು, ಜಾಳವಿಸು$_1$, ಜಾಳಿಸು$_2$, ಜಾಳೈಸು** (ಕ್ರಿ). ೧. (ಅಕ್ಕಿ ಮೊದಲಾದವುಗಳಲ್ಲಿ ಕಸಕಡ್ಡಿ ಹೋಗುವಂತೆ) ನೀರಿನಲ್ಲಿ ತೊಳೆ: ವಿವಿದಕ್ಕಿಗಳ ಮಾಡಿ ತೂಗಿ ಜಾಲಿಸಿ (ಗೋಮುಟೀ. ೪-೬೭). ೨. ಕಲಕು; ಅಲ್ಲಾಡಿಸು; ಕ್ಷೋಭೆಗೊಳಿಸು: ಜಗಾ ಜಾಲಿಸುವ ಬಡ್ಡಿ ಮಗು ತೂಗಲಾರಳೊ (ಗಾದೆ). ೩. ಶೋಧಿಸು; ಪರಿಶುದ್ಧಿಗೊಳಿಸು: ಜಾಲಿಸಬೇಕೊ ಜಾಲಸಾಗರನಾಗಿ ಪಾಪಜಾಲಂಗಳ ಕಸ ಪೋಗುವಂತೆ (ವಿಠಾಕ್ಕ. ೦೫೨-೦); ಅದರಲ್ಲಿ ಮನಸ್ಸನ್ನು ಜಾಲಿಸಿ ತೊಳೆದು (ಶಂಯಾತ್ರ. ೬೯). **ಜಾಳವಿಸು$_1$**: ೪. ಮೋಸಮಾಡು; ವಂಚಿಸು. 'ಜಾಳವಣೆ' ಪರಾ. **ಜಾಳಿಸು$_2$**: ೧. ಕಲ್ಮಷವೆಂಬ ಕೌಡಂ ಹಾಱಿಸಿ ಸಮತೆಯೆಂಬ ಸಲಿಲದಲ್ಲಿ ಜಾಳಿಸಿ (ಅವಶಂ. ೨೬೭-೧೨೬೦); ಜಾಲಗಾರನು ಉಸುಕು ಜಾಳಿಸುವ ಹಾಗೆ (ಉಯ್ಯಾಲೆ.೦೧-೯). ೫.ಕೊಡವು; ಒದರು: ಆದ್ರ್ರವಂ ಜಾಳಿಸಿ ಜಾಲವುಂ ಬಿಸಿಲ್ದೊಳಿಕ್ಕುವ . . . ಶಬರರ್ಕಳಿನಿಂತೆಸೆದತ್ತು ಪೆಕ್ಕಣಂ (ಶಾಂತೀಶ್ವ. ೩-೬೪). ೬. ಸೋಲಿಸಂ; ಜಳ್ಳುಮಾಡಂ: "ಜಾಳಿವುದೆಂದು ಸೋಲಿವುದು" (ಕಶಸಾ. ೩೦-೬೫೪): "ಜಾಳಿವುದೆನೆ ಸೋಲಿವುದು" (ಕವಿಕಂ. ೨೪೪); ಜಾಳಿಸಿದನಾ ಕಾಶಿರಾಜನ ಧಾಳಿಯಲಿ (ಕುವ್ಯಾಸ. ೪-೫): ನಿಮ್ಮ ಬಲ ಜಾಳಿಸಲ್ಕೀರ ವೃಷಸೇನ ಬೊಬ್ಬಿರಿದು . . . ನುಡಿದನು (ತುರಂಗ. ೬೭-೧). ೭. ಒಂದರಿಯಾಡು; ಜರಡಿಹಿಡಿ: ಹಾಲಿನ ಹುಡಿಯನ್ನು ನಯವಾಗಿ ಅರೆದು ಸರಿಗೆಯ ಜರಡಿಯಲ್ಲಿ ಎರಡು ಮೂರು ಸಲ ಜಾಳಿಸಬೇಕು (ಅಡಾಶಾ. ೧೧೧). **ಜಾಳೈಸು**: ೮. ತಗ್ಗಿಸು; ಅಧೀನದಲ್ಲಿಡು: ಗಾಳಿ ಬೆಂಬಲವಾಗಲಾರಿಯ ಧಡಾಳವನು ಜಾಳೈಸಬಹುದೆ (ಕುವ್ಯಾಆ. ೩೪-೧೫). [ಜಾಲ$_1$+ –ಇಸು$_3$]

**ಜಾಲೀಮ** 'ಜಾಲಿಮ' ನೋ.

**ಜಾಲೀಮು** 'ಜಾಲಿಮ' ನೋ.

**ಜಾಳೆ$_1$, ಜಾಳ$_2$, ಜಾಳೆ** (ನಾ). ಬೆಂಕಿ; ಉರಿ; ಜ್ವಾಲೆ: "ಜಾಲೆಯುರಿಯೆನಲ್ ಜ್ವಾಲೆಯೊಳು ಸಲೆ ವರ್ತಿಸುಗು" (ಶಬ್ದಮಂ. ೧೨); ಜಾಲೆಯಿಂ ಮರ ಕೆಡುಗು ಮೋಳೆಯಿಂ ಕೆಱೆ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೧೯೫೩); ಶೂಲದ ಪೆಣನುಂ . . . ಜಾಲೆಯ ಬಿಸಿಗಂ ಬೆರ್ಚುತೆ (ಹಾಲಾಸ್ಯ. ೧-೬-೨೩): ಕೂರಂಬಿನ ನನೆಯೊಂದು ಕುತ್ತೆಸಳ ಜಾಲೆಗೆ ಸೀಕರಿವೋಗದೇಂ ಮಾಣ್ಗುಂ (ರಾಮಾಶ್ವ. ೫೬-೧೪). **ಜಾಳ$_2$**. 'ಜಾಳವಿಸು' ಪರಾ. **ಜಾಳೆ**: ವತ್ಸಲೋಪಕ್ಕೆ–ಜ್ವಾಲಾ–ಜಾಳೆ (ಶಮದ. ೨೮೧ ಪ್ರಯೋ).

[ <ಪ್ರಾ. ಜಾಲಾ / ಸಂ. ಜ್ವಾಲಾ ]

**ಜಾಲೆ₂** (ನಾ). ಮಾಟಗಾತಿ ; ಥಳಕುಬೆಳಕಿನಿಂದ ಜನರನ್ನು ವಶಪಡಿಸಿ ಕೊಳ್ಳುವವಳು ; ಧೂರ್ತೆ : ನುಡಿಗಳಂ ನಡೆಗಳಂ ಜಾಲೆಯರ ಕೊನಬು ಗಾಱಿಕೆ ಸುಳುಹು ತಾಪಸರಿಗಂ ಪ್ರಾಣಗುಂದಿರ್ದು (ಕುರಂಗ. ೮೦-೪೦).
[ ಜಾಲ₁ + - ಎ₂ ]

**ಜಾಲೆ₃** (ನಾ). = ಜಾಲ₁. 'ಜಾಲೆಗಾಱ' ಪರಾ. [ ಸಂ. ಜಾಲ ]

**ಜಾಲೆ₄** (ನಾ). ೧. ಒಂದು ಬಣ್ಣ : ಒಂದು ಪೂರ್ವಕ್ಕೆ ಹೊಂಟರೆ, ಮತ್ತೊಂದು ಉತ್ತರಕ್ಕೆ, ಇನ್ನೊಂದು ಮರಳಿ ಮನೆಗೆ ಓಡುವ ಜಾಲೆಯ ಜಾನುವಾರುಗಳು (ದಂಲಸಾ., ೧೮). ೨. ಒಂದು ಬಗೆಯ ಬಣ್ಣದ ಹಸು : ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ ನೆಟ್ಟಕ್ಕೊಂಬಿನ ಕಾರಿ ಜಾಲೆ ದಿಟ್ಟಿಸಿ ನೋಡುವ ಪಸುಗಳು ಎಸೆದುವು ಪಟ್ಟೆಯ ಸೀರೆಯಂದದಲಿ (ಮಾದೇಸಾಂ. ೧-೪೧). 'ಜಾಲೆಯಾಡು' ಪರಾ. ೩. ಒಂದು ಬಗೆಯ ವನಸ್ಪತಿ ; ಶೂಲಿಕೆ : " ಶೂಲಿಕೆಯೆನಲ್ ಜಾಲೆ " (ಮಂಗರಾ. ೪೨-೩೭). ೪. (?) : ಅಲ್ಲದ ನೆಲನು ಬೆಳವುದಕೆ ಹುಲ್ಲಲ್ಲದೆ ಜಾಲೆಯುಂಟೇ ? (ಮೋಕ್ಷಮಾ. ೧೭೩-೬೫೦). [ ? ]

**ಜಾಲೆಗಾಱ** (ನಾ).=ಜಾಲಗಾಱ : ಏಗೆ ಬಸನದಿಂದ ಕೊರೆಕೊಂದು ಗಡಂ ಸಗ್ಗಕ್ಕೆ ಪಾಪಿ ಸಲುವಡೆ ಮತ್ತೀ . . . ಸೊನೆಗಾಱನುಂ ಜಾಲೆ[ಪಾಠಾಂ. ಲ] ಗಾಱನುಂ ಮಾಣ್ದಪರೆ (ಸಮುಪ. ೧೪-೮೭): ಜಾಲೆಗಾಱನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ . . . ಠಕ್ಕನ ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರನು (ಅವಚಂ. ೩೯-೧೨೨): ಮಾಲಿಕ ವ್ಯವಹಾರ ಕಮ್ಮಡಿವಾಳ . . . ತಳವಾಱ ಜಾಲೆಗಾಱ ಕಳಾಕುಶಲ ತಾಂಬೂಲಿಕರ . . . ಆಳಬೇಹುದು ಚದುರ ಕುಶಲರಿಗೆಂದು ವಿಟ ನುಡಿದ (ಜೀವಂಚ. ೧೭-೮೭).
[ ಜಾಲೆ₃ + - ಕಾಱ ]

**ಜಾಲೆಯಾಡು** (ನಾ). ಒಂದು ಬಗೆಯ ಆಡು : ತನ್ನ ಕಟ್ಟಿದ ಗೇಣಂ ಪರದನಂ ಜಾಲೆಯಾಡಂ ಕೊಲ್ವಂತೆ ಪೊರಟ್ಟಿ ಕೊಂದು (ಧರ್ಮಾಮೃ. ೧೨-೮೦) : ಏಳನೆಯ ಭವದೊಳುತ್ಕೃದೇಶದಲ್ಲಿ ಜಾಲೆಯಾಡಾಗಿ ಜನಿಸಿರ್ದ (ಪುಣ್ಯಾಸ್ರ. ೫-೨೯ ವ). [ ಜಾಲೆ₄ + ಆಡು₃ ]

**ಜಾಲ್ಮ** (ಗು). ೧. ಕ್ರೂರವಾದ ; ದಯಾಹೀನ. ೨. ಪಾಮರವಾದ ; ನೀಚವಾದ ; ತುಚ್ಛವಾದ. (ನಾ). ೩. ನೀಚನಾದವನು ; ದುಷ್ಟನಾದವನು: ಎಲೆ ಜಾಲ್ಮ ಎತ್ತ ಪೋದಪೆ (ಕಾಂಥಾ. ೯-೪೭). ೪. ವಿಚಾರ ಮಾಡದೆ ಕಾರ್ಯಮಾಡುವವನು ; ಹಿಂದು ಮುಂದು ನೋಡದೆ ಕೆಲಸ ಮಾಡುವವನು; ದುಡುಕುಗಾರ. ೫. ತಿಳಿಯದವನು; ದಡ್ಡ ; ಮೂಢ : " ವೃಧೇಯಃ, ಬಾಲಿಶಃ, ಬಾಲಃ, ಜಡಃ, ಜಾಲ್ಮಃ . . . ಮಾತೃಶಾಸಿತಃ–ಈ ೧೧ ಅಱಿಯದವಂ" (ಹಲಾಯು. ೫೭-೧೮೧): ಜಡನೊ ಜಾಲ್ಮನೊ ವ್ಯರ್ಥಜನ್ಮನೊ ಕಡುಮರುಳೊ ಕಾಕನೊ ವಲಂ ಬಾಯ್ಬಡಿಕನೊ (ಪ್ರಭ್ವಾಕ. ೭-೨೨). [ ಸಂ. ]

**ಜಾಲ್ಮಜಲ್ಪ** (ನಾ). ದಡ್ಡತನದ ಮಾತು; ಅವಿವೇಕದ ಮಾತು: ಇಂತಹ ಜಾಲ್ಮಜಲ್ಪಗಳನ್ನು ಶ್ರೀಮನ್ಮಹಾರಾಜಾಸ್ಥಾನದಲ್ಲಿ ನೀವು ಪುನಃ ಕೇಳಿಸದಿರಬೇಕು (ಮುಂತ್ರಶ. ೧೧-೧೮)
[ ಜಾಲ್ಮ + ಜಲ್ಪ ]

**ಜಾಲ್ಮತೆ** (ನಾ). ಕ್ರೂರತೆ ; ಕ್ರೌರ್ಯ ; ಹಿಂಸೆ : ಜಾಲ್ಮತೆಗೆ ಜಾಲ್ಮತೆಯ ನೊಡ್ಡಿ ಸೆಣಸುವ ರೂಢ ರಾಜನೀತಿಯನೊಡೆದನೀ ಸಾಹಸಿ (ಅಮಹಂ. ೫೪-೩). [ ಸಂ. ಜಾಲ್ಮತಾ ]

**ಜಾಲ್ವರಿ** (ಕ್ರಿ). ಗುಂಪು ಚೆದರಿಸು (?) : ಪಳ್ಳಿಪುರಗಳ ಪೊಕ್ಕು ಕೊಳ್ಳೆ ಯಾಡಲ್ಕೆ ಬಲ್ಲಿದನು ಅವ ತನ್ನ ಬಲವೆಲ್ಲಗೂಡಿ ತಾಗಿ ಚೂಣಿಯ ಬಲವ ತಟ್ಟಿ ಜಾಲ್ವರಿದು ನೂಕಿ ಬಹುಜನರುಗಳ ಮುಕ್ಕಿರಿಯಲಿಕ್ಕಿದನು (ಕಂಠೀ. ೧೭-೫). [ <ಜಾಲ₁ + ಪರಿ₂ ]

**ಜಾವ₁**, ಜಾಮ₁, ಜಾವು, ಝಾಮ, ಝಾವ (ನಾ). ೧. ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ ; ಏಳೂವರೆ ಗಳಿಗೆ ; ಒಂದಂ ಪ್ರಹರ ; ಮೂರುಗಂಟೆಗಳಷ್ಟು ಕಾಲ : " ಪ್ರಹರಃ, ಯಾಮಃ–ಈ ೨ ಜಾವಂ " (ಹಲಾಯು. ೧೪-೧೦೭) : " ಪ್ರಹರವೆನಲು ಯಾಮವೆನೆ ಜಾವಂ " (ಮಂಗರಾ. ೨೦-೭) : ಬೆಳಗಪ್ಪ ಜಾವದಯ್ಮಲ್ ಕೊಳೆ ಶೀತಕ್ಕಾಱದಳ್ಕಿ (ಕಾವ್ಯಸಾ. ೬೯೪ ಕೂಡ್ರಕ): ಅಂತಾಯಿರುಳ ನಾಲ್ಕು ಜಾವಮುಂ . . . ಕೆಂದಿನೊಳೆ ಬೆಳಗಾಗೆ (ಪಂಪಭಾ. ೩-೮೨ ವ) : ಇರುಳ್ ನಾಲ್ಕುಂ ಜಾವಮುಂ ಮೌಹೂರ್ತಿಕನಂತೆ ಪೊತ್ತಿನಳವಿಯಂ ನೋಡುತ್ತುಂ (ಧರ್ಮಾಮೃ. ೧-೧೬೦) : ಒಂದರೆಗಳಿಗೆಯನೊಂದು ಬರಿಸದಂತೊಂದು ಜಾವವ ಯುಗದಂತೆ . . . ಎಣಿಪಳು (ಹರಿಬ. ೬-೨೭): ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೨. ಜಾವ, ಜಾವದಲ್ಲೂ ಮಾಡುವ ನಗರ ಮೊದಲಾದುವುಗಳ ಕಾವಲು; ಪಹರೆ; ಗಸ್ತು: ಬಲಿದು ಕಾಲ್ಗಾಪಿನಣಿವರಸು ನಿಂದ ಜಾವದ ಮದಗಜಂಗಳುಮಂ (ವರ್ಧಪು. ೯-೫೭ ವ). ೩. ಕಾವಲಿನ ಎಡೆ–ಸ್ಥಾನ ; ಪಹರೆಯವರು ಕಾವಲಿಗಾಗಿ ಇರುವ ನೆಲೆ ; ಕಾವಲುಗಾರರ ಠಾಣೆ: ಅಲ್ಲಲ್ಲಿ ಜಾವ ಮುಕ್ಕಡ(ಗ)ರವಟಿಗೆ ತಳವ(ಱಿಕೆ)ಯ(ಮ)ಕ್ಕೈಕ್ಕೆಯೊಳಂ ಠಾಣಾಂತರವಂ ನಿರವಿಸೆಯುಂ (ಪುಷ್ಪಪು. ೬-೬೯ ವ) : ಹೃದಯಪ್ರಿಯರಂತೊಱಗಿದ ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮಟ್ಟಿದ ಪೊತ್ತು (ಯಶೋಚ. ೨-೨೭). **ಜಾಮ₁** : ೧. ಆ ಪುಲಿಯ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು ಜಾಮದಿನ್ದೊಳಗೆ ಕೊನ್ದಂ (ಎಕ. X, ಮುಳಬಾ. ೧೬೨-೪ : 960) : ಬುಧವಾರ ಮೂರನೆಯ ಜಾಮದಲು ಕಾದಿ (ಎಕ. VIII, ಸೊರಬ.೦೬೭-೯: 1464) ; ರಾತ್ರಿ ಮೊದಲನೆಯ ಜಾವದ ಗಂಟೆ ಆಗತಾನೆ ಹೊಡೆದಿತ್ತು (ಕೃಷ್ಣಕೂ. ೪೯). **ಜಾವು** : ೧. ಕಲ್ಲುಮಂಟಪದ ನೆರಳಿನಲ್ಲಿ ಮಲಗಿದಿರಿ ಒಂದು ಜಾವು (ಹ್ರದಸ. ೬೫-೭). **ಝಾಮ**: ೧. ಬೆಳಗಿನ ಝಾಮಕ್ಕೆ ಬಂದು ಮಲಗಿದೆನಲ್ಲ (ದೇವೀಕಾ. ೪೧). **ಝಾವ** : ೧. ಘಳಿಗೆಯೆಂಟಾಗಲೊಂದು ಝಾವವಹುದು (ವಿವೇಕ. ೩೨೦) : ಎಂಟು ಝಾವಗಳಲ್ಲಿ ಒಮ್ಮೆ ಹರಿಯ ಕೊಂಡಾಡೊ (ವಿದಾಕ್ಕ. ೯೫-೬) : ಒಂದು ಝಾವ ರಾತ್ರಿ ಇದ್ದದ್ದು ಅವಳಿಗೆ ತಿಳಿಯಲಿಲ್ಲ (ಅನಾಥ. ೨೮೮).

**ಜಾವದವರ್**, **ಜಾವದವರು** = ಕಾವಲಿನವರು ; ರಕ್ಷಕರು : ಅಯಾ ವಿಕಸ್ಯ=ಜಾವದವರಿಲ್ಲದೊಂಗೆ (ನೀತಿವಾ. ೧೩-೭):ಕರೆದು ತಂದವೃತ್ತಾನ್ನ ಪೂಡುವರಿರುಳು ಪಗಲದಗಲದೆಯು ಜಾವದವರು ಮಹಾ ಸುವಿಧಾನದಿಂ ಬಿಡದಿರಂಗರಕ್ಷಕರು (ಸಾಳ್ವಭಾ. ೩೩-೧೧೫). **ಜಾವದಾನೆ** = ಕಾವಲಿನ ಕೆಲಸಕ್ಕಾಗಿ ಉಪಯೋಗಿಸಿಕೊಳ್ಳುವ ಆನೆ : ರಾಜಾಂಗಣದ ಬಯಲ ಬಾಳ್ಗಂಬಂಗಳೊಳ್ ಸೆಱಿಗೆಯ್ದಿರ್ದ ಜಾವದಾನೆಗಳ ಮೇಲೆದೆಗೆಡದು (ಚಂದ್ರಪು. ೮-೪೩ ವ). **ಜಾವಮಿರ್** = ಕಾವಲಿರು : ನಿದ್ರಾಭರ ಪರವಶರಾಗಿರೆ ಭೀಮಂ ಜಾವಮಿರ್ದು (ಪಂಪಭಾ. ೩-೧೦ ವ). **ಜಾವಮಿರಿಸು** = ಕಾವಲಿಗೆ ಇರಿಸಂ ; ರಕ್ಷಣೆ ಏರ್ಪಡಿಸು : ಸಾಹಸಭಟರಪ್ಪ ಸುಭಟರ್ಗೆ ನಾಲ್ಸಾಸಿರ ಪೊನ್ನಂ ನುಡಿದು ಜಾವಮಿರಿಸಿ (ಸುಕುಮಾ. ೭-೮ವ).
[ <ಪ್ರಾ. ಜಾವ. / ಸಂ. ಯಾಮ ]

**ಜಾವ₂**(ನಾ). ಒಂದು ಬಗೆಯ ವನಸ್ಪತಿ: ಮಧುಪಿಪ್ಪಲಿ ಮೂಲದ ಭಲ್ಲಾತ ಕದರುಗದ ಜಾವದ ಪುಡಿಯಂ ಕುದಿಯಿಸಿ (ಲೋಕೋಪ. ೯-೦೪೫). [ ? ]

**ಜಾವಕ್** (ಗು). ಹೊರಕ್ಕೆ ಕಳುಹಿಸುವ. 'ಆವಕ್' ಪರಾ.
[ ←ಮರಾ. ಜಾವಕ್ ]

**ಜಾವಕ** (ನಾ). ೧. ಒಂದು ಬಗೆಯ ಧಾನ್ಯ ; ಅಲಸಂದೆ; ತಡಂಗುಣಿ. ೨. ಅರಗು : "ಜಾವಕ–ಯಾವಕ = ಅರಗು " (ಶಬ್ದಕೋ. ೦೫). ಯಾವಕ, ಜಾವಕ (ಶಬ್ದಾನು. ೧೪೧ ಪ್ರಯೋ). [ <ಸಂ. ಯಾವಕ]

**ಜಾವಗಹಳೆ** (ನಾ). ಕಾವಲುಗಾರರು ಊದುವ ಕಹಳೆ; ಪಹರೆಯವರು ಜನರನ್ನು ಎಚ್ಚರಿಸುವುದಕ್ಕಾಗಿ ಊದುವ ಕಹಳೆ: ಹೊಡೆವ ಹೆಬ್ಬರೆ ಜಾವಗಹಳೆ ತಂಬಟೆಗಳ ಕಡುರವವೊಳಬುಗುದಿಗೆಯು ಜಡಿವ ದನಿಗಳಿಂದ (ಕಂಸವಿ. ೧೧-೧೮೦). [ ಜಾವ$_1$ + ಕಹಳೆ ]

**ಜಾವಗುತ್ತಿಗೆ** (ನಾ). ಕಾವಲು ಕಾಯುವ ಗುತ್ತಿಗೆ: ನಿತ್ಯಪೂಜೆಯನು ಮಲ್ಲಯ್ಯಂಗೆ ಮಾಡಿನೋಡುತ್ತ ತೋಟವನು ಕಟಿಯನು ಜಾವಗುತ್ತಿಗೆ ಯನಿತ್ತು ತಾಂ ಹರುಷದಿಂ ಕವಿಲೆಗಳ ಕಜುವ ನೋಡುತ್ತ (ಸಿದ್ಧರಾ. ೩-೧೭); [ ಜಾವ$_1$ + ಗುತ್ತಿಗೆ (<ಗುತ್ತಗೆ) ]

**ಜಾವಟೆ**(ನಾ). ಚಪಲತೆ; ಚಾಪಲ್ಯ (?): ಶೀವಿದರು ಭಂಡಿಯಲಿ ಮುಂದಣ ಜಾ[ಪಾಠಾ. ಜಾ]ವಟೆಯು ಚಪಲರಿಗೆ ಹರಿಯ ನೃಪಾವಳಿಗಳಲ್ಲಲ್ಲಿ ತೆತ್ತರು ಕಂಡ ವಸ್ತುಗಳ (ಕುವ್ಯಾಸ. ೬-೬) : ರಾವುತರು ಸಮತಳಿಸಿ ಮುಗ್ಗಲು ಮಾವುತರು ತರೆದೋರಿತಿತ್ತಲು ಜಾವಟೆಯ ಟಾವಲ್ಲ (ಮೂಲರಾ. ೪-೧೭). [ ? ]

**ಜಾವಡಿ$_1$** 'ಜಾವಳಿ$_1$' ನೋ.

**ಜಾವಡಿ$_2$** (ನಾ). (?) : ಮುಮುಕ್ಷು ಮಧ್ಯದಿ ನಿಂದ ಕಾಲಭ್ರೂವಿನ ತೆರ ಅಮಮ ಶಿವನ ಜಾವಡಿಗಳು ರಮಣೀಯ ಪಂಚಬ್ರಹ್ಮಗಳೆ ಭಿತ್ತಿಗಳಾಗಿ ವಿಮಲವೇದದ ಸಾಲಗಂಬ (ದೇವಾಂಪು. ೨-೩೮).
[ P ಇದು 'ಚಾವಡಿ' ಎಂಬುದರ ಅಪಲಿಖಿತವಿರಬಹುದು ]

**ಜಾವಡಿಕಾರ** (ನಾ). ಜಾವಡಿಗೀತೆಗಳನ್ನು ರಚಿಸುವವನು : ಜಾವಡಿ ಕಾರರು, ತುಮ್ರಿಕಾರರು ನಿತ್ಯಜೀವನದ ಲೀಲಾವಿಲಾಸವನ್ನು ಬಣ್ಣಿಸಿ ದ್ದಾರೆ (ಭಾರಕ. ೩೮೦).
[ ಜಾವಡಿ$_1$ (<ಜಾವಳಿ$_1$) + - ಕಾರ$_1$ (< - ಕಾಜ) ]

**ಜಾವನಿಗಾಲೆ** (ನಾ). ಒಂದು ಬಗೆಯ ವನಸ್ಪತಿ : ಜಾವನಿಗಾಲೆ, ಸಣ್ಣ ಸಲ್ಲೆ, ಕಾಯೋರಿ, ಕರಿಸಲ್ಲಿ, ಕಾಡುಪತಂಗ, ಮುರಿಗೆ (ವೃಕ್ಷಿಗಿ. ೪೦-೭೯೯). [ ? ]

**ಜಾವಯಿ** (ನಾ). ಮಗಳ ಗಂಡ; ಅಳಿಯ; ಜಾಮಾತ: ನಮ್ಮ ಜಾವಯಿನ್ನ ಆಶೀರ್ವದಿಸಿರಿ, ಸ್ವಾಮಿಜಿ (ಏಕೀ., ೬೦೬) ; ನಮ್ಮ ಜಾವಯೀ ಅಂಥಾವಲ್ಲ ತಗೀರಿ (ಗ್ರಾಮಾಯ. ೬೮).
[ ←ಮರಾ. ಜಾವಯೀ./ಪ್ರಾ. ಜಾಮ್ಮಾಇ./ಸಂ. ಜಾಮಾತೃ ]

**ಜಾವರಿ** (ನಾ). (?) : ವಳ್ಳಿಯ ಪುರದ ಭೂಪದೇವರ ಜಾವರಿ ಗೊಬ್ಬರ ಸಿಣೆಂಡಿವಾಡಿ × × × ದಿವಾಳಿ ಸತ್ರನಾತ (ಕಶಾಂಂ. ೩-೩; 1071). [ ? ]

**ಜಾವಳ$_1$** 'ಚಾವಲ' ನೋ.

**ಜಾವಳ$_2$** (ನಾ). ೧. ಸಾಮಾನ್ಯ; ಸಾಧಾರಣ : "ಜಾವಳವೆಂದು ಸಾಮಾನ್ಯಮುಂ ಚಾಪಲಮುಮಪ್ಪುದು" (ಶಬ್ದಿಕೃ. ೩೫) ; ಇಳೆಯೊಳು ತ್ರಿಮಕೀರ್ತಿಗಳು ಜಾವಳದ ಪುರುಷರೆ ಧರ್ಮಪುತ್ರನ ಗೆಲು ವ ಪರಿಯಂತೈ (ಕು ವ್ಯಾ. ಅ. ೩-೧೩೧) : ಸುಂದರಿಯರನೊಲ್ಲದಿಪ್ಪುದದು ಜಾವಳವೋ (ಹಮ್ಮೀರ. ೬-೪೦). ೨. ಸಾಮಾನ್ಯ ಮನುಷ್ಯ ; ನಾಡಾಡಿ : ಭೂವಳಯದೊಳಗುಳ್ಳ ಸರ್ವಜೀವಾಳಿಗಳ ಪಾವನಂಮಾಡಲೆಂದನುಗೆಯ್ದು ಶಿವ ಸಿದ್ಧ ಜಾವಳನೆ (ಸಿದ್ಧರಾ. ೦ ಸೂಚನೆ) : ಬಸವನೇಂ ಜಾವಳನೆ ಭಕ್ತ ರೊಳು (ಬಸಪು. ೧-೨೮); ಬಾಲರಾದಡೆ ಭಂಗವೇ ಜಾವಳನೆ ಅಭಿಮನ್ಯು (ಕುವ್ಯಾಕ. ೪-೧೪) ; ಸತಿಯ ಮಚ್ಚು ಜಾವಳರ್ಗಂತು ದೊರಕುವುದು ಮುನ್ನೀಶನಂ ಭಜಿಸಿದಂಗಲ್ಲದೆ (ರಾಘಕ. ೭-೩೪). ೩. ಕೀಳಾದವನು; ಹೀನ : ಮುನಿದೊಡೆ ನಲ್ಲನೋವಳ ಪದಾಂಬುರುಹಕ್ಕೆ ವಿನಮ್ರನಾಗೆ ಜಾವಳ ವೊಟಿಯಲ್ಲು ನೀನೆನಗೆ ಮುಟ್ಟದೆ ಪೋಗೆನೆ (ಶೃಂಗಾರ. ೩-೯೮): ಈ ಮಹಿಯೊಳ್ ಜಾವಳನುಂ ಕರಂ ಕುಪಥದೊಳ್ ಶಾಲಿಕ್ಕಂ (ಶಾಕುಂತ. ೬೪-೧೧೧). [ ? ]

**ಜಾವಳ$_3$**, ಜಾವುಳ (ನಾ). (ಉಕ). ೧. ಜುಟ್ಟು ; ಕೂದಲು. ೨. ಮಂಡೆಗೂದಲು ; ಹುಟ್ಟುಗೂದಲು: ಶಿರಿಮೂಗುತೀ ಸಣ್ಣನಾಮಾ ಶಿರದ ಜಾವಳ ಜಡೆ ಕಡೆಗೋಲು ನೇಣುಸಹಿತ (ವಾದಿಕೀ. ೬೩-೭); ಹುಟ್ಟಿದ ಕೂಸಿನ ಜಾವಳವನ್ನು ತೆಗೆಯುವಾಗ (ಕಭಾಗಿ. ೧೧೧); ಐದನೆಯ ವರುಷಕ್ಕೆ ಅವನ ಜಾವಳವನ್ನು ಕೋಟೆಯ ಮೇಲೆ ತೆಗಸುವದೆಂದೂ ಬೇಡಿ ಕೊಂಡಿದ್ದರು (ಸ್ಮೃತಿಚಿ. ೧೦೩). ೩. ಷೋಡಶ ಸಂಸ್ಕಾರಗಳಲ್ಲಿ ಒಂದು ; ಮೊದಲನೆಯ ಸಲ ಕೂದಲು ತೆಗೆಸುವ ಸಂಸ್ಕಾರ; ಚೌಲ; ಚೂಡಾ ಕರ್ಮ : ಇವರಲ್ಲಿ ಜನ್ಮ, ಜಾವಳ, ಲಗ್ನ, ಮರಣ ಇಷ್ಟರ ಸಂಸ್ಕಾರಗಳು ಮಾತ್ರ ಉಂಟು (ಕಭಾಗಿ. ೧೩೪); ತನ್ಮಧ್ಯೆ ಒಮ್ಮೆ ಶಾಮರಾಯ ತೃತೀಯ ಕುಮಾರನ ಜಾವಳಕ್ಕೆಂದು ಊರಿಗೆ ಬಂದರು (ದೀಪಕ. I, ೪೩). **ಜಾವುಳ:** ೧. "ಜಾವುಳ=ನವಿರು,ಕೂದಲು, ಜಡೆ" (ಕಂನುಹು. ೮೬) ; ಕರಿಯಂಗಿ ಕಸೂತಿ ತಲೆತುಂಬ ಜಾವುಳ (ಹಳ್ಳಿಯ. ೭೦).
[ ← ಮರಾ. ಜಾವಳ./ಸಂ. ಜಾತವಾಲ ]

**ಜಾವಳದವಸಿ** (ನಾ). ಹೀನನಾದ ತಪಸ್ವಿ ; ನಾಡಾಡಿಯಾದ ಋಷಿ : ಜಾವಳದವಸಿಯ ಕವಡುಮಾಯೆಗೊಳಗಪ್ಪರೇಂ (ರಾಮಾಶ್ವ. ೬೭-೧೧)
[ ಜಾವಳ$_2$ + ತವಸಿ$_1$ ]

**ಜಾವಳಿ$_1$**, ಜಾವಡಿ$_1$ (ನಾ). [ಸಂಗೀತ] ಶೃಂಗಾರ ಗೀತೆ; ಕಾಮ ಪ್ರಧಾನ ವಾದ ಗೀತೆ: ಪದವರ್ಣಗಳು ತಿಲ್ಲಾನಗಳು ಮತ್ತು ಜಾವಳಿಗಳನ್ನು ರಚಿಸಿದರು (ಸಂಗೀತ. ೨೮) ; ಶೃಂಗಾರಭಾವದಿಂದ ಕೂಡಿದ ಪದ ಗಳನ್ನೂ ಜಾವಳಿಗಳನ್ನೂ . . . ಅಳವಡಿಸಿಕೊಂಡಿದ್ದಾರೆ (ಅಭಿನ್ನ. ೩೭). **ಜಾವಡಿ$_1$** : "ಶೃಂಗಾರ ಕಾವ್ಯ ; ಪ್ರಣಯಗೀತೆ ; ಜಾವಡಿ" (Erotic. ಇಂಕಿನಿ) ; ಜಾವಡಿಗಳನ್ನು ಹಾಡುತ್ತಿದ್ದರು (ಮಾಮರಾ. ೧೨೯) ; ಮೋಹನ ರಾಗದಲ್ಲಿ ಒಂದು ಜಾವಡಿಯನ್ನೂ ರಾಗಮಾಲಿಕೆಯಲ್ಲಿ ಯಾವುದಾದರೂ ಒಂದು ಸಂಸ್ಕೃತ ಶ್ಲೋಕವನ್ನೂ ಹಾಡಬಹುದು (ಇಬರು. ೧೨೦).
[ ದೇ.೩ ತಮಿ. ಜಾವಳಿ ; ತೆಲು. ಜಾವಳಿ ]

**ಜಾವಳಿ$_2$** (ನಾ). ಕಿವಿಗೆ ಹಾಕಿಕೊಳ್ಳುವ ಮುತ್ತಿನ ಒಡವೆ ; ಚೌಕಳಿ ; ನಾಲ್ಕು ಮುತ್ತುಗಳ ಹತ್ತಕಡುಕು : ನೋವ ಗುರು ಇದಕ್ಕಂಜ ಹೇಳದ ಶಿಷ್ಯ ಕಿವಿಮೂಳ ಮೌಕ್ತಿಕದ ಜಾವಳಿಯ ಥಳಿಸಿದಂತೆ ನಾರಾಯಣ ಪ್ರಿಯ ರಾಮನಾಥ (ಗುಪ್ತಮಂ. ೮೬). [ <ಚೌಕಳಿ ]

**ಜಾವಳಿಗ** (ನಾ). ಸಾಮಾನ್ಯ ವ್ಯಕ್ತಿ ; ಸಾಧಾರಣ ಮನುಷ್ಯ : ದೇವಿಯನು ನೀ ಮರುಳು ಮಾಡಿದೆ ಜಾವಳಿಗನಲ್ಲ (ಪ್ರಭುಲೀ. ೩-೩೯) ;ಜಾವಳಿಗರೊಳು ಲಿಂಗಸಂಗ ಸುಖಾವಳಿಯನಜುಹಿದೆನೊ (ಮದೇಪು. ೩-೨೬) ; ಈ ಜವ್ವನಂ ಬಱಿದೆ ಬಂದುದುಂಟೆ ರಾಯಕುವರಿಯಂ ಮರುಳುಗೊಳಿಸಿದೆ ಜಾವಳಿಗ (ಪ್ರಭುಪು. ೩-೩೨). [ ಜಾವಳ$_2$ + - ಇಗ ]

**ಜಾವಳಿಸು** 'ಚಾವಲಿಸು' ನೋ.

**ಜಾವಳೆ** (ನಾ). ಚಂಚಲೆ; ಹೀನೆ : ಗಾಡಿಯ ಮೋಡಿಯ ಕವಡು ವಲೆಯನೊಡ್ಡಿ ಮಿಡುಕಿನ ಸೆಡಕುಗಾರ್ತಿ ಜಾವಳೆ ಸೀತೆ ತಾನೆ ತನಗೊಲ್ದು ನೀಱನಂ ರಾವಣನಂ ಕೆಯ್ಮಾಱಿ ಕೊಂದು ಕುಡಿದಳ್ (ರಾಮಾಶ್ವ. ೧೧೩-೨).
[ ಜಾವಳ$_1$ (<ಚಾವಲ) + - ಎ$_2$ ]

**ಜಾವಾಳ** 'ಜಾಪಾಳ' ನೋ.

**ಜಾವಿಗೆ** 'ಜಾವುಗೆ' ನೋ.

**ಜಾವಿಗೆಬತ್ತಿ** (ನಾ). = ಜಾವುಗೆ : (ಸುಡುಮದ್ದಿನ ಬಾಣವನ್ನೂ) (ಗಣ ಮೊದಲಾದವುಗಳಲ್ಲಿ) ಸಿಡಿಮದ್ದನ್ನೂ ಹೊತ್ತಿಸಲು ಉಪಯೋಗಿಸುವ ಒಂದು ಬಗೆಯ ಜಾವಿಗೆ ಬತ್ತಿ (Port-fire. ಇಂಕಿನಿ). 'ಜಾಲಿಗೆ' ಪರಾ.
[ ಜಾವಿಗೆ (<ಜಾವುಗೆ) + ಬತ್ತಿ ]

**ಜಾವು** 'ಜಾವ$_1$' ನೋ.

**ಜಾವುಗೆ, ಜಾವಿಗೆ** (ನಾ). ಸುಡುಮದ್ದುಗಳನ್ನು ಹತ್ತಿಸಲು ಉಪಯೋಗಿಸುವ ಸಾಧನ,–ಬತ್ತಿ : ಹಿಂದು ಮುಂದಾಗಿ ಕೋವಿಯನಾಂತು ಕೆಲಬರು ತಂದು ಎದೆಗೆ ಜಾವುಗೆಯ (ಜ್ಞಾನಕ. ೧೩-೪೦). **ಜಾವಿಗೆ.** 'ಜಾವಿಗೆಬತ್ತಿ' ಪರಾ. [ ←ಮರಾ. ಝಾವ ]

**ಜಾವುಳ** 'ಜಾವಳ$_{3}$' ನೋ.

**ಜಾಸುದ್ದಾರ** (ನಾ). = ಜಾಸೂದು : ಸರ್ಕಾರಿ ಕಾಗದಗಳನ್ನು ತಲಪಿಸುವುದಕ್ಕೂ ಬೇಹುಗಾರರು, ಜಾಸುದ್‌ದಾರರು. ವರದಿಯವರು ಎಂದು ನೇಮಕವಾಗಿದ್ದರು (ಪಾಳೆಗಾ. ೩೩). [ <ಜಾಸೂದು + – ದಾರ್$_{4}$ ]

**ಜಾಸೂದ** 'ಜಾಸೂದು' ನೋ.

**ಜಾಸೂದು, ಜಾಸೂದ** (ನಾ). ಗೂಢಚಾರ; ಗುಪ್ತಚಾರ ; ಬೇಹುಗಾರ; ಹೇರಿಗ : "ಜಾಸೂದು ವೇಷಧಾರಿಗಳು=ಗೂಢಚಾರರು" (ಚಿತ್ರಪಾ. ೨, ಅನು). **ಜಾಸೂದ :** ಯುದ್ಧ ಜರುಗುತಾ ಇರುವಲ್ಲಿ ಇಬ್ಬರು ಜಾಸೂದರ ವೇಷಾ ಹಾಕಿಕೊಂಡು ದುರ್ಗದ ಸಮೀಪಕ್ಕೆ ಬರುತ್ತಿದ್ದರು (ಚಿತ್ರಪಾ. ೮೬). [ ←ಮರಾ. ಜಾಸೂದ್ ; ಅರ. ಹಿಂ. ಜಾಸೂಸ್ ]

**ಜಾಸ್ತಿ** (ನಾ). ಹೆಚ್ಚು ; ಅಧಿಕ ; ಅತಿಶಯಂ : ಯಾದವರಲ್ಲಿ ಯೆಷ್ಟು ಜಾಸ್ತಿ ಹುಟ್ಟುವಳಿಮಾಡಿಕೊಂಡಾಗ್ಯು (ಮೈಅರಿ. ೧೯೩೯, ೯೨-೧೧೨ :1825); ಕಮ್ಮಿ ಜ್ಯಾಸ್ತಿಯು ಲೆಕ್ಕವಿದ್ದರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನೂ (ಅಜ್ಞಾವಿ. ೩೦-೩೮) ; ಸಭೆಯಲ್ಲಿ ಗಲಾಟೆ ಜಾಸ್ತಿಯಾಯಿತು (ರಾಜುಳ. ೬೦) ; ನಮ್ಮೂರು ಸುತ್ತ 'ಕಿರುಬನ ಕಾಟ ಜಾಸ್ತಿ (ಜಂಗೂರಿ. ೨೦). [ ←ಹಿಂ. ಮರಾ. ಜ್ಯಾಸ್ತೀ ]

**ಜಾಹಕ** (ನಾ). ಇಲಿಯನ್ನು ಹಿಡಿಯಲು ಹೊಂಚು ಹಾಕುವ ಬೆಕ್ಕು : "ಜಾಹಕಃ, ಗಾತ್ರಸಂಕೋಚೀ, ಮಂಡಲೀ–ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಹಲಾಯು. ೪೦-೮೪). [ ಸಂ. ]

**ಜಾಹಿರಾತು** 'ಜಾಹೀರಾತು' ನೋ.

**ಜಾಹಿರು** 'ಜಾಹೀರು' ನೋ.

**ಜಾಹಿರ್ನಾಮೆ** 'ಜಾಹೀರುನಾಮೆ' ನೋ.

**ಜಾಹೀರನಾಮೆ** 'ಜಾಹೀರುನಾಮೆ' ನೋ.

**ಜಾಹೀರಾತಿ** 'ಜಾಹೀರಾತು' ನೋ.

**ಜಾಹೀರಾತು, ಜಾಹಿರಾತು, ಜಾಹೀರಾತಿ** (ನಾ). ಬಹಿರಂಗಪಡಿಸುವುದು; ಸಾರ್ವಜನಿಕರಿಗೆ ತಿಳಿಸುವುದು; ಪ್ರಕಟನೆ: ಕಣ್ಣು ಕೋರೈಸುವಂತೆ, ಬಣ್ಣಬಣ್ಣದ ದೀಪಗಳ ಪ್ರಕಾಶದಡಿ ಹೊಳೆಯುವ ಜಾಹೀರಾತುಗಳು (ಪಾಶ್ಚಾತ್ಯ. ೩೯); ಪತ್ರಿಕೆಗಳು ಬಾಳಿ ಬದುಕಿ ಜನ ಸೇವೆ ಮಾಡಬೇಕಾದರೆ ಜಾಹೀರಾತುಗಳು ಅವಶ್ಯ (ಗಾಳಿಗು. ೨೬) ; ಪ್ರತಿಭೆಯೊಂದಿರಬೇಕು ವ್ಯುತ್ಪನ್ನಮತಿಬೇಕು . . . ಕವಿಗೆ ಜಾಹೀರಾತು ಬೇಕು (ಇಂಪಾಪ. ೧೬೮-೬೮). **ಜಾಹಿರಾತು :** ತಾವಾಗಿ ಮೆರೆವುವು ಸುಜನರ ಗುಣಗಳು ಅದಕೆ ಜಾಹಿರಾತು ಬೇಕೆ? (ಇಂಪಾಪ. ೨೦೯-೮೩) ; ಪತ್ರಿಕೆ ಪುನಃ ಆರಂಭವಾಗುವುದು ಎಂಬ ಸುದ್ದಿಯನ್ನು ಬೇರೆ ಬೇರೆ ಪೇಪರುಗಳ ಜಾಹಿರಾತುಗಳಲ್ಲಿ ಪ್ರಕಟಿಸಿದ (ಅಪನಾ. ೧೬). **ಜಾಹೀರಾತಿ :** ಹಣದಿಂದ ಮಂದಿಯ ಮಾನಮಟ್ಟವನ್ನು ಅಳೆಯುವ ನೀತಿ ಜಾಹೀರಾತಿಯ ಜಗತ್ತು (ಮೂವಾದ. ೧೦೩). [ ←ಅರ. ಮರಾ. ಜಾಹೀರಾತ್ ]

**ಜಾಹೀರು, ಜಾಹಿರು** (ನಾ). ಪ್ರಸಿದ್ಧಪಡಿಸುವಿಕೆ ; ಪ್ರಕಟನೆ : ಅವನ ಉತ್ತರಾಧಿಕಾರಿಗಳಾಗಿ ಮಕ್ಕಳಿಬ್ಬರು ಇರುವುದರಿಂದಲೂ . . . ಒಂದು ಪ್ರಕಟನೆಯ ಜಾಹೀರು ಕೊಡಬೇಕು (ತ್ಯಾಗಮ. ೬೨) ; ಹೊಲೆಯರ ಕೆಂಚಪದ್ಧತಿಯಂತೆ ಈ ಸುದ್ದಿಯನ್ನು ತಮಟೆ ಹೊಡೆದು ಊರಿಗೆಲ್ಲ ಜಾಹೀರು ಮಾಡಿದ (ಊರುಳ. ೩). **ಜಾಹಿರು :** ಟೀಪುಸುಲ್ತಾನರಿಗೆ ಪಿರಿಯಾದಿಯಾಗಿ ಜಾಹಿರು ಮಾಡಿದ್ದರಿಂದ (ರಾಜೇಂದ್ರ. ೨೦).

**ಜಾಹೀರುಮಾಡು** = ಜಾಹೀರುಪಡಿಸು : ಆತನ ರೋದನ ನಾರಾಯಣಿಯ ಸಾವನ್ನು ಜಾಹೀರು ಮಾಡಿತು (ರಂಗವ. ೧೦) ; ನಗರಕ್ಕೆ ಮತ್ತೊಮ್ಮೆ ಪ್ಲೇಗು, ಇಲಿಗಳು ಜಾಹೀರುಮಾಡಿದವು (ಸ್ವಾತಿಚಿ. ೩೦೮). [ ←ಮರಾ. ಜಾಹೀರ್; ಅರ. ಹಿಂ. ಜಾಹಿರ್ ]

**ಜಾಹೀರುನಾಮೆ, ಜಾಹಿರ್ನಾಮ, ಜಾಹೀರನಾಮೆ** (ನಾ). ಪ್ರಸಿದ್ಧ ಪತ್ರಿಕೆ ; ಪ್ರಕಟನಪತ್ರ : ಈ ಎಲ್ಲಾ ಜಾಹೀರುನಾಮೆಗಳಲ್ಲಿ ಇಂಗ್ಲಿಷ್ ಶಬ್ದಗಳನ್ನು ತುಂಬಿದ್ದು ನೋಡುವಾಗ (ಪಾಶ್ಚಾವಿ. ೪೪೪). **ಜಾಹಿರ್ನಾಮ:** (ಮೈಗಚ. IV, ೬೬೧) ; (ಕೈಸಗೆ. II, ೩೩೦). **ಜಾಹೀರನಾಮೆ:** ಮಾಂಟಗೊಮ್ರಿ ಸಾಹೇಬರು ೧೯೧೬ರಲ್ಲಿ ಒಂದು ಜಾಹೀರನಾಮೆಯನ್ನು ತೆಗೆದರು (ಕಾಂಗ್ರೆಸ್. ೦೦) ; ಟ್ಯೂಡರ ಅರಸರು ತಮ್ಮ ಮಂತ್ರಿಗಳ ಸಲ್ಲಾ ತೆಗೆದುಕೊಂಡು ಜಾಹೀರನಾಮೆಗಳನ್ನು ತೆಗೆಯುತ್ತಿದ್ದರು (ಇಂಗ್ಲಇ. ೦೮೬). [ ←ಹಿಂ: ಮರಾ. ಜಾಹೀರನಾಮಾ ]

**ಜಾಹೀರುಪಡಿಸು** (ಕ್ರಿ). ಪ್ರಸಿದ್ಧಪಡಿಸು ; ಎಲ್ಲರಿಗೂ ತಿಳಿಯಪಡಿಸು : ಹೆಮ್ಲೆಟ್ ನಾಟಕವೆಂದು ಜಾಹೀರುಪಡಿಸಿರುವದು (ಶ್ಯಾಮುಕಾ. ೨೩). [ ಜಾಹೀರು + ಪಡು$_{1}$ + – ಇಸು$_{3}$ ]

**ಜಾಹೆ$_{1}$** (ನಾ). ಜಾಗರ (?) : ಅರ್ಚಿತ ಅವಧಾನವನಱಿದ ಸತ್ಯನ ನಿತ್ಯನ ಇರವು ಮಯೂರನ ಜಾಹೆಯಂತೆ ಪಟುಭಟನ ಎಚ್ಚಱಿಕೆಯಂತೆ (ಶಿವಮಂ. ೯೬). [ ? ]

**ಜಾಹೆ$_{2}$, ಜಾಹ್ಯೆ** (ನಾ). ನಿದ್ರೆ ; ನಿದ್ರಾವಸ್ಥೆ ; ಸುಷುಪ್ತಿ ; ಜಡತೆ : ಜಾಹೆಯಲ್ಲಿ ಮಱೆದೊಱಗಿರಲಾಗಿ ತನುವ ತಟ್ಟದಡೆ ಆತ್ಮನೆಚ್ಚಱುವಂತೆ (ಶಿವಮಂ. ೬೯) ; ಕಾಲ ಪಸರಿಸಿ ಕಟ್ಟಿಕೊಳ್ಳುತ್ತ ಜಾಹೆಯಾಗಿ ಸುಮ್ಮನೆ ತಲೆಯ ಕುತ್ತುತ ಧನಹೀನನಾಗಿ (ಅಶ್ವಶ್ಯ. ೪-೨ ೮೪೪). **ಜಾಹ್ಯೆ:** ದಿನದಲ್ಲಿ ಚಲನೆ ರಾತ್ರಿಯಲ್ಲಿ ಜಾಹ್ಯೆಗೊಳಗಪ್ಪುದು ಜೀವನೋಪರಮನೋ (ಪಾಚೊಮ್ಮ.೨೯); ಪೂರ್ವದಿಂದ ಉತ್ತರಕ್ಕೆ ಬಂದ ಸೂರ್ಯನು ಅಸ್ತಮಯವಾಯಿತ್ತೆಂದು ಜಾಹ್ಯೆಗೆ ಒಡಲಾಗಿ (ಅಮರೀ. ೬೬). [ ? ]

**ಜಾಹ್ನವಿ** (ನಾ). ಜಹ್ನುಮುನಿಯ ಮಗಳು ; ಜಹ್ನುಮುನಿಯ ಕಿವಿಯಿಂದ ಹೊರಕ್ಕೆ ಬಂದ ನದಿ ; ಗಂಗಾನದಿ : ಏದೊರೆ ಪೆಂಪೊ ಲಕ್ಷ್ಮೀನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ (ಜಗವಿ. ೦-೨೦) ; ಜಾಹ್ನವಿಯೋ ತೀರ್ಥದೊಳುತ್ತಮಂ (ಸೋಮೇಶ. ೪) ; ದಿವ್ಯರೂಪನಳವಡಿಸಿ ಜಗದಂಬೆ ಜಾಹ್ನವಿ ಸಲಿಲಮಧ್ಯದಿಂದೆದ್ದು ಬಂದು (ಕೃಮಿಥಾ. ೯-೨೮). [ ಸಂ. ಜಾಹ್ನವೀ ]

**ಜಾಹ್ನವೀಧರ** (ನಾ). ಗಂಗೆಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ ; ಶಿವ : ನರಶರದ ಜೋಡಿನ ಜುಂಜುವೊಳೆಯಲಿ ಜಾಹ್ನವೀಧರ ಜಾಱುವನೆ (ಕುವ್ಯಾಅ. ೬-೯೦). [ ಸಂ. ]

**ಜಾಹ್ನವೀಮಕುಟ** (ನಾ). ಗಂಗಾನದಿಯನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ : ಜಯ ಜಾಹ್ನವೀಮಕುಟ ಜಯ ಜರಾಮರಣದೂರ (ಹಚಕಾ. ೧೦-೪೦). [ ಸಂ. (ಜಾಹ್ನವೀ + ಮಕುಟ) ]

**ಜಾಹ್ಯೆ** 'ಜಾಹೆ$_{2}$' ನೋ.

**ಜಾಳ$_{1}$** 'ಜಾಲೆ$_{1}$' ನೋ.

**ಜಾಳ$_{2}$** 'ಜಾಲ$_{1}$' ನೋ.

**ಜಾಳಂದರ** 'ಜಾಲಂದರ' ನೋ.

**ಜಾಳಂದ್ರ** 'ಜಾಲಂದ್ರ' ನೋ.

**ಜಾಳಂದ್ರುಗೆಯ್** (ಕ್ರಿ). ತೂತುಮಾಡು ; ಚುಚ್ಚು ; ಜರ್ಜರಿತವಾಗುವಂತೆ ಮಾಡು : ವಕ್ರೋಕ್ತಿನಖದಿಂ ನೃಸಿಂಹಾವತಾರಮಂ ಪುನರಭಿನಯಿಸುವಂತೆ ಕೋಮಲೆಯ ಹೃದಯಮಂ ಜಾಳಂದ್ರುಗೆಯ್ಯೆ (ಶ್ರೀರಾಮಾ. ೮೪೩-೪೩೩). [ ಜಾಳಂದ್ರ (<ಜಾಲಂದ್ರ) + ಕೆಯ್$_{1}$ ]

**ಜಾಳಂಧರ** 'ಜಾಲಂದರ' ನೋ.

**ಜಾಳಕ** 'ಜಾಲಕ' ನೋ.

**ಜಾಳಗಪ್ಪೆ** (ನಾ). ಒಂದು ಬಗೆಯ ಕಪ್ಪೆ: ಮೊದಲು ಕೋಳಿಯಂತೆ ನಡೆದು ಒಡನೆ ಜಾಳಗಪ್ಪೆಯಂತೆ ನಡೆದರೆ ವಾತಶ್ಲೇಷ್ಮನಾಡಿಯೆಂದರಿವುದು (ವಾತಾಚಿ. ೭೩-೩). [ ಜಾಳ₀ + ಕಪ್ಪೆ₁ ]

**ಜಾಳಗೆ** (ನಾ). ಹೆಣೆದು ಮಾಡಿದ ಚೀಲ; ಬಲೆಚೀಲ; ಕಲ್ಲಿಚೀಲ: ಕಿಲಜಗಲಿಯೊಳಿರ್ದುರ್ಗಟಿಗದವನಿಂದೊಂದು ಜಾಳಗೆಯಂ ಕೊಂಡು (ಚಿಕವಿ. ೬-೨೬೭ ವ). 'ಜಾಳಿಗೆ' ಪಠಾ. [ <ಸಂ. ಜಾಲಕ ]

**ಜಾಳತಿಯೋಗು** (ಕ್ರಿ). ಜರ್ಜರಿತವಾಗು; ತೂತಾಗು: ಅನೇಕ ಶಸ್ತ್ರ ಮುಖದಿಂ ತನು ಜಾಳತಿಯೋದ ನೋವಿನೊಳ್ ಕೂಗಿದೆ (ಅನಂಪು. ೯-೨೯). [ P ಇದು 'ಜಾಳರಿಯೋಗು' ಎಂಬುದರ ಅಪಲಿಖಿತವಿರಬಹುದು. ]

**ಜಾಳಮಾರ್ಗ** (ನಾ). ಕಿಟಕಿ; ಗವಾಕ್ಷದ ಕಿಂಡಿ: ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗಪ್ರಣಯಿನಿಯರಪಾಂಗ ಶ್ರೇಣಿಯೊಳ್ ಮುಱುಬಣ್ಣಂ ಪೆಱದೊದವೆ (ಆದಿಪು. ೧೦-೨೩): ಚಿನ್ನದ ಕಂಬದ ರಮ್ಯ ಜಾಳಮಾರ್ಗದ ವಿಳಸತ್ಕವಾಟದ ವಿಚಿತ್ರ ವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ಜಾಳ₂ (=ಜಾಲ₁) + ಮಾರ್ಗ ]

**ಜಾಳರ** 'ಝಾಲರಿ₂' ನೋ.

**ಜಾಳರಂಬೋಗು** (ಕ್ರಿ). ಜಾಲರದಂತಾಗು; ತೂತುತೂತಾಗು: ನಿಶಿತಾಸ್ತ್ರಹತಿಯಿನಾ ಮುನಿಯ ಶರೀರಂ ಕೂಡೆ ಜಾಳರಂಬೋಗಿರೆ . . . ಕಂಡು (ಪಾರ್ಶ್ವಪು. ೧೨-೮೩). [ ಜಾಳರ (<ಝಾಲರಿ) + ಪೋಗು₁ ]

**ಜಾಳರಿಗೆ** (ನಾ). ಜಾಲರಿಯಿಂದ ಕೂಡಿದ ಕಿಡಿಕೆ: ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ (ಶಂಖಪು. ೩-೭೪ ವ):

[ <ಸಂ. ಝುಲ್ಲರಿಕಾ ]

**ಜಾಳರಿಗೆವೋಗು** (ಕ್ರಿ). = ಜಾಳರಂಬೋಗು: ಅಂಗೋಪಾಂಗಗಳೆಲ್ಲಂ ಶರಜಾಳಂಗಳ್ ಜಾಳರಿಗೆವೋಗೆ ನಟ್ಟವು ಪಲರಂ (ವರ್ಧಮಾ. ೪-೩೮).

[ ಜಾಳರಿಗೆ + ಪೋಗು₁ ]

**ಜಾಳವಣೆ** (ನಾ). ಮೋಸ; ಕಪಟ; ಮಾಟ; ಮಾಯೆ: ಹುರುಡು ಜಾಣುಮೆ ಜಾಳವಣೆ [ಪಾಠಾಂ. ಚಳಬಳಿಕೆ, ಚಾಳವಣೆ] ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರರಾ. ೦-೫-೩೨). [ ಜಾಳವಿಸು₁ (<ಜಾಲಿಸು) + – ಅಣೆ₄ ]

**ಜಾಳವಿಸು₁** 'ಜಾಲಿಸು' ನೋ.

**ಜಾಳವಿಸು₂** (ಕ್ರಿ). ಹೊತ್ತಿಸಂ; ಪುಟವಿಡು; ಉರಿಗೊಳಿಸಂ: ಚಪಳರು ಜಾಳವಿಸಿದರು ಹವ್ಯವಾಹನನ (ನಿಘಾಗ. ೭-೪-೪೮).

[ ಜಾಳ₁ (<ಜಾಲ್₂) + – ಇಸು₃ ]

**ಜಾಳಾಂದರ** 'ಜಾಲಂದರ' ನೋ.

**ಜಾಳಾಂದ್ರ** 'ಜಾಲಂದರ' ನೋ.

**ಜಾಳಾಂಧರ** 'ಜಾಲಂದರ' ನೋ.

**ಜಾಳಿ** (ನಾ). (ಕುದುರೆಗಳಿಗೆ ಬರುವ) ಒಂದು ಬಗೆಯ ರೋಗ: ಆ ತಿರುಳಂ ನಾರುವ ಬೇಳೆಯುಮಿರದಳ್ಳಿಣ್ಣೆಯೊಳಗೆಯಿಕ್ಕೆ ಜಾಳಿಗಳಳಿಗುಂ (ಅಶ್ವವೈ. ೦೩-೦೭). [ ?./ಸಂ. ಜಾಲ = ಕಣ್ಣಿನ ಒಂದು ರೋಗ ]

**ಜಾಳಿಕ₁** 'ಜಾಲಿಕ₁' ನೋ.

**ಜಾಳಿಕ₂** 'ಜಾಲಿಕ₂' ನೋ.

**ಜಾಳಿಗೆ₁** (ನಾ). ೧. ಬಲೆ; ಜಾಲ ಎಲುವಿನ ಪಂಜರ ಕರುಳಿನ ಜಾಳಿಗೆ (ವಚಸಂ. ೪೩-೬೨); ಹೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮಱೆ ಬೇಡ (ಕುವ್ಯಾಕ. ೦-೦೧); ನಾನಿರುವ ಸ್ಥಳವು ದುಃಖವೆಂಬ ಜಾಳಿಗೆಯಿಂದ ತುಂಬಿದೆ (ಮಂಜುಳ. ೦೦೯); ಅದರ ಜೊತೆಗಾರ ಹಕ್ಕಿ ಬಲೆಯ ಬಳಿ ಬಂದು ತನ್ನ ಚುಂಚುವಿನಿಂದ ಜಾಳಿಗೆಯನು ಕಡಿದೆಸೆಯುವದರಲ್ಲಿ ತೊಡಗಿತ್ತು (ಅಶ್ರಮ. ೦೩). ೨. ಜೇಡನ ಬಲೆ, –ಗೂಡು: ಅದು (ಜೇಡ) ತನ್ನ ಆಹಾರದ ಜಂತುಗಳನ್ನು ಹಿಡಿಯುವುದಕ್ಕಾಗಿ ಒಂದು ತರದ ಸೂಕ್ಷ್ಮವಾದ ಜಾಳಿಗೆಯನ್ನು ಮಾಡುತ್ತದೆ (ಮುಂಬಯಿ. ೪-೧೦೮); ದೂರದರ್ಶಕ ಯಂತ್ರದ ನಳಿಕೆಯಲ್ಲಿ ಜೇಡವೊಂದು ಜಾಳಿಗೆ ಕಟ್ಟಿದರೆ (ವಿಜಾವಾ. ೭೯). ೩. ಜಾಳು ಜಾಳಾಗಿರುವ ಬಟ್ಟೆ, –ವಸ್ತ್ರ; ಜೀರ್ಣವಸ್ತ್ರ: ಬಟ್ಟೆಗಳೊಳು ಜಾಳಿಗೆಗಳು ಬಿದ್ದಿರೆ ಮುಟ್ಟಲಮ್ಮವು ಗೆದ್ದಲುಗಳು (ನಾಗಕು. ೨-೯೭). ೪. ಮುತ್ತು ಅಥವಾ ಮಣಿಗಳ ಸರಗಳಿಂದ ಮಾಡಿದ ಕುಚ್ಚು: ಸಾಲು ಮುತ್ತಿನ ಜಾಳಿಗೆ ಗೊಂಡ್ಯ ಶಿರದಲ್ಲಿ (ವಿದ್ಯಾಶ್ಯ. ೧೧-೩): (ಕೊಂಕಣಿಗರು)- ಲಗ್ನದಲ್ಲಿ ಇವರು ಮದುಮಗನ ಬಾಸಿಂಗಕ್ಕೆ ಬಿಳೀನೂಲಿನ ಜಾಳಿಗೆಯನ್ನು ಕಟ್ಟುವರು (ಕಥಾಗ. ೮೭). ೫. ಮಂಟಪ ಮೊದಲಾದುವುಗಳನ್ನು ಸಿಂಗರಿಸುವಾಗ ಕಟ್ಟುವ ಕುಚ್ಚು: ರಥಗೆಯ ಲಹರಿಯ ಜಾಳಿಗೆಯ ಪಚ್ಚೆಗಳ ಪಾಗಾರದ ಸುರತ್ನಾಳಿಗಳೆಸೆದುದು ರಾಜಸಭೆ (ಕುವ್ಯಾಸ. ೦೩-೨೫); ಸಾಲ ರತುನಸ್ತಂಭನಿಕರದ ಜಾಳಿಗೆಯ ಮುತ್ತುಗಳ ಭಿತ್ತಿ (ನಿಘಾಗ. ೧೦-೯೭-೨೦). ೬. ಗುಂಪು; ಸಮೂಹ: "ಜಾಳಿಗೆ, ಕಿಕ್ಕಿಂದು . . . ಈ ೪೦ ಸಮೂಹಂ" (ಶಕಸಾ. ೧೦-೨೨೨); "ಜಾಳಿಗೆ ತೆಮ್ಮರ್ ಗುಂಡೊಗ್ಗು ಗೊಟ್ಟೆವೊಟ್ಟೆಲ್ ಪಂಡಿತರಿಂ ಗಡಣವಂಗಡಂ ಕಿಕ್ಕಿಂದಂ" (ಕವಿಕಂ. ೧೦೭). ಹೇಳಲೇನದನುಬ್ಬಸದ ಬಲುಗೋಳದಲಿ ತನು ಸಿಲುಕಿ ಕ್ರಿಮಿಗಳ ಜಾಳಿಗೆಗೆ ತುತ್ತಾಗಿ (ನಿಘಾಗ. ೩-೦೪-೨೦). ೮. ಹೆಣಿಕೆಯ ಚೀಲ; ಕಲ್ಲಿ: ಕಳ್ಳನ ಜಾಳಿಗೆಯಂತೆ ಒಳ್ಳೆಯ ಮುದ್ರೆಯನಿಕ್ಕಿದಡೆ ಸುರಿದಲ್ಲಿಯ ಕಾಣಬಂದಿತ್ತು (ಬಶೀಶ್ಯ. ೨೫); ಕಾಯಿಪಲ್ಲೆಗಳ ಜಾಳಿಗೆಗಳಿಗೆ ಎಣಿಕೆಯಿಲ್ಲ (ಚಿಟ್ಟಿಹೊ. ೨). ೯. ಹಣದ ಚೀಲ; ಥೈಲಿ; ಹಮ್ಮಿಣಿ: ಆರಾಧನೆಗೆ ಚಿತ್ರಪುರವಣಿಸಿ ಜಾಳಿಗೆಗಳಂ ತರಿಸುತಂ ಮುದ್ರೆಗಳನೊಡೆದು (ಲಸರ. ೮-೨೦); ಧನವಿಲ್ಲವೆಂದು ಜಾಳಿಗೆಗಳಂ ಹೇಳದಿರಿಸಿಯೆ ಪೋಗಲ್ (ಲಕಿಜಂ. ೩೭-೬೫); ಮಾಳಿಗೆ ಮನೆಯೂ ಇರಲಿ ಜಾಳಿಗೆ ತುಂಬಿ ಹೊನ್ನಿರಲಿ (ಪುರಂದ. ೨-೫೧-೮); ನಿಡುಬೊಂದೆ ಪಟ್ಟೆ ಪಚ್ಚಡವಿತ್ತು ವೀಳೆಯಗೊಡುತ ಜಾಳಿಗೆ ನೂಱುಗೊಟ್ಟು (ಛರಜ. ೨-೯೯); ಅರಸುಗಳೆಲ್ಲರು ಜಾಳಿಗೆ ಜಾಳಿಗೆ ಸುರಿದು ಸೇಸೆಯನಿಕ್ಕಿದರು (ಜಿನರಾ. ೯-೬೩). ೧೦. (ಉಕ) ಬುಗುರಿಯಂನ್ನು ಆಡಿಸಲು ಉಪಯೋಗಿಸುವ ಹುರಿ, –ಚಾಟಿ: ಬೆಲ್ಲವತ್ತದ ಕಾಯ ಬುಗುರಿಯಲಿ ಜಾಳಿಗೆಯ ಸುತ್ತಿ ಬಿಚ್ಚಲು ನಾದ ಭೋಂಕಾರವು (ಭಾವಚೀ. ೪-೬೫). ೧೧. (ಆಲಂ) ತಂತ್ರ; ಕಪಟ; ವಂಚನೆ: ಅನೇಕ ಅಬಲೆಯರನ್ನು ಜಾಳಿಗೆಯಲ್ಲಿ ತೊಡಗಿಸಿ ಅವರ ಸತ್ವವನ್ನು ಹರಣಮಾಡಿದೆ (ಸ್ವಾಂಮಿ. ೦೮೭).

[ <ಸಂ. ಜಾಲಿಕಾ ]

**ಜಾಳಿಗೆ₂** (ನಾ). ೧. ಜಾಲಿಸುವಿಕೆ; ಚೆನ್ನಾಗಿ ಕೊಳೆಹೋಗುವಂತೆ ನೀರಿನಲ್ಲಿ ಜಾಲಾಡುವಿಕೆ. ೨. (ಆಲಂ). ಶುಚಿತ್ವ; ಪರಿಶುದ್ಧಿ: ವಿಜಯವಿಠಲನ ಸನ್ನಿಧಿಯಲ್ಲಿ ಜಾಳಿಗೆಯಿಂದ ಜನನ ನೀಗಲಿಬೇಕೋ (ವಿದಾಶ್ಯ. ೧೫೦-೭). [ <ಜಾಳಿಸು₁ + – ಗೆ ]

**ಜಾಳಿನಿ** 'ಜಾಲಿನಿ' ನೋ.

**ಜಾಳಿಯೂರು** (ನಾ). ಒಂದು ಊರಿನ ಹೆಸರು: ತಸ್ಯಪೂರ್ವತಃ ಜಾಳಿಯೂರು ನಾಮಗ್ರಾಮಃ (ಮೈಆರಿ. ೦೯೩೫, ೪೦-೫೮ ; 951).

[ ? + ಊರು₃ (<ಊರ್) ]

**ಜಾಳಿಸು₁** (ಕ್ರಿ). ೧. ಚಲಿಸು; ನಡೆ; ಹೋಗು: ಶಕುಂತಪಾಳಿಕೆಯುರ್ ಪೊಱಗೆ ವಾಸಯಷ್ಟಿಗಳೊಳ್ ನಿಱಿದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು (ಚಂದ್ರಪು. ೮-೪೩ ವ); ಕುಣಿವುತುಂ ಕೂಗುತುಂ ಜಾ[ಪಾಠಾಂ. ಚಾ]ಳಿಸುತ್ತುಂ ಜರಿವುತುಂ ನೋಡಿ ಹಿಗ್ಗುತುಂ (ನಂಬಿರ. ೧೦-೬೮); ಜಾಳಿಸಿದ ಜಯಕಾಮಿನಿಯ ಜಂಘಾಳತನವನ್ನು ನಿಲಿಸಿ ನಿನ್ನಯ ತೋಳಿನಲಿ

ತೋಱುವೆವು (ಕುಮಾ.ಗ. ೪-೩೪) : ಪಿಸುಣರಿಂದಾರೈಶ್ವರಿಯ ಜಾಳಿಸದು ಜಗದಲಿ (ತೊರರಾ. ೨-೦-೪೦) : ಜಾಳಿಸಿದನಿಂದ್ರನನಲಂ ಪೋದನಂತಕಂ ಕಾಲ ಬೇಗಂದೋಱಿದಂ (ಜಬಸು. ೩೯-೩೬). ೨. ಹರಿ ; ಸುರಿ : ನೆರೆದ ಪೌರಜನ ಜಾಳಿಸುವ ಕಂಬನಿಗಳಲಿ ಬಱುನಾಲಿಗೆಯು ಬೈಗುಳಲಿ ಮುನಿಯನು ಕೀಳುನುಡಿಯಲಿ ಜಱಿವುತಿರ್ದುದು (ತೊರರಾ. ೧-೯-೪೩) : ಜಾಳಿಸುವ ರಕ್ತಪ್ರವಾಹದೊಳ್ ಕೌರವನೃಪಾಲ ಭೂಶಯನಮಂ ಕಾಣಿರಲ್ (ಹುರಂಗ. ೭೬-೧). ೩. ಅಲುಗು ; ಕಂಪಿಸು ; ನಡುಗು : ತೋಳ ತೊಡವುಗಳೆಳ್ದು ನೀಳದಿಂ ಜೋಲುತಿರೆ ಜಾಳಿಸುತ ಕಾಲುಡುಗಿ ಕೋಲೂಱಿ ನಿಲ್ಲುತಿರೆ (ಬಿಂತೋರ. ಹ. ೩೦೩-೧೬). ೪. ಸೇರು ; ಕೂಡು ; ಬೆರೆ: ತುಂಬಿಗಳ ನುಣ್ಚರದೊಡನೆ ಜಾ[ಪಾಠಾಂ. ಜೋ]ಳಿಸಿ ಮಾಣವಾಣಿತಿಗೊಡುವ ಗಾಯಕರ (ಮಾಉರ. ೧೦೬-೨೦) : ಜಾ[ಪಾಠಾಂ. ಚಾ]ಳಿಸಿದು ದಪಕೀರ್ತಿಯಕಟಾ ವಿಟಾಳಿಸಿತು ಯದುವಂಶವೆನೆ (ಕುಮಾ.ಆ. ೧೯-೪೦). ೫. ಬೀಸು ; ಜಳಪಿಸು : ತೋಳಡವಿಯೊಳು ಪೊಕ್ಕು ಕೊಡಲಿಯ ಜಾಳಿಸಿಯೆ ತಱಿದೊಟ್ಟಿ ಸವಿಧೆಯ ಮಾಳಿಗೆಯ ಮಾಡಿದನು (ಕುಮಾ.ಆ. ೬೦೩. ೨೬-೩೨). ೬. ಅಟ್ಟು ; ಕಳುಹಿಸಂ : ತಡೆದ ರಕ್ಕಸ ತಳವರ್ಗ ಜವನೆಡೆಗೆ ಜಾಳಿಸುತಾಳುವೇರಿಯ ತಡಿಎಡಿದು ಶೋಧಿಸಿದನಲ್ಲಿ ಸದನ ಸಂಕುಲವ (ತೊರರಾ. ೫-೨-೦೬). ೭. ನೀಗು ; ಹೋಗಲಾಡಿಸು ; ಕಳೆ ; ನಿವಾರಿಸು ; ಅಸುವಿದ್ದೇನಿದ್ದೇನು ಫಲವೆಂದುಸುರಲಾ ಜಾಬಾಲಿ ಮುನಿ ಜಾಳಿಸಿದನಂತಸ್ತಾಪವನು ಬಳಿಕಾ ನೃಪಾಲಕನ (ತೊರರಾ. ೩-೨-೬); ಆ ಸೈಂಧವನ ನಾಳೆ ಕೊಲ್ಲದೊಡುರಿಗೆಂಡದೊಳಗೆ ಬಳ್ದು ಜಾಳಿಸುವೆನು ದೇಹವನು (ನೇಮಿಸಂ. ೨೮-೧೮೮). ೮. ಇಳಿ ; ಕುಗ್ಗು : ನಸ್ಯವಿಧಾಯಲ್ ಜಾಳಿಸುಗುಂ ಸರ್ಪವಿಷಂ (ಖಮುದ. ೭-೧೬). ೯. ನಿಂದಿಸು ; ಬಯ್ಯು : ಮುಳಿದಿದನು ಮನದೊಳಗೆ ವಿಧಿಯನು ಜಱಿದು ಜಾಳಿಸಿ[ಪಾಠಾಂ. ಧ್ಯಾನಿಸಿ] ಯಕ ಕಟ್ಟಾಸರು ಮಹಾಠಾಭರಿಗೆ ಬಂದುದೆ ಶಿವಶಿವಾಯೆಂದ (ತೊರರಾ. ೪-೨-೫). ೧೦. ಜೋಡಿಸು ; ಕೂಡಿಸು; ಸೇರಿಸು: ಜಾ[ಪಾಠಾಂ. ಚಾ]ಳಿಸಿದ ಹದವಿಲ್ಲುಗಳ ಬಡಿಕೋಲುಗಳ ಸಂಕಲೆಯ ನಾಯ್ಗಳ (ಕುಮಾ.ಆ. ೫-೩೩) : ಅಖಿಳ ವೇದವಮಂ ಜಾಳಿಸಿಯ ಕದ್ದು ಪೊಕ್ಕಂಬುಧಿಯೊಳ್ (ಲಶಿಜಂ. ೭-೧). [ <ಚಾಲಿಸು ]

ಜಾಳಿಸು$_3$ 'ಜಾಲಿಸು' ನೋ.

ಜಾಳು$_1$ (ನಾ). ೧. ಹುರುಳಿಲ್ಲದಂದು ; ಪೊಳ್ಳಾದುದು ; ನಿಸ್ಸತ್ತ್ವವಾದುದು : "ಜಾಳಿನ ಪೊಳ್ಳಿನ ತಾಂ ನಿಷ್ಪ್ರಯೋಜನಾರ್ಥವುದಕ್ಕುಂ" (ಧಾರವಿ. ೫೬) ; ಶ್ರೀರಾಮನಾಳೀಕ ವೇಗದಿಂ ಪೋಪೆನಗೆ ಜಳರಾಶಿ ಜಾಳಿನಿಸದಿದಿರಾಗಲೆನಿತುಂಟು (ವಂಕುರಾ. ೫-೧-೧೮). ೨. (ಆಲಂ) ಕೈಲಾಗದವ; ಹೇಡಿ ; ನಿಷ್ಪ್ರಯೋಜಕ : ಜಾಳ ಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱಿದು (ಕುಮಾ.ಕ. ೧೬-೨೧) : ಕಾಳಗಕೆ ಮೈದೋಱ ಬಾರದೆ ಭೀಮಫಲುಗುಣರು ಜಾ[ಪಾಠಾಂ. ಚಾ]ಳ ನೂಕಿಸಿ ಹೊತ್ತುಗಳೆವರು ಹೇಳ ಫಲವೇನಿನ್ನು (ಕುಮಾ.ಭೀ.೯-೧೬); ಜಾಳುಗಳೊಳಗುಗಾಣಿಸುವುದಲ್ಲದೆ ತತ್ತ್ವಶೀಲನೊಳಗ ಕಾಣ್ಬರಾರು (ಭರಚ. ೫-೦೦೩).

ಜಾಳಾಗು = ದೃಢಭಾವವಿಲ್ಲದವನಾಗು ; ಯಾವ ಕಾರ್ಯಕ್ಕೂ ಬಾರದವನಾಗು : ಇಹದಲ್ಲಿ ಪರದಲ್ಲಿ ಪರಿಣಾಮಿಗಳಗಲಿ ಇಂತಿವಕ್ಕೆ ದೂರವಾಗಿ ಬಾಳುಗೆಟ್ಟು ಬೀಳಾದೆ ಜಾಳಾದೆ (ಪೋತೀಮು. ೯೬-೩೭೯).

ಜಾಳುಬೋಳು = ಬೆಲೆಯಿಲ್ಲದ ವ್ಯಕ್ತಿ : (ಶಿ). [ <ಜಳ್ಳು ]

ಜಾಳು$_2$ (ನಾ). ನೆಯ್ಗೆಯಲ್ಲಿ ಎಳೆಗಳು ಒಂದಕ್ಕೊಂದು ದೂರವಾಗಿರುವುದು ; ಒತ್ತೊತ್ತಾಗಿ ಇಲ್ಲದಿರುವುದು : ಜಾಳಾಗಿ ನೆಯ್ದ ಬಟ್ಟೆಗಳು ಹೆಚ್ಚುದಿನ ಬಾಳಿಕೆ ಬರುವುದಿಲ್ಲ (ಗೃಹವಿ. ೭೯) : ಆ ಪಾಣಿಪಂಚೆ ಎಷ್ಟು ಜಾಳಾಗಿತ್ತೆಂದರೆ (ಮುಳಿಯ. ೯೮).

ಜಾಳುಜಾಳು (ದ್ವಿರುಕ್ತಿ) : ಅಂಥ ಸಂದರ್ಭದಲ್ಲಿ ಅವನ ನುಡಿಮುಗ್ಗ ಜಾಳುಜಾಳಾಗಿ ಕಾಣುತ್ತದೆ (ನಂಜುಂಡ. ೧೦೭). [ <ಜಾಲ$_1$ ]

ಜಾಳುಗೊಳಿಸು (ಕ್ರಿ). ಹೀನಗೊಳಿಸು ; ಹಾಳುಮಾಡು : ಖಳ ಮಾತಾಕೃತ್ಯ ಕುಲದ ಸಚ್ಚರಿತೆಯಂ ಜಾಳುಗೊಳಿಸಿದುದು (ವಂಕುರಾ. ೨-೨೭-೧). [ ಜಾಳು$_1$ + ಕೊಳ್$_1$ + – ಇಸು$_3$ ]

ಜಾಳುಜೀವ (ನಾ). ಉಪಯೋಗವಿಲ್ಲದ ಪ್ರಾಣಿ ; ಯಾವ ಪುರುಷಾರ್ಥವನ್ನೂ ಸಾಧಿಸಲಾಗದವನು ; ಬಣಗು ಮನುಷ್ಯ : ಕೇಳಿದ್ಯೆ ಶ್ರುತಿ ವಾಕ್ಯವಾದುದ ಜಾಳುಜೀವರು ಹಲರು ಹರಿಯಲಿ ಕೀಳುಗಳು ಬ್ರಹ್ಮಾದಿ ದೇವವರೆಂಬ ಶ್ರುತಿಕೋಟಿ (ಸಂಭಪ. ೮-೭೩). [ ಜಾಳು$_1$ + ಜೀವ ]

ಜಾಳುದಕ (ನಾ). ಸೋಸಿದ ನೀರು (?) : ನೀಳಮಾಗುತ್ತರಿಸಿ ಲವಣಿಸುತ ಪಚನಿಸುತ ಜಾಳುದಕಮಂ ತೆಗೆದು ಗುಡಮನಿಡುತಲಱಿದು ಮೇಳವಿಸಿ ತಿಲಕುಟಜಗಂಧಕೃಚ್ಛ್ರವಣವಣ ಜವಾಳುಕಮರೀಚರಜವ ಬಾಳುಕದೊಡನೆ ತಳಿದು ಹದವಡವುದನುಗ್ಗೈದು (ಲಿಂಗಪು. ೮-೩೬). [ <ಜಾಳಿಸು$_2$ + ಉದಕ$_2$ ]

ಜಾಳುದೈವ (ನಾ). ಕ್ಷುದ್ರದೇವತೆ: ಜಾಳುದೈವದ ಪಾಳೆಯವನು ಸದೆಬಡಿದು ಕಾಲನ ಪುರಕೀಡಾಡಿದ ಜ್ವಾಲಾಮಾಲಿನಿಗಾನೆಱಗುವೆನು (ಅಂಜಚ. ೧-೩೯). [ ಜಾಳು$_1$ + ದೈವ ]

ಜಾಳುನುಡಿ, ಜಾಳ್ನುಡಿ (ನಾ). ೧. ಪೊಳ್ಳುಮಾತು ; ಕೆಲಸಕ್ಕೆ ಬಾರದ ಮಾತು ; ವ್ಯರ್ಥಾಲಾಪ : ಬಿಡು ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ (ಕುಮಾ.ಕ. ೨೨-೨೪). ೨. ಸುಳ್ಳು: ನಾಳೆ ನಾಳಿದ್ದು ಬರುತ್ತಾರೆಂದು ಜಾಳುನುಡಿಗಳಿಂದ ಸಾರಿ ಸಾರಿ ವ್ಯರ್ಥವಾಗುವುದು ಸರಿಯಲ್ಲ (ಕಾಲಸಂ. ೦೩, ಪ್ರಸ್ತಾವನೆ): ಜಾಳ್ನುಡಿ: ೧. ಮನಬಂದಂತೆ ಬೋಧ ಜಾಳ್ನುಡಿಗಳಿಂದ ಖಿಲರಾಡುತಮಿರ್ದರ್ (ವಂಕುರಾ. ೪-೦೮-೨೮). [ ಜಾಳು$_1$ + ನುಡಿ$_2$ ]

ಜಾಳುಮನುಜ (ನಾ). ಕ್ಷುದ್ರ ಮನುಷ್ಯ ; ಕೈಲಾಗದವನು : ಗಾಳಿ ಬೀಸುವ ವೇಳೆಯಲ್ಲಿ ತೂರಿಕೊಳ್ಳಿರೋ ಬೇಗ ಬೇಗ . . . ಜಾಳ[ಳು] ಮನುಜರಿರಾ (ಅಖಂಡೇ. ೭೪-೨೨). [ ಜಾಳು$_1$ + ಮನುಜ ]

ಜಾಳುಮಾತು (ನಾ). = ಜಾಳುನುಡಿ ೧ : ಕೂಳು ಪ್ರಸಾದವೆಂದು ನುಡಿವ ಜಾಳುಮಾತ ಕೇಳಿ ಕೂಳಿಂಗೆ ಆಳಾಗಿ (ಅರವ. ೨೪-೭೦) : ಹಾಳುಗುಡಿಯಲಿ ಕುಳಿತು ಜಾಳುಮಾತುಗಳಾಡಿ ಮೇಳಗಳ ಬಿಡದ ಶಿವಯೋಗಿ ಶಿವನಾಗಿ ಬಾಳುವನೆ (ಸರ್ವಜ್ಞ. ೫೮೬). [ ಜಾಳು$_1$ + ಮಾತು$_1$ ]

ಜಾಳುವಲೆ (ನಾ). ಒಂದು ಬಗೆಯ ಬಲೆ : ಕಾಲಸುಭಟರು ದೋಣೆ ದಲೆಗಳ ತೋಳ ಖಂಡಿಯ ಜಾಳುವಲೆಗಳವೋಲಿಯೇರಿನ ದೋರಿವಲೆಗಳಲ್ಲೈದೆ ಕೊಡಿದರು (ಸಂಭಪ. ೮-೦೦೬). [ ಜಾಳು$_6$ + ಬಲೆ$_1$ ]

ಜಾಳುವೆಣ್ (ನಾ). ದುರ್ಬಲಳಾದ ಹೆಂಗಸು; ಕೈಲಾಗದ ಹೆಣ್ಣು: ಜಾಳುವೆಣ್ಣುಗಳುಪವಾಸವ ಮಾಡಿವರೇಳಲಾಱರು (ಭರಚ. ೧೮-೧೩೫). [ ಜಾಳು$_1$ + ಪೆಣ್ ]

ಜಾಳಿ 'ಚಾಲಿ$_1$' ನೋ.

ಜಾಳೆದೆ (ನಾ). ಪೊಳ್ಳಾದ ಹೃದಯ ; ಹೇಡಿ ಮನಸ್ಸು : ಜಾಳೆದೆ [ಪಾಠಾಂ. ಲೆ] ಧೈರ್ಯದಲಿ ಸರ್ಪನ ಹೇಳಿಗೆಯ ಶಾಂತಿಯಲಿ . . . ಖಳ ತನ್ನೋಲಗಕೆ ನಡೆತಂದು ಮಂತ್ರಿಪ್ರಕರಕಿಂತೆಂದ (ಅಳ್ರ್ರುಚ. ೭-೮). [ ಜಾಳು$_1$ + ಎದೆ (<ಎರ್ದೆ) ]

ಜಾಳೈಸು 'ಜಾಲಿಸು' ನೋ.

ಜಾಳ್ಕ (ನಾ). (?) : ವಾಯುಮಂ ಪರಿದೊಡನೆ ಶಿಖರಾಗ್ರದಲ್ಲಿರ್ಪ ಪೀಯೂಷ ಫೇನವಮಂ ಜಿಹ್ವಾಗ್ರದಲ್ಲುಣಬೇಕವಂ ನೆರೆ ಜಾಳ್ಕನು (ಶಿಲಚ. ೯-೫). [ ? ]

ಜಾಳ್ನುಡಿ 'ಜಾಳುನುಡಿ' ನೋ.

**ಜಾಱಾಗು** (ಕ್ರಿ). ತಪ್ಪಿಹೋಗು ; ಇಲ್ಲದಂತಾಗು ; ನಷ್ಟವಾಗು : ಜಯಸಮರ ಜಾಱಾಯ್ತು ತೆಗೆ ಪಾಳೆಯಕೆ ಮರಳಿಱು ರಥವನು (ಕುವ್ಯಾ.ಕ. ೧೯-೩). [ ಜಾಱು$_3$ + ಆಗು$_1$ ]

**ಜಾಱಿಸು, ಜಾರಿಸು** (ಕ್ರಿ). ೧. ಹೋಗುವಂತೆ ಮಾಡು; ಕಳೆದುಬಿಡು: ಜವ್ವನಮಂ ಜಾಱಿಸಿ ಸುಖಮಂ ಸೂಱೆಗೆಳೆದು (ನಂಚಿರ. ೦೬-೨೮). ೨. ಬಿಟ್ಟುಕೊಡು ; ಹೋಗಗೊಡು ; ಸೋಲು : ಕೋಱೆ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವೆಮಗೆ ಸದರವೆ ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುವ್ಯಾ.ಕ. ೦-೨೪). ೩. ಎಸೆ ; ಬಿಸುಡು : ಪಾಳೆಯವ ಸೂಱೆಯನಾಡಿ ಗೂಡಾರಗಳನು ಕಿತ್ತು ಜಾಱಿಸಿದರು ದೆಸೆದೆಸೆಗೆ (ಕಂನವಿ. ೧೭-೮೦). ೪. ಸರಿಸು ; ಕದಲಿಸು ; ಓಸರಿಸು : ಹೇಳಿಗೆಯ ಮುಚ್ಚುಳ ಜಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುವ್ಯಾ.ಕ. ೨೩-೩೮) ; ಮಱೆದು ಮಲಗಿದಳೆವಳು ಮಗ್ಗುಲ ಸೆಱಗ ಮೆಲ್ಲನೆ ಜಾಱಿಸುತಲಾಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ ಮಱುಗಿದನು (ನಳಚ. ೫-೧೭) ; ಸುರತಾಂತದ ಶ್ರಮವಳಿವೊಡೆ ಮೈದಿಲ ಸೆಱಗ ಜಾಱಿಸಲಂಗನೆಯ ವಿಱುಗುವ ಬಡ ಬಾಸೆಯೊಪ್ಪಿತು ಮುಖಚಂದ್ರಗುರವಣಿಸುವ ರಾಹುವೆನಲು (ಕಂನವಿ. ೬-೧೨೪). ೫. ಹಿಮ್ಮೆಟ್ಟಿಸು ; ಹಿಂದಕ್ಕೆ ತಳ್ಳು : ಹಿಮದಿಂದೆ ತಣ್ಣಸಂ ಬಡೆದಿರ್ದ ಮಾಗಿಯಂ ಕ್ರಮದಿಂದೆ ಜಾಱಿಸಿ ವಸಂತರ್ತು ತಲೆದೋರ್ವ ಸಮಯದವೊಲು (ಕ್ಷಮಿಭಾ. ೩೦-೦೬). **ಜಾರಿಸು:** ೧. ಪ್ರೀತಿಕರ ನುಡಿಗಳು ಬೀರಿ ಜಾರಿಸಿದನತ್ಯಾತುರದ ದುಃಖವಂ (ವಂಕಾಲ. ೨-೨೨-೩೭). ೪. ಕುಕ್ಕೆಗಳನ್ನು ಒಂದಾದಮೇಲೆ ಒಂದನ್ನು ಹಗಲ ಮೇಲಕ್ಕೆ ಜಾರಿಸಿ ಕೊಳ್ಳುತ್ತಿದ್ದೆ(ಹಂಗಾಳ್ಕ.೫೦). ೬. (ಆಲಂ) ಲಪಟಾಯಿಸು; ಅಪಹರಿಸು: ಮನೆಯಜನರೆಲ್ಲ ಬೇರೆ ಬೇರೆ ಕಾಮಗಾರಿಕೆಯಲ್ಲಿ ಮಗ್ನರಾಗಿದ್ದಾಗ . . . ಒಂದು ರೂಪಾಯಿ ಜಾರಿಸಿಯೇ ಬಿಟ್ಟಿದ್ದನು (ಕಂಳೆ. ೨೪).

[ ಜಾಱು$_3$ + – ಇಸು$_3$ ]

**ಜಾಱು$_1$, ಜಾರು$_1$** (ಕ್ರಿ). ೧. ಜಗುಳು ; ನುಣುಚಿಕೊಳ್ಳು ; ಕಳಚಿ ಕೊಳ್ಳು ; ತಪ್ಪಿಸಿಕೊಳ್ಳು : "ವ್ಯಸರಸಿತನಲ್ಕೆ ಜಾಱಿತಂದಱಗೆ" (ಧಾಳಿವಿ. ೩೫) ; "ಜಗುಳಿತೆನಲ್ ನುಣ್ಚಿತೆನಲು ಜಾಱಿದುದದು ತಾಂ" (ಕವಿಕಂ. ೨೩೭): ತನ್ನ ಭೀಕರ ಗದಾಘಾತದೊಳಂ ಜಾಱೆ ಪಱೆವಱೆದು ತೂಱು ಪಾಱಾದ . . . ತುರಂಗಮಂಗಳಡಿಯೊಳಡಂಗಿದನೆ ಗೆತ್ತು (ಗದಾಯು. ೬-೨೮ ವ) ; ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುವ್ಯಾ.ಕ. ೨-೩೦) ; ಜಾಱಿತು ಜಾಣ್ಕೆ ಬಿಂಕಮರೆಗೊಂಕಿತು (ಚಿಳವಿ. ೬-೨೦೯). ೨. ಹೆಜ್ಜೆಯ ಹಿಡಿತ ತಪ್ಪು : ಬಾವಿಯ ಸೋಪಾನಮನಡರುತ್ತುಂ ಜಾಱುವಂದು (ಜಾವುಂಪು. ೨೦-೨೪). ೩. ಮೇಲಿನಿಂದ ಕೆಳಗೆ ಸರಿ : ಜನಬಸದಿಗಳನೇಱ ಯಲ್ಲಿಂದಿಳಿಯ ಜಾಱುತ (ಬಸಪು. ೫೨-೦೩) ; ಕೈಪಱೆಗುಟ್ಟುವಂಡಲಗೆ ತೇಲ್ದು ಮೇಲುದು ಜಾಱೆ (ಕ್ಷಮಿಭಾ. ೩-೬). ೪. ತಪ್ಪು ; ಹಾಳಾಗು : ನುಡಿದ ನುಡಿ ಜಾಱಿದಡೆ ಮನಕ್ಕೆ ಮನ ನಾಚಬೇಕು (ಬಸವ. ೬೬೭). ೫. ಕಳ್ಳ ಹೆಜ್ಜೆಯಲ್ಲಿ ಹೋಗು; ಕದ್ದುಹೋಗು: ಜಾಱೆ ನಿಜ ಜಾಱೆ ಸೋಮರ್ನಾಡಿ ಜಾಱೆ ಬೆಮರ್ವಱೆ ಮೇಲುದಂ ಮುಡಿದಲರ್ಗಳ್ ಜಾಱೆ ಮುದಂ ಜಾಱೆ ಮದಂ ಜಾಱೆ ಪದಂಜಾಱೆ ಜಾರೆ ಜಾಱಿದ ಕೊರ್ವಱ್ (ರಾಜಶೇ. ೦೨-೯). ೬. ಹಿಮ್ಮೆಟ್ಟು ; ಹಿಂಜರಿ : ಸರಳಿಂಗೆ ತಮ್ಮನ ನೀಡಿ ತೋಱಿಸಿ ಜಾಱುತದೆಯಣ್ಣಂದಿರಾದವರು (ಕುವ್ಯಾ.ಕ. ೨೪-೦೮) ; ಜಾಱಿತು ಮಹದಾದಿ ಶೀತ ಬೇಸಗೆ ಮೆಯ್ದೋಱಿತು (ಮೋಹತ. ೪-೪೮). ೭. ಮೀರು : ಜಾಱಿದೆನೆ ದಿನದಿನಕೆ ನಿಯಮಾಚಾರ ಭಾಷೆಗಳ (ಬಸಪು. ೪೪-೧೮). **ಜಾರು$_1$ :** ೧. ಹೊರಬರುವಳು ಶಿವನೆಡದಿಂ ಜಾರಿ ಜಗನ್ಮಾತೆ ರುದ್ರಜಾಯೆ ಗೌರಿ (ಗಣೇಶ. ೦೬-೯೨೦) : ಜವಾನನ ಮುಖಾಂತರ ನನಗೆ ತಿಳಿಯಹಿ ಜಾರಿ ಬಿಟ್ಟಿದ್ದಳು (ಮಱುವ. ೯೮): ಏಳೇಳು ರಾಜಕುವರ, ಶುಭಗಳಿಗೆ ಜಾರುತಿದೆ (ಸ್ವದರ್ಶಿ. ೯). ೩. ಮಕ್ಕಳು ಜಾರುಬಂಡೆಯ ಮೇಲಿಂದ ಜಾರುತ್ತಿದ್ದಾರೆ (ರೂಢಿ). ೪. ಜೀವನದಲ್ಲಿ ಒಮ್ಮೆ ಜಾರಿಬಿಟ್ಟರೆ ಎಚ್ಚತ್ತುಕೊಳ್ಳುವುದು ಕಠಿನ (ರೂಢಿ).

**ಜಾರಿಕೊಳ್ಳು** = ತಪ್ಪಿಸಿಕೊಳ್ಳು ; ಪಾರಾಗು : ಹಿಂದಕ್ಕೆ ಮುನಿಗಳ ಕೋಪದ ಶಾಪಗಳಿಂದ ಅನೇಕರು ಅಳಿದುಳಿದು ಬನ್ನಬಟ್ಟಿದ್ದಾರೆ ; ನಾನೊಲ್ಲೆ ಎಂದು ಅಗ್ನಿ ಜಾರಿಕೊಂಡ (ಬಡುರ. ೩೨). **ಜಾಱಗೆಡಹು**=ಜಾರಿಬೀಳುವಂತೆ ಮಾಡು ; ಉರುಳಿಸು : ಎಱುವುದು ನಿಮ್ಮವರ ಬಲವದ ಜಾಱಗೆಡಹು ವರವರು (ತೊರರಾ. ೬-೦೦-೦೦). **ಜಾಱಿಬೀಳು, ಜಾರಿಬೀಳು** = ಕಾಲುತಪ್ಪಿ ಕೆಳಗೆ ಬೀಳು; ಪತನಹೊಂದು; ಭ್ರಷ್ಟನಾಗು: ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲಱಯದೇಱದವರು ಜಾಱಿಬಿದ್ದು ಸೂಱೆ ಹೋದರು ಕಾಲಂಗೆ (ಆದಯ. ೨೭-೬೬): ಗವಯ ಗತಿಗೆಟ್ಟು ಜಾಱೆ ಬಿದ್ದನು ವನಸ (ಕಾಶಿರಾ. ೩೫-೦೭): ಜಾರಿ ಬಿದ್ದು ಉಣ್ಣೆಯಂಥ ನೆಲ ಅಂದ (ಗಾದೆ). **ಜಾಱಿವರಿ** = ಜಾರುವಂತೆ ಓಡು : ಪರಿವಾತಂ ಪಾಪೀಸೋಪಾನ ಮನಡರುತ್ತುಂ ಜಾಱಿವರಿದು ಕೆಡೆದು (ಆದಿಪು. ೨-೦೯ ವ).

[ ದೇ.೫ ತಮಿ. ಚಾಱು; ಮಲ. ಚಾರು; ತುಳು. ಜಾರು; ತೆಲು. ಜಾಱು ]

**ಜಾಱು$_2$, ಜಾರು$_2$** (ನಾ). ೧. ಜಾರುವಿಕೆ ; ಸರಿಯುವಿಕೆ ; ತಪ್ಪುವಿಕೆ : ಅಱುಂ ಗುಣಂಗಳಿಂದಂ ಜಾಱಿಲ್ಲದೆ ಸಂದ ತುಱಿಲಸಂದರ್ (ನೇಮಿಪು. ೦೦-೦೦೮): ಹೇಳಿರೇ ಭೀಷ್ಮಾದಿ ಹಿರಿಯರು ಮೇಲುದಾಯವ ಬಲ್ಲವರು ಹೆಜ್ಜಾಳುತನದಲಿ ಹಿಗ್ಗಿ ಕಂಡಿರೆ ಜಯದ ಜಾಱುಗಳ (ಕುವ್ಯಾ.ಕ. ೦-೦). ೨. ಇಳಿಜಾರಾದ ಪ್ರದೇಶ ; ನುಣುಚಿ ಬೀಳುವ ಜಾಗ : ಪಾಱುವ ಪಕ್ಕಿಗೆ ಸಂಚರಮುಂ ಜಾಱನೊಳೆ ನೆರೆವರ್ಪಲರುಂ . . .ಪಾಱುಗಳಂ ಮಿಗೆ ನಂಬುವದೆ (ಮರತಿ. ೦೦-೭೦) ; ಬಲೆದೊಡಕುಗಳು ಕರ್ಮವಾರ್ಗಂಗಳ ವೋಳೆಗಳುಗ್ರಂಗಳಾಶಾವಳಯುತಂಗಳು ಜಾಱುಗಳು ಬೀಱುಗಳು ರವಣೆ ಗಳು (ಬಸಪು. ೪೦-೫೭). ೩. ಹಿಮ್ಮೆಟ್ಟುವ ಗುಣವುಳ್ಳುದು ; ಅಪಸರಣವುಳ್ಳುದಂ : ಪಾಱುವ ಪಾಱುಂಬಲೆ ಕೊಳೆ ಜೀಱಿಟ್ಟಂಬರಕೆ ತಲೆ ಸಿಡಿಲ್ದೊಡವಾ ಕಾಯ್ವಾಱದೆ ಹರಣಂಗೆಯ್ವುವು ಜಾಱಲ್ಲದ ಪೋದರಟ್ಟಿಗಳ್ ಕೆಲವಾಗಳ್ (ಶಂಪರಾ. ೦೦-೯೩). ೪. ಮಾಯೆ : ಕಪಟ : ಮಾಱಾಂತ ದಾನವರ್ಕಳ ಜಾಱಿಂದರ್ವಿಸುವ ಬಳಮನೊರ್ವನೆ ರಣದೊಳ್ ಪಾಱಿಸಿದಂ ವಿದ್ಯೆಗಳಿಂ (ನೇಮಿಪು. ೦೨-೨೪). ೫. ಸಂಶಯ ; ಸಂದೇಹ: ಕುಲಿಶಂ . . . ಮತ್ಸ್ಯಮೆಂದಿಂತಿವು ತಳದೊಳ್ ಪಾದದೊಳ್ ಕೋಱೆ ಜಾಱೀಂ . . . ಪುಣ್ಯಾವಹಂ ತಾನೆನಿಕ್ಕುಂ (ಲೋಕೋಪ. ೦೦-೦೪): ನೀಱಯರ ಮನಮನೆಱಗಿಸೆ ಜಾಱೀಂ ಜವ್ವನದಿನಮರನೆಸೆದು ನಿಸದಂ (ಪಾರ್ಶ್ವಪು. ೫-೦೦೨); ಜಾಱಿಲ್ಲದ ಕೇಳ್ (ಅಭಿಮ. ೮-೨೦). **ಜಾರು$_2$ :** ೨. 'ಇಳಿಜಾರು' ಪರಾ. [ <ಜಾಱು$_1$ ]

**ಜಾಱುಂಗಲ್, ಜಾರುಗಲ್ಲು, ಜಾಱುಕಲ್, ಜಾಱುಗಲ್ಲು** (ನಾ). ೧. ಜಾರುವ ಕಲ್ಲು ; (ಪಾಚಿ ಕಟ್ಟಿರುವ) ನುಣುಪಾದ ಕಲ್ಲು. ೨. ಇಳಿ ಜಾರಾದ ಕಲ್ಲು; ಜಾರುಗುಪ್ಪೆಯಂತಿರುವ ಕಲ್ಲು: ಸಂದಣಿಸಿ ಬರ್ಪ ಸೋರ್ಕಾನೆಗಳ ಕಾಲ್ಹೊಱಗೆ ನೆಲನೊಂದೆಸೆಗೊಲೆದು ಜಾಱುಂಗಲ್ಲಂತೆ ತೋಱೆಯುಂ (ಕಬ್ಬಿಗಾ. ೨೦೮). **ಜಾರುಗಲ್ಲು:** ೧. ಕೆರೆಯ ಕೋಡಿಯ ಜಾರುಗಲ್ಲಿನ ಮೇಲೆ ಜಾರಿಬಿದ್ದನು(ರೂಢಿ). **ಜಾಱುಕಲ್:** ೧. ಜಾಱುಕಲ್ಪಂ ವಂತಾಸೆಯ ಪ್ರಸರಂ ಮೆಱೆವ ಚೆಲ್ವಂ ದೇವ ನೀವೇಱೆ ನೋಡಿರೆ ಚಿತ್ರಂಬಡೆದಪ್ಪುವೆಂದು ಮೆಱೆದರ್ ವಾಹಂಗಳಂ ವಾಹಕರ್ (ಅನಂಪು. ೨-೩೦). **ಜಾಱುಗಲ್ಲು:** ೧. ಹುಲ್ಲುಗಳ್ ಬೆಳೆದಾಗ ದಾರಿಬಿಡದೆ ಜಾಱುಗಲ್ಲ ಮಱಸಿಕೊಂಡಿಹುವು (ಕಂನವಿ. ೧೮-೩೯). [ಜಾಱು$_2$+ಕಲ್$_3$ ]

**ಜಾಜುಕಲ್** 'ಜಾಜುಂಗಲ್' ನೋ.

**ಜಾಜುಗಲ್ಲು** 'ಜಾಜುಂಗಲ್' ನೋ.

**ಜಾಜುವಲೆ** (ನಾ). ಒಂದು ಬಗೆಯ ಬಲೆ: ಹಾಜುವಲೆ ಜಾ[ಪಾಠಾಂ. ಬೀ] ಜುವಲೆ ಬಡಿಗೆವಲೆ . . . ಮಂದುಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ಹರಿಶ್ಚಾ. ೫-೮). [ ಜಾಜು₂ + ಬಲೆ₁ ]

**ಜಾಜುವೊಯ್ಲು** (ನಾ). ಒಂದು ಬಗೆಯ ಏಟು; ಓರೆಯಾದ ಹೊಡೆತ : ಜಾಜುವೊಯ್ಲಡವೊಯ್ಲು . . . ಉಚ್ಚೀಟುವೊಯ್ಲಿನಲೊದಗಿದರು ಭಟ ರಸಮುಸಮರದಲಿ (ತೊರಶಾ. ೪-೪-೨೪). [ ಜಾಜು₂ + ಪೊಯ್ಲು ]

**ಜಾಜುವೋಗು** (ಕ್ರಿ). ಹಿಮ್ಮೆಟ್ಟು : ಜಾಱಿಬಿದ್ದನು ಪನಸ ದಧಿಮುಖ ರೂರುಗೆಡಿಸಿದ ನಳನು ಮುಗ್ಗಿದ ಜಾ[ಜಾ]ಜುವೋದನು ನೀಲನು (ಕೌಶಿಶಾ. ೩೫-೦೭). [ ಜಾಜು₃ + ಪೋಗು₁ ]

**ಜಾಟಿಗೆ** 'ಸಾಟಿಗೆ' ನೋ.

**–ಜಿ** (ಪ್ರ). ಗೌರವಾರ್ಥವಾಗಿ ನಾಮವಾಚಕಗಳ ಕೊನೆಯಲ್ಲಿ ಸೇರುವ ಪ್ರತ್ಯಯ. 'ಅಕ್ಕಾಜಿ', 'ಅಣ್ಣಾಜಿ', 'ಜೀಯ' ಪರಾ.

[ <ಪ್ರಾ. ಜಇ./ಸಂ. ಜಯಿನ್ ]

**ಜಿಂಕರ** (ನಾ). ಒಂದು ಬಗೆಯ ವಾದ್ಯ : ಪೊಯ್ಸ್ಕೈವದ್ದಳೆಯ ದನಿಯುಂ ಊದುವ ಜುಂಜೆಯ ರವಮುಂ ಬಾಱಿಪ ಜಿಂಕರವುಂ ರವಳಿಯುಂ ನೆರವೆ (ಅರ್ಧನೇ. ೮-೭೫ ವ). [ ? ]

**ಜಿಂಕರಿಸು** 'ಜೀಂಕರಿಸು' ನೋ.

**ಜಿಂಕು** (ನಾ). ಒಂದು ಅನುಕರಣ ಶಬ್ದ : ಪೆಣ್ದುಂಬಿಯ ಜಿಂಕು ತುಂಬಿ ಗಟಪಂ ಕೈಸಾರ್ಚ ಕೈವರ್ಪ ಚೆಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದವಾ ಕಂದನಂ (ಸುಕು.ಸು. ೧೦-೨೬).

**ಜಿಂಕುವರಿ** (ಕ್ರಿ). (ನೊಣಗಳು ಮುತ್ತಿ) ಝೇಂಕಾರಮಾಡು ; ಮೊರೆ : ಪೊಲೆ ಮಸಗಿ ಜಿಂಕುವರಿವಂ[ಪಾಠಾಂ. ದಿಕ್ಕುವರೆಗಂ]ತಲಸದೆ ಭಾರತ ಮನೆಯ್ದೆ ಕಿಡೆವೇಟ್ಟುದಱಿಂ ಪೊಲೆಯರ ಬಸಿಱೊಳ್ಪಂದಮ್ಮೞಿನಾತ್ಮಂ ವ್ಯಾಸನೆಂಬರ್ (ಸಮಾಪ. ೧೦-೧೭೮). [ ಜಿಂಕು + ಪರಿ₂ ]

**ಜಿಂಕೆ** (ನಾ). ಚಿಗರೆ ; ಎರಳೆ ; ಹರಿಣ : ಉಬ್ಬನೇರ್ದುದೆ ಜಿಂಕೆ ? ಕೂಡೆ ಎರಿದನದಂ (ಶ್ರೀರಾಮಾ. ೨೪೫-೨೦೬).

[ ದೇ. ಙ ತುಳು. ಜಿಂಕೆ; ತೆಲು. ಜಿಂಕ ]

**ಜಿಂಗಿ₁** (ನಾ). ಮಂಜಿಷ್ಠೆಯೆಂಬ ಗಿಡ ಮತ್ತು ಅದರಿಂದ ತಯಾರಿಸುವ ಒಂದು ಬಗೆಯ ಔಷಧ : "ಮಂಜಿಷ್ಠಾ ವಿಕಸಾಖ್ಯಂ ತಾಂ ಜಿಂಗಿ" (ವಸ್ತು.ಕೋ. ೩೬-೨೩). [ ಸಂ. ಜಿಂಗೀ ]

**ಜಿಂಗಿ₂** (ನಾ). (ಉಕ) ಮಾದಕದ್ರವ್ಯದ ಸೇವನೆಯಿಂದುಂಟಾಗುವ ಮೈಮರೆವು,–ಮಾದಕತೆ. [ ←ಮರಾ. ಝಿಂಗೀ ]

**ಜಿಂಜರಗಿ** (ನಾ). ಒಂದು ಬಗೆಯ ಗಿಡ : ಕೆಲವು ಕಡೆಗಳಲ್ಲಿ ಗುರಗಿ, ಬಿದಿರು . . . ಜಿಂಜರಗಿ, ಮುಕ್ಕಡಕ ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಶಂಜಪಾಂ. ೩). [ ? ]

**ಜಿಂಜಿ** (ನಾ). ಒಂದು ಅನುಕರಣ ಶಬ್ದ : ಪದಿರ ಪಱೆ ಮುಂದೆ ಗುಡಿ [ಯ]ಗ್ಗದ ಬಂಧು ತಗುಳ್ದು ಪೊಗಟ್ಟುಗೇಳ್ಪರ್ ಪೆಱಗಂ ಪುದಿದೊದವಿದ ಜಿಂಜಿ ಕರಂ ಹೃದಯಂಗಮಮಾಗೆ ನಾಯಕರ್ ನಡೆಗೊಂಡರ್ (ವರ್ಧಮಾ. ೮-೪೭).

**ಜಿಂಜಿಣೆ** (ನಾ). ತೊಂದಿಕೆ ; ಸಂಬಂಧ (?) : ಕೆಂದಳಿರ ಸೆಜ್ಜೆಯ ಜಿಂಜಿಣೆ[ಪಾಠಾಂ. ಸಿಂಜಿಣಿ] ಪೋಕೆ ನಿನ್ನ ಕೂಟದೊಳಿನಿದಕ್ಕೆ ಮತ್ತಮಿಗೆ (ಪಂಪಭಾ. ೫-೦೮) : ನನ್ನ ಅಸ್ಥಿಗಳನೆ ನನ್ನ ಹೆಸರಿನಿಂದ ಲಿಂಗವಾಗಿ ಪೂಜೆ ಗೊಳ್ಳಿ, ನನ್ನ ಚರ್ಮವನೆ ಜಿಂಜಿಣೆಯಾಗಿ ಉಟ್ಟು (ಭೈರಸೂ. ೦೨೦).

[ ? ]

**ಜಿಂಜಿತ** (ನಾ). "ಕಾಮಚೇಷ್ಟೆ" (ಪ್ರಭುಪು. ಕೋಶ). 'ಜಿಂಜಿತಂಗೆಯ್' ಪರಾ. [ ? ]

**ಜಿಂಜಿತಂಗೆಯ್** (ಕ್ರಿ). ಕಾಮಚೇಷ್ಟೆ ಮಾಡು : ಚಿಂದುಟಿಯ ಕರ್ದುಕುತ ಭರದಿಯಿಂಬಿನಿಂ ಜಿಂಜಿತಂಗೆಯ್ವುತಂ ಕೊರಲ್ಬುಚಂ ಎದೆ ಪಾರ್ಶ್ವಗಳೊಳು (ಪ್ರಭುಪು. ೫-೬೦). [ ಜಿಂಜಿತ + ಕೆಯ್₁ ]

**ಜಿಂಜಿರ** (ನಾ). ಮೂಳೆಮಾತ್ರ ಉಳ್ಳವನು ; ಜೀರ್ಣನಾದವನು : ಕರಮೆ ಜಿಂಜಿರಾಗಿ ಮರುಳ ರೂಪಿನೊಳ್ ಸಮಾನರಂ . . . ಕನ್ನಡಿಯೊಳ್ ಕಂಡು ಬೆರ್ಚಿ (ಬಂಹರಿ. ೦೩-೩೩). [ ? ]

**ಜಿಂಜಿರಿ** 'ಜಂಜರ₁' ನೋ.

**ಜಿಂಜಿರಿಸಂಕಲೆ** (ನಾ). ಸರಪಳಿಯ ಬೇಡಿ,–ಸಂಕೋಲೆ : ಕಂಜಾಕ್ಷಿ ಕಾಲಸಂಕಲೆ ಮಕ್ಕಳಾದರೆ ಗುಂಜಿನ ಕೊರಳ ಸಂಕಲೆಯು ಜಿಂಜಿರಿಸಂಕಲೆ ಯೊಳಗಾರು ಬಾಳ್ವರೆಂದಂಜಿದರವರು ದಂದುಗಕೆ (ಭರತೇ. ೬೫-೨೯).

[ ಜಿಂಜಿರಿ (<ಜಂಜರ₁) + ಸಂಕಲೆ ]

**ಜಿಂಟುಕ** (ನಾ). (?) : ಎಱಗಲಱಿಯದೆ ಜಣ್ಬುಕಮ್ಮುಗುಟ್ಟಂ ಬರಲಣ ಮಱಿಯದೆ ತಪ್ಪಂ ಪಿನ್ದಂ ತೆಱನನಱಿಯದೆ ಭಂಗಮನಿಕ್ಕಿಯುಂ (ಎಕ. II, ೦೩೩-೦೩೭ : 982). [ ? ]

**ಜಿಂಡು** (ನಾ). (?) : ತಲೆಗಳ್ ಸೆಂಡುವೊಯ್ದಂತೆ ಪಾರುತ್ತಿರೆ ಮುಂಡಂ ಜಿಂಡು ಮುಂದಾಗುರುಳುತಿರೆ ರಣಕ್ಷೋಣಿಯೊಳ್ (ಎಕ. VIII, ಸೊರಬ. ೦೩೪-೨೭ : ಸು. 1145).

[ P ಇದು 'ಹಿಂದು' ಎಂಬುದರ ಅಪಲಿಖಿತವಿರಬಹುದು ]

**ಜಿಂದಗಾನಿ** (ನಾ). = ಜಿಂದಗಿ : (+). [ ←ಪಾರ. ಹಿಂ.ಮರಾ. ಜಿಂದಗಾನೀ ]

**ಜಿಂದಗಿ, ಜಿಂದಿಗಿ, ಜಿಂದಿಗೆ** (ನಾ). ೧. ಒಬ್ಬ ವ್ಯಕ್ತಿಗೆ ಸೇರಿದ ದನಕರು ಮೊದಲಾದ ಚರಾಸ್ತಿ ಹಾಗೂ ಜವಿಾನು ಮುಂತಾದ ಸ್ಥಿರಾಸ್ತಿ : ಜಪ್ತ ಮಾಡಿದ ಜಿಂದಗಿಯ ಬೆಲೆ ೧೩೫ ರೂ. ಇದ್ದರೆ ಪಂಚನಾಮೆಯಲ್ಲಿ ಕಾಣಿಸಿದ್ದು ೨೪ ರೂ. (ಕಲವೀ. ೯೩); ಮಿಕ್ಕುಳಿದ ತತ್ವಗಳನ್ನು ಮನ್ನಿಸದ ವರನ್ನು ಕುರಿತು ೧ನೆಯ ತಪ್ಪಿಗೆ ಅವರ ಜಿಂದಗಿಯನ್ನು ಜಪ್ತ ಮಾಡು ವದು (ಇಂಗ್ಲ.ಇ. ೩೩); ಚರ ಜಿಂದಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಿಂದಗಿಯ ಮೌಲ್ಯವನ್ನು ಕುರಿತ ದಾವೆ (ಗ್ರಾಮೂಳ. ೩೦). ೨. ಬದುಕು ; ಜೀವನ. **ಜಿಂದಿಗಿ :** ೧. ಸಾಹೇಬನ ಜಿಂದಿಗೆಲ್ಲ ಚೆನ್ನವ್ವನ ಪಾಲಿಗೆ (ಕೋಳಗೀ. ೨೨೨); ತಮ್ಮ ಜಿಂದಿಗಿಯನ್ನೆಲ್ಲ ಸುರಕ್ಷಿತವಾಗಿ ಇಟ್ಟು ಕೊಳ್ಳುವುದಕ್ಕೆ ಎಂಥದೇ ಆದರೂ ಸರಿ, ಒಂದು ಬಾಗಿಲುಳ್ಳ ಮನೆಯಾದರೆ ಸಾಕು (ಕಾಳಕಾ. ೨೫). **ಜಿಂದಿಗೆ :** ೧. ಇಲ್ಲಿ ಯಾವತ್ತೂ ಜಿಂದಿಗೆಯನ್ನು ನಾನು ಸ್ವತಃ ಸಂಪಾದಿಸಿರುತ್ತೇನೆ (ಶಿಶ್ರಮ. ೩೮) ; ನನ್ನ ಜಿಂದಿಗೆಯು ಬರಿದಾಗುತ್ತ ಬಂದಿದೆ (ಅಜಿತ. ೦೭); ಸಾಯುವ ಪೂರ್ವದಲ್ಲಿ ಅವನು ಮನೆ ಯಲ್ಲಿ ತಕ್ಕಮಟ್ಟಿಗೆ ಜಿಂದಿಗೆಮಾಡಿದ್ದನು (ಉತ್ತಗ್ಗ. ೩೨).

[ ←ಪಾರ. ಹಿಂ. ಮರಾ. ಜಿಂದಗೀ ]

**ಜಿಂದಾಬಾದ್** (ನಾ). ಜಯವಾಗಲಿ, ಗೆಲುವಾಗಲಿ ಎಂಬುದನ್ನು ಸೂಚಿಸುವ ಒಂದು ಶಬ್ದ : ಇಂಕ್ವಿಲಾಬ್ ಜಿಂದಾಬಾದ್ (ಅಕ್ಕಾರ್ತ. ೦೨೪). [ ←ಹಿಂ. ಜಿಂದಾಬಾದ್ : ಪಾರ. ಜಿಂದಹ್‌ಬಾದ್ ]

**ಜಿಂದಿಗಿ** 'ಜಿಂದಗಿ' ನೋ.

**ಜಿಂದಿಗೆ** 'ಜಿಂದಗಿ' ನೋ.

**ಜಿಂಭಳಿ** (ನಾ). (?) : ಸಂಭಳವಂ ಕಟ್ಟಿ ಭಯದಾ ಬಟ್ಟೆಯಂ ಹೊಗದೆ: ಪೊಂಭುರಿಗರಯನಿಕ್ಕದೇ ಜಿಂಭಳಿ ಅಪತ್ತಿನಲ್ಲೀ ಬಂದರೆ ಸಾಕೇ (ಗುಭಕ. ೯-೫೦). [ ? ]

**ಜಿಂಹ** (ನಾ). ಆಲಸ್ಯ ; ಜಡತೆ. 'ಜಿಂಹಭಾವ' ಪರಾ.

[ <ಸಂ. ಜಿಹ್ಮ ]

**ಜೋಗಿ$_1$** (ನಾ). ೧. ಯೋಗಿ; ತಪಸ್ವಿ; ಋಷಿ: "ಕಿತ್ರಡಿ, ಜತಿ, ಜೋಗಿ, ತವಸಿ, ರಿಸಿ–ಶಿ ಋಷಿ" (ಶಶಸಾ. ೨೦-೪೪೫): "ಜೋಗಿ ಕಿತ್ರಡಿ ಯೆನುತುಂ ತಾಂ ತವಸಿ ರಿಸಿಯುಮೆನೆ ಋಷಿಯಕ್ಕುಂ" (ಶಬ್ದಮಂ. ೧೮೭): ಜೋಗಿಗೆ ಜೋಗಿಣಿಯಾಗಿಹಳು ಮಾಯೆ (ಮಹಾದೇ. ಬ. ೯೮-೨೨೭): ಪುಲಿ ದೊವಲೆಸೆದುದು ಜೋಗಿಗೆ (ಲೀಲಾವ. ೪-೭೮): ತರಳೆ ರನ್ನೆ ಕಪ್ಪು ಮಯ್ಯವ ಯಾತಆ ಚೆಲುವನೆ ಕರಿಯ ಜಡೆಯ ಜೋಗಿಗಿಂತ ಉತ್ತಮ ನೇನೇ (ಪುರಂದ. ೨-೭೩-೧): ಬೆಸಗೊಂಬಳು ಜೋಯಿಸರ ಜೋಗಿ ಪುರುಷರ(ಹರಿಬ. ೬-೩೪); ಜೋಗಿ ಜೋಗಿಯುನ್ನು ತಬ್ಬಿಕೊಂಡರೆ ಮೈಯೆಲ್ಲ ಬೂದಿ (ಗಾದೆ). ೨. ನಿಂತಲ್ಲಿ ನಿಲ್ಲದೆ ಅಲೆಯುವ ಭಿಕ್ಷು,–ಬೈರಾಗಿ; ಗೋಸಾವಿ: ಆ ಕೋಡಗವನಾಡಿಸಿ ಕೊಂಡುಂಬ ಜೋಗಿಗಳ್ಗೇಕೆ ಆರೂಢನ ಸುದ್ದಿ (ಮೋಳಿಮಾ. ೨೦೦-೭೬೪); ಮಹಾದೇವನೆತ್ತಲೈ ಸುರೆ ಗುಡುಹಿ ಜೋಗಿಗಳು ನೀವೆತ್ತಲೆಂದು ನುಡಿವುತಿರ್ದನು (ವೀಕ್ಷಪು. ೪-೧೧-೧೪): ಜೋಗಿ ಜಂಗಮ ದರವೇಸಿಗಳಿಗೆ . . . ಅನ್ನವನೀವ ರಾಗದ ಭವನವೊಪ್ಪಿದುವು (ಕಂಸವಿ. ೨೦-೪೭). [ <ಸಂ. ಯೋಗಿನ್ ]

**ಜೋಗಿ$_2$** (ನಾ). ಒಂದು ಬಗೆಯ ವಿಷಸರ್ಪ: ಬೇರೆ ವಿಷಯುಕ್ತ ಸರ್ಪಗಳು . . . ಸಂಕಪಾಳ, ಜೋಗಿ, ಸುರ್ಗಂಡ (ಕಥಾಗಿ. ೬೭).

[ ←ಮರಾ. ಜೋಗೀ ]

**ಜೋಗಿಗ** (ನಾ). ಮಣೆಗಾರ; ಮಣಿಯನ್ನು ಮಾರುವವನು (?): ತಾಳಧಾರಿಗ ಮದ್ದಳಿಗ . . . ನಟುವಿಗರ ಹೇಳಲಳವೆ ಜೋಗಿಗ ಮುಟ್ಟಿಗರ ಗೃಹ ಸಾಲುವಿಡಿದು ರಾಜಿಪುವು (ಕಂಸವಿ. ೬-೫೭).

[ ಜೋಗಿ ? + – ಇಗ ]

**ಜೋಗಿಜಿಡೆ ಜೋಳ** (ನಾ). ಒಂದು ಬಗೆಯ ಜೋಳ: ಪಟ್ಟಣಸಾಳಿ, ಗೌರೀ ಕುಲ . . . ಜಲ ಕೊಂಜೋಳ ಅಥವಾ ಜೋಗಿಜಿಡೀಜೋಳ . . . ಈ ಎಂಟು ಜಾತಿಗಳು (ಕಥಾಗಿ. ೨೭೦). [ ? + ಜೋಳ ]

**ಜೋಗಿಣಿ** (ನಾ). ತಪಸ್ವಿನಿ; ಯೋಗಿನಿ: ತೆಗೆದುಟ್ಟ ಸೋಗೆ ಕರಮೊಪ್ಪಿರೆ ಜೋಗಿಣಿ ಬರ್ಪಳೊಪ್ಪಿದಳ್ (ಲೀಲಾವ. ೪-೮೫): ಪಾವಿನ ಪಚ್ಚದಿನಚ್ಚರಿವಡೆದ ಜೋಗಿಣಿಯಂತಿರ್ಪಳ್ (ಕಬ್ಬಿಗಕಾ. ೩೦೫): ಜೋಗಿಗಂ ಜೋಗಿಣಿಯದಾಯ್ತು ನಿನ್ನಯ ಮಾಯೆ (ಮದೀಶ. ೭-೯೫); ಬಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರತ. ೦೪-೫೨); ಜೋಗಿಣಿಯಂತೆ ಮಧುದೂತಿಗೆಳಸಿದರ್ . . . ಬನದೊಳಾ ಪೆಣ್ಗಳ್ (ಜಬಪು. ೪೩-೪೦); ಉದಯದಿಗ್ವಧುವೆನಿಪ ಜೋಗಿಣಿಯ ಕೈಯಲೊಪ್ಪಿದ ಪದ್ಮರಾಗ (ಸಂದಿಮಾ. ೧೯-೧೧).

[ <ಪ್ರಾ. ಜೋಗಿಣೀ, ಜೋಯಿಣೀ./ಸಂ. ಯೋಗಿನೀ ]

**ಜೋಗಿಣಿತಿ** (ನಾ). = ಜೋಗಿಣಿ: ಇಂತೆಂದೊರೆದಳೆಲೆ ಜೋಗಿಣಿತಿ ಸುರುಚಿರಮೆನಿಪೆನ್ನ ಸುವ್ರತಕೆ ಭಂಗಮಿರದಾಯ್ತು (ಪ್ರಭಂಜ. ೩-೧೧೩)

[ ಜೋಗಿಣಿ + – ಇತಿ$_1$ (<–ಇತ್ರಿ) ]

**ಜೋಗಿತಿ, ಜೋಗತಿ** (ನಾ). ೧. = ಜೋಗಿಣಿ: ಒಕ್ಕಲಿತಿ, ಸಟ್ಟಿತಿ, ಗಣಿತಿ, ಜೋಗಿತಿ (ಶಬ್ದಾನು. ೨೦೨ ಪ್ರಯೋ): ಈ ರಗಳೆಯ ಹರಿಹರ ಜೋಗಿಯಂತೆ! ಆ ಹೆಣ್ಣುಗಳು ಜೋಗಿತಿಯರಂತೆ! (ತುಂಗಭ. ೧೦೮). ೨. ಎಲ್ಲಮ್ಮ ದೇವತೆಯ ಭಕ್ತೆ; ಜೋಗಮ್ಮ: ಜೋಗಿತಿಯ ದನಿ ಕೇಳಿದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಬನಸಿ. ೭೫); ಜೋಗಿತಿ ನಿನ್ನ ಮದುವೆ ಆಗಲೇ ಇಲ್ಲವೇ? (ಸ್ವಪ್ನಹೊ. ೨೯೨). **ಜೋಗತಿ**: ೨. ಸಂತೆಯಂಗಡಿ ಸೂಳೆ ಮುಂತೊಲಿವ ಡೊಂಬತಿಯ ಎಂತು ಗಂಡಸಿಯ ಜೋಗತಿಯ ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೭): ಮುಪ್ಪಿನ ಕಾಲಕ್ಕಾದರೂ ಜೋಗತಿಯ ವೇಷ ಬೇಡವೇ (ಹ ಳ, ಹಾ. ೯೦): ಜೋಗಯ್ಯನಾಗಲಿ, ಜೋಗತಿಯಾಗಲಿ ಹೆಜ್ಜೆಗಳನ್ನು ಹಾಕಿ ಕುಣಿಯುವ ದೃಶ್ಯವು . . . ಆಕರ್ಷಿಸದಿರದು (ಕನ್ನಹಾ. ೧೩): ಹಾದಿ ಮುಪ್ಪಾಗಿ ಹಳ್ಳವಾಯಿತು, ಸೂಳೆ ಮುಪ್ಪಾಗಿ ಜೋಗತಿಯಾದಳು (ಗಾದೆ).

[ ಜೋಗಿ$_1$ + – ಇತಿ$_1$ (<–ಇತ್ರಿ) ]

**ಜೋಗಿಯರಳೆ** (ನಾ). ಒಂದು ಬಗೆಯ ಸಸ್ಯ: ಹೂವರಿಸಿ, ಜೋಗಿಯರಳೆ, ಬಾಗ:ರಿ (ಪ್ರುಶಿಗಿ. ೭೪-೦೫೨೧). [ ? ]

**ಜೋಗಿವರಾಳಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು: ಶೋಕವರಾಳಿ ವಸಂತವರಾಳಿ ಜೋಗಿವರಾಳಿ . . . ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳು (ವಿವೇಳ. ೨೩೫).

[ ಜೋಗಿ? + ವರಾಳಿ ]

**ಜೋಗಿಸು** 'ಜೋಗೈಸು$_2$' ನೋ.

**ಜೋಗು$_1$** 'ಜುಮ್ಮು$_3$' ನೋ.

**ಜೋಗು$_2$** 'ಜವುಗು' ನೋ.

**ಜೋಗು$_3$** 'ಜೋಗ$_1$' ನೋ.

**ಜೋಗುಗೊಳ್** (ಕ್ರಿ). ಧ್ಯಾನಮಾಡು; ತಪಸ್ಸನ್ನು ಕೈಗೊಳ್ಳು; ತಪಸ್ಸುಮಾಡು: ಇರ್ವರುಮೊಂದೆ ಗುಹೆಯೊಳ್ ಜೋಗುಗೊಂಡು ನಾಲ್ಕು ತಿಂಗಳಿರ್ವರುಮುಪವಾಸಂಗೆಯ್ದು (ವಡ್ಡಾರಾ. ೪೯-೭); ವಿಷ್ಣುಗಳೆಂಬಾಚಾರ್ಯರ್ ಸಮುದಾಯಂಬೆರಸಲ್ಲಿ ಜೋಗುಗೊಂಡಿರ್ಪುದುಂ (ಧರ್ಮಾಮೃ. ೯-೦೭೫): ಕಾಂತಾರಮಧ್ಯದೊಳಾ ವರ್ಷಕಾಲಮಾಸನ್ನಮಾಗೆ ಜೋಗುಗೊಂಡಿರ್ಪುದುಂ (ಪುಣ್ಯಾಸ್ರ. ೦೨-೨ ವ).

[ ಜೋಗು$_3$ (<ಜೋಗ$_1$) + ಕೊಳ್$_1$ ]

**ಜೋಗುಳ, ಜೋಗಳ$_1$, ಜೋಗಳೆ, ಜೋಗುಲಿ, ಜೋಗುಳೆ** (ನಾ). ಮಕ್ಕಳನ್ನು ಮಲಗಿಸುವಾಗ ಹೇಳುವ ಹಾಡು; ಜೋ ಎಂಬ ಪಲ್ಲವಿಯಿಂದ ಕೂಡಿರುವ ಹಾಡು; ಲಾಲಿಪದ: ಜಗದಾತ್ಮ ಜೋ ಜರಾಮರಣವಿದೂರ ಜೋ ಎನುತೆ ಜೋಗುಳವಂ ಶ್ರುತಿಗೂಡಿ ಪಾಡಿದರ್ (ಅನಂಪು. ೬-೩): ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು (ಬಸರ.೧-೧೪೦); ಆದ್ಮರ ಗೀತದೊರೆಯನಾಲಿಸುವಂತೆ ಜೋಗುಳವನಾಲಿಸುವನು (ಶದ್ಮರಾ. ೨-೭೦); ನುಡಿಗಗೋಚರದಮಳ ಬೊಮ್ಮದ ಕಡುಹು ನಿಂದುದು ಜೋಗುಳದಲವಗಡೆಯ ದೇವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ (ತೊರರಾ. ೦-೮-೭೩); ಅಂಗನೆಯರೊಲ್ದು ಪಾಡಿದರು ಜೋಗುಳ (ಮಹಾವಿ. ೩-೨೦): ಬೆಟ್ಟ ಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು! (ಅನಿಕೇ. ೫೩-೫). **ಜೋಗಳ$_1$**: ಮನೆಯಲ್ಲಿ ತಾಯಿಯು ಜೋಗಳವೆತ್ತಿ ಲಾಲಿಗಳನ್ನು ಹಾಡಿ(ಕನ್ನಹಾ.೩೭): ಕೂಸು ಕಾಸ ಹಡೆಯದು, ಜೋಗಳ ಮುಗಿಲು ಮುಟ್ಟಿತು (ಗಾದೆ). **ಜೋಗಳೆ**: ಸೋಮರ್ಾಡಿಯ ಸೊಬಗೆಯರು . . . ಜೋಗಳೆಯನು ಪಾಡಿದರು (ಅಂಜನ. ೪-೪೭) **ಜೋಗುಲಿ**: ತೊಟ್ಟಿಲ ಶಿಶುವಿಂಗೆ ಜೋಗಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಲಿಯುಂಟೇ (ಸರ್ವವ. ೨೭-೦೨೪); ವಿಮಲಾಗಾರದ ಬಲಾಜನದ ಜೋಗುಲಿ[ಪಾಠಾಂ. ಳಿಗೆ]ಯರಸ ಜೋಯೆನುತ . . . ನಾರಿಯರು ಸ್ವರವೆತ್ತಿ ತೂಗಿದರು (ತೊರರಾ. ೬-೨೨-೧೨). **ಜೋಗುಳೆ**: ತೊಟ್ಟಿಲ ಶಿಶುವಿಂಗೆ ಜೋಗುಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳೆಯುಂಟೇ (ಸರ್ವವ. ೨೭-೦೨೪); ತೊಟ್ಟಿಲ ಮಜಿಗೆ ಜೋಗುಳೆಯಂತೆ ಗಳಪಿದವಲ್ಲಿ ಚಕೋರಿ (ಶ್ರೀಪಾಂ .೨-೨೩): ತೊಟ್ಟಿಲೊಳಗಾಬಾಲ ನೊಱಗುವನಲ್ಲಿಯಿಂ ಜೋಗುಳೆಯನಾಲಿಸುತ (ಸಾಳ್ವಭಾ. ೪-೧); ಹಸುಳೆ ಜೋಗುಳೆಗೆ ಸರ್ಪ ಸುನಾಗಸರಕೆ . . . ಗುಂಡಾಕ್ರಿಗೆ ಶಿರವೊಸರ್ವುದಿದು ಘನವೆ (ಭರತ. ೦-೮೮).

[ ದೇ. ೫ ತುಳು. ಜೋಗುಳ; ತೆಲು. ಜೋಗಡ, ಜೋವಡ, ಜೋಲ ]

**ಜೋಗುಳಂಪಾಡಿಸು** (ಕ್ರಿ). ಲಾಲಿಯನ್ನು ಹಾಡಿಸು : ಬಾಯಿನವನೊಡನಿರ್ದ ರುದ್ರಕುಮಾರಿಯರ್ಗಿಕ್ಕಿ ತೊಟ್ಟಿಲೊಳು ಪಟ್ಟಿರಿಸಿ ಜೋಗುಳಂಪಾಡಿಸಿದಳು (ಸಿದ್ಧರಾ. ೧-೫೮).

[ ಜೋಗುಳಂಪಾಡು (<ಜೋಗುಳಂಬಾಡು) + – ಇಸು₃ ]

**ಜೋಗುಳಂಪಾಡು** 'ಜೋಗುಳಂಬಾಡು' ನೋ.

**ಜೋಗುಳಂಬಾಡು, ಜೋಗಳೆವಾಡು, ಜೋಗುಳಂಪಾಡು, ಜೋಗುಳಪಾಡು, ಜೋಗುಳವಾಡು₁, ಜೋಗುಳೆವಾಡು** (ಕ್ರಿ). ಜೋಗುಳವನ್ನು ಹಾಡು ; ಲಾಲಿಯನ್ನು ಹಾಡು : ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ (ಅನಂಪು. ೧೨-೫೦) : ಪುರಾತನರ ಗೀತದಿಂ ಜೋಗುಳಂಬಾಡಿ ಭಕ್ತಿಯ ಮಹಿಯಂ ಸಲಹುವಂತೆ . . . ಓವುತ್ತಿರಲು (ಬಸವ.೧೦-೧೦೨). **ಜೋಗಳೆವಾಡು :** ನಾಡೆ ನಲಿನಲಿದಾಡಿ . . . ಜೋಗಳೆವಾಡಿ ಕಂದನ ನೋಡಿ (ಶಾಳ್ವಭಾ. ೨೬-೩೨). **ಜೋಗುಳಂಪಾಡು :** ಅರವಿಂದಮುಖಿಯರೊಲ್ದು ಜೋಗುಳಂಪಾಡುತಿರ್ದರ್ (ಹಮ್ಮಿರ. ೨-೨೫ ವ). **ಜೋಗುಳಪಾಡು :** ಜೋಗುಳಪಾಡಿ ತಾಯಿ ಹೊತ್ತಳು ಲೋಕಹಿತಕೆ (ಸೌಂದಶಾ. ೬-೨). **ಜೋಗುಳವಾಡು₁:** ತೊಟ್ಟಿಲ ತೂಗುವೆ ಜೋಗುಳವಾಡುವೆ (ಕೃಷ್ಣಸಂ. ೮-೦೬) ; ಜೋಗುಳವಾಡಿ ಮಕ್ಕಳಂ ತೂಗುವೀ ನೆವದಿಂದೆ . . . ಪಾಡಿದರು (ಜಲಪು. ೯-೦೦) ; ತೊಟ್ಟಿಲೊಳಿಟ್ಟು ಸಾಲ್ದ ಸ್ಯೆಪಿಂದೆ ಜೋಗುಳವಾಡಿ ತೂಗುವಳು (ಕೃಮಿಥಾ. ೧೮-೨೧). **ಜೋಗುಳೆವಾಡು:** ತೊಟ್ಟಿಲ ಕಟ್ಟಿ ಗವರೇಶ್ವರ ಲಿಂಗಕ್ಕೆ . . . ಜೋ ೯ ಗು ಳೆ ವಾ (ಯಾ) ಡಿ ದೆ (ಸರ್ವವ. ೪೧-೨೦೯).

[ ಜೋಗುಳ + ಪಾಡು₁ ]

**ಜೋಗುಳಗೀತ** (ನಾ). = ಜೋಗುಳ : ಆ ಜೋಗುಳಗೀತದಲ್ಲಿ ಬರುವ 'ಬರ್‌ತಾನ ನಿನ ಮಾವಾ' . . . ಎನ್ನುವುದೂ ಕಥೆಯ ಒಂದು ರೀತಿಯೇ (ಕಥಳ. ೧). [ ಜೋಗುಳ + ಗೀತ ]

**ಜೋಗುಳಗೀತೆ** (ನಾ). = ಜೋಗುಳ : ಅನುಪಮವಾದ ಅ ನೇ ಕ ಜೋಗುಳಗೀತೆಗಳು ಇವುಗಳ ಗುಂಪಿನಲ್ಲಿ ಸೇರುತ್ತವೆ (ಭಾವಗೀ. ೫೧).

[ ಜೋಗುಳ + ಗೀತೆ ]

**ಜೋಗುಳಪಾಡು** 'ಜೋಗುಳಂಬಾಡು' ನೋ.

**ಜೋಗುಳವಾಡು₁** 'ಜೋಗುಳಂಬಾಡು' ನೋ.

**ಜೋಗುಳವಾಡು₂, ಜೋಗಳಿವಾಡು** (ನಾ). = ಜೋಗುಳ : ತೂಂಕಡಿವ ಜೋಗುಳವಾಡು (ಸಂಸಪ. ೩೧-೮). **ಜೋಗಳಿವಾಡು :** ಕಡುನೇಹದಿಂದ ಜೋಗಳಿವಾಡ ಪಾಡುತ ಸಡಗರಗೊಂಡರಾಳಿಯರು (ಚಂದ್ರಸಾಂ. ೪-೬೦).

[ ಜೋಗುಳ + ಪಾಡು₂ ]

**ಜೋಗುಳಿ** 'ಜೋಗುಳ' ನೋ.

**ಜೋಗುಳೆ** 'ಜೋಗುಳ' ನೋ.

**ಜೋಗುಳೆವಾಡು** 'ಜೋಗುಳಂಬಾಡು' ನೋ.

**ಜೋಗೆತ್ತು₁** (ಕ್ರಿ). ಜವುಗು ಆಗು ; ಕೆಸರಾಗು : ಧರಿತ್ರಿ ವಾರಣ ಘಟಾತಟ ದಾನಜಳಂಗಳಿಂದೆ ಜೋಗೆತ್ತೆ (ಮಹಾನೇ. ೦೦-೯೦).

[ ಜೋಗು₃ (<ಜವುಗು) + ಎತ್ತು₁ ]

**ಜೋಗೆತ್ತು₂** (ಕ್ರಿ). ಧ್ಯಾನವನ್ನು ಬಿಟ್ಟು ಏಳು ; ತಪಸ್ಸಿನಿಂದ ಬಹಿರ್ಮುಖನಾಗು : ಜೋಗೆತ್ತಿ ಮುನಿಶಿಖಾಮಣಿ ಪೋಗುತ್ತಿರೆ (ಪುಣ್ಯಾಸ್ರ. ೩-೬೩). [ ಜೋಗು₃ (<ಜೋಗ₁) + ಎತ್ತು₁ ]

**ಜೋಗೇಱು** (ಕ್ರಿ). ಜೋಮಂ ಹಿಡಿ; ಜೋಮು ಹತ್ತು : ಪಾದಗಳು ಜೋಗೇಱಿಕೊಂಡು ಚುಮುಚುಮುಗುಟ್ಟುತ್ತಾ . . . ಇಹವು (ಪ್ರದ್ಯಸಾ. 1, ೪೦೯). [ ಜೋಗು₁ (<ಜುಮ್ಮು₃) + ಏಱು₁ (<ಏಱ್₁) ]

**ಜೋಗೈಸು₁** 'ಜೋಗಯಿಸು' ನೋ.

**ಜೋಗೈಸು₂, ಜೋಗಿಸು** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ರ ತಿ ದೇ ವಿ ತನ್ನಯಯಾತ್ಮತನಯನಂ ಪ್ರಾಣಮದಾಗಿ ಜೋಗೈಸುತಿರೆ (ನವಮೋ. ೧೫-೪೮). **ಜೋಗಿಸು :** ಅನಿರುದ್ಧನಂ ಕೊಲದೆ ಜೋಗಿಸುವೆನು (ನವಮೋ. ೨೯-೨೨). 'ಜೋಗರಿಸು' ಪಠಾ.

[ <ಜೋಪಾನ + ಕೈಸು (<ಕೆಯ್ಸು) ]

**ಜೋಡ**(ನಾ). ಹಾದರಿಗ ; ಜಾರ: "ಸಿತಗಂ, ಜೋಡಂ, ಪರಳಿಗಂ, ಪಾಣ್ಬಂ–ಳ ಜಾರಂಗೆ ಪೆಸರ್" (ಕಕಸಾ. ೦೯-೩೮೬) : "ಜೋಡಂ = ಸಿತಗಂ ; ಪಾಣ್ಬಂ" (ಕಮದ. ಶಿ. ೨) : "ಜೋಡಂ ಪರಳಿಗನು ಪಾಣ್ಬ ಸಿತಗಂ ಜಾರಂ" (ಕವಿಕಂ. ೧೬೦) ; ದನಿಗೆಟ್ಟುಲಿ ಹೊದ್ದಿಯು ಹೊದ್ದದ ಹೊಯಿಲೆಸದವು ಜೋಡರ ಸುಸಿಲೊಳ್ (ಉದ್ಭದೀ. ೪-೦೬). [ಜೋಡು + – ಅ₇]

**ಜೋಡಂಗಿ** (ನಾ). ಎರಡು ಅಂಗಿ ; ಒಂದು ಜೊತೆ ಅಂಗಿ : ಬಿದ್ದಾನೊ ಬಿದ್ದಾನೊ ಬಿಳಿಅಂಗಿ ಮೇಲಾಗೆ ರುದ್ರ ಜೋಡಂಗಿ ಕಳಚ್ಯಾವ (ಜೋಳಗೀ. ೨೧೬). [ಜೋಡು + ಅಂಗಿ₂ ]

**ಜೋಡಗಲ್, ಜೋಡಗಲು** (ಕ್ರಿ). ಜೊತೆಯನ್ನು ಬಿಡು ; ಸಹವಾಸದಿಂದ ದೂರವಾಗು : ಜೋಡಗಲ್ದುವು ಜಕ್ಕವಕ್ಕಿ (ಸಮ್ಯಕೌ. ೧೦-೨೪). **ಜೋಡಗಲು :** ರಾಮ ಜೋಡಗಲಿ ಸೀತೆಯಂ ಬನಕೆ ಗಮಿಸಿದನೆಂಬ ರೂಢಿ (ವಂಕಾರಾ. ೨-೧೦-೨೩). [ ಜೋಡು + ಅಗಲ್₁ ]

**ಜೋಡಗಲು** 'ಜೋಡಗಲ್' ನೋ.

**ಜೋಡಗಿರಿ** (ನಾ).ಮರದ ತುಂಡುಗಳನ್ನು ಜೋಡಿಸುವಿಕೆ,-ಹೊಂದಿಸುವಿಕೆ: ಜೋಡಗಿರಿಯ ಕೆಲಸದಲ್ಲಿಯೂ ಮಾಟಿನ ಕೆಲಸದಲ್ಲಿಯೂ ಕೊಂಕಣದ ಬಡಿಗಿಗಳು ಮೇಲಾದವರು (ಕಥಾಗ. ೩೦೮). [←ಮರಾ. ಜೋಡಗಿರೀ]

**ಜೋಡಣೆ, ಜೋಡವಣೆ** (ನಾ). ೧. ಸೇರುವೆ ; ಹೊಂದಾಣಿಕೆ ; ಸಾಂಗತ್ಯ : ಅಸುರರಲಿ ಮರ್ತ್ಯರಲಿ ಸುರರಲಿ ಯಸಕವುಳ್ಳವನೆನಿಸಿದನು ಸಾಹಸದ ಜೋಡಣೆ ಜಡಿದುದವನಿಯಲಿ (ಕುವ್ಯಾಸ. ೨-೪೯): ನೋಡಿದನು ಜಾಂಬವನು ಜಲಧಿಯ ರಘಾಡಣೆಯ ಜಂಘಾಯ್ಲ ರಭಸದ ಜೋಡಣೆಯ (ತೊರರಾ. ೪-೦೨-೩) ; ಜೀವತ್ವದಿಂ ನಾಡೆ ಪಲತೆಱನಾಗಿ ಸಕಲ ಸುಖದುಃಖಗಳ ಜೋಡಣೆಗೆ ಮೈಗೊಟ್ಟಿರುತ್ತೆ ಲೋಕಪ್ರಪಂಚಿನೊಳೆಸೆದು ತೋಱುತಿರ್ಪಂ (ಸಿದ್ಧೇಶು. ೨೨-೧೦); ಎರಡು ಜೀವಗಳ ಎರಡು ಭಾವಗಳ ಜೋಡಣೆಯನ್ನು ಸಾಧಿಸಿತು ಕ್ಷಣಕಾಲದ ಮೌನ (ಬಕಾಂಗಿ. ೩). ೨. ಮೇಳ; ಗುಂಪು; ಸಮುದಾಯ: ಚೂತವೃಕ್ಷಂಗಳಾ ಜೋಡಣೆಯ ಸುಚ್ಛಾಯ ಶೈತ್ಯದಿಂದಿರ್ದೆಸೆಯ ವಾಥಯಿಸಿಕೊಂಡಿರಲು (ಪರಕು. ೪-೦೯). ೩. ಒಟ್ಟೈಸುವುದಂ ; ರಾಶಿಹಾಕುವುದು : (+). ೪. ಸಿದ್ಧತೆ ; ಸಜ್ಜು ; ಸನ್ನಾಹ : ರಾಜೋಪಕರಣದ ಜೋಡಣೆಯ ಪಸರಿಕೆಯ ಪಾಳಯ ತೆರಳಿತಗಲದಲಿ (ತೊರರಾ. ೨-೩-೫೦). **ಜೋಡವಣೆ:** ೪. ಸಕಲ ಜೋಡವಣೆ ಸರಳ ಹೊದೆಗಳಲಿ ಸೈನ್ಯ ಕೂಡಿದುದು (ಹಾಂಡಪ. ೫೬-೫) ; ತದ್ವೀಪ್ಸ ಜೋಡವಣೆ ಯುಕ್ತದಿಂದಾ ನೃಪನ ಕಾಣಲ್ಕೆ (ಪರಕು. ೬-೩೨).

[ ಜೋಡಿಸು₁ + – ಅಣೆ₄ ]

**ಜೋಡಣೆಗೆಯ್** (ಕ್ರಿ). ಸಿದ್ಧಮಾಡಂ; ಸಜ್ಜುಗೊಳಿಸು: ಜೋಡಣೆಗೆಯ್ದ ಸುವರ್ಣಮಂಟಪ (ಮೋಹತ. ೦೪-೨೮). [ ಜೋಡಣೆ + ಕೆಯ್₁ ]

**ಜೋಡತನ** (ನಾ). ಹಾದರ; ಜಾರತನ: ಪಗಲ್ನಿದ್ದೆಗಂ ಜೂದಿಂಗಂ ಜೋಡತನಕ್ಕಂ . . . ಇಂಬುಗೊಡದೆ (ಚಳವಂ. ೬೨). [ ಜೋಡ + – ತನ ]

**ಜೋಡವಣೆ** 'ಜೋಡಣೆ' ನೋ.

**ಜೋಡಾಟ** (ನಾ). ಒಂದೇ ಸ್ಥಳದಲ್ಲಿ ಅಕ್ಕಪಕ್ಕದ ಎರಡು ರಂಗಸ್ಥಳಗಳಲ್ಲಿ ಒಂದೇ ಕಥಾಪ್ರಸಂಗವನ್ನು ಆಡಿ ತೋರಿಸುವ ಬಯಲಾಟ: ಒಂದು ರಾತ್ರೆ ನಾಲ್ಕುಮೈಲು ದೂರದಲ್ಲಿ ಒಂದು ಜೋಡಾಟ ನೋಡಲು . . . ನಿಶ್ಚಯಿಸಿದಾಗ (ಪಾತ್ರಲೋ. ೮). [ ಜೋಡು + ಆಟ ]

**ಜೋಡಾಡು** (ಕ್ರಿ). ಹಾದರವನ್ನು ಮಾಡು : ತಾಂ ಜೋಡಾಡಲ್ ಬಗೆದು ಮನೆಯಾಣ್ಮಂ ಬಾರದನ್ನಂ . . . ತನ್ನಾತನಂ ಸಂಕೇತನಿಕೇತನಕ್ಕೊಡಗೊಂಡು ಬರ್ಪುದೆಂದು ಪೇಳ್ದಟ್ಟೆ (ಪಂಚತಂ. ೭೪-೧). [ಜೋಡು + ಆಡು$_1$]

**ಜೋಡಾಣಿಕೆ** (ನಾ). = ಜೋಡಣೆ ೧ : ಪರದೆಯ ಜೋಡಾಣಿಕೆ, ಸನ್ನಿವೇಶಕ್ಕೆ ಹೊಂದಿಕೆಯಾಗುವ ವಸ್ತ್ರಾಭರಣಗಳನ್ನು ಆರಿಸುವುದು ಎಲ್ಲವೂ ಬಲದೇವನ ಕಾರ್ಯವೇ (ಕಲಾಸಾ. ೯೩). [ <ಜೋಡಣೆ + – ಇಕೆ ]

**ಜೋಡಿ$_1$** (ನಾ). ೧. ಜೊತೆ; ಜೋಡಂ : ರೂಢಿಯಲಿ ಸಮತಳದಲಂಘ್ರಿಯ ಜೋಡಿಗಳ ಮೆಲುದಳವದೊಪ್ಪಿರೆ (ನಿಘಾಗ. ೪-೦೩-೪೦) ; ಕಿಂಖಾಪಿನ ಛತ್ರಿ ಚವರೀ ಜೋಡಿ (ಎಕ. XIV, ನಂಜನ. ೨೮೯-೬ನೇ ಕಲಂ ; 1847); ಆಕೆಯನ್ನು ತನ್ನ ತಂದೆಗೆ ಜೋಡಿಯಾಗಿ ಮಾಡಿದನು (ನೀಗಟ್ಟು. ೩೩). ೨. ಗುಂಪು ; ಸಮೂಹ : ಗಾಂಡೀವಿ ಚಾಪವ ಮಿಡಿದ ನಿಷ್ಠುರರಾವ ತಿಮಿದುದು ಜರಿದವಡಕಿಲು ಜಗದ ಜೋಡಿಗಳ (ಕುಮಾವ್ಯದ್ರೋ. ೯-೩೭) ; ಸಾರಿದರವೆ ಪೊಗೊಳನನಾ ಚಂಡಾಂಶುವಿನ ಮೈ ಝುಳದ ಝಾಡಿಯ ಜೋಡಿಯಧ್ವಶ್ರಮದ ಭಾರದಲಿ (ತೊರರಾ. ೨-೭-೩) : ಜಗದ ಜೋಡಿಯನುರುಹುಪುರಗಾಧಿಪಮುಖಾನಲನೆರಡು ರೂಪಾಗಿ ಧರೆಯಲವತರಿಸಿತ್ತೊ (ನಿಘಾಗ. ೩-೮-೮). ೩. ಸಂಘಟನೆ ; ಒಗ್ಗಟ್ಟು : ಕೂಡೆ ತಳಪಟವಾಯ್ತು ಸುಭಟರ ಜೋಡಿ ಜರಿದುದು (ಕುಮಾವ್ಯದ್ರೋ. ೨-೫೮). ೪. ಒಡನಾಟ ; ಸಹವಾಸ : ಹತ್ತಿರದೆ ಜೋಡಿಗೋರ್ವರು ಮಿಲ್ಲ (ಮಲ್ಲಕ. ೧೭-೯). ೫. ಕಾಗದದ ಹಾಳೆ : (ಕ). 'ಜೋಡು' ಪರಾ.

**ಜೋಡಿ$_2$**, ಜೂಡಿ (ನಾ). ೧. ಕೊಡುಗೆಯಾಗಿ ಕೊಟ್ಟ ಭೂಮಿಗೆ ಸರ್ಕಾರ ತೋರಿಸುವ ಕಂದಾಯದ ಸವಲತ್ತು. ೨. ಕೊಡುಗೆ: ಮಲ್ಲಿಗೆಹಳ್ಳಿ ೪೨ ಬ್ರಾಹ್ಮಣರಿಗೆ ಜೋಡಿಯಾಗಿದೆ (ಗರುಡಾ.೧೧೫) : ಬೈಲಹಳ್ಳಿಯನ್ನು ನಿಮಗೆ ಜೋಡಿ ಹಾಕಿಕೊಟ್ಟಿದ್ದೇನೆ (ಬ್ರಹ್ಮರ್ಷಿ. ೦೪). ೩. ಕಪ್ಪ ; ಪಳಿತ: "ಜೋಡೀ–ಕಪ್ಪಂ" (ಶಾಶಕ್ಕಿ. ೨೬೬); ಒಸಗೆ ಜೋಡಿಯಿವೆಲ್ಲವನೂ ಆ ಮೂಲಿಗರೇ ನಡೆಸಿ (ಸೌಇಇ. IX–11, ೪೦೭–೦೦ ; 1377) : ಕಪ್ಪ ಜೋಡಿ ಬೇಡಿಗೆ ತಳವಾರಿಕೆ . . . ಇವು ಮೊದಲು ಸರ್ವಮಾನ್ಯವಾಗಿ (ಎಕ. V, ಹಾಸನ. ೨–೦೭; 1663); ಕೊಡಗರು ನಮಗಳ್ಳಿ ಜೋಡಿಯ ತೆರಿಗೆ ತಿಹರೀಗ( ಕಂನವಿ. ೦೮–೨೫): ಚರಾದಾಯ ಜೋಡಿ ಬೇಡಿಕೆ ಹುಲ್ಲುಹಣ . . . ಮುಂತಾದ ಆ ಸಕಲ ಸ್ವಾಮ್ಯವು (ಚಿಟ್ಟೂ. ೨೪೦–೨೪). **ಜೂಡಿ** : ೩. ಊರೊಳಗಿನ ಇನಾಮದಾರರು ಸರಕಾರಕ್ಕೆ ಜೂಡಿಯನ್ನೂ ಸಹ ಕೊಡುವುದಿಲ್ಲ (ಮೋಹಿನೀ. ೦೧): ಸರಕಾರದವರು 'ಜೂಡಿ' ಯೆಂದು ಕೆಲವು ಹಣವನ್ನು ಕಿತ್ತುಕೊಳ್ಳತೊಡಗಿದರೂ, ದೇಸಾಯಿಯವರಿಗೆ ಅದೊಂದು ಭಾರವೆನಿಸಲಿಲ್ಲ (ಜನಜೀ. ೦೩೭). [ ?. / ಮರಾ. ಜುಡೀ ]

**ಜೋಡಿ$_3$** (ಅ). ಜೊತೆಯಲ್ಲಿ: ದನದ ಜೋಡಿ ಇದ್ದೊಂಡು ನಿನ್ನ ಬುದ್ಧೀನೂ ದನದ ಬುದ್ಧಿ ಆಯ್ತೇನೊ (ಕಮ್ಮಟ. ೦೭). [ <ಜೋಡಿ$_1$ ]

**ಜೋಡಿಕೆ** (ನಾ). ಜೊತೆಯಾಗಿರುವಿಕೆ : ಆಡಲೇನದ ಜೀಯ ಲೋಕದ ಜೋಡಿಕೆಯ[ ಯ ] [ಪಾಠಾಂ. ಜೋಡಣೆಯ, ಜೋಡೆಯೇ]ಜಾನಕಿ ಜಗತ್ರಯ ಗಾಢಪತಿಭಕ್ತೆಯರಿಗೀ ಸತಿ ಮಾತೃಭವನವಲ (ತೊರರಾ. ೫–೩–೪೨). [ ಜೋಡು + – ಇಕೆ ]

**ಜೋಡಿಗ** (ನಾ). ಜೊತೆಗಾರ; ಸಂಗಾತಿ: ಕೀಳ್ ಮೈಗರೆದು ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೪–೨).
[ ಜೋಡು + – ಇಗ ]

**ಜೋಡಿಗಲಹ** (ನಾ). ಸಾಟಿಯಾದ ಕಾಳಗ ; ಸಮಾನವಾದ ಯುದ್ಧ : ಆಡಲೇನದನಿಂದ್ರ ಜಂಭರ ಜೋಡಿಗಲಹವಿದೆನಲು ಗಗನವ ಘಾಡಿಸಿತು ರಣರಭಸ (ತೊರರಾ. ೩–೦೦–೨೦). [ ಜೋಡಿ$_1$ + ಕಲಹ ]

**ಜೋಡಿಗೆ** (ನಾ). ಜೋಡಣೆ : ಸ್ವಲ್ಪ ಹಳೆಯ ಕುರ್ಚಿ ಸ್ವಾಮಿ। ಒಂದು ಕಾಲು ಮುರಿದಿತ್ತು, ಅಲ್ಲಿಂದಿಲ್ಲಿಗೆ ಜೋಡಿಗೆ ಹಾಕಿ ಗಟ್ಟಿಮಾಡಿದ್ದೇನೆ (ದೇವಮ. ೪೦). [ <ಜೋಡಿಕೆ ]

**ಜೋಡಿಗೆಡೆ** (ಕ್ರಿ). ಗುಂಪಾಗಿ ಬೀಳು ; ಒಟ್ಟಾಗಿ ಉರುಳು : ನೂಱಾನೆ ಭೀಮನ ಗದೆಯ ಗಾಳಿಯಲಿ ಜೋಡಿಗೆಡೆದವು (ಕುಮಾವ್ಯಗ. ೦–೫೯).
[ ಜೋಡಿ$_1$ + ಕೆಡೆ$_1$ ]

**ಜೋಡಿಗೆದಱು** (ಕ್ರಿ). ಗುಂಪಾಗಿ ಚೆದರು,–ಬೇರೆಬೇರೆಯಾಗು : ಸುರವಂದಿಗಳು ಮಗಧರು ಜೋಡಿಗೆದಱಿತು ನಿಜ ನಿಜಾಂಗದ ವಿದ್ಯೆಯಲಿ ನಲಿದು ಪಾಡಿದರು ಹರಿಮಹಿಮೆಗಳನು (ನಿಘಾಗ. ೩–೯–೩೮).
[ ಜೋಡಿ$_1$ + ಕೆದಱು$_1$ (<ಕೆದಱ್$_1$) ]

**ಜೋಡಿಗ್ರಾಮ** (ನಾ). ಕೊಡುಗೆಯ ಗ್ರಾಮ : ನಾಲ್ಕಾರು ವರ್ಷಗಳಲ್ಲೇ ಒಂದು ನಾಲ್ಕು ಜೊತೆ ಜೋಡೀಗ್ರಾಮ ತೆಗೆದು ಹಾಕಿಬಿಡಬೇಕು (ಮೂಂಗಲ್ಯ. ೫೨). [ ಜೋಡಿ$_2$ + ಗ್ರಾಮ ]

**ಜೋಡಿಗ್ರಾಸ** (ನಾ). ಒಂದು ಬಗೆಯ ತೆರಿಗೆ(?): ಕ್ರಯ ಕಡ್ಡಾಯ ಬಿಟ್ಟಿ ಬೀಢಾರ ಸೇಸೆ ಮಾರನ ಬಿಟ್ಟಿ ಜೋಡಿಗ್ರಾಸ ಆ ಗ್ರಾಮದ ತೋಟಗಾರುಕ . . . ಮುಂತಾಗಿ ಸರ್ವಬಾಧಾ ಪರಿಹೃತವಾಗಿ (ಮೈಆರಿ. ೧೯೪೦, ೩೬–೪೪ ; 1399). [ ? ]

**ಜೋಡಿತೆಂಗು** (ನಾ). ಒಂದು ಬಗೆಯ ಸಸ್ಯ : ಜೋಡಿತೆಂಗು, ಕಡಲ್ತೆಂಗು (ಮೈಶಿಗ. ೫೦–೦೦೦೭). [ ? ]

**ಜೋಡಿದಾರ$_1$** (ನಾ). ಜೊತೆಗಾರ ; ಜೋಡಿಯವನು: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿಬಿಟ್ಟಿತ್ತು (ಮೂರುದಾ. ೮). [ ಜೋಡಿ$_1$ + – ದಾರ$_4$ ]

**ಜೋಡಿದಾರ$_2$**, ಜೂಡಿದಾರ (ನಾ). ಜಮೀನು ಅಥವಾ ಗ್ರಾಮಗಳನ್ನು ಜೋಡಿಯಾಗಿ ಪಡೆದಿರುವವನು : ನನ್ನ ಸ್ನೇಹಿತ ಒಬ್ಬ ಭಾರೀ ಜೋಡಿದಾರ (ನಾಡಿಗೀ. ೫೪). **ಜೂಡಿದಾರ** : ಖಾಲಸಾತ ಭೂಮಿ ಜೂಡಿದಾರರಿಂದಾ (ಬೊಂಕಶಾ. ೧೯೩೪, ರಾಜಬಿನ್ನೂರ್. ೮೨–೬ : ?).
[ ಜೋಡಿ$_2$ + – ದಾರ$_4$ ]

**ಜೋಡಿದಾರಿ** (ನಾ). ಕೊಡುಗೆಯಾಗಿ ಬಂದ ಗ್ರಾಮದ ಅಧಿಕಾರ : ಶಾನುಭೋಗರಿಗೆ ಆ ಹಳ್ಳಿಗಳ ಜೋಡಿದಾರಿ ಇದೆ (ಕೂಧಿ).
[ <ಜೋಡಿದಾರ$_2$ ]

**ಜೋಡಿಸು$_1$** (ಕ್ರಿ). ೧. ಸೇರಿಸು ; ಕೂಡಿಸು ; ಹೊಂದಿಸು : ಅವನಿಪಾಲನ ಗವಿಯ ಘಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ (ಕುಮಾವ್ಯಕ. ೦೫–೦೬) : ನೋಡಿದೊಡೊಂದೇ ದಿವಸದೆ ದಿನ ನಾಲ್ಕ ಜೋಡಿಸಿ ವೈವಾಹವಿಧಿಯ ಮಾಡಿದರು (ಮೋಹತ. ೦೩–೬೩) ; ಜೋಡಾಗಿ ಪೂಡುವೊಡೆ ಸಾಲದೇಳೀ ಹಯಂ ಜೋಡಿಸುವೆನೀ ತುರಗವಂ ತನ್ನ ತೇರ್ಗೆಂದು (ಜೈಮಿಭಾ. ೪–೦೪) ; ಅವಳು ತನ್ನ ಪುಟ್ಟ ಕೈಗಳೆರಡನ್ನು ಎತ್ತಿ ಜೋಡಿಸಿ ಕರೆದಳು (ಹಂಗಾಳ್ಯ. ೩೩). ೨. ಸೇರು ; ಜೊತೆಯಾಗಂ : ಘಟೆಯೊಳ್ ಘಟೆ ಜೋಡಿಸಿ ದಂತಜಾಲದೊಳ್ ಭೋಂಕನೆ ಪೊಣ್ಮಿ ತೋರ ಕಿಡಿ ಸೂಸೆ (ಗಿರಿಕ. ೬–೭೨); ಪೆಣ್ಣವಿಲೆಂದು ಕೇಕಿ ಬಂದಾ ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ ಕಂಡು (ಉದ್ಭಟ. ೨–೯೮). ೩. ಜೊತೆಮಾಡು : ನೋಡುವುದಕ್ಕೆ ಹುಲ್ಲೆಯ ಹೆಣ್ಣುಮಱಿಗಳ ಜೋಡಿಸಿ ಕೊಟ್ಟರುತ್ಸವದಿ (ಮೋಹತ. ೦೯–೭೭) : ಎನ್ನೊಳಾಹವಕ್ಕನುಗುಣನಂ ಜೋಡಿಸು (ಶಬಶಂ. ೪–೨೮). ೪. ಅಣಿಮಾಡಂ ; ಸಜ್ಜುಗೊಳಿಸಂ : ಜೋಡು ಹಕ್ಕರಿಕೆ ಹಲ್ಲಣ. . . ಜೋಡಿಸಿ ತುರಗವನೇಱಿ ರಾವುತರೊಡಗೂಡಿ ಬಂದರು ಭೂವರೆಡೆಗೆ (ಅಂಜಜ. ೬–೮೦) : ಮಾಧವನ ಮರ್ದಿಸಿ ನಿನಗೆ ಜೋಡಿಸುವೆನು ಮಹಾನಳನ (ಕುಮಾವ್ಯಸ. ೧೦–೫೫) ; ಮುಱಿದು ಹಱಿಹಂಚಾದ ನಿಜಮೋಹರವ ನೆಱೆ

ಸಂತೈಸಿ ಜೋಡಿಸಿ . . . ವಿರೋಧಿವ್ರಜದ ಥಟ್ಟಣೆಯ ಮುಱಿದು(ಕುವ್ಯಾಕ. ೧೬-೨೪) ; ಆಗ ಮದನನು ತನ್ನ ಬಲವನು ಬೇಗದಲಿ ಜೋಡಿಸಲು (ನಳಚ. ೧-೩೭) ; ಮನ್ನೆಯ ಮಂಡಲೇಶ್ವರರು ಜೋಡಿಸಿದ ಕರಿ ತುರಗ ರಥವೆಡೆಯಾಡಿದವು (ತೊರರಾ. ೨-೭-೯) ; ಪದಾತಿ ಮೂಱುಬರ್ದುಂ ಜೋಡಿಸಿದರಾಹವಪ್ರೌಢರ್ಸುಬುದ್ಧಿ ಮೊದಲಾದ ಭಟರು (ಜೈಮಿಧಾ. ೨೨-೨). ೫. ಸಿದ್ಧವಾಗು ; ಅಣಿಯಾಗು ; ಅನುವಾಗು : ಕಳವೆಯಕ್ಕಿಯ ಕೂಳರಾಶಿಯ ಬಂಡಿ ಜೋಡಿಸಿತು (ಕುವ್ಯಾಅ. ೧೦-೩೩) ; ಅಡಿದೆ ಬೆಳಗಾಗದ ಮುನ್ನ ಬಹೆನೆಂದು . . . ಜೋಡಿಸಿ ನೀ ಬರ್ಪ ವೇಳೆಗೆ ಭಾಸ್ಕರ ಮೂಡಿದ ನೆಂದಳಾ ಕುವರಿ (ಬೋಹತ. ೨೯-೩೯). ೬. ಒದಗು ; ಉಂಟಾಗು ; ಲಭಿಸು : ಜಗದಳಿವು ಜೋಡಿಸಿತೆನುತ ನಡುಗಿದನಬುಜಭವನಂದು (ಕುವ್ಯಾಭೀ. ೬-೩೦). ೭. ತಿಳಿಸು ; ಹೇಳಿಕೊಡು : ಬುದ್ಧಿಯಂ ಜೋಡಿಸಿದ ಕೊರ್ವರ್ಕಳಣಾಗೆಗೆ (ಜೈಮಿಧಾ. ೬-೨೭) : ನೀನೆ ಬುದ್ಧಿಯ ಜೋಡಿಸೆನಲು ಸುಬುದ್ಧಿ ಪೇಳ್ದನು ನೀತಿ ಸಭೆಯಲಿ (ಬಿಜ್ಜಪು. ೫೦ ಸೂಚನೆ).

[ ಜೋಡು + – ಇಸು$_3$ ]

**ಜೋಡಿಸು$_2$** (ಕ್ರಿ). ಹೊಡೆ ; ಜಡಿ : (ಕ).

[ ಜೋಡಣ್$_6$ ( P ← ಮರಾ. ಝೋಡಣೇ) + –ಇಸು$_3$ ]

**ಜೋಡು** (ನಾ). ೧. ಜೊತೆ ; ಜೋಡಿ : "ಜೋಡೆನಲು ಜೋಳಿ" (ಕಕರ. ೪೦) : ಪಕ್ಕ ಪಕ್ಕಗೆ ಸಾರೆ ಜಜ್ಜರಿಯ ಜಕ್ಕವಕ್ಕಿಯ ಜೋಡು (ಸಮ್ಯಕ್ಕೌ. ೧-೩೭). ೨. ಸಮಾನ ; ಸಾಟಿ ; ಸರಿ : "ಜೋಡು, ಸರಿಸ, ತೋಡು . . . ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಕಸಾ. ೦೫-೨೯೦) : ಶ್ರೀಪಾಣ್ಡ್ಯರಾಜನೂರ್ಜ್ಜಿತತೇಜಂ[ವಿದ್ವಿ]ಷ್ಟಾರಾತಿಗೆ ವಿಂಗೆ ಜೋ[ಡೆನಿಸಿ] (ಸೌಇಇ. IX-1, ೦೫೪-೧೬ ; 1086) : ಹರನ ಜೋಡು ಮುರಾಂತಕನ ಸಮ (ಕುವ್ಯಾಸ. ೧೬-೬೯). ೩. ಎತ್ತಿನ ಜೊತೆ: ಮೂಡು ಬೈಲನು ಮಾಡಿಕೊಂಡೆನು ; ಜೋಡು ಹತ್ತನು ಕಟ್ಟಿದೆ (ಕಎಪು. ೦೮-೧೨). ೪. ಸಹಚರ ; ಸಂಗಡಿಗ : ಕೆಳೆಯ ಬೇಡುವ ಎದೆಗೆ ಯಾರು ಜೋಡು (ಉಯ್ಯಾಲೆ. ೩೭-೪). ೫. ಹಾದರ; ವ್ಯಭಿಚಾರ. 'ಜೋಡಾಡು' ಪರಾ. ೬. ಕಟ್ಟು ; ಕಂತೆ : ಓಡುವಾಕಳಿಗೆಳೆಯ ಹುಲ್ಲಿನ ಜೋಡ ತೋರಿಸಿ ನಿಲಿಸಿ (ವಿವೇಕ. ೬-೨೯) : ಬಲವಂತ ಶೇಣ್ವಿಯು ಇಸ್ಪೇಟಿನ ಜೋಡನ್ನು ಹೊರಹೊರಡಿಸಿದ್ದನು (ಅಂಬಿಕ. ೫). ಜೊತೆಗಾರರು ಯಾರೂ ಇರಲಿಲ್ಲ. ಇಸ್ಪೇಟು ಜೋಡಂತೂ ಮೊದಲೇ ಇರಲಿಲ್ಲ (ಮುಂಗಾರು. ೩೯). ೭. ಗುಂಪು ; ಸಮುದಾಯ : ನರಶರದ ಜೋಡಿನ ಜುಂಜುವೊಳೆಯಲಿ ಜಾಹ್ನವೀಧರ ಜಾಱುವನೆ (ಕುವ್ಯಾಅ. ೬-೦೧) ; ಜೋಡು ಜೋಡಿಲಿ ನಿಂದು ನೋಡಿದರಾ ಪುರಪತಿಯ (ಸೌಂದರ. ೩-೬). ೮. ಮೆಟ್ಟು ; ಪಾದರಕ್ಷೆ : ಜೋಡು ಕಿತ್ತುಹೋದರೆ ತಾನೇ ಅದನ್ನು ಸರಿಮಾಡಿಕೊಳ್ಳುತ್ತಿದ್ದನು (ಶೃಗಂಬ. ೦೧೧) : ಆರೂ ಕಾಲಿಗೆ ಜೋಡನ್ನು ಮೆಟ್ಟಿರಲಿಲ್ಲ (ದೇವೀಚಾ. ೦೩೭) ; ಜೋಡು ಕಂಡ ಕಾಲುಗಳು ನಮ್ಮೂರಿನಲ್ಲಿ ಎಲ್ಲೋ ನೂರ ಕ್ಕೊಂದು (ಹುಟ್ಟಿಹ. ೬). ೯. ನೆಲೆ; ಆಶ್ರಯ: ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು . . . ಮಣಿಗಳಾಗರಮಂದೆಸೆದತ್ತು ಸಾಗರಂ (ಸೊಕ್ತಸು. ೨-೩೭). ೧೦. ಕವಚ; ಅಂಗರಕ್ಷೆ; ಉಕ್ಕಿನ ಅಂಗಿ: "ಜೋಡೆನೆ ಸವಗಮದಕ್ಕುಂ" (ಛಾರನಿ. ೩೯) : ಘನತರವಾದ ಪಂಚಾಕ್ಷರಿಯ ಜೋಡಂ ತೊಟ್ಟು (ಚನ್ನವ. ೭೬-೧೫) : ಕಿಱುವುಲಿಯು ಜೋಡಂ ತೊಟ್ಟಂತಿರಿಟ್ಟಳ ಮಾಗೆಯುಂ (ಅನಂಪು. ೨-೨೯ ವ) ; ಬೋಳೆಯುಂಬೈದಱಲೆ ರಾಯನ ತೋಳನೆಚ್ಚನು ಜಡಿವ ಜೋಡಿನ ಮೇಲೆ ಮುಱಿದವು ಬಾಣ (ಕುವ್ಯಾಕ. ೦೦-೨೬). ೧೧. ಒಂದು ಅಳತೆ: ನೆಲ್ಲ ಕಾಳು ೬೪ ಯೆಂಬುದು ಕರ್ಣಾಟಕದ ಜೋಡುವೊಂದು ಎನಿಸುವುದು ಯಿಂಥಾ ಜೋಡು ೧೨॥ ಗೆ ನೆಲ್ಲಕಾಳು ೮೦೦ (ವ್ಯವಹಾ. ಅನುಬಂಧ. ೦-೭-೯).

**ಜೋಡಾಗು** = ಜೊತೆಯಾಗು ; ಒಂದಾಗು : ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱ ಕೆಡೆದ ಗಜವ್ರಜಂಗಳ ದೊಣೆವುಗಳಿಂದೊಱತು ಪರಿವ ನೆತ್ತರ ಕಡಲ್ಗಳುಂ (ಶಂಪಧಾ. ೦೦-೦೧೬ ವ). **ಜೋಡುಮಾಡು** = ೧. ಜೊತೆಗೂಡಿಸು ; ಸೇರಿಸು ; ಹೊಂದಿಸು : ಸಂಧಿಮಾಡಿ ಕುರುಪುತ್ರ ರೊಳೆನ್ನನೆ ಜೋಡುಮಾಟ್ಪಿರೇ (ಶಂಪಧಾ. ೯-೨೪) : ರಸಮಯಮಂ ಕೃತಿಯಂ ಸೇವಿಸಿ ವಿರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ (ಪುಷ್ಪಪು. ೧-೫೭). ೨. ಸೇರು ; ಕೂಡು; ಒಟ್ಟಾಗು : ಕೂಡೆ ಗಱ ಗಟ್ಟಿತು ಚತುರ್ಬಲ ಜೋಡುಮಾಡಿತು ರಾಯನಿದಿರಲಿ (ಕುವ್ಯಾಕ. ೪-೨೭). ೩. ಸಮವೆಂದು ಪರಿಗಣಿಸು ; ಹೋಲಿಸು.

[ ದೇ.೩ ತುಳು. ತೆಲು. ಜೋಡು ]

**ಜೋಡುಕಟ್ಟು$_1$** (ಕ್ರಿ). ಜೊತೆಮಾಡು ; ಜೊತೆಗೊಳಿಸು : ಅವರಿಬ್ಬರೂ ದಸರೀಹಬ್ಬದಲ್ಲಿ ಕಾಳಗಕ್ಕೆ ಜೋಡುಕಟ್ಟಲ್ಪಟ್ಟರು (ಕಥಾಮಂ. IV, ೧).

[ ಜೋಡು + ಕಟ್ಟು$_1$ ]

**ಜೋಡುಕಟ್ಟು$_2$** (ನಾ). ಹೊಂದಾಣಿಕೆ ; ಜೋಡಣೆ : ದಾಸಸಾಹಿತ್ಯದಲ್ಲಿ ಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ (ಜಗದಾ. ೭೧).

[ ಜೋಡು + ಕಟ್ಟು$_2$ ]

**ಜೋಡುಕಾರ್ತಿ** (ನಾ). ಜೊತೆಗಾತಿ ; ಸಂಗಾತಿ ; ಗೆಳತಿ ; ಸಖಿ : ತನ್ನ ಣೆವರೆಯುದ ಗೆಡೆಯ ಜೋಡುಕಾರ್ತಿಯರೊಡನಾಡುತಾಡುತೆ (ರಾಮೂಶ್ಯ. ೬೫-೨೮). [ ಜೋಡು + – ಕಾಱ + – ತಿ$_1$ (<– ಇತ್ತಿ) ]

**ಜೋಡುಖಾತೆ** (ನಾ). ಜಂಟಿ ಖಾತೆ; ಇಬ್ಬರು ಅಥವಾ ಹೆಚ್ಚು ಜನರು ಒಟ್ಟಾಗಿ ಇಟ್ಟ ಖಾತೆ: ಜೋಡುಖಾತೆ (Joint account) ವ್ಯವಹಾರಕ್ಕೆ ಅನುಕೂಲವಾಗುವಂತೆ ಒಬ್ಬರಕ್ಕಿಂತ ಇಬ್ಬರಾಗಲೀ ಹೆಚ್ಚಾಗಲಿ ಜನರು ಕೂಡಿಕೊಂಡು . . . ಜೋಡುಖಾತೆಗಳನ್ನಿಡಬಹುದು (ಬ್ಯಾಂಕಿಕ್ಕ. ೪೮).

[ ಜೋಡು + ಖಾತೆ$_2$ ]

**ಜೋಡುಗವಣೆ** (ನಾ). ಜೋಡಿಸಿದ ಕವಣೆ ; ಜಂಟಿಯಂ ಕವಣೆ : ಜೋಡು[ಪಾಠಾಂ. ಕೋಡು, ತೋಡು]ಗವಣೆಯ ತೂಱಗಲ್ಲಿನ ಝಾಡಿ ಝುಮ್ಮಿಡಿಸಿದವು ಗಗನವನು (ತೊರರಾ. ೬-೦೧-೩).

[ ಜೋಡು + ಕವಣೆ$_1$ ]

**ಜೋಡುಗೂಡು** (ಕ್ರಿ). ಒಟ್ಟಿಗೆ ಸೇರು; ಜೊತೆಗೂಡು: ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹರಿಲ. ೦-೦೬).

[ ಜೋಡು + ಕೂಡು$_1$ ]

**ಜೋಡುಗೊಡು** (ಕ್ರಿ). ಜೊತೆಕೊಡು ; ಜೋಡಿಯಾಗು : ಇಷ್ಟ ಮಿತ್ರರಿಲ್ಲದ, ಬಂಧು ಬಾಂಧವರಿಲ್ಲದ, ಪರದೇಶವಾಸದಲ್ಲಿ ಸದಾ ನಾನು ಅವಳಿಗೆ ಜೋಡುಗೊಡಬೇಕೇ? (ಇಹ್ಸಕ. ೨೯೪). [ಜೋಡು + ಕೊಡು$_1$]

**ಜೋಡುದಗಲೆ** (ನಾ). ಜೊತೆಯಾದ ಕವಚ : ಇಱದರು ತಱದರು ಕೊಱದರು ಮೂಗನು ಜರಿಟೋಪಿ ಜೋಡುದಗಲೆಯ ಪರಿವಟ್ಟ ಮಾಡಿ (ಕಂನವಿ. ೩-೬೮). [ ಜೋಡು + ದಗಲೆ$_1$ ]

**ಜೋಡುದೀವಟಿಗೆ** (ನಾ). ಜೊತೆಯಾದ ದೀವಟಿಗೆ ; ಜೋಡಿಯಾದ ದೀವಟಿಗೆ : ನೋಡ ಬನ್ನಿರೋ ಜನರು ಶ್ರೀಕೃಷ್ಣನ ಜೋಡುದೀವಟಿಗೆ ಸೇವೆ (ಪುರಂದ. ೨-೪೨ ಪಲ್ಲವಿ). [ ಜೋಡು + ದೀವಟಿಗೆ ]

**ಜೋಡುಮೇಳ** (ನಾ). ಜೊತೆ ಮೇಳ; ಜಂಟಿಮೇಳ : ಜೋಡುಮೇಳದ ಓಲಗದವರನ್ನು ಕರೆಸಬೇಡವೇ? (ಬೆಳುಮ. ೩೭).

[ ಜೋಡು + ಮೇಳ ( = ಮೇಲ)]

**ಜೋಡುವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ ; ಎಣೆವಕ್ಕಿ ; ಚಕ್ರವಾಕ: "ಜಕ್ಕವಕ್ಕಿ . . . ಜೋಡುವಕ್ಕಿಯು ತಾನದಕ್ಕುಮಾ ಚಕ್ರವಾಕಂ" (ಶಬ್ದಮಂ. ೨೯) : "ಪೊಣರ್ವಕ್ಕಿ . . . ಜೋಡುವಕ್ಕಿ, ಗೆಡೆವಕ್ಕಿ,

ಅವುಳ್ವಕ್ಕಿ – ಈ ೭ ಚಕ್ರವಾಕಂ" (ಶಶಸಾ. ೧೧-೨೦೦) ; ಕುಕಿಲ್ವ ಪಕ್ಕಿ ಗಾವರಿಪ ಮದಾಳಿಯಂಕುರಿಪ ಮೆಲ್ಲೆಲರೊಂದುವ ಜೋಡುವಕ್ಕಿ(ವೃಷವಿ. ೯-೨೪): ಜೋಡುವಕ್ಕಿಗಳಿಲ್ಲೆಯಗಲದೆ ಕೂಡಿಯೊಂದಕ್ಕೊಂದು ಪ್ರೇಮದೆ (ರಘುವಂ. ೧೩-೩೧). [ಜೋಡು + ಪಕ್ಕಿ$_1$]

**ಜೋಡುವಲೆ** (ನಾ). ಜೋಡಿಯಾಗಿ ಹೆಣೆಯಲ್ಪಟ್ಟ ಒಂದು ಬಗೆಯ ಬಲೆ: ತಿಣ್ಣವಲೆ ಜೋಡುವಲೆ ಹೊಸದಿಕ್ಕಣ್ಣವಲೆ . . . ವಿಂಧ್ಯಕನ ಕೂಡೆ (ಸಾಳ್ವಭಾ. ೩-೧೮). [ಜೋಡು + ಬಲೆ$_1$]

**ಜೋಡುಶಬ್ದ** (ನಾ). ಜೊತೆ ಜೊತೆಯಾಗಿ ಬಳಸುವ ಶಬ್ದ: ಅರಿವೆ ಅಂಚಡಿ, ಕುಂದುಕೊರತೆ ಮುಂತಾದುವು ಜೋಡುಶಬ್ದಗಳು (ರೂಢಿ). [ಜೋಡು + ಶಬ್ದ]

**ಜೋಡುಸನಾದಿ** (ನಾ). ಜೋಡಿ ಓಲಗ; ಜಂಟಿಯಾಗಿರುವ ನಾಗಸ್ವರ: ಹಳ್ಳಿಗಳ ವಾದ್ಯಗಳಾದ ಕರಡಿಮಜಲು, ಜೋಡು ಸನಾದಿ, ಕಾಳೆ ಮೊದಲಾದವುಗಳ ಘೋಷಣೆಗೂ ಅಲ್ಲಿ ಸ್ಥಾನವಿತ್ತು (ಮುಕ್ಕಮು. ೦೩). [ಜೋಡು + ಸನಾದಿ]

**ಜೋಡುಸವಗ** (ನಾ). ಎರಡು ಕವಚ; ಜೋಡಿಕವಚ: ತಂತವ್ಮ ಕರಿತುರಗರಥಸಂತತಿಯನಿಳಿದು ಸೀಸಕ ಜೋಡುಸವಗಮಂ ತೊಟ್ಟು ಕೊಂಡು (ಸಮ್ಯಕ್ತ್ವ. ೮-೩೧). [ಜೋಡು + ಸವಗ]

**ಜೋಡೆ**(ನಾ). ಹಾದರಗಿತ್ತಿ; ಜಾರೆ: "ಸಿತಗೆ, ಜೋಡೆ, ಪಾಣ್ಣ, ಬೆದೆಗಾರ್ತಿ– ಈ ೪ ಜಾರೆಗೆ ಪೆಸರ್" (ಶಶಸಾ. ೧೯-೩೮೭); "ಜೋಡೆಯೆನೆ ಜಾರೆ" (ಶಶಶ. ೪೧) : ಅಲರ್ಗಣ್ಣೊಳ್ ಸ್ಮರನಿರ್ದನಕ್ಕುಮೆಡವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ (ಪಂಪಭಾ. ೪-೮೪) ; ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ . . . ಸಾಯೆ ಸದೆಬಡಿದು (ಪಂಚತಂ. ೭೪-೨೦); ಮಳಲೊಳಂ ನೀರ್ಮಾಡುವರ್ ಜೋಡೆಯರ್ (ಧರ್ಮಾಮೃ. ತ-೧೩೪); ಈ ಜೋಡೆ ಕನಲ್ದು ಬಂದು ತಪವಂ ತಳೆವಳ್ (ದಶಕು. ೮-೧೩) [ಜೋಡ + – ಎ$_2$]

**ಜೋಡೆಗೆಯ್ತ** (ನಾ). ಜಾರೆಯ ನಡವಳಿಕೆ; ಹಾದರ; ವ್ಯಭಿಚಾರ: ನೋಡಿ ನಾಡಾಡಿಯಲ್ಲದಾಕೆಗಳ ಜೋಡೆಗೆಯ್ತಂಗಳಂ ಕಂಡು ಮುಗುಳ್ನಗೆ ನಗುತುಂ (ಪಂಪಭಾ. ೪-೮೧ ವ). [ಜೋಡೆ + ಕೆಯ್ತ$_1$]

**ಜೋಡೆತ್ತು** (ನಾ). ಒಂದು ಜೊತೆ ಎತ್ತು: ಮರುದಿನ ಜೋಡೆತ್ತಿನ ಬಂಡಿಯು ಆನೆಕುಪ್ಪಿ ಕಾಡಿಗೆ ಹೊರಟಿತು (ಕಕಕು. ೪-೬೦). [ಜೋಡು + ಎತ್ತು$_2$ (<ಎಟ್ಟು$_1$)]

**ಜೋಡೆಲುಬು** (ನಾ). ೧. ಜೋಡಿ ಎಲುಬು; ಜೊತೆಯಾಗಿರುವ ಮೂಳೆ. ೨. ದಷ್ಟಪುಷ್ಟವಾದ ಮೈಕಟ್ಟು: ಹೊಸತಾಗಿ ಕಸುಬಿಗೆ ಇಳಿದುದು. ಜೋಡೆಲುಬಿನ ಹುಡುಗಿ (ಚಂಗಬು. ೦೭೪). 'ಒಂಟೆಲುಬು' ಪರಾ. [ಜೋಡು + ಎಲುಬು (<ಎಲ್ವು)]

**ಜೋತ** (ನಾ). ಕೈಜೋಡಿಸುವಿಕೆ; ನಮಸ್ಕಾರ: ಮದನಾರಿಯುಪ್ಪ ತಿರಿನಲವೂರ್ಗೆ ತಾಂ ಬಂದು ನಿಂದು ಕಿವಿವಿಡಿದು ಕೈಮುಗಿದು ಜೋತಂ [ಪಾಠಾಂ. ಜೊತ್ತಂ] ಪೊತ್ತು ತಂದೆ ನೀಂ ಹೆಚ್ಚು ಬಾಳೆಂದು ಹರಕೆಯನಿತ್ತು (ಅರಿರ. ದೇ. ೦೭೩-೦); ಮರಿ, ಸ್ವಾಮಿಗೆ ಜೋತ ಮಾಡಮ್ಮ (ರೂಢಿ). [←ತೆಲು. ಜೋತ]

**ಜೋತಿ** (ನಾ). ೧. ದೀಪ; ಬೆಳಕು: ಯತ್ಪ್ರಲೋವಕ್ಕೆ . . . ಜ್ಯೋತಿ–ಜೋತಿ (ಶಮದ. ೨೮೧ ಪ್ರಯೋ); ಜೋತಿ ಇದ್ದಲ್ಲಿ ಭೀತಿಯಿಲ್ಲ (ಗಾದೆ). ೨. ಆರತಿ: ಪ್ರೀತಿಯಲಿ ಲಿಂಗಂಗಳಿಗೆ ಹೊಸ ಜೋತಿ[ಪಾಠಾಂ. ಜ್ಯೋತಿ] ಗಳನೆತ್ತುವ (ಬಸವು. ೧೯-೭೦). ೩. [ಯೋಗ] ಯೋಗಿಗಳಂ ಕಾಣುವ ಅಂತರಂಗದ ಬೆಳಕು: ಜೋತಿಯ ಧ್ಯಾನಬಲದಿಂದ ಸಕಲ ಸಿದ್ಧಿಗಳ ಪಡೆವನು ಯೋಗಿಯಾದವನು (ಗಗಚಾ. ೧೯-೩). [<ಸಂ. ಜ್ಯೋತಿಸ್]

**ಜೋತಿಕಾಷ್ಠ** (ನಾ). ಒಂದು ಬಗೆಯ ಮೂಲಿಕೆ: ಚಿತ್ರಮೂಲ ತಳಕ ಜೋತಿಕಾಷ್ಠ . . . ಯಿವ ಸಮಾನಂಗೊಂಡು ಲೇಪವಂ ಮಾಡಲ್ (ವಾಚಾಚಿ. ೧೩-೧). [ಜೋತಿ$_1$ + ಕಾಷ್ಠ$_2$]

**ಜೋತಿಷ್ಕ** (ನಾ). [ಜೈನ] ಭುವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ಎಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ವರ್ಗದ; ಸೂರ್ಯ, ಚಂದ್ರ ಗ್ರಹಗಳೇ ಮೊದಲಾದ ಜ್ಯೋತಿಷ್ಕಲೋಕದಲ್ಲಿರುವ ದೇವತೆಗಳು: ವಾನಬ್ಯಂತರರುಂ ಚಂದ್ರಾದಿತ್ಯರೆಂಬಿರ್ಪ ಜೋತಿಷ್ಕರುಂ . . . ಚತುರ್ನಿಕಾಯ ದೇವನಾಯಕರುಮಲ್ಲವೊಂದಾಗಿ (ಸುಕುಮಾ. ೮-೬೩ ವ). [<ಸಂ. ಜ್ಯೋತಿಷ್ಕ]

**ಜೋತಿಷ್ಮತಿ** (ನಾ). ೧. ಬೆಳಕುಳ್ಳದು. ೨. ಒಂದು ಬಗೆಯ ಸಸ್ಯ; ಕಂಗುಂಗೆ: ಬೆಕ್ಕಿನ ಬುಡ್ಡೆಗಿಡ . . . ಜೋತಿಷ್ಮತಿ, ಚಿಟಕಿಹಂಬು, ಮಿಂಚುಬಳ್ಳಿ, ಕನಕಾಯ (ಮೃಶಿ೧. ೦೭-೩೦೮). [<ಸಂ. ಜ್ಯೋತಿಷ್ಮತೀ]

**ಜೋತೀಸ್ವರ** (ನಾ). ಬೆಳಕಿನ ಒಡೆಯ; ಜ್ಞಾನದ ಅಧಿಪತಿ: ಯೋಗಿಗಳ ಮನದ ಕೊನೆಯ ಜೋತೀಸ್ವರನಂ ವೃಷಭನ ರೂಪಾಗಿ ಯಜಮಾನನಂ ಆಚಾರ್ಯನಂ ತಾನೆಯಾಗಿ (ಎಕ. XXIII, ೩೦-೬ : 1265). [ಜೋತಿ + ಈಸ್ವರ (<ಈಸರ)]

**ಜೋತು$_1$** 'ಜೋಲ್$_1$' ಪರಾ.

**ಜೋತು$_2$** (ನಾ). ನೇತಾಡುವಂತೆ ತೂಗುಬಿಟ್ಟಿರುವ ವಸ್ತು; ಲೋಲಕ: ಈ ರೀತಿಯ ಸಾಮಗ್ರಿಗೆ ಜೋತು (pendulum) ಎನ್ನುತ್ತಾರೆ (ಪಾಂಶ್ರ. I, ೩೨೦). [<ಜೋಲ್$_1$]

**ಜೋದ$_1$**(ನಾ). ಹೋರಾಟ ಮಾಡುವವನು; ಸೈನಿಕ: ಜೋದರಿಸುವಂಬಿನ ಬಲ್ಸರಿ ತಿಣ್ಣಮಾಗಿ (ಪಂಪಭಾ. ೧೦-೯೨); ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿದುದು (ಗದಾಯು. ೪-೩೭); ಪೋರ್ವ ಪದದೊಳ್ ಜೋದರ್ಕಳೆಕ್ಕೆಯಿಂ ತೆಗೆದಾರ್ದೆಚ್ಚ ಬಹೂಗ್ರ ನಿಷ್ಠುರ ಮಹಾನಾರಾಚಮುರ್ಚುತ್ತಿರಲ್ (ನೇಮಿಪು. ೧೧-೦೭೪); ಜೋದರುಚಿ ಕೈಮಟಿದು ಕದನದ ಗಾಯದಲಿ ನೊಂದೊಬಲಿ ಬಾಯಲಿ ಬೆರಳನಿಟ್ಟುದು ವೈರಿ ಪಾಯದಳ (ನಳಚ. ೯-೩೪); ಪಾಂಡವರ ಕಡೆಯ ಜೋದರು ಭೀಷ್ಮನ ಮೈಗಾವಲ ದಳವನ್ನು ಮುತ್ತಿ ಭಂಜಿಸಿದರು (ಭೀಷ್ಮಚ. ೦೮೧). [<ಸಂ. ಯೋಧ]

**ಜೋದ$_2$** (ನಾ). ಆನೆಯ ಸವಾರ; ಮಾವಟಿಗ: "ಜೋದನೆಂದು ಮಾವಂತಂ" (ಶಶಸಾ. ೦೭-೩೪೦); "ಜೋದರ್ಕಳೊಳ್ ಮಾವತರ್" (ಕರ್ಣಾನಿ. ೪೯); ಜೋದರ್ ಜೋದರೊಳಾನೆಯಾನೆಯೊಳಗುರ್ವಪ್ಪನ್ನೆಗಂ ಕಾದೆ (ಪಂಪಭಾ. ೦೦-೯೩); ಮುರರಿಪುರಾಮರ್ ಸುಟಿದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ . . . ಕೇರಿಗಳೊಳ್ (ಜಗವಿ. ೬-೨೭); ಏಟಿದ ಸಾರಥಿಯ ಮಿಾಟಿ ನಿಂದ ಜೋದರ ಭೀಕರರೂಪು ಲೋಕಕ್ಕೆ ಪೊಸತಾಗೆ (೧೧೪. ೬-೩೩ ವ); ಕರಿ ಕೆಡೆಯ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುಮ್ಮಾಳ. ೦೩-೨೮); ದಂತಿಶಿರವ ವಿಭಾಗಿಸಿ ಕರ್ಗಣೆಯಿಂದೆ ತಾಗಿಸಿ ಜೋದರ ತಲೆಯನಾಗಸಕಾಗಿ ಸಾಗಿಸಿದನು (ಮೋಹತ. ೩೪-೬); ಜೋದರ ಗೋಟಾಯಿಲರ ರಥಿಕರ . . . ಗಡಣಂ ನೆರೆದಿರೆ (ಅಮೂಶ. ೩೦-೯): [<ಸಂ. ಯೋದ ?]

**ಜೋದಕ** (ನಾ). ಯುದ್ಧ ಮಾಡುವ ವೀರ: "ಜೋದಕ–ಯೋಧಕ = ಕಾದಾಡುವವ" (ತದ್ಭಕೋ. ೩೦). [<ಸಂ. ಯೋಧಕ]

**ಜೋದಗಾಳೆಗ** (ನಾ). ಆನೆಯ ಸವಾರರ ಕದನ; ಮಾವಟಿಗರ ಹೋರಾಟ: ಜೋದಗಾಳೆ[ಪಾಠಾಂ. ಳ] ಗದಿಂದೆ ಬಳಿಕೆರಡು ಸೀಳಾಗಿ ಮೇದಿನಿಗೆ ಬೀಳ್ವಂತಿಭವನೆಚ್ಚವನ ಧನುಶ್ಛೇದಮಂ ಮಾಡಲು (ಜೈಮಿಭಾ. ೨೦-೨೭). [ಜೋದ$_2$ + ಕಾಳೆಗ]

**ಜೋದಸಂತತಿ** (ನಾ). ಮಾವಟಿಗರ ಸಮೂಹ: ಕುದುರೆರಾವುತರು ಜೋದ ಸಂತತಿ ಮದಗಜವ್ರಜವತಿರಥಾವಳಿ ಪ ದ ಚ ರ ರು ಚತುರಂಗಬಲ ವೊಂದುಳಿಯದಿದಱೊಳಗೆ (ಕುವ್ಯಾ.ಗ. ೨-೪೦). [ ಜೋದ$_2$ + ಸಂತತಿ ]

**ಜೋದಾವಳಿ** (ನಾ).=ಜೋದಸಂತತಿ: ಬಳಿಕ ನಂಬುಗೆಗೊಂಡು ಜೋದಾವಳಿ ಬೇಗ ತಳುವದೋಡಿತು ದೆಸೆದೆಸೆಗೆ (ಕಂನವಿ. ೦೫-೦೦೧).

[ ಜೋದ$_2$ + ಆವಳಿ$_1$ (= ಆವಲಿ) ]

**ಜೋದಾಳ್** (ನಾ). ಯುದ್ಧಮಾಡುವವನು: ಮೇಲೆ ಕವಿಕವಿದೆಸುವ ಜೋದಾಳಾಳಿವಿಲು ಕಿದಱಿದವು ಬೀಸರಿಗೋಲನದ್ಭುತ ಸಮರವಾಯಿತು ಮತ್ತೆ ಪಾರ್ಥಂಗೆ (ಕುವ್ಯಾ.ದ್ರೋ.. ೬೭ಇ. ೨೮೯ ಪ.). [ ಜೋದ$_1$ + ಆಳ್$_3$ ]

**ಜೋನಗ** 'ಜೋನೆಗ' ನೋ.

**ಜೋನಾಯ್** (ನಾ). ಒಂದು ಬಗೆಯ ನಾಯಿ ; ಜೂಲುನಾಯಿ (?): ಕೊರಳೊಳಗಿಕ್ಕಿದ ಮಾಲೆ ಚಂದನದಣ್ಪುವೆರಸಿ ರನ್ನದ ಪಿಷ್ಟರದೊಳು ಸ್ಥಿರವಾಗಿ ಕುಳಿತುಸಿರುವ ಜೋನಾಯನು ಧ ರ ಣೇ ಶ ಕಂಡುದಱಿಂದ (ಗೋಮಟೇ. ೦೫-೫೮). [ ಜೋ? + ನಾಯ್ ]

**ಜೋನಿ** 'ಜೋನೆ' ನೋ.

**ಜೋನಿಗರೆ** (ಕ್ರಿ). ರಸವನ್ನು ಒಸರು: ಫೇನ ಪಿಂಡೆಡೆಗೊಂಡ ಜಾಹ್ನವಿಯೊ ತನಿಬಿಂಕ ಜೋನಿಗರೆದುಕ್ಕಿಳಿವ ಸುರತರುವೋ (ಹರಿಕು. ೩-೩೫).

[ ಜೋನಿ (< ಜೋನೆ) + ಕರೆ$_2$ (< ಕಱೆ$_1$) ]

**ಜೋನಿಬೆಲ್ಲ** 'ಜೋನೆಬೆಲ್ಲ' ನೋ.

**ಜೋನುಗ** 'ಜೋನೆಗ' ನೋ.

**ಜೋನೆ, ಜೋನಿ** (ನಾ). (ಬೆಲ್ಲ ಮುಂತಾದ ವಸ್ತುಗಳು) ಕರಗಿ ದ್ರವ ರೂಪಕ್ಕೆ ಬಂದಿರುವ ಸ್ಥಿತಿ ; ಜಿನುಗಿರುವ ಸ್ಥಿತಿ : ಬೆಲ್ಲ ಜೋನೆಯಾಗಿದೆ (ರೂಢಿ). **ಜೋನಿ** : ಆ ಬಿಸಿ ಜಾಗದಲ್ಲಿ ಬೆಲ್ಲದ ಜೋನಿಯನ್ನು ಇಟ್ಟು, ನಾಯಿಯನ್ನು ಕಂಬದಿಂದ ಬಿಚ್ಚಿ ಅದರ ಬಳಿ ಕಟ್ಟಿದನು (ಮುಳಿಪು. ೧೫೦) : ಮೊಸರಿಗೆ ಸ್ವಲ್ಪ ಸಕ್ಕರೆ, ಜೇನು ಅಥವಾ ಬೆಲ್ಲದ ಜೋನಿಯನ್ನು ಸೇರಿಸಿ ಊಟವಾದ ಮೇಲೆ ಕುಡಿಯಲು ಚೆನ್ನಾಗಿರುತ್ತದೆ (ಅಡುಶಾ. ೬೨) : ಅದರಲ್ಲಿನ ಕಶ್ಮಲವನ್ನು ಆರಿಸಬೇಕು, ಅದನ್ನು ಜೋನಿಯಾಗಿ (Syrup) ಮಾಡಬೇಕು (ಚಾಲಪ್ರ. II, ೬೪೯).

[ ದೇ.: ತುಳು. ತೆಲು. ಜೋನೆ ]

**ಜೋನೆಗ, ಜೋನಗ, ಜೋನುಗ** (ನಾ). ೧. ಒಂದು ದೇಶದ ಹೆಸರು: ಜನ ಜೋನೆಗ ಅರಿಮಣ ಕೊಂಕಣ . . . ಘೋಡಾಮುಖವೆಂದು ಹೇಳಲು ಪಡುತ್ತಂವಿದ್ದಂಥಾ ರಾಷ್ಟ್ರಾಂತರಗಳಲ್ಲಿ (ಎಕ. V, ಬೇಲೂರು. ೩-೯೨ : 1397) : ಲಾಳ ಜೋನೆಗ ಜೀನ . . . ವರಾಳ ವರದೇಶಾಧಿಪತಿಗಳು ಬಂದರೊಗ್ಗಿನಲಿ (ಕುವ್ಯಾ.ಸ. ೭-೨) ; ನಡೆದುದು ಭೂರಿಬಲ . . . ಜೋನೆ [ಪಾಠಾಂ. ನ]ಗ ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬ ಳಿ ವಿ ಡಿ ದು (ಕೊರಶಾ. ೪-೯-೪) ; ಬಂಗಾಳ ಜೈನ ಜೋನೆಗ[ಪಾಠಾಂ. ಜೋಗಿ] ಸಗರ . . . ಕಾಂಬೋಜದೇಶದ ಸಕಲ ಶರಣರೈತರುತಿರ್ದರು (ಚಲಪು. ೬-೪೯). ೨. ಆ ದೇಶದ ನಿವಾಸಿ : ತಲೆದಱಿಸಿಕೊಂಡ ಜೋನೆಗರ ಜಂಗುಳಿಯಂತೆ ಎಲೆಗಳೆದು ಬತ್ತಲಿಸಿ ನಿಂದ ತ ರು ಕು ಲ ದ ಂ ತೆ (ಪಾಗೀರ. ದೇ. ೨೫೪-೧೫). ೩. ತುರುಕ: "ಜೋನೆಗ–ಯವನಕ=ತುರುಕ" (ತದ್ಭಕೋ. ೦೫). **ಜೋನಗ** : ೨. ಲೋಹಿತನೆಂಬ ವೀರನಂ ಗೆದ್ದು ಜೋನಗ ಜೇನಬೋಂಟರಂ ಅಪ್ಪಳಿಸಿ (ತುರಂಗ. ೦೯-೩೦). **ಜೋನುಗ** : ೨. ಜಾಣಾನ ಕಿನ್ನಾರಿ ಜಾತ್ರೆಗೆ ನಿಲುಭಾರ ಜಾಣ ನನ್ನಯ್ಯ ಮರುವಿನ ಕಿನ್ನಾರಿ ಜೋನುಗರಂಗಡಿಗೆ ನಿಲುಬಾರ (ಹಳ್ಳಿಹು. ೯೦).

[ < ಪ್ರಾ. ಜೋಣಯ./ಸಂ. ಯವನಕ ]

**ಜೋನೆಗಪಳಿ** 'ಜೋನೆಗವಳಿ' ನೋ.

**ಜೋನೆಗವಳಿ, ಜೋನೆಗಪಳಿ** (ನಾ). ಯವನರಿಂದ ತಯಾರಿಸಲ್ಪಟ್ಟ ಬಟ್ಟೆ : ಪಳದಿಯ ಜೋನೆಗವಳಿಯು ಪಲ ಬಗೆಯ ಪಲ್ಲಣದ ಪಕ್ಕ ಜಲ್ಲಿಯ . . . ಪರುಠವಣೆ ಪಸರಿಸೆ (ರಾಜಶೇ. ೬-೦೧ ವ). **ಜೋನೆಗಪಳಿ** : ಹಳದಿ ಪಾರಿಯ ಪಚ್ಚೆ ಜೋನೆಗಪಳಿ ಸುವರ್ಣಾವಳಿಯ ಸಂಧ್ಯಾವಳಿಯುದಯರಾಗದಲಿ ರಚಿಸಿದ ಹಕ್ಕರಿಕ್ಕೆಗಳ (ಕುವ್ಯಾ.ಭೀ. ೪-೪೯).

[ ಜೋನೆಗ + ಪಳಿ$_5$ (< ಪಟ$_7$) ]

**ಜೋನೆಬೆಲ್ಲ, ಜೋನಿಬೆಲ್ಲ** (ನಾ). ನೀರೊಡೆದು ಜಿಗಿಯಾದ ಬೆಲ್ಲ ; ಜಿನುಗುಬೆಲ್ಲ; ದ್ರವರೂಪದಲ್ಲಿರುವ ಬೆಲ್ಲ: ಜೋನೆಬೆಲ್ಲದ ರುಚಿ ಸ್ವಲ್ಪ ಹುಳಿ (ರೂಢಿ). **ಜೋನಿಬೆಲ್ಲ** : (ಈ).

[ ಜೋನೆ + ಬೆಲ್ಲ ]

**ಜೋಪಕ** (ನಾ). ರಹಸ್ಯ; ಗುಟ್ಟು: ಆ ಪರಮಗುರುಲಿಂಗ ಜಂಗಮಾರ್ಚನೆಗೈವ ಜೋಪಕವುದೆಂತೆನೆ ವಿಲಾಸಮನನಾಗುತಂ ವ್ಯಾಪಕ ವಿರುದ್ಧನಾಗಿರಬೇಕು ಭಕ್ತಕುಲವೀ ಪರಿ ವಿರಕ್ತಿವಡದು (ಲಿಂಗಪು. ೧೪-೯).

[ < ಸಂ. ಗೋಪಕ ]

**ಜೋಫಡಿ** 'ಜೊಂಪಡಿ' ನೋ.

**ಜೋಪನ** 'ಜೋಪಾನ' ನೋ.

**ಜೋಪಾನ, ಜೋಪನ** (ನಾ). ೧. ಆರೈಕೆ; ಸಲಹುವಿಕೆ; ಕಾಪಾಡುವಿಕೆ; ರಕ್ಷಣೆ: "ಜೋಪಾನ – ಗೋಪನ = ಕಾದಿಡುವಿಕೆ" (ತದ್ಭಕೋ. ೦೫); ಅಟ್ಟ ವಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾನವನದಾಚರಿಸಿ [ಪಾಠಾಂ. ಜೋಪಾಸನವನಾಚರಿಸಿ] (ಬಸವು. ೦೫-೮) ; ಚಂದ್ರಣ್ಣ . . . ಕಕ್ಕನ ಜೋಪಾನದಲ್ಲಿ ಬೆಳೆದ (ಚಿನ್ನುಹಿಂ. ೨೨). ೨. ಎಚ್ಚರಿಕೆ ; ಅವಧಾನ ; ಜೋಕೆ ; ಜಾಗರೂಕತೆ : ಜೋಪಾನ ತಪ್ಪದೆ ರಾಜಮಂದಿರವ ಸರ್ಪ ನಿಧಾನವ ಕಾಯ್ವಂತೆ ಕಾದಿರೆಂದಪ್ಪಣೆಗೊಟ್ಟ ರಕ್ಕಸಗೆ (ಕೋಹಚ. ೧೩-೦೦) ; ಅಡವಿ ಗಿಡಗಳ ಕಡಿವ ಕೊಡಲಿಯ ಮಡಗಿ ಫಲವೇನೆಂದು ಅಲ್ಲಲ್ಲಿಡದೆ ಜೋಪಾನದಲಿ ಮಡಗುವುದಿನ್ನೂ ಧೇನುವನೂ (ಹರಿಭ. ೫-೪೭) : ದವಸ ಧಾನ್ಯ ಮುಂತಾದ ಸಾಮಾನವನ್ನು ಜೋಪಾನದಲ್ಲು ಇರಿಸತಕ್ಕ ಬಗ್ಗೆ (ರಾಜೇಂದ್ರ. ೩೯). ೩. ಎಚ್ಚರಿಕೆಯನ್ನು ಸೂಚಿಸುವ ಪದ : ಬಯಸಿ ನೆನೆದುದಿದಱೊಳಗಿರ್ಪುದು ಜೋಪಾನ ಜೋಪಾನ ಜೋಪಾನವಿನ್ನು ನಾಂ ಪೋಪೆನು (ಸಿದ್ಧೇಪು. ೧೪-೩೨): ಜೋಪನ ಜಾರಿ ಬಿದ್ದೀಯ (ರೂಢಿ). **ಜೋಪನ**: ೧. ದೇವಿಯನು ಜೋಪನವ ಗೈಯುತ ದೇವ ಬಿಲುದುಡುಕೇಳು (ರಾಮಾಸಂ. ೨-೪-೩೯).

**ಜೋಪಾನಮಾಡು** = ಸಲಹು ; ಪೋಷಿಸು ; ಸಾಕು : ನನ್ನನ್ನು ನಮ್ಮಪ್ಪನ ಸೋದರತ್ತೆಯೇ . . . ಜೋಪಾನಮಾಡಿದ್ದಳು (ಮೇದಿಮು. ೨).

[ < ಸಂ. ಗೋಪನ./ತುಳು. ಜೋಪಾನ, ಜೋಪನೆ ]

**ಜೋಪಾನಗೆಯ್** (ಕ್ರಿ). ಜೋಪಾನ ಮಾಡು ; ಎಚ್ಚರಿಕೆಯಿಂದ ನೋಡಿಕೊಳ್ಳು : ಈ ಪಾಟಿಯ ಚಕ್ರಶಕ್ತಿಯಿಂದಸುರಚಮೂಪರ ಶಿರವ ಸೆಂಡಾಡಿ ಜೋಪಾನಗೆಯ್ದು ಜಗವ ರಕ್ಷಿಸುವ ಮಹೀಪತಿ ಶರಣು (ಮೋಹತ. ೨೯-೩೧). [ ಜೋಪಾನ + ಕೆಯ್$_1$ ]

**ಜೋಪಾಪಿ** (ನಾ). ಕೈಲಾಗದವನು; ನಿಷ್ಪ್ರಯೋಜಕ: ಆ ಗೆಳೆಯನ ಹತ್ತಿರ ನಾಲ್ಕು ದುಡ್ಡು ಬಿಕ್ಕೆ ಬೇಡಿ ಈ ಗೆಳೆಯನ ಹತ್ತಿರ ಒಂದಿಷ್ಟು ಬೇಡಿ, ಈ ಜೋಪಾಪಿಗಾಗಿ ಬೇಕಾಗುವ ಜೀನಸು ತರಬೇಕಾಗಿದೆ (ಚೀನಥಾ. ೨೯೭): ನಮ್ಮ ಬಾಬೂ . . . ಜೋಪಾಪಿಯಾಗಿದ್ದಾನೆ (ಕಳ್ಳಧ್ವ. ೨೩೭).

[ ?./ ತೆಲು. ಜೋಪಾಪ ]

**ಜೋಪಾಯನ** (ನಾ).=ಜೋಪಾನ ೨ : ಕುಚಗಳ್ಗೆ ತಾವಸರ ದಿಟ್ಟ ಬಳಿಕಾದವುದೆನುತ್ತೊಡನೆ ಜೋಪಾಯನಂಗೊಳಿಸಿ ದೈಚಿಟ್ಟಳು (ಹರಿಕು. ೮-೦೬).

[ < ಸಂ. ಗೋಪಾಯನ ]

**ಜೋಪಾಸನ, ಜೋಪಾಸನೆ** (ನಾ). ಜೋಪಾನ ; ಆರೈಕೆ ; ಪೋಷಣೆ : ಯಾವ ನಾರೀಮಣಿಯು ಜೋಪಾಸನದಿಂದಾಗಿ, ಅನುಗ್ರಹದಿಂದಾಗಿ ಈ ನಮ್ಮ ಕುಮಾರನು ಪುನರ್ಜನಿಸಿ ಬರಲಿರುವನೋ (ನಾಗಶಾ. ೬೮) : ಮಕ್ಕಳನ್ನು ನನ್ನ ಪ್ರಾಣವಿರುವ ತನಕ ಜೋಪಾಸನ ಮಾಡುತ್ತೇನೆ (ಒಡ್ಡಿಊ. ೬೩). **ಜೋಪಾಸನೆ:** ಇದುವರೆಗೂ ಜನರು ಹುಟ್ಟಿದ ಮಕ್ಕಳ ಜೋಪಾಸನೆಯನ್ನು ಅಷ್ಟು ಲೆಕ್ಕಿಸಿರಲಿಲ್ಲ (ಸಾಹಿಸಂ. ೧೪೦); ಈ ರೀತಿಯಾಗಿ ಆಕೆಯ ಜೋಪಾಸನೆಯಲ್ಲಿ ನಮ್ಮ ದಿನಗಳು ಚೆನ್ನಾಗಿ ಕಳೆದುವು (ಶ್ರೀಕಾಂತ. ೬೦). [←ಮರಾ. ಜೋಪಾಸನಾ, ಜೋಪಾಸಣೇ./ತುಳು. ಜೋಪಾಸನ]

**ಜೋಪಾಸನೆ** 'ಜೋಪಾಸನ' ನೋ.

**ಜೋಬ** 'ಸೋಂಬ' ನೋ.

**ಜೋಬದ್ರ** (ನಾ). ಸೋಮಾರಿ ; ಆಲಸಿ : ಅವನೊಬ್ಬ ಜೋಬದ್ರ (ಜೂಥಿ). 'ಜೋಬದ್ರತನ' ಪರಾ. [ <ಜೋಬ ]

**ಜೋಬದ್ರತನ** (ನಾ). ಸೋಮಾರಿತನ; ಆಲಸ್ಯ : ಅವನ ಬೋರ್ಡ್ ಸ್ಕೂಲು ವಿದ್ಯತ್ತು ಎಂದರೆ, ಒಂದು ತರಹದ ಜೋಬದ್ರತನ (ಸ್ವಾಮಿಸ್ಕ್ಕೇ. ೧೨೮). [ ಜೋಬದ್ರ + – ತನ ]

**ಜೋಬದ್ರೆ** (ನಾ). ಆಲಸ್ಯದಿಂದ ಕೂಡಿರುವವಳು : ಜೋಬದ್ರ ಥರ ಕೂತಿರಬೇಡ (ಜೂಥಿ). [ ಜೋಬದ್ರ + – ಎ₂ ]

**ಜೋಬು** 'ಜೇಬು' ನೋ.

**ಜೋಮಾಲೆ** (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಉದ್ದವಾದ ಸರ : "ಲಂಬನಂ . . . ಲಲಂತಿಕಾ – ಕೊರಳಲ್ಲಿ ನೇತಾಡುವ ಒಡವೆ. ಜೋಮಾಲೇ ಸರ, ಕಂಠೀಸರ, ಮಣಿಗಳ ಹಾರ ಮುಂತಾದದ್ದು" (ಸಿದ್ಧಾಂತಿ. ೦೭೩); ಕನಕನಿವ್ಮುಗೆಯುಂ ಮನೋಹರ ಕನಕಜೋಮಾಲೆಗಳ ರೂಪವನನುಕರಿಸಿ . . . ತೋರ್ಪಂತೊಪ್ಪಿತು (ಅಜಾವಿ. ೧೬–೩೧); ಸಣ್ಣ ಕಂದಮ್ಮಗಳ ಕಣ್ಣೀನ ಕವಡೀಯ ತಣ್ಣಾನ್ನ ಜೋಮಾಲೆ ಕೊರಳೊಳಗಿತ್ತೋ (ನಾದಲೀ. ೩೭–೯) ; ಬಹಳೆ ಭರ್ಜಿಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ, ಈ ಮೇರೆಗೆ ಇನಾಂ ಕೊಡುತ್ತೇವೆ (ಚಿತ್ರಪಾ. ೯೦). [ <ಜೋಲ್₁ + ಮಾಲೆ ]

**ಜೋಮಾಲೆಸರ** (ನಾ). = ಜೋಮಾಲೆ : ಆಕೆಯ ಕೊರಳಿಗೆ ಕೊಕ್ಕೆತಾತಿ, ಸರಪಣಿ, ಕರಿಮಣಿಸರ ಮತ್ತು ಜೋಮಾಲೆಸರಗಳನ್ನು ಸೂಡಿದಳು (ಹುಲಿಜಾ. ೨೦೦). [ ಜೋಮಾಲೆ + ಸರ₆ ]

**ಜೋಮು₁** 'ಜೊಂಪು₁' ನೋ.

**ಜೋಮು₂** 'ಜುಮ್ಮು₃' ನೋ.

**ಜೋಮುಹಿಡಿ** 'ಜುಮ್ಮುಹಿಡಿ' ನೋ.

**ಜೋಯಿಸ, ಜೋಯಿಸ** (ನಾ). ೧. ಗ್ರಹಗತಿಗಳನ್ನು ತಿಳಿಸುವ ಶಾಸ್ತ್ರ; ಜ್ಯೋತಿಶ್ಶಾಸ್ತ್ರ : ಗಣಿತಂ ಜೋಯಿಸಚ್ಛನ್ದ . . . ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗರ್ಗ್ಗೆ . . . ಮತ್ತರಿರ್ಪ್ಪತ್ತೈದು (ಎಇ. XX, ೬–೨೫ ; 1012) : ಶಕುನಂ ಜೋಯಿಸಮಾದಿಯಾಗಿ ಪೆಱವುಂ ವಿಜ್ಞಾನ ವಿದ್ಯಾವಿಶೇಷ ಕಳಾಕಳಾಪದೊಳಾಂ ಸಮಗ್ರನೆನೆ (ಸುಕುಮಾ. ೩–೨೧) ; ಜೋಯಿಸಮನೋದುಮಂ ಜೋಯಿಸಿಗಂ (ಶಬ್ದಾನು. ೨೯೨ ವ್ಯಯೋ) ; ಹರಿಶರ್ಮನ ಜೋಯಿಸವನ್ನು ಎಲ್ಲರೂ ಹೊಗಳಿದರು (ಕಸರಿ. ೪). ೨. ಜ್ಯೋತಿಷ್ಯವನ್ನು ಬಲ್ಲವನು; ಜ್ಯೋತಿಷಿ: "ಜೋಯಿಸ (ಜೋಶಿಸ, ಜೊಯಿಸ) – ಜ್ಯೋತಿಷ" (ತದ್ಭಕೋ. ೦೬) ; ಮಟಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನೀರ್ವೊಯ್ದನೆಂಬ ಕಥೆಯಂತೆ (ಪಂಚತಂ. ೦೨೭–೨) ; ಜೋಯಿಸನ ಮಗಳ್ [ಪಸೆಯ ಮೇಲೆ] ರಂಡೆಯಾದಳ್ (ಧರ್ಮಾಮೃ. ೦೨–೨೮) : ನೆಲೆದಪ್ಪಿದುದು ಗ್ರಹಮಾಲೆ ತಾರಾರಾಸಿ ಜೋಯಿಸ[ಪಾಠಾಂ. ತಿಷ]ರೋದು ಹುಸಿಯಾಯ್ತು (ಶಬ್ದಾಮೃ. ೦೯–೦೯) ; ಬಿಸರುಹಗಂಧಗಂಧಿನಿ ಕರೆಸಿದಳು ಜೋಯಿಸರ (ಮೋಹತ. ೨೩–೫೭) ; ಬಳಿಕ ಜೋಯಿಸರಂದು ಸುಮುಹೂರ್ತದೊಳು ಲಗ್ನಗಳ ಪೇಳೆ (ಕಂಸವಿ. ೨೦–೭). **ಜೋವಿಸ :** ೨. ಜೋವಿಸ ಗೋವಿಂದ ದೇವಂಗೆ ಆಲೂರಲ್ಲಿ ಕೊಂಡಿಱುವನ ಮತ್ತ ೪ (ಕಶಿಲ್ಶಾಶಾ. ೨೦b–೩೦ ; 1278). [ <ಸಂ. ಜ್ಯೋತಿಷ ]

**ಜೋಯಿಸಚಕ್ರಿ** (ನಾ). ಜ್ಯೋತಿಶ್ಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದವನು,–ಅಗ್ರಗಣ್ಯ : ಎಸೆವ ಮಟಗಾಲವುಂ ಜೋಯಿಸಚಕ್ರಿಯೊಳ್ . . . ಭಾವಿಸಿ ಪೇಳ್ವಂ (ಅಲ್ಲಿಮ. ೦–೩೫). [ ಜೋಯಿಸ + ಚಕ್ರಿ ]

**ಜೋಯಿಸವಾತು** (ನಾ). ಜ್ಯೋತಿಶ್ಶಾಸ್ತ್ರಜ್ಞನ ನುಡಿ ; ಜೋಯಿಸನ ಮಾತು : ಜೋಯಿಸವಾತ ಕೇಳ್ದನ್ನ ತಂದೆತಾಯ್ಗಳು . . . ಕರೆದರು (ಶ್ರೀಪಾಲ. ೫–೮೨). [ ಜೋಯಿಸ + ಮಾತು₁ ]

**ಜೋಯಿಸಿಗ** (ನಾ). = ಜೋಯಿಸ ೨ : "ಸಾಂವತ್ಸರಃ, ಜ್ಯೋತಿಷಿಕಃ . . . ಈ ೮ ಜೋಯಿಸಿಗಂ" (ಹಲಾಯು. ೬೭–೨೪೯) : ಆ ಪೊತ್ತುಂ ಜೋಯಿಸಿಗರ್ ಪಾಪಗ್ರಹವೆಂದು ಪೆಸರನಿಡೆ (ಸಮಪ. ೮–೧೬೨); ಮಾಂದರಿಗಂ, ಜೋಯಿಸಿಗಂ, ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ (ಕಮದ. ೧೯೭ ವ್ಯಯೋ) : ಜೋಯಿಸಮನೋದುಮಂ ಜೋಯಿಸಿಗಂ (ಶಬ್ದಾನು. ೨೯೨ ವ್ಯಯೋ) ; ನವಲಕ್ಷ್ಮಿಯರ ವಿಲಸಿತೋತ್ಸವ ಪೂಜೆಗೆ ಶುಭಲಗ್ನವ ಸಲೆ ಜೋಯಿಸಿಗರುಸಿರಿದರು (ಕಂಸವಿ. ೨೨–೦). [ ಜೋಯಿಸ + – ಇಗ ]

**ಜೋರ್** (ನಾ). ಒಂದು ಅನುಕರಣ ಶಬ್ದ. 'ಜೋರನೆ' ಪರಾ.

**ಜೋರನೆ** (ಅ). ಒಂದೇ ಸಮನೆ: ನೆತ್ತರು ಬಿಡದೆ ಜೋರನೆ ಸುರಿಯೆ (ಬಸವು. ೩೮–೨೮) ; ಆ ಬೆಳಕಿನ ರಭಸಕ್ಕೆ ತಮ್ಮನ ಮೈ ಜೋರನೆ ಬೆವತಿತ್ತು (ಜೊಸಕ್ಕ. ೨೦೦) : ಜೋರನೆ ಬಿಟ್ಟ ಬೆವರಿನಿಂದ ಸೀರೆಯೆಲ್ಲ ತೊಯ್ದು ಹೋಗಿತ್ತು (ಗ್ರಾಮಾಯ. ೦೩೪). [ ಜೋರ್ + – ಅನೆ ]

**ಜೋರಾವರಿ** (ನಾ). ಒತ್ತಾಯ; ಬಲಾತ್ಕಾರ; ಜುಲುಮೆ; ಜಬರದಸ್ತಿ : ನೀವು ಫೌಜು ಸಮೇತ ಜೋರಾವರಿಯಿಂದ ಆ ಶೀಮೆ ವಶನುಗ್ಗಿದ್ದೇ ಆದರೆ (ಹಾಲೀಂದ್ರ. ೯೦). [ ← ಪಾರ. ಹಿಂ. ಮರಾ. ಜೋರಾವರೀ ]

**ಜೋರಿಡು** (ಕ್ರಿ). ಸ್ರವಿಸು ; ಹೊರಸೂಸು ; ಪ್ರವಹಿಸು : ಸೂಳು ಮಿಗೆ ಸಂಗರದ ರವದುಬ್ಬಾಳಿನಲಿ ತಿರುಹಿಟ್ಟನರುಣಜಲಾಳಿ ಜೋ[ಪಾಠಾಂ. ಝೋ]ರಿಡೆ ಋಷ್ಯಮೂಕ ಮಹಾಮಹೀಧರಕೆ (ತೊರರಾ. ೯–೨–೩೭) ; ಧವಳ ವಸನದಿ ವೀಳ್ಯ ಜೋರಿಟ್ಟು ತನಿಯರುಣ ಕಾಣೆವುದು (ಜಿನಭಾ. ೫೮–೫೭). [ ಜೋರು₂ (<ಸೋರ್₁)+ ಇಡು₁ ]

**ಜೋರಿಸು** 'ಸೋರಿಸು' ನೋ.

**ಜೋರು₁** ಸೋರ್₁' ನೋ.

**ಜೋರು₂** 'ಸೋರ್₂' ನೋ.

**ಜೋರು₃, ಝೋರು** (ನಾ). ೧. ವೇಗ ; ರಭಸ : ಜೋರಿನಿಂದೋಡಿಸಲು ಪದನದ ಸೋರುತಿಹ ನೊರೆಯಾಂತ ಕುದುರೆ (ಶ್ರೀರಾಚ. ೬೨, ಪೀಠಿಕೆ): ಸ್ವಲ್ಪ ತಡೆದು ಸಿಟ್ಟಿನಿಂದ ಉರುವಲ ಕಟ್ಟಿಗೆಯನ್ನು ಒಲೆಯಲ್ಲಿ ಜೋರಿನಿಂದ ತಿವಿದಳು (ಅಕೋಳ. ೨); ಮೋಹದ್ದೀನ ಸಾಹೇಬನು . . . ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಹೊರಡುವ ಜೋರಿನಲ್ಲಿದ್ದನು (ರಂಗಲೋ. ೨೦). ೨. ಒತ್ತಾಯ ; ಬಲಾತ್ಕಾರ : ಜೋರು ಜುಲುಮೆ ಮಾಡದ ಹೊರತು ಜನರು ಕಷ್ಟ ಸಹಿಸುವುದಿಲ್ಲ (ಜನನಾ. ೧೨). ೩. ಪ್ರಾಬಲ್ಯ ; ಜರಬು ; ದರ್ಪ : ಆದರೆ ಈ ಮೂರು ತಂಡಗಳಿಗಿಂತ ಇನ್ನೊಂದು ಜಾತಿಯದೇ ಜೋರು ಹೆಚ್ಚು (ಆಲಹೂ. ೦೦): ಈ ದಾದಿಯ ಜೋರು ಜಾಸ್ತಿಯಾಗಿದೆಯಲ್ಲಾ (ಮೂಗ್ಗು. ೮೧). ೪. ಹೆಚ್ಚು ; ಅಧಿಕ: ಬಿಸಿಲು ಬಹಳ ಜೋರಾಗಿದೆಯಲ್ಲವೇ (ಅಳಿಸಿ. ೫೨) ; ಅವರ ಅಳಿಯನಿಗೆ ಜಡ್ಡು ಜೋರು (ಗಂಗಾಸಾ. ೨). ೫. ಬಲವಾದದಂ; ತೀವ್ರವಾದುದಂ:

ನಿನಗೆ ಜೋರಾದ ಪೆಟ್ಟು ಬಿದ್ದಂತೆ ಇದೆ (ಘೂರಾಚಿ. ೦೪) : ಜೋರಾಗಿ ಬರೆಯಲಿಕ್ಕೆ ಒಂದು ವಿಷಯ ಆಯ್ತು ಅವನಿಗೆ (ಅಕ್ಕಮೋ. ೨೦). ಝೋರು: ೧. ಅದು ಬರುವ ಝೋರಿಗೆ ಗುಂಡಾದ ಕಲ್ಲುಗಳು ಕಟಕಟನೆ ಪುಟ ನೆಗೆಯುತ್ತಿದ್ದವು (ಹುಟ್ಟಿಹ. ೩೭); ಅದಕ್ಕೆ ಅಭ್ಯಾಸ ಒಳ್ಳೇ ಝೋರಿನಿಂದ ಮಾಡಬೇಕಾಗಿದೆ (ಶಿಲ್ಪಮ. ೧೭). ೩. ನಿಂದೇನೋ ಝೋರ ಇದ್ಹಾಂಗ ಕಾಣತದ (ಚಂದುಟಿ. ೫೧).

ಜೋರಾಗಿ = ೧.ವೇಗವಾಗಿ; ತೀವ್ರವಾಗಿ: ಎದೆ ಜೋರಾಗಿ ಬಡಿದು ಕೊಳ್ಳುತ್ತಿತ್ತು (ಅಲಹೂ. ೩೮); ಹಳಿಯ ಮೇಲೋಡುತಿದೆ ರೈಲು ಜೋರಾಗಿ (ಚಂದ್ರವೀ. ೦೦೫-೦೮); ರಾಯರು ಜೋರಾಗಿ ತಲೆ ಅಲ್ಲಾಡಿಸಿದುದರಿಂದ . . . ತಿಳಿಯಿತು (ರಾಯುಳ. ೪೭). ೨. ದರ್ಪದಿಂದೊಡಗೂಡಿ : ನೀನು ನಿಜವಾಗಿಯೂ ಈ ಕೊಡದಲ್ಲಿದ್ದ ಭೂತವಲ್ಲ . . . ಎಂದು ಕೊಂಚ ಜೋರಾಗಿ ಹೇಳಿದನು (ಷಂಡಾಮ್ಮ. ೧೧). ಜೋರಾಗು = ವೇಗವಾಗು ; ಬಲವಾಗು : ಮಳೆ ಜೋರಾಯಿತು (ರೂಢಿ). ಜೋರುಮಾಡು = ೧. ವೇಗಗೊಳಿಸು; ತೀವ್ರಗೊಳಿಸು: ಹೊತ್ತುಕೊಂಡು ಹತ್ತಬಲ್ಲ ತ್ರಾಣವಿದೆ ಬನ್ನಿ ಎಂದು ನನ್ನ ಕಾಲು ಜೋರುಮಾಡಿದೆ(ಚಂಗಾಳ್ಳ.೩೪೯). ೨.ಬಲಾತ್ಕಾರ ಮಾಡು: ನೀನು ಜೋರುಮಾಡಿ ಹಡಗಿನ ಮೇಲೆ ಹತ್ತುತ್ತಿ(ದೇವಿಜಾ.೦೪೫). ೩. ದರ್ಪತೋರು; ಜಬರುಮಾಡು: ಮೊದಲು ನನಗೆ ಕೊಟ್ಟಿದ್ದೀಯೋ ಎಂದು ನಾನು ಜೋರುಮಾಡಿದೆ (ಶಾಲಿಮ. ೪೧) ; ಅರಸರ ಬಳಿ ಹೆಚ್ಚು ಜೋರು ಮಾಡಬೇಕಾದರೆ ದೂರದೃಷ್ಟಿ ಇದ್ದು ಮಾಡಬೇಕು (ಬಿಜ್ಜರು. ೦).

[ ←ಪಾರ. ಹಿಂ. ಮರಾ. ಜೋರ್ ]

ಜೋರುಗಟ್ಟು 'ಸೋರುಗಟ್ಟು' ನೋ.

ಜೋರುದಾರ (ನಾ). ಶಕ್ತಿವಂತ ; ಬಲವುಳ್ಳವನು : ಇಬ್ಬರೂ ಕಸ್ತಿನಲ್ಲಿ ದ್ದಾರೆ, ಜೋರುದಾರರು (ಭೀಮಕಾ. ೪). [←ಪಾರ. ಹಿಂ. ಜೋರ್‌ದಾರ್]

ಜೋರುದಾರಿ (ನಾ). ದರ್ಪವುಳ್ಳ ಹೆಣ್ಣು; ಜರಬುಳ್ಳವಳು; ಜಬರ್ದಸ್ತಿನವಳು: ಅವನು ಶ್ರೀಮಂತ ಕುಟುಂಬದ ಜೋರುದಾರಿ ಹೆಣ್ಣೊಬ್ಬಳನ್ನು ಮದುವೆಯಾಗಿದ್ದನು (ಪುನರು. ೨೨೨). [ ಜೋರುದಾರ + – ಇ೩ ]

ಜೋರುಮುಡಿ (ನಾ). ದರ್ಪ ಠೀವಿಗಳನ್ನು ಎತ್ತಿ ತೋರಿಸುವಂತಹ ಒಂದು ಬಗೆಯ ಕೇಶ ಶೃಂಗಾರ: ಸೋರುಮುಡಿಗಳು, ಜೋರುಮುಡಿ, ಬಾದಾಮಿ ಬೊಂಬಾಯಿ ಮುಡಿಗಳು (ಗಣೇಶ. ೭೨-೦೦).

[ ಜೋರು೩ + ಮುಡಿ೩ ]

ಜೋರುವರಾತ (ನಾ). (ಸಾಲ ತೀರಿಸಬೇಕೆಂದು ಮಾಡುವ)ಒತ್ತಾಯದ ತಗಾದೆ : (ಟ). [ ಜೋರು೩ + ವರಾತ ]

ಜೋರೆ (ನಾ). ಕೆಸರು ; ರಾಡಿ ; ಜವುಗು : ತಲೆ ಮುಂಡ ಕರುಳು ನೆತ್ತರು ಜೋರೆಯೋಳ್ವಂತಲ್ಪಸದೆ ಕಾದಿ ಮಡಿದರು (ನೇಮಿಸಂ. ೩೧-೦೨) ; ದಾರಿಯಲ್ಲಿ ಒಂದು ಕಳ್ಳಬದಿಯ ಜೋರೆ ಸಿಕ್ಕಿತು (ಸುಮಚ. ೨೫೦). [?]

ಜೋಲ್$_1$, ಜೋಲು$_1$ (ಕ್ರಿ). ಜೋತು, ಜೋಲ್ದು(ಭೂತನ್ಯೂ). ೧. ನೇತುಬೀಳು ; ಇಳಿಬೀಳು ; ಕೆಳಬಾಗು : "ಜೋಲ್ – ಆಲಂಬನೇ (ತೂಗಬಿಡು)" (ಶಮಧಾ) : ಜೋಲ್ದ ಪುರ್ವನೆತ್ತಿ ಕಟ್ಟಿದ ಲಲಾಟಪಟ್ಟದೊಳ್ (ಪಂಪಭಾ. ೦೦-೫೨ ವ) : ಕಯ್ಯ ಕೊಡೆಯಿಂ ಮುಯ್ಯ ತೆರೆಯಿಂ ಜೋಲ್ವ ಪುರ್ವಿಂ (ನಂಬಿರ. ೭-೨೩) : ಅಸಿಯಳ್ ಕಾಣದೆ ನಿನ್ನನೆನ್ನ ಕೊರಲಂ ಜೋಲ್ದತ್ತಳುದ್ವೇಗದಿಂ (ಅನಂಪು. ೮-೪೦) ; ಅಳಕಂ ಜೋಲ್ದಿರೆ ಹಾರಮೊರ್ಗುಡಿಸೆ (ದಶಕು. ೦೨-೨೭) : ಫಲವಿತತಿ ಜೋತೊಱಗಿದುದು ಬನಬನಂಗಳೊಳ್ (ಜಬಪು. ೪೫-೧೦). ೨. ತೂಗಾಡು ; ತೊನೆದಾಡು ; ಅಲ್ಲಾಡು ; ಹೊಯ್ದಾಡು : ಮುಯ್ಯಿಂದಾವಗಂ ಸಂಭ್ರಮದೆ ರುಚಿರ ವಲ್ಕೋತ್ತರೀಯಾಂಚಲಂ ಜೋಲ್ತಿರೆ (ಕಾದಂಉ.೭೯೭); ಅಕಂಪದಿಂ ಜೋಲೆ ಕರ್ಣೋತ್ಪಳಮಾಲಿಪ್ರಾಂಗರಾಗಂ ಮಸುಳೆ ಪುಳಕದಿಂ . . . ಎಸೆದಳ (ವರ್ಧಪು. ೭-೦೯) ; ಮದಿರಾಪಾನಮಂ ಮಾಡಿ . . . ಕುಣಿಯುತುಂ ಮಣಿಯುತುಂ ಮಾಲುತುಂ ಜೋಲುತುಂ (ಉದ್ಭಟ. ೫-೯೦ ವ); ಹಚ್ಚಡದ ಸೆಱಗಂ ಪಿಡಿದು ಕೈಯಿಂದ ಸೆಳೆಸೆಳೆದು ಜೋಲುತ್ತ ತೆಗೆವಂ (ಬಸಪು. ೪೬-೪೭). ೩.ಸಡಿಲವಾಗು; ಅಳ್ಳಕವಾಗು: ಮಿಸುಗುವ ತೋರ ಮಲ್ಲಿಗೆಯ ಜೋಲ್ತ ಬಟಲ್ಮುಡಿ ತೊಟ್ಟ ಮೌಕ್ತಿಕಪ್ರಸರ ವಿಭೂಷಣಾಳಿ (ಸುಕುಮಾ. ೯-೧೦೪) ; ೪. ಕುಸಿಬೀಳು ; ನಿಸ್ಸತ್ತ್ವವಾಗು : ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊಟ್ಟಗೆ ಕೊಳೆ ನೋಡಿ (ಪಂಪಭಾ. ೨-೦೯) ; ಮೂರ್ಛಾವೇಗದಿಂದಿಕ್ಕುವಟ್ಟನವೊಲ್ ಝೊಂಪಿಸಿ ಜೋಲ್ದು ನೇಲ್ದು (ಕಾದಂಉ. ೪೪೪) : ತಲೆ ಪಱಿದು ಜೋಲ್ದು ತೊಪ್ಪನೆ ನೆಲದೊಳ್ ತನು ಬೀೞ್ (ಧರ್ಮಾಮೃ. ೦೩-೦೭೨) ; ತೆತ್ತಿಸಿದಂಬಿನ ಗಱಿ ಮಿಱುಗುತ್ತಿರೆ ಬಾಯ್ಬಿಟ್ಟ ಪುಣ್ಗಳಿಂ ಜೋಲ್ವ ಭಟಂ (ವರ್ಧಪು. ೮-೫೫); ಒಱಲ್ದುಪಡೆ ಗೋಳಿಟ್ಟುದಾನೆ ಕುದುರೆಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದುವು (ಜೈಮಿಭಾ. ೦೩-೬೦). ೫. ಮನಸೋಲು ; ಪರವಶವಾಗು : ಮನದೊಳೊಱಲ್ದು ಜೋಲ್ದಳಿಪಿ ನೋಡಲೊಡಂ (ಪಂಪಭಾ. ೨-೪೦).

ಜೋಲು$_1$ : ೧. ಕುಣಿವ ಕುಂತಾಗ್ರದಲಿ ಜೋಲುವ ಹಿಣಿಲುಗರುಳೊಪ್ಪಿದುವು (ಕುಮಾ್ರಭೀ. ೪-೪೪) ; ಕಟಿಯೊಳು ಜೋಲುವ ಪೀತಾಂಬರದ ಮೇಲುದಟ್ಟಿಯೊಳೊಪ್ಪುವ ಸುರಗಿಯ ಬಿಲ್ಲ ಕಾಲಪಾಯಕರೊಪ್ಪುತಿಹರು (ಕೆಂಸವಿ. ೦೮-೬೩); ತಾಳೆಗಳು ಬೆಳೆದು, ಖರ್ಜೂರದಲಿ ಹಣ್ಣು ಜೋಲುತಿಹ, ಬಿಸಿಲ ಸೀಮೆಯಲಿ ನಲಸಿಹುದೆ (ಕವಿಪು. ೪೭-೩). ೨. ಲೋಹದಾ ಗುಂಡುಗಳು ತಲೆಯನೆದೆ ಬೆನ್ನ ಜೋಲುತ್ತ ಹೊಡೆವುತಿರೆ (ವೀಕ್ಕಪು. ೪-೦೯-೩೦).

ಜೋತಾಡು = ೧. ಜೋಲಾಡು ; ತೂಗಾಡು : ಗಿಳಿಗಿಂತ ಚೆನ್ನಾಗಿ ಮಾತಾಡಬಲ್ಲ, ದೊಡ್ಡದರ ಬಾಲಕ್ಕೆ ಜೋತಾಡಬಲ್ಲ (ನಲಮು. ೨೮-೨೧) ; ನೀಳವಾದ ಹೆಳಲು ಆಕೆಯ ಹೆಗಲ ಮೇಲೆ ಜೋತಾಡುತ್ತಿದ್ದಿತು (ಪ್ರದಕ. ೦). ೨. ತುಳುಕಾಡು : ಸ್ವಾತೀಯ ಮಳೆ ಹುಯ್ದು ಸೀತೆಯ ಕೆರೆ ತುಂಬಿ ಜೋತಾಡುತ್ತೈತೆ ಕುಣಿಗಲು (ಹಳ್ಳಿಹಾ. ೩೨). ಜೋತುಗೊಳ್ಳು = ಅಂಟಿಕೊಳ್ಳು ; ಜೋತುಬೀಳು : ಅವನು ಆದರ್ಶಕ್ಕೆ ಜೋತುಗೊಂಡಿದ್ದಾನೆ (ರೂಢಿ). ಜೋತುಬೀಳು = ಅಂಟಿಕೊಳ್ಳು ; ಅವಲಂಬಿಸು ; ಆಧರಿಸು : ಜೀವಕ್ಕೆ ಜೋತುಬಿದ್ದ ಈ ಜಂತುಗಳಿಗೆ ಈಗ ಅನುಭವ ಬರುತ್ತಲಿದೆ (ಅಕ್ಕಮೋ. ೩೦) ; ಭಾವಜೀವಿಯಾದ ನೆಕ್ಲುದೋವ . . . ಹೊಸ ಜೀವನವಿಧಾನಕ್ಕೆ ನಿಸ್ಸಂಕೋಚವಾಗಿ ಜೋತುಬಿದ್ದನು (ಪುನರು. ೬೧) ; ಆದರೆ ಜೀವ ಅಷ್ಟಕ್ಕೇ ಸೋಲಲೊಪ್ಪದೆ ಯಾವುದೋ ದೂರದ ಆಸೆಗೆ ಜೋತುಬಿದ್ದಿತ್ತು (ರೂಪಸ. ೬೮). ಜೋತುಹಾಕು=ನೇತುಹಾಕು; ತೂಗುಹಾಕು : ನಿನ್ನನ್ನು ಸೀಳಿ ನಾಲ್ಕು ಭಾಗಮಾಡಿ ನಾಲ್ಕು ಬಾಗಿಲುಗಳಿಗೆ ಜೋತುಹಾಕುತ್ತೇನೆ (ಹಳ್ಳಿಹಾ. ೦೦೮). ಜೋಲವಿಡು=ಜೋತಾಡುವಂತೆಮಾಡು ; ನೇತುಬಿಡು : ಕಯ್ಯೊಳ್ ಸೋರೆಯ ಕಾಯಂ ಕೊಟ್ಟು ಬಾವಿಯೊಳಗೆ ಜೋಲವಿಡೆ (ಪುಣ್ಯಾಸ್ರ. ೪-೨೫ ವ).

[ ದೇ.೫ ಮಲ. ಓಲ್ ; ಗೊಂಡಿ. ಹೋಲ್ ]

ಜೋಲ್$_2$, ಜೋಲು$_2$ (ನಾ). ೧. ಜೋತುಬೀಳಂವಿಕೆ ; ಇಳಿಬಿದ್ದಿರುವಿಕೆ : ಚೆಲ್ವ ಪಣೆ ಕುರುಳ ಜೋಲಂಬೆಗಾಲು . . . ಸೊಗಯಿಸುವ ವರಶಿಶು (ಜೈಮಿಭಾ. ೨೮-೦೮). ೨. ಸಡಿಲ ; ಅಳ್ಳಕ : (ಟ). ೩. ಹೊಯ್ದಾಟ; ತೂರಾಟ (?) : ಜಗುಟ್ದು ನಿಱಿ ಕರಂ ಜೋಂಪಿಪಂಗಂ ವಿಲಾಪ್ಯಾಕ್ಷರವಾಕ್ಯಂ ರೋಮಹರ್ಷಂ ಬಿಡದೆಸೆವಳೆ ಜೋಲ್ ಹೂಂಕೃತಂ ತೋರ್ಪ ಚಲ್ಲಂ ಕರಮೊಪ್ಪಲ್ . . . ಎಸೆದುದಸದಳಂ ಮದ್ಯಪಾನಾಂಗನೌಘಂ (ಉದ್ಭಟ. ೫-೮೫). ಜೋಲು$_2$ : ೪. ಜೋತುಬಿಟ್ಟುದು : ಬೆಂಡೆಯನಿಕ್ಕಿ ಪಾವಡೆಯ ಜೋಲಿನೊಳಗರದಿಕ್ಕಿ . . . ಗುಡಪಾಕವೆಂದು ಹೆಸರು ಕರೆವುದು (ಸೂಪಶಾ. ೨-೨೯). [ <ಜೋಲ್$_1$ ]

**ಜೋಲಕಾರುಣ್ಯ** (ನಾ). ಒಂದು ಬಗೆಯ ತೆರಿಗೆ : ಜೋಲಕಾರುಣ್ಯ ಜಿಡ ದೆರ್ಗ ವ ೩ ಬಟ್ಟೆಯ ಭಂ ೧ಕ್ಕಂ ಗ ೨ (ಎಕ್. XVI, ಚಿಕ್ಕನಾ. ೬೦-೨೦ ; ೧). [ ? ]

**ಜೋಲಾಡು** (ಕ್ರಿ). ನೇತಾಡಂ; ತೂಗಾಡು: ಆಡುವರು ಲತೆಯುಯ್ಯಲವ ಜೋಲಾ[ಪಾಠಾಂ. ಳಾ]ಡುವರು ಲತೆಗಳನು (ನಿಘಂಗ. ೧೧-೦೮-೯) : ಶಕ್ತಿ ಹೆಚ್ಚಿ ಅವೆಲ್ಲವೂ ಅರ್ಧನಿಮಿಷದ ತನಕ ಜೋಲಾಡಲು ಶಕ್ತವಾದವಂತೆ (ಜೀವಶಾಸ್ತ್ರ. ೦೬೮). [ ಜೋಲ್$_1$ + ಆಡು$_1$ ]

**ಜೋಲಿ$_1$, ಜೋಲ್ೆ$_1$** (ನಾ). ೧. ಕೆಲಸ ; ಕಾರ್ಯ : ತೀರಿತೆಲ್ಲಾ ಜೋಲಿಯಂದಿನ ಮಱುದಿನ ವೀರಕಟಕದ ಲಗ್ಗೆಯೊಳು (ಭರತ. ೪೪-೩೪) : ಅನುವೊಂದಿನಿಸು ಜೋಲಿಯಂ ತೀರಿಸಿ ಬೇಗದಿಂ ಬಂದಪೆಂ (ಮಿತ್ರಗೋ. ೩೯) : ಜೋಲಿಗಳು ಸಣ್ಣವಿರಲಿ ದೊಡ್ಡವಿರಲಿ ಅವುಗಳಿಗೆ ಕಾಲವು ಸಮಾನವೆ ಹತ್ತುತ್ತದೆ (ಮುಂಬಯಿ. ೩-೨೦೨). ೨. ಗೋಜು; ಗೊಡವೆ; ಸಂಬಂಧ: ನಿನಗೆಯನ್ನೇತಿಳಿಯ ಜಾರರ ಜೋಲಿ [ಪಾಠಾಂ. ಕೆ] ಬಿಡು ಜಾನಕಿಯ (ತೊರವೆರಾ. ೬-೨-೨೩) : ಸೌಜನ್ಯದೊಳು ಮುಂದೆ ಕಾರ್ಯವ ಕೊಂಚೆ ನಾನೀ ಜೋಲಿ ಬೇಡೆಂದೆಳಿಂದು (ಭರತ. ೪೨-೩೩) : ಈ ಜೋಲಿ ನಮಗೇಕೆಂದು ಸುಮ್ಮನಿರಬೇಕೆ ? (ಸಾಹಿತ್ಯ. ೪೨). **ಜೋಲ್ೆ$_1$** : ೨. ಲೋಲುಪ ಭವದ ಲೀಲೆ ಹಗಲು ಇರುಳು ಜೋಲೆಯೊಳಗೆ ಬಿದ್ದು ವ್ಯಾಳ್ಯೆ ತಿ ೀ ಯ ದ ೆ (ಮೊಗ್ಗದೀ. ೪೮-೨). [ ದೇ.ಶ ತಮಿ. ಮಲ. ಚೋಲಿ ; ತೆಲು. ಜೋಲಿ ]

**ಜೋಲಿ$_2$** 'ಜೂಲು$_2$' ನೋ.

**ಜೋಲಿ$_3$, ಝೋಲಿ** (ನಾ). ೧. ತೂಗಾಟ ; ತೊನೆದಾಟ ; ಹೊಯ್ದಾಟ : ಮನದ ಅರಡಿ ಅದರ ಮಧುರಸ ಕುಡಿದು ಹೊಡೆಯಲಿ ಜೋಲಿಯ (ಮಾನಸ. ೩೩-೨೦) : ತೂಗುತಿದೆ ನಿಜ ಬೈಲಲಿ ಜೋಕಾಲಿ – ಜೋಲಿ – ಲಾಲಿ (ಕರೀಕ. ೩೧ ಪಲ್ಲವಿ). ೨. ತಡ ; ಸಾವಕಾಶ : ಒಲಗವಾಗದ ಮುನ್ನ ಬಂದೈ ನಸು ಜೋಲಿಯಾಯ್ತುದಱಿಂದ ನಿನ್ನ ಆಲಸ್ಯ ಗಂಡರೆಂದೆನ್ನದಿರು (ಭರತ. ೪೭-೩೬) : ಕೈವಲ್ಯಚೋಳನಹಿತರ ಮೇಲೆ ಪೋಗಿ ಮೂಱಬ್ದವಂ ಜೋಲಿಯಾಗಲ್ ತನ್ನ ರಾಜ್ಯಕ ಬರಸ್ಯೆದ ಸಿರಿವಂತ ಸೆಟ್ಟಿ (ಆಬಪು. ೩೩-೨೭) ; ವಿವಾಹಮನಂದು ತಾಂ ಜೋಲಿಯಾಗದೆ ಮಾಡಿ (ಹಾದಾಸ್ಕ. ೨-೩-೪೧). ೩. ಸಮತೂಕ ; ಆಯ ; ಏಕೋ ಏನೋ ಅವರಿಗೆ ಸ್ವಲ್ಪ ಜೋಲಿ ಹೋಯಿತು (ಕರಕ. ೮೦೮). 'ಜೋಲಿತಪ್ಪು' ಪರಾ. ೪. ಥಟ್ಟನೆ ಚಲಿಸುವುದಂ. 'ಜೋಲಿಕೊಡು' ಪರಾ. **ಝೋಲಿ.** 'ಝೋಲಿತಪ್ಪು' ಪರಾ.

**ಜೋಲಿಮಾಡು** = ತಡಮಾಡಂ ; ಸಾವಕಾಶವಾಗು : ಜೋಲಿ ಮಾಡದೆ ಜೋಕೆವಿಡಿದುಱಿ ಪ್ರಾತಃಕಾಲದ ರಾಗವನಱಿದು ಆಲಾಪಿಸಿದರು (ಭರತ. ೦-೬೨) : ಕಾಲವ ಚುತಿಸಲು ಸಲ್ಲಾ ಜೋಲಿಮಾಡಲು ಕಾರ್ಯ ಕೆಡುವುದು (ಜಿನರಾ. ೩-೧೧). [ ← ಮರಾ. ಝೋಲ, ಝೋಲಾ ]

**ಜೋಲಿ$_4$, ಜೋಲ್ೆ$_2$** (ನಾ). ಮೊಂಡುತನ; ಹಟ; ಚಂಡಿತನ. **ಜೋಲ್ೆ$_2$**: ಕಾಂತೆಯು ಪುರುಷರೇಕಾಂತದೊಳಗಿರ್ದು ಇಂತು ಜೋಲೆ ಮಾಡಲೇನು ಕಾರಣವು (ಸಾರಂಗ. ೧೧).

**ಜೋಲಿ ಮಾಡು** = ಮೊಂಡುತನ ಮಾಡು ; ಹಟಹಿಡಿ : ಬೇಡವೆಂದರೆ ಕೇಳರಕಟ ನೀವೇ ಜೋಲಿಮಾಡಿದಿರಿ (ಭರತ. ೪-೪೮). [ ? ]

**ಜೋಲಿಕೊಡು** (ಕ್ರಿ). ಚಲಿಸುವಂತೆ ಮಾಡು; ಜೀಕ ಕೊಡು : ನಿರ್ಮಲೆ ಏರಿ ಕೂತ ಜೋಕಾಲಿಗೆ ಜೋಲಿಕೊಟ್ಟಳು (ಮೂರುದಾ. ೨೩೯).
[ ಜೋಲಿ$_3$ + ಕೊಡು$_1$ ]

**ಜೋಲಿಗಾರ** (ನಾ). ತಿರುಗಾಡುವವನು ; ಅಲೆಮಾರಿ : ಜೋಲಿಗಾರನ ಬೇಲಿ ಮುರಿದರೆ ಹೊಲವೆಲ್ಲಾ ಜಾಲಿ (ಗಾದೆ).
[ ಜೋಲಿ$_3$ + – ಗಾರ ( < – ಕಾಱ) ]

**ಜೋಲಿಡು** (ಕ್ರಿ). ತೂಗಾಡು ; ಓಲಾಡಂ : ಝೊಮ್ಮಿಡುತ ಜೋಲಿಡುತ [ಪಾಠಾಂ. ಜೋಲುತ್ತ]ಒಂದನೊಂದಂ ನೆಮ್ಮಿ ಸುಮ್ಮಾನವೇಱಿ ಮೆಯ್ಯಿ ಮಿಱಿಯೆ ಸುಖಂ ಹೊಮ್ಮಿ (ಅನಾರ. ದೇ. ೧೮೨-೨೩).
[ ಜೋಲ್$_1$ + ಇಡು$_1$ ]

**ಜೋಲಿತಪ್ಪು, ಝೋಲಿತಪ್ಪು** (ಕ್ರಿ). ಆಯ ತಪ್ಪು ; ತೂಕ ತಪ್ಪು : ಮಂಗವು ಜೋಲಿತಪ್ಪಿ ನೆಲದ ಮೇಲೆ ಅಂಗಾತವಾಗಿ ಬಿದ್ದುಕೊಂಡಿತು (ಹೇಮಂತ. ೩೦೦); ಜೋಲಿತಪ್ಪಿ ಬೀಳುತ್ತಿದ್ದೆಯಲ್ಲಾ (ಮೂರುದಾ. ೨೪೪). **ಝೋಲಿತಪ್ಪು**: ಒಳಗೆ ನಿಂತವರೆಲ್ಲ ಝೋಲಿತಪ್ಪಿ ಒಬ್ಬರ ಮೇಲೊಬ್ಬರು ಬಿದ್ದುಬಿಟ್ಟರು (ಹಂಸಕ್ಷ. ೦೫೦). [ ಜೋಲಿ$_3$ + ತಪ್ಪು$_1$ ]

**ಜೋಲಿತಿನ್ನು** (ಕ್ರಿ). = ಜೋಲಿತಪ್ಪು : ಜೋಲಿತಿನ್ನುತ್ತ ಯಾಮಿನಾ ಒರೆಯಿಂದ ಖಡ್ಗ ಹಿರಿದ (ಸೂರಜ. ೬೦). [ ಜೋಲಿ$_3$ + ತಿನ್ನು ( < ತಿನ್) ]

**ಜೋಲಿಸು** (ಕ್ರಿ). ಜೋತಾಡಿಸು ; ನೇತುಬಿಡು : ಕಣ್ಗಳನರೆಮುಚ್ಚಿ ತೋರದ ಗಱಿಯಂ ನಸು ಜೋಲಿಸಿ ಪಕ್ಕಿಗಳ್ . . . ದನಿಗೆಯ್ಯುತ್ತು ಮಿರ್ದುವು (ಅಗವಿ. ೦೪-೧೧) ; ತನುವನೊಲಿದವು ದಡದಡಿಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುಮಾವ್ಯಾಪಿ. ೮-೮೩); ರೆಕ್ಕೆಗಳನುಱಿ ಜೋಲಿಸುತ್ತ ಜೊಂಪಿಪುದೊಮ್ಮೆ (ಚಿಲಪು. ೪೬-೬). [ಜೋಲ್$_1$+ –ಇಸು$_1$]

**ಜೋಲಿಹಿಡಿ** (ಕ್ರಿ).=ಸಮತೂಕವನ್ನು ಕಾಯ್ದುಕೊಳ್ಳು ; ತೂಕಹಿಡಿ : ತಮಗೆ ಜೋಲಿಹಿಡಿಯಲು ಆಧಾರವೇನಾದರೂ ಬೇಕಾಗುವದು (ಹೇಮಂತ. ೩೩೨) ; ಕಾಮಿನಿ ರೇಲ್ವೆ ಹಳಿಯ ಮೇಲೆ ಜೋಲಿಹಿಡಿಯುತ್ತ ನಡೆಯತೊಡಗಿದಳು(ಮುಕ್ತ. ೦೨೩). [ ಜೋಲಿ$_3$ + ಹಿಡಿ$_1$ ( < ಪಿಡಿ$_1$) ]

**ಜೋಲಿಹೊಡೆ, ಝೋಲಿಹೊಡೆ** (ಕ್ರಿ). ೧. = ಜೋಲಿತಪ್ಪು : ಎಂಥ ಭಾರಕು ಜೋಲಿಹೊಡೆಯದಿಹ ತೂಗುತೊಲೆ (ನಲಮು. ೩೦-೬). ೨. ತೂಗಾಡು ; ಹೊಯ್ದಾಡಂ ; ಒಲೆದಾಡು : ಶ್ರೀನಗರ ಸರಸಿಯಲಿ ನೌಕೆ ನೂರು ತೇಂಕಾಡಿ ಜೋಲಿಹೊಡೆಯೆ (ಕರುಣ್ಯಾ. ೩೬-೧); ಆ ಬೀದಿಯ ಮೇಲೆ ಒಬ್ಬ ಯುವಕ ಜೋಲಿ ಹೊಡೆಯುತ್ತ ಹೊರಟಿದ್ದಾನೆ (ಹಾದುಹು. ೬೩) ; ಶಕ್ತಿ ಇಲ್ಲದ ಅವನ ಕಾಲುಗಳು ನಿಲ್ಲಲು ಬಾರದೆ ಜೋಲಿಹೊಡೆಯುತ್ತ . . . ಬೀಳುವಂತಾಯಿತು (ಬಂಗಾಜಿ. ೮). **ಝೋಲಿಹೊಡೆ** : ೨. ಸುರೇಶ . . . ಅತ್ತ ಇತ್ತ ಝೋಲಿಹೊಡೆಯುತ್ತ ಹೊರಗೆ ಬಂದ (ಜೀವರಂ. ೦೯). [ ಜೋಲಿ$_3$ + ಹೊಡೆ$_1$ ( < ಪೊಡೆ$_1$) ]

**ಜೋಲಿಹೋಗು** (ಕ್ರಿ). = ಜೋಲಿತಪ್ಪು : ಪಾಪ ಮುದುಕರು ಜೋಲಿ ಹೋಗಿ ಬಿದ್ದಾರು (ಮೋಹಿನೀ. ೦೦೪) ; ಜೋಲಿಹೋಗಿ ಪಕ್ಕದಲ್ಲಿರುವ ಚಿಕ್ಕ ಸ್ಟೂಲಿನ ಮೇಲೆ ಬಿದ್ದ (ಮುಂಗಾಮು. ೧೦೩) ; ಆದರೆ ಎಚ್ಚರದಪ್ಪಿ ಜೋಲಿ ಹೋಗುವಾಗ ತಿಮ್ಮಯ್ಯನವರು ಕೂಡಲೇ ಸಾವರಿಸಿ ಹಿಡಿದರು (ಕಾಗೆಳ. ೨೮). [ ಜೋಲಿ$_3$ + ಹೋಗು$_1$ ( < ಪೋಗು$_1$) ]

**ಜೋಲು$_1$** 'ಜೋಲ್$_1$' ನೋ.

**ಜೋಲು$_2$** 'ಜೋಲ್$_2$' ನೋ.

**ಜೋಲುಗಡ್ಡ** (ನಾ). ಇಳಿಬಿದ್ದ ಗಡ್ಡ; ಉದ್ದವಾದ ಗಡ್ಡ ; ಹಾಗಾದರೆ ಈತನು ಈ ಚಿತ್ರಪಟದಲ್ಲಿ ಜೋಲುಗಡ್ಡದ ಋಷಿಗಳ ಗುಂಪನ್ನು ಬರೆದು ಮುಗಿಸಬೇಕು (ಶಾಕುಂತ. ೯೦-೩). [ಜೋಲು$_1$ ( < ಜೋಲ್$_1$)+ಗಡ್ಡ$_1$]

**ಜೋಲುಗರುಳು** (ನಾ). ನೇತಾಡುವ ಕರುಳು : ಅಳ್ಳಿಗಳ ಘಾಯದ ಜೋಲುಗರುಳಿನಲೊಱಗುವುವು ಕೆಲವು (ತೊರರಾ. ೩-೩-೦೬).
[ಜೋಲು$_1$ ( < ಜೋಲ್$_1$) + ಕರುಳು ( < ಕರುಳ್) ]

**ಜೋಲುಗಾಲು** (ನಾ). ಸ್ಥಿರವಾಗಿ ನಿಲ್ಲದ ಕಾಲು; ನಿಶ್ಶಕ್ತವಾದ ಕಾಲು: ಹೈಮಾವತಿ ಎದ್ದು ಜೋಲುಗಾಲುಗಳನ್ನು ಎಳೆದೆಳೆದು ಮುಂದಿಡುತ್ತ ನಡೆದು, ಕಿಡಕಿಯ ಮಾರ್ಗವಾಗಿ ಮನೆಯನ್ನು ಸೇರಿದಳು (ಎರಡು. ೮೬).
[ ಜೋಲು$_1$ ( < ಜೋಲ್$_1$) + ಕಾಲು$_1$ ( < ಕಾಲ್$_1$) ]

**ಜೋಲುಗಿವಿ** (ನಾ). ೧. ಜೋತುಬಿದ್ದ ಕಿವಿ: ಜೋಲುಗಿವಿಯ ಆ ನಾಯಿ ಬಹಳ ಚುರುಕಾಗಿದೆ (ಲೂಥ). ೨. (ಆಲಂ) ಬಾಡಿಯನ್ನು ಕೇಳುವವನು: ಅವನೊಬ್ಬ ಜೋಲುಗಿವಿಯವನು (ಲೂಥ). 'ಇಳಿಗಿವಿ' ಪರಾ.

[ ಜೋಲು$_1$ (< ಜೋಲ್$_1$) + ಕಿವಿ$_3$ ]

**ಜೋಲುಗೊಂಬೆ** (ನಾ). ಕೆಳಕ್ಕೆ ಬಾಗಿರುವ ಕೊಂಬೆ,-ರೆಂಬೆ : ಮೇಲು ದನು ಮಧ್ಯಕ್ಕೆ ಸುತ್ತಿ ಕಾಸಿಯು ಬಿಗಿದು ಜೋಲುಗೊಂಬೆಯನೆರಡು ಕರ ಗಳಲ್ಲಿ ಓಡಿದು (ನವಮೋ. ೩೪-೫೪).

[ ಜೋಲು$_1$ (< ಜೋಲ್$_1$) + ಕೊಂಬೆ$_1$ ]

**ಜೋಲುಜಡೆ** (ನಾ). ಜೋತಾಡುವ ಜಟೆ ; ಇಳಿಬಿದ್ದಿರುವ ಜಡೆ : ಆಲದ ಬಿಳಲಂತೆ ಜೋಲುಜಡೆಗಳ ಬಿಟ್ಟು (ಸರ್ವಜ್ಞ. ೫೮೩).

[ ಜೋಲು$_1$ (< ಜೋಲ್$_1$) + ಜಡೆ$_1$ ]

**ಜೋಲುತೋಲು, ಜೋಲುಂದೊಗಲು** (ನಾ). ಸಡಿಲವಾಗಿ ಇಳಿಬೀಳುವ ಚರ್ಮ : ಗೋಳುಮೋರೆಯ, ಜೋಲುತೋಲಿನ, ಜೂಲುಅರಿವೆಯ ತಿರುಕ (ಕಗದ್ಯ. ೭೪). **ಜೋಲುದೊಗಲು :** (ಕ).

[ ಜೋಲು$_1$ (< ಜೋಲ್$_1$) + ತೋಲು$_1$ (< ತೋಲ್$_1$) ]

**ಜೋಲುದುರುಬು** 'ಜೋಲ್ದುರುಬು' ನೋ.

**ಜೋಲುದೊಗಲು** 'ಜೋಲುತೋಲು' ನೋ.

**ಜೋಲುಬಾವಲಿ** (ನಾ). ಕಿವಿಯಲ್ಲಿ ಧರಿಸುವ ಜೋತಾಡುವ ಒಂದು ಬಗೆಯ ಆಭರಣ,-ಬಾವುಲಿ : (ಕ).

[ ಜೋಲು$_1$ (< ಜೋಲ್$_1$) + ಬಾವಲಿ$_2$ (< ಬಾವುಲಿ$_2$) ]

**ಜೋಲುಬಿಡು** (ಕ್ರಿ). ಇಳಿಬಿಡು; ನೇತುಬಿಡು : ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯು ಹಿಡಿಹಿಂಗೆ ಲಾಗಿಸುತಿರ್ದುದಾ ದಂತಿ (ಕುಮಾವ್ಯಾ. ೩-೩೭).

[ ಜೋಲು$_1$ (< ಜೋಲ್$_1$) + ಬಿಡು$_1$ ]

**ಜೋಲುಬೀಳು** 'ಜೋಲ್ಬೀಳು' ನೋ.

**ಜೋಲುಮನಸ್ಸು** (ನಾ). ಉತ್ಸಾಹವಿಲ್ಲದ ಮನಸ್ಸು ; ಸ್ಥಿರವಾಗಿರದ ಮನಸ್ಸು : ಈ ಜೋಲುಮನಸ್ಸನ್ನು ತ್ಯಜಿಸು ; ಇದು ನಿನಗೆ ತಕ್ಕದ್ದಲ್ಲ (ಪಂಚಭಾ. ೨೪೨). [ ಜೋಲು$_1$ (< ಜೋಲ್$_1$) + ಮನಸ್ಸು ]

**ಜೋಲುಮುಖ** (ನಾ). ಇಳಿಬಿದ್ದ ಮುಖ ; ಬಾಡಿದ ಮುಖ ; ಮ್ಲಾನವಾದ ಮುಖ : ಸಟ್ಟು ಜೋಲುಮುಖ ತೋರಿ, 'ಹೌದು' ಎಂಬ ಭಾವಕ್ಕೆ ಸರಿಯಾಗಿ ಕೈ ಹೊಸಕಿಕೊಂಡರು (ಒಡ್ಡಿಕಾ. ೧೦).

**ಜೋಲುಮುಖ ಹಾಕು**=ಮುಖ ಇಳಿಬಿಡು; ನಿರುತ್ಸಾಹ ಹೊಂದು : ಮನೆಯ ಮೂಲೆಯಲ್ಲಿ ಜೋಲುಮುಖ ಹಾಕಿಕೊಂಡು ಕುಳಿತಿರುವ ಸ್ಥಿತಿಗಿಂತ . . . ಓಡಾಡಿಕೊಂಡು ಬಂದ ನಂತರ ನಮ್ಮ ಸ್ಥಿತಿಯೇ ಬೇರೆ (ಜೀವಾತ್ಮ. ೮); ರಾಜಮಂಡಲವು ಜೋಲುಮುಖ ಹಾಕಿಕೊಂಡಿತು (ಪಂಚಭಾ. ೫೨) : ಆದ್ದರಿಂದ ಅದು ಜೋಲುಮುಖ ಹಾಕಿಕೊಂಡು ಬೀದಿಬೀದಿಗಳಲ್ಲೂ ಅಲೆಯುತ್ತಿತ್ತು (ಕಿಂಕಥ. ೦೩೦).

[ ಜೋಲು$_1$ (< ಜೋಲ್$_1$) + ಮುಖ ]

**ಜೋಲುಮೋರೆ** (ನಾ). = ಜೋಲುಮುಖ : ಈ ನಿನ್ನ ಮಾಧವನು ಜೋಲುಮೋರೆಯಿಂದ ಕುಳಿತಿದ್ದಾನೆ (ಉದಪ್ಪ. ೭೭).

**ಜೋಲುಮೋರೆ ಹಾಕು**=ಮುಖ ಇಳಿಬಿಡು; ನಿರುತ್ಸಾಹ ಹೊಂದು: ಆದರೆ ಜೋಲುಮೋರೆ ಹಾಕಿಕೊಂಡು ಅವರೆಲ್ಲ ಹಿಮ್ಮೆಟ್ಟಬೇಕಾಯಿತು (ಶತ್ರುಕ್ರಿ. ೫೭೪) : ಇನ್ನಿಷ್ಟು ಜೋಲುಮೋರೆ ಹಾಕಲು ಕೊತವಾಲನು ಪ್ರಯತ್ನ ಮಾಡಿದ (ಕೊತಕಾ. ೩); ಮಾಧವ ಜೋಲುಮೋರೆ ಹಾಕಿಕೊಂಡೇ ಒಳಗೆ ಬಂದ (ಪಾತ್ರಂ. ೭೭).

[ ಜೋಲು$_1$ (< ಜೋಲ್$_1$) + ಮೋರೆ (< ಮೋಱೆ) ]

**ಜೋಲೆ$_1$** 'ಜೋಲಿ$_1$' ನೋ.

**ಜೋಲೆ$_2$** 'ಜೋಲಿ$_4$' ನೋ.

**ಜೋಲೆಗ** (ನಾ). ಜೋತುಬೀಳುವವನು ; ಮೋಡನಾದ ವಿಟ (?) : ಬೆನ್ನನೆ ಬರ್ಪ ಜೋಲೆಗರ ಬರವಂ ನಿರುಕಿಸುತುಂ ನಿಲ್ವ ಪೋಪ ದೇವಾಂಗನೆಯರುಂ ಕಣ್ಗೆವರ್ಪರ್ (ರಾಮಾಶ್ವ. ೭೩-೧೯).

[ಜೋಲೆ$_2$ (< ಜೋಲಿ$_4$) + – ಗ$_3$]

**ಜೋಲ್ಗೆಚ್ಚಲ್** (ನಾ). ನೇತಾಡುವ ಕೆಚ್ಚಲು ; ದೊಡ್ಡ ಕೆಚ್ಚಲು : ಪಾಲ್ಗೋಡಿನ ಜೋಲ್ಗೆಚ್ಚಲ ತೋರಮೊಲೆಯ ಎಳಗಂದಿ (ರಾಮಾಶ್ವ. ೧೦೦-೩೦). [ ಜೋಲ್$_1$ + ಕೆಚ್ಚಲ್ ]

**ಜೋಲ್ಗೈಯ** (ನಾ). ನೃತ್ಯ ಭಂಗಿಯಲ್ಲಿ ಕೈಯನ್ನು ಜೋತು ಬಿಟ್ಟಿರುವವನು ; ನಟರಾಜ ; ಶಿವ : ವಿಸುಪ ಸುಲಿಪಳ್ಗಳಿಂ ಜಸವೆತ್ತ ಜೋಲ್ಗೈಯ್ಯ ನೀವೆಮ್ಮ ಪಾಲ್ಗಕ್ಕಱಿಂ ಬಹುದು (ವೀಶ್ವಪು. ೩-೧-೧).

[ ಜೋಲ್$_1$ + ಕೈ$_2$ (< ಕೆಯ್$_2$) + – ಅ$_7$ ]

**ಜೋಲ್ದಟಿ** (ನಾ). ಇಳಿಬಿದ್ದ ತಂಟ ; ಜೋತಾಡುವ ತಂಟೆ : ನೊರೆವಾಯ್ಜೋಲ್ದಟಿ ಪೆಮಱ್ಗಗರಲ್ದ ಕಿಮ್ಮಿಸೆ ಕೆದರ್ದ ಪಱಗಡ್ಡಂ (ವೃಷವಿ. ೧೧-೬೧). [ ಜೋಲ್$_1$ + ತಟ್ಟ$_2$ ]

**ಜೋಲ್ದುಱುಬು, ಜೋಲುದುರುಬು** (ನಾ). ೧. ಸಡಿಲವಾದ ಕೂದಲ ಗಂಟು; ಅಳ್ಳಕವಾದ ತುರುಬು: ಜೋಲ್ದುಱುಬನೊಂದಿಸುವ ನೆವದಿಂದೆ ಕೈನೆಗಪಿ (ಕೃಮಿಥಾ. ೫-೬೦). **ಜೋಲುದುರುಬು:** ೨. ಒಂದು ಬಗೆಯ ಕೇಶಾಲಂಕಾರ : ಗ್ರೀಕ್ ಹೆಂಗಸರ ಒಂದು ತೆರದ ಜೋಲುದುರುಬು (Greek-Knot. ಇಂಕೆನಿ.). [ಜೋಲ್$_1$ + ತುಱುಬು$_2$ (< ತುಱುಂಬು$_2$)]

**ಜೋಲ್ನವಿರ್** (ನಾ). ಇಳಿಬಿದ್ದಿರುವ ಕೂದಲು : ಜೋಲ್ನವಿರ ಕಪ್ಪು ಬೆಳ್ಪುಗಳ ಪೊಂದೊಗರ ನೇವರಿಸಿ (ಕಾಲೂರ. ೯೪-೦೫೬).

[ ಜೋಲ್$_1$ + ನವಿರ್ ]

**ಜೋಲ್ಬೀಳು, ಜೋಲುಬೀಳು** (ಕ್ರಿ). ಇಳಿಬೀಳು ; ಕೆಳಗೆಬೀಳು : (ಕ). **ಜೋಲುಬೀಳು :** ನಿದ್ದೆಯ ಹೊತ್ತಾಯಿತೆಂದರೆ . . . ಎವೆಗಳ ಕಾರ್ಯವು ಮಂದವಾಗುತ್ತದೆ; ಗದ್ದವು ಜೋಲುಬೀಳುತ್ತದೆ (ಮುಂಬಯಿ. ೪-೧೩೦) ; ಗದ್ದ ಜೋಲುಬಿದ್ದಿರಲಿಲ್ಲ (ಮುಹಾಕಾ. ೦೯).

[ ಜೋಲ್$_1$ + ಬೀಳು$_1$ (< ಬೀೞ್$_1$) ]

**ಜೋಲ್ಮುಡಿ** (ನಾ). ೧. = ಜೋಲ್ದುಱುಬು: ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು (ನವಮೋ. ೨೫-೦೮) ; ಎನ್ನೀ ಜೋಲ್ಮುಡಿಯ ಪೂಸರದಾಣೆ (ರಾಮಾಶ್ವ. ೮೯-೩೦). ೨. ಕಟ್ಟದೇ ಇರುವ ಕೂದಲು; ಮುಕ್ತಕೇಶ; ಬಿಡುಮುಡಿ; ಕಪ್ಪಗೆ ಅಲೆಅಲೆಯಾಗಿದ್ದ ಅವಳ ಜೋಲ್ಮುಡಿಯನ್ನು ಹಿಡಿದುಕೊಂಡನು (ಪಂಚಭಾ. ೯೮).

[ ಜೋಲ್$_1$ + ಮುಡಿ$_3$ ]

**ಜೋವ** (ನಾ). ಅಸಹಾಯಕತೆ (?): ಬೆಂಬಲಮಿಲ್ಲದ ಕನ್ನಗಳ್ಯನಂತೆ ಜೋವಂಬೊತ್ತಿರ್ಪನಂ ಪರಪರಿವಾರ ಸ್ತಿಮಿತಂ ಸ್ತಿಮಿತಸಾಗರ ತನೂಜನಿಸೆ (ಶಾಂತಿಪು. ೪-೩೦ ವ) ; ಭಾವಿಸುತುಂ ತನಗೆ ಮಹಾದೇವಂ ಕಾನಿಪ್ಪದೆಯ್ನ ಮೆಂಬರ್ ಮಾತ್ರಂ ಜೋವ[ಪಾಠಾಂ. ಬೋವ]ದೆ ದೇವತೆಗಳುಮಂ ಸೇವಿಪನೆಂದಂದು ನಗಿಸಿಕೊಳ್ಳನೆ ತನ್ನಂ (ಸಮುಪ. ೯-೯೭).

[ < ಜೋವು ? ]

**ಜೋವಿಸ** 'ಜೋಯಿಸ' ನೋ.

**ಜೋವು** 'ಜಂಮ್ಮು$_3$' ನೋ.

**ಜೋವೆಳಗ** (ನಾ). (?) : ಇಂತು ವಿನಯಮಂ ಮಾಡಿ ತಣ್ಗದಿರನಂ ಜೊನ್ನವೆಳಗಿಂ ಬನ್ನವಟ್ಟು ಜೋವೆಳಗನಂ ಕುರಿತು (ಕಮುಮೂ. ೨-೭೭ ವ).

[ ? ]

**ಜೋವೇೞು** (ಕ್ರಿ). ವಂರಗಟ್ಟಿದಂತಾಗು; ಜೊಮ್ಮುಹಿಡಿ : ಮದನಶಿಖಿ ಪರ್ವಿದುದೆಂದಿರದೆ ಬಿದಿರ್ವರ್ಕದಟಿನ ಭರದಿಂ ಜೋವೇೞಿದೊಂದು ಕರಕಿಸಲಯಮಂ (ಶಾ ದಂ ಉ. ೩೩೨) : ಪಯಃಕುಂಭಂಗಳಂ ಪೊತ್ತು ಜೊಮ್ಮನೆ ಜೋವೇೞಿದ ತೋಳ್ಗಳಂ ನಿ ಮಿ ರ್ವ ರ್ಪೂ ೦ ಲಿಂ ದ್ರು ಂ ಸುರಾದ್ರೀಂದ್ರದೊಳ್ (೦ ೯ ಶಾ ಪ. ೯-೦೦೦) : ಲಜ್ಜೆಯ ಬಿಡೆಯದಲಿ ಜೋವೇ[ಪಾಠಾಂ. ಝೊಮ್ಮ್ಯೇ]ೞಿದಂತೆವೆ ಮಿಡುಕದಿರೆ (ಕುಮ್ಮಾ.ಅ. ೮-೩೦).

[ ಜೋವು (<ಜುಮ್ಮು₃) + ಏೞು₁ (<ಏೞ್₁) ]

**ಜೋಶಿ, ಜೋಸಿ** (ನಾ).=ಜೋಯಿಸ: ಜೋಶಿಯರ ಕೇಣ್ಕಾರ ಜೋತಿಷ್ಕ (ಸಿದ್ಧಪು. ೯-೭೮); ಲಗ್ನ ಮುಹೂರ್ತಗಳಿಗಾಗಿ ಜೋಶಿ ಜಾತಿಯವರನ್ನು ಕರೆಯುವರು (ಕಥಾಗ. ೦೩೭). ಜೋಸಿ : ಶ್ರೀಮದಾಪುರ ಜೋಸಿ ನೇಮೆಯ್ಯಂಣನ ರಾಗಲ ಹೊಲ (ಎಕ. IX (ಶ), ಶಾನಕಾ. ೦೧೨-೯; 17ನೆಯ ಶತ). [ <ಸಂ. ಜ್ಯೋತಿಷಿನ್ ]

**ಜೋಷ** (ನಾ). ತೃಪ್ತಿ ; ಸಂತೋಷ ; ಮೆಚ್ಚಿಗೆ. [ ಸಂ. ]

**ಜೋಷವಾಕ್ಯ** (ನಾ). ಸಂತೋಷದ ಮಾತು : ಜೋಷವಾಕ್ಯದೊಳಿದ್ದ ಮಕ್ಕಳ ನೋಡಿ ಸಂಭಾಷಣೆಗೈದನಾ ತಂದೆ (ಭರಕ.೫೮-೮೦).

[ ಜೋಷ + ವಾಕ್ಯ ]

**ಜೋಸ** (ನಾ). = ಜೋಷ : ಜೋಷಂ – ಜೋಸಂ (ಶಮದ. ಮ. ೨೭೭ ಪ್ರಯೋ). [ <ಸಂ. ಜೋಷ ]

**ಜೋಸಿ** 'ಜೋಶಿ' ನೋ.

**ಜೋಸೆ, ಜೊಸೆ** (ನಾ). ಹೆಂಗಸು ; ಹೆಣ್ಣು ; ಸ್ತ್ರೀ : "ಪೆಣ್ಗಳ್ ಜೋಸೆಯರಪ್ಪರ್" (ಕರ್ಣಾನಿ. ೯) : "ಜೋಸೆ – ಯೋಷಾ = ಸ್ತ್ರೀ" (ಶದ್ಧಕೋ. ೦೬): ಬಿಡುಜಡೆಯ ನಿಡುಬಾಸೆಯ ಜೋಸೆಯರ್ ನಳಿದೋಳ ಸುಟಿಪೊರ್ಕುಟ ಚೆಲ್ವೆಯರ್ (ರಾಮಾಶ್ವ. ೦೨೨-೨೯); ನಾಡಿಗರ ಗೊಂದಣಂ ಜೋಸೆಯರ ನೆರವಿ . . . ಅಲ್ಲಲ್ಲಿ ನೆಲೆಗೊಂಡಿರ್ದುವು (ಶ್ರೀರಾಮಾ. ೯೩-೯೯). ಜೊಸೆ: "ಪೆಣ್ಗಳ್ ಜೊಸೆಯರ್" (ಕವಿಕಂ. ೨೫೭). [<ಸಂ. ಯೋಷಾ]

**ಜೋಹ, ಚೋಹ** (ನಾ). ೧. ತೋರಿಕೆಯ ರೂಪ ; ವೇಷ ; ಸೋಗು: "ಜೋಹ (ಚೋಹ)–ಯೋಗ" (ಶದ್ಧಕೋ. ೦೬); ಆತಂ ಗಡ ಹರಿ ಪಲವುಂ ಜೋ[ಪಾಠಾಂ. ಚೋ]ಹಂಗಳನಿದು ಯುಕ್ತಮಾಗಲಱಿಗುಮೆ ಪೇಳಿಂ (ಸಮಪ. ೦೦-೯೦) ; ರವಿಕುಲನನಾವಿಕರ ಜೋ[ಪಾಠಾಂ. ಚೋ]ಹಮಂ ತಳೆದಂ (ಹಡಕಾ. ೦೦-೯೦) ; ಹೊತ್ತ ಜೋಹಕೆ ಚಾಳಿ[ಪಾಠಾಂ. ಚೋಹಕೆ ಚಾಳಿ, ಜೋಹದ ಚಾಳಿ] ಲೇಸಾಯಿತ್ತು (ತೊರಶಾ. ೪-೪.೪೦) : ಪೋಗಸಣೆಯ ಗರುವಾಯ ಗೂಳೆಯದ ಜೋಹಮಂ ಬಿಡು(ರಾಮಾಶ್ವ.೯೨-೨೩). ೨. ನಟ ; ಪಾತ್ರಧಾರಿ : ನೋಡಿವಿತ್ತೊಂದು ಪಗರಣದ ಜೋಹಂ ಬಂದಿರ್ದುದೆನೆ (ಶಮಿಪು. ೩-೦೦೩ ಪ); ಪೆಱರ ಬಳಿಸಂದು ತನ್ನಂ ಮೆಱೆವಂ ಕವಿಯಲ್ಲವಾಟಕಾಱರ ಜೋಹಂ (ಮಲ್ಲಿಪು. ೦-೩೨). ೩. ಆಕಾರ; ರೂಪ: ಪಾ ಳ್ಪ ಸ ದಿ ಯ ಪೆಣ್ಣ ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೮-೮೮) ; ವಿನಯಾನ್ವಿತ ತಪ್ಪದ ಮಣಿಕ ಲೆಪ್ಪದ ಪೆಣ್ಣಾ ಜೋಹ ಮೆಂಬಂತಿರ್ದಳ್ (ಸುಕುಮಾ. ೯-೭); ಪೊದಱೊಳಗಣ ಬೆನಕನ ಜೋಹದಂತ (ಚಂದ್ರಪು. ೯-೦೦೦ ಪ) ; ಕುಕ್ಕುಱಿಸಿರ್ದುದು ಮದಕರಿ ಬೆನಕನ ಜೋಹ ದಂದದಿಂದಾಹವದೊಳ್(ಶಾಂತೀಶ್ವ.೮-೮೮); ಕಿಱುವಿದಿರಿನ ಬಲ್ಬೊದಱೊಳು ಕಣ್ಗಿಱಿ ಮೆಱೆವಂತೆ ಬೆನಕನ ಜೋಹ (ನಾಗಕು. ೭-೩೨) : ಪಲವಣ್ಣ ಜೋಹಮಂ ಪಣ್ದೆ ಪಳಂಚಿ ಸಂಚರಿಸಿ ನೋಡುತೆ . . . ಕೀಡಿತೊಂದೆಳೆಯ ಲರ್ ನನೆಯುಂಬನ ಚಾರನೆಂಬಿನಂ (ಜಕವಿ. ೭-೩೪). **ಚೋಹ** : ೧. "ಚೋಹಮೆನಲ್ ವೇಷ" (ಭಾರನಿ. ೩೩) : ಪಗರಣದ ಚೋಹದಂತಾಯ ತ್ತೆನ್ನ ಭಕ್ತಿ (ಬಸವ. ೮೯೦) ; ಅಹ ಇಳಿಯಳಿ ಗೊರವ ನಿನಗೀ ಚೋಹ ವೇಕೆನ್ನೆನಗೆ ಸಿಕ್ಕಿದೆ (ಬಸಪು. ೩೨-೦೫): ಸಾಹಸಿಕರ್ಶೈ ದ್ರುಪದರಿವದಿರ ಚೋಹ ದೋಲೆಯಕಾಱತನ ಮನಗಾಹಿನಲಿ ಹೆಮ್ಮಕ್ಕಳಿವದಿರು (ಕುಮಾ.ಭೀ. ೮-೩೦): ಶ್ವಾನಗೇಕೆ ಆನೆಯ ಚೋಹವಯ್ಯ (ಸಿದ್ಧೇಪ. ೦೩೬-೪೦೨) : ಜಟ್ಟಿಗನ ಚೋಹದಿಂ . . . ಗೂಢವಾಗಿ ಪಯಣಂಬೋಗಿ (ಮರಾಜ. ೨-೩೦ ಪ). ೩. ಹೊಗದ ಮನೆಯಂ ಹೊಕ್ಕು ಲಲನೆಯರ ನುಣ್ಣನೆಯ ಚೋಹಕ್ಕೆ ಮನವೊಕ್ಕು (ಬಿಂದೂಕ. ೦-೨೦). [ ? / ಸಂ. ಯೋಗ ]

**ಜೋಹಡಿಗ** (ನಾ). ನಟ ; ಪಾತ್ರಧಾರಿ : ನುಡಿಯಿಪಂ ಮಾರ್ದಂಗಿಕಂ ಬೊಲ್ಪಿಸುಲ್ಪಿಡುವಂ ಜೋಹಡಿಗಂಬೋಲೇಂ ಕುಶಲನೋ (ರಕ್ಕಾ.ಕ. ೯).

[ ಜೋಹ + – ಅಡಿಗ₂ ]

**ಜೋಹರ₁, ಜೋಹಾರ₁, ಜೋಹಾರು** (ನಾ). ೧. ನಮಸ್ಕಾರ ; ಪ್ರಣಾಮ : ಹಾರುವ ಹಕ್ಕಿಗೆ ಜೋಹರೆಂಬರ್ (ಸೂಕ್ತಿಸು. ೦೩-೩೦) ; ಕ ರ ಮೆ ತ್ತಿ ಜೋಹರೆನುತುಂ ವಂದಿಸಲ್ಕೋಡಿ ವರರಥಾರೂಢನಂ ನೃಪತಿಯಂ ಕಂಡು (ಅ ರಾ ಚ. ೯-೫) ; ಇಲ್ಲದಿದ್ದರೆ, ಬಗೆ ಮುಟ್ಟಿಯೇ ಈ ಜೋಹದ ಜೋಹರವೋ (ಮಂತ್ರಕ. ೬೩-೪). ೨. ವಿಜ್ಞಾಪನೆ ; ಬಿನ್ನಹ: ಜನಪನೆಂದನು ಕೇಳನೇಕೈಯೆನ್ನ ಜೋಹರವ (ಬಸಪು. ೪೬-೭). **ಜೋಹಾರ₁** : ೧. ಆತನು ಕಂಡು ಜೋಹಾರೆಂದು ಪೊಡಮಡಲ್ (ಬಸಪು. ೪೬-೫) ; ನೆಟ್ಟನೆ ಶಿವಭಕ್ತ ಜೋಹಾರ ಎಂದಡೆ (ಗಣಭಾ. ೦೪೦-೬); ಕಾಮಿನಿ ಸಹಿತ ಬರುತೆ ಕಂಡು ಜೋಹಾರೆನುತೆ ಭೂಮಿಯೊಳ್ವಂದಿಸೆ (ಪಾಕಸೋಪು. ೭-೭೪) ; ಅಲ್ಲಿಯ ಭಿಲ್ಲ ಜನರು ಕಂದಮೂಲ ಫಲಾದಿಗಳನ್ನು ಕಾಣಿಕೆಯಾಗಿ ಇತ್ತು ಜೋಹಾರ ಮಾಡಿ . . . ಆ ಸುಂದರಮೂರ್ತಿಗಳನ್ನು ನೋಡುವರು (ಶುಳಸ. ೧೫೦). **ಜೋಹಾರು**: 'ಜೋಹಾರುಗೈ' ಪರಾ. [ ← ತೆಲು. ಜೋಹಾರು. / ಪ್ರಾ. ಜೋಹಾರ ]

**ಜೋಹರ₂, ಜಹರ್, ಜೋಹಾರ₂**(ನಾ). ರಜಪೂತ ಸ್ತ್ರೀಯರು ಯುದ್ಧ ಕಾಲದಲ್ಲಿ ಶತ್ರುವಶವಾಗಬಾರದೆಂದು ಅಗ್ನಿಪ್ರವೇಶದ ಮೂಲಕ ಪ್ರಾಣತ್ಯಾಗ ಮಾಡುತ್ತಿದ್ದ ಪದ್ಧತಿ : ರಜಪೂತ ಸ್ತ್ರೀಯರು ಈ ರೀತಿಯಾಗಿ ಪ್ರಾಣಕೊಡುವ ಪದ್ಧತಿಗೆ 'ಜೋಹರ' ಅನ್ನುವರು (ಹಿಂಮುಸ. ೫೭). **ಜಹರ್**: ಬಹುಕಾಲ ಪ್ರಚಲಿತವಾಗಿದ್ದ 'ಜಹರ್' ವ್ರತವನ್ನು ಮಾಡತೊಡಗಿದರು (ಆರ್ಯಕೀ. ೩೩). **ಜೋಹಾರ₂** : ರಾಜಪೂತ ರಮಣಿಯರು ಜೋಹಾರವನ್ನಾಚರಿಸಿದರು (ಅಲ್ಪವಿ. ೩).

[←ಹಿಂ. ಜೋಹರ್, ಜೋಹಾರ್, ಜೌಹರ್; ಮರಾ. ಜೋಹಾರ್, ಜೌಹರ್; ಪಾರ. ಜೌಹರ್ ]

**ಜೋಹರಿ** (ನಾ). [ಸಂಗೀತ] ರಾಗಗಳಲ್ಲಿ ಒಂದು ಬಗೆ: ನೀಲೋತ್ಪಲಿನಿ, ಏಕಚ್ಛವಿ ಜೋಹರಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೪). [ ? ]

**ಜೋಹರಿಸು** (ಕ್ರಿ). ನಮಸ್ಕರಿಸು ; ವಂದಿಸು : ಜನಸಮುದಾಯವು ಹೊಸನ್ನ! ಹೊಸನ್ನ ! (ಜಯಜಯಾ !) ಎಂದು ಜೋಹರಿಸುತ್ತಿರಲು (ಗೂರ್ಜರಿ.ಶಾ. V, ಮುನ್ನುಡಿ). [ ಜೋಹರ₁ + – ಇಸು₂ ]

**ಜೋಹಾರ₁** 'ಜೋಹರ₁' ನೋ.

**ಜೋಹಾರ₂** 'ಜೋಹರ₂' ನೋ.

**ಜೋಹಾರು** 'ಜೋಹರ₁' ನೋ.

**ಜೋಹಾರುಗೈ**(ನಾ). ನಮಸ್ಕಾರಮಾಡು; ವಂದಿಸು: ಸಾರಿ ದಧಿಮುಖನ ನಿತಱೊಳು ಜೋಹಾರುಗೈದಮರೇಂದ್ರಪೌತ್ರ . . . ಅಚ್ಚರಿಯನುಸುರಿದನು (ಅನಂರಾ. ೪-೭-೦೦).

[ ಜೋಹಾರು (<ಜೋಹರ₁) + ಕೈ₁ (<ಕೆಯ್₁) ]

**ಜೋಹು** (ನಾ). ಭಲೆ, ಭೇಷ್ ಎಂಬ ಹೊಗಳಿಕೆಯ ಮಾತು: ಜೋಹು ಬಿರುಬಿರು ಕಣ್ಣ ಕೆಂಪಿಗೆ ಜೋಹು ನಿನ್ನೀ ಬಾತ ಬಸುಱಿಗೆ ಜೋಹು ಜೋಹೀ ಬಡಿವ ಕೈಕಾಲುಬ್ಬಸಂಗಳಿಗೆ (ಕಾಶಿರಾ. ೩೪-೪೨). [ ? ]

**ಡಾಕಿನಿ** (ನಾ). ೧. ಹೆಣ್ಣು ದೆವ್ವಗಳಲ್ಲಿ ಒಂದು ಬಗೆ ; ಒಂದು ಬಗೆಯ ಹೆಣ್ಣು ಪಿಶಾಚಿ : ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ ಭೀಕರದೊಳಂ ಜನಿದವಾರ್ದು ರಿಂಗಣಗುಣಿವ ಕಲಿಗಳ ಕಪಾಲಂಗಳು (ಕೃಮಿಥಾ. ೦೨-೪೫); ಸೀತಾರಾಮನು ಒಬ್ಬ ಡಾಕಿನಿಯ ವಶವಾಗಿಬಿಟ್ಟಿದ್ದ (ಬಂಕಿಮ. ೩೦೮). ೨. ಕಾಳಿಕಾದೇವಿಯ ಪರಿಚಾರಿಕೆಯರ ಒಂದು ವರ್ಗಕ್ಕೆ ಸೇರಿದವಳು. ೩. ರಕ್ಕಸಿಯ ಕತ್ತಿ,-ಖಡ್ಗ : "ಡಾಕಿನಿಯೆನಲು ರಕ್ಕಸಿಯ ಕತ್ತಿಗಿರದಪ್ಪ ನಾಮಂ" (ಶಬ್ದಮಂ. ೪೪). ೪. (ಅಲಂ) ಕಠೋರಹೃದಯದವಳು; ಕೆಟ್ಟ ಹೆಂಗಸು : ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಡು ಗಚ್ಚಿದನು (ಗ್ರಾಮಾಯ. ೪೬೨). [ಸಂ. ಡಾಕಿನೀ.]

**ಡಾಕಿನಿದೋಷ** (ನಾ). ಡಾಕಿನಿಯ ಆವೇಶದಿಂದುಂಟಾಗುವ ಬಾಧೆ ; ಭೂತೋಪದ್ರವ : ಇಪ್ಪೆಯ ಬೇರ ಆಡಿನ ಮೂತ್ರದಿಂದ ಏಳುಬಾರಿ ಭಾವನೆಯ ಕೊಟ್ಟು ಅರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯ ಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತ ಜ್ವರಂಗಳು ಬಿಟ್ಟು ಹೋಗುವುವು (ವಿಶ್ವವಿ. ೦೩೯). [ಡಾಕಿನಿ + ದೋಷ]

**ಡಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯ ತಾಂತ್ರಿಕ ಸಿದ್ಧಿ ಮಂತ್ರ : ಡಾಕಿನೀತಂತ್ರ ಕೂಚಿಮಾರತಂತ್ರ ಶಲ್ಯತಂತ್ರ . . . ವಚನ ತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ (ವಿವೇಕ. ೬೦). [ಸಂ.]

**ಡಾಕು₁, ಢಾಕು** (ನಾ). ೧. ಮುತ್ತಿಗೆ ; ಮೇಲೆಬೀಳುವಿಕೆ ; ಆಕ್ರಮಣ ; ಆಘಾತ : ನೂಕಿದೊಡೆ ಕರ್ಣಾದಿ ದೊರೆಗಳ ಡಾ[ಪಾಠಾಂ. ಢಾ]ಕನಾನು ವನಾರು ದಿವಿಜಾನೀಕದಲಿ (ಕುಮಾ್ರ.ಅ. ೧೯-೦೩). ೨. ಸತ್ತ್ವ ; ಬಲ ; ಪರಾಕ್ರಮ : ಭೀಷ್ಮದ್ರೋಣರಿಂಗೆ ಸರಿಮಿಗಿಲೆನಿಸಿ ತೋರುವನು ಕೈಗುಣವನು ಡಾಕನರಿಯದೆ ತನ್ನ ವಿಕ್ರಮದ ಸಿರಿಯನವಿವೇಕಿಗಳು (ಕುರಂಗ. ೬೨-೨೩); ಭೀಕರಬಲ ಶಿವಭೂಷನ ಡಾಕಿಂಗಗಿದಖಿಲ ರಾಜರಗಣಿತ ಧನವಂ ಬೇಕಾದ ವಸ್ತುಚಯವನನೇಕವನಿತ್ತರಗಿ ತದನುಚರರಾಗಿರ್ದರ್ (ಶೀಕಾಸ್ಮ. ೭-೦೬). ೩. ಪ್ರಭೆ; ತೇಜಸ್ಸು; ಕಾಂತಿ: ತರುಣಿಯರುಗಳಿಟ್ಟಣಿಸಿ ಮೈಮೈಸೋಂಕಲುರು ಹೇಮದೊಡವುಗಳ್ಕೆಸದು ವರರಜವಿಳಿಯೊಳೊಪ್ಪಿತು ಬಾಲಸೂರ್ಯನ ಕಿರಣದ ಡಾ[ಪಾಠಾಂ.ಢಾ]ಕ ತೋಱುಸುತ (ಕೆಂಪವಿ. ೨೪-೪೮); ರಥವೆರಸಿ ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರಚಾಮರ ಚಮೂಪಂಗಳ (ಶಶಿಕ. ೬-೨೦). ೪. ಜವ; ವೇಗ; ತ್ವರೆ: ಈ ಕಥೆಯ ಧರ್ಮಜಂಗೊರೆದು ಮತ್ತಲ್ಲಿಂದ ಡಾಕಿಲಿ ಪ್ರಭಾಸಕಂ ಬರಲು (ಕುರಂಗ. ೩೦-೦೪). ೫. ಲೂಟಿ ; ಕೊಳ್ಳೆ ; ದರೋಡೆ. **ಢಾಕು** : ೩. 'ಢಾಕುಗೆಡಿಸು' ಪರಾ.

**ಡಾಕಳಿ**=ಸತ್ತ್ವಗುಂದು; ತೇಜಸ್ಸು ನಾಶವಾಗು; ಪ್ರಭಾವ ಕುಗ್ಗು: ಸುರಬಲಡಾಕಿವಾಳ ಮೃಗೇಂದ್ರನ . . . ಡಾಕಳಿದುದಾ ಸತ್ತ್ವದಲ್ಲಿರ್ದಾ ಕುಠಾರ ಕೃತಾಂತನವ (ಅಂಬಿಕಾ. ೩೬-೨೨). [←ತೆಲು. ಢಾಕ]

**ಡಾಕು₂** 'ಡಾಗು₁' ನೋ.

**ಡಾಕ್ಟರಿಕೆ** (ನಾ). ಡಾಕ್ಟರನ ಉದ್ಯೋಗ ; ವೈದ್ಯವೃತ್ತಿ : ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿದೆಯೇ ಅಂದರೆ, ಬೆಳಗ್ಗೆದ್ದು ಹೋದರೆ ಹೊತ್ತು ಮಿಾರಿದ ಮೇಲೆಯೇ ಬಂದು ಊಟಮಾಡುವುದು (ಚಾರುದಾ. ೩೩೫) : ಅವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿಸಿದ ಮೇಲೆ ಮತ್ತೆ ಮತ್ತೆ ಆದರ ಪ್ರಸ್ತಾಪ ಬರುತ್ತಿತ್ತು (ಕೃಹಿಕಾ. ೩೭) ; ಡಂಬನಿಗೂ ಈಗ ತನ್ನ ಮಗನ 'ಡಾಕ್ಟರಿಕೆಯ' ಬಗ್ಗೆ ಸಾಕಷ್ಟು ಹೆಮ್ಮೆಯೆನಿಸಿತು (ದಂಬನಾ. ೬೦). [ಡಾಕ್ಟರು + – ಇಕೆ]

**ಡಾಕ್ಟರು, ಡಾಗದೊರೆ, ದಾಕಂದಾರ, ದಾಕ್ತಾರ, ದಾಗ್ದಾರು** (ನಾ). ೧. ರೋಗಿಗಳಿಗೆ ಮದ್ದುಕೊಡುವವನು ; ವೈದ್ಯ ; ಚಿಕಿತ್ಸಕ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮುದ್ರಮ. ೧೬೫) : ಆ ಆಫೀಸರವರು ಕೂಡಲೇ ಆ ವಿಷಯವನ್ನು . . . ದನಕರುಗಳ ಡಾಕ್ಟರಿಗೆ ತಿಳಿಯಪಡಿಸುವರು (ಗ್ರಾಮೂಳ. ೧೦೬). ೨. ಗೌರವಾನ್ವಿತವಾದ ಉನ್ನತಪದವಿಯನ್ನು ಪಡೆದವನು ; ವಿಶ್ವವಿದ್ಯಾನಿಲಯಗಳು ಕೊಡುವ ಗೌರವಪ್ರಶಸ್ತಿ ಪಡೆದವನು; ವಿದ್ವಾಂಸ. **ಡಾಗದೊರೆ** : ೧. ಡಾಗದೊರೆ ಕೀಮಲ್ ಸಾಹೇಬರ ಬಂಗಲೆ ಎಲ್ಲಿದೆ ಬಲ್ಲೆಯ (ಮುಸುಗ. ೦೩೦). **ದಾಕಂದಾರ**: ೧. ಕೊನೆಗೆ 'ದಾಕಂದಾರ' ರನ್ನು ಬರಮಾಡಬಹುದಿತ್ತು (ಮುಂಗಾಮು. ೧೩೦). **ದಾಕ್ತಾರ**: ೧. ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ ಎಂದೆ ನಾನು (ಮ್ಯಾಂಚಿಮ. ೨೫). **ದಾಗ್ದಾರು** : ೧. ಅವರನ್ನು ಗಾಂಧೀಜನ, ಓದಿಸೋ ಅಯ್ನೋರು, ದಾಗ್ದಾರು, ಗೋಸಾಯಿಗಳು ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೦). [←ಇಂ. Doctor]

**ಡಾಗ** 'ಡಾಗು₁' ನೋ.

**ಡಾಗದೊರೆ** 'ಡಾಕ್ಟರು' ನೋ.

**ಡಾಗಾನ್** (ಕ್ರಿ). ಮುದ್ರೆಯನ್ನು ಪಡೆ ; (ಕಾದ ಕಬ್ಬಿಣದ ಗುಳದ) ಬರೆಯನ್ನು ಹೊಂದು: ತತ್ಪಶುವು ಮೇಣವನಲ್ಲದುದರೆ ಭಿಕ್ಷುಕನ ಡಾಗಾಂತ ಮನೆಯಾಕಳೆ (ಶಶಿಕ. ೨೨-೨೫). [ಡಾಗು₁ + ಅನ್₁]

**ಡಾಗೀನು** 'ದಾಗೀನು' ನೋ.

**ಡಾಗು₁, ಡಾಕು₂, ದಾಕ, ದಾಕು₁** (ನಾ). ೧. ಕಾದ ಕಬ್ಬಿಣ ಮೊದಲಾದ ಲೋಹಗಳ ಸಾಧನದಿಂದ ಒತ್ತುವ ಮುದ್ರೆ,-ಗುರುತು : ಬ್ರಹ್ಮನ ಡಾಗು ಬೆನ್ನಮೇಲೆ ವಿಷ್ಣುವಿನ ಡಾಗು ಕೈಯ್ಯ ಮೇಲೆ (ಮೋಕ್ಷಮಾ. ೦೦೨-೪೦೬) ; ಬಂದಿಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು ಎಂದಿಗೂ ಹಾಕಕೂಡದು (ಅಕ್ಬರ. ೯೦). ೨. ಕಪ್ಪುಕಲೆ,-ಗುರುತು ; ಕರೆ : ರಿಪೋರ್ಟ್ ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು (ದೀಪಹ. II, ೨೩೨). ೩. ಮೈಲಿರೋಗ ; ಸಿಡುಬು : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಮೋಕ್ಷಮಾ. ೪೭-೦೯೩). **ಡಾಕು₂**: ೨. "ಕಲೆ" (ಹಾಸಕೋ. ೬೩). ೪. ದೇವಿಹಾಕಲು ಬಳಸುವ ಒಂದು ಬಗೆಯ ರಸಿಕೆ ; ಮುಂದೆ ಸಿಡುಬುರೋಗ ತಗುಲದಂತೆ ದೇಹದೊಳಕ್ಕೆ ಹೊಗಿಸಿದ ಸಿಡುಬಿನ ರಸಿಕೆ : (೬). ೫. ದೇವಿಹಾಕಿದ ಗುರುತು ; ಮೈಲಿ ಕಲೆ : ಈ ಹುಡುಗನ ಕೈಯಲ್ಲಿ ಡಾಕು ಬಹಳ ಚೆನ್ನಾಗಿ ಕಾಣಿಸುತ್ತಿದೆ (ಡೂಶಿ). **ದಾಕ** : ೬. 'ಕಾಲರಾ' ಮುಂತಾದ ಕೆಲವು ರೋಗಗಳು ತಗುಲದಂತೆ, ಅವುಗಳನ್ನು ಪ್ರತಿಭಟಿಸುವ ಶಕ್ತಿಯುಳ್ಳ ಸೂಕ್ಷ್ಮರೋಗಾಣುಗಳನ್ನೊಳಗೊಂಡ ರಸಿಕೆ ; ರೋಗವಿಷ: ಇತ್ತೀಚೆಗೆ ಹೊಸ ದಾಕಗಳ ಶೋಧನೆ ಯಾಗಿದೆ (ದೇವದೂ. ೨೫೨). **ದಾಕು** : ೬. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ, ಟೈಫ್ಯಾಡ್ ಇತ್ಯಾದಿ ೧೮ ಬೇನೆಗಳಿಗಾಗಿ ದಾಕು ಹಾಕುವ ಯೋಜನೆಯು ನಡೆದಿದೆ (ದೇವದೂ. ೨೫೨).

**ಡಾಗನೊತ್ತು** = ಮುದ್ರೆಯೊತ್ತು ; ಗುರುತುಮಾಡು ; ತನ್ನದೆನಿಸಿಕೊಳ್ಳು: ಹರಿಯದೆಯೊಳು ಬೊಮ್ಮನ ಬಾಯೊಳು ಪುರಹರನ ವಾಮಾಂಗದೊಳು ಅರಲಸರಲ ಡಾಗನೊ[ಪಾಠಾಂ. ತಾಗಲೊ]ತ್ತಿದಂಗಜ ವೀರ ಬರಲಂಜಿದನು ರಾಮನೆಡೆಗೆ (ತೊರಾಸಾಂ. ೩೬-೧೦) ; ನಾಗಭೂಷಣನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದ ನೋಡು (ಮೋಹತ. ೩೪-೧೧); ಸುರಪನಂಗದಲಿ ತಮ್ಮಯ ಡಾಗನೊತ್ತಿದೆವು ಧರೆಯೊಳಿನ್ನುಳಿದ ಮಾನವರಮ್ಮ ಪೆಣ್ಣನಕೆ ಸರಿಯಿಯೆಂದೆಂಬ ಬಿರುದಿನ ವಾರನಾರಿಯರು ಪುರದಲ್ಲಿ ಕಣ್ಗೆಸೆದರು (ಭೀಷ್ಮಾಕ. ೨-೦೨) ; ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗನೊತ್ತಿದೆ (ಪ್ರಭುಪು. ೫-೦೩೦).

**ಡಾಗಿನ ಪಶು** = ಮುದ್ರೆಯೊತ್ತಿದ ಪಶು : ಡಾಗಿನ ಪಶುಗಳೆಲ್ಲರೂ ಭೇದವನರಿಯಬಲ್ಲರೇ (ಅಂಬಿಪ. ೩೯೯-೮೩); ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ (ಮೋಕ್ಷಮಾ. ೧೦೨-೪೦೭); ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು (ಮೋಕ್ಷಮಾ. ೦೮೩-೬೯೨).

[ ←ಮರಾ. ಡಾಗ್, ದಾಗ್ ; ಫಾರ. ಹಿಂ. ದಾಗ್./ತಮಿ. ಡಾಕು : ತೆಲು. ಡಾಗು ]

**ಡಾಗು$_2$, ಡಾಗೆ** (ನಾ). ೧. ಸಾಮಾನು ; ಗಂಟು ; ಮೂಟೆ ; ಭಾಂಗಿ : ಮಜೂರಿಯು ಡಾಗಿನ ಆಕಾರದಂತೆ ಮತ್ತು ಬದುಕಿನ ಮಹತ್ತ್ವ ಇದ್ದಂತೆ (ಮುಂಬಪ್ರಾ. ೧೯, ಪ್ರಸ್ತಾವನೆ); ರಾಶಿರಾಶಿಯಾಗಿ ಪಾರ್ಸಲ್ಲ "ಡಾಗು" ಗಳು ಬಿದ್ದಿದ್ದವು (ನಡೆದಾ. II, ೧೨೬೭). ೨. (ಒಟ್ಟು ಮಾಲೀಕನ) ಅಂಶ ; ಪಾಲು ; ಭಾಗ ; ಹಿಸ್ಸೆ : ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು (ದೀಪಹ. II, ೨೮೮). **ಡಾಗೆ** : ೧. ಕಿರಾಣಿಯ ಬದುಕು ಒಂದು ಡಾಗದ ಒಳಗೆ ಒಂದೇ ತರದ್ದು ತರಿಸಿಕೊಳ್ಳುವವರಿಗೆ ಮಜೂರಿಯ ದರ (ಮುಂಬಪ್ರಾ. ೧೬, ಪ್ರಸ್ತಾವನೆ).

[ ←ಮರಾ. ಡಾಗ್ ]

**ಡಾಗೋಬ** (ನಾ). (ಬೌದ್ಧರ) ಸ್ತೂಪ ; ಪಗೋಡ ; ಸ್ತೂಪದ ಆಕಾರದಲ್ಲಿರುವ ಬಹಳ ಎತ್ತರವಾದ ಕಟ್ಟಡ ; ಸಮಾಧಿ : ಅನಂತರ ಬುದ್ಧನ ಅಸ್ಥಿ ಮೊದಲಾದ ಅವಶೇಷಗಳನ್ನು 'ಡಾಗೋಬ' ಗಳಲ್ಲಿ ಇರಿಸುತ್ತಿದ್ದರು (ಜಾಲಪ್ರ. II, ೮೩೬); ಗುಹೆಯೊಳಗೆ ಸೂರ್ಯನ ಕಿರಣವು ಪ್ರಾತಃಕಾಲದಲ್ಲಿ ನೇರಾಗಿ ಡಾಗೋಬದ ಮೇಲೆ ಬೀಳುವಂತೆ, ಕಮಾನುಳ್ಳ ಕಿಟಕಿಗಳನ್ನು ಕೊರೆದಿರುತ್ತಾರೆ (ಜಾಲಪ್ರ. III, ೦೬೭೦). 'ಪಗೋಡ' ಪರಾ. [←ಪಾಲಿ. ಡಾಬೆಗ; ಮರಾ. ಡಾಗೊಬಾ./ಸಂ. ಧಾತುಗರ್ಭ ]

**ಡಾಡಿಮ** 'ದಾಳಿಂಬ' ನೋ.

**ಡಾಣ** 'ದಾಣ$_4$' ನೋ.

**ಡಾಣಾಡಂಗರ** 'ಢಣಾಡಂಗುರ' ನೋ.

**ಡಾಣಾಡಂಗುರ** 'ಢಣಾಡಂಗುರ' ನೋ.

**ಡಾಣಾಡಾಣಿ** (ನಾ). ದೊಣ್ಣೆಯಿಂದ ಪರಸ್ಪರ ಹೊಡೆದಾಡಿ ಮಾಡುವ ಜಗಳ,-ಯುದ್ಧ : ಡಾಣಾಡಾಣಿ, ಖಾಡಾಖಾಡಿ (ಶಬ್ದಾನು. ೩೩೦ ಪ್ರಯೋ). [ <ಡಾಣೆ$_2$ + ಡಾಣೆ$_2$ + - ಇ$_3$ ]

**ಡಾಣೆ$_1$** 'ದಾವಣಿ$_1$' ನೋ.

**ಡಾಣೆ$_2$** 'ಧಾಣೆ$_1$' ನೋ.

**ಡಾಣೆ$_3$** 'ದಾಣ$_2$' ನೋ.

**ಡಾಣೆಗ** (ನಾ). ದಪ್ಪನಾಗಿರುವವನು ; ದಡಿಯ ; ಧಾಂಡಿಗ : ದುರಹಂಕಾರಿ ಹಮ್ಮಿನ ಹಗರಣಿಗನು ಡಂಬದ ಡಾಣೆಗರೆರೆಯ (ಶೋಠಬ. ೯-೬೪). [ ಡಾಣೆ$_2$ (<ಧಾಣೆ$_1$) + - ಇಗ ]

**ಡಾಣೆ$_1$** 'ದಾಣ$_2$' ನೋ.

**ಡಾಣೆ$_2$** 'ಧಾಣೆ$_1$' ನೋ.

**ಡಾಬು, ದಾಬು** (ನಾ). ಸ್ತ್ರೀಯರು ನಡುವಿನಲ್ಲಿ ಧರಿಸುವ, ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ನಡುಪಟ್ಟಿ ; ಒಡ್ಯಾಣ : ಮಣಿಯಡ್ಡುಗೆಯ ಡಾಬಿನ ಮೇಖಲಾಂಚಿತ (ಅನಂತಾ. ೦-೩-೩೩); ಕಿರೀಟವನ್ನು ಡಾಬಿನ ಉಡುದಾರವನ್ನು . . . ಬ್ರಾಹ್ಮಣನಿಗೆ ಕೊಟ್ಟು (ಶ್ರೀವಾಳ. ೨೦೦); ಕಡಗ ವಟ್ಟೆಯು ಡಾಬು, ಬುಗುಡಿ ಗೀರ್ಬಳೆ ಸರಿಗೆ (ಹಿರೈಳಾ. ೮-೦೨); ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು (ಧನ್ಯಾಕೋ. ೬೭); ಕಟಿಪ್ರದೇಶದಲ್ಲಿ ವಜ್ರದ ಡಾಬು ವಿರಾಜಿಸುತ್ತಿತ್ತು (ದೌಂತ್. ೩೬೮). **ದಾಬು** : "ಡಾಬು (ದಾಬು)-ದಾಮನ್ = ಒಡ್ಯಾಣ " (ತದ್ಭಕೋ. ೦೬).

[ ದೇ.ಶ ತಮಿ. ತೆಲು. ಡಾಪ್ಪು./ಸಂ. ದಾಮನ್ ]

**ಡಾಮರ$_1$** (ಗು). ೧. ಭಯಂಕರವಾದ ; ಆಶ್ಚರ್ಯಕರವಾದ. (ನಾ). ೨. ದಂಗೆ; ಮುತ್ತಿಗೆ; ಲಗ್ಗೆ ; ಆಕ್ರಮಣ; ಸೂರೆ: ಆ ಮಾಧವೀಲತಾಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕು (ಪಂಪಭಾ. ೩-೬ ವ) ; ಕೋಮರಂ ಜವನ ಡಾಮರವಾದುವು (ಪಂಪರಾಮಾ. ೧೩-೬೧) ; ಕಾಮನ ಡಾಮರಮಲ್ಲಿ . . . ಪಲ್ಮೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೩೭) ; ತನಗುಣಲಿಲ್ಲದುದಂ ಪಸವೆನ್ನದೊಡಂ ತನ್ನಂ ಕೋಟ್ಟಟ್ಟುದಂ ಡಾಮರಮೆನ್ನದೊಡಂ . . .ಬಂಧಹೇತುಗಳಂ ಪೆರ್ಚಿಸುವ ವ್ಯಾಯ್ಯಂ ಪಾಪದ ರೂಪೆನ್ನದೊಡಂ ನೀಮಲಿಪಿರ್ (ಜೀವಸಂ. ೭೩-೩). ೩. ರೋಗರುಜಿನಗಳ ಬಾಧೆ ; ವ್ಯಾಧಿ ; ಪೀಡೆ : ಪಾಂಡ್ಯರಾಜ್ಯದಲ್ಲಿ ಎರಡು ವರ್ಷಗಳಿಂದಲೂ ವೀರಕ್ಷಾಮವು ಆವರಿಸಿದ್ದಿತು. ಈ ಯುದ್ಧವು ಸಂಭವಿಸಿದ ಮೇಲೆ ಡಾಮರಕ್ಕೂ ಆರಂಭವಾಯಿತು (ಶ್ರೀಹರಿಯು. ೩೩೯). ೪. ತೊಂದರೆ ; ಕೋಟಲೆ ; ಉಪದ್ರವ : "ಉಪಸರ್ಗಮರಿಷ್ಟಂದುಷ್ಟಪೀಡೆ ಡಾಮರಮಜನ್ಯಮಿತಿ ಪ್ರಕರಂ" (ಪಕ್ಷ್ಯಕೋ. ೯೬-೦) ; ಅರಿಷ್ಟಮುಪಸರ್ಗ ಮುತ್ಪಾತಮುಪಲಿಂಗಮಜನಂ ಡಾಮರಂ ವಿಡಂಬರಿ ವಿಪ್ಲವವೆನಲ್ಕುಪದ್ರವಮಕ್ಕು (ಮಂಗರಾ. ೮-೨೬) ; ಮನೋಜಂ ಮುಯ್ಯಂ ನೋಡಿ ವಿಯೋಗಿಗೆ ಕಯ್ಯೂಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು.೩-೦೦). ೫. ಬರಗಾಲ ; ಕ್ಷಾಮ ; ದುರ್ಭಿಕ್ಷ : ಡಾಮರ ಆಗಿದ್ದರೂ ವಿಗತಾಗಿತ್ರಿವಾಚ್ಯವಾಗಿ ಸರ್ವವೃತ್ತಿಯ ನಡೆಸಬೇಕೆಂದು ಶಿವಾರ್ಪಿತವೆಂದು ಕೊಟ್ಟೆವಾಗಿ (ಮೈಆರಿ ೧೯೨೮ ; ೬೩-೩೨ ; 1509). ಕ್ಷಾಮ ಡಾಮರಂಗಳುಂ ಬೇರುಡಿದು ಪಾಟ್ರೋಕಂ ಪೊಟಲೊಳ್ (ರಾಮಾಭ್ಯ. ೦೪-೨೯). ೬. ಗಲಿಬಿಲಿ ; ಗದ್ದಲ ; ಗೊಂದಲ. ೭. ಯಾವುದಾದರೂ ಆಶ್ಚರ್ಯಕರವಾದ ವಸ್ತು, ನೋಟ ಅಥವಾ ಘಟನೆ.

**ಡಾಮರಮಲ್ಲ** = ಆಕ್ರಮಣವನ್ನು ಎದುರಿಸಬಲ್ಲ ಶೂರ ; ಶತ್ರುಗಳನ್ನು ಆಕ್ರಮಿಸುವುದರಲ್ಲಿ ದಿಟ್ಟನಾದವನು ; ಒಂದು ಬಿರುದು : ಸಿನ್ದನಾರಾಯಣ ನಲ್ಲಗ್ಗೆ ನಲ್ಲ ಡಾಮರಮಲ್ಲ ಏಕಾಂಗಶೂದ್ರಕ ಶ್ರೀಪುಲಿಕಾಲ (ಎಇ. III, ೨೩೨-೯ ; 1070). [ ಸಂ. ]

**ಡಾಮರ$_2$, ಡಾಂಬರ, ಡಾಂಬರು, ಡಾಮರು, ದಾಂಬರು** (ನಾ) = ಡಾಂಬರೆಣ್ಣೆ ; ಪಟಗರದ ಪೀಪಗಳೂ, ಡಾಮರದ ಪೀಪಗಳೂ, ರಾಂಜಾ ಪೀಪಗಳೂ (ಮುಂಬಪ್ರಾ. ೯) ; ಆ ಗಳಿಗೆಯಲ್ಲಿ ಆರಂಭವಾಗಿತ್ತು . . . ರಸ್ತೆಯ ಹೊದಿಕೆ ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ (ಜಳಜೀ. ೦೩೩). **ಡಾಂಬರ** : ನೀರು ಬಟ್ಟ ಮೇಲೆ ತೆರೆದಿರುವ ಕಟ್ಟಿಗೆಗಳು ಹುಳಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರಾಳ . . . ಹಚ್ಚಬೇಕು. ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಶ್ರ. ೦೦೨) ; ಡಾಂಬರದಲಿ ಮೈಮೆತ್ತಿದೆ (ನವ್ಯರ್ತ. ೦೩-೦೦) ; ಸುತ್ತೂಕಡೆಗೆ ಡಾಂಬರ ಸುಟ್ಟ ವಾಸನೆ ಬರಹತ್ತಿತು (ಸ್ವಸ್ತಿಜಿ. ೯೩೬) ; ಇಥರ ಜೊತೆಗೆ ಒಬ್ಬರ ಮುಖಕ್ಕೊಬ್ಬರು ಡಾಂಬರವನ್ನು ಬಳಿಯುತ್ತಿದ್ದರು (ರಂಗಕೋ. ४೮). **ಡಾಂಬರು** : ಡಾಂಬರಿನೊಳಗೆ ಇದ್ದಲೀ ತೆಯ್ಯು ಬಯಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ (ತಿರುಗು. ೦೩). **ಡಾಮರು** : ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ಡಾಮರು ಎದ್ದು ಹೋಗಿ ದೊಡ್ಡ ದೊಡ್ಡ ಹೊಂಡಗಳು ಹುಟ್ಟಿದ್ದವು (ಸೀತಾರ. ೯೪) ; ದಾರಿ ಡಾಮರು ಹಾಕಿದ ಒಳ್ಳೆಯ ರಸ್ತೆ (ಅಬೂಬ. ೭). **ದಾಂಬರು** : ವಾಹನದ ಗಾಲಿ ಅದರುಸಿರು ಕಪ್ಪು ದಾಂಬರಿನ ಬೀದಿ ಕಪ್ಪು ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ ಕಪ್ಪು? (ಕರುಣಾ. ೭೩-೦೩).

[ ←ಹಿಂ. ಮರಾ. ಡಾಮರ್ ]

**ಡಾಮರರಸ್ತೆ, ಡಾಂಬರರಸ್ತೆ** (ನಾ). ಡಾಮರ ಹಾಕಿದ ರಸ್ತೆ : ಈ ಮಧ್ಯಾಹ್ನದ ಉರಿಬಿಸಿಲಿಗೆ ಎಕ್ಕಡವಿಲ್ಲದ ಡಾಮರರಸ್ತೆಯಲ್ಲಿ ನಡೆಯುವಂತಿಲ್ಲ (ರೂಢಿ). **ಡಾಂಬರರಸ್ತೆ :** ಅವನು ಡಾಂಬರರಸ್ತೆಗುಂಟ ಒಂದೇ ಸವನೇ ಸಾಗತೊಡಗಿದ (ಮುಕ್ತ್ಯ.ದ. ೩೬) ; ಆ ಕಪ್ಪು ಡಾಂಬರರಸ್ತೆಯನ್ನು ನೋಡುತ್ತಿದ್ದಂತೆ ಏಕೋ ಅರ್ಥವಾಗದ ಸಮಾಧಾನ ಶಾಂತಿಗಳು ಸುರೇಶನ ಮನಸ್ಸಿನಲ್ಲಿ ನೆಲಸಹತ್ತಿದವು (ಅಕೋಲೆ. ೦೦೬). [ಡಾಮರ$_2$ + ರಸ್ತೆ]

**ಡಾಮರು** 'ಡಾಮರ$_2$' ನೋ.

**ಡಾಮರ್ಬಂಕಿ** (ನಾ). ಒಂದು ಬಗೆಯ ಸಸ್ಯ : ಬಿಳೀಭೋಗಿ, ಆಸಿನ ಮರ, ಅಶ್ವಕರ್ಣ, ಡಾಮರ್‌ಬಂಕಿ (ಮ್ಯಾಶಿಗಿ. ೬೦- ೧೯೨೩). [?]

**ಡಾಯಿಮ** (ನಾ). ಒಬ್ಬಾತನ ಹೆಸರು : ರಟ್ಟರ ಮೇರು ಡಾಯಿಮ ಮಹೀಪಾಳಂ ನೃಪಾಳೋತ್ತಮಂ (ಸೌಇಇ. XX, ೨೯೭-೯ ; 1087). [?]

**ಡಾಲರು** (ನಾ). ಅಮೇರಿಕಾದಲ್ಲಿ ಬಳಕೆಯಲ್ಲಿರುವ ಒಂದು ನಾಣ್ಯ : ಈ ಮನೆಯ ಮುಂಗಡ ಬಾಡಿಗೆ ೨೫ ಡಾಲರು (ಸಮುಸ. ೦೨೪); ಟಿಕೇಟಿನ ಬೆಲೆ ಒಂದು ಡಾಲರು (ಮಹಾಕ್ಷ್ಯ. ೦೦೩) : ಹೂವಿಲ್ಲ ಹಣ್ಣಿಲ್ಲ ಡಾಲರನು ಪಡೆಯುವ ಭಾಗ್ಯವಿಲ್ಲ (ಅರಕೋ. ೦೦). [←ಇಂ. Dollar]

**ಡಾಲಿಬಾರು** (ನಾ). ಚರ್ಮದ ಪಟ್ಟಿ (?) : ತುರುಕರ ಡಾಲಿಬಾರಿನ ಪಟ್ಟಿ ತಿಂಬರು ಹೇರಿ ಪೈಜರವ (ಕಾಲಸಂ. ೨೩-೦೦). [?]

**ಡಾಲಿಮ** 'ದಾಳಿಂಬ' ನೋ.

**ಡಾಲಿಯಾ** 'ಡೇಲಿಯಾ' ನೋ.

**ಡಾಲು$_1$** 'ಡಾಳ$_1$' ನೋ.

**ಡಾಲು$_2$, ಡಾಳ$_2$, ಡಾಳು, ಧಾಲು$_2$, ಧಾಳ** (ನಾ). ೧. ಗುರಾಣಿ : "ಡಾಲು–ಧಾಲ=ಅಡ್ಡಣ" (ಕದ್ಯಕೋ. ೦೬); ಬಿರುದಿನ ಡಾಲ ರಾವುತರೆಂಟು ಸಾವಿರ ತುರಗವನೇಱಿಯ್ಯೆತರಲು (ಕಂನವಿ. ೧೦-೮೬) ; ಗರುಡಹನುಮ ಮಕರದ ಟಕ್ಕೆಯ ಡಾಲಬಿರುದಿನ ದೊರೆರಾಯನಾರೊ (ಕಂನವಿ. ೦೩-೩೬); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ . . . ಕೈಸೆಱ ತಂದು ರಾಯರಿಂಗೊಪ್ಪಿಸಲ್ (ಕೆಳನೃ. ೨-೯೯) ; ಅದರಿಂದ (ಗಂಡಕದ ತೊಗಲಿನಿಂದ) ಬಹಳ ಬೆಲೆಯುಳ್ಳ ಡಾಲುಗಳು ಆಗುತ್ತವೆ (ಮುಂಬಯಿ. ೪-೯೮) ; ಕಾಲ್ದಳದವರು ಎಡಗೈಯಲ್ಲಿ ಹದಮಾಡಿದ ಎತ್ತಿನ ಚರ್ಮದ ಡಾಲುಗಳನ್ನು ಹಿಡಿದಿರುತ್ತಾರೆ (ಪ್ರಪಾಇ. I, ೪೦ ಅಡಿಟಿ). **ಡಾಳ$_2$ :** "ಪೊಪ್ಪರ ದಂಡೆ ಡಾಳ ಕಳಾಸ[ಪಾಠಾಂ. ಡೋಳಕ್ಕು ಕಳಾಸ]ಜಾಳೆಯ ಮಂಡಿ ಸೀರಣಂ ಹೆಣ್ಣೆಯಕ್ಕುಂ(ಮುಂಗರಾ.೮೮-೩೮): ಬಿರುದಿನ ಡಾಳ ಹಯದ ಮೊತ್ತದಲಿ ತಮಾಸುರನಂತೆ ಮೆಱೆವವನಾರು (ಕಂನವಿ. ೦೨-೪೩) ; ಬಿರುದಿನ ಡಾಳ ದರ್ಪದೆ ಸೆಳೆತಂದು ಭೂಪಾಲನಿದಿರಿನಲಿ ತಪ್ಪದೆ ಮೆದೆಯ ನೊಟ್ಟಿದರು (ಕಂನವಿ. ೦೫-೦೦೬). **ಡಾಳು :** ೧. ಬಿರುದಿನ ಡಾಳು ಡಮಾಮಿ ಮಕರಟಕ್ಕೆಯುರುತರ ರಾಜಚಿಹ್ನೆಗಳ ಪರಿಯ ತೋಱಾತ(ಕಂನವಿ.೩-೩೬): ಅಂಕೆಯಿಲ್ಲದೆ ನಾನಾ ಬಗೆ ಚಿತ್ರಗಳಂಕಿತವಹ ಡಾಳುಗಳ ಅಂಕುಶಖಾನನ ಕೇಜಿ ಸಾವಿರವಾಗ ಮುಂಕೊಂಡು ಬಂದುವು (ಕಂನವಿ. ೧೮-೮೪). **ಧಾಲು$_2$ :** ೧.ಬೆಳ್ಳಿ ಧಾಲು ಚಿನ್ನದ ಮುಲಾಮಿನ ಗುಬ್ಬಿ (ಎಕ. XIV, ಪಂಜನ. ೨೯೨-೯ ; 1847) ; ಕೈಯೊಳಗಿನ ಕತ್ತಿ ಧಾಲುಗಳನ್ನು ನೋಡಿರಿ (ಮೋಹಿನೀ. ೬೭) ; ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಧಾಲನ್ನೊಡ್ಡಿ ಹೊಡತವನ್ನು ತಪ್ಪಿಸಿಕೊಂಡನು (ಕುಮುದ. ೦೬) : ಒಂದು ಕೈಯಲ್ಲಿ ಎತ್ತಿನ ತೊಗಲಿನ ಧಾಲನ್ನು ಜೋತುಬಿಟ್ಟು . . . ಇಪ್ಪತ್ತೈದು ಹುಡುಗರು ಬಂದರು (ಮೇದಿಮ. ೦೦೦). ೨. ಪಂದ್ಯಗಳಲ್ಲಿ ಗೆದ್ದಿರುವ ತಂಡಕ್ಕೆ ಕೊಡುವ ಗುರಾಣಿಯಾಕಾರದ(ಬೆಳ್ಳಿಯ)ಪಾರಿತೋಷಕ,– ಬಹುಮಾನ : ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಧಾಲು (ನಂಮು. ೩೩-೨೪). **ಧಾಳ :** (೧). [<ಸಂ. ಧಾಲ]

**ಡಾಲು$_3$** (ನಾ). ಒಂದು ಬಗೆಯ ರಣವಾದ್ಯ : ಕೊಂಬುಕಹಳೆ ತಮ್ಮಟೆ ಡಾಲು ಡಮಾಲು ರಾಯಭಟ ಮುಂತಾದ ರಣವಾದ್ಯಗಳು ತಲ್ಲಣಿಸಿಂತವು (ರೂಲೀಪಾ. ೫). [?]

**ಡಾಲುಹೊಡೆ** (ಕ್ರಿ). ಪ್ರಕಾಶವನ್ನು ಬೀರು ; ಥಳಥಳಿಸು : ಅವಳು ಕಿವಿಯಲ್ಲಿ ಹಾಕಿಕೊಂಡಿದ್ದ ಕೆಂಪಿನೋಲೆಗಳು ನಾಲ್ಕು ಕಡೆಗೂ ತಳತಳನೆ ಡಾಲುಹೊಡೆಯುತ್ತಿದ್ದುವು (ಭಾರವಿ. ೦೦೦).
[ಡಾಲು$_1$ (<ಡಾಳ$_1$) + ಹೊಡೆ$_1$ (<ಪೊಡೆ$_1$)]

**ಡಾಲ್ಮರ** (ನಾ). ಒಂದು ಬಗೆಯ ಮರ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿರಿಬೇವು (ಮ್ಯಾಶಿಗಿ. ೨೦-೩೮೦). [? + ಮರ$_1$]

**ಡಾವ್** 'ಡಾವು' ನೋ.

**ಡಾವಣ** 'ದಾವಣಿ$_1$' ನೋ.

**ಡಾವಣಿ** 'ದಾವಣಿ$_1$' ನೋ.

**ಡಾವಣಿಕಟ್ಟು** 'ದಾವಣಿಗಟ್ಟು$_1$' ನೋ

**ಡಾವಣೆ** 'ದಾವಣಿ$_1$' ನೋ.

**ಡಾವಣೆನೇಣ್** (ನಾ). ದನ ಮೊದಲಾದುವನ್ನು ಸಾಲಾಗಿ ಕಟ್ಟುವ ಉದ್ದವಾದ ಹಗ್ಗ : ವಾರುವಗಳ ಡಾವಣೆನೇಣ್ಗಳ ಬಲು ಜೇರುಗುಣಿಕೆಗಳ ಪರಿದು ಕೇರಿಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಜುಮಾಜಾಗಿಯೋಡಿದವು (ಕಂನವಿ. ೧೫-೯೦). [ಡಾವಣೆ (<ದಾವಣಿ$_1$) + ನೇಣ್$_1$]

**ಡಾವಪೇಚು, ಡಾವುಪೇಚು** (ನಾ). ೧. ಉಪಾಯ ; ತಂತ್ರ : ಗೊತ್ತದ ನನಗ, ನಿಮಗೇನು ಖಾಸಗೀ ಮಾತಾಡೋದದ ಎಂದೋದು.ಮುತ್ಸದ್ದಿಗಿರೀ ಡಾವಪೇಚು ನಡಸೋದದ (ಊಜು. ೦೬). **ಡಾವುಪೇಚು :** ೨. ಪಟ್ಟು : ನೋಡಿದ ಹಿಡಿತಗಳನ್ನೂ ಡಾವುಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ . . . ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಿಹ. ೬೫).
[←ಮರಾ. ಡಾವಪೇಚ್]

**ಡಾವರ, ಡಾವರಿ, ಡಾವುರ, ಡಾಹರ, ದಾವರ** (ನಾ). ೧. ಬರಗಾಲ ; ಕ್ಷಾಮ ; ದುರ್ಭಿಕ್ಷ : "ಡಾವರಮಾ ಕ್ಷಾಮಮದಕ್ಕುಂ" (ಕವಿಕಂ.೨೬೯); ಇಂಬೆಯ ಪಸವಿನ ಬಱದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ಏರಿಂಚಿಯ ಕೆಯ್ಯಿಡಿವೊಲಾದುವಾ ನಾಡೂರ್ಗಳ್ (ಪಂಪಭಾ. ೮-೫೦) ; ಗೋಪ್ರವೇಶಲಕ್ಷಣ (ನಿಮಿತ್ತ) ಬಿಡಂ ಪೊಕ್ಕೊಡೆ ಚಿತ್ರವೃಷ್ಟಿ . . . ಸೇಡಂ ಪೊಕ್ಕೊಡೆ ಡಾವರಂ (ಅಟ್ಟಮ. ೪-೬). ೨. ಕೊಳ್ಳೆ ; ಸೂರೆ ; ಲೂಟಿ : ದಳವುಳ ದೆಳುಗವತೆಯನ್ಯಾಯ ಡಾವರ [ಪಾಠಾಂ. ಪರಿಭವ] ಠಕ್ಕು ಡೊಕ್ಕಾಸ . . . ನಿನ್ನೊಳಿಲ್ಲಲೆ ರಾಯ ಕೇಳೆಂದ (ಕುಮಾವ್ಯಾಸ. ೦-೯೫) ; ಕರುಬುತನ ದುರ್ಭಿಕ್ಷ ಡಾವರ ಪೊರಿಗೆ ಲಂಚ . . . ಸ್ವಪ್ನದೊಳಗಿಲ್ಲಾಳ್ಕೆಯೊಳು ಸಳನ (ಅಂಬಿಕಾ. ೪೮-೯೦). ೩. ಬಾಧೆ ; ಹಿಂಸೆ ; ಕೋಟಲೆ ; ಉಪದ್ರವ : ಪುಂಡರೀಕ ಧೋಂಕನೆ ನಿನಗೀಗಳಿಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ (ಕಾದಂಪೂ. ೭೭೪) : ದಕ್ಕೆಯ ಡಾವರಕ್ಕೆ ಸಿಕ್ಕಿ ನೊಂದೆನು (ಹರಿಭಕ್ತ್ಯ. ೨೨೦-೭) : ಕಾಮನ ಡಾಪರಂ ಕೊಳ್ಳದುಳಿದ ಮಾಯೆಯ ಮಾತು ಬೇಡ (ಹರಿಶಾ. ೮-೫೯): ಸಾವು ತಪ್ಪದು ತನಗೆ ಕಾಮನ ಡಾವರವು ಘನ (ಕುಮಾವ್ಯಾವಿ. ೨-೨೭) : ರಕ್ತಬೀಜಜನ ಡಾವರಕೆ ಬೆಚ್ಚದಿರಿ (ಅಂಬಿಕಾ. ೩೮-೯). ೪. ತೀವ್ರತೆ ; ರಭಸ ; ಅತಿಶಯ : ಬತ್ತಿದ ಬತ್ತು ಪೃಥ್ವಿಯ ಕೂಟ ಅಪ್ಪುವಿನ ದ್ರವದಿಂದ ಮಸ್ತಕ ಒಡೆದುದಲ್ಲದೆ ಉಷ್ಣದ ಡಾವರಕ್ಕೆ ದೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ (ಕೋಲಮೂ. ೨೮೦-೪೭); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಳ್ಳೆ ಹೊಯ್ದಾವು ಧಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯ (ಕುಮಾವ್ಯಾಸ. ೦೫-೨). ೫. ಕಾವು; ದಗೆ; ತಾಪ : ಉರಿಯ ಡಾವರವೆಳೆಯ ಬಾಳೆಯ ಬೆರಸುವಂತಿರೆ

ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುವ್ಯಾ,ದ್ರೊ.೯. ೭-೧೧) ; ಬಿಸಿಲಿನ ಡಾವರವು ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ (ಕಾನೂರು. ೧). ೬. ಪ್ರತಾಪ ; ಶಕ್ತಿ ; ಸಾಮರ್ಥ್ಯ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಡಾ[ಪಾಠಾಂ. ಥಾ]ವರದಲೇ ಗೆಲಿದನೊಬ್ಬ ವಸಿಷ್ಠ ಮುನಿಯೆಂದ (ಕುವ್ಯಾ,ಆ. ೧೧-೪೩) : ಆವುದಂತರ ವನಕಳಭಕೈರಾವತಕೆ ಮಾರ್ಪು ಭಾಪು ದ್ರೋಣನ ಡಾವರಕೆ ಪಾಂಚಾಲನೈಸಲಿವನು (ಕುವ್ಯಾ,ಭೀ. ೮-೩೨). ೭. ಗದ್ದಲ ; ಗಲಿಬಿಲಿ ; ಸಡಗರ : ಧೂರ್ಜಟಿಯ ಡಾವರದ ಡಮರುಧ್ವನಿಯೊ ಪಿಲಯದ ಬಲಿಸಿಡಿಲ ಬೊಬ್ಬಾಟವೋ (ಕುವ್ಯಾ,ಕ. ೨೧-೧೬). ೮. ಬಯಕೆ ; ಉತ್ಕಟವಾದ ಇಚ್ಛೆ : ಮಹಾವಾರ್ಧಿಜಲವ ನೊಂದೇ ಸಾರಿ ಸುಟಿಗೊಂಬ ಡಾವರದೊಳಿದ್ದ ವಡಬಾಗ್ನಿಯೋ . . . . ಎಂದೇಬೊಲಾದುದು ಧನಂಜಯನ ಪಾವಕಾಸ್ತ್ರಂ (ಕೃಮಿಥಾ. ೧೩-೧೧೦) : ಆಳ್ದನೂಟಿಗಮನಿತುಮಂ ತಾನೊರ್ವನೆ ಗೆಯ್ವ ಡಾವರದಿಂ (ಚಿಕವಂ: ೮೩-೨೧). ೯. ಭಯಂಕರವಾದುದು ; ಭೀಷಣತೆ ; ಕರಾಳತೆ : ಅವ ಕೌಳಿಕಮಂತ್ರತಂತ್ರದ ಡಾವರದ ಡೊಳ್ಳಾಸವಿಕ್ಕಿದ ದೀವಸದ ಬೇಳುವೆಯ ವೇನೆಂಬೆನು (ಕುವ್ಯಾ,ಸ. ೦೩-೬೦) ; ಜಲಧಿ ಜಲಧಿಯ ಹಳಚಲಗಿದವ್ವಳಿಪ ವಾದ್ಯಧ್ವನಿಯ ಡಾವರ ಸೆಳೆದುದಸುರರ ಧುರದ ಧೈರ್ಯವನು (ಕುವ್ಯಾ,ಅ. ೧೨-೦೨). ೧೧. ಆವರಿಸುವಿಕೆ; ಸುತ್ತಲೂ ವ್ಯಾಪಿಸುವಿಕೆ. 'ಡಾವರಿಸು' ಪರಾ. **ಡಾವರಿ:** ೪, ಅತ್ತಲರ್ಜುನನುರಿಯ ಡಾವರಿಯನು[ಪಾಠಾಂ. ಡಾವರವನು]ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಕೃಮಿಥಾ. ೮-೪೩). **ಡಾವುರ:** ೮. "ಡಾವುರವಾನಲಾಪೇಕ್ಷೆಯು" (ಭಾರನಿ. ೩೨). **ಡಾಹರ:** ೬. ಡಾಹರದೊಳಿಱಿಗಿದೆಕ್ಕಲನದಟುವಂ ಮುಱಿಯೆ ನೇಹದಿಂ ಹರಿ ತನ್ನ ಕುವರಿಯಂ ಕೊಡೆ (ಅಂಗಪು. ೧-೦೬).**ದಾವರ:** ೧೧. ಬಾಯಾರಿಕೆ ; ದಾಹ; ನೀರಡಿಕೆ; ಸೇದೆ : ಬಳಸಿ ಬಂದಿಹ ನವಗೆ ಇಷ್ಟು ದಾವರವಾಗೆ ಏರಿಬಳುವವನಿಗೆಷ್ಟು ದಾವರವೊ (ಅರುಣ. ೩೯-೨೦); ಉಪ್ಪು ತಿಂದಷ್ಟೂ ದಾವರವಾಗಿ ಒಣಗಿ ಹೋದೀಯೋ, ಬೆಲ್ಲವೇ ತಿನ್ನು (ಕಥಾಮು. IV,೯೨). 'ಡವರ' ಪರಾ. [ <ಸಂ. ಡಾಮರ ]

**ಡಾವರಿ** 'ಡಾವರ' ನೋ.

**ಡಾವರಿಗ** (ನಾ). ೧. ಕೊಳ್ಳೆಹೊಡೆಯುವವನು ; ದಂಗೆಮಾಡು ವವನು; ಸೂರೆಕಾರ ; ದರೋಡೆಗಾರ : ಅಱಿವಿನ ಗರ್ವದಿಂದಿಳಿಸದೀ ತ್ರಿಜಗಂಗಳನೊತ್ತಿ ಮೋಹವೆಂಬಱಿಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆಂತುಮೇತೆಱದೊಳವೊಳ್ಳಿಕೆಯ್ಗುಮೆ (ಜೀವಸಂ. ೦೫೮-೦೬); ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ (ಕುವ್ಯಾ,ಸ. ೧೫-೩೫). ೨. ಶೂರ; ಸಮರ್ಥ; ವೀರ : ಕಂಸನಾನೆಯನಸುಬಡಿದ ಗಡ ಮಲ್ಲರನು ಮರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ (ಕುವ್ಯಾ,ಸ. ೧೧-೧೭). ೩. ಗದ್ದಲವಮಾಡುವವನು ; ಕೋಲಾಹಲವನ್ನುಂಟು ಮಾಡುವವನು ; ಆರ್ಭಟಿಸುವವನು : (ಕ). [ ಡಾವರ + –ಇಗ ]

**ಡಾವರಿಗತನ** (ನಾ). ಸಾಮರ್ಥ್ಯ ; ಶೌರ್ಯ ; ಪರಾಕ್ರಮ : ಕರ್ಣ ಗಳಹದಿರು ಡಾವರಿಗತನವಾರ ಕೂಡೆ ವೃಥಾ ವಿಲಾಸಿಗಳೆಲವೊ ಸುಭಟರೆ ನೀವು (ಕುವ್ಯಾ,ದ್ರೊ.೯. ೦೩-೨೩). [ ಡಾವರಿಗ + –ತನ ]

**ಡಾವರಿಗವಿದ್ಯೆ** (ನಾ). ಕೊಳ್ಳೆಹೊಡೆಯುವುದು ; ಲೂಟಿ ; ಸೂರೆ : ಆವ ಸೇರಿಕೆ ಜಪಕೆ ಜಾಪಶರಾವಳಿಗೆ ಶಮ ದಮೆಗೆ ಖಡ್ಗಕೆ . . . ಆವುದಿದರಭಿಧಾನ ತಪವೋ ಡಾವರಿಗವಿದ್ಯಾಸಮಾಧಿಯೊ ನೀವಿದೆಂತಹ ಋಷಿಗಳು (ಕುವ್ಯಾ,ಆ. ೪-೯೩). [ ಡಾವರಿಗ + ವಿದ್ಯೆ ]

**ಡಾವರಿಸು, ಥಾವರಿಸು, ದಾವರಿಸು** (ಕ್ರಿ). ೧. ಸುತ್ತು ; ತಿರುಗಾಡು ; ತ್ವರೆಯಿಂದ ಆಚೀಚೆಗೆ ಚಲಿಸು ; ರಭಸದಿಂದ ಮುನ್ನುಗ್ಗು : ರಥಿಕರ್ ಕಡುಬಿ ರಥಂಗಳಿಂ ಡಾವರಿಸುತ್ತೆ (ದಶಕು. ೭-೭೩) ; ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ . . . ದಿಶಾಚಕ್ರದೊಳ್ ಡಾವರಿಸಲ್ (ಎಕ. V, ಬೇಲೂರು. ೩-೭೯; 1397) : ಕೀಪಿ ತೆಗೆದನು ವಜ್ರಶರದಲಿ ಡಾವರಿಸಿದನು ಕಳನೊಳು (ಕುವ್ಯಾ,ದ್ರೊ.೯. ೦೦-೨೮) : ನೂಱಾನೆಯಲಿ ಡಾವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ (ಕುವ್ಯಾ,ಗ. ೨-೩೫); ನೆಲ ಹಱಿಯ ಹರಿದವು ತೇರುಗಳು ತೇರವದ ತೋಳುಗಳ ಉರುಕೃಪಾಣದ ದಂತಿಗಳು ಡಾವರಿಸಿದವು (ತೊರರಾ. ೫-೫-೦೬). ೨. ಬಾಯಾರಿಕೆಯಾಗು: ನರನ ತೇರಿನ ಕುದುರೆಗಳು ಡಾವರಿಸಿದುವು ಡಗೆಹೊಯ್ದು ಮಿಗೆ ದಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ (ಕುವ್ಯಾ,ಭೀ. ೬-೩೪) : ಕೀವಿದ ಪಾಲ್ಗೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ ಸದ್ಭಾವವಮನೀಕ್ಷಿಸದಾಕೆಯು ಕಣ್ಗಳ್ ಪೀಲಿಯ ಕಣ್ಣೆಸೆ (ಜಯಚಾ. ೨-೩೭). ೩. ಹಬ್ಬು; ಆವರಿಸು ; ವ್ಯಾಪಿಸು : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುವ್ಯಾ,ಭೀ. ೮-೩೭); ಉರಿಯ ಕರಡಿಗೆಯಂತೆ ಶಿಖಿ ಡಾ[ಪಾಠಾಂ. ಸಿಡಿದಾ]ವರಿಸಿತಬುಜಭವಾಂಡಭವನವನು (ತೊರರಾ. ೬-೪-೩೨); ವಿಷಜ್ವಾಲೆ ಮಿಗೆ ಡಾವರಿಸಿತು . . . ಪರಬಲದೊಳು (ಕೃಮಿಥಾ. ೨೪-೩೦) ; ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು (ಕವೀರ. ೦೨೦). ೪. ಚುಚ್ಚು ; ತಿವಿ; ಹೊಡೆ; ಹಿಂಸಿಸು; ನೋಯಿಸು: ನೀವು ಕಂಡಿರೆ ನಾಭಿ ಜಂಘೆಗೆ ಡಾವರಿಸಿದನು ಹಲವು ಬಾರಿ ಜಯಾವಲಂಬನವೆಂತು ಕೃಪೆಮಾಡೆಂದನಾ ಪಾರ್ಥ (ಕುವ್ಯಾ,ಗ. ೭-೪೩). ೫. ಉರಿ ; ಪ್ರಜ್ವಲಿಸು : ಝಳದ ಡಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨) : ಭುಗಿಲ್ಬುಗಿಲ್ಬುಗಿಲೆಂದು ಡಾವರಿಸೆ . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ (ಕೃಮಿಥಾ. ೮-೫೯): ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ (ಕೃಮಿಥಾ. ೦೩-೫೯). ೬. ಅತಿಯಾಗಿ ಬಯಸು ; ಉತ್ಕಟವಾಗಿ ಆಸೆಪಡು ; ಆಸೆಯಿಂದ ಹಾತೊರೆ : ವಿಷಯವ ಡಾವರಿಸುವವ ಸ್ತುತಿನಿಂದೆಯ ಬಲ್ಲನೆ (ಸರ್ವ. ೩೫-೧೮೮) : ಆವರಿಸುವ ಮನ ಭಕ್ತಿಗೆ ಡಾವರಿಸುವ ಮನ ಶಿವಾರ್ಚನೆಗೆ . . . ದೊರಕಿದೊಡಾವುದಸಾಧ್ಯಂ (ಶಂಕಳಂ. ೨೦). ೭. ಆರ್ಭಟಿಸು ; ಅಬ್ಬರಿಸು : ಕಡುಲುಳಿ ಮಸಗಿ ಡಾವರಿಸಿ . . . ಕಾಗಿದರು (ಕುವ್ಯಾ,ಸ. ೨-೦೦೩) ; ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ಡಾವರಿಸಿ ಸೀವರಿಸಿ ಮನೆಗೆಲಸವಂ ಗೆಯ್ಯದಾ ವನಿತೆ ಸಾವನಿತೆ ಲೇಸು (ಕೃಮಿಥಾ. ೫-೫೪): "ಹಟಮಾರಿತನ ಮಾಡು; ಮೊಂಡಾಟಮಾಡು"(ಪ್ರಭಂ). **ಥಾವರಿಸು:** ೬. ಆವುದಱ ದೆಸೆಯಿಂದ ಮನವಿದು ಥಾವರಿಸುತಿಹುದದು ಕಡಾ ಭವಧಾಮತಿಗೆ ಕಾರಣವು (ಸ್ವರೂಪಾ. ೦-೪). **ದಾವರಿಸು :** ೪. ಆನೊಲಿದು ಬಂದರೆ ನಿಮ್ಮ ಬಿಱುನುಡಿಯಲಗಿನಲಿ ದಾ[ಪಾಠಾಂ. ಡಾ]ವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರರಾ. ೩-೪-೨೦). ೮. ನೋಯು; ಹಿಂಸೆಗೊಳ್ಳು; ಯಾತನೆಯನ್ನನುಭವಿಸು : ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸುತಿಪ್ಪುದೀ ಮನವು (ಪಕಪಾ. II, ೪೪೯) ; ಮಗ್ದಲದ ಮರಿಯಳೀ ಯೇಸುವಿಗೆ ಮನಸೋತು . . . ಬೆಂದು ಮನನೊಂದು ಭುಗಿಭುಗಿಲ್ಲ ಕಾವರಕೆ ದಾವರಿಸಿ (ಗೊಲ್ಗೊಥಾ. ೩-೬೦). 'ಡವರಿಸು' ಪರಾ. [ ಡಾವರ + – ಇಸು₃ ]

**ಡಾವಳಿ** 'ಧಾವಳಿ' ನೋ.

**ಡಾವು, ಡಾವ್, ಡಾವೆ** (ನಾ). ೧. ಹೊಟ್ಟೆಕಿಚ್ಚು ; ಡಂಕ ; ದ್ವೇಷ ; ವೈರ : ಆ ಹಾವು ಡಾವು ಇಟ್ಟುಕೊಂಡು ಒಂದು ವರ್ಷದ ನಂತರ ಅವನನ್ನು ಕಚ್ಚಿದೆ (ರೂಢಿ). ೨. ಕುಸ್ತಿಯಲ್ಲಿ ಒಂದು ಬಗೆಯ ಹಿಡಿತ : ಇಂತಹ ಹಿಡಿತಗಳಿಗೆ ಭಾರತ ಪ್ರತಿ ಡಾವು ಮಾಡುವಷ್ಟು ಸಾಧನೆ ಪಡೆದಿದೆ (ಎಚ್ಚಸಾ. ೦೪೮). ೩. ಆಟ ; ಕುಸ್ತಿಯಾಟ : 'ಡಾವುಪೇಚು' ಪರಾ. ೪. ಹಂಚಿಕೆ ; ಉಪಾಯ ; ಯುಕ್ತಿ : ಮುದ್ದಾಂ ಮಳ್ಳತನವನು

ಪ್ರದರ್ಶಿಸುವ ಡಾವಿನಿಂದ ನಾನೂ . . . ಅವನ ತಲೆ ಚಚ್ಚುಹಿಡಿಸುವಂತೆ ಬಾತವಿಷಾ ಒಪ್ಪಿಸಿದ್ದೆ (ದೀಪಹ. II, ೦೪). ಡಾವ್ : ೧. ಸಾಹೇಬರ ಡಾವ್ ಶ್ಯಾಮರಾಯರಿಗೆ ಹೊಳೆದಿತ್ತು (ದೀಪಹ. II ೩೦). ಡಾವೆ : ೧. ಕಾವಳಂ ಮರೆಗೊಂಡು ತಸ್ಕರರ್ ಬಳಿಕಿಂದು ಡಾವೆಯಿಂ ಪರಶುಧೀರಧರನಿಲ್ಲದಿಹ ಸಮಯದೊಳ್ ಮೋವಿಕಿನ್ನಾರ್ ಕಾವರೆಮ್ಮನೆಂದೊಳಗೊಳಗೆ (ಪರಶು. ೩೩-೦೪). [ ←ಹಿಂ. ಮರಾ. ಡಾವ್ ]

ಡಾವುತೀರಿಸು (ಕ್ರಿ). ಹಗೆತನವನ್ನು ಸಾಧಿಸಿಕೊಳ್ಳು ; ಮುಯ್ಯಿ ತೀರಿಸಿ ಕೊಳ್ಳು : (+). [ ಡಾವು + ತೀರಿಸು ]

ಡಾವುಪೇಚು 'ಡಾವಪೇಚು' ನೋ.

ಡಾವುರ 'ಡಾವರ' ನೋ.

ಡಾವೆ 'ಡಾವು' ನೋ.

ಡಾಶೇರು (ನಾ). ಒಂದಂ ತೂಕದ ಅಳತೆ ; ಎರಡೂವರೆ ಸೇರು ; ಅಡಿಸೇರು : ವಂದು ಮಣುವಿಂಗೆ ದಡಯ ನಾಲ್ಕುಂ ಪಂಚೇರು ಧಂದ ದೊಳೆಂಟು ಡಾಶೇರು ಷೋಡಶಮಕ್ಕುಂ (ಡಾಕ್ಷರ. ೭೩-೭).

[ ಡಾ₀ (P ←ಹಿಂ. ಢಾಈ) + ಶೇರು₁ (<ಸೇರು₂) ]

ಡಾಹ, ದಾವು₁ (ನಾ). ೧. ಸುಡುವಿಕೆ; ದಹಿಸುವಿಕೆ : ತೋಟ್ ಯಂತೆ ಮಳಮಂ ತೋಟ್ ಬೆರ್ಚಿಸದೆ ಕಿರ್ಚಿನಂತೆ ಅಡಕವಂ ತೋಟ್ ನಂದಿಸದೆ ದಾಟಿಯಂತೆ ಡಾಹಮಂ ಮಾಡಿ ಕೆಡಿಸದೆ (ಧರ್ಮಾಮೃ. ೩-೯೯). ೨. ಸೆಕೆ ; ದಗೆ; ತಾಪ : ಮನುಷ್ಯ ಲೋಕದೊಳಾದ ಸುಖಮೆಲ್ಲಂ ಡಾ[ಪಾಠಾಂ. ದಾ]ಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೩೦-೨೪ ವ). ೩. ನೀರಡಿಕೆ ; ಬಾಯಾರಿಕೆ. ದಾವು₁ : ೨. ಬಿಸಿಲಿನ ದಾವು ತಗ್ಗಿತ್ತು (ಪಳಮ. ೨೦).

[ <ಪ್ರಾ. ಡಾಹ./ಸಂ. ದಾಹ ]

ಡಾಹರ 'ಡಾವರ' ನೋ.

ಡಾಹಿಣಿ 'ಡಾಕಿಣಿ' ನೋ.

ಡಾಹಿಸು (ಕ್ರಿ). ದಾಹಗೊಳ್ಳು ; ಅತಿಯಾದ ತಾಪದಿಂದ ಕೂಡಿರು ; ಉತ್ಕಟವಾಗಿ ಕುದಿ : ಮೋಹ ಮದ ಸಮೂಹದಿಂದ ಡಾ [ಪಾಠಾಂ. ದಾ]ಹಿಸುತ್ತಮಿರ್ದನಯ್ಯ ದೇಹದಿಚ್ಛೆ ಹೆಚ್ಚಿ ಮಚ್ಚರಕ್ಕೆ ವೇಳೆ ಯಾದೆನಯ್ಯ (ಹಂಪರ. ಹ. ೩೦೦-೨೦). [ ಡಾಹ + – ಇಸು₂ ]

ಡಾಳ್₁, ಡವಳ್₁, ಡಾಲ್ಲು₁, ಧವಳ, ಥಾಲು, ಥಾಳ್₁, ಥಾಳು (ನಾ). ೧. ಹೊಳಪು ; ಪ್ರಭೆ ; ಕಾಂತಿ : "ತೊಳಗು, ಬೆಳಗು . . . ಡಾಳಂ, ಪೊಗರ್, ತೊಳಪಂ, ಮಸೆ- ಈ ೧೪ ಕಾಂತಿ" (ಕಶಪಾ. ೦೦-೨೦೩) : "ಡಾಳ ಹದ ಪೊಗರೆಂದೆನೆ ಕಳೆ ಪೊಳಪು . . . ಕಾಂತಿಯೆನಿಕ್ಕುಂ" (ಕಷಿಕಂ. ೦೦೦) ; ವಡಪೋಳೆದುವಾಕೆಯ ಡಾಳವನಾಂತ ದಿಟ್ಟಿಗಳ್ (ಕಬ್ಬಿಗಕಾ. ೩೩೦); ಕನಸಿನ ಸಿರಿ ಕಾರ್ಮುಗಿಲೊಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನ ಡಾಳಂ ಜನ ಪತಿಯ ಕೂರ್ಮೆ ಯೌವನಲಾತನ್ನೊಳಾಯ್ತು ಜನ ಸೌಖ್ಯಂ (ದಶಕು. ೫-೩೪) ; ಮಿಸುನಿಯೋಲೆಯ ಡಾ[ಪಾಠಾಂ. ಥಾ]ಳ ಕದಪಿನೊಳೆಸೆಯೆ (ನಳಚ. ೩-೬); ಪ್ರಾಲೋಲ ಖಡ್ಗಗಳ ಡಾಳದಿಂ ಮೇಳದಿಂ . . . ಪಡೆ ಪಡೆಪಿನಿಂ ನಡೆದುದು (ಜಿನಪು. ೪೬-೦೦). ೨. ಅಂದ ; ಚಂದ ; ಸೊಬಗು : "ಡಾಳಮನೆ ಲಾವಣ್ಯಂ" (ಧಾರನಿ. ೩೫) ; ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತು ಗಳುಂ ನಭೋಂತದೊಳ್ ಸಾಲಿಡಲ್ (ದಶಕು. ೦೨-೦೭೬) : ತೋರಮೊಲೆ ಗಳ ಡಾಳದಲಿ ಮಣಿಹಾರ ಮೆಱೆಯಲು (ಜೀವಂಚ. ೮-೯); ಥಳಥಳಿಸುವೆಳ ವಿಮಾನ ಡಾಳವ ಗೆಲುವ ಕಂಗಳ (ಅಕ್ರೂರಚ. ೪-೨೪). ೩. ರೀತಿ ; ಕ್ರಮ ; ಪದ್ಧತಿ ; ತರಹ : ಕಾಲದೇಶಾಗವುದ ನಿಗಮದ ಡಾಳವಱಿದ್ಯೆಹಿಕಪರತ್ರ ವಿಚಾರಿಸದೆ ನಡೆ ಕಂದ (ಕುಮಾವ್ಯಾ. ೦೫-೬೨). ೪. ಕುಂದು ; ಹಾನಿ ; ಭಂಗ : ಅಚ್ಚಮುತ್ತರ ತೆಱದಿ ನಡತೆಗಳೆಚ್ಚವಿರದೊಡ್ಡದೊಲು ನಡೆತರು

ತೆಜ್ಜ ಸಾಸಿರ ಬಿದ್ದು ಡಾಳಗಳಾದವವಕೀಗ (ಬಿಜ್ಜಳಪು. ೬೭-೦೭). ೫. ಉಜ್ಜಿ ಹೊಳಪುಗೊಳಿಸುವುದು. 'ಡಾಳವಿಡಿ' ಪರಾ. ೬. ತೋರಿಕೆ ; ಥಳುಕು ; ಠಕ್ಕು. 'ಡಾಳ್' ಪರಾ. ೭. ಥಳುಕಿನವನು ; ಡಾಂಭಿಕ ; ಮೋಸಗಾರ; ವಂಚಕ: ಕುಡದ ಕಾಡುವವಂ ರಸಬೋನವತ್ತು ಮಾಕಾಳಿಗೆ ಡಾ[ಪಾಠಾಂ. ಕಾ, ಗಾ]ಳನಂ ನೆಗವು ಟಕ್ಕಿಪನಂ ತುಬ್ (ಲೀಲಾವ. ೨-೦೦೭) ; ಡಾಳಂಗಪ್ಪಯಿಸಿದುದು ಬಿಡಾಳಕ್ಕಂ ಪಾಲ ಕಾಪನತ್ರವೋಲಾಯ್ತೆಂದೀ ಲೋಕಮುಲಿಯೆ ನೀತಿನುತಾಲೋಕನರಹಿತನಹಿತಚಂತದ ನೆಗಟ್ಟಂ (ಪಾರ್ಶ್ವಪು. ೩-೦೦೨). ಡವಳ್₁ : ೭. ಥಾಳರನು ಡ[ಪಾಠಾಂ. ಥ]ವಳರನು ಠಕ್ಕಿನ ಠೌಳಿಕಾಱರನು (ಕುಮಾವ್ಯಾ. ಗ. ೫-೦೦). ಡಾಲು₁: ೧ 'ಡಾಲುಹೊಡೆ' ಪರಾ. ಧವಳ : ಮೇಲಿನ 'ಕುಮಾವ್ಯಾ. ಗ. ೫-೧೧'ರ ಪ್ರಯೋಗದ ಪಾಠಾಂತರವನ್ನು ನೋಡಿ. ಥಾಲು₁: ೮. [ಸಂಗೀತ] ದಾಟುಸ್ವರಗಳ ಪ್ರಯೋಗ : ಥಾಲು – ಸಪಾ, ಸಮಾ, ಸಗಾ, ಸರೀ ಎಂದು ಅನು ಕ್ರಮಿಸುವ ದಾಟುಸ್ವರಗಳ ಪ್ರಯೋಗ (ಸಂಗೀತಂ. ೨೮). ಥಾಳ್₁: ೧. ಸರ್ವಾಂಗದೊಳ್ ಥಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡು ವಂತಾಡಿದರ್ (ಪಾರ್ಶ್ವಪು. ೦೯-೦೩೯) : ಎಳೆಯ ಮುತ್ತಿನ ಥಾಳವನು ಮುಕ್ಕುಳಿಸಿದಂಗಚ್ಛವಿಯ (ಕುಮಾವ್ಯಾ. ಆ. ೬-೭೩) : ಭ್ರೂಲತೆಯ ಲಾವಣ್ಯ ನಿಧಿಯ ವಿಶಾಲ ಭಾಳದ ಥಾಳದಲಿ (ವಿಠಾಗ. ೨-೦-೨೬); ಸುಲಿಪಲ್ಲ ಥಾಳದಿ ಕರ್ಣಕುಂಡಲದಿ (ಕಂಠೀರಾ. ೫-೬೭): ಚೆಲ್ವೆ ಕಂಗಳ ಥಾಳ (ಅಂಬಿಕಾ. ೩೪-೬೦). ೭. ಥಾಳರನು ಡ[ಪಾಠಾಂ. ಥ]ವಳರನು ಠಕ್ಕಿನ ಠೌಳಿಕಾಱರನು (ಕುಮಾವ್ಯಾ. ಗ. ೫-೦೦). ೯. ಅಶುಚಿವಂತ ; ಶೀಲಗೇಡಿ (?) : ಖುಳರಿಲ್ಲ ಜಾಣರುಂಟು ಗೆಳ್ವರಿಲ್ಲ ಒಳ್ಳರುಂಟು ಥಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು (ಮುಕರ. ಹ. ೨೨೦-೨೬). ೧೦. [ನಾಟ್ಯ] ಒಂದು ಬಗೆಯ ನೃತ್ಯ : ರೂಪು ರೇಖೆ ಥಾವಣೆ ತೂಕವಣೆಯಂಕೆ ರಘುಂಕೆ ಥಾಳ ಡಿಳ್ಳಾಯ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೬-೬೭ ವ). ಥಾಳು : ೧. ನೂರು ಬಣ್ಣದ ಹೊಳೆವನೊಳಗಾಂತು ಇದರ ತೆರವಿಂಥದೆವೆ ಮತ್ತೊಂದು ಥಾಳಿನಿಂದ ಕಂಗಳನು ಕೋರೈಸು ವಚ್ಚರಿಯ ಹೀರದಂತಿವನ ಬಗೆಗೆನ್ನ ಬಗೆಯಚ್ಚರಿಪುದು (ಗೋಕಾಸ್ವಿ. ೨೦-೨) : ಚಂದಕೆ ಮರುಳಾಗೆ ಕಣ್ಣಮುಚ್ಚಿಸಿತವ್ವ ನಿನ್ನ ಪರಿವಾರದ ಸುರರ ಥಾಳು (ಹಂಸರ. ೦೭೩-೦೭).

ಡಾಳಾಗು, ಥಾಳವಾಗು, ಥಾಳಾಗು = ೧. ಉಜ್ಜ್ವಲವಾಗು ; ಪ್ರಕಾಶ ಮಾನವಾಗು; ಚೆನ್ನಾಗಿ ಪ್ರಕಾಶಿಸು; ಪ್ರಜ್ವಲಿಸು : ದೀಪಿಗೆಯು ಡಾಳಾಗಿ ಉರಿಯುತ್ತಿರಲಿಕ್ಕೆ ಬೇಕು (ಮುಂಬಯಿ. ೫-೦೭೨) ; ಬರಬರುತ್ತ ಆ ಬೆಳಕು ಥಾಳವಾಗಿ ಖಿಂಡಿಯಿಂದ ಹೊರಚೆಲ್ಲಿ (ಗೀಜುಗ. ೦೦) ; ಅವನ ಕಣ್ಣಲ್ಲಿ ಸತ್ಯದ, ಬಂಧುತ್ವದ ದಿವ್ಯಜ್ಯೋತಿಯೊಂದು 'ಥಾಳಾಗಿ' ಉರಿಯುತ್ತಿತ್ತು (ಬರಹಾ. ೯೪); ವಿಶ್ವವಿದ್ಯಾನಿಲಯದ ಕೋಣೆಯಲ್ಲಿ ಇನ್ನೂ ದೀಪ ಥಾಳಾಗಿ ಉರಿಯುತ್ತಿದ್ದುದು . . . ಕಾಣುತ್ತಿತ್ತು (ದೀಪಹ. II, ೦೦೬). ೨. ಎದ್ದು ಕಾಣಂ; ಸುಸ್ಪಷ್ಟವಾಗು : ಭವ್ಯಮಂದಿರಗಳು ಮದರಾಸಿನಲ್ಲಿ ಬೀಚಿನ ಹತ್ತಿರವೇ ಥಾಳವಾಗಿ ಕಾಣುತ್ತಿವೆ (ಹೂಅರ. ೦೬) ; ಕೂರಿಗೆಗೆ ವಿಭೂತಿ ಯನ್ನು ಬಳಿದು ಥಾಳವಾಗಿ ಕುಂಕುಮ ಲೇಪಿಸಿದರು (ಮುತ್ತುಮು. ೩೩೬).

[ ದೇ.೩ ತೆಲು. ಡಾಲ./ಮರಾ. ಥಾಳ ]

ಡಾಳ್₂ 'ಡಾಲ್ಲು₂' ನೋ.

ಡಾಳ್₃ (ನಾ). (ಚಾಮರ ಮೊದಲಾದವನ್ನು) ಬೀಸುವಿಕೆ ; ಗಾಳಿ ಹಾಕುವಿಕೆ.

ಡಾಳಹಾಕು = ಬೀಸು ; ಇಕ್ಕು : ಡಾಳಹಾಕುವ ಚಾಮರದ ಪೊಡೆವ ಡೌಡೆಯ (ಹಮ್ಮೀರ. ೩-೩೩ ವ).

[ <ಪ್ರಾ. ಥಾಲ ]

**ಡಾಳಕ**, ಢಾಳಕ (ನಾ). ೧. ತೋರಿಕೆಯ ನಡೆನುಡಿಯುಳ್ಳವನು; ಡಾಂಭಿಕ; ಮೋಸಗಾರ: ಬೋಳೆಯನೆಂದು ನಂಬಬೇಡ ಡಾ[ಪಾಠಾಂ. ಢಾ]ಳಕನವನು ಜಗದ ಬನ್ನಾಣಿ (ಮುಹಾದೇ. ಬ. ೧೦೪-೨೪೭): ನೆಜ ಡಾಳಕನಂ ತಗುಳ್ದು ಕೂರ್ತಂಗಜಕೇಳಿಯೊಳ್ ತೊಡರ್ದು (ಮನ್ಮವಿ. ೬-೩): ಮಾಲೆಯನೊಬ್ಬಗಿಕ್ಕಿದಳೆಂದರಾ ಹೆಣ್ಣ ಮೇಲಾಸೆ ನೃಪಗಾಗದೆಂದು ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ ಛಾಳಿಸಿ ಮಡಿದನೇನೆಂಬೆ (ಭರತೇ. ೩೬-೩). ೨. ಕಪಟ; ವಂಚನೆ; ಮೋಸ. 'ಡಾಳಕವಂತ' ಪರಾ. **ಢಾಳಕ**: ೧. ಢಾಳಕರಿಗರ್ಥಾರ್ಥಿಗಳಿಗೆ ವೇಳದಿರನುಭವಾಮೃತವ (ಅಮೃತ. ೧೧-೨). ೨. ನಿರುದಯವು ನಿಷ್ಠುರವು ದುರುಳತ್ವ ಢಾಳಕವು (ಸುಸಾರ. ೦೨-೨). [ ಡಾಳ್₁ + – ಕ₃ ]

**ಡಾಳಕತನ**, ಢಾಳಕತನ (ನಾ). ಥಳುಕು; ವಂಚನೆ; ಮೋಸ: ಕಾಳಗ ಕಿದಿರಾಗಿ ನಿಲ್ಲಲಾಜದ ಚಿಣ್ಣ ಡಾಳಕತನದೊಳೋಡುವವನು (ಪ್ರಾಚಿತ. ೧೨-೩೧). **ಢಾಳಕತನ**: ನಾವು ನಮ್ಮಯ ಸೇವಕಾಂಗದ ಭಾವದಿಂದಿರ ಬೇಕೆನುತ ನಾನಾ ವಿಧದ ಢಾಳಕತನಂಗಳ ನುಡಿದನಲ್ಲಮನು (ಪ್ರಭುಲೀ. ೩-೩೬): ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಢಾಳಕತನದಿಂ ಢಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩): ಠಕ್ಕು ಢಾಳಕತನ ಬಜಬೋಸರಣೆ ಬೇಳಕ್ಕೆ ವೈಶಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಶಿಂಗಾಸಾಂ. ೨೮-೭೦). [ ಡಾಳಕ + – ತನ ]

**ಡಾಳಕವಂತ** (ನಾ). ತೋರಿಕೆಯ ನಡೆನುಡಿಯುಳ್ಳವನಂ; ಮೋಸಗಾರ; ವಂಚಕ: ನೇಣು ಕೊಂದಿತ್ತಂದಾ ದಾಯಗಾರಿಕೆಯಲ್ಲಿ ಹೋಹ ದರ್ಶನ ಡಾಳಕವಂತಂಗೆ (ಸರ್ವಪ. ೧೩೧-೬೬೦). [ ಡಾಳಕ + – ವಂತ ]

**ಡಾಳಕಿ**, ಢಾಳಕಿ (ನಾ). ಗಯ್ಯಾಳಿ; ಮೋಸಗಾತಿ: ಸಗ್ಗಂಬಡದು ಬಂದ ಪ್ರತ್ಯಕ್ಷಮಿಲ್ಲೆನಬಹುದೆ ಈ ಡಾಳಕಿ (ಸಮ್ಯಕ್ತ್ವ. ೪-೬೩). **ಢಾಳಕಿ**: ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಢಾಳಕತನದಿಂಢಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩). [ ಡಾಳಕ + – ಇ₂ ]

**ಡಾಳಯಿಸು₁**, ಡಾಳಯ್ಸು, ಡಾಳವಿಸು, ಡಾಳಿಸು₁, ಡಾಳ್ಯಿಸು₁, ಢಾಳವಿಸು, ಢಾಳಿಸು₁, ಢಾಳ್ಯಿಸು (ಕ್ರಿ). ೧. ಮಿಂಚು; ಹೊಳೆ; ಮಿನುಗು; ಥಳಥಳಿಸು. **ಡಾಳಯ್ಸು**: ೧. ಕದಪುಗಳು ನಿರ್ಮಳವೊದಗಿ ಡಾಳಯ್ಸು[ಪಾಠಾಂ. ಢಾಳ್ಯಿಸು]ತಿಪ್ಪವು ಲೋಲಲೋಚನೆಯ (ಬಸವು. ೪-೨೩). **ಡಾಳವಿಸು**: ೧. ಡಾ[ಪಾಠಾಂ. ಢಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ (ಬಸವು. ೩-೨೭). **ಡಾಳಿಸು₁**: ೧. ನೀಲದ ಸರ ಮಾಣಿಕದ ಕುಚ್ಚು ವಜ್ರದ ಮೇಲುಗೊಂಚಲು ವೈಡೂರ್ಯ ಡಾಳಿಸುತಿಹ ಬಲು ಪಸರದಂಗಡಿಗಳು ಸಾಲುಗೊಂಡೆಸೆದುವು (ಶಂಕವಿ. ೬-೬೮): ಲೀಲೆಯಿಂ ನರಸಿಂಹನಂತ್ಯದಿದ ರತ್ನ ಡಾಳಿಪೋಲಗದ ಚಾವಡಿಗೆ (ಶಂಕವಿ. ೧೦-೦೨೩): ಭಾಸುರ ವೇದಮಾತೆ ಗಾಯತ್ರಿ ಡಾಳಿಸೆ ಶಾಲ್ದು (ಕುಮಾಕು. ೦-೭೦). **ಡಾಳ್ಯಿಸು₁**: ೧. ಕದಪುಗಳು . . . ಡಾಳ್ಯಿಸು[ಪಾಠಾಂ. ಡಾಳಯ್ಸು, ಢಾಳ್ಯಿಸು]ತಿಪ್ಪವು ಲೋಲಲೋಚನೆಯ (ಬಸವು. ೪-೨೩): ಎಳಲಿಟ್ಟು ಡಾಳ್ಯಿಸುತಿಹ ಹಾರವೆಲ್ಲವುಂ ಸಂತೋಷದಿಂ ಪರಿದು ಪಸರಿಸಲು (ವೀಕ್ಷ್ಮ. ೩-೦೩-೭). **ಢಾಳವಿಸು**: ೧. ಢಾ[ಪಾಠಾಂ. ಡಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖ ಪ್ರಸನ್ನತೆ (ಬಸವು ೩-೨೭). **ಢಾಳಿಸು₁**: ೧. ಶಾಲಿಯ ತೆರೆಯ ತಟ್ಟುಬ್ಬಿ ದೀವದ ಕಾಂತಿ ಢಾಳಿಸುವಂತೆ ಲೋಕದೊಳು ಆ ಲಲಿತಾಂಗನ ತನುಕಾಂತಿ ಪೊದೆದದುಕೂಲದ ಹೊಜಿಗೆ ರಂಜಿಸಿತು (ಭರತೇ. ೦-೪೨): ಮೇಲಿಪ್ಪ ಚಿನ್ನದ ಕಳಶದಿಂ ಗೋಪುರ ಢಾಳಿಸಿ ತುಡುಕಿತಂಬರವ (ಶಂಕವಿ. ೭-೮೪). ೨. ಪ್ರಕಾಶಗೊಳಿಸು; ಹೊಳಪುಮಾಡು; ಬೆಳಗಿಸು: ಬಾಲಶಶಾಂಕನಂದದ ಪುಲಿಯುಗುರನು ಢಾಳಿಪ ಬಂದಿ ರಂಜಿಸಿತು (ಅಂಜನ. ೪-೪೪). ೩. ಉಜ್ಜಿ ಹರಿತವಾಗಿಸು; ಮಸೆ; ಸಾಣೆಹಿಡಿ: ಕುಂತದ ಧಾರೆಗಳ ಢಾಳಿಸುವ ನೆಜ ಸೊಪ್ಪಾದ ಹಿರುಕಿನ ಗಜೆಯ ಕೀಲಿಸುವ . . . ವೀರಭಟರೊಪ್ಪಿದರು (ಕುಮಾ.ರಾ. ೩-೩೮). **ಢಾಳ್ಯಿಸು**: ೧. ನೀಲಗಿರಿಯೊಳಗಾಡುವ ಶಿಶುಗಳೆರಡಾಲಿಂಗಿಸಲು ಭೂಮಿಯು ಢಾಳ್ಯಿಸುತಡರ್ದುರಿಗಳಿಂ ನಕ್ಷತ್ರಮಾಲೆ ಪಗಲೊಳ್ ತೋರ್ಪುದು (ಕೃಕಥ. ೮೯-೩). [ ಡಾಳ್₁ + – ಇಸು₃ ]

**ಡಾಳಯಿಸು₂** 'ಡಾಳಿಸು₂' ನೋ.

**ಡಾಳಯ್ಸು** 'ಡಾಳಯಿಸು₁' ನೋ.

**ಡಾಳವಿಡಿ** (ಕ್ರಿ). ಉಜ್ಜಿ ಬೆಳಗಿಸು; ಮೆರುಗುಕೊಡು: ಬಗೆಗೊಳಿಪ ಡಾಳವಿಡಿದಿರ್ದ ಕಟ್ಟಾಣಿಮುತ್ತಿನ ಕಂಠಮಾಲೆ (ಸೌಂದಕು. ೪-೨೨). [ ಡಾಳ್₁ + ಪಿಡಿ₁ ]

**ಡಾಳವಿಸು** 'ಡಾಳಯಿಸು₁' ನೋ.

**ಡಾಳಾಹಿ** (ಕ್ರಿ). ಹೊಳೆಯುವ ಮೈಯನ್ನುಳ್ಳ ಹಾವು; ಕೃಷ್ಣಸರ್ಪ (?): ಪೊಲೆಪುತ್ರುಗಳ ಬಳಿಯೊಳು ಡಾಳಾಹಿ ಕಣ್ಣೊಳಿಸದೆಯುವ ನಿಕ್ಷೇಪ ನೆಲೆಯೆಂದು ವಿಟರು ಸೆಳ್ಳುಗುರ್ಗಳಿಂ ತೊ[ತೋ]ಡುವರೆಳಸಿ ಗಣಿಕೆಯರ ಕುಚವ (ಗೊಮ್ಮಟ. ೨-೯೩).

[ P ಇದು 'ಕಾಳಾಹಿ'ಯ ಅಪಲಿಖಿತವಿರಬಹುದು ]

**ಡಾಳಿ₁** (ನಾ). = ಡಾಳೆ: ಪ್ರಾಣೇಶನಂ ನೆರೆದಂತೆ ಕಳುಪಿ ತತ್ ಕಾಲರತಿ ಚಿಹ್ನಮುಂ ಮತ್ತೂರ್ವನೊಳ್ ಪುಸಿದು ಡಾಳಿಯೊಲಿದಿಂತಿರ್ದಳು (ಹುಬ್ಬು. ೧೧-೬೪). [ ಡಾಳ್₁ + – ಇ₂ ]

**ಡಾಳಿ₂** 'ದಾಟಿ' ನೋ.

**ಡಾಳಿಂಬ** 'ದಾಳಿಂಬ' ನೋ.

**ಡಾಳಿಂಬೆ** 'ದಾಳಿಂಬ' ನೋ.

**ಡಾಳಿಂಬ್ರ** 'ದಾಳಿಂಬ' ನೋ.

**ಡಾಳಿಮ** 'ದಾಳಿಂಬ' ನೋ.

**ಡಾಳಿಸು₁** 'ಡಾಳಯಿಸು₁' ನೋ.

**ಡಾಳಿಸು₂**, ಡಾಳಯಿಸು₂, ಡಾಳ್ಯಿಸು₂, ಢಾಳಯಿಸು, ಢಾಳಿಸು₂ (ಕ್ರಿ). ೧. (ಚಾಮರ, ಬೀಸಣಿಗೆ ಮುಂತಾದುವನ್ನು) ಬೀಸು; ಗಾಳಿ ಹಾಕು: ಅಂಗಜನ್ನಮಂಗೆ ಬನಮಂಬಂಗನೆ ಡಾಳಿಸುವ ಚಾರುಚಾಮರಮ ದೆನಲ್ . . . ಎಸೆದುದಲ್ಲಿ ಪೂಗಮಹೀಜಂ (ಅಜಿತಪು. ೯-೦೬): ಚಕಚಕಿತಮಾಗಿ ಡಾಳಿಪ ಚಾಮರಂಗಳಿಂ (ಜಗನ್ನಾ. ೩-೩೦): ಗಾಯತ್ರಿ ಸಾವಿತ್ರಿಯರು ರಂಜಿಸಿದರಾ ಮಹಾದೇವನೆಡಬಲದಲ್ಲಿ ಡಾಳಿಸುತ ಚಾಮರವನೆಸಕದಿಂದ (ಸೌಂದಕು. ೦-೩೩): ನೀಲಗಿರಿಯ ಮೇಲೆ ಮುಸುಕಿದ ಸಿತಮೇಘಜಾಲವೆಂದೆನೆ ಡಾಳಿಸುವ ಮೇಲುಪ್ಪವರಗಳು ಮೆಜೆದವು (ಶಿಂಗಾಸಾಂ. ೪೨-೪೪): ಬೆರಳ ಮುದ್ರಿಕೆಯ ಹೊಳಹು ದೊಜಿಂತ ಶುಭ್ರಚಮರವ ಡಾಳಿಸುತಿಳೆವೆಂಗಳೆಸೆದರರ್ತಿಯಲಿ (ಶಂಕವಿ. ೮-೨೪). ೨. ಸುತ್ತಲೂ ಬೀರು; ಹರಡು; ವ್ಯಾಪಿಸು: ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಸಿ ಕಣ್ಮಟ್ಟು ಮೋಹನವ ಡಾಳಿಸುವ ನಾಡು (ದ್ರಾ.ಕ್ಷಿರಾ. ೩-೩). ೩. (ಪಗಡೆಯ ದಾಳವನ್ನು) ಬೀಸಿ ಹಾಕು; ಎಸೆ; ಉರುಳಿಸು: ಕಾಲೋಚಿತ ಕಿತವರನನ್ಯತಾಲಯರಂ ಪೊರೆಗೆ ಕರೆದು ಪಾಬಂದವನೊಲ್ದಾಳೋಚಿಸಿ ಡಾಳಿಸಿದಂ ಸೋಲಕ್ಕಿರ್ದಕ್ಷಯುಗಳವಂ ನಳಭೂಪಂ (ನಳಚಂ. ೩೦೫): **ಡಾಳಯಿಸು₂**: ೧. ಇಕ್ಕೆಲದಾಲವಟ್ಟಂ ಚವರ ಕುಂಚಂ ಡಾ[ಪಾಠಾಂ. ಢಾ]ಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು (ಬಸವು. ೬೦-೩೦): ಡಾಳಯಿಸುತಿಹ ಕನಕ ಚಾಮರದೋಳಿ (ಶಂಕರಾ. ೯-೨೨). **ಡಾಳ್ಯಿಸು₂**: ೧. ಬಾಲೆಯರು ಬಣ್ಣಿಸಿ ಚಮರವ ಡಾಳ್ಯಿಸುತ ಬಂದರು (ಶ್ರೀಪಾಂ. ೦೩-೦೮೭). **ಢಾಳಯಿಸು**: ೧. ಚವರ ಕುಂಚಂ ಢಾ[ಪಾಠಾಂ. ಡಾ]ಳಯಿಸೆ (ಬಸವು. ೩೦-೩೦). **ಢಾಳಿಸು₂**: ೧. ಢಾಳಿ

ಸುವ ಚವರಿ ಸೀಗುರಿಗಳೊಗ್ಗಿನ ಕುಣುಹುವಿಡಿದು ನಡೆದು (ಹಚಶಾ. ೯-೭೦) ; ಲೋಚನವೃತ್ತಿಕೆಗಳು ಢಾಳಿಸುತಿರ್ಪ ಚಮರಗಳೆಂಬಂತೆ ಖೇಚರ ಭೂಚರಸತಿಯರ ಕಣ್ಣ ಮರೀಚಿಯೊಪ್ಪಿದುವೀಶ್ವರಗೆ (ಶ್ರೀಪಾಂ. ೧೪-೮೦) : ನಳಿನಮುಖಿಯರು ಚವರಗಳನೆಡಬಲದೊಳಗೆ ಢಾಳಿಸುತಿಯ್ತರಲು (ಕುರಾಸಾಂ. ೧೦-೭೦) ; ಎತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಂಗಳಿಂ (ಛಲಹ. ೩-೮೦): ಚಂದ್ರಾದಿತ್ಯರುಭಯಚಾಮರಗಳಂ ಹಿಡಿದು ಢಾಳಿಸೆ (ಹಬಪು. ೨-೩೦). ೪. ಅಲುಬು ; ತೊಳೆ ; ಜಾಲಾಡಿ ಹೊಳೆಯುವಂತೆ ಮಾಡು : ಅಱಿಪೆಂಬ ಮೂಸೆಯೊಳಗಿಟ್ಟು ಪರಮ ಜ್ಞಾನದಿಂ ಕರಗಿಸಿ ಸುಮನವೆಂಬ ನಿರ್ಮಲೋದಕದಲ್ಲಿ ಢಾಳಿಸಿದ ಶುದ್ಧ ಸುವರ್ಣ (ಅದಪ. ೦೩೮). [ ಡಾಳ್₃ + – ಇಸು₃ ]

ಡಾಳು 'ಡಾಲು₃' ನೋ.

ಡಾಳೆ, ಢಾಳೆ (ನಾ). ಮೋಸಗಾರ್ತಿ ; ವಂಚಕಿ ; ಥಳುಕುಗಾತಿ ; ಗಯ್ಯಾಳಿ : ಮಯ್ಯನೆ ಮಾಱುವಾಕೆ ಭವಮಂ ಪೇಟ್ ಮಾಱಳೇ ಸಂತೆಯೊಳ್ ಧನಕಾನಾಱಿನಿವಳ್ಗೆ ದೈವವಱಿಗಿನ್ನೀ ಸೂಳೆಯುಂ ಡಾಳೆಯುಂ (ರೀಲಾವ. ೨-೦೦೩) ; ಚಂಡಪ್ರದ್ಯೋತನೆಂಬರಸಂ ಆಕೆಯನೆಱೆದುಕೊಳ್ವೆನೆಂದು . . . ತನ್ನ ಪೆರ್ಗಡೆಗಳಂ ಡಾ[ಪಾಠಾಂ. ತಾ] ಳೆಯರಪ್ಪ ಸಖ್ಯವದ ಪೆಂಡಿರುಮಂ ಪ್ರಭಾವತಿಯಲ್ಲಿಗಟ್ಟಿ (ಜೀವಸಂ. ೨೨೭-೩೩ ಪ) : ಆಟ ನೇಹವಂ ಮೆಱೆದು ಹೊಳ್ಳಿಸಿ ಬಟ್ಟವೆನೆಂಬ ಡಾಳೆಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ದೊಟ್ಟಿಡುವುದು (ಅನಂಪು. ೮-೩೭) ; ಕೂರಾನೆ . . . ದಾಂಟುವುದಿಡುಗುಡ್ಡಗಳ ಗಿರಿಗಳನಿಕ್ಕಿ ದಾಂಟುವ ಡಾಳೆಯುಂದದೊಳು (ಛರಹ. ೩೭-೭೩). ಢಾಳೆ: ಇಳಿಕೆಯುಮ್ಮದು ಹೊಳ್ಳಿಸಿ ತಿಂಬ ಢಾಳೆಯಂ (ಪಾಧಪು. ೦೫-೦೦೭) ; ಪುಸಿಯಳಿಪಂ ನಿಮಿರ್ಚೆ ತಮಗಿಲ್ಲದ ದೇಂಟಮನುಂಟುಮಾಡಿ . . . ಮುಟ್ಟದ ಮುನ್ನಮೆನ್ನರಂ ದೆಸೆವಲಿಗೆಯ್ವರೇನೋ ಕಡು ಢಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮಾಮ. ೨-೦೦೩) : ಮುತ್ತಿನ ಹಾರವ ಕಳ್ದರೆಂದೆಮಗಾಪತ್ರನೆನಿಸಿದ ಢಾಳೆಯನು ಅತ್ತಿತ್ತ ಹೋಗದಂದದಿ ಕಾದುಕೊಂಡಿರಿ (ಪ್ರಭಂಜ. ೦-೦೭೯).

[ ಡಾಳ್₁ + – ಎ₂ ]

ಡಾಳೆವೆಂಡತಿ (ನಾ). ಧೂರ್ತಳಾದ ಹೆಣ್ಣು ; ಹಾದರಗಿತ್ತಿ : ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಱಿವ ಜಾತಿ ಜಾಯಿಲಂಗಳಂ (ಅನಂಪು. ೨-೩೦ ಪ).

[ ಡಾಳೆ + ವೆಂಡತಿ (<ಪೆಂಡತಿ) ]

ಡಾಳೈಸು₁ 'ಡಾಳಯಿಸು₁' ನೋ.

ಡಾಳೈಸು₂ 'ಡಾಳಿಸು₂' ನೋ.

ಡಿಂಕಿಸು (ಕ್ರಿ). (?) : ಉತ್ತರಗುಣಂಗಳವನಲ್ಪಮನಾಂ ಡಿಂಕಿಸದೆ ನೆನಪದಱ ನನಾಚಾರಂಗಳಂ (ಚಕ್ರಳ. ೨-೦೩) . [ ? ]

ಡಿಂಗರ (ನಾ). ೧. ಸೇವಕ ; ಅಡಿಯಾಳು ; ಕಿಂಕರ ; ಭಕ್ತ : ಪಾರ್ವರೆಂದೊಡೆ ಪಾಪಂ ಬಿಡೆ ಪೋಪಂತದು ಪೇಟಾ ತುಡುಗುಣಿಯೋ ಶಿರಿವ ಗೊರವನೋ ಡಿಂಗರನೋ [ಪಾಠಾಂ. ಪೇಟವಿದಂ] (ಸಮುಪ. ೦೦-೮೮) : ಹರಹರಗಳೆಂಬಂ ಭಕ್ತರ ಕರುಣವೆ ಶರಣೆಂಬ ಶಿವನ ಡಿಂಗರನೆಂಬಂ ಹಿರಿಯಣ್ಣ ಸಾವಿದೇವನ ಪರಮಾನುಜ್ಞೆಯನೆ ತಾಳ್ದಿದಂ ಮುದ್ದರಸಂ (ಸಾಇಇ. IX-1, ೨೯೭-೩೦ ; 1177) ; ಕುಲವುಳ್ಳ ನರಂ ಪೆಱರೆಂಜಲನುಂಡುದೆಲ್ಲಮುವನ ಡಿಂಗರನೆಂಬರು ಸಲೆಯಡಗಂ ನಾಯೆಂಜಲ ನಲಿದಲಸದೆ ತಿಂದೆಂದು ನಾಯ ಡಿಂಗರನಲ್ತೆ (ಪಸಾರ. ೫೯೮-೧೪). ೨. ವಂಚಕ ; ಮೋಸಗಾರ; ಠಕ್ಕ. ೩. ನೀಚ ; ಅಲ್ಪಮನುಷ್ಯ ; ಕ್ಷುದ್ರ. ೪. ಬೊಜ್ಜು ದೇಹವುಳ್ಳವನು ; ದಪ್ಪವಾದ ಶರೀರವುಳ್ಳವನು ; ಸ್ಥೂಲಕಾಯ ; ಕೊಣಪ. [ ಸಂ. ]

ಡಿಂಗರಿಗ (ನಾ). = ಡಿಂಗರ ೧ : ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯ (ಬಸವ. ೪೩೪) ; ಶಿವನ ಡಿಂಗರಿಗನಡಗಿರ್ದ ಗುಹೆಯಾದುದು ನೋಡ (ಜದರ. ೦೩೩-೨೨) ; ಸಕಲಕ್ಕೆ ರಾಜಾಧಿರಾಜನಾ ತ್ರ್ಯಂಬಕಂ ತ್ರಿಪುರಾರಿಯಾತಂಗೆ ಡಿಂಗರಿಗರಂಬುಜಭವಾಚ್ಯುತ-ದ್ಯುಮಿಲರು (ಪದ್ಮರಾ. ೦೮-೪೦) ; ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ಅಳುಕಿ ಕೂದಲು ಹಱಿದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕುವ್ಯಾಭೀ. ೬-೪೩) ; ಡಂಗುರವ ಸಾಱಿ ಹರಿಯ ಡಿಂಗರಿಗರೆಲ್ಲರು ಭೂಮಂಡಲಕೆ ಪಾಂಡುರಂಗವಿಟ್ಠಲ ಪರದೈವವೆಂದು (ಪುರಂದ. ೦-೩೩-೦) ; ಸಂಗೀತಲೋಲ ಶಿರಿ ವಿಜಯವಿಠಲರೇಯನ ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು (ವಿದಾಸು. ೮೭-೦); ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ (ಸಂಕುಸ. ೪೩); 'ಶನಿಯ' ಎಂಬ ಅರ್ಥವಾನುಷ ಕಿಂಕರನೂ ಕಿನ್ನರವರ್ಗಕ್ಕೆ ಸೇರಿದ ಒಬ್ಬ ಅತಿಮಾನುಷ ಡಿಂಗರಿಗನೂ ಇದ್ದರು (ದಿಗಾಳ. ೭).

[ ಡಿಂಗರ + – ಇಗ ]

ಡಿಂಗಿ (ನಾ). ದೋಣಿ ನಡೆಯಲು ಹಾಯಿಬಟ್ಟೆಯನ್ನು ಹಗ್ಗಗಳಿಂದ ಬಿಗಿಯಲು ಉಪಯೋಗಿಸುವ ಕೂವೆಮರ ; ಕೂಪಕ. 'ಡಿಂಗಿದೋಣಿ' ಪರಾ. [ ←ಪಾಕ. ಡಿಂಗೀ ]

ಡಿಂಗಿದೋಣಿ (ನಾ). ಹಾಯಿ ಕಟ್ಟಿದ ದೋಣಿ; ಕೂವೆಮರವುಳ್ಳ ದೋಣಿ : ನದಿಯ ಮಧ್ಯ ಸರಿಯಾಗಿ ಒಂದು ಡಿಂಗಿದೋಣಿ ವೇಗ ಪ್ರವಾಹದಲ್ಲಿ ಓಡುತ್ತಿದೆ (ನಿಬಂಧ. II, ೨೦೭). [ ಡಿಂಗಿ + ದೋಣಿ₂ ]

ಡಿಂಗು₁ (ನಾ). ಒಂದು ಕ್ಷುದ್ರ ದೇವತೆ: ಗಾಡಿಗ ಡಿಂಗು [ಪಾಠಾಂ. ಬು] ಗಂಗೆ ಥಕ್ಕ ಮುಟ್ಟಗೆ ಹಸುರಂಬಲಿ ಮುಟ್ಟಗೆ ಹುರಿಬುತ್ತಿಯ ಬೇಡಿ ಮನುಷ್ಯರ ಹಿಡಿದು ಕಾಡಿಸಿ ತಮ್ಮ ಬಸುರ್ಗೆ ಕಾಣದೆ ಈಹಾಡಿದ ಕೂಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡವೇಡ (ಜಪಾ. ೩೩೭). [ ? ]

ಡಿಂಗು₂ 'ಧಿಂಗು' ನೋ.

ಡಿಂಡ 'ದಿಂಡ₄' ನೋ.

ಡಿಂಡಲ 'ದಿಂಡ₁' ನೋ.

ಡಿಂಡಿಗ 'ದಿಂಡ₁' ನೋ.

ಡಿಂಡಿಮ (ನಾ). ೧. (ಡಿಮ್, ಡಿಮ್ ಎಂಬ ಶಬ್ದಮಾಡುವ) ಒಂದು ಬಗೆಯ ಚರ್ಮವಾದ್ಯ ; ಡವುಡೆ : "ಡಿಂಡಿಮವೆನಲು ಮೊರೆವ ಢೌಡೆಯುನಿಕ್ಕು" (ಮಂಗರಾ. ೨೪-೭); ಡಿಂಡಿಮರವದೊಳ್ ವನವೇತಂಡಮನೆಚ್ಚರಿಸುತಿರ್ಪವೊಲ್ (ಕಾದಂಪೂ. ೦೪೭); ಎಱಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್ (ಎಕ. V, ಅರಸೀ. ೦೩೮-೩೦; 1176); ಕೋಟಿ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟಿ ಹೊಟ್ಟಿತು (ಳಾಕಿರಾ. ೨೪-೪). ೨. [ಛಂದ] ಒಂದು ವೃತ್ತದ ಹೆಸರು : (ಕ). [ ಸಂ. ]

ಡಿಂಡೀರ (ನಾ). ಕಡಲನಾಲಗೆ ; ನೊರೆ ; ಫೇನ ; ಬುರುಗು: "ಘನತರ ಫೇನಂ ಡಿಂಡೀರ ನಾಮಂ" (ಚಉತ್ಕೋ. ೨೨-೪). "ಡಿಂಡೀರಮನೆ ಫೇನಮನೆ ನೊರೆಯುಕ್ಕು" (ಮಂಗರಾ. ೦೨೩-೦೨); "ಡಿಂಡೀರಃ, ಅಬ್ಧಿಕಫಃ, ಫೇನಃ – ಸಮುದ್ರದ ನೊರೆ" (ಸಿದ್ಧಾಂತಿ. ೩೩೨) ; ಡಿಂಡೀರಾವಳಿ ಶಂಖವಲ್ಲರಿಯಿಂ . . . ವಿದ್ರುಮಂ ಚಂಡೌರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪ ಮಹಾಂಭೋಧಿಯಂ ಕಂಡು (ಜಗವಿ. ೭-೦೭) ; ಸಚರಾಚರವ್ರಾತ ತೋಱಿ ತೋಱಿಯುಡುಗುವವೊ ಡಿಂಡೀರನಿಕರದವೋಲು (ನಿಜಾಗ. ೦೦-೦೪-೨೩); ಡಿಂಡೀರ ಪಿಂಡೌಘ ಮಂಜುಳೆಯಂ ಪೆಂಪಿನ ಲಂಪನಾಳ್ವ ಪೊಳೆಯಂ ಪೇಳ್ಪಣ್ಣಸಲ್ಪರ್ಕುಮೋ (ರಾಜಶೇ. ೨-೯).

[ ಸಂ. ]

**ಡಿಂಡೀರಪಾಂಡುರ** (ಗು). ನೊರೆಯಂತೆ ಬೆಳ್ಳಗಿರುವ,–ಬಿಳುಪಾದ : ನಿರವದ್ಯಾನ್ವಯನುದ್ಧಮುದ್ಧತ ಮಹಾಕ್ಷೀರಾಬ್ಧಿ ಡಿಂಡೀರಪಾಂಡುರಂ . . . ನೆರೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೩೬). [ ಡಿಂಡೀರ + ಪಾಂಡುರ ]

**ಡಿಂಡೀರಪಿಂಡ** (ನಾ). ನೊರೆಯ ಮುದ್ದೆ,–ಉಂಡೆ ; ಫೇನರಾಶಿ : ಏಕಾವಳೀವಿಳಾಸಾವಹಸಿತಾವ್ಯಾವೃತ ಡಿಂಡೀರಪಿಂಡಪಾಂಡುರಂ (ಶಾಂತಿಪು. ೬-೦೩ ವ): ಕಂಡರಿಸಿ ಪಳುಕಿನಿಂದಮಖಂಡಿತಶೌಚಗುಣ ಸುರನದೀಸಮುಹ ಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಳಚಂದ್ರ ವ್ರತಿಯಾ (ಮಲ್ಲಿಪು. ೧೦-೧೩೬). [ ಡಿಂಡೀರ + ಪಿಂಡ ]

**ಡಿಂಬ** (ಗು). ೧. ಅಲ್ಪವಾದ ; ಸಣ್ಣದಾದ. 'ಡಿಂಬಾಹವ' ಪರಾ. (ನಾ). ೨.ಮೈ ; ದೇಹ; ಶರೀರ: ಸಂಸಾರ ಮಾಯೂಪಾಶವ ಬಿಡಲೊಲ್ಲದೆ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ (ಬಸವ. ೧೦-೨೫); ಕುಂತೀ ಮಕ್ಕಳೊಂದೊಡೆ ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವದಿರಲಿ (ಕುಮಾ.ಭಾ. ೩-೧೮) ; ಎವೆ ವಿಡುಕದವನಿವರು ಪೀಠಾವಳಿಯೊಳಿರ್ದರು ಬಳಿಯ ಡಿಂಬದೊಳು (ಜೀವಂಧ. ೮-೬೦) ; ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಿಹೋಯಿತು (ಪುರಂದ. ೧-೧೧೨-೩) ; ಈಸು ಪೊತ್ತೇಕೆ ಪವಡಿಸಿದನೆಂದೆಬ್ಬಿಸಲ್ ಶ್ವಾಸವಿಲ್ಲದ ಡಿಂಬವಿರೆ··ಕಂಡು (ಜಬಪು. ೬-೨೩) ; ವಿಷಯಂಗಳಿಗೆ ಕಿವಿ ಜೋತುಬಿದ್ದು ಈ ಡಿಂಬವನ್ನು ವೋಷಿಸದಿರಲಿಲ್ಲ ಪ್ರಾಣ (ವಿದಾಳ್ಮ. ೯೮-೭). ೩. ಎಳೆವಯಸ್ಸಿನ ಮಗು ಅಥವಾ ಪ್ರಾಣಿ ; ಶಿಶು. ೪. ವಿಪ್ಲವ ; ದಂಗೆ ; ಲೂಟಿ. 'ಡಿಂಬ ಯುದ್ಧ' ಪರಾ. ೫. ಅತಿವೃಷ್ಟಿ, ಅನಾವೃಷ್ಟಿ, ಇಲಿಹೆಗ್ಗಣಗಳ ಕಾಟ, ಮಿಡಿತೆ, ಹಕ್ಕಿ ಮೊದಲಾದುವುಗಳ ಹಾವಳಿ ಮತ್ತು ಪರ ರಾಜರ ಮುತ್ತಿಗೆಗಳಿಂದಾಗುವ ತೊಂದರೆ ; ಈತಿಬಾಧೆ ; ಡಾಮರ: (ಕ). ೬. ಗೋಲಾಕಾರದ ವಸ್ತು ; ಉರುಳಿ; ಚೆಂಡು. ೭. ಮೊಟ್ಟೆ; ತತ್ತಿ. ೮. ದಿಬ್ಬ ; ತಿಟ್ಟು (?): ತಲೆ ಕಾಮನಗುಡ್ಡದ ಬೊಂಬೆಗಲ್ಲ ಮಂತ್ರ ಡಿಂಬದ ಮೇಲೆ ಬಗುತನ ಕಟ್ಟೆಗೆ ಬ (ಎಕ. III, ತಿರುಕು. ೬೩-೯೫: 1748). [ ಸಂ. ]

**ಡಿಂಬಯುದ್ಧ** (ನಾ). ೧. ಸಣ್ಣ ಕದನ ; ಕ್ಷುಲ್ಲಕ ಕಲಹ : "ಸಣ್ಣ ಸಣ್ಣ ಅಥವಾ ಹೊರವಳಯದಲ್ಲಿರುವ ಸೈನಿಕ ಪಂಗಡಗಳಿಗೆ ಅನಿಯತವಾಗಿ, ಮುನ್ನಿರೀಕ್ಷೆಯಿಲ್ಲದೆ, ನಡೆಯುವ ಹೋರಾಟ; ಡಿಂಬಯುದ್ಧ; ಸಣ್ಣಕಾದಾಟ, ಅಲ್ಪ ಕದನ, ಹೊಡೆದಾಟ; (ಬುದ್ಧಿವಂತಿಕೆ, ತರ್ಕ,ಮೊ. ಗಳ) ವಾಗ್ಯುದ್ಧ" (Skirmish. ಇಂಕನಿ.). ೨. ದಂಗೆ ; ಲೂಟಿ ; ಕೊಳ್ಳೆ. 'ಡಿಂಬಾಹವ' ಪರಾ. [ ಡಿಂಬ + ಯುದ್ಧ ]

**ಡಿಂಬಾಹವ** (ನಾ). = ಡಿಂಬಯುದ್ಧ ೨ : (ರೀಪ್). [ ಡಿಂಬ + ಆಹವ ]

**ಡಿಂಬು** (ನಾ). ೧. ಮೈ ; ದೇಹ ; ಶರೀರ : ಕುಂಭಿನಿಪತಿ ನಮ್ಮ ವಿಜಯವಿಠಲರೇಯ ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ (ವಿಜಾಸು. ೩೧-೪). ೨. ಸ್ವಲ್ಪ ಎತ್ತರವಾದ ಸ್ಥಳ ; ದಿಬ್ಬ ; ತಿಟ್ಟು : ಆ ಮಹಾ ರಭಸಕ್ಕೆ . . . ಪರ್ವತದಾ ಮಹಾಡಿಂಬಿನಲ್ಲಿ ಪಾಂಡುವಿನರಸಿ ನಡುಗಿದಳು (ಸಂಭಪ ೧೫-೭೩). ೩. ದೀಪದ ಆಧಾರ ; ದೀಪವನ್ನಿಡುವ ಸಣ್ಣ ಪೀಠ : (ಕ). [ <ಸಂ. ಡಿಂಬ ]

**ಡಿಂಬೆ** (ನಾ). ಮೂಗಿನ ಹೊರಳೆಗಳ ನಡುವಿನ ಸಿಂಬೆ (?) : ತುಂಬಿದ ಕಾನಗಳೆರ ಬನ್ನಿ ರಾಯನ ತುಂಬಿದ ಬವರಿಗಳಂತೆ ಕೆಂಬಲ್ಲ ಥಾಳದಂತರಸನ ಮೂಗಿನ ಡಿಂಬೆಯಂತೆಂದು ಪಾಡಿದಳು (ಭರತ. ೦೦-೬೦). [ ? ]

**ಡಿಂಭ** (ನಾ). ೧. ಆಗ ತಾನೆ ಹುಟ್ಟಿದ ಕೂಸು ಅಥವಾ ಪ್ರಾಣಿಗಳ ಮರಿ: ಒಗರು ಚಿಗುರುಗಳುಂಡ ಪಿಕ ಡಿಂಭಗಳು ಚದುರುತ ನುಡಿವವೋಲ್ (ಅನಂತಾ. ೨-೧-೩೮). ೨. ಮೈ ; ದೇಹ ; ಶರೀರ : ಅಕ್ಕ ಮರುಳೌ ಚಿತ್ರವವಳಲಿ ಸಿಕ್ಕಿ ಬೇರ್ಪರಿಯಿತ್ತು ಬರಿದೇ ವಿಕ್ಕ ಡಿಂಭ[ಪಾಠಾಂ. ಬ]ಕೆ ಮದುವೆಯುಂಟೇ ಮನವ ಬೇಱರಿಸಿ (ಕುಮಾ.ವಿ. ೨-೪೬) : ಡಿಂಭದೊಳು ಶಬ್ದ ವಾಗಾದಿ ಶ್ರೋತ್ರಗಳಲ್ಲಿ ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರೊ (ಪುರಂದ. ೧-೨೧೫-೪) : ಡಿಂಭದೊಳು ಕಾಂಬುದೆಂದಸಮಗ್ರವಲ್ಲವಿದು ಕುಂಭದೊಳ ಗಡಗಿದ್ದರೂ ಅಲ್ಪವಲ್ಲ (ಮಹದೇ. ೩೭-೦). ೩. ತಿಳಿಗೇಡಿ ; ದಡ್ಡ ; ಮೂರ್ಖ. ೪. ಗರ್ಭಾಶಯ ; ಗರ್ಭಕೋಶ : ಡಿಂಭಗಳನೊಡೆದು ಬನ್ನಿ ಕಂಭಗಳನೊಡೆದುಬನ್ನಿ (ಗರಿ. ೫೩-೧೧). [ ಸಂ. ]

**ಡಿಂಭಕ** (ನಾ). = ಡಿಂಭ. [ ಸಂ. ]

**ಡಿಂಭೆ** (ನಾ). ಮಗು ; ಶಿಶು. [ ಸಂ. ಡಿಂಭಾ ]

**ಡಿಕಮಲಿ, ಡಿಕ್ಕಮಾಲೆ, ದಿಕಾಮಲಿ, ದಿಕ್ಕಾಮಲ್ಲಿ** (ನಾ). ಒಂದು ಬಗೆಯ ಮರ ಮತ್ತು ಆ ಮರದಿಂದ ತೆಗೆದ ಒಂದು ಗಂದಿಗದ್ರವ್ಯ: ಸೂರ್ತಿ ಚವಾಳಾ ಮಣದ ಮೇಲೆ ಕಿವ್ಮತ್ತು ಇರತಕ್ಕ ಜೀನಸಗಳು ೧ ಅಕ್ಕಲಖಾರ . . . ಡಿಕಮಲಿ (ಕಾರಿಂಗ) (ಮುಂಬಪ್ರಾ. ೧೨೫). **ಡಿಕ್ಕಮಾಲೆ:** ಕಡಲೆಕಾಳಿನಷ್ಟು ಡಿಕ್ಕಮಾಲೆಯನ್ನು ಹಾಲಲ್ಲಿ ತೇದು ಕುಡಿಸು ವುದು (ಚುಕವು. ೮). **ದಿಕಾಮಲಿ :** ಬಿಕ್ಕಗಿಡ, ದಿಕಾಮಲಿ, ಕಂಬಿಮೇಣ (ಮ್ಯಾಕಿರಿ. ೩೮-೬೬೦). **ದಿಕ್ಕಾಮಲ್ಲಿ :** (ಕ).
[ ←ಹಿಂ. ಡಿಕಾಮಾಲೀ; ಮರಾ.ಡಿಕಾಮಾಲೀ, ಡಿಕೇಮಾಲೀ, ಡಿಂಕೇಮಾಲೀ ]

**ಡಿಕಾ** 'ಡಿಕ್ರಿ' ನೋ.

**ಡಿಕಾವು** 'ದಿಪಾವು' ನೋ.

**ಡಿಕ್ಕಿ, ಢಿಕ್ಕಿ** (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. 'ಡಿಕ್ಕಿ ಹೊಡೆ' ಪರಾ. ೨. ಒಂದು ವಸ್ತುವು ಇನ್ನೊಂದು ವಸ್ತುವನ್ನು ಜೋರಾಗಿ ತಾಗುವುದು,– ಅಪ್ಪಳಿಸುವುದು, – ಘಟ್ಟಿಸುವುದು : ಮುಂಬಯಿಯಲ್ಲಿ ಇಂತಹ " ಡಿಕ್ಕಿ "ಗಳು ದಿನಾಲೂ ನೂರಾರು ಆಗುತ್ತವೆ (ಎಚಹ. ೦). ೩. (ಆಲಂ) ಮಾತಿನಲ್ಲಿ ಹೊಂದಾಣಿಕೆಯಿಲ್ಲದಿರುವುದು; ವಿರೋಧದ ಮಾತು : ಬೆಳಗಿನ ಹೇಳಿಕೆಯು ಸಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು (ಹನ್ನೊಂದ. ೬೭). **ಢಿಕ್ಕಿ :** 'ಢಿಕ್ಕಿಹೊಡೆ' ಪರಾ. [ < ಮ ]

**ಡಿಕ್ಕಿಕೊಡು** (ಕ್ರಿ). ೧. ಜೋರಾಗಿ ತಲೆಯಿಂದ (ಇನ್ನೊಬ್ಬನ) ತಲೆ ಯನ್ನು ಹಾಯು,–ತಾಗು,–ತಾಟಿಸು: ಅವನು ಓಡಿಬಂದು ನನ್ನ ತಲೆಗೆ ಡಿಕ್ಕಿಕೊಟ್ಟನು (ರೂಢಿ). ೨. ಇನ್ನೊಂದು ವಸ್ತುವನ್ನು ಜೋರಾಗಿ ತಾಗು,–ಅಪ್ಪಳಿಸು,–ಘಟ್ಟಿಸು : ನೋಡ ನೋಡುತ್ತಿದ್ದಂತೆ ವಾಹನ ಗಳೆರಡು ಡಿಕ್ಕಿಕೊಟ್ಟು ಕೆಳಕ್ಕೆ ಉರುಳಿದವು (ರೂಢಿ).
**ಡಿಕ್ಕಾಡಿಕ್ಕಿಕೊಡು** (ದ್ವಿರುಕ್ತಿ) : (ಕ). [ ಡಿಕ್ಕಿ + ಕೊಡು$_1$ ]

**ಡಿಕ್ಕಿಮಾಲೆ** 'ಡಿಕಮಲಿ' ನೋ.

**ಡಿಕ್ಕಿಹೊಡಿಸು** (ಕ್ರಿ). ತಲೆಯನ್ನು ಜೋರಾಗಿ ತಾಗುವಂತೆ ಮಾಡು ; ಘಟ್ಟಿಸುವಂತೆ ಮಾಡು: ಅವರು ಸಂತೋಷದಿಂದ ಆಡುತ್ತಿದ್ದಾಗ . . . ಜುಟ್ಟುಹಿಡಿದು ತಂದು ತಲೆತಲೆಗೆ ಡಿಕ್ಕಿಹೊಡಿಸುವನು (ವಕಥಾ. ೧೬). [ ಡಿಕ್ಕಿ + ಹೊಡಿಸು (<ಪೊಡೆಯಿಸು) ]

**ಡಿಕ್ಕಿಹೊಡೆ, ಢಿಕ್ಕಿಹೊಡೆ** (ಕ್ರಿ). ೧. = ಡಿಕ್ಕಿಕೊಡು ೧. 'ಡಿಕ್ಕಿಹೊಡಿಸು' ಪರಾ. ೨. = ಡಿಕ್ಕಿಕೊಡು ೨: ಒಂದು ದಿನ ಓದುತ್ತ ಹೋಗುತ್ತಿರುವಾಗ ದಾರಿಯಲ್ಲಿನ ಲೈಟು ಕಂಬಕ್ಕೆ ಡಿಕ್ಕಿ ಹೊಡೆದು ಹಣೆಯಲ್ಲಿ ಬೋರೆ ಬರಿಸಿಕೊಂಡ (ಶಾಲಮ. ೨೦೮) ; ನನ್ನ ಮುಖ ನೋಡದ್ರಾ ಬಂದರೆ ಯಾರಿ ಗಾದರೂ ಡಿಕ್ಕಿಹೊಡೆಯುತ್ತೀರ (ದೂಪಟ್ಕ. ೪೪). **ಢಿಕ್ಕಿಹೊಡೆ :** ೧. ಢಿಕ್ಕಿಹೊಡೆದೆನು ಪಂಜರದ ಕಂಭ ಮಾಡಕ್ಕೆ (ನವ್ಯದೃ. ೮೫). ೨. ಮೇಲ್ವಾ ಯ್ವುದಟ್ಲಾಂಟಿಕಾಂಭೋಧಿ ಪೆಸಿಫಿಕಂಬುಧಿಯೊಡನೆ ಢಿಕ್ಕಿಹೊಡೆದುಕ್ಕಿ (ಶ್ರೀರಾಮಾ. ೧೬೫-೩೫೭). [ ಡಿಕ್ಕಿ + ಹೊಡೆ$_1$ (<ಪೊಡೆ$_1$) ]

**ಡಿಕ್ರಿ, ಡಿಕರಿ** (ನಾ). (ನ್ಯಾಯಾಲಯದ) ತೀರ್ಪು,- ತೀರ್ಮಾನ : ಆದರೆ ಡಿಕ್ರಿಯು ಬೆಂಚಿನ ೩ ಜನ ಮೆಂಬರ ಹೆಸರಿನಲ್ಲಿಯೂ ಕೊಡಲ್ಪಡ ತಕ್ಕದ್ದು (ಗ್ರಾಮಾಕ. ೧೮). ಅಂತೂ ಕೋರ್ಟಿನಲ್ಲಿ ನಾಡಿದ್ದು ಅದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ (ಮಾಂಗಲ್ಯ. ೪೪); ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದುಬಿಡುತ್ತಾರೆ (ಕು ರು ಕಾ. ೩೪) ; ಕೋರ್ಟಿನಲ್ಲಿ ವಿವಾಹವಿಚ್ಛೇದನವಾಗುವಂತೆ ಅರ್ಜದಾರಳ ಪರ ಡಿಕ್ರಿ ಬಗ್ಗೆ ಪ್ರಾರ್ಥನೆ-ಅಂತ ಅರ್ಜಿಯಲ್ಲಿದೆ. (ಏಕಾಂಗಿ. ೨೦೪). **ಡಿಕರಿ :** ಮೋಸದಿಂದ ತನಗೆ ಬರಬೇಕಾಗಿಲ್ಲದ ಹಣಕ್ಕೆ ಡಿಕರಿ ಆಗುವಂತೆ ಮಾಡಿದರೂ (ಗ್ರಾಮಾಕ. ೩೪).
[ ←ಇಂ. Decree ]

**ಡಿಕ್ರಿದಾರ** (ನಾ). (ನ್ಯಾಯಾಸ್ಥಾನದಲ್ಲಿ) ತನ್ನ ಕಡೆಗೆ ತೀರ್ಪನ್ನು ಪಡೆದಿರುವ ವ್ಯಕ್ತಿ : ಸದರೀ ಸ್ವತ್ತನ್ನು ಹಿಡಿದು ಡಿಕ್ರೀದಾರನಿಗೆ ಒಪ್ಪಿಸು ವುದರ ಮೂಲಕ ಡಿಕ್ರಿಯನ್ನು ಜಾರಿಮಾಡಬಹುದು (ಗ್ರಾಮಾಕ. ೩೩).
[ ಡಿಕ್ರಿ + - ದಾರ₄ ]

**ಡಿಗರು** 'ದಿಗರು' ನೋ.

**ಡಿಗುರು** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (೬).
[<ಡೊಗರು ]

**ಡಿಗ್ರಿ** (ನಾ). ೧. (ಉಷ್ಣಮಾಪಕಯಂತ್ರದಲ್ಲಿ ಅಳೆಯುವ) ಉಷ್ಣದ ಅಳತೆ,-ಮಾನ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೩); ಜ್ವರ ಅಪರೂಪವಾಗಿ ೧೧೦ಕ್ಕಿ ಡಿಗ್ರಿಗಳಿಗಿಂತ ಹೆಚ್ಚಾಗಿ ಹೋಗುತ್ತದೆ (ಶಂಕೋ. ೪೨). ೨. [ಗಣಿತ] ಕೋನಮಾನ ; ಅಳತೆ ; ವೃತ್ತಪರಿಧಿಯ $\frac{೧}{೩೬೦}$ ನೆಯ ಭಾಗ : ಅವುಗಳ ಮೇಲೆ ಅಕ್ಷಾಂಶಗಳಂತೆ ಗುರುತು ಮಾಡಿರುವ ರೇಖೆಗಳು ಆಯಾ ಭಾಗಗಳ 'ಡಿಗ್ರಿ'ಯನ್ನು ಸೂಚಿಸುತ್ತವೆ (ಸೌಂದರ್ಯ. ೦೯). ೩. ವಿಶ್ವವಿದ್ಯಾ ನಿಲಯಗಳು ಕೊಡುವ ಪಾಂಡಿತ್ಯಪದವಿ; ವಿದ್ಯಾಪ್ರಶಸ್ತಿ: ನಮ್ಮ ಹುಡುಗ ಕಾಲೇಜಿನಲ್ಲಿ ಓದಿ ಡಿಗ್ರಿ ಪಡೆದಿದ್ದಾನೆ (೬). [ ←ಇಂ. Degree]

**ಡಿಟ್ಟಂ ಜಮಾಬಂದಿ, ದಿಟ್ಟಂಜಮಾಬಂದಿ** (ನಾ). " ಹುಜೂರು ಜಮಾ ಬಂದಿಗೆ ಮುನ್ನ ತಾಲ್ಲೋಕು ಅಮಲ್ದಾರರು (ತಹಸೀಲ್ದಾರರು) ಪೂರ್ವಭಾವಿಯಾದ ಲೆಕ್ಕಗಳ ತನಿಖೆಮಾಡಿ ಹುಜೂರು ಜಮಾಬಂದಿ ಲೆಕ್ಕಗಳನ್ನು ತಯಾರಿಸುವುದು " (ನನ್ನೂರು. ಕೋಶ) : ಡಿಟ್ಟಂ ಜಮಾ ಬಂದಿಯಲ್ಲಿ ಮತ್ತು ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನು ಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೫೨). **ದಿಟ್ಟಂಜಮಾಬಂದಿ:** ಚುಂಚನಕಟ್ಟೆ ಜಾತ್ರೆ, ಸ್ಟಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂಜಮಾಬಂದಿ, ಇವುಗಳೆಲ್ಲಾ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ (ಕಲಿತ. ೦೫೧)
[ ಡಿಟ್ಟಂ₀ + ಜಮಾಬಂದಿ ]

**ಡಿತ್ಥ** (ನಾ). ೧. ಮರದಿಂದ ಮಾಡಿದ ಆನೆ ; ಮರದಾನೆ. ೨. ಒಂದು ಸಂಜ್ಞಾಶಬ್ದ; ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವ, ಅವ್ಯುತ್ಪನ್ನ ವಾದ ಸಂಕೇತ ಶಬ್ದ: ಇವನು ಹೋಗುವವನು ಇವನು ಡಿತ್ಥನು ಎಂಬ ಅನುಭವಗಳಿಗೆ ಅನುಸಾರವಾಗಿ ಕ್ರಮವಾಗಿ ಜಾತಿವಿಕಲ್ಪ, ದ್ರವ್ಯವಿಕಲ್ಪ, ಗುಣವಿಕಲ್ಪ, ಕ್ರಿಯಾವಿಕಲ್ಪ ಮತ್ತು ನಾಮವಿಕಲ್ಪ ಎಂದು ಐದು ವಿಧ (ಭಾತತ್ತ್ವ. ೩೮೬). [ ಸಂ. ]

**ಡಿಪೊ** (ನಾ). (ಮಾರಲಿರುವ) ವಸ್ತುಗಳನ್ನು ಸಂಗ್ರಹಿಸಿರುವ ಮಳಿಗೆ,-ಉಗ್ರಾಣ : ರೇಷನ್ ಡಿಪೋಗಳಲ್ಲಿನ ಜನಸಂದಣಿಯಂತೆ ಜನಗಳ ನೂಕು ನುಗ್ಗಲು ನೋಡಿದರೆ ನಮ್ಮ ಎದೆ ಒಡೆದು ಚೂರುಚೂರಾಗುತ್ತದೆ (ನಾಡಿಗೇ. ೩೧). [ ←ಇಂ. Depot ]

**ಡಿಫ್ತೀರಿಯ** (ನಾ). (ಸಾಮಾನ್ಯವಾಗಿ ಮಕ್ಕಳಿಗೆ ಬರುವ) ಒಂದು ಬಗೆಯ ರೋಗ; ಗಳಚರ್ಮರೋಗ; ಲೋಳೆ ಸಂಕೋಲೆ. ೯ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನಗೊಂಡು ಅದರಿಂದ ಹೊರಟ ಸ್ರಾವವು ಕೃತಕ ಚರ್ಮದಂತೆ ಪರಿವರ್ತನೆ ಹೊಂದುವ ಒಂದು ಭಯಂಕರ ವ್ಯಾಧಿ :- ಡಿಫ್ತೀರಿಯದಿಂದ ನರಳುವ ಮಕ್ಕಳಿಗೆ ಧ್ವನಿ ಬದಲಾಯಿಸಿ, ಅವು ಏನೋ ವಿಚಿತ್ರವಾಗಿ ಅಳುತ್ತವೆ (ಗೃಹವಿ. ೦೪೫) : ಡಿಫ್ತೀರಿಯ ಮತ್ತು ಟೈಫಾಯ್ಡ್‌ಗಳಂತಹ ರೋಗಗಳು ಮೊಟ್ಟಮೊದಲನೆಯ ಬಾರಿ ಕಂಡ ರೋಗಿಗಳ ಮನೆಯ ವಾತಾವರಣವನ್ನು ಪರೀಕ್ಷಿಸಬೇಕು (ಶಂಕೋ. ೪). [ ←ಇಂ. Diphtheria ]

**ಡಿಮ** (ನಾ). [ಕಾವ್ಯಮೀ] ಹತ್ತು ವಿಧವಾದ ರೂಪಕಗಳಲ್ಲೊಂದು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ – ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೯) : ಡಿಮ – ಇದರ ವಸ್ತು ಪ್ರಖ್ಯಾತ : ಮಾಯ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. (ಭಾರಶ. ೫೬೨). [ ಸಂ. ]

**ಡಿಮುಕಿ** 'ಡುಮುಕ್ಕಿ' ನೋ.

**ಡಿಯ್ಯನಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : " ಕೋಯಷ್ಟಿಕಃ, ಟಿಟ್ಟಿಭಕಃ – ಈ ೨ ಡಿಯ್ಯನಹಕ್ಕಿ " (ನಾಚಿರಾ. ೧೦೫).
[ ? + ಹಕ್ಕಿ₁ (<ಪಕ್ಕಿ₁) ]

**ಡಿಲ್ಲ** 'ಢಿಳ್ಳ' ನೋ.

**ಡಿಲ್ಲಿ** (ನಾ). ದಿಬ್ಬ : ಹತ್ತಿನೋಡ್ಯಾಳೇ ಡಿಲ್ಲೀಯಾ (ಹುಟ್ಟಿಹ. ೫೬). [ ? ]

**ಡಿವಿಡಿವಿ** (ನಾ). ೧. ಒಂದು ಬಗೆಯ ಮರ ; ಸುವಾಸನೆಯ ಹೂವನ್ನು ಬಿಡುವ ಒಂದು ವೃಕ್ಷ : (೬). ೨. ಒಂದು ಬಗೆಯ ಸಸ್ಯ : ಸೀಮ ಅಲ್ಲೆಕಾಯಿ, ಡಿವಿಡಿವಿ (ವೃಕ್ಷಗಿ. ೦೫-೨೬೮). [ ? ]

**ಡಿಳ್ಳ** 'ಢಿಳ್ಳ' ನೋ.

**ಡಿಳ್ಳಯಿಸು** 'ಡಿಳ್ಳಸು' ನೋ.

**ಡಿಳ್ಳವಾಜು** (ಕ್ರಿ). ತಳಮಳದಿಂದ (ಎದೆ)ಹಾರು,-ಡವಡವ ಬಡಿದು ಕೊಳ್ಳು ; ಎದೆಗುಂದು : ಕಟಿಗಂದಿದಾನನಂ ರಸಮುಖಿತಧರಂ ಡಿಳ್ಳ [ಪಾಠಾಂ. ಳ್ಳ]ವಾಜಿದದೆ ಬಿಸುಪಿಂದಂ ಪೊಜಪಾಯ್ತು ಸುಯ್ಗಳ್ (ವೃಷಪು. ೨೯-೨೬). [ ಡಿಳ್ಳ (<ಢಿಳ್ಳ) + ಪಾಜು₁ ]

**ಡಿಳ್ಳವೋಗು, ಡಿಳ್ಳುಹೋಗು** (ಕ್ರಿ). ಗಾಬರಿಗೊಳ್ಳು ; ಬೆದರು ; ಗಾಸಿ ಪಡು ; ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಳ್ಳು : ತಲ್ಲಣಿಸಿ ಹೋಗುತ ಬರುತ್ತದೆ ಡಿಳ್ಳವೋ[ಪಾಠಾಂ. ಪಾ]ಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರೊಳಗೆ ತೊಡಕಿ (ಬಸವು. ೫೪-೯೦) ; ತಳ್ಳವಾಜಿಸಿ ರಾಮನ ತಂದುಕೊಡುವನು ಡಿಳ್ಳವೋ[ಪಾಠಾಂ. ಡಿಳ್ಳಿಯೋ]ಗದಿರಿಹೆ ಯೊಳಗೆ (ಕುರಾಸಾಂ.೨೫-೩೩). **ಡಿಳ್ಳುಹೋಗು:** ಅಲ್ಲೆದೆಯವಳು ರೂಪಾಣೆ ಯೊಬ್ಬಳು ಲಜ್ಜೆಯಿಲ್ಲದೆ ನಿನಗೆ ಎರಗಿದಳೆಂದರೆ ಈ ಪದ್ಮಿನಿ ಡಿಳ್ಳುಹೋಗು ವಳೇ (ಮೂಮಲ್ಲ. ೦೦೭). [ ಡಿಳ್ಳ (<ಢಿಳ್ಳ) + ಪೋಗು₁ ]

**ಡಿಳ್ಳಸ** (ನಾ). ದುರ್ಬಲತೆ ; ದೀನತೆ : ಕಳವಳವೊಳಗೆ ಹೊಱಗೆ ನವಾಯಿ ಡಿಳ್ಳಸವೊಳಗೆ ಹೊಱಗೆ ಸಘಾಡಮದ . . . ಮಹೀಶ ಹದನಿದು ನಿನ್ನ ನಂದನನ (ಕುಷ್ಯಾ.ಕ. ೨-೧). 'ಡೊಳ್ಳಾಸ' ಪರಾ. [ <ಢಿಳ್ಳ ] .

**ಡಿಳ್ಳಾಯ₁, ಢಿಳ್ಳಾಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ಶಾಳವಟ್ಟನಂ ನುಡಿವ ಮಲ್ಲಡಿಗಳೊಡನೊಡನೆ ಡಿಳ್ಳಾಯದಿಂ ಡಂಡಣಿಸ ತೊಡಗಿತು (ಸೌಂದಕಾ. ೮-೧೫) ; ಡಿಳ್ಳಾಯದುರುಕಾಲರವೆಯ[ ರವದ ] ಚೆಲ್ವಡರೆ (ರೇವಣ. ೩೨-೪೯). **ಢಿಳ್ಳಾಯ:** ರಘುಂಕ ಢಾಳ ಢಿಳ್ಳಾಯ[ಪಾಠಾಂ. ಡಿಳ್ಳಾಯ]ಚಂಡಣೆ . . . ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೬-೬೭ ಪ). [ <ಸಂ. ಡಿಲ್ಲಾಯಾ ]

**ಡಿಳ್ಳಾಯ$_2$** (ನಾ). ಮೋಸಗಾರಿಕೆ ; ವಂಚಕತನ ; ಠಕ್ಕು : ನುಸುಳು ನೆಲೆ ಡಿಳ್ಳಾಯು [ಪಾಠಾಂ. ಡಿಳ್ಳಾಯ್ತು, ಡಿಳ್ಳಾಸ]ವೈಸರ ಬೆಸುಗೆ ಬಿಗುಹುಳು ಕೊತ್ತು ಕಲೆಗಳ ರಸದ ವಸರವನಱಿಯಬಾರದು ಏಗಡ ವಿಟರುಗಳ (ಕಲಾಸ್ಯ. ೧೩-೨೮). [ ? ]

**ಡಿಳ್ಳಾಯಿ** (ನಾ). = ಡಿಳ್ಳಾಯ$_1$ : ನುಣ್ಪೊಳ ಡಿಳ್ಳಾಯಿಯಿಂ ಮೃದು ಹಸ್ತಾಯತದಿಂ . . . ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಶಕು. ೬-೧೬೪) ; ಪಯಪಾಡು ನಿಜ್ಜವಣೆ ಚಾಳೆಯ ಮುಲ್ಲಾಸಂ ತಿರುಂಪು ತಡವಿತ್ತ್ರಡ ಮುನ್ನಯನವಿಶೇಷಂ ಡಿಳ್ಳಾ[ಪಾಠಾಂ. ಲ್ಲಾ]ಯಿಯ ಲುಳಿಪುರಿ ದುಸುರಮಸೆವಿನಂ ನರ್ತಿಸಿದಳ್ (ಧರ್ಮಾಶ ೨-೨೬).

[ ಸಂ. ಡಿಲ್ಲಾಯಾ ]

**ಡಿಳ್ಳಿತ** (ನಾ). ಭಯಂಗೊಳಿಸಿದುದು ; ಬೆದರಿಸಿದುದಂ ; ಕುಗ್ಗಿಸಿದುದು: ಡಮರುಗಧೃತ ಡಾಮರನರ್ದಡಿಳ್ಳಿತ ತ್ರ್ಯವಾಲಡೀಂಣಾಂಧಕ (ಪ್ರಭುಪು. ೩-೧೬೪). [ < ಢಿಳ್ಳ ? ]

**ಡಿಳ್ಳಿಸು, ಡಿಳ್ಳಯಿಸು, ಡಿಳ್ಳೈಸು, ದಿಳ್ಳಿಸು** (ಕ್ರಿ). ೧. ನಡುಗು; ಕಂಪಿಸು; ಹೆದರು; ಭಯಪಡು: ನುಣ್ಗೊರಳಂ ಕಂಡು ವಿಳಾಸದಿಂದೆ ಸರಿಯೂಯ್ತೆನ್ನೆಂಬ ಲಜ್ಜಾಭರಾತುರದಿಂದುಂದೊಳಗೆಯ್ದಿ ಡಿಳ್ಳಿಸಿ ಜಲಂ ಪೊಕ್ಕಿರ್ದುದು . . . ಆ ಕಂಬು (ಚಾಧಪು. ೯-೭೦) ; ಡಿಳ್ಳಿಸಿದವಂ ಸ್ಖಲಿತನಾ ಪ್ರಸ್ಪಂದನಕ್ಕು (ಮಂಗರಾ. ೮೯-೩೯); ಕಳ್ಳನೊಳಗು ಡಿಳ್ಳಿಸಿ ಸರಿಯಲಾವ ಕಡೆಯೊಳು ಪೋಪು ಪಾಯವಟ್ಟೆಗಳಱಿಯದೆ (ಸಿಂಗಿರಾ. ೧೦-೧೨) ; ಜಲ್ಲಿದುಂಬಿಗಳ ಝುಂಕಾರಕ್ಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಕೋಹಿತ. ೭-೦೦) ; ಹುಸಿಯುಲ್ಲ ನನ್ನನಾಗಿನಿಸಪ್ಪುವಾಗ ಡಿಳ್ಳಿಸಿತೆದೆ ಜುಮ್ಮನೊಸರಿಸಿ (ಭರತ. ೯-೧೦೦). ೨. ಭಯದಿಂದ ನಡುಗಿಸು ; ಗಾಬರಿಗೊಳಿಸು ; ಎದೆಗುಂದಿಸು ; ಗಾಸಿ ಪಡಿಸು : ದಿಗಿಲು ಡಿಳ್ಳಿಸಿಯನ್ನ ಚಿಕ್ಕದೇವನೃಪನ ಬಗೆಯಲಿ ತಾಳ್ದ ಶ್ರೀರಂಗ ಬಲ್ಲಹನನಗಲದೆ ನೆರೆದಿರೆಂದವೃದಿಃ ಹದನ (ಮುಡಿಕ್ಯ. VI, ೧೬೫ ಶೃಂಗಾರ ಸೂಕ್ತ್ಯುದಾಹರಣ). ೩. ದುರ್ಬಲಗೊಳಿಸು;ಶಕ್ತಿಹೀನವಾಗಿಸು; ಕುಗ್ಗಿಸು. **ಡಿಳ್ಳಯಿಸು** : ೧. ರಾಜೇಂದ್ರ ಶಿಖಾಮಣಿ ತನ್ನಯ ಭೂರಿ ಬಳಂದೆರಸು . . . ಧಾರಿಣಿ ಡಿಳ್ಳಯಿಸುವವೊಲ್ ಬಡಗಣ ದಾರಿವಿಡಿದು ನಡೆತಂದು (ಜಯುಳಾ. ೯-೬). **ಡಿಳ್ಳೈಸು** : ೧. ಅವಯಶಂಬಡೆದೆನೆಂದತಿ ನಯಂಗುಂದಿ ಕಂದಿತ್ತಲಿರ್ದ ಡಿಳ್ಳೈಸಿ ಗುರುಪದೋಚಿತ ಸಲಿಲವಂ ಅತಿಶಯದೊಳಾಂತು (ಕೂಟ್ಯೂಬ. ೧೩-೬೨). **ದಿಳ್ಳಿಸು** : ೧. ಮೇಲಣ ಲೋಕ ದಿಳ್ಳಿಸುತಿಹುದಾ ಮಹಾವ್ಯಾಳ ತುಡುಕೆ ಬಿಲ್ಲ ಕೋಲ (ನಾಗಳು. ೧೩-೬). [ ಡಿಳ್ಳ (< ಢಿಳ್ಳ) + – ಇಸು$_1$ ]

**ಡಿಳ್ಳು** 'ಢಿಳ್ಳ' ನೋ.

**ಡಿಳ್ಳುಹೋಗು** 'ಡಿಳ್ಳವೋಗು' ನೋ.

**ಡಿಳ್ಳೈಸು** 'ಡಿಳ್ಳಿಸು' ನೋ.

**ಡೀ** (ನಾ). ಒಂದು ಅನುಕರಣ ಶಬ್ದ ; ಡಿಕ್ಕಿ. 'ಡೀಕೊಡು' ಪರಾ.

**ಡೀಕಾಡು** (ನಾ). ಸೇಡನ್ನಿಟ್ಟುಕೊಳ್ಳುವುದಂ ; ಜಿದ್ದು ; ಮಾತ್ಸರ್ಯ; "ಜಿದ್ದಾಟ" (ಜಾನಕೋ. ೬೩). [ ಡೀಕು$_1$ + ಆಡು$_1$ ]

**ಡೀಕು** 'ದೇಕು$_1$' ನೋ.

**ಡೀಕೊಡು** (ಕ್ರಿ).=ಡಿಕ್ಕಿಕೊಡು ೧ : ತಗರುಗಳು ಮಹಾರಭಸದಿಂದ ತಲೆ ತಲೆಗೆ ಡೀಕೊಟ್ಟು ಕಾದಿದುವು (ಭಾರವೀ. ೧೦೮). [ ಡೀ + ಕೊಡು$_1$ ]

**ಡೀಕೊಳ್ಳು** (ಕ್ರಿ). ಡಿಕ್ಕಿಹೊಡೆಸಿಕೊಳ್ಳು ; ತಿವಿಸಿಕೊಳ್ಳು: (+).

[ ಡೀ + ಕೊಳ್ಳು$_1$ (< ಕೊಳ್$_1$) ]

**ಡೀಗು** 'ಢೀಗು' ನೋ.

**ಡೀನ** (ಗು). ೧. ಆಕಾಶದಲ್ಲಿ ಹಾರಾಡಿದ,–ಸಂಚರಿಸಿದ. (ನಾ). ೨. ಹಾರುವಿಕೆ ; ಹಾರಾಟ. [ ಸಂ. ]

**ಡೀಲ** 'ಢಿಳ್ಳ' ನೋ.

**ಡೀಲಿ** 'ಡೇಲಿಯಾ' ನೋ.

**ಡೀಲು** 'ಢಿಳ್ಳ' ನೋ.

**ಡೀಹೊಡೆ** (ಕ್ರಿ).=ಡಿಕ್ಕಿಕೊಡು : (+).

[ ಡೀ + ಹೊಡೆ$_1$ (< ಪೊಡೆ$_1$) ]

**ಡುಂಡುಕ** (ನಾ). ೧. ಎರಡು ತಲೆಯ ಹಾವು ; ಡುಂಡುಭ. ೨. ವಿಷ ವಿಲ್ಲದ ನೀರುಹಾವು; ಒಳ್ಳೆ: ಭಾನುತೇಜವ ರಾಹು ಕೊಂಡಲ್ಲಿ ಸೋನೆಯ ಡುಂಡುಕ ತನ್ನಯ ಕೇಣವನೆತ್ತಿದಂತೆ (ಸುಂಕಬಂ. ೩೪). ೩. "ಹೆಮ್ಮರ ; ತಿಗಡುಮರ" (ಆಯುರ. ೮೬೫). ೪. ದುರ್ಗಸಿಂಹನ ಪಂಚತಂತ್ರದಲ್ಲಿ ಬರುವ ಒಂದು ತಿಗಣೆಯ ಹೆಸರು : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮೃಗಂ ಕೆಟ್ಟುದು (ಪಂಚತಂ. ೧೨೨-೧೬). [ ಸಂ. ]

**ಡುಂಡುಕೆ** (ನಾ). = ಡುಂಡುಕ : "ಡುಂಡುಭಃ – ಡುಂಡುಕೆ" (ಓಷಧಿ. ೬೪).

[ ಸಂ. ಡುಂಡುಕ ]

**ಡುಂಡುಚಿ** (ನಾ). ಒಂದು ಬಗೆಯ ಚರ್ಮವಾದ್ಯ ; ಗೊರವರು ಬಾರಿಸುವ ವಾದ್ಯ; ಡಮರು: ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರೆ ಕೇಳ್ವೊಡೆ ಗೊರವರ ಡುಂಡುಚಿ[ಪಾಠಾಂ. ಡುಂಡುಂಚಿ]ಯೇ ಬೀದಿವಱಿಯ ಬೀರನ ಕತೆಯೇ (ಧರ್ಮನಾ. ೦-೩೬) : 'ಗೊರವರ ಡುಂಡುಚಿ' ಯು ಪುರಾತನ ಕಾಲದಿಂದ ಹೆಸರಾಗಿದೆ (ಕರ್ನಾಪೂ. ೨೬).

[ ? ]

**ಡುಂಡುಬ** (ನಾ). ಒಂದು ಬಗೆಯ ನೀರು ಹಾವು ; ಒಳ್ಳೆ : "ಡುಂಡುಬ – ವಳ್ಳೆಹಾವು" (ಅಕಾನಿ. ೧೦-೧೦). 'ಡುಂಡುಕ' ಪರಾ.

[ < ಸಂ. ಡುಂಡುಭ ]

**ಡುಂಡುಭ** (ನಾ). ೧. ಎರಡು ತಲೆಯ ಹಾವು ; ಇರ್ತಲೆಗುಯ್ಯ : ಉರಿಶಿಂಗಿ : " ರಾಜಿಲಃ, ಡುಂ[ಪಾಠಾಂ. ದುಂ]ಡುಭಃ–೨ ಎರಡು ತಲೆಗಳುಳ್ಳ ಶಿಖಂಡಿಯೆಂಬ ಸರ್ಪಭೇದದ ಹೆಸರುಗಳು. ಎರಡುತಲೆ ಉರಿಶಿಂಗಿ " (ಸಿದ್ಧಾಂತಿ. ೬೩). ೨. ನೀರುಹಾವು ; ಒಳ್ಳೆ: " ರಾಜಿಳಃ, ಡುಂಡುಭಃ – ಈ ೨ ಒಳ್ಳೆ " (ಹಲಾಯು. ೧೦೬-೨೦) ; ಒಂದು ಕೃಷ್ಣತರುಣೋರಗಂ ಬಂದು ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೧೨೩-೨೦). 'ದುಂಡುಭ' ಪರಾ. [ ಸಂ. ]

**ಡುಗಡುಗಿ, ಡುಗುಡುಗಿ** (ನಾ). (ಉಕ) ಆತಂಕ ; ಹೆದರಿಕೆ ; ಭೀತಿ : ನನ್ನ ವ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು (ಪ್ರೇಮೂಶ್ರ. ೨೬೬). **ಡುಗುಡುಗಿ** : ನೀ ಕಬೂಲಾಗತ್ಯೋ ಇಲ್ಲೋ ಅಂತ ನನಗ ಡುಗುಡುಗಿ ಇತ್ತು (ದೀಪಹ. II, ೦೪).

[ ← ಮರಾ. ಡುಗಡುಗೀ, ಡುಗಡುಗ ]

**ಡುಗುಡುಗಿ** 'ಡುಗಡುಗಿ' ನೋ.

**ಡುಣ್ಣ** (ನಾ). ಒಂದು ಬಗೆಯ ನೆಲ್ಲು,–ಬತ್ತ : ಕೊಡಗು ಪಾಳಲಕಂತೆ ಹರಹಿನ ಡುಣ್ಣಗಳೊಡನೊಪ್ಪುತಿಹ ಭೈರಾವಳಿಯ ಕಡು ಸೊಬಗಾಂತಿಹೆ ಚಂದ್ರೋದಯ ಶಾಲಿಯೆಡೆವಿಡದೆಸೆದುಪರ್ತಿಯಾಲಿ (ಕಂಸವಿ. ೩-೭೦).

[ ? ]

**ಡುಬರಿ** (ನಾ). ೧. ಮೇಲಕ್ಕೆ ದುಂಡಾಗಿ ಉಬ್ಬಿರುವ ಸ್ಥಿತಿ: (+). ೨. ಒಂಟೆಯ ಬೆನ್ನಿನಲ್ಲಿರುವ ಉಬ್ಬು,–ಮೇಲಕ್ಕೆ ಎದ್ದಿರುವ ದುಂಡಗಿರುವ ಭಾಗ : ಅರಬೀ ದೇಶದ ಒಂಟೆಗಳ ಬೆನ್ನಮೇಲೆ ಒಂದೇ ಡುಬರಿ ಇರುವುದು (ಮುಂಬಯಿ. ೩-೬೪). 'ದುಂಮ್ಮು$_1$' ಪರಾ.

[ ← ಮರಾ. ಡುಬರ, ಡುಬರಾ ]

**ಡುಬಲಿ** (ಗು). ಬೊಜ್ಜು ಬೆಳೆದ; ದಪ್ಪನಾದ ಶರೀರವುಳ್ಳ; ಸ್ಥೂಲ ದೇಹವುಳ್ಳ: ಸುತ್ತ ಮೋರೆಯ ಜನರು ನನಗೆ ಡುಬಲಿ ಅಜ್ಜ ಎಂದು ಕರೆಯುತ್ತಾರೆ (ಜಮಿನ್ನಾ. ೩೦).

[ ←ಮರಾ. ಢಬಾಲಾ ]

**ಡುಬಾಯಿಸು** (ಕ್ರಿ). ೧. ನೀರಿನಲ್ಲಿ ಮುಳುಗು. ೨. ನೀರಿನಲ್ಲಿ ಮುಳುಗಿಸು. ೩. ಹಾಳುಮಾಡು; ನಾಶಮಾಡು: (ಕ).

[ ಡುಬಾ$_{0}$ (P ←ಹಿಂ. ಡುಬಾನಾ) + – ಇಸು$_{3}$ ]

**ಡುಬುಕಿ, ಡುಮಕಿ, ಡುಮುಕಿ$_2$** (ನಾ). ೧. ಮುಳುಗುವಿಕೆ. ೨. (ಅಲಂ) ಸೋಲು; ತೇರ್ಗಡೆಯಾಗದಿರುವುದು; ಅಪಜಯ. **ಡುಮಕಿ**: ೨. ಈ ವಂದ್ಯದಲ್ಲಿಯೂ ಶಾಲೆಗೆ ಡುಮಕಿ (ಜಾಪ). **ಡುಮುಕಿ$_2$**: ೨. ಪರೀಕ್ಷೆಯಲ್ಲಿ ಈ ಸಲವೂ ಡುಮುಕಿಯೇ (ಜಾಪ).

**ಡುಬುಕಿಹೊಡೆ** = (ಪರೀಕ್ಷೆ ಮುಂತಾದುವುಗಳಲ್ಲಿ) ತೇರ್ಗಡೆಯಾಗದಿರು; ಸೋಲು; ಫೇಲಾಗು: ರಾಮುವಿಗೆ ತೇರ್ಗಡೆಯಾಯಿತು, ವೆಂಕಟೇಶ ಡುಬುಕಿಹೊಡೆದ (ಸಂಧ್ಯಾರಾ. ೩೩).

[ ←ಹಿಂ. ಮರಾ. ಡುಬಕೀ ]

**ಡುಬ್ಬ** 'ದುಮ್ಮು$_1$' ನೋ.

**ಡುಬ್ಬಕಿತ್ತು** (ಕ್ರಿ). ೧. ಬೆನ್ನಮೇಲಿನ ಚರ್ಮವನ್ನು ಸುಲಿ. ೨. (ಅಲಂ) ಸ್ವಲ್ಪವೂ ಬಿಡುವು ಕೊಡದೆ ದಂಡಿಸಿಕೊಳ್ಳು; ದೋಚಿಬಿಡು: ಬಡ್ಡಿಯೊಳಗೆ ಡುಬ್ಬಾ ಕಿತ್ತುವ ಸಾವಕಾರ ಏನಿರಬಹುದು (ಮನಿಕ. ೫).

[ ಡುಬ್ಬ (<ದುಮ್ಮು$_1$) + ಕಿತ್ತು$_2$ ]

**ಡುಬ್ಬು** 'ದುಮ್ಮು$_1$' ನೋ.

**ಡುಬ್ಬುಕ** 'ದಬ್ಬುಕ' ನೋ.

**ಡುಮಕಿ** 'ಡುಬುಕಿ' ನೋ.

**ಡುಮುಕಿ$_1$, ಡಿಮಕಿ** (ನಾ). ಒಂದು ಬಗೆಯ ಚರ್ಮವಾದ್ಯ: ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮಕಿ ಬಾರಿಸುತ್ತ ಹಾಡುತ್ತಾನೆ (ಅಗ್ನಿಹಂ. ೭). 'ಟುಮಕಿ' ಪರಾ. **ಡಿಮಕಿ**: ಬುಡಬುಡಿಕೆ, ಡಿಕ್ಕಿ, ಡಿಮಕಿ, ಝಾಲ್ರಿ, ಮದ್ದಳೆ, ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತಿ. ೫೫).

[ ←ಮರಾ. ಢುಮಕೀ ]

**ಡುಮುಕಿ$_2$** 'ಡುಬುಕಿ' ನೋ.

**ಡುಮುಕು** (ನಾ). ದಪ್ಪ; ಡೊಳ್ಳು: ಡುಮುಕಾದ ಗಿಡ್ಡದೇಹ; ತೆಂಗಿನ ಕಾಯಿಗೆ ಎರಡೂ ಪಕ್ಕದಲ್ಲಿ ಮೀಸೆ ಹೊರಟಿದ್ದರೆ ಹೇಗೆ ಕಾಣಬಹುದೋ ಅಂತಹ ಮೋರೆ (ಕಾರಿಹಿಂ. ೬೨). 'ಟುಮುಕ' ಪರಾ.

[ ←ಮರಾ. ಢುಮಕೀ ]

**ಡುಮ್ಮ** (ನಾ). ಹೊಟ್ಟೆ ಉಬ್ಬಿದವ. 'ಡುಮ್ಮಣ್ಣ' ಪರಾ.

[ ಡುಮ್ಮು (<ದುಮ್ಮು$_1$) + – ಅ$_7$ ]

**ಡುಮ್ಮಣ್ಣ** (ನಾ). ಹೊಟ್ಟೆ ದಪ್ಪಾಗಿರುವವನು: ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ (ಗಾದೆ). [ ಡುಮ್ಮ + ಅಣ್ಣ$_1$ ]

**ಡುಮ್ಮಣ್ಣಿ** (ನಾ). ದಪ್ಪನಾಗಿರುವ ಹುಡುಗಿ; "ಲಕ್ಷ್ಮವ್ವಂತ ಹಂಡಿಗಿ" (ಕಮಾಕಾಂ. ೨೬೩). [ ಡುಮ್ಮಣ್ಣ + – ಇ$_8$ ]

**ಡುಮ್ಮಿ** 'ದುಮ್ಮು$_1$' ನೋ.

**ಡುಮ್ಮು** 'ದುಮ್ಮು$_1$' ನೋ.

**ಡುರಕಿ** 'ಡುಂಬುಕು' ನೋ.

**ಡುರಕಿಹಾಕು** 'ಡುಂರುಕುಹಾಕು' ನೋ.

**ಡುರಕಿಹೊಡೆ** (ಕ್ರಿ). = ಡುರುಕುಹಾಕು: (ಕ).

[ ಡುರಕಿ (<ಡುಬುಕು) + ಹೊಡೆ$_1$ (<ಪೊಡೆ$_1$) ]

**ಡುರಿಕೆ** 'ಡುಬುಕು' ನೋ.

**ಡುರುಕಿಡು, ಡುರ್ಕಿಡು** (ಕ್ರಿ). = ಡುರುಕುಹಾಕು: ಉಭಯಕರ್ಣಂಗಳಂ ನಿಮಿರ್ಚಿ ನೆಲನ ವಡನೆ ಘ್ರಾಣಿಸುತ ಡುರುಕಿಡಲಹಾಂಡದ ಘಟಂ ನಡುಗಿತ್ತು (ನವಮೋ. ೩-೪೫). **ಡುರ್ಕಿಡು**: ಇರ್ಕಿಲದ ದಾನವರನಿಟ್ಟುವುತುಂ ಮುಟ್ಟುವುತುಂ ಡುರ್ಕಿಡುತ್ತಸುರರಂ ಕೆಡವುತುಂ . . . ವೃಷಭಂ ಪ್ರಹಾರಿಸಿದನು (ಕಬಪು. ೪೪-೧೬). [ ಡುರುಕು (<ಡುಬುಕು) + ಇಡು$_1$ ]

**ಡುರುಕು** 'ಡುಬುಕು' ನೋ.

**ಡುರುಕುಹಾಕು, ಡರಿಕೆಹಾಕು, ಡುಂರುಕಿಹಾಕು, ಡುರುಕೆಹಾಕು** (ಕ್ರಿ). (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು) ಕರ್ಕಶ ಧ್ವನಿಮಾಡು; ಗುಟುರುಹಾಕು: ಹಂದಿ ಡುರುಕುಹಾಕಿದ ಶಬ್ದ ಕೇಳಿಸಿತು (ಸಪಿದಾ. II, ೧೧೩೪). **ಡರಿಕೆಹಾಕು**: ಕಪ್ಪೆಗಳು ಎತ್ತುಗಳಿಗಿಂತ ಎತ್ತರವಾಗಿ ಡರಿಕೆಹಾಕಬಹುದು (ಕೃಪಾಕೋ. ೭೩). **ಡುರಕಿಹಾಕು**: ಎಮ್ಮೆಯೊಂದು ಮೈಯಲ್ಲಿ ತುಂಬಿದ್ದ ಸೊಳ್ಳೆಗಳೊಂದಿಗೆ, ಡುರಕಿಹಾಕುತ್ತ ಒಳಗೆ ನುಗ್ಗಿಬಿಟ್ಟಿತು (ಮಲೆನಾ. ೨೬); ಎತ್ತುಗಳು ಡುರಕಿಹಾಕುತ್ತವೆ (ಮುಂಬಯಿ. ೩-೧೮). **ಡುರುಕೆಹಾಕು**: ಎರಡು ಗೂಳಿಗಳು ಸೊಕ್ಕಿಗೆ ಬಂದು ಎರಡನೇ ದನಗಳನ್ನು ಇರಿಯುತ್ತ ಡುರುಕೇಹಾಕುತ್ತ (ಮುಂಬಯಿ. ೩-೪೦). [ ಡುರುಕು (<ಡುಬುಕು) + ಹಾಕು (<ಪಾಯ್ಯು$_1$) ]

**ಡುರುಕೆ** 'ಡುಂಬುಕು' ನೋ.

**ಡುರುಕೆಹಾಕು** 'ಡುರುಕುಹಾಕು' ನೋ.

**ಡುರ್ಕಿಡು** 'ಡರುಂಕಿಡಂ' ನೋ.

**ಡುರ್ಕು** 'ಡುಬುಕು' ನೋ.

**ಡುಲಿ, ಡುಳಿ** (ನಾ). ಹೆಣ್ಣಾಮೆ: "ಡುಲಿ[ಪಾಠಾಂ. ಥುಳಿ]ಯೆನಲು ಹೆಣ್ಣಾಮೆಯಕ್ಕುಂ" (ಮಂಗರಾ. ೧೨೦-೮). **ಡುಳಿ**: 'ಡುಳಿರಾಜ' ಪರಾ.

[ ಸಂ. ]

**ಡುಳಿ** 'ಡುಲಿ' ನೋ.

**ಡುಳಿರಾಜ** (ನಾ). ೧. ಆಮೆಗಳ ಒಡೆಯಂ; ಕೂರ್ಮಪತಿ; ದೊಡ್ಡ ಆಮೆ. ೨. ವಿಷ್ಣುವಿನ ಅವತಾರಗಳಲ್ಲೊಂದಾದ ಮಹಾಕೂರ್ಮ; ಕಮಠ: ಡುಳಿರಾಜನಿಲ್ಲದೆಡೆ ಧರಣಿ ನಿಲ್ಲುವದುಂಟೆ ನಳಿನಾಪ್ತನಿಲ್ಲದಡೆ ನಡೆವುದೇ ಜಗವು (ದೇವೀಪ್ರ. ೩೬). [ ಡುಳಿ (= ಡುಲಿ) + ರಾಜ ]

**ಡುಳ್ಳಿ** (ನಾ). ವಂಚನೆ; ಸುಳ್ಳು: ತಲ್ಲಣಿಸಿ ನಿಲಲಾಱದಾ ಖಳಂ ಕೈಯೊಡನೆ ಡುಳ್ಳಿಯಿಂದಾ ಮುನಿಪನುರುಶಿರೋಲಕ್ಷ್ಮಿಯಂ ಕೊಳ್ಳೆಗೊಂಡೆಡಹುತಂ (ಶರಕು. ೩೫-೨೫); ಡುಳ್ಳಿಯೋ ಸತ್ಯಮೋ ಎಂಬೆನೆ (ಹಾ.ದಾಸ್ಯ. ೩-೧೦-೦೩).

[ ? ]

**ಡುಳ್ಳಿಮನ** (ನಾ). ಸುಳ್ಳುಮನಸ್ಸು; ಕ್ಷುದ್ರಮನ (?): ಕಳ್ಳಕನ್ನಡಿ ಸಾಯೆ. ಡೊಳ್ಳು ಕೋಮಟಿಗನಾ ಹುಳ್ಳಿ ನಯುಶೂಲಯೇರಿವಾಯುಂಬಗಾದೆ ಡುಳ್ಳಿಮನವು ಯಿದು ಪಾಪವ ಮಾಡ್ದರೆ ಸುಳ್ಳಿಗೆ ಆತ್ಮಗೆಯೆಂದು ವೂಹಿಸುವರು (ಕದಾಪ. ೧೦-೮). [ ಡುಳ್ಳಿ + ಮನ ]

**ಡುಬುಕೆ** 'ಡುಬುಕು' ನೋ.

**ಡುಬುಕಾರವ** (ನಾ). ಡುರುಕಿನ ಗಟ್ಟಿಯಾದ ಶಬ್ದ; ಗುಟುರು: ತೋರ ಹೋರಿಗಳ ಡುಬುಕಾರವಂ ಗಳದ ಘಂಟಾರವಂ ಪಶುಗಳಂಬಾರವಂ (ಕಬಪು. ೧೦-೧೭). [ ಡುಬುಕು + ಆರವ ]

**ಡುಬುಕು, ಡರಕೆ, ಡರಿಕೆ, ಡುರಕಿ, ಡುಂರಿಕೆ, ಡುಂರುಕಂ, ಡುರುಂಕೆ ಡುರ್ಕು, ಡುಬುಕೆ** (ನಾ). ೧. (ಎಮ್ಮೆ, ಗೂಳಿ, ಹಂದಿ, ಗೊಂಕರಂ ಕಪ್ಪೆ ಮೊದಲಾದ ಪ್ರಾಣಿಗಳು ಮಾಡುವ) ಒಂದು ಬಗೆಯ ಕರ್ಕಶ ಶಬ್ದ; ಗುಟರು. 'ಡುಂಬುಕೆನ್' ಪರಾ. **ಡರಕೆ**: ೧. ಗೂಳಿಯ ಡರಕೆ (ಗುಟರು) ಇವು ಶಬ್ದಾನುಕೃತಿಯೇ (ಕರ್ನಾಟ. ೩೩೪). **ಡರಿಕೆ**: ೧. 'ಡರಿಕೆಹಾಕು' ಪರಾ. **ಡುರಕಿ**: 'ಡುಂರಕಿಹಾಕು' ಪರಾ. **ಡುರಿಕೆ**: ೧.

ದೂರದಿಂದ ಡುರಿಕೆ ಕೇಳಿಸಿತು ಅದು ಕಾಡುಹೋರಿಯ ಡುರಿಕೆಯಾಗಿತ್ತು (ಬಂಗಾಹ. ೦೮). ೨. ನಿದ್ದೆಯಲ್ಲಿ ಮೂಗಿನಿಂದ ಹೊರಡುವ ಶಬ್ದ ; ಗೊರಕೆ : ಇಬ್ಬರೂ ಮಹಾ ಕುಡುಕರು . . . ವಿದ್ಯಾಬುದ್ಧಿಗಳ ಪರಿಚಯ ವಾದದ್ದು ಇಲ್ಲಿಯವರೆಗೆ ಇವರ ಡುರಿಕೆ ಮಾತ್ರ (ಕುರಿಹಿಂ. ೦೦೭) ಡುರುಕು : ೧. 'ಡುರುಕಿಡು', 'ಡುರುಕುಹಾಕು' ಪರ್ಯಾ. ಡುರುಕೆ : ೧. 'ಡುರುಕೆಹಾಕು' ಪರ್ಯಾ. ಡುರ್ಕು : ೧. 'ಡುರ್ಕಿಡು' ಪರ್ಯಾ. ಡುಟಿಕೆ : ೧. ಬಸವನಾಗವಗಡಿಸುತೆದ್ದು ಪುಟನೆಗೆದು ಡುಟಿಕೆಯನಿಕ್ಕು ತವರ ಬಲವರುತ (ಗುರುಚಾ. ೦೦-೮೮).

**ಡುಬುಕೆನ್** (ನಾ). = ಡುರುಕುಹಾಕು : ಪಂದಿ ಡುಬುಕೆಂದೊಡೆ ತಾಂ ಡುಬುಕೆಂಬುದೆ ಮಹಾವನಕರಿಯುಂ ವಿದಾರಿಸುವ ಸಿಂಹಂ (೧ರಿಳ. ೦-೨೯) ; ಪರಪ್ರತಿಭೆಯ ಗುಣ್ಪುಟಿಯದೆ ತಾಮುಂ ಕಿವ್ಮಗೆ ಡುಬುಕೆಂಬುವು ಕುಕವಿಕೂಪಮಂಡೂಕಂಗಳ್ (ಅನಂಪು. ೧-೯೨) ; ಪಂದಿಯೊಂದು ಡುಬುಕೆಂದೊಡೆ ಸಿಂಗಮಂಡಲೆವುದೆ (ಕಾಮೂಶ್ಯ. ೨೩-೨೩).

[ ಡುಬುಕು + ಎನ್$_1$ ]

**ಡೂಗ** (ನಾ). ೧. ಗೂನುಬೆನ್ನಿನವನು; ಗೂನ ; ಬೆನ್ನುಬಾಗಿದವನು: ೧ನೇ ವಿಷ್ಣುವರ್ಧನನು ಇವನಿಗೆ ಕುಬ್ಜ ವಿಷ್ಣುವರ್ಧನನೆಂಬ ಹೆಸರಿದ್ದ ಕಾರಣ ಇವನು ಡೂಗನಿದ್ದಂತೆ ತೋರುತ್ತದೆ (ಕಭಾಗೆ. ೩೨೬) ; ಪಾಪ, ಹಲ್ಲು ಬಿದ್ದಾವೆ, ಮೇಲಾಗಿ ಡೂಗನಿದ್ದಾನೆ (ದೇಯೂನಿ. ೦೩೨). (ಗು). ೨. ಬೆನ್ನು ಬಗ್ಗಿದ ; ಗೂನುಬೆನ್ನಿನ : ಆ ಡೂಗ ಹೆಂಗಸು ಅಂದಿನಿಂದಲೂ ಇಲ್ಲಿಯೇ ಇದ್ದಾಳೆ (ಹೊಸಕ್ಕ. ೦೮೯). [ ಡೂಗು$_2$ + – ಅ$_7$ ]

**ಡೂಗು$_1$** (ಕ್ರಿ). ಬಾಗು ; ವಕ್ರವಾಗು ; ಗೂನಾಗು.

**ಡೂಗಿಕೊಳ್** = ಬಗ್ಗಿಕೊಳ್ಳು ; ಬೆನ್ನನ್ನು ಬಗ್ಗಿಸು : ಅವರ ತಾಯಿ ವೆಂಕಮ್ಮ ಡೂಗಿಕೊಂಡೇ ಅಲ್ಪ ಸ್ವಲ್ಪ ಕೆಲಸಮಾಡುತ್ತ ಹೊರಗೇ ಇದ್ದಳು (ದಂಬನಾ. ೨). [ ? ]

**ಡೂಗು$_2$** (ನಾ). ಬೆನ್ನು ಬಗ್ಗಿರುವಿಕೆ ; ಗೂನು ; ಕುಬ್ಜತೆ.

**ಡೂಗಾಗು** = ಗೂನುಬೆನ್ನಿನಿಂದ ಕೂಡಿರು ; ಗೂನಾಗು : ಅದೇ ಹೆಂಗಸು ಇನ್ನೂ ಅಷ್ಟೇ ಡೂಗಾಗಿ ಬಿಲ್ಲಿನಂತೆ ಬಾಗಿ ನಡೆಯುತ್ತಿದ್ದಾಳೆ (ಹೊಸಕ್ಕ. ೧೮೮) ; ಯಾವಾಗಲೂ ಡೂಗಾಗಿ ಕೈಯೂರಿ ಇಲ್ಲವೇ ಗಾದಿ, ಗೋಡೆ ಕಂಬಳಿಗಾತು ಕುಳಿತದ್ದೇ ಕಂಡುಬರುವದು (ಬ್ರಹ್ಮಜೀ. ೨೪).

[ < ಡೂಗು$_1$ ]

**ಡೆಂಕ** 'ಡಕ್ಕೆ' ನೋ.

**ಡೆಂಕಣ** 'ಡೆಂಕಣಿ' ನೋ.

**ಡೆಂಕಣಿ, ಡೆಂಕಣ, ಡೆಂಕಣೆ, ಡೆಂಕಳಿ, ಡೇಂಕಣೆ, ಢೆಂಕಣ, ಢೆಂಕಣಿ, ಢೇಂಕಣಿ, ಢೇಂಕಣೆ** (ನಾ). ೧. ಕೋಟೆಗಾಳಗದಲ್ಲಿ ಉಪಯೋಗಿಸುತ್ತಿದ್ದ ಒಂದು ಯಂತ್ರ; ಕಲ್ಲುಗುಂಡುಗಳನ್ನು ತೂರುವ ಯಂತ್ರ: ಪುದಿದಿರ್ದಟ್ಟಳೆ ಪೆಟ್ಟದಾಳ್ವೆಟಿಯಾಗುವಾರ್ಗಿರ್ದ ಮೇಲ್ಗೊತ್ತಳಂ ಕದನಕ್ಕದ್ಭುತಮಪ್ಪ ಡೆಂಕಣಿ (ಎಳ. V, ಅರಸೀ. ೫-೦೨ ; 1194) ; ಎತ್ತಿಡುತಿರ್ಪ ಡೆಂಕಣಿಗಳಾದರ್ಪುಟಿ ಪಾಯುವ ಗೆಗ್ಗ . . . ಪೊಯ್ವ ಲಗ್ಗೆವಟಿ ಬೊಬ್ಬುಟಿವಬ್ಬರಮಾಗಳದ್ಭುತಂಬೆತ್ತುದು (ಕುಸುಮಾ. ೦೦-೯೦) ; ಗೆಗ್ಗ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹು ಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೦೦-೮೩); ತೂಳ್ದಿಡುವ ಡೆಂಕಣಿ ಪೊಯ್ಯುರಿಯಣ್ಣೆ ಕಾಸಿ ಸೂಸುವ ಮಳಲೆಂಬಿವೆತ್ತಲುಮಾಗುರ್ವಿಸೆ (ಪುಷ್ಪಪು. ೭-೭೪): ಸಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಟಿದೆಡೆಗೆ ಸಿಡಿವಡೆಂಕಣಿ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದುವು (ಕುಶಾಸಾಂ. ೯೨-೩೯) : ತರತರದೊಳಿರಿಸಿರ್ದ ಬಲ್ವೊಲೆಯ ಡೆಂಕಣಿಯು . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಚಬಪು. ೯೨-೦೦). ೨. ಕೊತ್ತಳಗಳ ಮೇಲೆ ಪೊದರಿನಂತೆ ಒತ್ತೊತ್ತಾಗಿ ಅಳವಡಿಸಿ ನಿಲ್ಲಿಸುವ ಉದ್ದವಾದ ಸಬಳದಂತಹ ಒಂದು ಆಯುಧ ವಿಶೇಷ : ನಟ್ಟ ಡೆಂಕಣಿಗಳೋಹಗೆಗಳನು ದುರ್ಗವಟಿಯಟ್ಟಲೆತ್ತಿದ ಹಲವು ಕೈಯೊ (ಹಕಶಾ. ೦-೩೭) ; ಅಟ್ಟಳೆಯಾಳ್ವೇರಿ ಕೊತ್ತಲಂಗೊಳಳಪಟ್ಟಡೆಂಕಣಿ ಸಬಳಗಳು ನಟ್ಟರಂತೆಯದ ಕಂಭಗಳಿಂದಾ ದುರ್ಗ ಸೃಷ್ಟಿಗೆ ಪೊಸತಾಗಿಹುದು (ಜೀವಂಸಾಂ. ೮-೦೩) ; ದೇವತೆಗಳ ಮುಟ್ಟ ಶಿವಿದ ಸಬಳಗಳೊಯೆಂದೆನಲಲ್ಲಿ ನೆಟ್ಟ ಡೆಂಕಣಿಗಳೆಸೆದವು (ಕುಶಾಸಾಂ. ೦೭-೦೯); ಕನ್ನಡದಲ್ಲಿಯು ಕೋಶಕಾರರೆಲ್ಲರೂ ಧ್ವಜಸ್ತಂಭ ಎಂಬ ಅರ್ಥ ಹೇಳಿರುವರು. ಆದರೆ ಕೋಟೆಗಾಳಗದಲ್ಲಿ "ಮಾರಿಮೊಗದಡೆಂಕಣಿ" ತೂಡುವ ಹಿಂಸಾಕಾರ್ಯವನ್ನು ನೋಡಿದರೆ, ಅದೊಂದು ಭವ್ಯವಾದ ಆಯುಧ ವಿಶೇಷ (ಕರ್ಣಾಅ. ೩೭). 'ಡೊಂಕಣಿ' ಪರ್ಯಾ. ೩. ಕೋಟೆಯ ಮೇಲಿಸಬುರುಜು; ಬತ್ತೇರಿ: ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರವಾಗಿಯಗ್ಗಳಿಸುವ ಗೋಪುರಂ (೧ರಿಳ. ೨-೭೯); ಅಗಬಾಪ್ರಾಕಾರದಿಂ ಡೆಂಕಣಿಯಿನನುಪಮದ್ವಾರದಿಂ ಸತ್ಪತಾಕಾವಳಿಯಿಂದಾಳ್ವೇರಿಯಿಂ . . . ಬಗೆಗೊಳ್ಪಂ ಬೀಟಿ (ದಶಕು. ೭-೯) ; ಇತ್ತರದೊಳುದ್ದಕ್ಕೆ ಕೋಂಟೆಯಕೊತ್ತಳಂಗಳ ಸಂದಿಸಂದಿಯೊಳೆತ್ತಿಸಿದನಟ್ಟಣೆಗಳಂ ಡೆಂಕಣಿಗಳಂ (ಬಸಪು. ೦೭-೯); ಸಿದ್ಧ ಕಂಡನು ಮುಂದೆ ಮಾರ್ಗವ ಹೊದ್ದಿ ಕೆನೆ ಕೊತ್ತಳವ ಡೆಂಕಣಿ ಚಿತ್ರಕಲಸದಿ ಪಚ್ಚಲೋಹದಯೆಸೆವ ಕದಗಳನು (ಕೀವಶಾ. ೨-೫); ಬಗೆವೆತ್ತ ಪವಳ ಡೆಂಕಣಿಗಳಿಂದಂ ಮುತ್ತು ಬಿಗಿದಟ್ಟಣಗಳಿಂದೆ . . . ಝುಗಝುಗಿಸುತೊರ್ಪುದುದು (ಹರಿಪು. ೦-೩೨) ; ಗಗನಲಂಬಿತ ನೀಲ ದಟ್ಟಳೆಯ ಕಟ್ಟಳೆಯ ಮಣಿಮಯದ ಡೆಂಕಣಿಗಳ (ರುಕ್ಮಾಂಗ. ೩-೪) ; ಕ್ರಮದ ಡೆಂಕಣಿ ಕೋಟೆ ಗೋಪುರಗಳಿಂದ ಆಶ್ಚರ್ಯವಾದಂಥ ಅರಮನೆಗಳಿಂದ (ಯುನಳ. ೯). ೪. ಕೋಟೆಯಂ ಮೇಲಿನ ಬುರುಜುಗಳ ಮೇಲೆ (ಸಾಮಾನ್ಯವಾಗಿ ಎಂಟು ಕಡೆಗಳಲ್ಲೂ) ನೆಟ್ಟಿರುವ ನಿಶಾನಿಯೊಡನಿರುವ ಅಥವಾ ನಿಶಾನಿಯಿಲ್ಲದ ಧ್ವಜಸ್ತಂಭ : ಕಣಿವ ಪಲ್ಲವಝಲ್ಲರಿಯ ಡೆಂಕಣಿಯ ತಲೆ ಚಮರಿಗಳ ಗಗನಾಂಗಣವನಣೆವ ಪತಾಕೆಗಳ . . . ಲಗ್ಗೆವಟಿಗಳಲೆಸೆದುದಾ ದುರ್ಗ (ತೊರರಾ. ೭-೭-೦೭) ; ಎತ್ತಿದ ಛತ್ರ ಚಾಮರ ಚೌಕ ಡೆಂಕಣಿ ಮತ್ತು ಕಾಲಾಳ ಘರ್ಜನೆಯು (ದೇವಾಂಪು. ೩-೦೯೩) : ಹಮ್ಮಿನಲಿ ಸಗ್ಗಿಗರ ಕರೆವಂತೆ ಕೈಯೆತ್ತಿ ಗವ್ಯನೆಯ ಡೆಂಕಣಿಗಳೆಸೆಯೆ (ಪ್ರಾಕರಾ. ೦-೩೭) : ನೋಟಕರ ಕಣ್ಗೆ ಕಾಣಿಸಿದುಮಣ್ಸೆಸೆಯ ಡೆಂಕಣಿಯ ಪಳವಿಗೆಗಯ್ಗಳು (ಕೃಮಿಥಾ. ೦೭-೯); ಕುಂಭಿನಿ ಕೈನೀಡಿ ಕರೆವೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (ಕಂಸವಿ. ೭-೮) : ಅಗಣಿತೋನ್ನತ ಹರಿಮಯದ ಡೆಂಕಣಿಗಳೊಪ್ಪಿದುವು (ಕೋಗಯು. ೩-೮) ; ಜೀವಮಾನದ ಕಟ್ಟಡದಲ್ಲಿ ಆ ಒಂದು ಕ್ಷಣದ ಬಾಳು ಗೋಪುರದ ತುದಿಯ ಕಳಶದ ಚಿನ್ನದ ಡೆಂಕಣಿಯಾಗಿ ಸ್ವರ್ಗದೊಡನೆ ಸರಸವಾಡಿತು (ಮತಿಮ. ೫೨). **ಡೆಂಕಣ** : ೧. ಇಡಿಸುವ ಡೆಂಕಣಕ್ಕೆ ವೆಲವಾಳಿಗೆ ಕೊತ್ತಳದಂಬುಗುಂಡಿಯಿಂದುಡುಗದೆ . . . ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿನಿ ಮುತ್ತಿ ಸುತ್ತಲುಂ (ಚಂದ್ರಪು. ೫-೦೦೭). ೩. ಇರಲಿಯಿತ್ತೊಳಗೇಳುಕೋಟೆಯ ತೆರನು ಮರಕತ ಸುತ್ತು ಮೇಲುರುತರದ ಕೆಂಬಿನ ಸುತ್ತು ಕೆನೆಗಳು ಡೆಂಕಣಟ್ಟಣೆಯೂ (ಚಿರಾಮಾ. ೨೪-೨೭). **ಡೆಂಕಣೆ** : ೧. ನಿಟಿಸಿದ ಬಸಿಯೊಳಂ ಪೂಸಿದ ಡೆಂಕಣೆಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಟಾಸುರಮಾಗೆ (ಅನಂಪು. ೧೧-೮೨ ಪ) ; ಡೆಂಕಣೆ[ಪಾಠಾಂ. ಣಿ]ಯ ಗವಣೆಗಳ ಕೋಟೆಯ ಕೊಂಕುಗಳ ಕೊತ್ತಳದ ಕೆನೆಗಳ . . . ದುರ್ಗವನೀಕ್ಷಿಸುತ (ನಿಭಾಗ. ೦೦-೩೭-೩೫); **ಡೆಂಕಣೆ** ಕವಣೆ ಧ್ರುವಲೋಕವ ಹಾಯಲಿಡುವ ಮಕರಡಿಬ್ಬೆ ಕವಿದ ದುರ್ಗದೊಳಿಹವು (ಸೌಂದರಾ. ೫-೩೪). **ಡೆಂಕಳಿ** : ೪. ಪಳಹರದ ಪಲ್ಲವದ ಸತ್ತಿಗೆಯಗಳವಿಡಾಯಿಯಲರಿಬಿರುದ ಡೆಂಕಳಿಯ ಸೀಗುರಿ ಪೊದರುಗಳ ತೋಮರದ

ಸಂದಣಿಯು (ಕುಮಾರರಾ. ೭೦೩. ಪ. ೨೦೭). ಡೇಂಕಣೆ : ೩. ಮೂರು ಸುತ್ತಿನ ಪರಿಧಿ ತಾಂಬ್ರದಿ ತೋರೆ ತೆನೆ ಡೇಂಕಣೆಗಳಟ್ಟಣೆ (ಬಿಜ್ಜ. ೨೦-೨೦). ಢೆಂಕಣ : ೧. ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣಿ, ಢೆಂಕಣ [ಪಾಠಾಂ. ಣಿ]ಅಧಾಳಂ (ಢಾಳಂ) (ಶಮದ. ೦೫ ಪ್ರಯೋ). ಢೆಂಕಣಿ : ೧. ಇಟ್ಟಿಡುವ ಢೆಂಕಣ ಶಿಲೋಚ್ಚ ರಮನಿಕ್ಕು (ಮಂಗರಾ. ೩೭-೫). ಢೇಂಕಣೆ: ೧. ಆತುರದಿಂ ಢಗ್ಗೆ ಢೇಂಕಣಿ ನೆಲಗುವುಮ್ಮ ಮಾತೇನು ಗಗನದಟ್ಟಳೆಯು (ಅನಂತ. ೧೮-೫೨). ಢೇಂಕಣೆ : ೧. ಕಲ್ಲ ಹೆಗ್ಗೊಱದುಱಿಯಣ್ಣ ಕಾಯ್ದು ವಣಲಗ್ಗದ ಢೇಂಕಣೆ (ಸೌಇ. XX, ೦೫೭-೪ ; 1186).

ಡೆಂಕಣಿಯ ಗುಂಡು = ಡೆಂಕಣಿಯಂ ಯಂತ್ರದಿಂದ ಚಿಮ್ಮಿಸುವ ಇಡುಗುಂಡು : ಉಟ್ಟ ವಸ್ತ್ರವು ಬಳಸಿದ ಕೋಂಟೆಯಗಟ್ಟಿನೆ . ಕಟ್ಟಿದ ಕಟಸೂತ್ರವೆಸೆಯ ಬಟ್ಟವೊಲೆಯ ಡೆಂಕಣಿಯ ಗುಂಡಿಂದಳವಟ್ಟ ಜಂಗಮ ದುರ್ಗದಂತೆ (ಅಂಜಿತ. ೮-೮೪).

**ಡೆಂಕಣಿಕಾಱ** (ನಾ). ಡೆಂಕಣಿಯನ್ನು ಬಳಸುವುದರಲ್ಲಿ ನಿಯುಕ್ತ ನಾದವನು : ಕಾಳಗದಲಿ ಡೆಂಕಣಿಕಾಱ ಡಾವುದ (ಬೊಂಕಶಾ. ೦೯೪೦, ಸಿರಿ. ೪೩-೮ ; ?). [ ಡೆಂಕಣಿ + – ಕಾಱ ]

**ಡೆಂಕಣಿಕುಲ** (ನಾ). ಡೆಂಕಣಿಗಳ ಸಮೂಹ,–ಗುಂಪು ; ಇಡುಗುಂಡು ಮೊದಲಾದುವನ್ನು ಚಿಮ್ಮುವ ಯಂತ್ರಗಳ ಸಮೂಹ : ಬೆಲೆಗೆಯ್ ಲಲನೆಯನೆಂಬುದು ವೇಶ್ಯಾವಲಿಯೊಳ್ ಕೊಲೆಗೈಯೆಂಬುದು ಡೆಂಕಣಿ ಕುಲದೊಳ್ (ಅದ್ಭದೇ. ೨-೦೩).
[ ಡೆಂಕಣಿ + ಕುಲ ]

**ಡೆಂಕಣಿಕ್ಕೆ** 'ಡೆಂಕಣಿಗ್ಗೆ' ನೋ.

**ಡೆಂಕಣಿಗ್ಗೆ, ಡೆಂಕಣಿಕ್ಕೆ, ಡೆಂಕಣೆಗ್ಗೆ** (ನಾ). ಗುಂಡನ್ನು ಚಿಮ್ಮಿಸಲು ಡೆಂಕಣಿಯಂತ್ರಕ್ಕೆ ತುದಿಯಲ್ಲಿ ಜೋಡಿಸಿರುವ ಮೂರಿಮೊಗದ ಅಥವಾ ಹಂದಿ ಮೊದಲಾದ ಪ್ರಾಣಿಗಳ ತಲೆಯ ರಚನೆ ಇರುವ ತೋಳಿನ ಆಕಾರದ ಕೈ ; ಡೆಂಕಣಿಯಲ್ಲಿ ಅಳವಡಿಸಿರುವ ಚಿಮ್ಮು ಗೋಲು : ಬಲಿವ ಪಟಲ ಬೆಳೆ ಡೆಂಕಣಿ[ಪಾಠಾಂ. ಣೆ]ಗ್ಗೆ ಪಂದಿದಲೆ ತಿರುಗುಣಿ ಭೀಮಗದೆಯು ಬಲಿದು ಕೆತ್ತುವ ಬಡಗಿ (ಕುರಾಸಾಂ. ೩೭-೫೮). ಡೆಂಕಣಿಕ್ಕೆ : ಒಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುದೋಳ್ಗ ಳೆಸೆದುವಾ ಕಂತು ಕಡುಮುಳಿಸಿಂ ಪಾಂಥರೆರ್ದೆಗೋಂಟೆಯ ಘುತ್ತಿಯಿಡುವ ಡೆಂಕಣಿಕ್ಕೆಗಳಂತೆ (ಶ್ರೀಪಾಲ. ೦-೫೨) ; ಡೆಂಕಣಿಕ್ಕೆ ಡಗ್ಗೆವರೆ ಪಾರೆ . . . ಶರಗಳ ಸಂಕುಳವ್ಯದಿತು (ಕುರಾಸಾಂ. ೪೦-೫೦). ಡೆಂಕಣೆಗ್ಗೆ : ಮೇಲಿನ 'ಕುರಾಸಾಂ. ೩೭-೫೮'ರ ಪ್ರಯೋಗದ ಪಾಠಾಂತರವನ್ನು ನೋಡಿ.
[ ಡೆಂಕಣಿ + ಕೈ₃ (< ಕೆಯ್₂) ]

**ಡೆಂಕಣಿಜಂತ್ರ** (ನಾ). ಇಡುಗುಂಡುಗಳನ್ನು ಚಿಮ್ಮಿಸುವ ಯಂತ್ರ : ಗಿರಿಯ ಡೆಂಕಣಿಜಂತ್ರವನು ತರಹರಿಸುವವರಾರರಸ (ಕುಮಾಳ. ೨೭-೩೭).
[ ಡೆಂಕಣಿ + ಜಂತ್ರ ]

**ಡೆಂಕಣೆ** 'ಡೆಂಕಣಿ' ನೋ.

**ಡೆಂಕಣೆಗ್ಗೆ** 'ಡೆಂಕಣಿಗ್ಗೆ' ನೋ.

**ಡೆಂಕಳಿ** 'ಡೆಂಕಣಿ' ನೋ.

**ಡೆಂಕ₁** 'ಡಕ್ಕೆ' ನೋ.

**ಡೆಂಕ₂** (ನಾ). ಗೋಡೆಗಳ ಮೇಲೆ ಅಥವಾ ಕಂಬಗಳ ಮೇಲೆ ಮನೆಯ ಮಾಡನ್ನು ಹೊರಲು ಹಾಕಿದ ಮರದ ಅಡ್ಡೆ ; ಜಂತೆ : ಮೃಗ ಲಕ್ಷ್ಮನುದಯದೊಳ್ ನಿಲಿಸುಗೆ ಕಂಬವನಿಂದುಸುತನ ಲಗ್ನಂಬರೆ ಬೆಟ್ಟುಗೆ ಡೆಂಕ[ಪಾಠಾಂ. ಜಂತೆ]ಗಳಂ (ಲೋಕೋಪ. ೩-೨೭) ; ಥಕಾರಕ್ಕೆ ಡಕಾರಂ– ಗಾಥ–ಗಾಡ ; ಥಕ್ಕಾ–ಡಕ್ಕೆ ; ಥೆಂಕಾ–ಡೆಂಕ (ಶಮದ. ೨೫೫ ಪ್ರಯೋ).
[ < ಪ್ರಾ. ಥೇಂಕಾ = ಬಾವಿಯ ಮೇಲಿನ ಅಡ್ಡತೊಲೆ ]

**ಡೆಂಕಬರ** (ನಾ). ಭಯಂಕರವಾದ ಕ್ಷಾಮ ; ಬರಗಾಲ : ಭರಮಪ್ಪ ನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾಯಿತು. ಇದಕ್ಕೆ 'ಡೆಂಕಬರ' ವೆನ್ನುತ್ತಾರೆ (ಚಿತ್ರಪಾ. ೮, ಉಪೋದ್ಘಾತ). 'ಡೋಗಿಬರ' ಪರಾ.
[ ಡೆಂಕ₂ + ಬರ₁ (< ಬಱ) ]

**ಡೆಂಗಿಜ್ವರ** (ನಾ). "ಮೈ ಮೇಲೆ ಗುಳ್ಳೆಗಳೆದ್ದು ಜ್ವರಬಂದು ಕೀಲುಗಳಲ್ಲಿ (ಸಂಧಿಗಳಲ್ಲಿ) ತೀವ್ರಯಾತನೆಯಾಗುವ ಸೋಂಕುರೋಗ: 'ಡೆಂಗಿ ಜ್ವರ'" (Dengue. ಇಂಕಸಿ.). [ ಡೆಂಗಿ₀ + ಜ್ವರ ]

**ಡೆಂಚಾ** (ನಾ). ಒಂದು ಬಗೆಯ ಗಿಡ : ಸಣಬು (Sunhemp), ಕಳಲಿ, ಡೆಂಚಾ ಮೊದಲಾದ ಗಿಡಗಳನ್ನು ಬೆಳೆಯಿಸಿ ಅವುಗಳನ್ನು ನೆಲದೊಳಕ್ಕೆ ಉತ್ತುಬಿಟ್ಟರೂ ಆಯಿತು (ಬಾಲಕೃ. I. ೨೯೦). [ ? ]

**ಡೆಂಚೆಯ** (ನಾ). ಆನೆಯ ಬೆನ್ನ ಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪ ; ಅಂಬಾರಿ ; ಹೌದ : ವಿಕ್ರಮಪಾಳಪಾವುಸ ಶಿರಃಕಂಜಂ ಗಳಲ್ಲಾಡುತಿರ್ದುವು ತನ್ನಾನೆಯ ಹೊನ್ನ ಡೆಂಚೆಯದ ಚಂಚತ್ಕೇತುದಂಡಂ ಗಳೊಳ್ (ಎಕ. XI, ದಾವಣ. ೨೩-೩೯ ; 1224) ; ಡೆಂಚೆಯನವರಿರಿದೇಣೆಯೊಳ ಮೆಟ್ಟಿಗಡಿಯಿಟ್ಟನು . . . ಕರಿಯಿಂದ ಧರೆಗೆ (ಸಿಂಗಿರಾ. ೨೭-೮).
[ P ಇದು 'ಜೆಂಚೆಯ' ಎಂಬುದರ ಅಪಲಿಖಿತವಿರಬಹುದು ]

**ಡೆಂಡಣಿಸು** 'ಟೆಂಟಣಿಸು' ನೋ.

**ಡೆಂಡೆಣಿಸು** 'ಟೆಂಟಣಿಸು' ನೋ.

**ಡೆಂಡೆಲಿ** (ನಾ). ೧. ಆನೆಯ ಮೇಲೆ ಹಾಕುವ ಪಕ್ಷರಕ್ಷೆ ; ಹಕ್ಕರಿಕೆ ; ಜೂಲು. ೨. ಮದಿಸಿದ ಆನೆ: ಡೆಂಡಲಿಯೆಂಬ ಶಬ್ದಂ – ಗುಜದಲ್ಲಿಯುಂ. ಮತ್ತವಾರಣದಲ್ಲಿಯುಂ (ಶಮದ. ಮ. ೩೦೭). [ ? ]

**ಡೆಂಥಣಿಸು** 'ಟೆಂಟಣಿಸು' ನೋ.

**ಡೆಂಥಳಿಸು** 'ಟೆಂಟಣಿಸು' ನೋ.

**ಡೆಂಥೆಣಿಸು** 'ಟೆಂಟಣಿಸು' ನೋ.

**ಡೆಂಬಕ** (ನಾ). (?) : ದಿಟವುಟಥಕುತಿಸಂಪುಟ ನೆಲೆಗೊಳ್ಳದಾಗಿ ಡಂಬಕ [ಪಾಠಾಂ. ಟಂಬಕ, ಟಂಬನ, ಟೆಂಬಕ ]ನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೧೮). [ ? ]

**ಡೆಕ್ಕು** (ನಾ). ಹಡಗಿನ ಹೊರಮೈಯಲ್ಲಿರುವ ವೇದಿಕೆ,–ಅಂತಸ್ತು: ಡೆಕ್ಕಿನ ಮೇಲೆ ಒಬ್ಬಳೇ ನಿಂತು ಮಂದಾಕಿನಿ ಸಮುದ್ರದ ತೆರೆಗಳನ್ನು . . . ನೋಡುತ್ತ ನಿಂತಿದ್ದಾಳೆ (ಹೊಸಕ್ಷ. ೦೩೩). [ ←ಇಂ. Deck ]

**ಡೆಕ್ಕರಿಕ್ಕೆ** (ನಾ). ಒಂದು ಬಗೆಯ ಜಟ್ಟಿವರಸೆ ; ಮಲ್ಲಯುದ್ಧದಲ್ಲಿ ಒಂದು ಪಟ್ಟು : ಮೈಲಾಗಿನಲಿ ತೆಕ್ಕೆಯಲಿ ಸವಡಿಯ ಡೆಕ್ಕರಿಕ್ಕೆಯಲಿ . . . ಭೀಮಜೀಮೂತಗಳು ಹಳಚಿದರು (ಕುಮಾವಿ. ೭೦೩. ೪-೭೭). 'ಡೊಕ್ಕರ₁' ಪರಾ. [ ? ]

**ಡೆಗ್ಗೆ, ಡಗ್ಗೆ** (ನಾ). ಕಾಳಗದಲ್ಲಿ ಕೋಟೆಯ ತೆನೆಗಳನ್ನು ದೂಡಿ ಉರುಳಿಸಲು ಬಳಸುತ್ತಿದ್ದ ಉದ್ದವಾದ ಮರದ ದಿಮ್ಮಿ : ನಡಸಾರಂ ನೆಲವಾಳಿಗೆ ಪಡಕೆಡವುವ ಡೆಗ್ಗೆ ಬದ್ದಿರಂಗಳ್ (ತ್ರಿಪುವಿ. ೫-೦೦) ; ನಡೆ ಚಪ್ಪರದ ಮರ ಬದ್ದರ ಡೆಂಕಣಿ ಸುಡುವ ಪಟಲು ಕೋಟೆಯನು ಕೆಡವುವ ಡೆಗ್ಗೆ[ಪಾಠಾಂ. ಗೆ] (ಕುರಾಸಾಂ. ೩೭-೭೭); ಕೋಟೆಯ ತೆನೆಗಳನು ಕೆಡವಲು ನಿಡುವ ಡೆಗ್ಗೆಗಳಿಂದ (ಕಂಪ್ರಸಾಂ. ೮-೪) ; ಡೆಗ್ಗೆಯಿಂದುದಿರ್ದವು ಕಲ್ಲ ಕೋಟೆಯ ಗುಂಡು ವೆಗ್ಗಳ ಬಿದ್ದುದು ಪಟಲ (ಅನಂತ. ೦೮-೬೦). 'ಡೆಗ್ಗೆವರ' ಪರಾ. ಡಗ್ಗೆ : ತಳ ನಡ ಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಿಸಿ ಕೋಟೆಯ ಲಗ್ಗೆಯೊಳು (ಕುರಾಸಾಂ. ೪೫-೨) ; ಡಗ್ಗೆ ನೆಲಗುಮ್ಮಗಳ ತರಹೇಳಿ (ಪ್ರಹ್ಲಾದ. ೫-೪೦). [ ? ]

**ಡೆಗ್ಗೆವರ** (ನಾ). =ಡೆಗ್ಗೆ : ನಡೆಚಪ್ಪರವನು ನಡೆಯಿಸಿ ಡೆಗ್ಗೆವರಗಳಂ ಜಡಿದು ಹೊಯಿಸುವ ಭರವಸಕ್ಕೆ ಬದ್ದರಗಳೊಳಗಡಗಿ ಗುದ್ದಲಿಹಾರೆಯಿಂದಗೆವ

ರಭಸಕ್ಕೆ (ಸತ್ಯ ಶ್ರೀ. ೮-೩೭) : ತುಡುಕಲೆಂದೆನಿತ ಮಾಡುಸಡದಿಂ ಬಹುರೂಪುವಡೆದು ತಾಗುವ ರಾಹುಕೇತುವೋ ಯೆಂಬಂತೆ ಗಡಿಯಿಲ್ಲದಲ್ಲಲ್ಲಿ ಹಾಯಿಸುವ ಡೆಗ್ಗೆವರನತಿಭೀಕರಂಬಡೆದವು (ಸತ್ಯಶ್ರೀ. ೮-೪೦).

[ ಡೆಗ್ಗೆ + ವುರ$_1$ ]

**ಡೆಬ್ಬೆ$_1$** 'ದಬ್ಬೆ$_1$' ನೋ.

**ಡೆಬ್ಬೆ$_2$** 'ದಬ್ಬೆ$_2$' ನೋ.

**ಡೆಮ್ಮಿ** (ನಾ). ಬರೆಯುವ ಮತ್ತು ಗ್ರಂಥಗಳ ಮುದ್ರಣಕ್ಕೆ ಉಪಯೋಗಿಸುವ ಕಾಗದದ ಅಳತೆಯ ಒಂದು ಪ್ರಮಾಣ ; (ಬರೆಯುವ ಕಾಗದ, ೧೫½" × ೨೦" ; ಮುದ್ರಣಕಾಗದ, ೧೭½" × ೨೨½" : ಡೆಮ್ಮಿ ೧೮ ಪೌಂಡು ಎಂದರೆ, ಡೆಮ್ಮಿ ಅಳತೆಯ ಐನೂರು ಹಾಳೆಗಳುಳ್ಳ ಒಂದು ರೀಮಿನ ತೂಕ (ಮುದ್ರಕ. ೮೩). [ ←ಇಂ. Demy ]

**ಡೆಳ್ಳೆ** (ನಾ). ಬಿದಿರಿನ ಬುಟ್ಟಿ : ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ ವ್ಯಸ್ತಾಳಿ ನೀರಾಜನಂ ವಿಳಸತ್ ಕಂಡಿಕೆ ಡೆ ಳ್ಳೆ ಯಿಂ ಬೆ ಡೆ ಗ ಳೊ ಳ್ ಸಂಪೂರ್ಣ ತೋಯಾದಿ ಮಂಗಳವಸ್ತುಪ್ರಕರಕ್ಕದೇಂ ಶಚಿಯು ಕೆಯ್ಯುಂ ಕಣ್ಣುಮೋರಂದನಗ್ಗಲಿಸುತ್ತಿರ್ದುದು ಪೂಜೆಗುಚ್ಚುಗಿಸಿ ತನ್ನಂ ನೋಡೆ ಸಕ್ರಂದನಂ (ಅನಂತಪು. ೦೦-೯೬); ನಾನಾ ನವೀನ ಕೋಮಳ ಪಕ್ವಫಳಂಗಳಿಂ ತುಂಬಿದ ಡೆಳ್ಳೆಗಳ ಬಳಗಂಗಳಂ ತಂದಮಡುಯಿಸಿ ನೀಡುವುದುಂ (ಜಾತಕ. ೦೬-೨೩೯ ವ). [ < ಪ್ರಾ. ಡಲ್ಲ, ಡಲ್ಲಗ ]

**ಡೇಂಕಣೆ** 'ಡೆಂಕಣಿ' ನೋ.

**ಡೇಕು** 'ದೇಕು$_1$' ನೋ.

**ಡೇಗು$_1$** 'ತೇಗು$_2$' ನೋ.

**ಡೇಗು$_2$** 'ತೇಗು$_3$' ನೋ.

**ಡೇಗೆ** (ನಾ). ೧. ಹದ್ದಿನ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಗಿಡುಗ: ಒಂದು ದಿನ ಡೇಗೆಯಂ ಪಾರಿಸುತ್ತಿರೆ ಪಾರಿ ಬಂದು ಕಿರಿಯಮ್ಮನರ ಮನೆಯಂ ಪೊಗಲ್ಕೆ (ಗುರುಚಾ. ೦೩-೯೦); ಈಟಿ ಭಲ್ಲೆಯ ಸರಳು ಕವಲಂಬುಗಳು ಬಡಿಗೋಲುರುವ ಸಾಳುವ ಡೇಗೆ ಸಿವ್ವಂಗಿಗಳು (ಅನಂತಾ. ೩-೩-೬): ಡೇಗೆಯದುರೊಳು ಕಂಡ ಲಾವುಗೆ ಬಾಗುವೋಲ್ (ಜಿನಭಾ. ೬೨-೯) ; ಮರಗಳ ಮೇಲೆ . . . ಗಿಳಿ, ಕೋಗಿಲೆ, ಡೇಗೆ ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಕೃಷ್ಣಹೂ. ೦೨). [ ದೇ.ಶ ತೆಲು. ಡೇಗ ]

**ಡೇಗೆಕಣ್ಣು** (ನಾ). ೧. ಗಿಡುಗನ ಕಣ್ಣು. ೨. (ಅಲಂ) ಸೂಕ್ಷ್ಮದೃಷ್ಟಿ ; ತೀಕ್ಷ್ಣದೃಷ್ಟಿ : ಅದರ ಡೇಗೆಕಣ್ಣಿಗೆ ಮೀನು ಕಾಣಿಸಿದೊಡನೆಯೇ ಬಾಣದಂತೆ ನೀರೊಳಗೆ ನುಸುಳಿ ಕೊಕ್ಕಿನಲ್ಲಿ ಅದುಮಿ ಬಂಡೆಗಲ್ಲಿನ ಮೇಲೆ ಕುಳಿತು ನುಂಗುತ್ತದೆ (ಹಾಳಿಗಿ. ೮೫) ; ಆದಕ್ಕಾಗಿ ಬೀರನೊಡನೆ ಸುಬ್ಬನೂ ಬಂದು ಡೇಗೆಕಣ್ಣು ಮಾಡಿ ಕುಳಿತುಕೊಳ್ಳುವನು. (ಮುಂಗಾಮು. ೫೮).

[ಡೇಗೆ + ಕಣ್ಣು (< ಕಣ್)]

**ಡೇಗೆಬೇಗ** (ನಾ). ಗಿಡುಗನ ರಭಸ; ಬಹಳ ವೇಗ; ಅತಿರಭಸ: ಹೊಲದ ಹೊದರೊಳು ಹುದುಗಿ ಹೊಂಚುತಿಹ ಹೊರಸಿಗೆರಗುವ ಡೇಗೆಬೇಗದಲಿ (ಶ್ರೀರಾಮಾ. ೫೯೫-೩೧೦). [ ಡೇಗೆ + ಬೇಗ ]

**ಡೇರ** 'ಡೇರೆ$_1$' ನೋ.

**ಡೇರಾ$_1$** 'ಡೇರೆ$_1$' ನೋ.

**ಡೇರಾ$_2$** 'ಡೇಲಿಯಾ' ನೋ.

**ಡೇರಿ** 'ಡೈರಿ$_2$' ನೋ.

**ಡೇರೆ$_1$, ಡೇರ, ಡೇರಾ$_1$** (ನಾ). ಬಟ್ಟೆಗಳನ್ನು ಹೊದಿಸಿ ತಯಾರಿಸಿದ ತಾತ್ಕಾಲಿಕ ವಸತಿಗೃಹ ; ಗುಡಾರ ; ಬಿಡದಿ : ಜಗವು ಸರ್ಕಸ್ಸಿನ ಡೇರೆ (ಚಂದ್ರವೀ. ೦೪-೫೪): ಈ ರಾತ್ರಿ ಕಳೆಯಲು ಒಂದು ಡೇರೆ ಸಿಕ್ಕಿದ್ದರೆ ಚೆನ್ನಾಗಿತ್ತು (ಮಹಿಷ. ೨೯) : ಈ ಬಯಲಾಟದವರು, ಡೇರೆ ಹಾಕಿಕೊಂಡು ಟಿಕೇಟಿನ ಮೂಲಕ ಆಟವಾಡುವ ರೂಢಿಯು ಬಂದಿದೆ (ಯಕ್ಷಲ. ೨೦). **ಡೇರ** : ಮುಂದೆ ನೋಡು ದಾರಿ ಸಾವಿರಾರು ಮೈಲಿದೂರ, ಸಾಲುಸಾಲು ಡೇರ (ನಡಬಂ. ೨-೨). **ಡೇರಾ** : ದೂಳುತುಂಬಿದ ಡೇರಾ ಬಟ್ಟೆಯ ಮೇಲ್ಭಾವಣಿ ಕಟ್ಟಿದಂತೆ . . . ಆಕಾಶದಲ್ಲಿ ಮೋಡಕಟ್ಟುವುದು (ಚಾಂಕ್ರ. II, ೦೦೬೦). [ ←ಹಿಂ. ಡೇರಾ ]

**ಡೇರೆ$_2$** 'ಡೇಲಿಯಾ' ನೋ.

**ಡೇಲಿಯಾ, ಡಾಲಿಯಾ, ಡೀಲಿ, ಡೇರಾ$_2$, ಡೇರೆ$_2$, ಡ್ಯಾಲಿಯಾ** (ನಾ). ಒತ್ತೊತ್ತಾಗಿ ಎಸಳುಗಳುಳ್ಳ, ಬಣ್ಣಬಣ್ಣದ ದುಂಡಗಿನ ಹೂವುಗಳನ್ನು ಬಿಡುವ ಒಂದು ವಿಧದ ಗಿಡ ಮತ್ತು ಅದರ ಹೂವು : (ಪ್ರಕಿಗಿ. ೨೮-೫೪೪). **ಡಾಲಿಯಾ**: ಮೂಡಿದೀ ಡಾಲಿಯಾ ಗಿಡದ ಹಸುರು ಕೈಯಲ್ಲಿ ಜಗದ ಅವ್ವ ಬಿಸಿಲು ಗಾಳಿಯನಿಡಲು ಮೆಲ್ಲನೆಯು (ಅನೀಲ. ೩೯-೦). **ಡೀಲಿ** : "ಬಣ್ಣಬಣ್ಣದ ಸುತ್ತು ಹೂವುಗಳು ಬಿಡುವ ಮೆಕ್ಸಿಕೊ ತವರಿನ ಒಂದು ಜಾತಿಯ ಗೆಡ್ಡೆಯ ಗಿಡ: ಡೀಲಿ"(Dahlia.ಇಂಕಪ.). **ಡೇರಾ** : ಮನೆಯ ಮುಂದೆ ಚಮನ್, ರೋಜಾ, ಡೇರಾ ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಳೆ ಹಣ್ಣಿನ ಮರ (ಹೊಸಕ್ಕೆ. ೦೨೩). **ಡೇರೆ$_2$** : ಡೇರೆಯ ಗಿಡದಿಂದ ಹೂದೋಟಕ್ಕೆ ಕಳೆ ಹೆಚ್ಚುತ್ತದೆ (ರೂಢಿ). **ಡ್ಯಾಲಿಯಾ** : ತೊಳಗುತ್ತಿವೆ ತೋಟದಲಿ ತೆರತೆರ ಗುಲಾಬಿಹೂ ಡ್ಯಾಲಿಯಾ ಬೋಗೇನವಿಲಿಯ (ಸುನೀತ. ೩-೬). [ ←ಇಂ. Dahlia ]

**ಡೈನಮೊ, ಡೈನಾಮೊ** (ನಾ). "ತಾಮ್ರದ ತಂತಿಯ ಸುರುಳಿಗಳನ್ನು ಕಾಂತ ಕ್ಷೇತ್ರದಲ್ಲಿ ವೇಗವಾಗಿ ತಿರುಗಿಸುವುದರಿಂದ ಯಾಂತ್ರಿಕಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಮಾರ್ಪಡಿಸುವ ಯಂತ್ರ" (Dynamo. ಇಂಕಪ.) : ಆ ತಂತಿಯ ಮತ್ತೊಂದು ಅಂಚನ್ನು ಒಂದು ಡೈನಮೋವಿನ ಋಣಧ್ರುವಕ್ಕೆ ಲಗತ್ತಿಸಬೇಕು (ಮುದ್ರಕ. ೫೯). **ಡೈನಾಮೊ** : ತಿರುಗುವ ಚಕ್ರಗಳಿಗೆ ವಿದ್ಯುತ್ತನ್ನು ಹೊರಡಿಸುವ ಡೈನಾಮೋವನ್ನು ಜೋಡಿಸುವರು (ಚಾಂಕ್ರ. I, ೪೦). [ ←ಇಂ. Dynamo ]

**ಡೈನಾಮೊ** 'ಡೈನಮೊ' ನೋ.

**ಡೈನಾಮೈಟ್** (ನಾ). ಪ್ರಬಲವಾದ ಸಿಡಿಮದ್ದು ; ತೀವ್ರ ಸ್ಫೋಟಕ : ಬಾವಿ ತೋಡುವಾಗ ಸಿಕ್ಕ ಬಂಡೆಯನ್ನು ಡೈನಾಮೈಟ್ ಉಪಯೋಗಿಸಿ ಒಡೆಸಿದರು (ರೂಢಿ). [←ಇಂ. Dynamite ]

**ಡೈರಿ$_1$** (ನಾ). ದಿನಚರಿ ಬರೆಯುವ ಪುಸ್ತಕ : ಕುಳಿತ ಕುರ್ಚಿಯ ಮೇಲೆ ತೆರೆದು ಹಳೆ ಡೈರಿಯನ್ನು ಮುಗುಚುತ್ತ ನಡೆದೆ ಒಂದೊಂದೆ ಪುಟವ (ಮೋಹಂ. ೮೩) : ಓ, ಅದೇ ಡೈರಿ ಬರೆದಿದ್ದೇನಮ್ಮ (ಹಾಡಹು. ೨೩-೨೦).

[ ←ಇಂ. Diary ]

**ಡೈರಿ$_2$, ಡೇರಿ** (ನಾ). ಹಾಲು, ಮೊಸರು, ಬೆಣ್ಣೆಗಳನ್ನು ತಯಾರಿಸುವ ಸ್ಥಳ ; ಹೈನುಶಾಲೆ: ಬೆಂಗಳೂರು ಡೈರಿಯ ಹಾಲನ್ನು ಕೊಳ್ಳುತ್ತಿದ್ದೇವೆ (ರೂಢಿ). **ಡೇರಿ** : ಸಹಕಾರಿಸಂಘಗಳು ಡೇರಿಗಳನ್ನು ನಡೆಸುತ್ತಿವೆ (ರೂಢಿ).

[ ←ಇಂ. Dairy ]

**ಡೊಂಕ$_1$** (ನಾ). ೧. ವಕ್ರವಾದುದು ; ಕೊಂಕಿದುದು : ಕರ್ಕಂಡುಮುಡುಚಿ ನಿತು ಮುಳ್ಳೆಂಬುದು ಡೊಂಕನೊ ಸಸಿನಮೊಯೆಂಬಂದಂ (ಪುಷ್ಪಕ್ರ. ೩-೦೫ ವ). ೨. ಬಾಗಿಸುವವನು (?) : ತೊಡರ್ದರ ಡೊಂಕ . . . ಸೆಟ್ಟಿಕಗಂ (ಎಕ. IX (8), ಚಾನಶಾ. ೬೮-೮; 1810). (ಗು). ೩. ಕೊಂಕಿದ; ಬಾಗಿದ; ವಕ್ರವಾದ. [ ಡೊಂಕು$_2$ + – ಅ$_7$ ]

**ಡೊಂಕ$_2$** (ನಾ). ಒಂದು ಕುಲದ ಹೆಸರು (?): ಶರಣಾಗತಜನಮುಂ ನಿತ್ತರಿಪೆಡೆಯೊಳ್ ವಜ್ರಪಂಜರಂ ಕಾನನೆ ಡೊಂಕರ ಮಾದಿರಾಜವಿಭು ತೊಡರ್ದರ ಡೊಂಕಿಯೆನಿಪ್ಪ ಬಿರುದನಿರದೆತ್ತಿಸಿದಂ (ಮುಂಬರಾ. X, ೨೬೪-೨೭ ; 1229).

[ ? ]

**ಡೊಂಕಣ** 'ಡೊಂಕಣಿ' ನೋ.

**ಡೊಂಕಣಿ, ಡೊಂಕಣ, ಡೊಂಕಳಿ, ಢೊಂಕಣಿ** (ನಾ). ಒಂದು ಬಗೆಯ ಆಯುಧ ; ಸಬಳ : "ಕೊಂತಂ, ಡೊಂಕಣಿ—ಈ ೨ ಸಬಳಂ" (ಕಐಸಾ. ೧೯-೨೬೬) ; "ಡೊಂಕಣಿಯುಂ ಕೊಂತ ಸಬಳಮನಿಕ್ಕುಂ" (ಕವಿಕಂ. ೦೨೮) ; ಕರ್ಣನ ಡೊಂಕಣಿಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯು ದಿಟ್ಟಿಗಳುಕ್ಕೆ (ಕಬ್ಬಿಗ. ೨೬೩) ; ಹೆಣನ ಹೋಳಿನ ಸಿಡಿದಡಗು ಡೊಂಕಣಿಯೊಳೆಸೆದುವು ಕಾಲನಾರೋಗಣೆಗೆ ಮಿಗೆ ಪಡಿಸಾದ ನೋಡದೆ ಮಾಣ ವೆಂಬಂತೆ (ಕುಮಾವ್ಯಾ. ೪-೯೯) : ವರಶು ಗದೆ ಚಕ್ರ ಡೊಂಕಣೆ . . . ಮೊದಲಾಗಿರ್ದ ಕೈದುಗಳ ಪರಿವಿಡಿಯೊಳುರವಣಿಸಿ ಪೊಯ್ವಂ (ಕೃಷ್ಣಾ. ೦೨-೨೮). **ಡೊಂಕಣ** : ಡಂಕಣಿಕ್ಕೆ ಡೆಗ್ಗೆವರ ಪಾರೆ ಗುದ್ದಲಿ ಡೊಂಕಣ ಸಬಳ ಶರಗಳ ಸಂಕುಳವಯ್ದುತು (ಕುಮಾರಾಮ. ೪೧-೩೦). **ಡೊಂಕಳಿ**: "ಡೊಂಕಳಿ = ೧. ಬತ್ತಳಿಕೆ. ೨. ಈಟಿಯ ಗಣೆ" (ಗಂಗಾತು. ೧೯೩). **ಢೊಂಕಣಿ**: "ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣಿ, ಢಂಕಣ ಅಢಾಳಂ (ಢಾಳಂ) (ಕಮಿದ. ೦೫ ಪ್ರಯೋ). 'ಡಂಕಣಿ' ಪರಾ. [ ←ತೆಲು. ಡೊಂಕಣಿ ]

**ಡೊಂಕಣಿಕಾರ** 'ಡೊಂಕಣಿಕಾಱ' ನೋ.

**ಡೊಂಕಣಿಕಾಱ, ಡೊಂಕಣಿಕಾರ** (ನಾ). ಸಬಳವನ್ನು ಹಿಡಿದು ಯುದ್ಧ ಮಾಡುವವನು ; ಭರ್ಜಿಯವನು : ಕಡುನಿಮಿರ್ದುರ್ಪೊಳೆವ ಪೊಸ ಪೊಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ಪಿಡಿದು ಬರುತಿರ್ದುದೆತ್ತಂ ಕಡು ಸೊರ್ಕಿದ ತುಂಬಿಯೆಂಬ ಡೊಂಕಣಿಕಾಱರ್ (ಕಬ್ಬಿಗ. ೨೦೫); ಧುರ ದೊಳಗೆ ಬಲುಗಾಱರೊಗ್ಗಿನ ಹಲಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯವ ಥರಥರದಿ ಹೊಕ್ಕರು (ಕುಮಾವ್ಯಾ. ೯-೪೬). **ಡೊಂಕಣಿಕಾರ**: ಧುರದೊಳಗೆ ನಿಂದರ್ದ್ದ ಹರಿಗೆಕಾರರು ಹಲಗೆಯವರು ಡೊಂಕಣಿಕಾರರು (ತುರಂಗ. ೩೨-೩). 'ಡಂಕಣಿಕಾಱ' ಪರಾ. [ ಡೊಂಕಣಿ + – ಕಾಱ ]

**ಡೊಂಕತನ** 'ಡೊಂಕುತನ' ನೋ.

**ಡೊಂಕಬಂಕ** (ನಾ). ೧. ಬಹಳ ಕುಟಿಲಸ್ವಭಾವದವನು; ಅತಿವಕ್ರ. (ಗು). ೨. ಅಂಕುಡೊಂಕಾದ : ಕೃತ್ರಿಮವಾದ ಅವಯವಗಳಿಂದ ಸ್ತ್ರೀಪಾತ್ರವನ್ನು ಡೊಂಕಬಂಕನಾಗಿ ಅಭಿನಯಿಸುವವನನ್ನು ನೋಡಿ (ಸಾಹಿಚೇ. ೨೦). [ ಡೊಂಕ₁ + ಬಂಕ₂ ]

**ಡೊಂಕಳಿ** 'ಡೊಂಕಣಿ' ನೋ.

**ಡೊಂಕಿ₁** (ನಾ). ೧. ಬಾಗಿಸುವವನು: ಕಾವೇರೀವಲ್ಲಭ ಕರದೀವ ದಾನಿ ಮಱೆ ಹೊಕ್ಕರೆ ಕಾವ ತೊಡೆದರ ಡೊಂಕಿ ಬಿರಿವರ ಬಾಯ ಬೊಂದಿಗೆ . . . ಮಾದಿಗದೇವನೊಡನೆ (ಎಕ. IX, ಕಾನಕಾ. ೦೦೬-೫ ; 1293). ೨. ಗಾಳದ ಮಿಱಿನಿನ ತುದಿಯ ಕೊಕ್ಕೆ; ಗಾಳದ ತುದಿಯಲ್ಲಿ ಅಳವಡಿಸಿದ ಕೊಕ್ಕೆ–ಮುಳ್ಳು (?): ಗಾಳದ ಡೊಂಕಿಯುಗ್ರವಮನೆ ಬಾಳರನಂ ಪಿಡಿದಿರ್ದ . . . ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕುಸುಮಜಾ. ೦೦-೦೯೮). [ ಡೊಂಕು₂ + – ಇ₃ ]

**ಡೊಂಕಿ₂** (ನಾ). ಒಂದು ಬಗೆಯ ತೆರಿಗೆ : ದೇವರಗಾಣಕ್ಕೆ[ತೆ]ಱಬಣ್ಣಿಗೆ ಡೊಂಕಿ ಬೀರವಣ ಸರ್ವ್ವಬಾಧಾಪರಿಹಾರಮಾಗಿ ಬಿಟ್ಟರು (ಸೌಇಇ. XI-ii, ೦೫೦-೨೬ ; 1109). [ ? ]

**ಡೊಂಕಿವಣ, ಡೊಂಕೆವಣ** (ನಾ). ಡೊಂಕಿಯ ತೆರಿಗೆಯ ಹಣ : ನನ್ನಾದೀವಿಗೆಗೆ ಡೊಂಕಿವಣ ಮಾನೆಣ್ಣೆಸಹಿತಂ ಬಿಟ್ಟ ಗಾಣವೊಂದು (ಕಇ. II, ೧೧-೩೬ ; 1181). **ಡೊಂಕೆವಣ** : ವರ್ಷಸಂಪ್ರತಿಯಾಗಿ ನಡಸುವ ಗದ್ಯಾಣವೆರಡು ಒಂದು ಗಾಣದ ಡೊಂಕೆವಣ ಕಾರುಕದೆಱೆ . . . ಕೊಟ್ಟರು (ಕಇ. IV, ೦೩-೬೩ : 1165). [ ಡೊಂಕಿ₂ + ಪಣ₃ ]

**ಡೊಂಕಿಸು** (ಕ್ರಿ). ಓರೆಯಾಗು; ವಕ್ರವಾಗು : ಬಡಗಣ ಹಿಮಗಿರಿಯೊಳು ಹುಟ್ಟಿ ತೆಂಕ ಬಂದೊಡನೆ ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆ (ಭರಕ. ೨೩-೩೯). [ ಡೊಂಕು₁ + – ಇಸು₃ ]

**ಡೊಂಕು₁** (ಕ್ರಿ). ಓರೆಯಾಗು ; ವಕ್ರವಾಗು ; ಬಾಗು : ಡೊಂ[ಕಾಂ. ಕೊಂ]ಕಿದ ದೇಹವನುರುಗಿಸಿ ನಡೆವುತೆ (ಭ್ರಂಗೀರ. ಹ. ೯೬೩-೨೪); ಆಗುಳಿಸುತೆದ್ದೊಂದು ಕಾಲಲಿ ಡೊಂಕಿ ನಡೆವುತ್ತೆ (ಬಸಪು. ೩೯-೨೨); ನಗುವರಾರಾನೊಂದು ಬಿನದವ ಮಾಡಲ್ಕೆ ಮೊಗಗಳು ಡೊಂಕುವವು (ಭರಕ. ೯೬-೦೯೦) ; ಮಧುವಾಣಿಯ ಮೋಱೆ ಚಟ್ಟರದಿ ಡೊಂಕಿತು (ಭರಕ. ೯೬-೦೯೨). [ ದೇ.೩ ತೆಲು. ಡೊಂಕು, ಟೊಂಕು ]

**ಡೊಂಕು₂** (ನಾ). ೧. ಬಾಗಿರುವಿಕೆ; ನೆಟ್ಟಗಿಲ್ಲದಿರುವಿಕೆ; ಸೊಟ್ಟಾಗಿರುವಿಕೆ ; ಓರೆಯಾಗಿರುವಿಕೆ ; ವಕ್ರತೆ : ತೆಂಗಿನ ಪೊಸನೇಣಂದಱು ದಿಂಗಳ್ವರಮುಱು ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) ; ಹಾವಿನ ಡೊಂಕು ಹುತ್ತಕ್ಕೆ ಸಸಿನ (ಬಸವ. ೦೯೯); ಕಬ್ಬಿಗೆ ಡೊಂಕಲ್ಲದ ಮಧುರಕುಂಟೆ ಡೊಂಕು (ನಗಮಾ. ೬೦); ನರವತಿಗಿದಿರಾಗಿ ನಲಿದು ತಿರುಗಿದರಾಗಲೆ ಡೊಂಕನಳಿದು ಗಂಗೆ ಹರಿವಂತೆ ನೇರದೊಳಿತ್ತು (ಭರಕ. ೦೩-೯೬); ಡೊಂಕು ಹಣ್ಣುಗಳಲ್ಲಿ ಡೊಂಕು ಬಾಳೆಯ ಹಣ್ಣು ಡೊಂಕುಂಟು ಒಳಗೆ ರುಚಿಯುಂಟು ಸಜ್ಜನರ ಡೊಂಕು ಲೇಸು (ಸರ್ವಜ್ಞ. ೮೦೨). ೨. ಓರೆಯಾದುದು ; ಸೊಟ್ಟಾಗಿರುವುದು ; ವಕ್ರತೆಯುಳ್ಳದು : ನೋಡುವ ಡೆಂಟೆಡೆ ಡೊಂಕು (ಪುಣ್ಯಾಸ್ರ. ೩-೨೦) ; ಕತ್ತಿಯ ಬಾಯ ತಾ ಡೊಂಕಾದ ಮಾತ್ರಕ್ಕೆ ಕತ್ತರಿಸಿದ ಕಬ್ಬು ಡೊಂಕೆ (ಅಂಬಾಪ. ೭೧-೯೭) ; ಬಿಂಬಾಧರವು ಡೊಂಕು ಚುಂಬನವದು ಡೊಂಕೆ ರಸಿಕಾ ಪೇಳೊ (ಗರಿ. ೩೨-೦೦) ; ಒಂದು ಎಲೆಯಂತೆ ಇನ್ನೊಂದಿಲ್ಲ . . . ಕೆಲವು ಸೊಟ್ಟು, ಡೊಂಕು (ಚಾಮಾನ. ೧೦೩) ; ಕಬ್ಬು ಡೊಂಕಾದರೆ ಸವಿ ಡೊಂಕೇ ? (ಗಾದೆ). ೩. ಬಾಗಿರುವ ಸ್ಥಳ ; ಸೊಟ್ಟಾಗಿರುವ ಪ್ರದೇಶ : ಡೊಂಕಿಸಿ ಮೂಡ ಹರದು ಕಡಲ ಕೂಡಿದ್ದುದಾ ಗಂಗೆಯುದಱ ಡೊಂಕಿನೆಡೆಯೊಳು ಬಿಟ್ಟನಾ ಚಕ್ರಿ (ಭರಕ. ೨೩-೩೯). ೪. ಅಡ್ಡಿ ; ಅಡಚಣೆ ; ತೊಂದರೆ : ಬೆಂಕಿಯನುರುಹು ಕಟ್ಟಿಗೆಯ ಹಾಕಿವರವರಂ ಕರೆಯಾಗಾಗಲೆಂಬ ಡೊಂಕಿಲ್ಲ (ಭರಕ ೨೩-೮೮). ೫. (ಅಲಂ) ನೇರವಲ್ಲದ ಮಾತು ; ಕೊಂಕುಮಾತು : ಸಜ್ಜನರ ಡೊಂಕು ಲೇಸೆಂದ (ಸರ್ವಜ್ಞ. ೮೦೨). ೬. (ಅಲಂ) ಕೊಂಕು ನಡತೆ ; ಅವಗುಣ ; ವಕ್ರಸ್ವಭಾವ ; ದೋಷ : ಲೋಕದ ಡೊಂಕ ನೀವೇಕೆ ತಿದ್ದುವಿರಿ . . . ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ (ಬಸವ. ೦೨೪) ; ಎನ್ನ ಮನದ ಡೊಂಕ ತಿದ್ದಿಸೊ (ಪುರಂದ. ೦-೦೦೫ ಪಲ್ಲವಿ) ; ಬಿಂಕದ ಕಡಲೊಳಿಪ್ಪವರೊಳು ಪೊಡವಿಯ ಡೊಂಕನಿಂತುಸುರ್ವುದು ಸೊಕ್ಕೆ (ಭರಕ. ೨೪-೯೬); ತನ್ನ ಡೊಂಕನು ತನಗೆ ತಿಳಿಯದೆ ಅನ್ಯರಿಗೆ ಆಡಿಕೊಳುವಗೆ ಶುನಕ ಬುದ್ಧಿಯೊಳು ಬೆರೆದಗೆ ಭಕ್ತಿಯೋಗ್ಯವಲ್ಲೆಂದ (ಕಾಕನಿ. ೨-೩) ; ಅವನ ನುಡಿಯಲ್ಲಿ ಎರಡಿರಲಿಲ್ಲ ನಡೆಯಲ್ಲಿ ಡೊಂಕಿರಲಿಲ್ಲ (ಮತಕ. ೬೨). ೭. ವಕ್ರಸ್ವಭಾವವುಳ್ಳದು ; ಕೀಳುವರ್ತನೆಯುಳ್ಳದು : ಮನೆ ಡೊಂಕು ಮನಸು ಡೊಂಕಾದರು ನಿಮ್ಮ ಶಿಷ್ಯನ ಮೇಲಣ ಪ್ರೀತಿಯಿಂದ ಜನಕಲ್ಪರಿರ ಬಿಜಯಂಗೈದಿರಿ (ಭರಕ. ೩-೭೦). (ಗು). ೮. ಕೊಂಕಾದ; ವಕ್ರವಾದ ; ನೇರವಲ್ಲದ; ಕುಟಿಲವಾದ: ಡೊಂಕುಬಾಲದ ನಾಯಕರೆ ನೀವೇನೂಟವ ಮಾಡಿದಿರಿ (ಪುರಂದ. ೨-೯೦ ಪಲ್ಲವಿ) ; ಯೋಗಿ ಹಳದಿಯ ಬಿಂದಿಬಟ್ಟೆಯನ್ನು ಧರಿಸಿದ್ದ ಕೈಯಲ್ಲಿ ಒಂದು ಡೊಂಕುಕೋಲಿತ್ತು (ಚಾಮಿಅ. ೩೦೭). 'ಡೊಂಕುಗೋಣು' ಪರಾ.

**ಡೊಂಕುಡೊಸುಕು** = ಓರೆಕೋರೆ : (೬). **ಡೊಂಕುಡೊಂಕು** = ಡೊಂಕು ಡೊಸುಕು : (೬). [ <ಡೊಂಕು₁ ]

**ಡೊಂಕುಗ** (ನಾ). ವಕ್ರಸ್ವಭಾವದವನು; ವಂಚಕ: "ಕುಟಿಲಂ=ಡೊಂಕುಂ; ಡೊಂಕುಗನುಂ" (ಶಾಶಕ್ಕ. ೨೨೭) [ ಡೊಂಕು$_2$ + – ಗ$_2$ ]

**ಡೊಂಕುಗಾಲು** (ನಾ). ಡೊಂಕಾದ ಕಾಲು; ಸೊಟ್ಟಗಾಲು: ಕುಸಿದ ನಡುವಿನ ಹೊರಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ . . . ತೋಳ ಕಾರೊಡಲ ಕುಬುಬನು (ಬಸಪು. ೨೦–೦೦).
[ ಡೊಂಕು$_2$ + ಕಾಲು$_1$ (<ಕಾಲ್$_1$) ]

**ಡೊಂಕುಗೋಣು** (ನಾ). ಓರೆಯಾದ ಕುತ್ತಿಗೆ; ಸೊಟ್ಟ ಕತ್ತು; ವಕ್ರವಾದ ಕಂಠ: (+). [ ಡೊಂಕು$_2$ + ಗೋಣು (<ಗೋಣ್) ]

**ಡೊಂಕುತನ, ಡೊಂಕತನ** (ನಾ). ೧. ಬಾಗಿರುವಿಕೆ; ಓರೆಯಾಗಿರುವಿಕೆ; ವಕ್ರತೆ: (+). ೨. ವಕ್ರಸ್ವಭಾವ. **ಡೊಂಕತನ**: ೧. "ನಮ್ರತೆ" (ಗುವಿಕೋ). [ ಡೊಂಕು$_2$ + – ತನ ]

**ಡೊಂಕುನಡೆ** (ನಾ). ಓರೆಯಾಗಿ ನಡೆಯುವಿಕೆ; ವಕ್ರಗಮನ; ಸೊಟ್ಟ ನಡಿಗೆ: "ಸರ್ಪಣಂ=ಡೊಂಕುನಡೆ" (ಶಾಶಕ್ಕ. ೬೬); "ಕುಟಿಲಾಯಾಂ ಗತೌ, ಡೊಂಕುನಡೆಯೊಳ್" (ಶಾಶಕ್ಕ. ೦೩೯). [ ಡೊಂಕು$_2$ + ನಡೆ$_2$ ]

**ಡೊಂಕುವೇಱು** (ಕ್ರಿ). ಓರೆಯಾಗು; ವಕ್ರತ್ವವನ್ನು ಪಡೆ: ಬಿಂದಡಿ ಡೊಂಕುವೆತ್ತ ಬೆರಲೋರೆಯು ಪೇರ್ದೊಡೆ ವಕ್ರಮಧ್ಯಮುಬ್ಬರಿಸಿದ ಪೇರ್ಬಸಿಱ್ (ವೃಷವಿ. ೦೦–೬೦). [ ಡೊಂಕು$_2$ + ಪೇಱು$_1$ ]

**ಡೊಂಕುಹೋಗು** (ಕ್ರಿ). ಬಾಗು; ಸೊಟ್ಟಾಗು; ವಕ್ರವಾಗು: ಈ ಯೊಡಲು ಕೈಕಾಲು ಶಿರವಯ್ಯೋಯಿವೀಗಳೆ ಡೊಂಕುಹೋಹವು (ಲಸಪು. ೦೬–೪). [ ಡೊಂಕು$_2$ + ಹೋಗು$_1$ (<ಪೋಗು$_1$) ]

**ಡೊಂಕಿವಣ** 'ಡೊಂಕಿವಣ' ನೋ.

**ಡೊಂಗಱು, ಡೊಂಗುಱು, ಡೊಕ್ಕರ$_1$, ಡೊಗರು, ಡೊಗಱು, ಡೋಱ್, ಡೋಱು, ದೊಂಗರ, ದೊಗರು, ದೋಱು** (ನಾ). ೧. (ಗುಹೆ, ಮರ ಮೊದಲಾದುವುಗಳ ಒಳಗಿನ) ರಂಧ್ರ; ಬಿಲ; ಪೊಟರೆ: ಪರಿವಿಡಿಯಿಂದಯ್ದೆ ಗುಹೆಯ ಸಾರ್ದದಱ ಡೊಂಗಱದಲ್ಲಿ ಸೊಸೆಯರ ಳುಕುತ ಬರಲೇಕೆ (ಧರಚ. ೪೪–೪೩). ೨. ಹಳ್ಳ; ಕುಳಿ; ತಗ್ಗು: ಕುಳಿಯೊಳೊರ್ಗುಡಿಸಿ ಡೊಂಗಱನನೇಱ್ ಸರವುಗಳೊಳಿದದಟುಗೆಟ್ಟು ಬೆಂಡಾದಸುಖಿಗಳನು (ಹಕಳಾ. ೯–೩೩); ಇಡುಕುಱು ಡೊಂಗಱ ಘಟ್ಟ ದಿಟ್ಟದ ಸಿಕ್ಕು ತಡೆಕಟ್ಟು ಸಮತಳವಾಗೆ (ಭರೆಶ. ೨೮–೩೮). **ಡೊಂಗುಱು**: ೨. ಬಳ್ಳಿಗುರುವಿನ ಕೈ ಬಳ್ಳಿಗುರುಡ ಹಿಡಿದು ಕಾಣದೆ ಡೊಂಗುಱವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗೊಂಡದಲ್ಲಿ ಬೀಳುವರು (ವಚಸಂ. ೦೨೬–೧೦೭). **ಡೊಕ್ಕರ$_1$**: (+). **ಡೊಗರು**: ೧. ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗ ತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯ ಕೋಲು ಬರುತ್ತಿದ್ದುದನ್ನು ಕಂಡು ಬೆದರಿ . . . ಡೊಗರಿನ ಕಡೆಗೆ ಓಡತೊಡಗಿತು (ಕಾಮೂರು. ೨೦); ಬಹಳ ಹೊತ್ತು ಹುಡುಕಿದ ಮೇಲೆ ಒಂದು ಡೊಗರು ಸಿಕ್ಕಿತು (ಹಂಪಾ ಮ್ಮ. ೦೦೦); ಇಕ್ಕಟ್ಟಾದ ಬಂಡೆಯ ಡೊಗರಿನಲ್ಲಿ ಒಬ್ಬರ ಹಿಂದೆ ಒಬ್ಬರು ಮೇಲೆ ಹತ್ತಲಾರಂಭಿಸಿದರು (ಭಾರವೀ. ೦೦೩). ೨: ಮುದುಕಿ ಬಿದ್ದವಳೆ ಡೊಗರಲ್ಲಿ (ಹಳ್ಳಿಯ. ೧೬೬). **ಡೊಗಱು**: ೧. ಒಂದು ದಿವಸದೊಳು ತಾನಿರ್ಪ ನೆಲದ ಡೊಗಱೊಳಗೆ ಹೊಕ್ಕಗೆಯುತ್ತುವಿರೆ (ಸಮ್ಯಕ್ತ್ವ. ೨–೪೩). **ಡೋಱ್**: ೨. ಸುಳಿದಲೆಯ ಕೆಮ್ಮಾಸೆಗಳಮಿಗೆ ಬೆಳೆದ ಮುಡುಗುಗಳೊಡ್ಡಿ ದುರದುಚ್ಚಳಿತ ರೋಮದ ನೊಸಲ ಡೋಱಿಯ. . .ಕದನ ಪ್ರಚಂಡರ ಕಂಡು ಬೆಱಗಾದ (ಕುವ್ಯಾಸಾ. ೨–೩೦); ಮುಱಿದ ಮೂಗುಗಳ ನೊಸಲ ಡೋಱಿಯ. . . ಯಮದೂತರಂದಾಗಸಕೆ ನೆಗಹಿದ ಪಾಶಹಸ್ತರು ಬಂದರಾಕ್ಷಣಕೆ (ನಿಭಾಗ. ೩–೦–೦೯). **ಡೋಱು**: ೧. ಮದಹಸ್ತಿಯಱಿದ ಘಾಯಂಗಳ ವರಾಹನೆತ್ತಿದ ಡೋಱು[ಪಾಠಾಂ. ಣ]ಗಳ . . . ಕಡವೆ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಹಚಳಾ. ೩–೩); ಮಾದ್ರುವತಿಯದೆಡೋಱಿಸಲಿಡಾವರಿಸಿದವು ರಕ್ತಾಂಬುಧಾರೆಗಳು (ಕುವ್ಯಾಕ. ೩–೬೮); ಅರಾತ್ ಶರಂಗಳಿಂದೆಚ್ಚವರ ತನುಗಳಂ ಡೋಱಿನಿಸಿ (ಕಬಪು. ೪೯–೨೨). 'ಡೋಱುಗಳೆ', 'ಡೋಱುವೋಗು' ಪರಾ. **ದೊಂಗರ**: ೨. ಸಿದ್ದನ ಹಳ್ಳಿಯ ಬಳಿ ಒಂದು ದೊಡ್ಡ ದೊಂಗರವಿತ್ತು. ಅದನ್ನು ಹಾದರೆ ಮಾನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಳ. ೦೩೦). **ದೊಗರು**: ೧. ಅಷ್ಟರಲ್ಲಿ ನಾಯಿ ದೊಗರಿನ ಬಾಯಿಗೆ ಮೂತಿಯನ್ನು ತುರುಕಿ ಉಸಿರು ಎಳೆಯುತ್ತಾ ತನ್ನ ಮುಂಗಾಲುಗಳಿಂದ ಬಿಲದ ಬಾಯಿಯನ್ನು ಪರಪರನೆ ಕೆರೆಯತೊಡಗಿತು (ಮುಗಮೂಂ. ೩೭). **ದೋಱು**: ೧. 'ದೋಱುವೋಗು' ಪರಾ.
[ ದೇ.೩ ತಮಿ. ಟೊಜ್ಜು; ತೆಲು. ಡೊಂಗು, ದೊಂಗು ]

**ಡೊಂಗು** (ಕ್ರಿ). "ಕಂಪಿಸು; ನಡುಗು" (ಶಾಧಪು. ಕೋಶ): ರವಿಬಿಂಬಂ ಪ್ರತಿಬಿಂಬಿಸಿರ್ದದಱೊಳಂ ತೋಱುತ್ತಿರಲ್ ಕಂಡು ಮದ್ಯಮುಖಾಸ್ವಾದಿಸುತಿರ್ದವಳ್ . . . ಪೋಗುಪೋಗೆಂದು ಡೊಂಗುವ ಕೈಯಂ ಮಿಗೆ ನೀಡಿ ಮತ್ತೆ ಬಲಿದೌಡಂ ಕಚ್ಚುತಂ ನೂಂಕಿದಳ್ (ಶಾಧಪು. ೧೦–೦೩೩).
[ <ಡೊಂಕು$_1$ ? ]

**ಡೊಂಗುಱು** 'ಡೊಂಗಱು' ನೋ.

**ಡೊಂಡೊಂಡೆ** (ನಾ). ದಿಂಡುರುಳಿಕೆ (?): ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಡೊಂಬಲಾಗವು ಹಾಕಿ ಡೊಂಡೊಂಡೆ ಹೊರಳಿದರಿಲ್ಲ (ಪುರಂದ. ೩–೦೩೮ ಅನುಪಲ್ಲವಿ). [ ? ]

**ಡೊಂಬ$_1$** 'ದೊಂಬ' ನೋ.

**ಡೊಂಬ$_2$** 'ದಂಬ' ನೋ.

**ಡೊಂಬಕಾಗೆ** (ನಾ). ಒಂದು ಬಗೆಯ ಕಾಗೆ; "(ಕಪ್ಪು ಗರಿಗಳೂ ಒರಟು ಧ್ವನಿಯೂ ಉಳ್ಳ, ಮುಖ್ಯವಾಗಿ ಮಾಂಸವನ್ನು ತಿಂದು ಜೀವಿಸುವ, ಅನೇಕ ವೇಳೆ ಸಾಕಿ ಪಳಗಿಸಿದ ಮತ್ತು ಜನಬಳಕೆಯಲ್ಲಿ ದುಶ್ಶಕುನ ಸೂಚಕವೆಂಬ ಭಾವನೆಯುಳ್ಳ) ಕಾಗೆಜಾತಿಯ ಒಂದು ದೊಡ್ಡ ಹಕ್ಕಿ" (Raven. ಇಂಕನಿ.): ಮೊಲ ಮತ್ತು ನರಿಗಳನ್ನು ನಾಯಿಗಳಿಂದ ಬೇಟೆಯಾಡದೆ, ಡೊಂಬಕಾಗೆ, ಡೇಗೆ, ಕಾಗೆ ಮತ್ತು ರಣಹದ್ದುಗಳಿಂದ ಬೇಟೆಯಾಡುತ್ತಾರೆ (ಪ್ರಪಾಇ. I, ೦೩).
[ ಡೊಂಬ$_1$ (<ದೊಂಬ) + ಕಾಗೆ ]

**ಡೊಂಬಕಾಣಿಕೆ** (ನಾ). ಒಂದು ಬಗೆಯ ತೆರಿಗೆ (?): ಯಿವರ್ರಿಗೆ ಚಪರ ಕಾಣಿಕೆಯಿಲ್ಲ ಮರ್‍ರಿಕಾಣಿಕೆಯಿಲ್ಲ ಡೊಮ್ಮಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಕ. XVI, ಗುಬ್ಬಿ. ೬೯–೩೩ ; ?).
[ ಡೊಂಬ$_1$ (<ದೊಂಬ) + ಕಾಣಿಕೆ (<ಕಾಣ್ಕೆ) ]

**ಡೊಂಬತಿ** 'ದೊಂಬಿತಿ' ನೋ.

**ಡೊಂಬರಗೆ** (ನಾ). (ಉಕ) ಎತ್ತಿನ ಗಾಡಿಯ ತೋಳು: ಗುಜ್ಜುಗಳ ಮೇಲ್ಭಾಗದಲ್ಲಿ ಕೂಡಿಸಿದ ಬಿದಿರಬೊಂಬು. [ ? ]

**ಡೊಂಬವಱಿ$^3$** (ನಾ). ಡೊಂಬರು ತಮ್ಮ ಆಟದಲ್ಲಿ ಬಾಜಿಸಲು ಬಳಸುವ ಒಂದು ಬಗೆಯ ಚರ್ಮವಾದ್ಯ; ದಡ್ಡಸ: "ದಡ್ಡಸ–ಡೊಂಬವಱಿ$^3$" (ಕಮುದ. ಷರಿ. ೨); "ದಡ್ಡಸವೆಂದು ಡೊಂಬವಱಿ$^3$" (ಕರ್ಣಾನಿ. ೦೮).
[ ಡೊಂಬ$_1$ (<ದೊಂಬ) + ಪಱಿ$^3{}_1$ ]

**ಡೊಂಬವಿದ್ದೆ** (ನಾ). ಯಕ್ಷಿಣೀ ವಿದ್ಯೆ; ಬೇರೆಬೇರೆ ವೇಷವನ್ನು ಧರಿಸುವ ಮಾಯಾ ವಿದ್ಯೆ; ಮೋಸಗಾರಿಕೆ; ವಂಚಕತನ: ವಿನಾನಾವೆ ಪಂದಿಯಂದನಿತಾನುಂ ತೆಱನಾಗಿ ಡೊ[ಪಾಠಾಂ. ದೊ]ಂಬವಿದ್ದೆಯನಾಡಲ್ ನೀನಱಿವೆಯಱದಿರ್ದೊಡಾನಱಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್ (ಪಂಪಭಾ. ೬–೩೭). [ ಡೊಂಬ$_2$ (<ದಂಬ) + ವಿದ್ದೆ ]

**ಡೊಂಬಿ₁** 'ದೊಂಬಿ' ನೋ.

**ಡೊಂಬಿ₂** 'ದಂಬ' ನೋ.

**ಡೊಂಬಿಗ₁** 'ದೊಂಬಿಗ' ನೋ.

**ಡೊಂಬಿಗ₂** (ನಾ). ಒಣಹೆಮ್ಮೆಯನ್ನು ತಾಳಿದವನು ; ಆಡಂಬರಕಾರ ; ಡಾಂಭಿಕ : 'ರಣಡೊಂಬಿಗ' ಪರಾ.
[ ಡೊಂಬು₂ (<ದಂಬ) + - ಇಗ ]

**ಡೊಂಬಿಗಾರ** 'ದೊಂಬಿಗಾರ' ನೋ.

**ಡೊಂಬಿಗೈ** (ಕ್ರಿ). ಗುಂಪುಸೇರು ; ಒಟ್ಟಾಗು : ಡೊಂಬಿಗೈದಲ್ಲಲ್ಲಿ ದನಿಗೈವ ಕಾರಂಡಚಕ್ರದಿಂ (ಪಂಶಾರಾ. ೨-೧೪-೨೩).
[ ಡೊಂಬಿ₁ (<ದೊಂಬಿ) + ಗೈ (<ಕೆಯ್₁) ]

**ಡೊಂಬಿತಿ₁** 'ದೊಂಬಿತಿ' ನೋ.

**ಡೊಂಬಿತಿ₂** (ನಾ). ಮಾಯಾವಿನಿ ; ಕೆಟ್ಟವಳು ; ಧೂರ್ತೆ : ಪಂಬಿನಾಲದ್ದುಗೆಯಂ . . . ಡೊಂಬಿತಿ ಜೋಡೆ ಸೋಲದಿಂ ಬಿಡ್ಡಿಸಿದಪ್ಪಳೆಂದು ನೆಱೆ ದೂಱುವರೆನ್ನನವಟ್ಲಿಯಿಂ ಪೆಱರ್ (ಧರ್ಮಾಮೃ. ೧೦-೨೦೨).
[ ಡೊಂಬು₂ (<ದಂಬ) + - ಇತಿ₁ ( <- ಇತ್ತಿ) ]

**ಡೊಂಬಿದೈವ** (ನಾ). ವಂಚನೆಯ ದೈವ ; ಮೋಸಗಾರ ದೇವರು : ಕೊಂಬು ಹೋತ ಕುಱಿ ಕೋಣನ ಬಲಿಗೊಂಬ ಡೊಂಬಿದೈವಗಳ ಭಜಿಸದಿರು ಮನವೆ (ಕನಕ. ೧೭೩-೨).  [ ಡೊಂಬು₂ (<ದಂಬ) + ದೈವ ]

**ಡೊಂಬಿಬೀಸು** (ನಾ). ಕತ್ತಿವರಸೆಗಳಲ್ಲೊಂದು ; ಖಡ್ಗ ಬೀಸುವಿಕೆಗಳಲ್ಲಿ ಒಂದು ವಿಧಾನ (?) : ಆ ಸ್ಥಾನದಲ್ಲಿ ದೇಹಭ್ರಮಣಉ ಅಲ್ಪವಾಗಿ ಯಿದ್ದಂಥಾ ಪಾದಗಳ ಗಮನಉ ಬಂಡಿಕೋಲಿನ ಭ್ರಮಣವು ಅವದು ಅದು ಡೊಂಬಿಬೀಸುಯೆಂದು ತಿಳಿವರು (ಅಶ್ವಚಿ. ೫-೨೯).
[ ಡೊಂಬಿ₂ + ಬೀಸು₂ ]

**ಡೊಂಬಿಮಾಡು** 'ದೊಂಬಿಮಾಡು' ನೋ.

**ಡೊಂಬಿವರಿ** (ಕ್ರಿ). ಗುಂಪಾಗಿ ನುಗ್ಗು ; ಒಟ್ಟಿಗೆ ಧಾವಿಸು ; ಮೊತ್ತವಾಗಿ ಮುಂದೆ ಸಾಗು: ಡೊಂಬಿವರಿದಿಱಿದಾಡಿ ಸೂತ್ರದ ಬೊಂಬೆಯಂದದಿ ಕೆಡೆದರಧಟರು (ಶಾಕ್ಮಭಾ. ೨೩-೨೪).
[ ಡೊಂಬಿ₁ (<ದೊಂಬಿ) + ಪರಿ₂ ]

**ಡೊಂಬಿಸು** (ಕ್ರಿ). ಮೋಸಮಾಡು ; ವಂಚಿಸು : ಜನಮುಳ್ಳನಂ ಕರಂ ಡೊಂಬಿಸಿ ತಿಂಬರ್ (ಜೀವಸಂ. ೬೪-೦೪).
[ ಡೊಂಬು₂ (<ದಂಬ) + - ಇಸು₂ ]

**ಡೊಂಬು₁** 'ದೊಂಬಿ' ನೋ.

**ಡೊಂಬು₂** 'ದಂಬ' ನೋ.

**ಡೊಂಬುಮಾಡು** 'ದೊಂಬಿಮಾಡು' ನೋ.

**ಡೊಂಬೆ₁** 'ದೊಂಬಿ' ನೋ.

**ಡೊಂಬೆ₂** (ನಾ). ಮೋಸಗಾತಿ ; ವಂಚಕಿ : ಒಡದನೋಳ್ ಪರಾಂಗನೆಯೊಳೋತೊಡಗೂಡಿದನೆಂಬೊಳ್ ಸರಾಗದಿಂ ಕೂಡುವಳೆಂಬ ಡೊಂಬೆ ಹಿರಿಪಾತಕಿ ನಾಣಿಲಿ ಕೆಟ್ಟ ಬೂತು ನಾಚ್ಗೋಡೆಯವಳ್ಗದಕ್ಕುಮುಟಿದಾವಳು ಮೊಲ್ಲಳೆ ಕೀರ್ತಿಯೆಂಬವಳ್ಗೋಡಳು ನಿಂದು ಬೀರಸಿರಿ ಕೇಳಳವಂದಿರ ಮಾತನಪ್ಪಡಂ (ಬಂಹರಿ. ೧೦-೦೦೪).
[ ಡೊಂಬು₂ (<ದಂಬ) + - ಎ₂ ]

**ಡೊಕ್** (ನಾ). (ಆಯುಧದಿಂದ ತಿವಿಯುವುದು ಮೊದಲಾದ ಸಂದರ್ಭದಲ್ಲಿ ಬಳಸುವ ಒಂದು ಅನುಕರಣ ಶಬ್ದ : 'ಡೊಕ್ಕನೆ' ಪರಾ.

**ಡೊಕ್ಕನೆ** (ಅ). ಡೊಕ್ ಎಂಬುದಾಗಿ : ಡೊಕ್ಕನೆ ಸುರಿಗೆಯೊಳುರವಂ ಬಿಕ್ಕನೆ ಬಿರಿಯಿಱಿದು (ಪಂಶಭಾ. ೦೨-೦೫೩).  [ ಡೊಕ್ + - ಅನೆ₁ ]

**ಡೊಕ್ಕರ₁** 'ದೊಂಗಟ' ನೋ.

**ಡೊಕ್ಕರ₂**, ಡೂಕ್ಕರೆ, ಢಕ್ಕರ, ಢೊಕ್ಕರ, ದೊಕ್ಕರಿ (ನಾ). ೧. ಬಲವಾದ ಹೊಡೆತ; ಒದೆತ; ಮುಷ್ಟಿಯ ಪೆಟ್ಟು; ಗುದ್ದು : "ಡೊಕ್ಕರ[ಪಾಠಾಂ. ಳ] ಗುದ್ದುಂ" (ಭಾರಪಿ. ೫೬). ೨. ಮಲ್ಲಯುದ್ಧದ ಒಂದು ಪಟ್ಟು. ಪ್ರತಿಮಲ್ಲನ ಕೊರಳ ಹಿಂಭಾಗವನ್ನು ಒಂದು ಕಂಕುಳಲ್ಲಿ ಇರಿಸಿಕೊಂಡು, ಕುತ್ತಿಗೆಯನ್ನು ಮುಂಗೈಯಿಂದ ಅದುಮುತ್ತ ಇನ್ನೊಂದು ಕೈಯಿಂದ ಮೊಣಕಾಲ ಸಂಧಿಗಳನ್ನು ಗಟ್ಟಿಯಾಗಿ ಹಿಡಿದೆಳೆದು ದೇಹವನ್ನು ಹುದುಗಿಸಿ ಕಾಲುಗಳೆಡೆಗೆ ಹೊಟ್ಟೆಯನ್ನು ಎರಡು ತೊಡೆಗಳಿಂದ ಪೀಡಿಸುತ್ತ ಅವನಿಗೆ ಪ್ರಾಣಾಂತಕವಾದ ನೋವನ್ನೊದಗಿಸುವ ಜಟ್ಟಿಕಾಳಗದ ಒಂದು ಪಟ್ಟು: ಸ್ಫುರಿತ ಕೃಪಾಣಪಾಣಿಗಿದಿರಂ ನಡೆದಟ್ಟುಳಿ ತೊಟ್ಟುಪಾಯ್ದು ಡೊಕ್ಕರದೊಳೆ ಮಿಕ್ಕ ದಿಕ್ಕರಿಯನಿಕ್ಕುಮವೋಲ್ ನೆಲಕಿಕ್ಕಿ (ಪಂಶಭಾ. ೧೧-೧೦೪); ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊ[ಪಾಠಾಂ. ಢ]ಕ್ಕರಕಿಕ್ಕಿದ ವಜ್ರಲೇಪಮೆನೆ (ಚಂದ್ರಪು. ೫-೮೦); ಆಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಕ್ಕರಂ . . . ಮುಷಡಂ ದಣಾವಟ್ಟೆ ವಟ್ಟಿಸಂ ಎಂದು ಮಲ್ಲಮಾತಂ ಮಾಡಿ (ಅನಂತಪು. ೨-೨೭); ಸಿಕ್ಕಿದವ ಹೆದ್ದೊಡೆಗಳುರಗನ ತೆಕ್ಕೆಯಲಿ ಡೆಂಡಣಿಸಿ ಫಣಿಪತಿ ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಮೇರುರವ (ಕುಮಾ.ಅ. ೦೩-೩೩) ; ಅಧಟಿಂದಂ ಮೂಱುಂ ಲಗ್ಗದ ನಾಲ್ಕು ಸ್ಥಾನಮಯ್ದು ಡೊಕ್ಕರದ ಮಹೋಗ್ರದ ಮೂವತ್ತೆರಡು ಬಿನ್ನಣದೊದವಂ ಪಲತೆಱದ ಪಾತಮಂ ನೆಱೆ ಮೆಱೆದರ್ (ತ್ರಿಪುವಿ. ೨೬-೧೭) ; ಆಯತಿಕೆ ಬಂಧಂ ಡೊಕ್ಕರಂ (ಕಬಕಂ. ೪-೭೭) ; ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳ್ (ಮುರಾಕ. ೨೦೭-೪೫). **ಡೊಕ್ಕರೆ :** ೨. ವೀರ ಚಿಕದೇವಂ ನೋಟಕರ್ ಮೆಚ್ಚೆ ಮಲ್ಲಗೆಯೊಳ್ಡೊಕ್ಕರೆಯೊಂಟೆ ಮಂಡಿ ಕರಲಂ . . . ಮಗುಟ್ಟಿಂತೀ ಗತಿಭೇದದಿಂ ತೊಡಕಿ ತೋಕರ್ಮಂ ಸಾಧಕಪ್ರೌಢಿಯಂ (ಚಿಕವಿ. ೪-೦೪೬). **ಢಕ್ಕರ:** ೨. ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳಂ ಐದುಂ ಢ[ಪಾಠಾಂ. ಡೊ]ಕ್ಕರದೊಳಂ . . . ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪು. ೫-೭೭ ವ). **ಢೊಕ್ಕರ :** ೨. ವರ್ಗ ಚತುರ್ಥಾಕ್ಷರಂಗಳ್ಗೆ. . .ಢಂಕೆ, ಢೊಕ್ಕರಂ (ಶಮದ.೦೫ ಪ್ರಯೋ). ಕತ್ತರಂ ಕರವಡಂ ಸೀವಟ್ಟಣಂ ಢೊಕ್ಕರಂ ಪಸರಂ ಸಂದಣಾವಟ್ಟೆ . . . ಎಂದು ಮಲ್ಲಮಾತುಮಂ ನುಡಿದು (ಪಾರಪು. ೧೬-೧೪). **ದೊಕ್ಕರಿ :** 'ದೊಕ್ಕರಿಗೊಳ್' ಪರಾ.  [ ?. / ತೆಲು. ಡೊಕ್ಕರ ]

**ಡೊಕ್ಕರ₃**, ಡೊಕ್ಕಾರ (ನಾ). ಒಂದು ದೇಶದ ಹೆಸರು : ಕ್ಷಾರಕರ ಹೂಣಕರ ಡೊಕ್ಕರಪಾರಕರ ಬಾರಸಹಣ ಭೂಪರೊಳಾರುಭಟೆಯಲಿ ಕಾದಿ (ಕುಮಾ.ಸ. ೩-೨೫). **ಡೊಕ್ಕಾರ :** ಅಂಗ ವಂಗ ಕಳಿಂಗ . . . ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗವಿ. ೨-೩೯ ವ).   [ ? ]

**ಡೊಕ್ಕರಂಗೊಳ್**, ದೊಕ್ಕರಿಗೊಳ್ (ಕ್ರಿ). ೧. ಒದೆತದಿಂದ ಅಥವಾ ಮುಷ್ಟಿಯ ಪೆಟ್ಟಿನಿಂದ ನಜ್ಜುಗುಜ್ಜಾಗು : ಅಂತಿಕ್ಕಿ ಡೊಕ್ಕರಂ ಗೊಂಡುರಸ್ಥಳ ಪರಿವಿಷ್ಟರನಾಗಿರ್ದ ಕೃಷ್ಣನಂ ದಕ್ಷಿಣದಿಕ್ಪಾಲಕಂ ನಿರೀಕ್ಷಿಸಿ (ಜಗವಿ. ೬-೨೯ ವ). ೨. ಡೊಕ್ಕರವೆಂಬ ಮಲ್ಲಯುದ್ಧದ ಪಟ್ಟನ್ನು ಹಾಕು ; ಡೊಕ್ಕರಪಟ್ಟನಿಂದ ಆಕ್ರಮಿಸಿ ಹಿಡಿ : ಕೋಡ ಕೆಯ್ಯ ಕಾಲೆಡೆಗಳೊಳ್ ಬಿಣ್ಪುಮಂ ಪೆಣೆವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದತ್ತ ಪನ್ನೆರಡುಯೋಜನಬರಮೊತ್ತುವುದುಂ (ಪಂಶಭಾ. ೧೦-೭೪ ವ). **ದೊಕ್ಕರಿಗೊಳ್:** ೨. ಭುವನೈಕಮಲ್ಲಂ ಮೋಹಮಲ್ಲನಕ್ಕ ತುಳದಿಂದಕ್ಕುಳಿಸದೆ ದೊ[ಪಾಠಾಂ. ಡೊ]ಕ್ಕರಿಗೊಂಡು ನೆಟ್ಟನೆ ಮುಱಿದಿಕ್ಕಿ ಗೆಲ್ದ ವಿದ್ಯಾಧರಕಳನಿದು (ಪಾರ್ಶ್ವಪು. ೦೬-೦೦ ವ).
[ ಡೊಕ್ಕರ₂ + ಕೊಳ್₁ ]

**ಡೊಕ್ಕರಣೆ** (ನಾ). = ಡೊಕ್ಕರ$_2$ ೨ : ಲಗಡಿಯಲಿ ಲಟಕಟಸುವಂತರ ಲಗಡಿಯಲಿ ಲಾಲಿಸುವ ಡೊಕ್ಕರಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು (ಕುಮಾ.ಭ. ೧೯-೪೩). [ ಡೊಕ್ಕರ$_2$ + – ಅಣೆ$_4$ ]

**ಡೊಕ್ಕರಪಟ್ಟು** (ನಾ). = ಡೊಕ್ಕರ$_2$ ೨ : ಒಂದೇ ಸಮನಾಗಿ ಭೀಮ ಜರಾಸಂಧರು ಡೊಕ್ಕರಪಟ್ಟು, ಲಗಡಿ, ಕತ್ತರಿಪಟ್ಟು, ನಾಗಬಂಧ ಮುಂತಾದ ಹಲವು ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩). [ ಡೊಕ್ಕರ$_2$ + ಪಟ್ಟು$_1$ ]

**ಡೊಕ್ಕರವಾಯ್** (ಕ್ರಿ). ೧. (ಕುತ್ತಿಗೆಯನ್ನು) ತೋಳುಗಳಿಂದ ಬಳಸಿ ಬಿಗಿಯಾಗಿ ಹಿಡಿದುಕೊಳ್ಳು : ಕೊರಳ ಡೊಕ್ಕರವಾಯ್ದು ಹಣೆಯಿಂದೊರಸಿ ಹಣೆಯನು . . . ಮೋಹದಲೊಸೆದು ಮುಂಡಾಡಿ (ತೊರವ. ೨-೩-೪೦). ೨. = ಡೊಕ್ಕರಂಗೊಳ್ ೨ : ಹಾವು ಹದ್ದಿನ ಪದಹತಿಗೆ ನೆಲೆ ನೋವವೊಲು ನೆಲಕೊಱಗಿ ರಕ್ಕಸನಾ ವಿಘಾತಿಯೊಳೆದ್ದು ಡೊಕ್ಕರವಾಯ್ದನಗ್ನಿಜನ (ತೊರವ. ೬-೧೯-೬೦). [ ಡೊಕ್ಕರ$_2$ + ಪಾಯ್$_1$ ]

**ಡೊಕ್ಕರವಿಕ್ಕು** (ಕ್ರಿ). = ಡೊಕ್ಕರಂಗೊಳ್ ೨ : ಹೊಯ್ದು ತುಱುಬನು ಹಿಡಿದು ತಡೆಗಾಲ್ವೊಯ್ದು ಕೆಡಹಿದನಸುಬಡಿದು ಹೊಯ್ ಹೊಯ್ದು ಬಿಡೆ ಮೊಪ್ಪರಿಸಿ ಡೊಕ್ಕರವಿಕ್ಕಿ ರಾಘೆಯಲಿ (ಕುಮಾ.ಭ. ೧೯-೪೮). [ ಡೊಕ್ಕರ$_2$ + ಇಕ್ಕು ]

**ಡೊಕ್ಕರಿ** (ನಾ). ಜಲಕ್ರೀಡೆಯಲ್ಲಿ ವಿನೋದಕ್ಕಾಗಿ ಒಬ್ಬರ ಮೇಲೊಬ್ಬರು ನೀರನ್ನೆರಚಲು ಬಳಸುವ (ವಿವಿಧಾಕಾರದ) ಜಲಯಂತ್ರ ; ಜೀರುಕೊಳವೆ ; ಪಿಚಕಾರಿ : ಡೊಕ್ಕರಿಗಳಿಂ ಮೊಗೆದೊರ್ಬರೊಳೊರ್ಬರಾಗಳ್ . . . ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ (ಸು ಸು ಪು. ೫-೦೩೫) ; ಸುಧಾಂಶುಕಳೆಗಳಿವೆನೆ ಕನ್ನೊಳಿಪಿಂದುಶಿಲೆಯ ಡೊಕ್ಕರಿಗಳನಾಗಳೆ ಕೊಂಡು (ಶಾಂತೀಶ್ವ. ೦೦-೦೬೦). [ ? ]

**ಡೊಕ್ಕರಿಸು, ದೊಕ್ಕರಿಸು** (ಕ್ರಿ). ೧. ಹೊಡೆ; ಒದೆದು ಕೆಳಕ್ಕೆ ಅಪ್ಪಳಿಸು; ಗುದ್ದು : ಮಚ್ಚರಂ ಬೇಡೆಱಗಿಂ ನೀವೆಂಬವೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ (ಅರ್ಧನೇ. ೮-೯೦) ; ಧಿಕ್ಕರಿಸಿ ಡೊಕ್ಕರಿಸಿ ಝುಂಕಿಸಿ ಸ್ವರವನಗ್ನಿ . . . ಧನದನೀಶಾನ್ಯರೆಂಬಕರ (ಹಕಳಾ. ೦-೪೩) ; ಹರಿ ಮದೋತ್ಕಟ ದಂತಿಯನು ಡೊಕ್ಕರಿಸಿ ಡಾವರಿಸುವವೊಲು (ಕುಮಾ.ಭ. ೦೯-೪೯) ; ವಾಮಕರತಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ (ಶಂಕಾಶಾ. ೫-೩-೦೬). ೨. ಹಿಸುಕು ; ನಜ್ಜುಗುಜ್ಜುಮಾಡು ; ಸದೆಬಡಿ ; ಸಾಯುವಂತೆ ಬಡಿ : ಕುರುಸೂನುವವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ (ಗದಾಯು. ೬-೨೫) ; ಪೊಡೆಯೆಂ ಕಾಲನನಿಕ್ಕಿ ಡೊಕ್ಕರಿಸುವೆಂ ದೈತೇಯನಂ (ಜಗವಿ. ೩-೨೦) ; ಇಕ್ಕಿ ಕೆರಳ್ದು ಡೊಕ್ಕರಿಸಿ (ವಿಷ್ಣು.ಪು. ೫-೫-೬೪). ೩. ಡೊಕ್ಕರಪಟ್ಟನಿಂದ ಬಿಗಿಹಿಡಿ : ಒರೊರ್ವರನುರವಣೆಯಿಂದಿಕ್ಕುವೋರೊರ್ವರಂ ಡೊಕ್ಕರಿಸುತ್ತೋರೋರ್ವರಂ ಟಾಳಿಸುವ ಪದದೊಳ್ (ಜಗವಿ. ೬-೬೪) ; ಬೊಕ್ಕೆಯುದನುಮಾನದೊಳು ಡೊಕ್ಕರಿಸಿ ಒಡಿವರಿಂದಿರುದಿಶೆ ಕಲ್ಲಮೂನಿಸರಂತಿರ್ಪ ಮಲ್ಲರ ನೆರವಿಗಳೊಳಂ (ಗಿರಿಳ. ೨-೦೦೫ ಪ) ; ತಡೆದರೆ ತಡೆದೊದ್ದ ಲೊದ್ದೆ ಜಿಕೆಯೊಳಿಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದು ಗುರ್ಗಳೊಳೊತ್ತಿ ಧೀಕರವಡೆದು ಹೊಯ್ದಾಡಿದುವೆರಡು (ಮೋಹತ. ೩೮-೨೮). ೪. (ಆಲಂ) ಕೊರಳನ್ನು ಬಿಗಿ ಹಿಡಿ; ಉಸಿರಾಟವನ್ನು ತಡೆ: ಬಿಕ್ಕುಳಿಯ ಕಾಳಗೆಯ ಮೂಗಿನೊಳೊಕ್ಕು ರುಧಿರದ ಧಾರೆ ಬಿಗಿದುಬ್ ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ (ಕುಮಾ.ಅ. ೬೦-೩೮). **ದೊಕ್ಕರಿಸು** : ೧. ವಾಲಿ ಸುಗ್ರೀವನು ರಿಪುವ ದೊಕ್ಕರಿಸಿ ತಿವಿದನು (ಅರಾಮ. ೪-೨-೩). ೩. ತುಡುಕಿ ಒಡಿದು ತೊಡೆಗಳಿಂ ಸಡುವಂ ದೊಕ್ಕರಿಸಿ ಬಾಹುಗತ್ತರಿಯಿಂ ಗಳವನೊತ್ತುವುದುಂ(ಮುಹಾಸೀ. ೬-೭೫ ಪ). [ ಡೊಕ್ಕರ$_2$ + – ಇಸು$_2$ ]

**ಡೊಕ್ಕರೆ** 'ಡೊಕ್ಕರ$_2$' ನೋ.

**ಡೊಕ್ಕಾರ** 'ಡೊಕ್ಕರ$_3$' ನೋ.

**ಡೊಕ್ಕು$_1$** ( ? ) (ಕ್ರಿ). (?) : ವರವೇದಮದು ಕರ್ಶ್ಯವಲ್ಲದೊಡೆ ಡೊಕ್ಕುದುರುಕರ್ಮದಿಂದೊಗೆದ ಸತ್ಕ್ರಣ್ಯನಿಕರಮಂ ಪರವರ ಸ್ವರ್ಗಾಪವರ್ಗಮು (ಅರಾಜ. ೩-೨). [ ←ತೆಲು. ಡೊಕ್ಕು = ನಾಶವಾಗು ]

**ಡೊಕ್ಕು$_2$** (ನಾ). ಒಂದು ಅನುಕರಣ ಶಬ್ದ : ಹಿಮದ ಹೊಯ್ಲಿಗೆ ಹೊದಕೆಗೊಂಬನೆ ತಮವಿರೋಧಿ ವಿಲೋಕನದಲುಭ್ರಮಿಸೆ ಹಳಚಿತು ಡೊ[ಪಾಠಾಂ. ಹೊ]ಕ್ಕು ದಡದುಡ ದೊಪ್ಪು ದಿಪ್ಪೆನಲು (ತೊರವ. ೬-೪೫-೫೦).

**ಡೊಕ್ಕೆ, ದೊಕ್ಕೆ** (ನಾ). ೧. ಮೈ ; ದೇಹ ; ಶರೀರ : "ಒಡಲು ಮೈ ಡೊಕ್ಕೆ" (ಕಬ್ಬಸುಂ. ೬೨); ಡೊ[ಪಾಠಾಂ. ದೊ]ಕ್ಕೆ ಬೇಹಾತ್ತ ಬೇಟಿಂದೆಡೆವಿಡದೆ ಕಣ್ಣಿಕ್ಕಿ ಜಾನಿಸುವ ತಾಪಸಗೆ (ಭರತ.೩-೪೨); ನಿನ್ನಯ ಡೊಕ್ಕೆಯುಂ ಸಿಗಿದು ರಣಬಲಿಯನೀಯದೊಡಾನು ಕಕ್ಕಸದ ಬಲುಗೆಯ್ಯ ವೀರವೆ (ಕಾಳೀರಾಸು. ೦೩) ; ಈ ಡೊಕ್ಕೆ ಬೀಳಲು ಸುರರ ಸೇರಿಸಲು ನೀವೆ ಗತಿಮತಿ (ಕುರಂಗ. ೨೫-೨೩) ; ಶರಹತಿಯನನಿಬರ ಡೊಕ್ಕೆಗಳಂ ಮೋಱುಗಳೆದನಾ ನೃಪತಿಲಕಂ (ಳಳಕ್ಕ. ೨-೦೪). ೨. ಹೊಟ್ಟೆ; ಉದರ: "ಡೊಕ್ಕೆಯೆನಲುದರ" (ಳಳಕ. ೦೨೪) ; ಮನದೊಳಗೆ ಕೌರವನ ತಿಕ್ಕಿ ತನಿಗರುಳ ರಕ್ತಂಗಳಂ ಶಾಕಿನಿಗೆ ಡೊಕ್ಕೆಯುಂ ತುಂಬಿಸುವೆವೆಂದು ಭೀಮಾರ್ಜುನರು ನಿಂದಿರಲು (ಕುರಂಗ. ೨೪-೨೦) : ಭೂತಗಣಕೆ ಡೊಕ್ಕೆ ತುಂಬಿತು (ಕುರಂಗ. ೪೫-೯). ೩. (ಆಲಂ) ಮನಸ್ಸು ; ಅಂತರಂಗ : ಎನಗೆ ಈತ ಮಿತ್ರನೀಯಾತ ಸೇವಕನೀಯಾತ ಗುಣಸಾಧುವೆಂದು ಡೊಕ್ಕೆಯೊಳಗಿರಿಸದಿರು ಬೆಳಸದಿರು ಮುಂದೆ ವಿಷವಕ್ಕು . . . ಪಾಂಡವರ ನೆಳಲಿವರು (ಕುರಂಗ. ೨೫-೨೯). ೪. ಒಂದು ಬಗೆಯ ಪಾತ್ರೆ (?) : ಡೊಕ್ಕೆಯೊಳಗಣ ಕಸುರ ಪರುಪೆನಗೆ ನೀಡೆ (ಳರಿಳ. ೬೯-೯). **ದೊಕ್ಕೆ** : ೧. ಇಕ್ಕಿದಳು ಬಲೆಯು ಕೃಶತರಗಾತ್ರನಾದೆ ಬರಿ ದೊಕ್ಕೆಯನ್ನುಡಿ[ ೪ ]ಸಿ ಫಲವೇನು(ಕುರಂಗ. ೨-೨೩). [ ದೇ.೩ ತೆಲು. ಡೊಕ್ಕ; ತುಳು. ಡಕ್ಕೆ = ಎದೆ, ಎದೆಮೂಳೆ; ಕುವಿ. ಡೋಕ್ಕು = ಅಸ್ಥಿಪಂಜರ ]

**ಡೊಗರು** 'ಡೊಂಗಱು' ನೋ.

**ಡೊಗರುಬೀಳು, ದೋಱುವೀೞ್** (ಕ್ರಿ). ೧. ತೂತುಬೀಳು ; ರಂಧ್ರವುಂಟಾಗು ; ಛಿದ್ರವುಂಟಾಗು. ೨. (ಆಲಂ) ಅವಿಶ್ವಾಸವುಂಟಾಗು ; ನಂಬಿಕೆಕೆಡು: ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರುಬಿದ್ದಿದೆಯೋ . . . ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಐಶ್ವ.ಳ. ೨೬೬). **ದೋಱುವೀೞ್** : ೧. ಪೆರ್ಬುಲಿ ಪಾಯ್ದುಗಿಯಲ್ಕೆ ದೋಱುವಿರ್ದುರದ ಸಿಪುಟ್ಟ [ಪಾಠಾಂ. ಡೋಣವಿರ್ದುರದ ಪಿಸುಟ್ಟ] ಪೆರ್ದೊಡೆಯ ನುರ್ಗಿದ ದೂಹೆಯ ಭಂಗಿ ರೌದ್ರಮಾಗಿರೆ (ಜಗವಿ. ೦೬-೨೧).

[ ಡೊಗರು (<ಡೊಂಗಱು) + ಬೀಳು$_1$ (<ಬೀೞ್$_1$) ]

**ಡೊಗರುಹಾಯು** (ಕ್ರಿ). = ಡೊಗರುಬೀಳು ೧: ದಕ್ಷಿಣದ ಗೋಡೆಯ ಒಂದು ಮೂಲೆಯು ಡೊಗರುಹಾಯ್ದಿತ್ತು (ಜಾಲರ. ೦). [ ಡೊಗರು (<ಡೊಂಗಱು) + ಹಾಯು (<ಪಾಯ್$_1$) ]

**ಡೊಗಱು** 'ಡೊಂಗಱು' ನೋ.

**ಡೊಗೆ** 'ಡೋವಿ' ನೋ.

**ಡೊಗ್ಗಾಲಿಕ್ಕು** (ಕ್ರಿ). ೧. ಮೊಣಕಾಲನ್ನು ನೆಲಕ್ಕೆ ಊರು ; ಮಂಡಿಯೂರು: ಕ್ರೈಸ್ತರು ದೇವಮಂದಿರದಲ್ಲಿ ಡೊಗ್ಗಾಲಿಕ್ಕಿ ಪ್ರಾರ್ಥನೆ ಮಾಡುತ್ತಾರೆ (ಜೂತಿ). ೨. (ಆಲಂ) ರಭಸದಿಂದ ಬರು (?): ಕರದಿ ಖಂಡೆಯವನ್ನು ಜಡಿವುತ ಭರದಿ ಡೊಗ್ಗಾಲಿಕ್ಕಿ ಪ್ರಳಯದ ಶರಧಿಯೋಲ್ ದಂಡೆತ್ತಿ ಬರುವರ್ (ದೇವೀಶ್ವ. ೬೦). [ ಡೊಗ್ಗಾಲು + ಇಕ್ಕು ]

**ಡೊಗ್ಗಾಲು**, ದೊಗ್ಗಾಲು (ನಾ). ಊರಿದ ಮೊಣಕಾಲು. 'ಡೊಗ್ಗಾಲು ಸಲಾಂ' ಪರಾ. **ದೊಗ್ಗಾಲು**: ದೊಗ್ಗಾಲಿಟ್ಟು ಸಸಿನದಿ ಹಾರಿ ಅಂತರ ಬಟ್ಟೆಯೊಳಗಬ್ಬಿಯನು ಮುಟ್ಟಲುಯಿಳಿದು (ಜಿರಾಮಾ. ೨೬೧-೬೦).

**ಡೊಗ್ಗಾಲು ಕೃಷ್ಣ**=ಮಂಡಿಯೂರಿದ ಕೃಷ್ಣ ; ಅಂಬೆಗಾಲಿನ ಕೃಷ್ಣ. **ಡೊಗ್ಗಾಲುಹಾಕು**=(ಆಲಂ)ಬಹಳ ಶ್ರಮಪಡು: ಹಪ್ಪಳಾ ಮುರಿಯೋಕೆ ಡೊಗ್ಗಾಲು ಹಾಕಬೇಕೇ? (ಗಾದೆ). [ ಡೊಗ್ಗು + ಕಾಲು$_1$(<ಕಾಲ್$_1$) ]

**ಡೊಗ್ಗಾಲುಸಲಾಂ** (ನಾ). ೧. ಮೊಣಕಾಲನ್ನು ಊರಿಕೊಂಡು, ಬಲಗೈಯಿಂದ ಮೂರುಸಲ ಹಣೆಯನ್ನು ಮುಟ್ಟುತ್ತ ಮಾಡುವ ವಂದನೆ. ೨. ಬೀಳ್ಕೊಡುಗೆ: ಸುಬ್ರಹ್ಮಣ್ಯದ ಸೀಮೆಗೆ 'ಡೊಗ್ಗಾಲುಸಲಾಂ' ಹೊಡೆಯುತ್ತಿದ್ದೆ (ಬಟ್ಟಿಹೇ. ೫೮). [ ಡೊಗ್ಗಾಲು + ಸಲಾಂ ]

**ಡೊಗ್ಗಾಲೂರು**, ದೊಗ್ಗಾಲೂರು (ಕ್ರಿ). ೧. ಮೊಣಕಾಲನ್ನು ನೆಲದ ಮೇಲೆ ಊರು ; ಮೊಣಕಾಲನ್ನೂರು. ೨. (ಆಲಂ) ಸೋಲು ; ಪರಾಜಯಹೊಂದು: ಈ ಸಲ ಪರೀಕ್ಷೆಯಲ್ಲಿ ಡೊಗ್ಗಾಲೂರುವ ಪ್ರಸಂಗ ವೆಲ್ಲಿ ಬರುತ್ತದೋ ಎಂದು . . . ಚಿಂತಿಸುತ್ತಿದ್ದ(ಸಮುಹೇ. ೩೯೦); ಅವನು ಡೊಗ್ಗಾಲೂರಿ ಅಸಹಾಯನಾಗಿದ್ದ (ಸಮುಹೇ. ೦೨೦೫). **ದೊಗ್ಗಾಲೂರು**: ೧. ಕಟ್ಟನಲ್ಲಿ ಬಂಡಿಯನ್ನೆಳೆಯಲಾರದೆ ಎತ್ತುಗಳು ದೊಗ್ಗಾಲೂರಿದವು (ರೂಢಿ). [ ಡೊಗ್ಗಾಲು + ಊರು$_1$ (<ಊಱು$_1$) ]

**ಡೊಗ್ಗಿಸು** (ಕ್ರಿ). ಬಾಗುವಂತೆ ಮಾಡು ; ಬಗ್ಗಿಸು : ನೀವು ಎಲ್ಲಾರಂಗ ಸಂಸಾರ ಮಾಡಿಕೊಂಡು ಇದ್ದು ತೋರಿಸಿದರ ಸಮಾಜ ನಿಮಗ ತಲೀ ಡೊಗ್ಗಿಸಿ ಸಲಾಮು ಹೊಡಿತದ (ಅಕನಾ. ೧೯೦).

[ ಡೊಗ್ಗು + - ಇಸು$_2$ ]

**ಡೊಗ್ಗಿಱ್** (ಕ್ರಿ). ಬಾಗಿ (ಬೋರಲಾಗಿ) ಬೀಳು ; ಸುಖ ದೇಸಬಂ ನುಡಿವೊಡೊಬ್ಬರ ಕಾಣೆನೊಂದು ಹೊರಸಿನೊಳೊಬ್ಬಳೇ ಡೊಗ್ಗಿಱ್ದು ಕಿಡೆವಂ (ಸಮ್ಮಳಾ. ೫-೨೨). [ ಡೊಗ್ಗು + ಇಱ್$_1$ ]

**ಡೊಗ್ಗು** (ಕ್ರಿ). ೧. ಬಾಗು ; ಬಗ್ಗು : ಆಗ ನೀವು ಡೊಗ್ಗಿ ಮುಜರೆ ಮಾಡುತ್ತಿದ್ದಿರಿ (ಹಲ್ಮಿಡಿ. ೨೦೦). ೨. ವಂದಿಸು ; ನಮಸ್ಕರಿಸು : ಕ್ಷೀರಾಬ್ಧಿಗಂ ಪೋಗಿ ಡೊಗ್ಗಿದರು ಮುರವೈರಿಗಂ ಸುರರು ಪುಯ್ಯಲಿಡುತ (ತುರಂಗ. ೪-೨೬). ೩. ಜಗ್ಗು ; ಕುಗ್ಗು ; ಸೋಲು : ಡೊಗ್ಗುವನೆ ಕಲಿಪಾರ್ಥ ಸರಳುಗಳ್ಸಂಹರಿಸಿ ನುಗ್ಗಿದನು (ತುರಂಗ. ೪೬-೪೬); ಡೊಗ್ಗುವನೆ ವಜ್ರಧರಿಗಂ ಬಾಲಂ (ತುರಂಗ. ೫೨-೦೨).

**ಡೊಗ್ಗಿ ನಡೆ** = ವಿಧೇಯವಾಗು ; ಆಜ್ಞಾವರ್ತಿಯಾಗು : ಹಿಂಗ ಡೊಗ್ಗಿನಡೆದರ, ನನ್ನ ಗುಮಾಸ್ತಿಕೆ ನಡದ್ಹಾಂಗಾತು (ಪ್ರೇಮಾತ್ಮ. ೦೨) ; ಗುರುಗಳಿಗೆ ಡೊಗ್ಗಿ ನಡೆಯಬೇಕು (ರೂಢಿ).

[ ದೇ.೩ ತುಳು. ಡೊಗ್ಗು, ದೊಗ್ಗು ; ತೆಲು. ಡೋಗು, ದೋಗು ]

**ಡೊಣಗ** 'ದೊಣ್ಣೆಗ' ನೋ.

**ಡೊಣೆ**$_1$ 'ಟೊಣೆ' ನೋ.

**ಡೊಣೆ**$_2$ 'ದೊಣೆ$_1$' ನೋ.

**ಡೊಣೆ**$_3$ 'ತೊಣೆ$_2$' ನೋ.

**ಡೊಣೆಗಣ್ಣು** (ನಾ). (ಉಕ) ಕುಳಿಬಿದ್ದ ಕಣ್ಣು ; ಗುಳಿಗಣ್ಣು: (ಕ).

[ ಡೊಣೆ$_2$ (<ದೊಣೆ$_1$) + ಕಣ್ಣು (<ಕಣ್) ]

**ಡೊಣೆಗತ್ತಿ** (ನಾ). ಒಂದು ಬಗೆಯ ಕತ್ತಿ : ಡೊಣೆಗತ್ತಿ ಕೊಂಗತ್ತಿ ಧರಿಸಿ ವಾಲಗದಿ ನಿಂದಿಹರು (ಸೌಂದರಾ. ೩-೧೦೦).

[ ಡೊಣೆ$_1$ (<ಟೊಣೆ) + ಕತ್ತಿ ]

**ಡೊಣೆಗೆ** (ನಾ). (?) : ಪಗೆಗಳ ಶೃಂಗಲವುಂ ಡೊಣೆಗೆಗೆತ್ತಿ ತತ್ಪುರವರೇಶ ನಾನಂದಲತಾಳಿಗೆಗಳ ಪರ್ಚಿಪುದೆಂತುಂ ಬಗೆನಿತುಂ ಬಿಂಕದಿಂದ ನಿಡು ಡೆಂಕಣಿಗಳ್ (ದಶಕು. ೧-೩೫). [ ? ]

**ಡೊಣೆನಾಯಕ** 'ದೊಣೆನಾಯಕ' ನೋ.

**ಡೊಣೆಯುಪ್ಪು**(ನಾ). ಒಂದು ಬಗೆಯ ಉರುಟಾದ ಉಪ್ಪು : "ಊಷರಕಂ– ಅಟ್ಟುಪ್ಪು, ಡೊಣೆಯುಪ್ಪು " (ಒತಧಿ. ೦೬) ; "ಪಾಕ್ಯಂ, ಬಿಡಂ – ಈ ೨ ಕೃತಕ ಅಟ್ಟುಪ್ಪಿನ ಹೆಸರು. ತೊಳೆದು ಕಾಯಿಸಿ ತೆಗೆದ ಉಪ್ಪು, ಡೊಣೆಯುಪ್ಪು ಮತ್ತು ಪಟ್ಟುಪ್ಪು ಮುಂತಾದ ಅಡಿಗೆಯಳಿಸಿದ ಕೃತ್ರಿಮ ಲವಣಕ್ಕೂ ಬಿಡಾಲವಣಕ್ಕೂ ಹೆಸರುಗಳು " (ಸಿದ್ಧಾಂತಿ. ೦೪೫).

[ ಡೊಣೆ? + ಉಪ್ಪು$_1$ ]

**ಡೊಣೆವು** (ನಾ). (ಗಾಯದ) ಬಿರುಕು ; ಡೊಗರು ; ಕೋಡು (?) : ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱ್ ಕೆಡೆದ ಗಜವ್ರಜಂಗಳ ಡೊಣೆವು[ಪಾಠಾಂ. ಡೊಣೆಪು, ಣೆವು]ಗಳಿಂದೊಱ್ತು ಪರಿವ ನೆತ್ತರ ಕಡಲ್ಗಳುಂ (ಹಂಪಭಾ. ೧೦-೧೦೬ ವ). [ ? ]

**ಡೊಣೆವೋಗು** 'ದೊಣೆವೋಗು' ನೋ.

**ಡೊಣ್ಣಪ್ಪ** (ನಾ). ೧. ದಪ್ಪವಾಗಿರುವವನು; ಸ್ಥೂಲದೇಹದ ವ್ಯಕ್ತಿ : ಅವನೊಬ್ಬ ಡೊಣ್ಣಪ್ಪ (ರೂಢಿ). ೨. ಸೋಮಾರಿ ; ಆಲಸಿ : ಉಂಡೋಕೆ ಉಟ್ಟೋಕೆ ಅಣ್ಣಪ್ಪ, ಕೆಲಸಕ್ಕೆ ಮಾತ್ರ ಡೊಣ್ಣಪ್ಪ (ಗಾದೆ).

[ ಡೊಣ್ಣೆ$_1$ (<ದೊಣ್ಣೆ) + ಅಪ್ಪ$_1$ ]

**ಡೊಣ್ಣೆ**$_1$ 'ದೊಣ್ಣೆ' ನೋ.

**ಡೊಣ್ಣೆ**$_2$ 'ದೊನ್ನೆ' ನೋ.

**ಡೊಣ್ಣೆ**$_3$ 'ತೊಂಡೆ$_2$' ನೋ.

**ಡೊಣ್ಣೆಕಾಟ** 'ತೊಂಡೆಕೇತ' ನೋ.

**ಡೊಣ್ಣೆಕೇತ** 'ತೊಂಡೆಕೇತ' ನೋ.

**ಡೊಣ್ಣೆಗ** 'ದೊಣ್ಣೆಗ' ನೋ.

**ಡೊಣ್ಣೆಮುಳ್ಳು** 'ದೊಣ್ಣೆಮುಳ್ಳು' ನೋ.

**ಡೊಣ್ಣೆಮೂಗು** 'ದೊಣ್ಣೆಮೂಗು' ನೋ.

**ಡೊಣ್ಣೆಸಣ್ಣಕ್ಕಿ** (ನಾ). ಮಧ್ಯಮಗಾತ್ರದ ಒಂದು ಬಗೆಯ ಅಕ್ಕಿ : (ಕ).

[ ಡೊಣ್ಣೆ$_1$ (<ದೊಣ್ಣೆ) + ಸಣ್ಣ + ಅಕ್ಕಿ$_1$ ]

**ಡೊಣ್ಣೆಹುಳು** (ನಾ). ಸಗಣಿಯಲ್ಲಿ ಹುಟ್ಟಿ ಬೆಳೆಯುವ ಒಂದು ಬಗೆಯ ದಪ್ಪ ಹುಳು ; ಗೊಣ್ಣೆಹುಳು: (ಕ).

[ ಡೊಣ್ಣೆ$_1$ (<ದೊಣ್ಣೆ) + ಹುಳು$_2$ (<ಪುೞು$_1$) ]

**ಡೊಪ್ಪ**, ದೊಪ್ಪ (ನಾ). ದಪ್ಪ ದೊನ್ನೆ$_2$ (ಕ), ದೊಪ್ಪೆ$_2$ (ಕ).

{ ದೇ.೫ ತೆಲು. ಡೊಪ್ಪ, ದೊಪ್ಪ ; ಕೊಲಾ. ಡೊಂಪಾ, ಡೊಂಪ ; ನಾಯ್ಕಿ. ಡೊಪ್ಪ ; ಪರ್ಜಿ. ಗೊಂಡಿ. ಡೊಪ್ಪೋ }

**ಡೊವಿಗೆ** 'ಡೋವಿ' ನೋ.

**ಡೊಳುಹೊಟ್ಟೆ** 'ಡೊಳ್ಳುಹೊಟ್ಟೆ' ನೋ.

**ಡೊಳ್ಳ** (ನಾ). ೧. ದೊಡ್ಡ ಹೊಟ್ಟೆಯವನು ; ಬೊಜ್ಜು ಬೆಳೆದ ಹೊಟ್ಟೆಯುಳ್ಳವನು. ೨. (ಆಲಂ) ಸೋಮಾರಿ ; ಆಲಸಿ : ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೬೭೩).

[ ಡೊಳ್ಳು$_1$ (<ಟೊಳ್ಳು) + - ಅ$_7$ ]

**ಡೊಳ್ಳಾಸ**, ದೊಳ್ಳಾಸ (ನಾ). ೧. ಮೋಸ ; ವಂಚನೆ ; ಕಪಟ : "ಡೊಳ್ಳಾಸವೆ ವ್ಯಸಿಕವೆನಿಪ್ಪುದು" (ಚತುಶಿ. ೨೦); "ಡೊ[ಪಾಠಾಂ. ದೊ]ಳ್ಳಾಸವೆನಲ್ ಕಪಟ" (ಧಾರನಿ. ೩೫); ಬಹಳಾಭ್ಯಾಸಿಗಳು ದಾವಿರಿಸಿದರು ಡೊಳ್ಳಾಸವೋ ರಿಪುಸೇನೆ ಕಾಣದು ಚಿತ್ರವಯಗತಿಯ (ಕುಮಾವ್ಯಾ. ೬-೮) ; ಹುಸಿ ನುಸಿಳು ಡೊಳ್ಳಾಸ ಹಿಂಸಾವ್ಯಸನವು . . . ಎಂಬಿವರೆಸಕ ಹೊದ್ದ ದಯೋಧಿಪನ ಧರಣೀತಳಾಗ್ರದಲಿ (ತೊರಾ. ೧-೩-೨೬) ; ವಂಚನೆ ಚಾಟು ಚೆಲ್ಲ ಡೊಳ್ಳಾಸ ಬೆಡಂಗು (ಯಾದವ. ೩-೯೩). ೨. ಬೆಡಗು ; ಒಯ್ಯಾರ ;

ಬಿನ್ನಾಣ; ವಿಲಾಸ.'ಡೊಳ್ಳಾಸಕಾತಿ'ಪರಾ. ೩. ವಿಸ್ತಾರ; ವ್ಯಾಪಕತೆ; ಅತಿಶಯ: ಡೊ[ಪಾಠಾಂ. ದೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುಮ್ಮಾಭಾ. ೩೦-೬೦); ಇಕ್ಕಡಿಯ ಬಸುಱುಚ್ಚುಗಳ ನರಸೊಕ್ಕು ಡೊ[ಪಾಠಾಂ. ದೊ]ಳ್ಳಾಸದ ಮಹಾಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುಮ್ಮಾದ್ರೋ. ೧೭-೨೩). **ದೊಳ್ಳಾಸ:** ೧. ತವಕದ ತವರ್ಮನೆ ವಿಲಾಸದ ನಿವಾಸವು . . . ವೈಸಿಕದ ನಿವಹ ದೊಳ್ಳಾಸ ದಾಗರ ಜೊತ್ತಿನಿಕ್ಕೆ ಕೈತವ ಕಟಕಿಗಳ ಮಂದಿರ (ಸೌಂದಕಥೆ. ೭-೩೦); ತೊದಳ್ ದೊಳ್ಳಾಸಂ ಸುರೆಯುದ್ಭವಿಸಿದ ದೇಶವಿದೆನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬). ೩. ದೊ[ಪಾಠಾಂ. ಡೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುಮ್ಮಾಭಾ. ೨೦-೬೦).

**ಡೊಳ್ಳಾಸಕಾತಿ** (ನಾ). ಬಿನ್ನಾಣಗಾತಿ; ಬೆಡಗಿ; ಒಯ್ಯಾರ ಮಾಡು ವವಳು: ಡೊಳ್ಳಾಸಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ಸವಾಯಿಯಲಿ (ಕುಮ್ಮಾಭಾ. ೬-೯೦). [ ಡೊಳ್ಳಾಸ + – ಕಾತಿ$_2$ ]

**ಡೊಳ್ಳಾಸವಿದ್ಯೆ** (ನಾ). ಮೋಸದ ವಿದ್ಯೆ; ಕಪಟವಿದ್ಯೆ: ನಿಮ್ಮ ಬಿಱುನುಡಿಯಲಗಿನಲಿ ಡಾವರಿಸಿದಿರಿ ಡೊಳ್ಳಾಸವಿದ್ಯೆಯಲಿ (ಕೃಕಿರಾ. ೩-೯-೨೦). [ ಡೊಳ್ಳಾಸ + ವಿದ್ಯೆ ]

**ಡೊಳ್ಳಿಗ** (ನಾ). ಡೊಳ್ಳು ಹೊಟ್ಟೆಯವನು; ಉಬ್ಬಿದ ಹೊಟ್ಟೆ ಯುಳ್ಳವನು: ಮುಂದೆ ಕುಳ್ಳಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರ್ (ಧರ್ಮಾಮೃ. ೦೨-೬೩). [ಡೊಳ್ಳು$_1$ (<ಟೊಳ್ಳು) + – ಇಗ]

**ಡೊಳ್ಳು$_1$** 'ಟೊಳ್ಳು' ನೋ.

**ಡೊಳ್ಳು$_2$** 'ಡೋಲು' ನೋ.

**ಡೊಳ್ಳುಗ** (ನಾ). ೧. = ಡೊಳ್ಳಿಗ. ೨. (ಅಲಂ) ಪರಾಕ್ರಮವಿಲ್ಲದವನು: ಅಳ್ಳಿದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ (ಕುಮ್ಮಾದ್ರೋ. ೩-೨೦). [ ಡೊಳ್ಳು$_1$ (<ಟೊಳ್ಳು) + – ಗ$_2$ ]

**ಡೊಳ್ಳುಹೊಟ್ಟೆ, ಡೊಳುಹೊಟ್ಟೆ** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವ ಹೊಟ್ಟೆ; ಬೊಜ್ಜುಬೆಳೆದಿರುವ ಹೊಟ್ಟೆ: ಡೊಳ್ಳು ಹೊಟ್ಟೆಗೆ ಸಾಲದಿನ್ನುಂ ಕೊಂಕು ಬಾ.(ಬಸವ. ೫೫-೦೦);ಕುಕ್ಕುಱುಸಲೊಡನಾ ಡೊಳ್ಳುಹೊಟ್ಟೆಯುಬ್ಬುಗಿಯಾಗಿ (ವೀಕ್ಷ್ಮಕು. ೩-೯-೨೭): ಡೊಳ್ಳುಹೊಟ್ಟೆ ಯನೆತ್ತಿಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗರಿದು (ಕಂಸವಿ. ೦೭-೩೫). **ಡೊಳುಹೊಟ್ಟೆ:** ಒಣಕಲು ಗೌರಿಯನಿಣಿಕಿಣಿಕಿ ನೋಡಿದ ನೆಮ್ಮೂರ ಡೊಳುಹೊಟ್ಟೆ ಮಾದ (ಜಂಜಾಪ. ೧೦೧-೫೯): ಡೊಳುಹೊಟ್ಟೆಗೆ ನಾಗರ ಬಿಗಿದವನೇ (ಗಜೇಶ. ೦-೦೨).

[ ಡೊಳ್ಳು$_1$ (<ಟೊಳ್ಳು) + ಹೊಟ್ಟೆ$_1$ (<ಪೊಟ್ಟೆ$_1$) ]

**ಡೊಳ್ಳುಹೊಟ್ಟೆಗ** (ನಾ). ೧. ಹೊಟ್ಟೆ ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವವನು. ೨. ಲಂಬೋದರ; ಗಣಪತಿ: ನುಡಿದಂತೆ ಕರ್ಗೋಲಲಿ ಕೊರತೆಕ್ಕೊ ಎಂದೆನುತಿದಿದನು ಡೊಳ್ಳುಹೊಟ್ಟೆಗನು (ಮೋಹತ. ೪೮-೫೦). [ ಡೊಳ್ಳುಹೊಟ್ಟೆ + – ಗ$_2$ ]

**ಡೊಳ್ಳೆ** 'ಟೊಳ್ಳು' ನೋ.

**ಡೊಳ್ಳೊಡಲು** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿದ ಹೊಟ್ಟೆ: ರಾಹುಮುಖನು ದೊಡ್ಡಕಂಗಳವನು ದೀರ್ಘದೇಹ ಡೊಳ್ಳೊಡಲ ಕರಿಕನು (ಭರತ. ೨೫-೫೭). [ ಡೊಳ್ಳು$_1$ (<ಟೊಳ್ಳು) + ಒಡಲು (<ಒಡಲ್) ]

**ಡೋಂಗಾ** (ನಾ). "ತಾಳೆಮರದ ತುಂಡಿನಲ್ಲಿ ತೋಡಿ ತಯಾರಿಸಿರುವ ಒಬ್ಬರು ಅಥವಾ ಇಬ್ಬರು ಹೋಗಲು ಅನುಕೂಲಿಸುವ ಸಣ್ಣ ದೋಣಿ" (ನಿಬಂಧ. I, ೩೨೩ ಅಡಿಟಿ): ಆಚೆಯ ತೀರದಲ್ಲಿರುವ ಡೋಂಗಾ ಒಂದನ್ನು ತೋರಿಸಿಕೊಡುವುದಾಗುತ್ತದೆ (ನಿಬಂಧ. I, ೩೨೩).

[ ←ಹಿಂ. ಮರಾ. ಡೋಂಗಾ ]

**ಡೋಂಗಿ** 'ಧೋಂಗಿ' ನೋ.

**ಡೋಂಗು** 'ಧೋಂಗಿ' ನೋ.

**ಡೋಕಾ** 'ಧೋಕಾ' ನೋ.

**ಡೋಕಾರಿ** (ನಾ). (ಉಕ) ೧. ಕಪಟ; ಮೋಸ; ವಂಚನೆ: ಅನ್ನವಿಲ್ಲದ ಸಾಯುತ್ತಾರಂತೆ. ಪ್ರಭೂ, ಇದೆಲ್ಲವೂ ಧೋಂಗಿ ಧೋಂಗಿ, ಡೋಕಾರಿ (ಹನ್ನೊಂದ. ೬೩). ೨. ಅಪಾಯಕ್ಕೆ ಒಳಗಾದಂತೆ ಸೋಗುಹಾಕಿ ಅಳುವ ವ್ಯಕ್ತಿ; ನೋಯಿಸದಿದ್ದರೂ ನೋವಾದಂತೆ ನಟಿಸುತ್ತ ಕೂಗಾಡುವ ವ್ಯಕ್ತಿ: ಮಾತುಮಾತಿಗೆ ಅಳುತ್ತೀಯಲ್ಲೇ ಡೋಕಾರಿ (ಅರಗಿ. ೯೫). [ ? ]

**ಡೋಕಾರಿಗ** (ನಾ). ಮೋಸಗಾರ: ಗೊಲ್ಲರ ಕೂಡಲಿ ಬೆಳದು ಆಕಳನು ಕಾಯ್ದು ಕಾಕುಲಾತಿಯಿಂದ ಡೋಕಾರಿಗನಾಗಿ ನೂಕಲು ಭಯ ಬಡದ (ಪುಟ್ಟದೀ. ೨೧-೨). [ ಡೋಕಾರಿ + – ಗ$_2$ ]

**ಡೋಕಾರಿತನ** (ನಾ). ನೋವಾದಂತೆ ನಟನೆಮಾಡಿ ಅಳುವಿಕೆ; ಅಪಾಯ ವಿಲ್ಲದೆಯೇ ಗದ್ದಲವೆಬ್ಬಿಸುವ ಸ್ವಭಾವ; ಇಲ್ಲದ ಗಾಬರಿಯನ್ನು ತೋರಿಸುವುದು: ಡೋಕಾರಿತನವಮಾಡಿ, ನಿನ್ನ ಕೆಲಸ ಮುಂದೀ ಮ್ಯ ಮೇಲೆ ಹಾಕುವ ಹಂಚಿಕೆ ಮಾಡುತ್ತೀ (ಮುಂಜಯ. ೯-೦೩೯): ಊರವಲದ ಹೊಗೆಯ ಜಾಣತಿ ಬಳುಬಿನಾ ಬೇನೆ; ಡೊಂಕುತನ, ಡೋಕಾರಿತನದ ತಂಬಾಕುಹೊಗೆ (ದ್ಯಾಬಾಕ್ಕ. ೬-೯): ಡೋಕಾರಿತನಕ್ಕೆ ಡಾಕ್ಟರೇನು ಔಷಧಿ ಕೊಡುತ್ತಾರೆ, ವಣ್ಣು (ಹುಚ್ಚಾಟ. ೨೬). [ ಡೋಕಾರಿ + – ತನ ]

**ಡೋಗಿ** 'ಡೋವಿ' ನೋ.

**ಡೋಗಿಬರ, ಡೌಗಿಬರ** (ನಾ). ಆಹಾರವಿಲ್ಲದೆ ಸತ್ತ ಪ್ರಾಣಿಗಳ ಮತ್ತು ಮನುಷ್ಯರ ತಲೆಬುರುಡೆಗಳು ದಿಕ್ಕುದಿಕ್ಕುಗಳಲ್ಲಿ ಉರುಳಾಡುತ್ತಿದ್ದ ಭಯಂಕರವಾದ ಬರಗಾಲ: ಸನ್ ೧೭೯೧ನೇ ವರ್ಷದ ಬರಕ್ಕೆ "ಡೋಗೀಬರ" ವೆಂಬ ಹೆಸರು ಬಿದ್ದದೆ; ಮನುಷ್ಯರ ತಲೆ ಡೋಗಿಗಳು ದಿಕ್ಕಿಲ್ಲದೆ ಉರುಳಾಡುತ್ತಿದ್ದದರಿಂದ ಅದರ ಸ್ಮರಣೆ ಜನರೊಳಗೆ ಇನ್ನೂ ಪೂರ್ತಿಯಾಗಿ ಇರುತ್ತದೆ (ಕರ್ನಾಗ. ೨೭೭). **ಡೌಗಿಬರ:** ಹಲವು ವರ್ಷಗಳ ಹಿಂದೆ 'ಡೌಗೀಬರ'ದಲ್ಲಿ ಅವನ ಸವಿಶಾವದ ಸಂಬಂಧಿಕರೆಲ್ಲರೂ ತೀರಿ ಹೋಗಿದ್ದರು (ಪಾತರ ೧೮); ಹಿರಿಯರು ಡೌಗಿಬರದಲ್ಲಿ ದಿನನಿತ್ಯ ಬಡವರಿಗೆಲ್ಲ ಕಾಳು ಹಂಚಿದ ಮೇಲೆ ತಾವು ಊಟ ಮಾಡುತ್ತಿದ್ದರಂತೆ (ಗ್ರಾಮಾಯ. ೦೭೫). [ ಡೋಗಿ (<ಡೋವಿ) + ಬರ$_1$ (<ಬಱ) ]

**ಡೋಣಿ$_1$** 'ದೋಣಿ$_1$' ನೋ.

**ಡೋಣಿ$_2$** 'ದೋಣಿ$_2$' ನೋ.

**ಡೋಣಿಡು** (ಕ್ರಿ). ನೀರು ತುಂಬುವ ದೋಣಿಯನ್ನು ಮುಂದೆ ಇಡು,- ಇರಿಸು: ಡೋಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮೆದುದೂರ ವಕ್ಕದೊಳ್ (ಸೂಕ್ತಿಸು. ೧೦-೯೩).

[ ಡೋಣಿ$_2$ (<ದೋಣಿ$_2$) + ಇಡು$_1$ ]

**ಡೋಣಿವಟ್ಟೆ** (ನಾ). (ನಡೆದಾಟದಿಂದ ಸವೆದು) ತಗ್ಗುಬಿದ್ದ ದಾರಿ: ನಡೆನಡೆದು ಹಿಂಗೆ ಡೋಣಿವಟ್ಟೆ ಬಿದ್ದಿರ್ದಪ್ಪುದು (ಸೌಂದಕಥೆ. ೦೫-೬೩).

[ ಡೋಣಿ$_1$ (<ದೋಣಿ$_1$) + ಬಟ್ಟೆ$_1$ ]

**ಡೋಣಿವೀೞ್** (ಕ್ರಿ). ಡೊಗರು ಬೀಳು; ಹಳ್ಳವುಂಟಾಗು; ಕುಳಿ ಯಾಗು: ಕರಿ ಪೂಣರ್ದಕ್ಕಲಂ ಮಲೆತು ಪೆರ್ಬುಲಿ ವಾಯ್ದುಗಿಯಲ್ಕೆ ಡೋಣಿವಿಟ್ಟುರದ[ಪಾಠಾಂ. ದೋಣಿಱುವಿರ್ದುರದ]ಪಿಸುಟ್ಟ ಪೆರ್ದೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ (ಅಗವಿ. ೦೬-೨೦).

[ ಡೋಣಿ$_1$ (<ದೋಣಿ$_1$) + ಬೀೞ್$_1$ ]

**ಡೋಣಿವೋಗು** 'ದೋಣಿವೋಗು' ನೋ.

**ಡೋಬಿ** 'ಧೋಬಿ' ನೋ.

**ಡೋಬಿಕಜ್ಜಿ** (ನಾ). ಒಂದು ಬಗೆಯ ಚರ್ಮರೋಗ,-ಕಜ್ಜಿ ; ಆ ಅಗಸನು ಚರ್ಮರೋಗಿಯ ಬಟ್ಟೆಯೊಡನೆ ಸೇರಿಸಿ ಒಗೆದಿರುವ ಬಟ್ಟೆಯನ್ನು ಉಪಯೋಗಿಸುವುದರಿಂದ ಅಂಟುವ ಒಂದು ಬಗೆಯ ಕಜ್ಜಿ: ಎಲ್ಲರ ಮನೆಯ ಬಟ್ಟೆಗಳನ್ನು ಒಟ್ಟಿಗೆ ಸೇರಿಸಿ ಒಗೆಯುವ ಕಾರಣ, ಕಜ್ಜಿ, ಕುರು, ಡೋಬಿಕಜ್ಜಿ (Doby's itch) ಮುಂತಾದ ಚರ್ಮರೋಗಗಳು . . . ಅಗಸರ ಮನೆಯಿಂದ ಬಂದ ಮಡಿಬಟ್ಟೆಗಳಿಂದ ಒಬ್ಬರಿಂದ ಒಬ್ಬರಿಗೆ ಹರಡಬಹುದು (ಗೃಹವಿ. ೮೨). [ ಡೋಬಿ (<ಧೋಬಿ) + ಕಜ್ಜಿ ]

**ಡೋಮ** (ನಾ). ಒಂದು ಬಗೆಯ ದೊಡ್ಡ ಡೋಲು : "ಯಶಃಪಟಃ, ಢಕ್ಕಾ – ೨ ಢವಣೆ ಹೆಸರು, ಅಂದರೆ ಡೋಮ" (ಸಿದ್ಧಾ ೧೩. ೩೪). 'ಡವಣೆ' ಪರಾ.. [ ? ]

**ಡೋಯಿಗೆ** 'ಡೋವಿ' ನೋ.

**ಡೋರಿಗೊರೆ** 'ಡೋಜಾಗೊಜ' ನೋ.

**ಡೋರೆ** 'ದೋರೆ₁' ನೋ.

**ಡೋಲ** (ಗು). ೧. ಚಂಚಲವಾದ ; ಓಲಾಡುವ. (ನಾ). ೨. [ನಾಟ್ಯ] ಹದಿಮೂರು ಸಂಯುತ ಹಸ್ತಗಳಲ್ಲೊಂದು ; ಎರಡು ಕೈಗಳನ್ನೂ ಸೇರಿಸಿ ಅಭಿನಯವನ್ನು ಮಾಡುವಾಗ ಉಪಯೋಗಿಸುವ ಒಂದು ವಿಧದ ಹಸ್ತಮುದ್ರೆ ; ದೋಲ : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ – ೧. ಅಂಜಲಿ . . . ೮. ಡೋಲ . . . ೧೩. ವರ್ಧಮಾನ (ಅಭಾಸ್ನ. ೪೮). [ ಸಂ. ]

**ಡೋಲಕ** (ನಾ). ಒಂದು ಬಗೆಯ ಚರ್ಮವಾದ್ಯ : ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೪೦). [←ಹಿಂ. ಢೋಲಕ್./ಸಂ. ಢೋಲಕ]

**ಡೋಲಪಾದ** (ನಾ). ೧. [ನಾಟ್ಯ] ಮಾರ್ಗ ಆಕಾಶಚಾರಿಗಳ ಅತಿಕ್ರಾಂತವೇ ಮೊದಲಾದ ೧೬ ಭೇದಗಳಲ್ಲೊಂದು ; ಒಂದು ಕಾಲನ್ನು ಕುಂಚಿತಮಾಡಿ, ಎತ್ತಿ, ಎರಡು ಪಾರ್ಶ್ವಗಳಲ್ಲೂ ತೂಗಿಸಿ ಹಿಮ್ಮಡಿಯನ್ನು ತನ್ನ ಪಾರ್ಶ್ವದಲ್ಲಿ ನೆಲದ ಮೇಲಿಡುವುದು : ಎತ್ತಿರೆ ಕುಂಚಿತ ಪದಮಂ ಬಿತ್ತರದಿಂದೆರಡು ಕೆಲಕೆ ಡೋಲದ ಪಾಂಗಿಂ ಮತ್ತೆ ಹಿಮ್ಮಡದ ಕಡೆ[ಪಾಠಾಂ. ತೊಡೆ]ಯಂ ತೆತ್ತಿಸಿದೊಡೆ ಡೋಲಪಾದಚಾರಿಯೆನಿಕ್ಕುಂ (ಶಾಸ್ತ್ರರಂ. ೬-೪೮). ೨. [ನಾಟ್ಯ] ನೂರೆಂಟು ಕರಣಗಳಲ್ಲೊಂದು ; ಊರ್ಧ್ವಜಾನು ಮತ್ತು ಡೋಲಪಾದಚಾರಿಗಳನ್ನು ಮಾಡಿ ದೋಲ ಹಸ್ತವನ್ನೂ ಮಾಡುತ್ತ ಅಭಿನಯಿಸುವುದು : ಸಮದೂರ್ಧ್ವಜಾನು ಪದದಿಂದಮ ನಿಂದುಂ ಡೋಲಪಾದಚಾರಿಯನೆಸಗಲ್ ಕ್ರಮದಿಂದೆ ಡೋಲ ಕರಮಂ ಸಮನಿಸಲದು ಡೋಲಪಾದಕರಣಮೆನಿಕ್ಕುಂ (ಶಾಸ್ತ್ರರಂ. ೪-೦೧೬). [ ಡೋಲ + ಪಾದ ]

**ಡೋಲಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಕೋಲ ಚಂಪಕ ತಿಲಕ ಮುನಿ ತಕ್ಕೋಲ ಲುಂಗ ಲವಂಗ ಧಾತ್ರೀಡೋಲಫಲ ಭಲ್ಲಾತಕೀಕುಜಗಳು ವಿರಾಜಿಪವು (ಅನಂರಾ. ೪-೪-೨೬). [ಡೋಲ₁+ಫಲ]

**ಡೋಲಾಗೃಹ** (ನಾ). ಉಯ್ಯಾಲೆಯ ಮನೆ : ಇದೇ ಪದ್ಮಸರೋವರವು ಇದೇ ಡೋಲಾಗೃಹವು ಇದೇ ಕೃತಕಾದ್ರಿಯು (ಪುರುಚ. ೬-೩೬). [ ಸಂ. (ಡೋಲಾ + ಗೃಹ) ]

**ಡೋಲಿ** (ನಾ). ಮನುಷ್ಯರು ಹೊರುವ, ತೊಟ್ಟಿಲಿನಂತಹ ಒಂದು ವಿಧವಾದ ವಾಹನ: ಇವರಲ್ಲಿ ಕೆಲವರು . . . ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮಹಾಪಂ.II, ೨೦); ಕೊನೆಗೆ ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ, ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ.೬, ಕಥಾಸಾರ). [ ←ಮರಾ. ಡೋಲೀ ; ಹಿಂ. ಡೋಲೀ, ಡೋಲಾ./ಸಂ. ದೋಲೀ ]

**ಡೋಲು, ಡೊಳ್ಳು₂, ಡೋಳು, ಢೋಲು, ಢೋಳು, ದೋಲು, ದೋಳು₁** (ನಾ). ಎರಡು ಮಗ್ಗುಲಲ್ಲೂ ಬಾರಿಸುವ ಒಂದು ಬಗೆಯ ದೊಡ್ಡ ಚರ್ಮವಾದ್ಯ : "ಡೋಲು (ದೋಲು)–ಢೋಲ= ಒಂದು ಮಹಾವಾದ್ಯ" (ಕದ್ಯಕೋ. ೧೬) ; ಆಗ ಬಡಿಯಿತು ಡೋಲು ಬಡಬಡ (ಕವಿಶು. ೩೮-೬) ; ಡೋಲು, ಶಹನಾಯ್, ಕಾಳೆಗಳು ಸೂಕ್ತ ಹಿಮ್ಮೇಳ ಒದಗಿಸುತ್ತವೆ (ಭಾರಹಾ. ೦೦೯) : ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೧). ಡೊಳ್ಳು₂: ಧಡಲ್ಪಾಜ ಸಪ್ಪಳವ ಬೇಡುವದು ಡೊಳ್ಳು ಡೊಂಬರಾಟ (ಅರಳು. ೩೪೩-೯); ಲಗ್ನದ ದಿವಸ ಗಂಡಸರೂ ಹೆಂಗಸರೂ ಸಿಂದಿಯ ಕುಡಿದು ಕೊಳಲು ಡೊಳ್ಳುಗಳೊಂದಿಗೆ ಕುಣಿದ ಬಳಿಕ ಮದಿಮಕ್ಕಳ ಮೇಲೆ ಅಕ್ಕೀಕಾಳು ಹಾಕುವರು (ಕಭಾಗ. ೨೨೪) : ಆ ಸೋಮವಾರ ಬೆಳಗಿನ ಝಾವದಲ್ಲಿ ಝುಗಂಝುಳ್ಳು ಝುಗಂಝುಳ್ಳು ಎಂಬ ಡೊಳ್ಳುಗಳ ನಿನಾದವು ಗಂಗನಹಳ್ಳಿಯನ್ನು ಜಾಗೃತಗೊಳಿಸಿತು (ಹಳ್ಳಿಬ. ೬೨). ಡೋಳು : ಕಹಳೆಗಳುನ್ನತ ಡೌಡೆ ನಿಸ್ಸಾಳ ಸನ್ನೆ ಡೋಳು . . . ಒದಱಿದವು (ಅಂಜಿಕ. ೬-೬೩) : ಭೇರಿ ತಂಬಟ ಡೋಳು ಮುಂತಾದ ಬಹು ವಾದ್ಯ ಭೂರಿ ಬೊಂಬಾಳ ದೀವಿಗೆಯ ಪಾಠಿಯ ಪಟುಭಟರುಗಳು (ಮೋಹತ. ೦೦-೨೦) : ಡೋಳಿನ ಕುದುರೆ ಡಮಾನದ ಮದಕರಿ (ಕಂಸವಿ. ೦೯-೨೩) ; ಡೋಳು ಮೊದಲಾದಖಿಳವಾದ್ಯವ ಸೂಳವಿಸುತ (ತ್ರಿಹಾ್ಗ ಡ. ೯-೦೦) ; ಸಿಡಿಲನೊಂದು ಕೈಲಿ ಹಿಡಿದು ಬಾನ ಡೋಳ ಬಡಿಯುತ (ಪಾಂಡಜ. ೯-೨೦). ಢೋಲು : ಕಷ್ಟತರವಾದ ಹೆಜ್ಜೆಗಳನ್ನು ಹಾಕಿ ಢೋಲಿಗೆ ತಕ್ಕುದಾಗಿ ಕುಣಿಯುವುದುಂಟು (ಅಭಾಸ್ನ. ೦೧೩). ಢೋಳು : ಬೊಂಬುಳಿ ಢೋ[ಪಾಠಾಂ. ಡೋ]ಳು ನಿಸ್ಸಾಳೆ ಬೊಬ್ಬೆಯ ದನಿ ತುಂಬಿ ದುದೆಣ್ದೆಸೆಯನು (ಕೂಡಸೋ. ೩-೪೨). ದೋಲು : ಉಳಿದವರು ದೋಲು ಇತ್ಯಾದಿಗಳನ್ನು ಹಿಡಿದುಕೊಂಡಿದ್ದರು (ಕಿಕ್ರಕೂ. ೦೨) : ಸಾಲಬದ್ಧವಾಗಿ ಒಂದು ಕಡೆಯಿಂದ ದೋಲನ್ನೂ ಕಿಂಕಿಣಿಯನ್ನೂ ಬಾರಿಸ ತೊಡಗಿದರೆ (ಪಾಂಚಿತ್ರ. II, ೯೧೭). ದೋಳು₁ : ದೋಳು ಬಡಿದು ಗೆರಸಿ ಮುಚ್ಚಿದ ಹಾಗೆ (ಗಾದೆ). [ <ಸಂ. ಢೋಲ ]

**ಡೋಲೆ** (ನಾ). ಉಯ್ಯಾಲೆ : ಝುಗಝುಗಿವ ಡೋಲೆಯೊಳ್ ಕಾಮಿನಿಯರಾಗ ಲೀಲಾವಿನೋದದಿಂ ತೂಗಲು (ಸಾನಂಗ. ೩೩). [ ಸಂ. ಡೋಲಾ ]

**ಡೋಲೋತ್ಸವ, ಡೋಳೋತ್ಸವ** (ನಾ). ದೇವರನ್ನು ಉಯ್ಯಾಲೆ ಮೇಲೆ ಕೂಡಿಸಿ ಮಾಡುವ ಉತ್ಸವ : ಇವೊತ್ತು ಊರದೇವರ ಡೋಲೋತ್ಸವ ಇದೆ (ಜೂಪ). ಡೋಳೋತ್ಸವ : ಶ್ರೀಹಯಗ್ರೀವ ಲಕ್ಷ್ಮೀನಾರಾಯಣ ದೇವರವರ ಡೋಳೋತ್ಸವದ ಬಗ್ಗೆ (ಶ್ರೃಅಕಿ. ೦೯೩೮, ೨೭-೨ ; 1816). [ ಸಂ. (ಡೋಲಾ + ಉತ್ಸವ) ]

**ಡೋವಿ, ಡವಿಗೆ, ಡವುಗೆ, ಡೊಗೆ, ಡೊವಿಗೆ, ಡೋಗಿ, ಡೋಯಿಗೆ, ಡೋವಿಗೆ, ಡೋವೆ, ಡೌಗಿ, ಡೌಗೆ** (ನಾ). ೧. ತಲೆಯ ಚಿಪ್ಪು ; ತಲೆಬುರುಡೆ ; ಕರೋಟಿ : ವೇದಂಗಳಂ ಕೇಳು ನೆಂಟುದೊಡೆ ಬಟುನುಡಿಯೊಳಾದ ಫಲವೇನು ನಾಲಗೆಯ ಸಡಗರ ಡೋವಿಗಾದುಪಪತ್ತೇನು (ರಶಿಜಂ. ೮-೬). ಡವಿಗೆ : ೧. ಪಾಕ ಮಾಡುವ ಭಾಂಡ ಸೋಹಿಗನ ಡ[ಪಾಠಾಂ. ಡೊ]ವಿಗೆಯಯ್ಯಾ (ಬಸವ. ೬೦೪): ಹೋಡುಗೈಯೊಳಗೆ ಡವಿಗೆಯನು ಹಿಡಿಯುತಲಿ ಬೇಡಿ ಉಂಡವನೆ (ಕನ್ನಜಾ. ೩೦೮) : ಅಲ್ಲೊಂದು ಮನುಷ್ಯ ಡವಿಗೆ ಕಂಡಿತು (ಮೂಪಾಸಾ. ೨೦). ೨. ಟೊಳ್ಳಾದ ದಪ್ಪ ಬಿದಿರು : "ಡವಿಗೆ – ದೊಡ್ಡ ತೂಳ್ಳು ಬಿದಿರು" (ಪಾವಕೋ. ೬೨). ಡವುಗೆ : ೧. ಯೇಸುವಿನ ಚಿತ್ರದಲ್ಲಿ ಯೇಸುವಿನ ಕಾಲ ಬುಡದಲ್ಲಿ ಒಂದು ತಲೆಯ ಡವುಗೆ ಇದೆ (ಗೊರೂಥಾ. ೦೮, ಟಿಪ್ಪಣಿ) ; ಅದು ಪ್ರಾಚೀನಕಾಲದ ಒಬ್ಬ ಮನುಷ್ಯನ ಡವುಗೆಯಾಗಿರಬಹುದೆಂಬ ತಿಳುವಳಿಕೆ ಇದೆ (ಹುತಂಬ. ೨೨).

**ಡೊಗೆ:** ೧. ಬಟ್ಟೆಯೆಲುಗಳ ಕುಂಡಲಗಳಿಂದೆ ಕರಶಿರದ ಡೊಗೆಯ ಸಲಿಲದ ಕಮಂಡಲದಿಂದೆ (ಕ್ರಮಿಥಾ. ೧೬-೨೪); ಆನೆಯ ತಲೆಯ ಡೊಗೆಯೋ ಅವನ ಕಮಂಡಲು (ಖರುಕ. ೭೭). **ಡೊವಿಗೆ:** ೧. ಡೊವಿಗೆ ವ್ಯತ್ಯುವಿನ ಸುಡಿಗೊಳಗಾಯಿತ್ತು (ಬಸವ. ೫೬೯). **ದೋಗಿ:** ೧. ಕೊರಳಿಗೊಂದಿದ ಗಂಡಮಾಲೆ ದೋಗಿಯು ಹುಣ್ಣು ಶಿರಕೆ ಬೆನ್ನಿಗೆ ಜರಡಿಹುಣ್ಣು (ಮಲ್ಲಿಕ. ೧೦-೩೮). **ದೋಯಿಗೆ:** ೧. ಅಯುಧಧ ಹರಹುಗಳ ತಲೆಗಳ ಡೋ[ಪಾಠಾಂ. ದೋ]ಯಿಗೆಯ ಕಡಿಖಂಡಮಯದ ಮಹಾಯತದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ (ಕುಮಾ.ದ್ರೋ. ೧-೨೦). **ದೋವಿಗೆ:** ೧. ನೆಲಕ್ಕೊಲೆವ ದೋವಿಗೆ . . . ದರ್ಪವಳಿದವಯವಂ ಮಿಳಿರ್ವ ಘೋರತಪ ದಚಲಿತರನೀಕ್ಷಿಸಿದನವನೀಶನು (ಹರಿಕಾ. ೬-೩೫). **ದೋವೆ:** ೧. ಹೊರ ಕುಲದವನಂತೆ ಶಿರದ ದೋವೆಯೊಳು ಕಾ ತಿರಿದು ತಿಂಬುವನೆಂದು ಹರನ ಜರಿದು (ಪ್ರಭುಲಾಠ. ೧೦೩-೨೨). **ಡೌಗಿ:** ೧. ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು (ಜನನಾ. VII, ಪ್ರಸ್ತಾವನೆ). 'ಡೌಗಿಬರ' ಪರಾ. ೨. 'ಡೌಗಿಕೊಳವಿ' ಪರಾ. **ಡೌಗೆ:** ೧. "ಒಡು = ೧. ಒಡಕ ಗಡಿಗೆ. ೨. ತಲೆಯ ಡೌಗೆ" (ಗಂಗಾಮ. ೫೯).

**ದೋಗಿಯ ಬರ = ದೋಗಿಬರ:** ತುಸು ದಿವಸಗಳಲ್ಲಿ ದೇಶದಲ್ಲಿ ದೋಗಿಯ ಬರವು ಪ್ರಾಪ್ತವಾಯಿತು (ಗುರುಪ್ರ. ೬).

[ ←ಮರಾ. ಡೋಈ ]

**ದೋವೆ** 'ದೋವಿ' ನೋ.

**ದೋಹ** 'ದೋಹರ' ನೋ.

**ದೋಹರ**, ದೋಹ, ದೋಹಾರ, ಢೋರ (ನಾ). ಚಂಡಾಲ ಜಾತಿಯವನು: ಅಪ್ಪನು ನಮ್ಮ ಮಾದರ ಚನ್ನಯ್ಯ ಬೊಪ್ಪನು ನಮ್ಮ ದೋಹರ ಕಕ್ಕಯ್ಯ (ಬಸವ. ೩೪೮); ಬೇಡಂಗೆ ದೋಹ[ಪಾಠಾಂ. ಹಾ]ರಂಗೆ ಹೊಲೆಯಂಗೆ ರಾಮನಾಥೇಶ್ವರನೊಲಿದ ಪರಿಯ ನೋಡ (ಅಂಬಿಗ. ೪೦೨-೦೦೦); ವರ ದೋಹರ ಕಕ್ಕಯ್ಯಂ ಚರಗುರು ಶಿವಲಿಂಗಭಕ್ತನೀ ವಸುಮತಿಯೊಳ್ (ವೃಷವಿ. ೩೮-೦೦೪). **ದೋಹ:** ವೇಸಿಕೆಯಿಲ್ಲದಾ ಪೊಲೆಯ ಮಾದಿಗ ಕೀಲಿಗ ಡೊಂಬ ದೋಹನತ್ಯಾಸುರಕರ್ಮಿ ಕಳ್ಳಿಗ ದುಹಿ ತೊನ್ನರೊಳಾದೊಡುರುಳ್ದ . . . ಸೂಳೆ (ವಾಕ್ಯಸಾ. ೬೦೦೨); ಮಾಧಾರ ಕೇರೆಲ್ಲ ಮೊದಲಿಗೆ ಹೊರಟೀತು ಅದು ನೋಡಿ ದೋಹರೆಲ್ಲರು ಮಗ್ಗಿದರು (ಸಿದ್ಧಪು. ೪-೭೪). **ದೋಹಾರ:** ಸೆಟ್ಟಿಯೆಂದೆಂಬೆನೆ ಸಿರಿಯಾಳನ ಮಡಿವಾಳನೆಂಬೆಂಬೆನೆ ಮಾಚಯ್ಯನ ದೋಹಾರನೆಂದೆಂಬೆನೆ ಕಕ್ಕಯ್ಯನ (ಬಸವ. ೩೪೪); ಈತನೆ ಮೇದಾರ ಕೇತಯ್ಯನೆಂಬಾತನೀತನೇ ದೋಹಾರ ಕಕ್ಕಯ್ಯನೆಂಬಾತನು (ಜಂಪು. ೫೭-೫೭). **ಢೋರ:** ಪೂರ್ವದ ಋಷಿಗಳೆಲ್ಲರು ಕಮ್ಮಾರ, ಮಚ್ಚಿಗಾರ, ಢೋರ, ಕಬ್ಬಲಿಗ, ನಾಯಿದ ಮೊದಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ (ಶ್ರೀಶಿಪ್ರ. ೨೯೭); ಚರ್ಮಕ್ಕೆ ಕರೆ ಹಾಸುವುದೇ ಢೋರರ ಮುಖ್ಯ ಹೋರೆಯು (ಕಥಾಗಿ. ೩೦೯).

[ ←ಮರಾ. ಡೋಹರ್, ಡೋಹಾರ್, ಢೋರ್ ]

**ದೋಹಾರ** 'ದೋಹರ' ನೋ.

**ದೋಳಾಕೇಳಿ** (ನಾ). ಉಯ್ಯಾಲೆಯ ಆಟ: ದೋಳಾಕೇಳಿಯ ಕಂದುಕ ಕೇಳಿಯ . . . ಜಿನದದೊಳೆ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ ಸಂ. ದೋಲಾಕೇಲಿ (ದೋಲಾ + ಕೇಲಿ) ]

**ದೋಳು** 'ದೋಲು' ನೋ.

**ದೋಳೋತ್ಸವ** 'ದೋಲೋತ್ಸವ' ನೋ.

**ದೋಟು** 'ಡೊಂಗಟು' ನೋ.

**ದೋಟುಗಳೆ** 'ದೋಟುಗಳೆ' ನೋ.

**ದೋಟುಗೊಟು** 'ದೋಟುಗೊಟು' ನೋ.

**ದೋಟುದಲೆ** (ನಾ). ಡೊಗರು ಬಿದ್ದ ತಲೆ; ಕುಳಿಬಿದ್ದ ತಲೆ: ಶರಧಿಯಲಿ ಹುಟ್ಟಿರ್ದ ವಿಷದಲಿ ಕರಿಕುದಲೆಯಾದವರು ಅಂಧಾಸುರನ ಬಡಿಸಲು ಹರನು ಹೊಡೆದಾ ದೋಟುದಲೆಯಾದವರು (ಕಾಶಿರಾ. ೨೧-೧೬).

[ ದೋಟು (<ಡೊಂಗಟು) + ತಲೆ$_1$ ]

**ದೋಟುವೋಗು** 'ದೋಟುವೋಗು' ನೋ.

**ದೋಟು** 'ಡೊಂಗಟು' ನೋ.

**ದೋಟುಗಲೆ** (ನಾ). ಸೀಳಿದ ಗುರುತು; ಗಾಯದ ಚಿಹ್ನೆ: ಸುರಪತಿಯು ವೋಟಿಯಲೀತಸೆಳಗಿದ ದೋಟುಗಲೆ[ಪಾಠಾ. ಳೆ]ಯದ ಭೂತಳಾಧಿಪ ನೋಡು ದೇವಾಂತಕ ನಿಶಾಚರನ (ತೊರರಾ. ೬-೨೦-೩೮).

[ ದೋಟು (<ಡೊಂಗಟು) + ಕಲೆ$_2$ ]

**ದೋಟುಗಳೆ**, ದೋಟುಗಳೆ (ಕ್ರಿ). ೧. ಸೀಳು; ತೂತುಮಾಡು; ಕೊರೆ; ಕತ್ತರಿಸು: ಐದಾಟು ಶರದಲಿ ಕರ್ಣನೆದೆಯನು ದೋಟುಗಳೆಯಲು ಬಳಲಿದನು ಪೂರಾಯ ಘಾಯದಲಿ (ಕುಮಾ.ದ್ರೋ. ೫-೨೮); ತೊಡೆಯನು ದೋಟುಗಳೆವ ಪುಳುವಿಗಿನಸುತನು ಬಳಲಿ ವ್ಯಾಮೋಹದೊಳಗಿದ ರಾಮಗೆ ನಿದ್ದೆಯಳಿವುದೆಂದು ಚಿಂತಿಸಿದ (ಕರ್ಣವೃ. ೪-೮); ಪಾರ್ಥಿಯ ಶಿಲೀಮುಖಾಳಿ . . . ಸ್ಯಂದನವಿತಾನವಂ ದೋಟುಗಳೆದುದು (ಕ್ರಮಿಥಾ. ೨೨-೪೨). ೨. ಸೀಳಿ ಹೋಗು; ಬಿರಿ; ಭಂಗಹೊಂದು; ಡೊಗರುಬೀಳು: ಎದೆ ದೋಟುಗಳೆವಂತೆ ತಿವಿದುರುಳಿಸಿದ (ಭ್ರರವೇ. ೩-೦೩). **ದೋಟುಗಳೆ:** ೨. ದೋಟು[ಪಾಠಾಂ. ಟು]ಗಳೆದುದು ಗರ್ವಪರ್ವತಂ (ಅಶಿಚಂ. ೩೩-೨೬).

[ ದೋಟು (<ಡೊಂಗಟು) + ಕಳೆ$_1$ ]

**ದೋಟುಗೊಟು**, ದೋರಿಗೊರೆ, ದೋಟುಗೊಟು (ಕ್ರಿ). ತೂತುಕೊರೆ; ರಂಧ್ರಮಾಡು; ಸೀಳು; ಛಿದ್ರಿಸು: ರಕ್ತಮಾಂಸಾಹಾರಿಯಾದ ದುಷ್ಕೀಟಕವೊಂದೈತಂದು ಕರ್ಣನ ತೊಡೆಯಂ ದೋಟುಗೊಟುದು ರಕ್ತಮನೀಂಟಿ ಮಾಂಸಮಂ ಭಕ್ಷಿಸುತ್ತಿರಲಾಗಿ (ಭಾರಕಾಂ. ೩). **ದೋರಿಗೊರೆ:** ಕಿನಿಸಾಂತು ಶರವರ್ಷಮಂ ಕರೆಯಲಸುರರಂ ತನುಗಳಂ ದೋರಿಗೊರೆಯಲ್ಕಮಮ ದೈತ್ಯರನುಪಮಿತ ಖಡ್ಗ ತೋಮರ ಗದೆಗಳಿಂದಂತವಂ ಖಂಡಿಸುತಾಗಳು (ಭೋಜರಾಜು. ೬). **ದೋಟುಗೊಟು:** ಕುಂತಮೆರ್ದೆಯನು ದೋಟುಗೊಟುದಂತೆ (ಚಿಳಸ. ೨೬).

[ ದೋಟು (<ಡೊಂಗಟು) + ಕೊಟು$_1$ ]

**ದೋಟುನೊಸಲು** (ನಾ). ಕುಳಿಯಾದ ಹಣೆ; ಹಳ್ಳವಿರುವ ಹಣೆ; ತಗ್ಗಿರುವ ಲಲಾಟ: ಎಳನೆಯ ಬಾಗಿಲಲಿ ದೋಟುನೊಸಲಿನ ಕಿಟುಬೆಮರ ಕಾಹೇಟದಕ್ಷಿಯ ಸರಭಸದ ಪಡಿಹಾಟರಿಬ್ಬರು ನಿಂದಿರಲು (ನಿಧಾಗ. ೩-೬-೮).

[ ದೋಟು (<ಡೊಂಗಟು) + ನೊಸಲು (<ನೊಸಲ್) ]

**ದೋಟುಮೈ** (ನಾ). ಗೂಡುಬಿದ್ದ ಮೈ; ಜೀರ್ಣವಾದ ದೇಹ: ದೋಟುಮೈಯಾದ ಮುದುಕಿಹೋಹುದಟಿಂದ ಕಾಟಿಕೊಂಡುಣ್ಣೊ (ಸರ್ವಜ್ಞ. ೦೭೯೬). [ ದೋಟು (<ಡೊಂಗಟು) + ಮೈ (<ಮೆಯ್) ]

**ದೋಟುವೋಗು**, ದೋಟುವೋಗು, ದೋಟುವೋಗು (ಕ್ರಿ). ಡೊಗರು ಬೀಳು; ಹಳ್ಳವಾಗು; ಕುಳಿಬೀಳು; ಸೀಳಿಹೋಗು; ಬಿರಿ: ಕೀಟು ಕಾಲಿಡೆ ದಿಕ್ಕರಿಗಳೆದೆ ದೋಟುವೋಗಲು ಸರ್ಪ ಲಗ್ಗೆಯಲೇಟಿತೀ ದಳ (ಕುಮಾ.ಶ. ೧೫-೨೦); ಬದ್ದನು ಘಾತಿಯಲಿ ಧರೆ ಶೈಲ ವನ ಸಹಿತ ದೋಟುವೋಗಲು (ನಿಧಾಗ. ೧೦-೩೨-೧೪). **ದೋಟುವೋಗು:** ದೋಟುವೋದುವು ತೋಳು ನೆತ್ತರ ಕಾಟಿ ರಾವಣ ಗಂಡುಗೆಟ್ಟನು (ಕಾಶಿರಾ. ೨-೩೧); ಬೀಸಿ ಬಾಲದಿ ಗೋಣ ಬಿಗಿದನು ಸಾಸಿಗನ ಶಿರ ದೋಟುವೋದುವು (ಕಾಶಿರಾ. ೨೨-೧೧). **ದೋಟುವೋಗು:** ವಿಮಾಟಿ ಪೊಗುವ ಅಂಗಜನ ಶರದಲಿ ದೋಟುವೋಯಿತು ಹೃದಯ (ಕುಮಾ.ವಿ. ೨-೧೦).

[ ದೋಟು (<ಡೊಂಗಟು) + ಪೋಗು$_1$ ]

**ಡೋಱುಹೃದಯ** (ನಾ). ಸೀಳಿದ ಎದೆ; ಡೊಗರುಬಿದ್ದ ಎದೆ : ಹೋರುಗಳೆದಕ್ಷಿಯಿಂ ಡೋಱುಹೃದಯಂಗಳಿಂ (ಲಕಿಹಿಂ. ೩೭-೩೭).

[ ಡೋಱು (<ಡೊಂಗಱು) + ಹೃದಯ ]

**ಡೋಱಿಸಿಸು** (ಕ್ರಿ). ಹೋಳಾಗಿಸು ; ಸೀಳಿಹೋಗುವಂತೆ ಮಾಡು ; ಡೊಗರು ಬೀಳಿಸು : ಶರಗಳಿಂದಚ್ಚವರ ತನುಗಳಂ ಡೋಱಿಸಿಸಿಯುತ್ತ, ಸಾರಥಿ ತೇರ್ಗಳಂ ತಿರುವನೇಱಿಸಿದ ಬಿಲ್ಗಳಂ ಕಡಿಕಡಿದು (ಜಲಪು. ೪೯-೩೩).

[ ಡೋಱು (<ಡೊಂಗಱು) + ಎನಿಸು$_1$ ]

**ಡೌಗಿ** 'ಡೋವಿ' ನೋ.

**ಡೌಗಿಕೊಳವಿ** (ನಾ). ಟೊಳ್ಳಾದ ದಪ್ಪ ಬಿದಿರಿನಿಂದ ಮಾಡಿದ ಕೊಳವೆ; ದಪ್ಪಬಿದಿರಿನ ಅಂಡೆ : ಹೆವ್ವುಹಾಕಿ ಬೆಣ್ಣೆತೆಗೆಯಲು ಚರ್ಮದ ಚೀಲ, ಡೌಗಿಕೊಳವಿಯನ್ನೂ, ಚಹಾ ತಯಾರಿಸಲು ದನ, ಕುರಿ, ಮನುಷ್ಯರುಗಳ ಹಿಕ್ಕೆಗಳನ್ನೂ ಉರಿಹಚ್ಚುತ್ತಾರೆ (ಕೃರಾಸ. ೩೩).

[ ಡೌಗಿ (<ಡೋವಿ) + ಕೊಳವಿ (<ಕೊಟವಿ) ]

**ಡೌಗಿಬರ** 'ಡೋಗಿಬರ' ನೋ.

**ಡೌಗೆ** 'ಡೋವಿ' ನೋ.

**ಡೌಡೆ** 'ಡವುಡೆ$_1$' ನೋ.

**ಡೌಡೆವಱೆ** (ನಾ). ೧. ಡವುಡೆಯೆಂಬ ಚರ್ಮವಾದ್ಯ. ೨. ಡವುಡೆ ವಾದ್ಯದ ಶಬ್ದ : ನೆರೆದು ಪಳಂಚುವ ಕಾಲುಂಗುರದ ರವಂ ಮುಂದೆ ಡೌಡೆವಱೆಯಂ ಪೋಲುತ್ತಿರೆ (೧ರಿಳ. ೭-೫೦).

[ ಡೌಡ (<ಡವುಡೆ$_1$) + ಪಱೆ$_1$ ]

**ಡೌಲು, ಡವಲು, ಡವುಲು** (ನಾ). ೧. ರೀತಿ; ಪ್ರಕಾರ. ೨. ಒಣಹೆಮ್ಮೆ; ಬರಿಯ ಬಡಾಯಿ ; ಆಡಂಬರ : ಅಲ್ಲೊಂದು ಇಲ್ಲೊಂದು ಬಣ್ಣದ ನೂಲು ಬೆತ್ತಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ನೆಂಮು. ೩೦-೦) ; ಇದರೊಳಗೆ ನಾನು ಮನಸ್ಸಿಗೆ ಹಚ್ಚಿಕೊಳ್ಳತಕ್ಕದ್ದೇನೂ ಇಲ್ಲ ಎಂದು ಡೌಲಿನ ಮಾತು ಹೇಳಿ (ಮುಂಬಯಿ. ೩-೯೩). ೩. ದೊಡ್ಡಸ್ತಿಕೆ ; ಘನತೆ ; ವೈಭವ : ಬೆಳಗಿನ ಸ್ವಚ್ಛಂದ ಗಾಳಿಯಲ್ಲಿ ಡೌಲಿನಿಂದ-ಹಾರತೊಡಗಿದ ಆ ತ್ರಿವರ್ಣಧ್ವಜವನ್ನೆ ಅರೆಕ್ಷಣ ಪ್ರೀತಿ ಅಭಿಮಾನಗಳಿಂದ ನಿಟ್ಟಿಸುತ್ತಿದ್ದ (ಆಗಸ್ಟ್. ೧೮); ದೊಡ್ಡ ಸಂಬಳ ತೆಗೆದುಕೊಂಡು, ಮೂರಂಗುಲ ಜರತಾರಿ ರುಮಾಲು ಹಾಕಿಕೊಂಡು, ಡೌಲಿನಲ್ಲಿ ಅಮಲ್ದಾರರುಗಳು ಕಾಲಹಾಕು ತ್ತಿದ್ದರು (ನಟಸಾ. ೩). ೪. ದರ್ಪ ; ಠೀವಿ : ಪಂಡಿತರ ಸಭೆಗೆ ಓರ್ವನು ಬಹಳ ಡೌಲಿನಿಂದ ವಸ್ತ್ರಾಲಂಕಾರಭೂಷಿತನಾಗಿ ಬಂದನಂತೆ (ಹಾಂಸಾ. ೬೮). **ಡವಲು** : ೫. ಅಂದಾಜು ; ಊಹೆಮಾಡುವಿಕೆ. 'ಡವಲುಕಟ್ಟು' ಪರಾ. **ಡವುಲು**: ೨. 'ಡವುಲುಕೊಚ್ಚು', 'ಡವುಲುದಾರ' ಪರಾ. ೫. 'ಡವುಲಂದಾಜು', 'ಡವುಲುಜಮಾಬಂದಿ' ಪರಾ. **ಡೌಲು** : ೨. ಈಗ ನನ್ನ ಮ್ಯಾಗೆ ಡೌಲ ಬಡೀತಾನ (ಪುರುಷ. ೦೦೯).

[ ←ಅರ. ಹಿಂ. ಮರಾ. ಡೌಲ್ ]

**ಡೌಳಿ** 'ಟವಳಿ' ನೋ.

**ಡ್ಯಾಲಿಯಾ** 'ಡೇಲಿಯಾ' ನೋ.

**ಡ್ರಮ್ಮು** (ನಾ). ಪೀಪಾಯಿ: ಈ ಕೆಳಗಿನ ಇನ್ನೂ ಹತ್ತಾರು ತದ್ಭವಗಳನ್ನು ಈ ವರ್ಗಕ್ಕೆ ಸೇರಿಸಬಹುದು. ಉದಾ . . . ಬಾಟ್ಲಿ; ಆಸ್ಪತ್ರೆ; ಡ್ರಮ್ಮು (ಭಾಷಾಶಾ. ೦೭೭). [ ←ಇಂ. Drum ]

**ಡ್ರಾಮು** (ನಾ). ಮದ್ಯ ಮೊದಲಾದ ದ್ರವಗಳ ಒಂದು ಸಣ್ಣ ಅಳತೆ : ನಾಲ್ಕು ಡ್ರಾಮು ಸೆರೆ ಎಂಟು ಡ್ರಾಮು ಕೋಪ (ಬೆಂಗಬ. ೦೧).

[ ←ಇಂ. Dram ]

**ಡ್ರಿಲ್ಲು** (ನಾ). ಕವಾಯಿತು ; ವ್ಯಾಯಾಮ ಶಿಕ್ಷಣ : ಕರಡಿ ಕಪಿಗಳಿಗಲ್ಲಿ ನಡೆಯುತಿದೆ ಡ್ರಿಲ್ಲು (ಕೋಗಿಲೆ. ೩-೪೭).

[ ←ಇಂ. Drill ]

**ಡ್ರೈವರು** (ನಾ). ಮೋಟಾರುಬಂಡಿ ಮೊದಲಾದುವನ್ನು ನಡಸುವವನು; ಸಾರಥಿ; ಚಾಲಕ: ನಮ್ಮ ಕಾರಿಗೆ ಒಬ್ಬ ಡ್ರೈವರು ಬೇಕಾಗಿದ್ದಾನೆ (ರೂಢಿ). [ ←ಇಂ. Driver ]

*

# ಢ

**ಢ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ನಾಲ್ಕನೆಯ ಅಕ್ಷರ. ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಘಢಭವಂ ನೆಱೆ ನಾಲ್ಕು" (ಪುಂಗಣಿ. ೦೦೪-೦೦).

**ಢಂ** (ನಾ). ಒಂದು ಅನುಕರಣ ಶಬ್ದ ; ಪಟಾಕಿ ಮೊದಲಾದ ಸಿಡಿಮದ್ದುಗಳು ಸಿಡಿಯುವಾಗ ಅಥವಾ ಕೋವಿ, ಫಿರಂಗಿ, ಪಿಸ್ತೂಲು ಮೊದಲಾದುವುಗಳಿಂದ ಗುಂಡು ಹಾರಿಸುವಾಗ ಉಂಟಾಗುವ ಶಬ್ದ.

**ಢಂಕೃತಿ** (ನಾ). ಢಂ ಎಂಬ ಧ್ವನಿ: ಹೈದರನಿಗೆ ಈ ಫಿರಂಗಿಗಳ ಢಂಕೃತಿಯು ಆಶ್ಚರ್ಯವನ್ನು ಮಾಡಿತು (ಒಡೆಳ. ೮೫). [ ಸಂ. ]

**ಢಕಲಪಟ್ಟಿ, ದಕಲುಪಟ್ಟಿ, ಢಕಲ್ಪಟ್ಟಿ** (ನಾ). (ಉಕ) ೧. ಕೆಲಸವನ್ನು ಮುಂದೂಡುವುದು. **ದಕಲುಪಟ್ಟಿ** : ೨. ಚಕ್ಕರು ; ತಪ್ಪಿಸುವಿಕೆ: ಬರುತ್ತೇವೆ ಎಂದು ಹೇಳಿ ದಕಲುಪಟ್ಟಿ ಕೊಟ್ಟ (ರೂಢಿ). ೩. ನೂಕುವಿಕೆ ; ದಬ್ಬಿ ಹೊರಗೆ ಹಾಕುವಿಕೆ ; (ಕೆಲಸದಿಂದ) ವಜಾ ಮಾಡುವಿಕೆ ; ಅವನಿಗೆ ದಕಲುಪಟ್ಟಿಯನ್ನು ಕೊಟ್ಟುಬಿಡುತ್ತಿದ್ದರು. (ಬಂಗಾರ್ಡ್ಯ ೩೧). **ಢಕಲ್ಪಟ್ಟಿ** : ೩. ರಂಗಣ್ಣನಿಗೆ ಹೊಸಹಳ್ಳಿಯಲ್ಲಿ 'ಢಕಲ್ಪಟ್ಟಿ' ಹೊನ್ನಹಳ್ಳಿಯಲ್ಲಿ ಅರ್ಧಚಂದ್ರಪ್ರಯೋಗ (ರುಂಬಿಕ ೦೭೧).

[ ←ಮರಾ. ಢಕಲ್‌ಪಟ್ಟೀ ]

**ಢಕಲಾಯಿಸು** (ಕ್ರಿ). ಮುಂದಕ್ಕೆ ತಳ್ಳು; ನೂಕು; ದೂಡು: ಪೆಟ್ರೋಲು ಮುಗಿದು ಕಾರನ್ನು ಢಕಲಾಯಿಸಬೇಕಾಯಿತು (ರೂಢಿ).

[ ಢಕಲಾ$_0$ (P ←ಮರಾ. ಢಕಲಣೇ) + - ಇಸು$_3$ ]

**ಢಕಾಯಿತ** 'ಡಕಾಯಿತ' ನೋ.

**ಢಕಾಯಿತಿ** 'ಡಕಾಯಿತ' ನೋ.

**ಢಕಾರ** (ನಾ). ಢ ಎಂಬ ಅಕ್ಷರ. [ ಸಂ. ]

**ಢಕ್ಕ** (ನಾ). = ಡಕ್ಕೆ ೧ : ಮುರಜ ಢಕ್ಕಂ ವೀಣೆ ಡಮರು ಕಾಳಂ ಮೇಳಂ (ಸಿದ್ಧಕಾ. ೮-೯). [ ಸಂ. ಢಕ್ಕಾ ]

**ಥಕ್ಕರ** 'ಠೊಕ್ಕರ್₁' ನೋ.

**ಥಕ್ಕಾಮುಕ್ಕಿ** 'ಧಕ್ಕಾಮುಕ್ಕಿ' ನೋ.

**ಥಕ್ಕಾರವ** (ನಾ). ಥಕ್ಕೆಯ ಶಬ್ದ : ದಳದ ಬಂಭಾರವಂ ರಣ ಕಿಲಕಿಲಾರವಂ ಪಟಹ ಥಕ್ಕಾರವಂ ಪುದಿದ ನಾನಾರವಂ (ಕೃಷಿಭಿ. ೨೨-೪). [ ಸಂ. (ಥಕ್ಕಾ + ರವ)]

**ಥಕ್ಕಾಳಿ** (ನಾ). ಇಂದು ಮಾಡಬೇಕಾದ ಕೆಲಸವನ್ನು ನಾಳೆಗೆ ಮುಂದೂಡುವುದು ಅಥವಾ ತಾನು ಮಾಡಬೇಕಾಗಿ ಬಂದ ಕೆಲಸವನ್ನು ಉಪಾಯದಿಂದ ಇನ್ನೊಬ್ಬನ ಮೇಲೆ ಹೇರುವುದು: ಕಾಲಯವನನು ಕಾಯದಿಂದವೆ ಬೀಳಿಸಿದೆ ಮಾಗಧನನಾ ಪರಿ ಸೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾಮದಲಿ ದಾಳನತಿ ಥಕ್ಕಾಳಿಯ[ಪಾ. ದೊಂಡಣಿಯ] ಠಕ್ಕಿನ ಠೌಳಿಕಾರನು ನಿನ್ನ ಮಾಯೆಯ ಹೇಳಲಮ್ಮೆನು ಕೃಷ್ಣ ಕರುಣಿಸು ಕರ್ಣನಾರೆಂದ (ಕುಮ್ವಾ.ಕ. ೨೬-೨೬). [ ← ಮರಾ. ಥಕಲ್ ]

**ಥಕ್ಕೆ** (ನಾ) .=ಡಕ್ಕೆ ೧ : ಥಕ್ಕೆ ಡಮರುಗ ಮೊಳಗಿದವು (ಕೊರಡಾ. ೬-೨೦-೪೩); ಇಂತಪ್ಪವರಣದೊಳಗೊಂದೊಂದನೇ ನಂಬಿ ಕಂತುಹರನೊಲವ ಪಡೆದವರು ಪಲಕೆಲರುಂಟು ಸಂತಸದಿ ತಿಳಿದು ನಂಬುವುದೆಂದು ಸಾಱುತ್ತ ಥಕ್ಕೆಯಂ ಬಾಜಿಸುತ್ತ (ಪ್ರಾಭಲಾ. ೬-೪೦) ; ಪಟಹ ತಮ್ಮಟ ಥಕ್ಕೆ ಡವುಡೆ ಕಹಳಾಸಮುತ್ಕಟ ನಾದಮಳ್ಳಿಱಿಯೆ (ಜಬಪು. ೧೬-೦೩). [ ಸಂ: ಥಕ್ಕಾ ]

**ಥಕ್ಕೆವಾಜಿಸು** (ಕ್ರಿ). ೧. ಡಕ್ಕೆಯನ್ನು ಬಾರಿಸು. ೨. (ಆಲಂ) ಭಯದಿಂದ ಎದೆಯಲ್ಲಿ ಡಬಡಬ ಎಂಬ ಶಬ್ದ ಉಂಟಾಗು; ಎದೆಗುಂಡಿಗೆ ಡವಡವನೆ ಬಡಿದುಕೊಳ್ಳು : ದೆಸೆಯೊಳ್ ನಿಶ್ಚಳವಿರ್ಪ ದೇವರೆರ್ದೆ ಥಕ್ಕಾಧ್ಯಾನದಿಂ ಥಕ್ಕೆವಾಜಿಸೆ . . . ವೀರಾರಿನ್ಯಪಾಳರಂ ಬರಿಸಿದಂ ಮೂಱಿಟ್ಟಗಂ ಬಿಟ್ಟಗಂ (ಎಕ. XI, ದಾವಣ. ೨೩-೨೩; ೧೨೩೩). 'ಡಕ್ಕೆವಾಜಿಸು' ಪರಾ. [ ಥಕ್ಕೆ + ಬಾಜಿಸು ]

**ಥಗೆ** 'ದಗೆ₁' ನೋ.

**ಥಗೆವಡೆ** (ಕ್ರಿ). ಸೆಕೆಯನ್ನು ಹೊಂದು; ಉಷ್ಣತೆಯನ್ನು ಪಡೆ; ಕಾವೇರು: ಥಗೆವಡೆದೊಡಲೊಳು ಸ್ಫೋಟಕವೆದ್ದು ನಾಲಗೆ ನುಡಿಗೆಟ್ಟುವೆ (ಹೋಚತ. ೯-೦೪). [ ಥಗೆ (<ದಗೆ₁) + ಪಡೆ₁ ]

**ಥಣ** (ನಾ). ಒಂದು ಅನುಕರಣ ಶಬ್ದ ; ಘಂಟೆ, ಜಾಗಟೆ ಮೊದಲಾದುವುಗಳನ್ನು ಬಡಿದಾಗ ಹುಟ್ಟುವ ಧ್ವನಿ.

ಥಣಥಣ (ದ್ವಿರುಕ್ತಿ) : ವೀರಘಳಕದ ಘಂಟೆ ಥಣಥಣಂ ಥಣಮೆನಲು (ಬಸವರ. ದೇ. ೦೦೬-೨೧).

**ಥಣಥಣಿಸು** (ಕ್ರಿ). ಥಣಥಣ ಎಂದು ಶಬ್ದಮಾಡು : ಜಾಗಟೆ–ಗಂಟೆಗಳು ಥಣಥಣಿಸುವುವು (ಕನ್ನಡಾ. ೦೩). [ <ಥಣ + – ಇಸು₃ ]

**ಥಣತ್ಕೃತ** (ನಾ). ಥಣಥಣ ಎಂಬ ಶಬ್ದ ; ಘಂಟೆ ಮೊದಲಾದುವುಗಳ ಶಬ್ದ : ಉಲಿವ ಘಂಟೆಯ ಥಣತ್ಕೃತವೊಗೆಯೆ (ಜಬಪು. ೪೬-೩೩). [ ಸಂ. ]

**ಥಣಾಡಂಗುರ**, ಡಣಾಡಂಗುರ, ಡಾಣಾಡಂಗರ, ಡಾಣಾಡಂಗುರ, ಢಾಣಾಡಂಗುರ (ನಾ). ಘಂಟಾಘೋಷವಾಗಿ ಸಾರಿದುದು; ಎಲ್ಲರಿಗೂ ತಿಳಿದ ವಿಷಯ; ಬಹಿರಂಗವಾದುದು; ಪ್ರಚಾರವಾದುದು: ಇವಳ ಪವಿತ್ರತೆ ಇಡೀ ಗುಜ್ಜರಬಿಟ್ಟಿನಲ್ಲಿ ಥಣಾಡಂಗುರವಾಗಲಿಲ್ಲವೇ? (ಹೊಸಕ್ಕಿ. ೩೭). **ಡಣಾಡಂಗುರ** : ಇದು ಡಣಾಡಂಗುರವಾಗಿ ಸಾರುವ ವಿಷಯವಲ್ಲ (ಟೂಡಿ). **ಡಾಣಾಡಂಗರ** : ರಾಯರಿಂದ್ವರ ನಾ ಹ್ಯಾಂಗ ಬರತಿದ್ದ ಆಚಾರ ಡಾಣಾಡಂಗರಾಗಿ ? (ದೀಪನಿ. ೪೬). **ಡಾಣಾಡಂಗುರ** : ಬ್ರಿಟಿಶ್‌ಕೋರ್ಟನ್ನು ನಾವು ಮನ್ನಿಸುವುದಿಲ್ಲವೆಂದು ಡಾಣಾಡಂಗುರವಾಗಿ ಸಾರಿ (ಮಹಾಯೋ. ೧೪೯); ಬಸವಂತಿ ಡಾಣಾಡಂಗುರ ಮೋಟರಿನಲ್ಲಿ ಬಂದು ವಾಡೆಯಲ್ಲಿ ನಿಂತು ಬಿಡಲಿ (ದೀಪಚ. II, ೧೩೦); ಹೆಸರಿಗೆ ಮಾತ್ರ ಮುತ್ತೈದೆಯಾಗಿರುವುದಕ್ಕಿಂತ ಡಾಣಾಡಂಗುರವಾದ ವೈಧವ್ಯವೇ ಲೇಸು (ಸ್ವಾಕಿಕ. ೬). **ಢಾಣಾಡಂಗುರ** : ಅವನ ಕಿಡಿಗೇಡಿತನ ಹಳ್ಳಿಹಳ್ಳಿಯಲ್ಲೂ ಢಾಣಾಡಂಗುರವಾಗಿದೆ (ಟೂಡಿ). [ <ಥಣ + ಡಂಗುರ ]

**ಥಣಿರು** (ನಾ). ಒಂದು ಅನುಕರಣ ಧ್ವನಿ; ಘಂಟೆ ಮೊದಲಾದುವುಗಳ ಶಬ್ದ : ಬಿರುದಿನ ಬಿಲ್ಗಂಟೆ ಥಣಿರೆನೆ ಕೊಂಡ ಕಾರ್ಮುಕವ (ಪ್ರಭುಚತ. ೩೪-೨೯).

**ಥಣಿಲನೆ** (ಅ). ಥಣಿಲ್ ಎಂದು ಶಬ್ದವಾಗುವಂತೆ ; ಬೇಗನೆ ; ಪಕ್ಕನೆ : ಗಣಮಧ್ಯದೊಳು ತ್ರಿಣೆಯ ಹೃದಯಕವಾಟವ ಥಣಿಲನೆ ತೆಗೆದು ತೋರಲ್ಕೆ (ಕೋಡಚ. ೧-೦೦೮). [ ಥಣಿಲ್$_0$ + – ಅನೆ$_1$ ]

**ಥಪ್ಪಳ** 'ಡಪಳೆ' ನೋ.

**ಥಪ್ಪಳಸೀರೆ** (ನಾ). ಒಂದು ವಿಶಿಷ್ಟ ತರದ ನೆಯ್ಗೆಯುಳ್ಳ ಸೀರೆ : ಯಾಕೇನು. ತಾ ಯಾವಾಗರ ಉಡೋ ಥಪ್ಪಳಸೀರೆ ತಂಗಿ ಉಟ್ಟಳೂ ಅಂತ (ಪ್ರನಿ. ೨೬೦). [ ಥಪ್ಪಳ (<ಡಪಳೆ) + ಸೀರೆ$_2$ ]

**ಥಬ್** (ನಾ). ಒಂದು ಅನುಕರಣ ಶಬ್ದ : ಕಟಕದವರೆಲ್ಲ ಕಟಕಿಯ ನುಡಿವಂತೆ ಥಿಟಲು ಥಿಟಲು ಥಬ್ಬೆಂದು (ಹಂಪ್ರಸಾಂ. ೮-೪೩).

**ಥಬಕು** (ನಾ). ನಟನೆ; ಕಪಟ; ವಂಚನೆ; ಮೋಸ: ಶಾಂತಿಸಮ್ಮೇಳನದಲ್ಲಿ ಭಾರತ ಭಾಗ ವಹಿಸಿತು ಎನ್ನುವುದು ಸತ್ಯದ ಅಪಭ್ರಂಶ ; ಬರೀ ಥಬಕು (ಅಕ್ಕಸಾ. ೮೦). [ ←ಹಿಂ. ಥಬಕ್ = ಉಪಾಯ, ಯುಕ್ತಿ ]

**ಥಮಥಮ** (ನಾ). ಒಂದು ಅನುಕರಣ ಶಬ್ದ ; ಡಕ್ಕೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸುವಾಗ ಹುಟ್ಟುವ ಧ್ವನಿ. 'ಥಮಥಮತ್ಕಾರ', 'ಥಮಥಮಿಸು' ಪರಾ.

**ಥಮಥಮತ್ಕಾರ** (ನಾ). = ಥಮಥಮ : ತೇರುಗಳ ಚೀತ್ಕಾರ ಪಟು ರಣಭೇರಿಗಳ ಭಾಂಕಾರ ಭಟರ ಕಠೋರತರ ಹೂಂಕಾರ ಥಕ್ಕಾ ಥಮಥಮತ್ಕಾರ (ಅನಂಕಾ. ೬-೦೦-೪೩). [ ಸಂ. ]

**ಥಮಥಮಿಸು** (ಕ್ರಿ). ಥಮಥಮ ಎಂದು ಶಬ್ದವಮಾಡು : ಡೋಲಾಯಮಾನವಾಗಿ ಡೋಲಿನವನು ಥಮಥಮಿಸಿದ (ಮಾಮನಿ. ೨೦೯). [ ಥಮಥಮ + – ಇಸು$_3$ ]

**ಥಮಣಿ** 'ದಮಣಿ' ನೋ.

**ಥಮಾಮಿ** 'ದಮಾಮಿ' ನೋ.

**ಥಮಾರ್** (ನಾ). ಒಂದು ಅನುಕರಣ ಪದ: ಸಿಡಿಮದ್ದು ಸಿಡಿದು ಥಮಾರ್ ಎಂದಿತು (ಟೂಡಿ).

**ಥಮಾರ** (ನಾ). [ಸಂಗೀತ] ಒಂದು ಬಗೆಯ ತಾಳ : ನಮ್ಮ ದೇಶದ ಸಂಗೀತದಲ್ಲಿ ರೂಪಕ (ದಾದರಾ), ಆದಿ (ತ್ರಿವಟ), ಝಂಪೆ, ಧ್ರುವದ, ತ್ರಿವುಡೆ (ಥಮಾರ), ಧೂಮಾಳಿ, ಏಕ್ಕಾ ಎಂಬ ಹಲವು ತಾಳಪದ್ಧತಿಗಳಿರುವುವು (ದಾಅಪ್ರ. II, ೧೦೧೦). [ ←ಹಿಂ. ಮರಾ. ಧಮಾರ್ ]

**ಥಮಾರನೆ** (ಅ). ಥಟ್ಟನೆ ; ಸ್ವಲ್ಪವೂ ವಿಳಂಬವಿಲ್ಲದೆ ; ಕೂಡಲೆ : ನಾನು ಕೇಳಿದರೆ ಥಮಾರನೆ ಉತ್ತರ ಕೊಟ್ಟಳು (ನಾಡಿಗೇ. ೩೩). [ ಥಮಾರ್ + – ಅನೆ$_1$ ]

**ಥಮ್ಮನೆ** (ಅ). ಥಮ್ ಎಂಬ ಶಬ್ದವಾಗುವಂತೆ: ಅನುಕರಣಕ್ಕೆ – ಖಣಿಲ್ಲನೆ . . . ಥಮ್ಮನೆ, ಧೊಪ್ಪನೆ (ಕಮದ. ೦೪ ಪ್ರಯೋ). [ ಥಂ + – ಅನೆ$_1$ ]

**ಥರಕಿ** 'ದರಕಿ' ನೋ.

**ಥರಕಿಹಾಕು** (ಕ್ರಿ). ಥರ್ ಎಂದು ತೇಗು : ಭೋಜನಮಾಡಿ ಬಂದದ್ದರಿಂದ ಅವನು ಐದು ನಿಮಿಷಗಳಲ್ಲಿ ಹತ್ತುಸಾರೆ ಥರಕಿಹಾಕಿದನು (ಮತ್ಕಮ. ೦೩೬). [ ಥರಕಿ (<ದರಕಿ) + ಹಾಕು (<ವಾಯ್ಯು$_1$) ]

**ಢರಕಿ** 'ಡರಕಿ' ನೋ.

**ಢಲಾಯಿತ** 'ಡಲಾಯಿತ' ನೋ.

**ಢವಣೆ** 'ಡವಣೆ' ನೋ.

**ಢವರಿ** (ನಾ). (?) : ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಢವರಿಸುವ ಢವರಿಸಿ ಕುಸಿವ ಕುಸಿದು ಢವರಿ[ಪಾಠಾಂ. ಧವರಿ, ದಡಸಿ] ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಯಾಡಂಬರಂ ಮಿಕ್ಕು ಹಣ್ಣೆ ನಿಂದವು ಬಲದ ನಟ್ಟನಡುವೆ (ಸೋಮಕು. ೫-೨೯). [ ? ]

**ಢವರಿಸು** (ಕ್ರಿ). (?) : ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಢವರಿಸುವ ಢವರಿಸಿ ಕುಸಿವ ಕುಸಿದು ಢವರಿ ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಯಾಡಂಬರಂ ಮಿಕ್ಕು ಹಣ್ಣೆ ನಿಂದವು ಬಲದ ನಟ್ಟನಡುವೆ (ಸೋಮಕು. ೫-೨೯). [ ಢವರಿ + – ಇಸು$_3$ ]

**ಢವಳ** 'ಡಾಳ$_1$' ನೋ.

**ಢವಳಾರ** 'ಧವಳಾರ$_2$' ನೋ.

**ಢವಳಿಸು** (ಕ್ರಿ). ಆಲುಗಾಡಿಸು : ಅರೆಗಣ್ಣು ಮುಚ್ಚಿ ನಸುನಗುತ ಸಣ್ಣ ಬೆರಳು ಬಾಯೊಳು ಢವಳಿಸುತ ಪನ್ನಗಶಯನ ನಾಟಕದಿ ನಿನ್ನ ಮಗನ ಮುದ್ದು ನೋಡೆನುತ ಗೋಪಿ ತನ್ನ ಪತಿಗೆ ತೋಱಿದಳು (ಪುರಂದ. ೫-೦೫೫-೨). [ ಢವಳ$_0$ (P ←ಮರಾ. ಢವಳಣೇ) + – ಇಸು$_3$ ]

**ಢಳಾಯತ** 'ಡಲಾಯಿತ' ನೋ.

**ಢಳಾಯಿತ** 'ಡಲಾಯಿತ' ನೋ.

**ಢಳ್ಳಿಸು** (ಕ್ರಿ). ಪ್ರಕಾಶಮಯವಾಗು; ಕಾಂತಿಯಿಂದ ಮೆರೆ (?) : ಭದ್ರ ಲಕ್ಷಣದಿ ಶೋಭಿಸುವ ಗಾತ್ರಕನುಪಮ ರತ್ನಮಾಲೆಯಾಭರಣ ಜಗನ್ನೇತ್ರಾಂಗನಾವಣಿಯರಂತೆ ಪಲ್ಲಕ್ಕಿಯೊಳ್ ಬರಲು ಸಭೆ ಢಳ್ಳಿಸುವೊಲು (ಜಿನಕು. ೪-೩೧). [ <ಢಾಳಿಸು$_1$ ? ]

**ಢಱ್ಱನೆ** (ಅ). ಢರ್ ಎಂಬ ಶಬ್ದದೊಡನೆ: ಬಡದ ಢಱ್ಱನೆ ತೇಗಿ ನೆರವಿಯಂ ಬಯ್ದು ಬಱುನುಡಿಯ ಕಲಿವೀರಬಾಹುಕ (ಹಕಳಾ. ೦೦-೧೮). [ ಢಱ್$_0$ + – ಅನೆ$_1$ ]

**ಢಾಕಿನಿ** 'ಡಾಕಿಣಿ' ನೋ.

**ಢಾಕು** 'ಡಾಕು$_1$' ನೋ.

**ಢಾಕುಗೆಡಿಸು** (ಕ್ರಿ). ಕೆಚ್ಚನ್ನು ಕಳೆ ; ಎದೆಗುಂದಿಸು ; ಧೈರ್ಯಗೆಡುವಂತೆ ಮಾಡು : ಪಾಕಶಾಸನನೈದಿ ವೃತ್ರನ ಢಾಕುಗೆಡಿಸಿ ದಧೀಚಿಯಸ್ಥಿಯಲೌಕಿ ಹೊಯ್ಕಲು (ಕುಮಾ.ಉ. ೪-೦೦೬). [ ಢಾಕು (<ಡಾಕು$_1$) + ಕೆಡಿಸು$_1$ ]

**ಢಾಣ** (ನಾ). ಹಾಳು ; ವ್ಯರ್ಥವಾದುದು.

**ಢಾಣಾಗು**=ಹಾಳಾಗು ; ವ್ಯರ್ಥವಾಗು ; ನಿರುಪಯುಕ್ತವಾಗು : ನೀ ಬರೋಬರಿ ಮಾಡ್ಲಿಲ್ಲಾ ಅಂದ್ರ ಎಲ್ಲಾ ಕೆಲಸ ಕೆಟ್ಟು ಢಾಣಾಗಿ ಹೋಗ್ತಾವ (ಸಕೋಶ. ೨). [ ←ಮರಾ. ಢಾಣ=ತೇವವುಳ್ಳ, ಕೆಸರಾದ ]

**ಢಾಣಾಡಂಗುರ** 'ಢಣಾಡಂಗುರ' ನೋ.

**ಢಾಣೆ$_1$**, ಡಾಣೆ, ಡಾಣೆ$_2$, ದಾಣಾ, ದಾಣೆ$_2$, ದಾಣೆ$_3$ (ನಾ). ೧. ಒಂದು ಬಗೆಯ ಆಯುಧ; ಗದೆ: ನೆರೆದುದಭವನ ಕೆಲಬಲದಲುಬ್ಬರದ ಬೊಬ್ಬೆಯು ಜಡಿವ ಖಡ್ಗದ ಬೆರಳ ಚಕ್ರದ ಭವಣಿಗಳ ಢವಣಿಸುವ ಢಾಣೆಗಳ . . . ವರ ಮಹಾಗಣನಿಕರ ಪೊದಗಿತು(ಕುಮಾ.ಕ. ೭-೧೩). 'ನೆಗಹುಢಾಣೆ' ಪರಾ. **ಡಾಣೆ** : ೨. ದಪ್ಪಕೋಲು ; ಬಡಿಗೆ ; ದೊಣ್ಣೆ ; "ಲಗುಡ; ದಂಡ" (ನಾಚಿರಾ. ೬). **ಡಾಣೆ$_2$** : ೧. ಬೀಸುವ ಡಾಣೆಗೆ ತಲೆಯೊಡ್ಡುವಂತಿರೊಡ್ಡಿದನಲ್ತೆ (ಪಾರ್ಶ್ವಪು. ೩-೧೦೩); ಕಡುಪಿಂ ಪಿಡಿದಿರ್ಪ ಡಾಣೆಯಂ ಜಡಿ (ದಶಕು. ೫-೪೨). ೨. ಸತ್ತ್ವದರ್ಪನಡ್ವಾಹನಂ ಕಂಡದಟಿ ಪೊಡೆಯಂ ಡಾಣೆಯಿಂ ಪೊಯ್ಕಲ್ಕೆ (ಹಂಡಕು. ೧೯-೦೩) : ದುಷ್ಕೃತ ತಸ್ಕರನ ಪಿಡಿದಿರ್ಪ ಡಾಣೆ[ಪಾಠಾಂ. ದಾಣೆ]ಗಳರವಿಂದಾಕ್ಷಿಯರ್ (ಧರ್ಮಾಮೃ. ೭-೧೫೭); ಬನ್ನಿಯ ತರು ಡಕ್ಕೆಗೆ . . . ಚಿನ್ನಂಗಿಯ ತರು ಡಾಣೆಗೆ (ಕಮುಕ. ೬೩ ಕೃಯೋ.); ಕೊಡಲಿ ಕತ್ತಿ ಈಳಿಗೆ ಕುಡುಗೋಲು ಸುರಿಗೆಯಡ್ಡಾಯುಧ ಕುಠಾರ ಕೊಂತ ಡಾಣೆ ಮೊದಲಾದಾಯುಧಂಗಳ್ (ಹಸಾರ. ೬೨೭-೦೦) ; ಡಾಣೆಯಿಂದ ಕಂಡಕಂಡವರಿಡರೀದಲ್ಲಿಂ ಕಾಲುಗೊಂಡ್ಯೋಡೆ (ತೀರ್ಥ ಕು. ೭-೧೦೦); ನೀವೆಮ್ಮ ಮನೆಯ ಹೊಗದೇಡ ಹೊಕ್ಕೊಡೆ ಹಿಡಿದ ಡಾಣೆಯಿಂ ನಿಮ್ಮೆಲ್ಲರಂ ಬಡಿವೆನು (ಸಮ್ಯಕ್ತ್ವ. ೯-೪೭) ; ಗದೆ ದುಂಡ ಢಾಣೆ ಕಬ್ಬಿನ ಕೋಲು . . . ಜವನ ದಾಡೆಗಳಿಂ (ಅನಂತ. ೨೯-೨೭). **ದಾಣಾ** : (ಗು). ೩. ದಪ್ಪನೆಯ; ಸ್ಥೂಲ. 'ದಾಣಾದಡಿ' ಪರಾ. **ದಾಣೆ$_2$**: ೧. "ಸರ್ವಲಾ. ತೋಮರಃ – ೨ ಮರದ ಸಿಳ್ಳೆ, ದಾಣೆ ಮುಂತಾದ ಆಯುಧಕ್ಕೆ ಹೆಸರು" (ಸಿದ್ಧಾಂತ. ೨೨೮). **ದಾಣೆ$_3$** : ೨. ಕತ್ತಿಯನು ದಾಣೆಯನು ಇಕ್ಕಿಯೆ ಉತ್ತಮಾಶ್ಮವ ಮಾಡ್ವೆನೆಂದರೆ ಆಗುವುದೆ (ಜ್ಞಾಸಿಂ. ೦-೪೫). ೩. 'ದಾಣೆದಡಿ' ಪರಾ. [ ←ಮರಾ. ಢಾಣಾ ]

**ಢಾಣೆ$_2$** 'ದಾಣ$_2$' ನೋ.

**ಢಾಣ** (ನಾ). (?) : ಮುತ್ತಿನ ಢಾನವ ಮೂಗು ನುಂಗಿತ್ತ ಕಂಡೆ ಕಂಗಳು ಹಸಿದು ವಜ್ರವ ನುಂಗಿತ್ತ ಕಂಡೆ (ಶರಕೋ. ೦೦೦-೦೪). [ ? ]

**ಢಾಲ** (ನಾ). = ಡಾಲು$_2$ ೧ : "ಡಾಲು—ಢಾಲ=ಅಡ್ಡಣ" (ಕನ್ನಕೋ. ೦೬). [ ಸಂ. ]

**ಢಾಲು$_1$** 'ಡಾಳ$_1$' ನೋ.

**ಢಾಲು$_2$** 'ಡಾಲು$_2$' ನೋ.

**ಢಾವಣಿ** 'ದಾವಣಿ$_2$' ನೋ.

**ಢಾವಣಿಗಿರಿ** (ನಾ). ಸಾಲಾದ ಬೆಟ್ಟ ; ಪರ್ವತಗಳ ಪಂಕ್ತಿ ; ಪರ್ವತ ಶ್ರೇಣಿ : ಗಿರಿಯ ಡೆಂಕಣಿಜಂತ್ರವನು ತರಹರಿಸುವವರಾಳರಸ ಢಾವಣಿ [ಪಾಠಾಂ. ಧಾರುಣಿ]ಗಿರಿಯ ಢಾಳಿಗೆ ಧಾತುಗೆಟ್ಟುದು ಪಾಂಡುಸುತ ಸೇನೆ (ಕುಮಾ.ಕ. ೨೩-೩೬). [ ಢಾವಣಿ (<ದಾವಣಿ$_2$) + ಗಿರಿ$_1$ ]

**ಢಾವರಿಸು** 'ಡಾವರಿಸು' ನೋ.

**ಢಾಳ$_1$** 'ಡಾಳ$_1$' ನೋ.

**ಢಾಳ$_2$** 'ದವಳ$_1$' ನೋ.

**ಢಾಳ$_3$** 'ದಾಳ$_1$' ನೋ.

**ಢಾಳ$_4$** 'ದಾಳ$_2$' ನೋ.

**ಢಾಳಂಬಡೆ** (ಕ್ರಿ). ಪ್ರಕಾಶವನ್ನು ಪಡೆ ; ಬೆಳಗು ; ಉಜ್ವಲವಾಗು : ಜಲಜಲಿಸಿ ಢಾಳಂಬಡೆದುದಡಪಿಗಿಚ್ಚು (ಸಮ್ಯಕ್ತ್ವ. ೦೦-೨೪). [ ಢಾಳ$_1$ (<ಡಾಳ$_1$) + ಪಡೆ$_1$ ]

**ಢಾಳಕ** 'ಡಾಳಕ' ನೋ.

**ಢಾಳಕತನ** 'ಡಾಳಕತನ' ನೋ.

**ಢಾಳಕಿ** 'ಡಾಳಕಿ' ನೋ.

**ಢಾಳಯಿಸು** 'ಡಾಳಿಸು$_2$' ನೋ.

**ಢಾಳವಿಸು** 'ಡಾಳಯಿಸು$_1$' ನೋ.

**ಢಾಳಿಸು$_1$** 'ಡಾಳಯಿಸು$_1$' ನೋ.

**ಢಾಳಿಸು$_2$** 'ಡಾಳಿಸು$_2$' ನೋ.

**ಢಾಳು** 'ಡಾಳ$_1$' ನೋ.

**ಢಾಳೆ** 'ಡಾಳೆ' ನೋ.

**ಢಾಳೆಗೂಂಟಣಿ** (ನಾ). ವಂಚಕಿಯಾದ ಕುಂಟಣಿ : ಮತ್ತಮಾ ಭೋಗಿನಿ ಗೃಹಮಾಲೆಯೊಳಾಳಾಟಿಸುವ ಢಾಳೆಗೂಂಟಣಿಯರಾಳಾಪಮಂ (ಮುಹಾಸೀ. ೦೪-೮೫ ವ). [ ಢಾಳೆ (<ಡಾಳೆ) + ಕೂಂಟಣಿ (<ಕುಂಟಣಿ) ]

**ಢಾಳೈಸು** 'ಡಾಳಯಿಸು$_1$' ನೋ.

**ಢಿಕ್ಕಿ** 'ಡಿಕ್ಕಿ' ನೋ.

**ಢಿಕ್ಕಿಯಾಡು** (ಕ್ರಿ): ಡಿಕ್ಕಿಹೊಡೆಯುವ ಆಟವನ್ನು ಆಡು; ಡಿಕ್ಕಿ ಹೊಡೆ: ನೂರು ಮದ್ದಾನೆಗಳು ಇರುಳ ಬಾನಿಗೆ ನುಗ್ಗಿ ಢಿಕ್ಕಿಯಾಡಿವೆ (ನಂಮು. ೩೯-೩). [ಢಿಕ್ಕಿ (<ಡಿಕ್ಕಿ) + ಆಡು₁ ]

**ಢಿಕ್ಕಿಹೊಡೆ** 'ಡಿಕ್ಕಿಹೊಡೆ' ನೋ.

**ಢಿಳ್ಳ, ಡಿಲ್ಲ, ಡಿಳ್ಳ, ಡಿಳ್ಳು, ಡೀಲ, ಡೀಲು, ದಿಳ್ಳ** (ನಾ). ೧. ಶಿಥಿಲತೆ; ಸಡಿಲು: ಬಲ್ಲಾಳ್ಗಳ್ ಬೀಟ್ಟುದುಂ ಕೋಂಟೆ ಢಿ[ಪಾಠಾಂ. ಡಿ]ಳ್ಳ ಮಾದೊಡಳ್ಳಿರ್ದಗಳ್ ಕೆಲಬರ್ ಬಾಳಂ ಬಿಟ್ಟು ಬಾಟನಾಸೆಗೆಯ್ಯುಯುಂ (ಶಾಕ್ಯಗಕು. ೬-೧೩೨ ಐ). **ಡಿಲ್ಲ:** ೨. ಸುಲಭವಾಗಿ ತಿಳಿಯಲು ಶಕ್ಯವಿಲ್ಲದುದು; ಕ್ಲಿಷ್ಟವಾದುದು: ಡಿಲ್ಲವಹ ವೇದಾಂತದರ್ಥವ ಸೊಲ್ಲಿಸಲು ಸೂರಿಗಳ ವಾರ್ತೆಯನೆಲ್ಲ ಮನುಜರು ದಾಂಟದಂದದಲಿರ್ದು ದುತ್ತರವು (ನಿಥಾಗ. ೦೧-೩೮-೨೮). **ಡಿಳ್ಳ:** ೧. ಜಲಪಕ್ಷಿಯುಂ ಜಡಿದು ನಾಣ್ಚಿ ಡಿಳ್ಳಮನೈದೆ ನಲ್ಮೆಯಿಂ ವಿಸುಪಥರಾಗ್ರುವಂ ಸವಿದಳಂಗನೆ (ದಶಕು. ೬-೦೩೭). ೩. ದಿಗಿಲು; ಭಯ; ಹೆದರಿಕೆ; ತಳ್ಳಂಕ; ಅಧೈರ್ಯ: "ಡಿಳ್ಳ[ಪಾಠಾಂ. ದಿಳ್ಳ]ಮೆನಲ್ ತಲ್ಲಣಮದು" (ಛಾಕವಿ. ೩೭). ೪. "ಬರಡು; ವ್ಯರ್ಥ" (ಸಿರಿಕೋ. ೨೦೦). ೫. ಅಧೈರ್ಯ ವುಳ್ಳದು; ಕೈಲಾಗದುದು; ಭಯಗೊಂಡುದು: ನೀ ನಗುವವೋಲ್ಲ ಮ್ಮೊಳಗು ಡಿಳ್ಳವೆ ರಪಣವಿದೆಲಾ ಬಹಳ ಭಂಡಾರ (ಕುವ್ಯಾಸ. ೦೪-೩). **ಡಿಳ್ಳು:** ೩. 'ಡಿಳ್ಳುಹೋಗು' ಪರಾ. **ಡೀಲ:** ೧. ಸಡಿಲವಾದ; ಡೀಲಬಿಟ್ಟ (Slack. ಇಂಕನಿ.). **ಡೀಲು:** ೧. "ಡೀಲು – ಸಡಿಲು" (ಹಾವಕೋ. ೬೩). **ದಿಳ್ಳ:** ೩. "ದಿ[ಪಾಠಾಂ. ಡಿ]ಳ್ಳಮೆನಲ್ ತಲ್ಲಣಮದು" (ಛಾಕವಿ. ೩೭).

**ಡಿಳ್ಳಮಾಗು, ಡಿಳ್ಳವಾಗು** = ೧. ದುರ್ಬಲವಾಗು; ಶಕ್ತಿಗುಂದು: ನಡೆ ತಡಮಾಗೆ ನುಣ್ನುಡಿ ತೊದಳ್ದೊಳ್ಗಿ ಝೂಂಟಿಸೆ ಕಂಪನಾಳ್ದು ಕಣ್ನುಡಿ ತನು ಡಿಳ್ಳಮಾಗೆ ವೃದ್ಧಪಾನ ವಿನೋದದಿನಾದ ಸೋಂಕು ಚೆಲ್ವಿಡಿದಿರೆ ಬರ್ಪ ಗೋಷ್ಠಿ (ಸೂಕ್ತಿಸು. ೦೩-೩). ೨. ಅಧೈರ್ಯಗೊಳ್ಳು; ಬೆದರು; ಗಾಬರಿಯಾಗು: ನೋಡು ಲಕ್ಷ್ಮಣ ದುರ್ನಿಮಿತ್ತಂಗಳಂ ಪಥದೊಳು ಡಿಳ್ಳಮಾದಪುದೀಗಳೆನ್ನ ಮನಂ (ಜೈಮಿಥಾ. ೦೯-೩): ಪೂಗೊಳಲೆಂದು ಬಂದ ವಿಟಸಂತತಿಯಳ್ಳಿರ್ದ ಡಿಳ್ಳವಪ್ಪಿನಂ ಪೂಗಣೆಯುರ್ಚೆ ಮೂರ್ಛೆ ಗೊಳಗಾಗಲೊಡಂ(ದಶಕು. ೦-೪೦). ೩. ಅಸಮರ್ಥವಾಗು; ವ್ಯರ್ಥವಾಗು: ಡಿಳ್ಳಮಾದುದೆ ಯೌವನಾಶ್ವ ಭೂಪತಿಯ ಬಲಂ (ಜೈಮಿಥಾ. ೪-೨೦): ಝಲ್ಲೆಂದ ಹೃದಯದ ಜೊಳ್ಳುನಾದವ ಕೇಳಿ ಡಿಳ್ಳವಾಯಿತು ಬಾಳು ನಾನೆಂದೆನೇ (ಷಟ್ಪದಿಗೀ. ೪೦-೯೧೪). ೪. ಸಡಿಲವಾಗು: ಅಮರ್ದ ಕಂಚುಳಿಕೆ ಪೆರ್ಮೊಲೆಯಾಕೆಗೆ ಡಿಳ್ಳವಾಗಲ್ದೊಡವುಗಳಟ್ಟಿಂದುಲಿಯಲ್ (ನಳಚಂ. ೪೭೭). [ <ಪ್ರಾ. ಢಿಲ್ಲ. / ಮರಾ. ಢಿಲ್, ಢಿಲಾ, ಢೀಲ್ ]

**ಢಿಳ್ಳಾಯ** 'ಡಿಳ್ಳಾಯ₁' ನೋ.

**ಢೀಗು, ಡೀಗು** (ನಾ). ಹೊರೆ; ರಾಶಿ; ಸಮೂಹ: ಕೆಳಗೆ ಮೇಲೆ ಸಾಮಾನಿನ ಢೀಗು (ಅನ್ನ. ೧೦೩): ಫೈಲುಗಳ 'ಢೀಗಿ'ನ ಕೆಳಗೆ ಸಿಕ್ಕುಬಿದ್ದ (ಜೀಪಾಠ. ೪೯). **ಡೀಗು:** ಕುಳ್ಳಿನ ಡೀಗ ತಂದು ಅಗುಸಿ ಮುಂದಿನ ಬಯಲೆಲ್ಲ ತುಂಬಿ ಬಿಡತೇವು (ಗ್ರಾಮಾಯ. ೨೨೯). [ ←ಮರಾ. ಢೀಗ್ ]

**ಢುಲಿ** (ನಾ).=ಡುಲಿ: "ಕಮಠೀ, ಢುಲೀ – ೨ ಹೆಣ್ಣು ಆಮೆ ಮೆಸರುಗಳು, ಅಂದರೆ ಸ್ತ್ರೀಕೂರ್ಮ" (ಸಿದ್ಧಾಂತಿ. ೭೩). [ ಸಂ. ಢಲೀ ]

**ಢೆಂಕಣ** 'ಡೆಂಕಣಿ' ನೋ.

**ಢೆಂಕಣಿ** 'ಡೆಂಕಣಿ' ನೋ.

**ಢೆಂಕೆ** 'ಡಕ್ಕೆ' ನೋ.

**ಢೆಂಢೆಣಿಸು** 'ಟೆಂಟಣಿಸು' ನೋ.

**ಢೇಂಕಣಿ** 'ಡೆಂಕಣಿ' ನೋ.

**ಢೇಂಕಣೆ** 'ಡೆಂಕಣಿ' ನೋ.

**ಢೊಂಕಣಿ** 'ಡೊಂಕಣಿ' ನೋ.

**ಢೊಕ್ಕರ** 'ಡೊಕ್ಕರ₂' ನೋ.

**ಢೊಣೆ** 'ದೊಣೆ₁' ನೋ.

**ಢೋಂಗಿ, ಡೋಂಗಿ, ಡೋಂಗು, ಢೋಂಗು** (ನಾ). ಮೋಸ; ಸುಳ್ಳು; ವಂಚನೆ: ಅನೇಕರ ಹಾಗೆ "ಢೋಂಗೀ ಬ್ರಹ್ಮಚಾರಿ" ಯಾಗಿರಲಿಲ್ಲ (ನಾಪೋಲೀ. ೨೩೭); ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ. ಇದೆಲ್ಲವೂ ಢೋಂಗಿ ಢೋಂಗಿ ಡೋಕಾರಿ (ಹನ್ನೊಂದ. ೬೩). **ಡೋಂಗಿ:** ನಮ್ಮ ಹತ್ತಿರ ನಿಮ್ಮ ಡೋಂಗಿ ತಗೀತೀರಾ (ಜಂಗೂರಿ. ೯). **ಡೋಂಗು:** ಪಕ್ಕಾಸುಳ್ಳು, ಢೋಂಗು, ವಿಪರೀತ ಸುಳ್ಳು (Rouser. ಇಂಕನಿ.). **ಢೋಂಗು:** ಈ ಢೋಂಗು ನಮ್ಮ ಮುಂದೆ ನಡೆಯುವಂತಿಲ್ಲ (ಹುಡ್ಯಾಟ. ೪೦); ನಾನು ನಿಮ್ಮಂತೆ ಈ ಢೋಂಗಿಗೆ ಮೋಸ ಹೋಗುವವಳಲ್ಲ (ಸ್ವಸ್ತಿಜಿ. ೩೨೯); ಆದರ ಬರೇ ಢೋಂಗ ಮಾಡತೀದಿ ಆತು (ಮಿಂಚುಹು. ೮೩): ನಿನ್ನ ಮನಸಿನಾಗೂ ಎಲ್ಲಾ ಅದೇ ಮದವೀ ಮಾಡಿಕೊಬೇಕು ಅಂತ. ಆದರ ಬರೇ ಢೋಂಗ ಮಾಡತೀದಿ (ತಿರುಗು. ೩೯); ತೀರ ಮರಥಾಪ್ರಂಗ ಢೋಂಗ ಮಾಡತೀ (ದೀಹಹ. II, ೦೭೦).

**ಡೋಂಗಿ ಹೊಡೆ** = ಸುಳ್ಳುಹೇಳು: ನನ್ನ ಮುಂದೆ ಡೋಂಗಿ ಹೊಡೆಯ ಬೇಡ (ರೂಢಿ). **ಢೋಂಗಿ ಬಿಡು, ಡೋಂಗಿ ಬಿಡು** = ಡೋಂಗಿಹೊಡೆ: ಬಹಳ ದೊಡ್ಡ ವಿದ್ವಾಂಸರು ಎಂದು ಯಜಮಾನರು ಒಂದು ಢೋಂಗಿ ಬಿಟ್ಟರು (ನವನೀ. ೬೦); ಹುಡುಗರು ಡೋಂಗಿ ಬಿಡುತ್ತಿದ್ದಾರೆಯೋ ಏನೋ ನೋಡಬೇಕೆಂದು ದೇವಯ್ಯ ಅವರೆಲ್ಲರ ಕೈಗಳನ್ನೂ ಮೂಸಿ ಮೂಸಿ ಹುಬ್ಬೇರಿಸಿ ಕಣ್ಣರಳಿಸಿ ಬೆರಗಾದನು (ಮಳಮ. ೫೦೬).
[ ←ಹಿಂ. ಮರಾ. ಢೋಂಗೀ, ಢೋಂಗ್ = ಕಪಟಿ, ಮೋಸಗಾರ ]

**ಢೋಂಗು** 'ಢೋಂಗಿ' ನೋ.

**ಢೋಕಾ** 'ಧೋಕಾ' ನೋ.

**ಢೋರ** 'ಡೋಹರ' ನೋ.

**ಢೋಲಕೆ** (ನಾ).=ಡೋಲಕ: ತಾಳ, ಢೋಲಕಗಳ ಗಡಚಿಕ್ಕುವ ಅವಾಜನಲ್ಲಿ ಮಾಸ್ತರರ ದನಿ ಅವರಿಗೆ ಕೇಳಿಸಲಿಲ್ಲ (ಮೂರುದಾ. ೭೩).
[ ಸಂ. ಢೋಲಕ ]

**ಢೋಲು** 'ಡೋಲು' ನೋ.

**ಢೋಳು** 'ಡೋಲು' ನೋ.

*

**ಣ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೈದನೆಯ ಅಕ್ಷರ. ೨. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ : "ಜಣಮಶಮದ್ಯೈದು" (ಮಂಗರಾ. ೦೦೪-೦೦).

**ಣಕಾರ** (ನಾ). ಣ ಎಂಬ ಅಕ್ಷರ : ಭಿನ್ನಪದದೊಳಂ ಸಮಾಸ ಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮದ. ೦೫೮ ವೃತ್ತಿ). [ ಸಂ. ]

**ಣತ್ವ** (ನಾ). = ಣಕಾರ : ಸಂಧಿಸಿದ ನಕಾರಂ ಣತ್ವಂ ಪ್ರಸಿದ್ಧಂ (ಶಮದ. ೦೫೮). [ ಸಂ. ]

**ಣವೋ** (ನಾ). ನಮಸ್ಕಾರ; ವಂದನೆ : ಣವೋ ಸಿದ್ಧಾಣಂ ಣಮೋ ಅರಿಹಂತಾಣಂ (ಜೀವಂ. ೫೯-೫).

**ಣಮೋಣಮೊ** (ದ್ವಿರುಕ್ತಿ) : ಣಮ್ಮಣ ಣಮ್ಮಣ ಶಬ್ದದಿಂ ಕೂಡಿದ ವೀರಣವು ನುಡಿಸುತ ಸಭೆಯೊಳಗೆ ಣಮೋಣವೊಯೆಂಬ ಪ್ರಾಕೃತರ ನೀಕ್ಷಿಸುವ ಪ್ರಣಮರೂಪ ನಿನಗೆಬಗುವೆನು (ಶತಸಾಂ. ೬೦-೫೭). [ <ಪ್ರಾ. ಣವೋ ]

**ಣವೋಕಾರ** (ನಾ). ನಮಸ್ಕಾರ : ಕೇಳಿದಿರೊ ದಿವ್ಯಧ್ವನಿ ಜೀವದ ಣಮೋಕಾರ ಕನ್ನಡದ ಟಂಕಾರ : ಧರ್ಮಸಾರ (ಜೀವಲ. ೫೯-೮). [ <ಪ್ರಾ. ಣವೋಕ್ಕಾರ ]

**ಣಾಂತ** (ನಾ). ಣಕಾರವು ಕೊನೆಯಲ್ಲಿರುವ ಶಬ್ದ : ನೆಗಟ್ಟಿರ್ದ ರೇಫಟಬನಾಂತಗಾಂತಸಾಂತೋತ್ವದಿದಿರ ವತ್ವಂ ಪತ್ವಂ ಪುಗುಗುಂ . . . ನಾಂತ ಣಾಂತಂ ಬತ್ವಂ (ಶಮದ. ೨೬೨). [ ಣ + ಅಂತ$_2$ ]

# ತ

**ತ$_1$** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತಾರನೆಯ ವರ್ಣ; ತಕಾರ. ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ಚತಷ ಮಾಜು" (ಮಂಗರಾ. ೦೦೪-೧೦). ೩. [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಒಂದು ಲಘುವುಳ್ಳ ಗಣ; ತಗಣ: (− − ◡) ; ಮಯರಸತಜಭನೆಲಗವಿಸಿಚಯವೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೫೬).

**-ತ$_2$** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ತಕಾರಕ್ಕೆ- ಅಜಿತಂ, ಕಡಿತಂ, ಉಜಿತಂ (ಶಮದ. ೨೦೦ ಪ್ರಯೋ).

**ತಉಡಿಮಾನ್ಯ** (ನಾ). ಒಂದು ಬಗೆಯ ಮಾನ್ಯ : ವೀರ ಪಞ್ಚಾಳ ವಿತ್ತಿಯೊಳ ಆರು ಸತ್ತಡು ತಉಡಿಮಾನ್ಯ ಆ ನಾ × × ಳುವ ದೇವರ ಮಕ್ಕಳಿಗೆ ಸಲುವಲುದು ಮಕ್ಕಳಿಲ್ಲದಿದ್ದಡೆ ಅಣ್ಣಾ ತಮ್ಮಂಗೆ (ಎಕ. IX. ಕಾನಕಾ. ೮೦-೦೦ ; 1306). [ <ತವುಡಿ$_1$ + ಮಾನ್ಯ ]

**ತಂ$_1$** 'ತಣ್$_2$' ನೋ.

**ತಂ$_2$** (ನಾ). [ಸಂಗೀತ] ಒಂದು ಗೀತಾಕ್ಷರ : ತಂ ಹ ಯ ಎ ಆ ದ ತಿನಂ ನಿತ ನಿತ ಗೀತಾಕ್ಷರೋಪಲಕ್ಷಿತಮುಂ ಗಮಕರಮಣೀಯಮುಮಂ ನಿಖಿಳಗೀತ ವಸ್ತ್ವಾದಿರೂಪಮುಮಪ್ಪಾಲಾಪಿಯೊಳಂ (ಚಂದ್ರಪ್ರ. ೦೫-೬೨ ವ). [?]

**ತಂಗಡಲೆ** (ನಾ). ಹಸಿ ಕಡಲೆ; ನೆನೆದ ಕಡಲೆ : ತಂಗಡಲೆಯ ಮೆಯ್ಸಿ ನೀರನೂಡಿಸುತೆ ವಿಹಂಗ ಸಂತೋಷದಿ ತಮ್ಮ ಪುಂಗಟ್ಟದ ಮುದ್ದು ಮಜಿಗಳ್ಗೆ ಗುಟುಕೀಯೆ (ಮೋಹತ. ೪-೦೯). [ತಂ$_1$ (<ತಣ್$_2$)+ಕಡಲೆ]

**ತಂಗಡಿ, ತಗಟೆ** (ನಾ). ಗೊಂಚಲು ಗೊಂಚಲಾಗಿ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಕುರುಚಲು ಗಿಡ ; ಆವರಿಕೆ ಗಿಡ ; ಹೊನ್ನಾವರಿಕೆ : ಪಳಸಂತತಿಯಿಂದೊಲೆದುಯ್ಯಲಾಡಿ ತೂಗಾಡುವ ತೆಂಗು ತಂಗಡಿಗಳಂ ಬೆಳದಿದ್ದ ಸುಗಂಧ ಸಾಳಿ ನಾಡಾಡಿಯರೂಡಿಯೂರ್ಗ್ಗಳಳವಲ್ಲದು ಮೊಪ್ಪುವ ಹೊನ್ನವಳ್ಳಿ ತಾಂ (ಎಕ. XII. ತಿಪಟೂ. ೧೨೮-೫೮ ; 1202) ; ತಂಗಡಿಹೂವ ಸುಟ್ಟು ಕರಕು ಮಾಡಿ ಹುಣ್ಣಿಗೆ ಮೇಲೆ ಹಾಕುವುದು (ವಿಶ್ವವಿ. ೦೬೫) : ಗದ್ದೆ ಅಡಕೆತೋಟ ತೆಂಗು ತಂಗಡಿಯ ಭೂಮಿ ಪುಷ್ಪದ ತೋಟದ ಭೂಮಿ . . . ನಾಲು ಮಹತ್ತಿನ ಮಟಕ್ಕೆ ಸಿವಾರ್ಪ್ಪಿತವಾಗಿ ಕ್ರೊಟ್ಟೆಉ (ಎಕ. XIV, ಎಳಂದೂ. ೬೩-೩ ; ?). **ತಗಟೆ** : ಪಲ್ಲವ ಸತ್ತಿಗೆಯವನಲ್ಲ ತಗಟೆ[ಪಾಠಾಂ. ಟಿ]ಯ ಬಲ್ಲೆಯದವನಲ್ಲ . . . ನೃಪನು (ಮದೇಪ್ರ. ೨೦-೫೯); ಒಂದು ತಗಟೇಗಿಡವ ಊರಲು ಒಂದು ಜತೆ ಘನ ಅಮೃತ ಹಸ್ತವ ಕಳುಹೊ ದೇವಾ (ಅಕರೋ. ೨). [ ದೇ. ತೆಲು. ತಂಗೆಡು, ತಂಗೇಡು ]

**ತಂಗಣೆ** (ನಾ). ತಂಗುವಿಕೆ; ಉಳಿದುಕೊಳ್ಳುವುದು: ಮೊದಲ ತಂಗಣೆಯ ಅವಧಿಯಲ್ಲಿ ನೆಕ್ಲದೋವ್ ಮತ್ತು ಕಾತ್ಕೂಷಾರ ಬಾಂಧವ್ಯ ಹೀಗೆಯೇ ಬೆಳೆಯಿತು (ಪುನರು. ೫೮) ; ಪೀಟರ್ಸ್‌ಬರ್ಗ್ ನಗರದಲ್ಲಿ ಅವನ ತಂಗಣೆಗೆ ಆ ದಿನ ಕೊನೆಯ ಗಡುವಾಗಿತ್ತು(ಪುನರು. ೩೮೪). [ ತಂಗು$_1$ + – ಅಣೆ$_4$ ]

**ತಂಗದಿರ್** 'ತಣ್ಗದಿರ್' ನೋ.

**ತಂಗದಿರ** 'ತಣ್ಗದಿರ' ನೋ.

**ತಂಗದಿರದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ; ಶಿವ: ಗೋತ್ರಸುತೆ ದಯಾಪಾಂಗದಿಂ ನೋಡಿ ತಕ್ಕೈಸುತ್ತ ತಂಗದಿರದಲೆಯನಿಂಗಿತವನಱಿದು (ಪ್ರಾಭರಾ. ೬-೬೨). [ ತಂಗದಿರ (<ತಣ್ಗದಿರ) + ತಲೆ$_1$ + – ಅ$_7$ ]

**ತಂಗದಿರ್ಗಲ್** 'ತಣ್ಗದಿರ್ಗಲ್' ನೋ.

**ತಂಗದಿರ್ವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಂಗದಿರ್ವಟ್ಟ** (ನಾ). ತಂಪಾದ ಕಿರಣಗಳ ಮಂಡಲವುಳ್ಳವನು; ಚಂದ್ರ: ಅದಟಿಂದಡಸಿ ಪಿಡಿದು ತಂಗದಿರ್ವಟ್ಟನ ಲೇಖೆಗರ್ಚಿ ಧರೆಗಿಱಿವ ವಿಧುಂತುದನೆನೆ ಘೀಂಟಿಡುತುಂ ಬಿರ್ದಂದು ನಿಡುಗೋಡೂಱಿ ಮತ್ತ ಕುಂಜರನಾಗಳ್ (ಉದ್ಭಟ. ೨-೫೮) : ತಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡರಸಿ ಕರುವಿಟ್ಟು ಪೊಂಗಿ ತೂಳ್ದ ಬೆಳ್ದಿಳಗನುಗುಟ್ಟಳೆ ಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮಂ (ಉದ್ಭಟ. ೯-೩೦ ವ) [ ತಂಗದಿರ್ (<ತಣ್ಗದಿರ್) + ಬಟ್ಟು$_1$ (<ಬಟ್ಟ$_1$) + – ಅ$_7$ ]

**ತಂಗರಗ** 'ತಣ್ಗರಗ' ನೋ.

**ತಂಗಲ್** 'ತಣ್ಗಲ್' ನೋ.

**ತಂಗಲು** (ನಾ). ಹಸಿ ; ಒದ್ದೆಯಾಗಿರುವಿಕೆ ; ತೇವ.

**ತಂಗಲ ಭೂಮಿ**=ನೀರುಂಡ ಭೂಮಿ ; ತೇವವುಳ್ಳ ನೆಲ : ಅಂಡಜವೆಂದು ತತ್ತಿಯಲ್ಲಿ ಹುಟ್ಟುವ ಪ್ರಾಣಿಗಳು . . . ಉದ್ಭಿಜವೆಂದು ತಂಗಲ ಭೂಮಿಯಲ್ಲಿ ಹುಟ್ಟುವ ಪ್ರಾಣಿಗಳು ಜರಾಯುಜವೆಂದು ಮಾಸಿನಲ್ಲಿ ಹುಟ್ಟುವ ಪ್ರಾಣಿಗಳು ಈ ನಾಲ್ಕು ಪ್ರಕಾರದಲ್ಲಿ ಹುಟ್ಟುವ ಎಂಭತ್ತಾನಾಲ್ಕು ಲಕ್ಷ ಜೀವರಾಶಿಗಳು (ಗಣಭಾ. ೪೮-೧).

[ ತಂ$_1$ (< ತಣ್$_2$) + – ಕಲು$_2$ (< – ಕಲ್$_4$) ]

**ತಂಗಲ್ಲು** 'ತಣ್ಗಲ್' ನೋ.

**ತಂಗಳನ್ನ** (ನಾ). ೧. ಆರಿದ ಅನ್ನ ; ತಣ್ಣಗಾದ ಅನ್ನ. ೨. ಹಿಂದಿನ ದಿವಸ ಮಾಡಿದ ಅನ್ನ : ರಾತ್ರಿ ಊಟಮಾಡಿ ಉಳಿದ ತಂಗಳನ್ನವನ್ನು ಬೆಳಗ್ಗೆ ತಿಂದು ಎಲ್ಲರೂ ಹೊರಟರು (ಕಳ್ಳರೂ. ೬೦).

[ ತಂಗಳು (< ತಣ್ಗೂಟ್) + ಅನ್ನ$_3$ ]

**ತಂಗಳು** 'ತಣ್ಗೂಟ್' ನೋ.

**ತಂಗಳುತತ್ತ್ವ** (ನಾ). (ಆಲಂ)ಕೇಳಿ ಕೇಳಿ ಹಳೆಯದಾದ ನಿಷ್ಪ್ರಯೋಜಕ ತತ್ತ್ವ; ಗೊಡ್ಡು ತತ್ತ್ವ : ನಾವು ತಿಳಿಯುವುದೊಂದು ದೈವ ಬಗೆಯುವುದೊಂದು ಎಂದು ಅವಳಿಗೆ ಮುದುಕಿ ತಂಗಳುತತ್ತ್ವವನ್ನು ಉಪದೇಶಿಸಿದ್ದಳು (ಹಳ್ಳಿಹಾ. ೯೯). [ ತಂಗಳು (< ತಣ್ಗೂಟ್) + ತತ್ತ್ವ$_1$ ]

**ತಂಗಳುತತ್ತ್ವಜ್ಞಾನ** (ನಾ).=ತಂಗಳುತತ್ತ್ವ : ಊರವರು 'ಒಳ್ಳೆಯವರಿಗೆ ದೇವರು ಕಷ್ಟ ಕೊಡುವುದು ಹೆಚ್ಚು' ಎಂದು ತಂಗಳುತತ್ತ್ವಜ್ಞಾನ ಹೇಳುವಂತಾಯಿತು (ಕಂಬಹು. ೦೦೯). [ತಂಗಳು (< ತಣ್ಗೂಟ್)+ತತ್ತ್ವಜ್ಞಾನ]

**ತಂಗಳುಹಿಟ್ಟು** (ನಾ). ಹಿಂದಿನ ದಿವಸ ಮಾಡಿದ ರಾಗಿಮುದ್ದೆ; ಆರಿದ ಹಿಟ್ಟು : ತಂಗಿ ಬಡವಳಾದರೆ ತಂಗಳುಹಿಟ್ಟಿಗೂ ಗತಿಯಿಲ್ಲವೇ ? (ಗಾದೆ).

[ ತಂಗಳು (< ತಣ್ಗೂಟ್) + ಹಿಟ್ಟು$_1$ (< ಪಿಟ್ಟು) ]

**ತಂಗಳೂಟ** (ನಾ). ಹಿಂದಿನ ದಿವಸ ಮಿಕ್ಕ ಅನ್ನದ ಊಟ; ತಂಗಳನ್ನದ ಊಟ : ಸೂರ್ಯನು ನಾಲ್ಕಾಳುದ್ದ ಮೇಲಕ್ಕೇರಿದನು. ತಂಗಳೂಟದ ಹೊತ್ತಾಯಿತು (ಜಂಗಾಳ್ಕ. ೨೪); ದ್ಯಾವವ್ವಂದು ಇನ್ನೂ ತಂಗಳೂಟ ಆಗಿಲ್ಲವ ? (ಹೊಸಕ್ಕ. ೪೪). [ ತಂಗಳು (< ತಣ್ಗೂಟ್) + ಊಟ ]

**ತಂಗಟ್** 'ತಣ್ಗೂಟ್' ನೋ.

**ತಂಗಾನ** (ನಾ). ತಂಪಾದ ಕಾಡು : ಅಂದಿನ ಹೂಗಳಿಲ್ಲ ನಲಿವಕ್ಕಿಗಳಿಲ್ಲ, ಕೊಳಂಗಳಿಲ್ಲ ತಂಗಾನಗಳಿಲ್ಲ (೧೪ವಿಂ. ೦೦೮-೧).

[ ತಂ$_1$ (< ತಣ್$_2$) + ಕಾನ$_1$ (< ಕಾನ್) ]

**ತಂಗಾರ** (ನಾ). ಹಿತಕರವಾದ ಕಾರ : ಮೀಳೆಯದೆಲೆ ಗಿಂಡಿ ತಂಗಾರದಡಕಿಲೆ [ಪಾಠಾಂ. ಮಡುಪನು ಕೊಡುತಿಹ ಕೆಲ]ಯೂಳಿಗ ಪದ್ಮಿನಿಯರಿಗೆ ಕಾಳಂಜ ಕೈದುವ ಹಸ್ತಿನಿಯರು ಪಿಡಿದೋಲೈಸಲೆಸೆದನಾ ಮದನ (ಭರತ. ೪೬-೬೧); 'ತಣ್ಗಾರು' ಪರಾ. [ ತಂ$_1$ (< ತಣ್$_2$) + ಕಾರ$_2$ ]

**ತಂಗಾಲ** (ನಾ). ತಂಪಿನ ಕಾಲ ; ಚಳಿಗಾಲ ; ಮಾಗಿಯ ಕಾಲ : ಮಾಟ ಕೂಟವೆಂಬ ಹೊಲದಲ್ಲಿ ಪಾಪಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ಮೋಳಿಮಾ. ೧೦೪-೪೦೬). [ ತಂ$_1$ (< ತಣ್$_2$) + ಕಾಲ ]

**ತಂಗಾಳಿ** 'ತಣ್ಗಾಳಿ' ನೋ.

**ತಂಗಿ$_1$** 'ತಂಗೆ' ನೋ.

**ತಂಗಿ$_2$** 'ತಗ್ಗಿ' ನೋ.

**ತಂಗಿಲ್ಪಾಸು** (ನಾ). ಉಪಯೋಗಿಸಿದ ಹಾಸುಗೆ ; ಹಾದರದ ಶಯ್ಯೆ : ನೋಟದೊಳೊಬ್ಬನ ನೆಟಿ ಚೀಟಿಯಿಂದೊಬ್ಬನ ಬರಿಸಿ ನೀಟನ ಮನ ತಂಗಿಲ್ಪಾಸೊಳು ವಂಚನೆ ಕೂಟದ ಹೆಂಗಳೊಪ್ಪಿದರು (ಕಂಠವಿ. ೬-೦೨೮).

[ ? + ಪಾಸು$_2$ ]

**ತಂಗಿಸು** (ಕ್ರಿ). ತಂಗುವಂತೆಮಾಡು ; ವಿಶ್ರಮಿಸುವಂತೆ ಮಾಡು ; ನೆಲಸುವಂತೆ ಮಾಡು ; ನಿಲ್ಲಿಸು : ಬೆಂಗದಿರ ರಕ್ತಿಯನು ತಂಗದಿರ ಸಕ್ತಿಯನು ತಂಗಿಸಿತೊ ಮಳೆ ಮಂಜಿನೊಲವ ಮಧುರಾವ್ಹಾದೊಳು (ಸಾಂದಸ. ೩೩); ತಂಗಿಯ ಮನೆಗೆ ಹೋಗಿ, ತಂಗದೆ ಹೋಗುತಿದ್ದಾನೆ. ಆದುದರಿಂದ ತಂಗಿಸಿಕೊಡು (ಹಳ್ಳಿಪಾ. ೩೩) : ಎರಡು ದೊಡ್ಡ ನಿಲುವುಗನ್ನಡಿಗಳನ್ನು ಅಲ್ಲಿ ಗೋಡೆಗೆ ತಂಗಿಸಲಾಗಿತ್ತು (ಹೇಮಂತ. ೪೦೬).

[ ತಂಗು$_1$ + – ಇಸು$_3$ ]

**ತಂಗು$_1$** (ಕ್ರಿ). ಇಳಿದುಕೊಳ್ಳು ; ಉಳಿ ; ಇರು ; ನಿಲ್ಲು ; ವಸತಿ ಮಾಡು: ಬಿಡದಿಯ ಮನೆಯಲ್ಲಿ ಬೀಗರು ತಂಗಲು ಏರ್ಪಾಡುಗಳಾಗಿದ್ದುವು (ಭೂತಾತ. ೬೪) : ಸಂಜೆಗೆಂಪಿನ ಹೂವು, ಕಂಗಳು ತಂಗುವ ಸೊಗಸಿನ ರೇವು (ಮೂಂದಳೆ. ೦೨-೫) : ಒಳ್ಳೆಯ ಹವೆಗಾಗಿ ಕಾಯುತ್ತಾ ಇಲ್ಲಿ ಆರು ತಿಂಗಳು ತಂಗಬೇಕಾಯಿತು (ಪ್ರವಾಸ. II. ೧೯೧).

[ ದೇ.೫ ತಮಿ. ತಙ್ಕು ; ಮಲ. ತಙ್ಙು ; ತೆಲು. ತಕ್ಕು ; ಕೋಲಾ. ನಾಯ್ಕಿ. ತಕ್ ]

**ತಂಗು$_2$** (ನಾ). ೧. ಉಳಿಯುವುದು ; ಬಿಡಾರ ಮಾಡುವುದು ; ವಸತಿ ; ಬಿಡಾರ: "ಅಧಿವಾಸಃ = ತಂಗು" (ಕಾಕಕ್ಕ. ೦೬೧). "ವಸ್ತಿ = ತಂಗು" (ಕಾಕಕ್ಕ. ೧೬೧). ೨. ಆಧಾರ ; ಆಶ್ರಯ. 'ತಂಗೊಡೆ' ಪರಾ.

[ < ತಂಗು$_1$ ]

**ತಂಗು$_3$, ಟಂಗು** (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸುವುದಕ್ಕಾಗಿ ಅವುಗಳ ಒಡಲಿಗೆ ಬಿಗಿದಿರುವ ಚರ್ಮದ ಪಟ್ಟಿ.–ಸುತ್ತುಪಟ್ಟಿ : ಹೊನ್ನ ಹಲ್ಲಣ . . . ಉನ್ನಂತ ರತ್ನ ಬಂಧಗಳ ತಂಗಿನವಟ್ಟೆ ಚಿನ್ನ ಪಂಜಿನ ಕಂಠಮಾಮಾ ಇಂದ್ರನೀಲದ ಹೇಮದ ತರಕಸ ಸಿಂಗಾಡಿ (ದೇವಾಂಶು. ೩-೧೮೮) ; ಕುದುರೆ ಮಾತಂತು ಆಯಿತು. ಇದರ ಕೋಗೀರು, ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ (ಕಥಾಮಂ. IV, ೯೫) ; ಬೇಟೆಗೆ ಹೋಗಿ . . . ತಂಗನ್ನೂ ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಅಗಾಡಿ ಪಿಚಾಡಿ ಹಗ್ಗಗಳನ್ನೂ ತೆಗೆದುಕೊಂಡು ಬಂದರು (ನಗೆಗ. ೫೦) : ಕುದುರೆಯು ಕಟ್ಟಿದುದೂ, ಅದರ ತಂಗು ಥಡಿಗಳು ಬಳಿಯಲ್ಲಿ ಬಿದ್ದಿರುವದೂ ಗೊತ್ತಾಯಿತು (ವಿಂಧ್ಯಾಲ. ೨). ೨. ಕುದುರೆಯನ್ನು ಹತ್ತುವುದಕ್ಕಾಗಿ ಅದರ ಮಗ್ಗುಲಲ್ಲಿ ನೇತು ಬಿಟ್ಟಿರುವ ಬಳೆ ; ರಿಕಾಪು ; ಅಂಕವಣೆ. **ಟಂಗು** : (ಕ).

**ಟಂಗು ಹರಿ** = ೧. ಕುದುರೆ ಮೊದಲಾದುವುಗಳ ನಡುಕಟ್ಟು ಕಿತ್ತು ಹೋಗು: ಟಂಗು ಹರಿಯಿತು, ಕಾಲು (ಕೋಲು) ಮುರಿಯಿತು(ಗಾದೆ). ೨. (ಆಲಂ) ಬಡತನವುಂಟಾಗು; ದಾರಿದ್ರ್ಯವನ್ನು ಹೊಂದು: (ಕ). **ತಂಗು ತಡಂಗು**="ಏರುವ ಕುದುರೆಗೆ ಇರಬೇಕಾದ ಪರಿಕರ; ಸಾಮಾನ್ಯವಾಗಿ ಎಲ್ಲ ಪರಿಕರ" (ನಮ್ಮನು. ೦೨೦).

[ ← ಪಾರ. ಹಿಂ. ಮರಾ. ತಂಗ್ ]

**ತಂಗುದಾಣ** (ನಾ). ತಂಗುವ ಸ್ಥಳ; ಬಿಡಾರ: ಆಗಾಗ ತನ್ನ ರಾಜಧಾನಿಗೆ ಹೋಗಿ ಬರುತ್ತಿದ್ದರೂ ಹೆಚ್ಚಾಗಿ ಆತನ ತಂಗುದಾಣವೆಂದರೆ ಮಾನ್ಯಖೇಟವೇ ಆಗಿತ್ತು (ವೀರಬಂ. ೪) : ರಾಜ್ಯಭಾರದ ಈ ಪರಿವಾರಕ್ಕೆ ತಂಗುದಾಣಗಳಲ್ಲಿ ತಕ್ಕ ವ್ಯವಸ್ಥೆಗಳನ್ನು ಮಾಡಲು . . . ಇಬ್ಬರು ವೇಗಾಯಿಲರು ಅಂದು ದೋರಸಮುದ್ರವನ್ನು ಬಿಟ್ಟರು (ಸವತಿ.೫೦).

[ ತಂಗು$_1$ + ತಾಣ ]

**ತಂಗುದೊಡ್ಡಿ** (ನಾ). "ವ್ಯಾಪಾರಕ್ಕಾಗಿ ಹೊಡೆದುಕೊಂಡು ಹೋಗುವ ದನಗಳು ತಂಗಲು ದಾರಿಯಲ್ಲಿ ಮಾಡಿರುವ ಕೊಟ್ಟಿಗೆ, ಆವರಣ ತಂಗು ದೊಡ್ಡಿ, ಕೊಟ್ಟಿಗೆ" (L.s.r. ೫೦೪೨).

[ ತಂಗು$_1$ + ದೊಡ್ಡಿ$_1$ (< ತೊಟ್ಟಿ$_1$) ]

**ತಂಗುಪಟ್ಟಿ** (ನಾ). = ತಂಗು₃ ೧ : ಬೆಳ್ಳಿಬಸವನ ಭರಣದ ಲೆಖ್ಖಾ . . . ೧ ಗಂಗದೊಗಲಿಗೆ ಬೆಲು ೧ ತಂಗುಪಟ್ಟಿ ೧ ಚತ್ರಿಕಲಶ (ಎಕ. XIV, ನಂಜನ. ೨೮೯-೨೯ನೇ ಕಲಂ : 1847) : "ಕುದುರೆ ತನ್ನ ಹಿಂಗಾಲು ,ಳ ಮೇಲೆ ನಿಲ್ಲುವುದು, ಮೊ. ತುಂಟತನವನ್ನು ಮಾಡದಂತೆ ತಡೆಯುವುದಕ್ಕಾಗಿ ಒಂದು ತುದಿಯನ್ನು ಅದರ ಕಡಿವಾಣಕ್ಕೂ ಮತ್ತೊಂದು ತುದಿಯನ್ನು ಅದರ ಸೂಂಟಪಟ್ಟಿಗೂ ತಳದಲ್ಲಿ ಸೇರಿಸಿ ಬಂಧಿಸಿರುವ ತೊಗಲಪಟ್ಟಿ (ಗಳು) ; ತಂಗುಪಟ್ಟಿ" (Martingale. ಇಂಕನ್ನ.). [ ತಂಗು₃ + ಪಟ್ಟಿ₂ ]

**ತಂಗುಬೆಳಕು** (ನಾ). ಸೂರ್ಯಾಸ್ತವಾದ ಮೇಲೂ ಸ್ವಲ್ಪಹೊತ್ತು ನಿಂತಿರುವ ಬೆಳಕು : ಬೇಸಗೆಯ ಸಂಧ್ಯಾಕಾಲದ ತಂಗುಬೆಳಕು ಕೂಡ ಅಳಿದುಹೋಗಿ ಕತ್ತಲೆ ಕವಿದಿತ್ತು (ನಂಟರು. ೯೩).
[ ತಂಗು₁ + ಬೆಳಕು₂ (<ಬೆಳಗು₂) ]

**ತಂಗುಮನೆ** (ನಾ). ೧. ಬಿಡದಿ ಮನೆ: (+). ೨. ಪ್ರಯಾಣಿಕರು ತಾತ್ಕಾಲಿಕವಾಗಿ ತಂಗುವುದಕ್ಕಾಗಿ ನಿರ್ಮಿಸಿದ ಮನೆ,-ವಿಶ್ರಾಂತಿಗೃಹ ; ಪ್ರವಾಸಿ ಮಂದಿರ : ಒಂದು ಸಂಜೆ ಆಫೀಸು ಮುಗಿಸಿ ಯಶೋದ ವಿ. ಟಿ. ಯ ತಂಗುಮನೆಗೆ ಬಂದಿದ್ದಳು(ಷಾತ್ಕಲ್ಯ. ೨೩೮). [ತಂಗು₁+ಮನೆ]

**ತಂಗುಳು** 'ತಣ್ಗೂಳ್' ನೋ.

**ತಂಗುಟ್** 'ತಣ್ಗೂಳ್' ನೋ.

**ತಂಗುಟ್ದಿರಿಕ** (ನಾ). ತಂಗುಳನ್ನವನ್ನು ತಿರಿದು ಉಣ್ಣುವವನು ; ತಿರುಕ; ಭಿಕ್ಷುಕ : ತಮ್ಮಯ್ಯನಪ್ಪ ತಂಗುಟ್ದಿರಿಕನ ಮಾತಂ ಕೇಳ್ದು (ಧರ್ಮಾಮೃ. ೮-೦೭೬). [ ತಂಗುಟ್ (<ತಣ್ಗೂಳ್) + ತಿರಿಕ₁ ]

**ತಂಗೂಳು** 'ತಣ್ಗೂಳ್' ನೋ.

**ತಂಗೂಟ್** 'ತಣ್ಗೂಳ್' ನೋ.

**ತಂಗೆ, ತಂಗಿ₁** (ನಾ). ೧. ಕಿರಿಯ ಸಹೋದರಿ; ಒಡಹುಟ್ಟಿದ ಕಿರಿಯಳು: ಇದನಟುವಾತ ಕಿಱಿಯುಂ ಕೋಡಿಯುಮನಟುದು ಪಸುವುಮಾರ್ವ್ವರು × × × [ಕೊನ್ಡೋನವ]ನ್ತಮ್ಮಬ್ಬೆಯನ್ತಂಗೆಯುಮು × × × ಮಾಡಿ ಕೊಣ್ಡೋ[೦] (ಶಾಇಆ. XI-1, ೭-೨೮ : 837) ; ಭಟಾರರ ತಂಗೆಯಪ್ಪ ವೀರಶ್ರೀಯುಂ . . . ಪ್ರಲಾಪಿಸಿ ದುಃಖಂಗೆಯ್ಯೆ (ವಡ್ಡಾರಾ. ೦೦೬-೯) ; ಹಿಡಿಂಬನೆಂಬನವರ ಬರವನಱಿದು ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು (ಪಂಪಭಾ. ೩-೦೦ ವ) ; ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ನಿವೇದಿತತನುವಾದಳ್ (ಅಜಿಪು. ೦-೪೯). ೨. ಕಿರಿಯ ಹೆಂಗಸರನ್ನು ಸಂಬೋಧಿಸುವಾಗ ಹೇಳುವ ಮಾತು : ತಂಗೆ ತಲೆ ವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹಕಶಾ. ೯-೨೪). **ತಂಗಿ₁** : ೧. ನೀನಿದೇಂ ನಿಂದಿಲ್ಲಿ ಱೋಡಗತನಂಗೆಯ್ದಾಡುತ್ತಿರ್ಪೆ ಅತ್ತ ಪಿನ್ನ ತಂಗಿಗವಸ್ಥೆ ಪಿರಿದು (ಪಂಚತಂ. ೨೪೦-೦೨) ; ಪೊಱಯಿಲ್ಲಪ್ಪೊಡೆ ಸತಿಗಾದಱಿಕಂ ಮೇಣ್ ಕೂರ್ಪ ತಂಗಿಗೇಕಾಗದು (ಧರ್ಮಾಮೃ. ೯-೩೦) ; ಹರಿಯಂ ತಂಗಿಯ ಬಾಲನೆಂದು ಬಗೆದೇಂ ಕಂಸಾಸುರಂ ಕಾದನೇ (ಸೋಮೇಶ. ೩೪) ; ಹಿಂದಣ ರಾವಣನೊಳವಗಡಿಸಿಯಾತನ ಮಾವನನು ಮುಱಿದವನ ತಂಗಿಯ ಮೂಗ ಭಂಗಿಸಿದ (ಕುಮ್ಯಾಸ. ೯-೩೦). ೨. ತಂಗಿ ನೀನಟಲಂ ತಳೆಯದಿರಾವಿರ್ವರುಂ ಸಮಸುಖದುಃಖ[ವೃತ್ತಿ]ಗಳಾದೆವು (ಕಾದಂಬ. ೩೨೪) ; ಬಾಲಕಿಯೆ ಬಾ ತಂಗಿ ಬಾ ನೀಲಾಳಕಿಯೆ ಬಾಯೆನುತ ಮಿಗೆ ಪಾಂಚಾಲೆಯನು ಕರೆದಸುರರಿಪು ಸೂಚಿಸಿದನಂಗನೆಗೆ (ಕುಮ್ಯಾಸ. ೧೦-೧೩). [ ದೇ.॥ ತಮಿ. ತಙ್ಕೈ ; ಮಲ. ತಙ್ಙ ; ತುಳು. ತಂಗಿ ; ಕೊಡ. ತಂಗೆ ; ಗೊಂಡಿ. ತಂಗೇ ; ಕುಇ. ಕುವಿ. ತಂಗಿ ]

**ತಂಗೆಡೆ** (ನಾ). ತಂಗುವ ಎಡೆ ; ಬಿಡಾರ : ಎಲ್ಲಾ ವೀರರುಗಳೂ ಫಲ್ಗುಣನನ್ನು ಹೊಗಳಿಕೊಂಡು ಉತ್ಸಾಹವಾಗಿ ತಮ್ಮ ತಂಗೆಡೆಗಳಿಗೆ ಹೋದರು (ವ್ಯಾಸಜಿ. ೩೮೭). [ ತಂಗು₁ + ಎಡೆ₂ ]

**ತಂಗೆಳು** 'ತಂಗೇಳು' ನೋ.

**ತಂಗೆಱೆ²** (ನಾ). ಒಂದು ಊರಿನ ಹೆಸರು : ಬಲಿವಂಶತಿಲಕ ಆಸನ್ದಿನಾಡ ನಾಲುತ್ತಿರ ತ್ರಿಜಿಗ್ಗಿಱಿಯಾ ದಣ್ಣರೆ ನೊಲಂಬು ತಾಂ ಸಲೆ . . . ಕಾದಿ ಸತ್ತಂ (ಎಕ. V, ಅರಸೀ. ೨೦೩-೭ : ಸು. 890). [ ? ]

**ತಂಗೇಳು, ತಂಗೆಳು** (ನಾ). (?): ಯಿದಕೆ ಅನ್ಯಯವು ಅನೋರ್ಬ ಮಾಡಿದವನು ಗಂಗೆಯ ತಡಿಯಲ್ಲಿ ತಂಗೇಳು ಕವಿಲೆಯಕೊಂದ ದೋಷಕೆ ಹೋಹರು (ಎಕ. IX, ಚಂಗಳೂ. ೦೩೪-೦೦ : 1308) ; ಯಿದಕೆ ಅರು ಅಳಿಹಿ ತಪಿದವರು ಗಂಗೆಯ ತಡಿಯಲು ತಂಗೇಳು ಕವಿಲೆಯ ಕೊಂದ ಪಾಪದಲಿ ಹೋಹರು (ಎಕ. IX, ಚಂಗಳೂ. ೯೭-೦೭ : 1347) ; ಅವನೊಬ್ಬ ಅಳಿದವ ಗಂಗೆಯ ತಡಿಯಲಿ ತಂಗೇಳು ಕಪಿಲೆಯನು ಬ್ರಾಹ್ಮರನು ಕೊಂದ ಪಾಪಕೆ ಹೋಹನು (ಎಕ. IX (8), ಕನಕ. ೭೩-೨೦ : ಸು. 1890). **ತಂಗೆಳು** : ಯಿದಕೆ ಅವನಾನೊಬನು ಅಳಿಪಿದವರು ಗಂಗೆಯ ತಡಿಯಲಿ ತಂಗೆಳು ಕಪಿಲೆಯ ಕೊಂದ ಪಾಪದಲಿ ಹೋಹರು (ಎಕ. IX (8), ಚಂಗಳೂ. ೦೭೩-೦೦; ಸು. 1700). [ ? ]

**ತಂಗೇಟುವೊಣುಸೆ** (ನಾ). ಒಂದು ಪ್ರದೇಶದ ಹೆಸರು (?): ಮಹಾನದಿಎ ವಾಯವ್ಯಾದಿಶಿಯಿಮ್ ಪೂರಮಟ್ಟು ತಂಗೇಟುವೊಣುಸಎ ಆ ಪೇರೊರ್ಪ್ಪೆಎ (ಪ್ರಾಇಅ. ೧೯೨೦, ೯-೨೪ ; ಶ್ವಾ). [ ತಂಗೇಟು₀ + ಪೊಣುಸ (<ಪೊಳಸ) ]

**ತಂಗೈ** (ನಾ). ತಣ್ಣಗಿರುವ ಕೈ : ಹಣದ ತಂಗೈ ನನ್ನ ಮುಂಗೈಯ್ಯ ಹಿಡಿದಂತೆ ನಿನ್ನ ಮಾತಿನ ಪಟ್ಟು ಮನಕನಿಸಿತು (ಸಹೀಗೀ. ೩೭-೭೨೯).
[ ತಂ₁ (<ತಣ್₃) + ಕೈ₂ (<ಕೆಯ್₂) ]

**ತಂಗೊಡಗೆ** (ನಾ). ಒಂದು ಊರಿನ ಹೆಸರು. P ಈಗಿನ ಬಿಜಾಪುರ ಜಿಲ್ಲೆಯ ತಂಗಡಗಿ : ಪೆರ್ದ್ದೊರೆಱಿಯ ಬಡಗದಟಿಯ ತಂಗೊಡಗೆಯ ಬೀಡಿನೊಳ್ (ಶಾಇಆ. XI-1, ೦೦೩-೧೪ : 1075). [ ? ]

**ತಂಗೊಡೆ** (ಕ್ರಿ). ಆಧಾರ ತಪ್ಪು; ಆಶ್ರಯವಿಲ್ಲವಾಗು: ದಿಕ್ಕರಿಸೆ ಫಣಿಯು ಕೂರ್ಮಾದಿಗಳ್ತಂಗೊಡದು ಕುಕ್ಕುರಿಸೆ ಧರಣೀತಳಮ್ಮದಿರೆ ಕಡಲು ಕುದಿದುಕ್ಕಿದುದು ಅತಿರಥಮಹಾರಥರ ಯುದ್ಧದೊಳ್ಕಡಿದನು ವಿರಾಟಸೂನು (ತುರಂಗ. ೯೫ ಸೂಚನೆ). [ ತಂಗು₂ + ಒಡೆ₁ ]

**ತಂಗೊಳ** 'ತಣ್ಗೊಳ' ನೋ.

**ತಂಚಾವಂಚ** 'ತೊಂಚವಂಚ' ನೋ.

**ತಂಜಾಪುರಿ** (ನಾ). ಒಂದು ಊರಿನ ಹೆಸರು. P ಈಗಿನ ತಂಜಾವೂರು: ತಞ್ಜಾಪುರಿ ನಾಳ್ಕೇಳೋ ಪ್ರಮುಖಾದಿ ದುರ್ಗ್ಗನಿವಹಾನ್ದಗ್ಧ (ಪ್ರಾಇಅ. ೧೯೨೦, ೦೦-೮೯ : 968) ; ಮಧುರೆ ತಂಜಾಪುರಿ ತಂಜರಾಯರ ಸಮ್ಮುಖದ ಮಂತ್ರಿನಿಕರವೃತಂದು (ಕಂಸವಿ. ೨೦-೩೩). [ ತಂಜಾ₉ + ಪುರಿ₅ ]

**ತಂಟಲಮಾರಿ** 'ತಂಟಲುಮಾರಿ' ನೋ.

**ತಂಟಲು** (ನಾ). ತಂಟೆ ; ತಕರಾರು. 'ತಂಟಲುಮಾರಿ', 'ತಾರಾತಂಟಲು' ಪರಾ. [ ತಂಟೆ+ – ಅಲು₂ (< – ಅಲ್₂) ]

**ತಂಟಲುಮಾರಿ, ತಂಟಲಮಾರಿ** (ನಾ). ೧. ತಂಟೆ ತೆಗೆಯುವ ಸ್ವಭಾವದ ವ್ಯಕ್ತಿ : ಪೇಟೆ ಶಾಲೆಯೆಂದರೆ, ತಂಟಲುಮಾರಿ ಹುಡುಗರೂ, ಅವರ ದಾಂಧಲೆಯೂ . . . ಬಡಪಾಯಿ ಮೇಷ್ಟುಗಳು ಇವಿಷ್ಟರಲ್ಲಿಯೇ ಮುಗಿದು ಬಿಡುತ್ತದೆ (ರೂಪಸಂ. ೩೩); ಸೀನಭಟ್ಟ ಮಗ-ಮಹಾ ತಂಟಲುಮಾರಿಯವ (ಕೋದಂಡ. ೪೯). **ತಂಟಲಮಾರಿ** : ೨. ಗ್ರಾಮದೇವತೆ: ಕೊಡಗಿನ ಮಾರಿ ತಂಟಲಮಾರಿ ಗೌಡಗೆ ಬುದ್ಧಿ ಕಲಿಸಾಲೆಂತ . . . ಗೌಡ್ನ ಹಟ್ಟಿ ಬಾಗ್ಲಿಗೆ ಬಂದ್ಲು (ಜಗೀತ. ೩೭). ೩. ಕಂಲಟೆ ; ಜಾರೆ : ನೀನಾದರೆ . . . ವಶ್ಯಕರವಾದ ಮದ್ದುಗಳನ್ನಿಟ್ಟು ವಶ್ಯರಂ ಮಾಡಿ ತಗಿಲಿಸಿಕೊಂಬ ತಂಟಲಮಾರಿಯೆ ಸರಿ (ಸಾಗಂಧಿ. ೩೦೯-೮).
[ ತಂಟಲು + ಮಾರಿ₂./ತಮಿ. ತಣ್ಟುಮಾರಿ; ತುಳು. ತಂಟೆಲ್ಮಾರಿ ; ತೆಲು. ತಂಟಲಮಾರಿ, ತಂಟಾಲಮಾರಿ ]

**ತಂಟಲುಮಾರಿತನ** (ನಾ). ತಂಟೆ ತೆಗೆಯುವ ಸ್ವಭಾವ ; ಜಗಳಗಂಟತನ: ದಯಮಾಡಿ ತಂಟಲುಮಾರಿತನಕ್ಕೆ ಮನಸ್ಸು ಕೊಡಬೇಡ (ಮಹಾತ್ಮಾ. ೦೦೩).
[ ತಂಟಲುಮಾರಿ + – ತನ ]

**ತಂಟು** 'ತಂಟೆ' ನೋ.

**ತಂಟೆ, ತಂಟು** (ನಾ). ೧. ಜಗಳ ; ತರಲೆ ; ತಕರಾರು : ಟೀಪುಸುಲ್ತಾನರ ಕೆಲಸದ ಮೇಲೆ ಮೂರು ಸರಕಾರದ ಕಡೆಯಿಂದಾ ಈ ತಂಟೆ ತಪ್ಪಿಸಿದರೆ (ರಾಜೇಂದ್ರ. ೬೩) ; ಇಬ್ಬರ ತಂಟೆಯಲ್ಲಿ ತೊಡಕಿದ ಹೊಲದ ಸೀಮೆಭಾಗ ದಂತೆ (ಅಶ್ವಮೇ. ೨) ; ನಾದವಿದ್ದರೆ ಘಂಟೆ, ವಾದವಿದ್ದರೆ ತಂಟೆ (ಗಾದೆ). ೨. ಕಷ್ಟ; ತೊಂದರೆ ; ಉಪದ್ರವ : ಪರಿಪರಿಯ ಸಾಲ ಜೂಜು ಮೊದ ಲಾದ ತಂಟೆಗಳನ್ನುಂಟುಮಾಡಿ (ಸಾಗಂಧಿ. ೦೩೯-೨) ; ಬಹಳ ತಂಟೆಗೆ ಬಂತು! (ದೇವೀಜಾ. ೨೦) ; ಅಣ್ಣನ ತಂಟೆ ತಡೆಯಲಾರದ ಸದಾಶಿವನೆನ್ನುವುದನ್ನು ಕೇಳಿ . . . ನೊಂದುಕೊಳ್ಳುತ್ತಿದ್ದಳು (ತ್ಯಾಗಯು. ೧೯೦). ೩. ಸಂಬಂಧ ; ಗೊಡವೆ ; ಗೋಜು : ಇನ್ನೆನಗಿದು ಬರುವುದುಂಟೆ ? ಬರಿದೇಕಿನ್ನಿದರ ತಂಟೆ (ಗೀವಿಂ. ೬೮-೬೨); ಸಂಸಾರಿಕರ ತಂಟೆಗೆ ಬರಲು ಏನಧಿಕಾರ ಈ ಸಂನ್ಯಾಸಿಗಳಿಗೆ (ಅಶ್ರುಮ. ೦೦೨) ; ಅಜ್ಜಿ ಯಾವ ತಂಟೆಗೂ ಹೋಗುತ್ತಿರಲಿಲ್ಲ (ಧರ್ಮಶ್ರೀ. ೬). **ತಂಟು** : ೧. ಆಱು ಮಂದಿ ಮಕ್ಕಳುಂಟು (ವಕ್ಕಲುಂಟು) ಮತ್ತಾಱು ಮಂದಿ ಪ್ರೇರಕರುಂಟು ಪ್ರೇರಕರಿಗೆ ಕರ್ತರುಂಟು ವಿಚಾರ ಮಾಡಲಿಕ್ಕೆ ನಿಮ್ಮದೇನು ತಂಟು (ಪುರಂದ. ೪-೧೬-೨).

**ತಂಟೆ ತಕರಾರು** = ಜಗಳ ; ವಿವಾದ : ನಮ್ಮ ಮಕ್ಕಳ ಕಾಲಕ್ಕೆ ತಂಟೆ ತಕರಾರು ಇರಕೂಡದು (ಅನಾಮಿ. ೬). **ತಂಟೆ ತಾಪತ್ರಯ** = ತಂಟೆ ತಕರಾರು: ನಾಲ್ಕಾರು ಪಾರಿವಾಳಗಳು ಯಾರ ತಂಟೆ ತಾಪತ್ರಯವೂ ಇಲ್ಲದೆ ಬಿಂಕದಿಂದ ಓಡಾಡುತ್ತಿದ್ದುವು (ಪುನರು. ೬). **ತಂಟೆ ತೀರಿಸು** = ಜಗಳ ಬಗೆಹರಿಸು: ಕುಂಟೆಕೊಳ್ಳುತ್ತಾ ತಂಟೆ ತೀರಿಸ್ಯಾನು (ಗಾದೆ). **ತಂಟೆ ಬಂಟೆ** = ತಂಟೆ ತಕರಾರು : ಆಯಾ ಸ್ಥಳದ ಮಟ್ಟದ ವಡೆರಗಳು ಯಿ ವಿಷಯವಾಗಿ ತಂಟೆ ಬಂಟೆಗಳ ಮಾಡಿದಲ್ಲಿ (ಮೈಅರಿ. ೦೯೩೦, ೪೩-೩೦ : 1812). **ತಂಟೆ ಮಾಡು** = ತಕರಾರು ಮಾಡು : ಪಕ್ಕದ ಹೊಲದವರು ತಂಟೆ ಮಾಡಿದ್ದರಿಂದ ಜಗಳ ಆರಂಭವಾಯಿತು (ರೂಢಿ). **ತಂಟೆಯವ** = ತಂಟೆಕೋರ ; ಉಪದ್ರವಕಾರಿಯಾದ ಮನುಷ್ಯ : ತಂಟೆಯವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗ ಸಲ್ಲ (ಗಾದೆ).
[ ←ಮರಾ. ತಂಟಾ ; ಹಿಂ. ತಂಟಾ, ಟಂಟಾ ; ಗುಜ. ತಂಟೋ, ಟಂಟೋ ; ಸಿಂಧಿ. ಟಂಟ. / ತಮಿ. ತಣ್ಟೈ ; ತೆಲು. ತಂಟಾ]

**ತಂಟೆಕೋರ** (ನಾ). ತಂಟೆ ಮಾಡುವ ಸ್ವಭಾವದವನು ; ಜಗಳಗಂಟ : ಕೆಲಮಂದಿ ತಂಟೆಕೋರರಾದ ರೈತ ಜನರು ನಂಬರಿನ ಹದ್ದುಬಸ್ತಾದ ಬಾಂದುಕಲ್ಲುಗಳನ್ನು ಮನಃಪೂರ್ವಕವಾಗಿ ಕಿತ್ತಿಸೆಯುವುದೂ ವುಂಟು (ಭೂಮಿಅ. ೩೮). [ ತಂಟೆ + – ಕೋರ₂ ]

**ತಂಟೆಗಾರ** (ನಾ). = ತಂಟೆಕೋರ : ಈ ರಂಗಪ್ಪನ ದಾಳಿ ಹೊರಟುದೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ ದಾಳಾದೂಳಿಯಾಗುವರು (ನಡೆದಾ. I, ೪೩೬). [ ತಂಟೆ + – ಕಾರ₁ (< – ಕಾಱ) ]

**ತಂಡ, ತಂಡು₁** (ನಾ). ೧. ಗುಂಪು ; ಹಿಂಡು ; ಸಮೂಹ : "ಬಂಬಲ್, ತುಱುಗಲ್ . . . ಸೇಣ, ತಂಡಂ, ಗುಂಡಿ . . . ಗುಮ್ಮಿ, ಗೊಂದಣ– ಈ ೪೦ ಸಮೂಹಂ" (ಶಶಸಾ. ೦೧-೨೨೨) ; "ತಂಡಮೆನಲ್ ಲೋಳಿ" (ಛಾರನಿ. ೩೬) ; "ತಂಡಂ ತೆರಳ್ಕೆ ವೊಕ್ಕಳ . . . ತೋಮಮಿವು ತಾವೆತ್ತಂ ಸ್ತೋಮಾಭಿಧಾನಮಕ್ಕುಂ" (ಶಬಿಕಂ. ೦೦೬); ಕಣ್ಗಳಿಂ ಕೆಂಡದ ತಂಡಂಗಳು ಮುರಿಯ ತಂಡಂಗಳುಂ ಸೂಸೆ (ಪಂಪಭಾ. ೩-೦೬ ವ); ರಸಮನೀವುತ್ತಿರ್ದು ದಿಕ್ಷುಪ್ರಕಾಂಡದ ತಂಡಂ (ಪಾರ್ಶ್ವಪು. ೦-೮೮) : ಕಂಡು ಬೆಱಗಾದುದು ಕುಮಾರರ ತಂಡ (ಕುಮಾ.ಅ. ೬-೪೯). ೨. ಪಕ್ಷ ; ಪಂಗಡ : ನೆಲೆವೆರ್ಚುಗೆ ನಿಮ್ಮೆರಡು ತಂಡವೊದವಿದ ನಣ್ಪಂ (ಪಂಪಭಾ. ೦೩-೬೭) ; ಇಂತೀ ಎರಡು ತಂಡದೊಳಾರು[ಪಾಠಾಂ. ಎರಡರಸುಗಳೊಳಾರು] ಸೋತರು ಸೋತ ಭೂಪತಿಗೆ ಪರುಷ ಹನ್ನೆರಡಬಲಿ ವನದೊಳಗಿರವು (ಕುಮಾ.ಸ. ೦೬-೪೯) ; ತಮ್ಮ ಕೂಟನೀತಿಯಿಂದ ಎರಡು ತಂಡಗಳಾಗುವಂತೆ ಮಾಡಿದರು (ಜಗಸಂ. ೪೬). **ತಂಡು₁**: ೧. ಅನೇಕ ಮುಸಲ್ಮಾನರ ತಂಡುಗಳು ನಿರ್ಭಯ ವಾಗಿ . . . ಹಿಂದುಸ್ಥಾನದಲ್ಲಿಯೇ ನೆಲೆಗೊಂಡು ಇರಲಾರಂಭಿಸಿದರು (ಹಿಂಮುಸ. ೪೬).

**ತಂಡತಂಡ** (ದ್ವಿರುಕ್ತಿ) = ೧. ಅನೇಕ ಗುಂಪು; ಹಲವಾರು ಗುಂಪು: ಮನೋಭವನೊಡ್ಡಣದಂತೆ ತಂಡತಂಡದೆ ಪರಿತಂದು ಸೂಸಿದುದು ಸೇಸೆಯನಂದು ಪುರಾಂಗನಾಜನಂ (ಪಂಪಭಾ. ೪-೩೫) : ತಂಡತಂಡದ ಗಣಕತತಿ ತಪ್ಪದೆನುತಮಿರೆ (ಬಸರ. ೩-೮೨) ; ಮೃಡಭಕ್ತಗಣತತಿ ತಂಡತಂಡದಲಿ ಸಡಗರದೊಳಿಯ್ದರೆ (ಬಸಪು. ೬-೨೦). ೨. ಬಗೆಬಗೆ ; ಹಲವು ಪ್ರಕಾರ; ನಾನಾ ವಿಧ: ಪುಂಡರೀಕಾಕ್ಷ ಸಿರಿ ಪುರಂದರವಿಠಲನ್ನ ತಂಡತಂಡದಿ ನೆನೆದು ಸುಖಿಯಾಗು ಮನವೆ (ಪುರಂದ. ೦-೦೫೯-೪) ; ತಂಡತಂಡದ ವಿಹಗಾಲಾಪ ತುಂಬಿಯಾಖಂಡವಾಗಿರ್ದುದೇನೆಂಬೆ (ಮೋಹತ. ೩-೨೨) ; ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ (ವಿದಾಕೃ. ೨೩-೦). **ತಂಡೋಪತಂಡ** = ತಂಡತಂಡ ೧: ಪಾಂಡವರ ಬಲದ ಮೇಲೆ ಬಿದ್ದು ತಂಡೋಪತಂಡವಾಗಿ ಚಂಡಕಾಂಡಗಳನ್ನು ಪ್ರಯೋಗಿಸಿ (ಕೃವಾಭೀ. ೦೦೦) : ವಿಚಾರಪರರಾದ ಸಂಶೋಧಕರೂ ತಂಡೋಪತಂಡವಾಗಿ ಸಿದ್ಧವಾದರು (ಕ್ರಿಯಾಶಿ. ೦೦೨).
[ದೇ.೫ ಮಲ. ತಣ್ಣು; ತುಳು. ತಂಡ, ತಂಡ್; ತೆಲು. ತಂಡ./ಸಂ. ದಂಡ]

**ತಂಡಂಗೊಳ್** (ಕ್ರಿ). ಗುಂಪುಗೂಡು; ನೆರೆ; ಸಂದಣಿಸು: ಜನಭವನದಿಂದಾ ಖಂಡಲನಿಭವಿಭವನಿರದೆ ಪೊಱಮಟ್ಟುದಿರೊಳ್ ಕಂಡಂ ನೆರೆದು ನಿಗುಂಬಿಸಿ ತಂಡಂಗೊಂಡಿರ್ದ ನರರ ಖಚರರ ಗುಂಡಂ (ಆದಿಪು. ೪-೩).
[ ತಂಡ + ಕೊಳ್₁ ]

**ತಂಡಂಬೆಱು** (ಕ್ರಿ). = ತಂಡಂಗೊಳ್ : ಭಕ್ತರುತ್ಸಾಹದಿಂ ತಂಡಂಬೆತ್ತರರೇ ವೃಥೀಯೆನುತುಮಿರ್ದರ್ (ಬ್ರಷವಿ. ೩೬-೬೩). [ ತಂಡ + ಪೆಱು₁ ]

**ತಂಡಕ** (ನಾ). ೧. ಸರಿಯಾದ ಸಿದ್ಧತೆ; ಕಾರ್ಯದ ಸಂಪೂರ್ಣ ನಿರ್ವಹಣೆ. ೨. ಹೆಚ್ಚಾದ ಸಮಾಸಪದಗಳಿಂದ ಕೂಡಿದ ರಚನೆ. 'ದಂಡಕ₂' ಪರಾ. ೩. ಮರ ಅಥವಾ ಗಿಡದ ಕಾಂಡ. ೪. ಐಂದ್ರ ಜಾಲಿಕ. ೫. ಮೋಸಗಾರ: ತಂಡಕನು ಅವ ನಿನ್ನ ಹೆಂಡತಿಯ ಕೂಡಿರಲು ಭಂಡ ಒಡಲನು ಪೊರೆದುಕೊಂಡಿರ್ಪ ಯಾಕೆ (ಶರಿಶ. ೬೨-೦). ೬. ತುಂಟ ; ಅಧಿಕ ಪ್ರಸಂಗಿ : ಎಲಾ ತಂಡಕ ಹುಡುಗನೇ ಇದು ಉಪ್ಪಲ್ಲ, ಬೆಲ್ಲ (ಕಥಾಮಂ. IV, ೬೮). ೭. ಅಲಂಕರಿಸುವಿಕೆ ; ಅಲಂಕರಣ. [ ಸಂ. ]

**ತಂಡಜ** (ನಾ). (?) : ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ ಶಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು (ಅಕಂಡೀ. ೬೦-೪೨). [ ? ]

**ತಂಡನಾಮೆ** (ನಾ). ವಿಚಾರಣೆ; ಪಂಚನಾಮೆ; ಮಹಜರು: ಪೋಲೀಸು ತಂಡನಾಮೆಯಾಗಿ ಶವಸಂಸ್ಕಾರವೂ ಮುಗಿಯಿತು (ಶಳರು. ೩೮). 'ಪಂಚನಾಮೆ' ಪರಾ. [ ತಂಡ+ನಾಮ್ಮೆ₂ ]

**ತಂಡರಸಿ** 'ತಂದ್ರಾಸಿ' ನೋ.

**ತಂಡವಾಳ, ತಾಂಡವಾಳ** (ನಾ). ಎರಕ ಹೊಯ್ದ ಕಬ್ಬಿಣ ; ಬೀಡು ಕಬ್ಬಿಣ : ಅಗ್ನಿಸಂಯೋಗದಿಂದ ನೈಮಿತ್ತಿಕ ದ್ರವ್ಯತ್ವವಂ ಪಡದು ನಾಶ ಮಾಗದೇ ಮರಳಿ ಕಠಿನವಾಗುವ ಚಿನ್ನ, ಬೆಳ್ಳಿ . . . ಕಂಚು ತಂ[ಪಾಠಾಂ. ತಾಂ]ಡವಾಳ ಮುಂತಾದಕ್ಕೆ ಲೋಹವೆಂದು ಹೆಸರು (ಸಿದ್ಧಾಂತಶಿ. ೨೬೦). **ತಾಂಡವಾಳ**: "ಎರಕ ಹೊಯ್ದ ಕಬ್ಬಿಣ ; ತಾಂಡವಾಳ" (Cast-Iron. ಇಂಕನಿ.). [ ದೇ.೫ ತಮಿ. ತಣ್ಣವಾಳ ]

**ತಂಡಸ$_1$** 'ತಂಡಸು' ನೋ.

**ತಂಡಸ$_2$**, ತಾಂಡಸ (ನಾ). ಇಕ್ಕುಳ ; ಚಿಮಟ ; ಪಟಕಾರ : "ಇಕ್ಕುಟಂಲಾಳಿ ತಂಡಸಂ ಗಾರಿಕಾಖ್ಯಂ" (ಮುಂಗರಾ. ೧೦೩-೮) : ತಂಡಸದಿನೊಯ್ಯನೆ ಕೀಳುವೆಂ ನೀ ನೆಮ್ಮಿಕೋ ಬಂದೀ ಮರನನೆನುತ (ಬಸವು. ೪೪-೧೪) : ತಂಡಸದಿನಾ ದಸಿಯನಲುಗಿ ಕೀಳಲ್ಕೆ (ಅರಾಜ. ೮-೬೭); ಬಂಗರವು ತಂಡಸದಿ ಹುಡುಕಿಯೆ ಹಿಡಿದ ತೆರನಂತೆ (ಜ್ಞಾನಸಿಂ. ೧೮-೫೭); ಇರ್ಕುಟಿಯ ತಂಡಸದ ಕರ್ತರಿಯು . . . ಬಡಿವ ಸೊನ್ನೆಗಾರರ ಸಾಲೆಯಿಂ (ರಾಮಾಶ್ವ. ೧೦೩-೧೯). **ತಾಂಡಸ :** "ಇಕ್ಕುಟ್–ವ್ಯಾಧಿವಿಕಾರಂ ; ಸಂದಂಶಂ : ತಾಂಡಸಂ" (ಶಮುದ. ೫೦. ೮). [<ಪ್ರಾ ಸಂಡಾಸ./ಸಂ. ಸಂದಂಶ ]

**ತಂಡಸಸರ** (ನಾ). ಒಂದು ಸರೋವರದ ಹೆಸರು : ತತೋ ನೈರ್ಋತ್ಯಾಂ ದಿಶಿ ತಂಡ [ಸಸರ]ಃ (ಶಾಇ. XX, ೬-೨೨ ; 730). [ ತಂಡಸ? + ಸರ$_5$ ]

**ತಂಡಸಿ** 'ತಂಡಸು' ನೋ.

**ತಂಡಸು**, ತಂಡಸ$_1$, ತಂಡಸಿ, ತಂಡಸೆ, ತಂದಸಿ (ನಾ). ಒಂದು ಬಗೆಯ ಮುಳ್ಳುಮರ : "ಕಂಟಕಿಯೆನಲ್ ತಂಡಸು[ಪಾಠಾಂ. ಮುಂಡನೆಂಗು, ಕಂಡನೆಂಗು]" (ಮುಂಗರಾ. ೩೬-೧೯) : ಕರಿಬೇವಿನಂಬಟೆಯು ತಾಳಿಯ ತಂಡಸಿನಾಸಿನಾನೆ ಬೊಬ್ಬುಲಿಯ (ಲೀಲಾವ. ೬-೨೬) : ತಂಡಸು ತವಸು . . . ಮಂದಾರಂಗಳಡಸಿ ತುಂಬಿದ ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು (ಹಕಳಾ. ೩-೧೬) : ಕೊಡಸಿಗೆ ಬಾಗೆ ಬೇಲರಳಿ ತಂಡಸು ಕೊಂಡಸು ಜಾಲವಾಲದಿಂದಿಡಿಕಿಱಿದಿರ್ದ ಪೇರಡವಿಯೊಳ್ (ಧರ್ಮನಾ. ೩-೪೭). **ತಂಡಸ$_1$:** ತೇಗರುತಾಳ ತಂಡಸ ತಡಸ ತುಗ್ಗಿಲು . . . ಮೊದಲಾದ ವನಭೂಜಾಳಿಯಲಿ ಹೊಳೆದರಕಂಪನಸಮು ರಣರಥವ (ಕೊರರಾ. ೬-೦೪-೦೮) ; ತಂಡಸ ದಿಂಡ ಪೆಬರ್ೞರ . . . ತೇಗುಗಳ ವಿಸರ ನಾನಾವೃಕ್ಷ ಜಾತಿಯಿಂದೆಸೆವ ಘೋರಾರಣ್ಯ (ಸಿಂಗಿರಾ. ೩೦-೯) : ಆಲ ತಂಡಸ ತವಸಿ ಸಹಕಾರ ಕಿಂಶುಕ . . . ಸಿರಿಸಂಗಳಿಂದೆಸೆದುದಾ ಕಾಂತಾರವು (ಸಿದ್ಧೇಶ. ೮-೩). **ತಂಡಸಿ :** ಕಕ್ಕೆ ಬಿಕ್ಕೆ ತಂಡ[ಪಾಠಾಂ. ಡಿ]ಸಿ ತಾಱ . . . ಚಂಪಕಗಳಿಂದ ನಿಲ್ಲದೆ ಮೆಱೆವುದಾ ವಿಪಿನ (ಕುರಾಸಾಂ. ೯-೫) ; ಹೇರಿಜೆಯಲಚಿ ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಿಹುವಾಗಸವನು (ಕಂನವಿ. ೦೪-೩೫). **ತಂಡಸೆ :** ತಂಡಸೆ[ಪಾಠಾಂ. ಗೆಂಡಗೆ, ಗೆಂಡಸೆ]ಕಾಗೆದೊಂಡೆ ಪೆರ್ಗುರುಡಿಗೆ . . . ಕೊಂಡರೆದು ಲೇಪಿಸೆ (ಖಮುದ. ೦೦-೫೦) : ಅಂಬಟೆಯು ಬಾರೆ ನೆಲ್ಲಿ ತಂಡಸೆ ಕರಗ ಸಂತಾಲ (ಮುಹಾವಿ. ೭-೦೮). **ತಂದಸಿ :** ತಂದಸಿ, ಕಂಕಡ (ಮುಸಿಗಿ. ೪೧-೮೦೮).

**ತಂಡಸೆ** 'ತಂಡಸು' ನೋ.

**ತಂಡಾಮುಂಡಾ** 'ತಂಡುಂಮುಂಡು' ನೋ.

**ತಂಡಾಯ** (ನಾ). ಪರಿಚಾರಕ; ಸೇವಕ (?) : ಕಂದರ್ಪೇಸ್ವರದೇವರ ತ್ರಂಣ್ಡಾಯ ಕೊಳೆಯಂಗೆ ತಂಣ್ಡೇಸ್ವರ ಮತ್ತರು ಅಱು (ಕಇ. II, ೧೬-೫೭ : 1122). 'ತಂಡಾಲಯ' ಪರಾ. [ ?./ತಮಿ. ತೊಣ್ಡ ]

**ತಂಡಾಲಯ** (ನಾ). = ತಂಡಾಯ : ಜ್ಞಾನಾರೂಢ ಪ್ರಾಣೇಶ್ವರನೆಂಬಾತನಲ್ಲಿಯ ದೇವರು ಒಂಬತ್ತು ಮಾನಿಸರು ತಂ[ಪಾಠಾಂ. ತಾಂ]ಡಾಲಯರು[ಪಾಠಾಂ. ತಂಡದಲ್ಲು] (ಜನ್ನವ. ಶ. ೪೯೮-೦೦೭೮); "ವ್ಯವಸ್ಥಾಪಕ" (ಜನ್ನವ. ಶ. ಕೋಶ). [ ? ]

**ತಂಡಿ**, ಚಂಡಿ$_4$, ತಂಡು$_6$, ಥಂಡಿ (ನಾ). ೧. ಚಳಿ ; ತಂಪು : ನೀರಿನ ಪಸೆಯಿಲ್ಲದಿದ್ದರೂ ವಾಯುವು ತೀರ ತಂಡಿಯಾಗುವುದು (ಬಾಲಶ್ರ. II, 667) : ತಂಡಿಯಿಂದ ಹಿಮ್ಮಡಿ ಮುದುರಿ ಸೆಳೆಯುತ್ತದೆ (ಕುಡಿಕೊ. ೮೯). ೨. ತೇವ ; ಒದ್ದೆ : (ಶಿ). **ಚಂಡಿ$_4$ :** ೧. ವರರತ್ನಾಳಿರುಚಿಯಲಿ ಚಂಡಿಯಾಯಿತು ದಿವಸವಂದಿನಲಿ (ಕುವ್ಯಾಸ. ಒರಿಇ. ೫-೫೦) . ೨. ಒಣಗಿದಷ್ಟು ಒಣಗಲಿ. ತರಗೆಲೆಯು ಹಾಗೆ ಚಂಡಿಯಾಗಿ, ಬೆಂಕಿ ಊದಿದಷ್ಟು ನಂದುತ್ತದೆ (ಮರಮು. ೨೨): ಮೈಯೆಲ್ಲ ಚಂಡಿ. ನನ್ನ ಬಟ್ಟೆಯಿಂದ್ಲೆ ವರ್ಸಿದೆ ದೇವರೆ (ಕದಂಬ. ೦೦೫). **ತಂಡು$_6$ :** ೨. ಹದಿನೈದು ದಿನದ ಮಳೆಯ ತಂಡಿನಿಂದ, ಹಪ್ಪಳಕ್ಕೆಲ್ಲಾ ಗಡ್ಡ ಮಿಸೆ ಬಂದಿತ್ತು (ಮರಮು. ೨೩). **ಥಂಡಿ :** ೧. ಅಲ್ಲಿ ಬಂದು ಮುಟ್ಟಿದಾಗ ಥಂಡಿ ಸುರುವಾಗಿತ್ತು (ಸಮುಜೀ. ೬೦೮) ; ಭಾಳ ಥಂಡಿ ಹತ್ತಿದ್ದಿತಲಾ ಹಂಗಾರ (ಮುಗಿತು. ೨೬). ೨. ಮನೆ, ನೆಲ, ಗೋಡೆ ಎಲ್ಲಾ ಥಂಡಿ ಹತ್ತಿ ಜಿನುಗ್ತಿರೋವು (ಎಮುಳ. ೪೭).

**ಚಂಡಿಪುಂಡೆಯಾಗು** = ನೆನೆದು ಸೊಪ್ಪಾಗು : ನನ್ನ ತೊಡುಗೆಗಳೆಲ್ಲ ನೀರಲ್ಲಿ ನೆನೆದು ಚಂಡಿಪುಂಡೆಯಾಗಿ ಹೋದುವು (ನಡದಾ. II, ೦೦೪೩).

[ ← ಮರಾ. ಥಂಡೀ, ಥಂಡಾಈ ; ಹಿಂ. ಠಂಡೀ ]

**ತಂಡಿಲ** (ನಾ). ಹೋಮ ಹವನಗಳಿಗಾಗಿ ಶುಚಿಗೊಳಿಸಿ ಸಿದ್ಧಪಡಿಸಿದ ಚಚ್ಚೌಕವಾದ ಭೂಮಿ ; ಯಜ್ಞವೇದಿಕೆ : ಸ್ಥಂಡಿಲ; ತಂಡಿಲ (ಶಬ್ದಾನು. ೧೯೯ ಪ್ರಯೋ).

[<ಪ್ರಾ. ಥಂಡಿಲ. / ಸಂ. ಸ್ಥಂಡಿಲ ]

**ತಂಡಿಲು** (ನಾ). ಅಕ್ಕಿ ; ತಂಡುಲ : ಬೇಕಾದ ಬೇಳೆ ಬೆಲ್ಲವು ತುಪ್ಪ ತಂಡಿಲು ಜೋಕೆಯಾಗಿರ್ದ ಭಾಂಡವನು ನೀ ಕಟ್ಟಿ ಗೊಡೆಯೊಳಗೆ ತುಂಬು (ಅಮುಸಾಂ. ೫-೯); ಆ ಸತ್ತೆಂಬ ತಂಡಿಲು ಚಿದ್ರೂಪನಾದ ಶರಣನ ಮಹಾನುಭಾವಾಂತರಂಗ ಮೂರ್ತಿಗೊಂಡಿತ್ತೆಂಬುದೀಗ ಆ ಭತ್ತ ಸಿಕ್ಕಿತ್ತು. ಅರಮನೆಯಲ್ಲಿ ಎಂಬ ಶಬ್ದಕ್ಕರ್ಥ (ಮೋಳಿಮಾ. ೨೪೧-೭೯೦ ಟೀಕೆ).

[ <ಸಂ. ತಂಡುಲ ]

**ತಂಡು$_1$** 'ತಂಡ' ನೋ.

**ತಂಡು$_2$** (ನಾ). ೧. ಕೋಲು ; ದೊಣ್ಣೆ ; ದಂಡ : (ಶಿ). ೨. ಭಾರವಾದ ಕಬ್ಬಿಣದ ಕೋಲು,–ಗದೆ : (ಶಿ). [ ←ತಮಿ. ತಣ್ಟು. / ಸಂ. ದಂಡ ]

**ತಂಡು$_3$** 'ತೊಂಡ$_1$' ನೋ.

**ತಂಡು$_4$** (ನಾ). ಮರದ ಸೌಟು : "ತಂಡೂಃ, ದಾರುಹಸ್ತಕಃ– ೨ ಕೈಬಟ್ಟು ಪೆಸರುಗಳು, ಮರದ ಸೊಟಕ, ಮರದ ಸೌಟು" (ಸಿದ್ಧಾಂತಿ. ೨೪೩).

[ ಸಂ. ತಂಡೂ ]

**ತಂಡು$_5$** (ನಾ). ಶಿವನ ದ್ವಾರಪಾಲಕರಲ್ಲಿ ಒಬ್ಬ ನಂದೀಶ್ವರ. ಪ್ರಣಕ ಮತ್ತು ನೃತ್ಯಕಲೆಗಳಿಗೆ ಈತನೇ ಆಚಾರ್ಯಪುರುಷ: ಶಿವನಾ ಪ್ರಯೋಗದೊದವಂ ತವಕಂ ಮಿಗೆ ನೆನೆದು ತಂಡುವಿಂಗುದ್ಧತ ನೃತ್ಯವ ನೊರೆಯಲಾತನೊಲವಿಂ ತವೆ ಭರತಂಗಿತ್ತೊಡಾಯ್ತು ತಾಂಡವದ ಪೆಸರ್ (ಲ್ಯಾಸರಂ.೦-೧೨); ತುಂಬುರು ತಂಡುವು ಡಿಂಡಿಮ ಬಾರಿಸೆ (ಗಜೇಶ. ೦೧-೨೭೯). 'ತಾಂಡವ' ಪರಾ. [ ಸಂ. ]

**ತಂಡು$_6$** 'ತಂಡಿ' ನೋ.

**ತಂಡುಂಮುಂಡು**, ತಂಡಾಮುಂಡಾ, ತಂಡುಂಮುಂಡು, ತಂಡೋಮುಂಡೊ (ನಾ). ೧. ಚಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ಖಂಡದ ದೊಂಟೆಯು ಪುತ್ತುಂ ತಂಡುಂಮುಂಡಾಗಿ ಬಿರ್ದ ಪೆಣಗಳ ಪುಂಜಂ ಬೆಂಡೆರ್ದವು ಧುರದೊಳ್ ನೊರೆವಿಂಡೆದ್ದರ್ವಿಸುವ ಬಿಸಿಯ ನೆತ್ತರ ಕಡಲೊಳ್ (ಮುಹಾನೇ. ೧೨-೨೭). **ತಂಡಾಮುಂಡಾ :** ೨. ಗೃಹಕೃತ್ಯದ ಹೊಣೆಗಾರಿಕೆಗಳಿಲ್ಲದವನು; ಆಶ್ರಯರಹಿತನಾದ ವ್ಯಕ್ತಿ : ತಂಡಾಮುಂಡಾ ವಾಸುದೇವ (ಲೂಧಿ). **ತಂಡುಮುಂಡು :** ೧. ಖಳ ಶಿರೋಮಣಿ ರಕ್ತಬೀಜಾಸುರನ ಸಂತತಿಯ ಗಲಭೆ ಕೈವಶ್ಯಸೋಂಕಿಗ ನಿಮಿಷಲಲನೆಯರು ಮೇಣ್ಮೀರಿ ಬಾಳ್ವರೆ ಸಿಲುಕಿ ಕೆಡೆವರು ತಂಡುಮುಂಡಿಗೆ ಬೀದಿ ಬೀದಿಯಲಿ (ಅಂಬಿಕಾ. ೪೨-೪೮) : "ಧಾಂಧಳೆ, ಕೋಟಲೆ" (ಪ್ರಭಾ). **ತಂಡೋಮುಂಡೊ :** (ಶಿ).

[ ?. / ತಮಿ. ತಣ್ಟಾಮುಣ್ಟಾ, ತಣ್ಟುಮಿಣ್ಟು = ಮೊಂಡುತನ ]

**ತಂಡುಮುಂಡು** 'ತಂಡುಂಮುಂಡು' ನೋ.

**ತಂಡುಲ,** ತಂಡುಳ (ನಾ). ೧. ಅಕ್ಕಿ : ನೆಟ್ಟನೆ ಪುಷ್ಪವಾಸನೆಯ ಕಪ್ಪುರ ಶಾಲಿಯ ತಂಡುಲಂಗಳಂ ನಿಟ್ಟೆಸರಿಟ್ಟು ಬಾಗಿ (ಸುಕುಮಾ. ೦೦-೧೦೮); ಪ್ರಜೆಯೆಲ್ಲಂ ಜಲಗಂಧಸ್ರಜ ತಂಡುಲ ಧೂಪದೀಪ ಚರು ತಾಂಬೂಲ ವ್ರಜದಿಂ ಪೂಜಿಸುವುದು (ಜಕೋಆ. ೪-೭೩); ಮೋಡಗಳ ಮೊರದಲ್ಲಿ ತಾರೆಗಳ ತಂಡುಲವ ಒನೆವ ವನಿತೆಯ ಹಾಗೆ ತೊನೆಯೆ ಗಾಳಿ (ಕರುಣಾ, ೧೬-೭). ೨. (ಕಮಲದ) ಬೀಜ : ತಿಳಿದ ತಿಳಿಗೊಳದ ತಳತ ತಾವರೆ ಯರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಅದವ. ೦೬-೩೩); ತಾಮರಸತಂಡುಲಂಗಳ ಜಕ್ಕುಲಿಸಿ ಕೊಕ್ಕಿನಿಂ ನಲಿದು ವಧುಗೂಡಿ ಸೇವಿಪ ಬಿಸಿಲ್ವಕ್ಕಿಗಳಿಂ (ಶರ್ಸ್ತಾ. ೬-೩೪). ೩. ಒಂದು ಅಕ್ಕಿಯ ಕಾಳಿನಷ್ಟು ತೂಕ ; ಮುತ್ತು, ರತ್ನ ಮೊದಲಾದುವುಗಳನ್ನು ತೂಕಮಾಡುವ ಒಂದು ಪ್ರಮಾಣ : ೧೬ ತಂಡುಳ ಅಂದರೆ ೧ ರತಿ (ಮುಂಬಾ. ೦೩೭). ೪. ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ ಎಂಬ ಏಳು ಬಗೆಯ ದಿವ್ಯಗಳಲ್ಲಿ ಒಂದು. 'ದಿವ್ಯ' ನೋ. ೫. ಒಂದು ಬಗೆಯ ಔಷಧಿ ಸಸ್ಯ ; ವಾಯುವಿಳಂಗ. **ತಂಡುಳ :** ೧. ಮಧುರಮೆಂಬ ಕಳಮತಂಡುಳಮಂ ಕಯ್ಪುಯೆಂಬುದು ದುಷ್ಪ್ರತೀತಿ (ಪಶಾರ. ೯೦೪-೧೦). [ ಸಂ. ]

**ತಂಡುಲೀಯ** (ನಾ). ಒಂದು ಬಗೆಯ ಸೊಪ್ಪು ; ಕಿರುಕುಸಾಲೆ ; ಕೀರೆ ಸೊಪ್ಪು ; ಚಿಲುಕೀರೆ : "ತಂಡುಲೀಯಃ, ಅಲ್ಪಮಾರಿಷಃ – ೨ ಕೀರೇ ಸೊಪ್ಪು" (ಸಿದ್ಧಾಂತಿ. ೦೨೬). [ ಸಂ. ]

**ತಂಡುಲೀಯಕ,** ತಂಡುಳೀಯಕ (ನಾ). =ತಂಡುಲೀಯ : "ನೀರದರವಂ ತಂಡುಲೀಯಕಂ ಮುದಿಪ್ಪಮೆನೆ ಕಿಱುಕುಸಾಲೆಯಕ್ಕುಂ" (ಮುಂಗಸಾ. ೪೨-೪೦). **ತಂಡುಳೀಯಕ :** "ತಂಡುಳೀಯಕಂ ಜಳಧರನಾಮಂ" (ವಸು. ಕೋ. ೩೭-೨೮). [ ಸಂ. ]

**ತಂಡುವಾದಿಸು** (ಕ್ರಿ). ಮೊಂಡುತನದಿಂದ ವಾದಿಸು ; ವಿತಂಡವಾದ ಮಾಡು : ಇದು ರಾಗ ತೋರೆಯದವಗೆ ಮನಸಿಗೆ ಹತ್ತದು ಹೀಗೆ ಹಾಗ್ಯಾಕೆಂದು ತಂಡುವಾದಿಸಿದರೆ ಆಗುವುದೇನಯ್ಯಾ ಆದರಿಂದ ಫಲಿತಾರ್ಥ (ವಿಶ್ವಸು. ೨೨-೫).

[ ತೊಂಡು$_1$? + ವಾದಿಸು ]

**ತಂಡುಳ** 'ತಂಡುಲ' ನೋ.

**ತಂಡುಳಜಳ** (ನಾ). ಅಕ್ಕಿಯನ್ನು ತೊಳೆದ ನೀರು ; ಅಕ್ಕಿಯ ಕಚ್ಚು ; ಅಕ್ಕಚ್ಚು : ಸಿರಿಕಂಡಂ ಬ್ರಾಹ್ಮಿಯೆನಿಪ್ಪೆರಡಂ ಮೇಣಲ್ಲದಂದು ತಂಡುಳ ಜಳದಿಂದರಸಿನಮಂ ಪುಣಸೆಯ ಬೇರ ರಸಮುಮಂ ಕುಡಿಯೆ ಕಿಡಿಸುಗುರು ಸ್ಫೋಟಕಮಂ (ಲೋಕೋಪ. ೯-೨೫).

[ ತಂಡುಳ (= ತಂಡುಲ) + ಜಳ$_2$ (= ಜಲ$_2$) ]

**ತಂಡುಳೀಯಕ** 'ತಂಡುಲೀಯಕ' ನೋ.

**ತಂಡೆ** (ನಾ). ೧.ಒಂದು ಬಗೆಯ ಕಾಲಿನ ಆಭರಣ ; ರುಳಿ : ಅಡಿಯು ತಾವರೆ ತಂಡೆಯಂಚೆಯು ತೊಡೆಯು ಬಾಳೆಯು ಬಳುಕುತಿಹ ಬಡನಡುವು ಬಳ್ಳಿಯು (ಅಜಾಗವಿ. ೨೧-೩೪). ೨. ಎತ್ತಿನ ಕೊರಳಲ್ಲಿ ಕಟ್ಟುವ ಬಣ್ಣ ಬಣ್ಣದ ದಾರಗಳನ್ನು ಹೆಣೆದು ಮಾಡಿದ ಪಟ್ಟಿ ; ಕೊರಳಪಟ್ಟಿ : ಎತ್ತಿನ ಕೊರಳಲ್ಲಿ ತಂಡೆ ಹಾಕಿದ್ದೇನೆ (ರೂಢಿ).

[ ದೇ.೩ ತಮಿ. ತಣ್ಟೈ ; ಮಲ. ತಣ್ಡ ; ತುಳು. ತಂಡೆ ]

**ತಂಡೆಯ** (ನಾ). ಒಂದು ಊರಿನ ಹೆಸರು. ಈಗಿನ ನಂಜನಗೂಡು ತಾಲ್ಲೂಕಿನ ತಾಂಡ್ಯ : ಮಯ್ಸೂರ್ ನಾಡ ತಣ್ಡೆಯದ ಎಳ್ಳಿಯಮ್ಮನ ಮಗಂ ಮಾದಯ್ಯ (ಮೈಆರಿ. ೦೯೩೭, ೫೫-೩ ; 1064) ; ಕಡೆಕೊಳಂ ಖಾರ ವುರಂ ತಣ್ಡೆಯದ ಮುಕ್ಕೂಡು ಮೂಡವೊಗದೆ ಪೋಗಿ (ಮೈಆರಿ. ೦೯೩೪, ೫೮-೭ ; 11ನೆಯ ಶತ). [ ? ]

**ತಂಡೇಲ** (ನಾ). ದೋಣಿಯ ಅಥವಾ ಹಡಗಿನ ಯಜಮಾನ,– ಮುಖ್ಯಸ್ಥ : ಅಲ್ಲಿಲ್ಲದ ದೋಣಿಯ ತಂಡೇಲನನ್ನು ಕುರಿತು ಅರ್ಭಟಿಸಿದೆ (ಮೈಂಮಾ. ೫೦) ; ಬಂದರಿಗೆ ಹೋಗಿ ಅಲ್ಲಿನ ತಂಡೇಲರನ್ನು ಕರೆದು . . . ತನಿಖೆಮಾಡುತ್ತಾರೆ (ಜಾರುದಾ. ೬೩).

[ ದೇ.೩ ತಮಿ. ತಣ್ಡಲ್, ತಣ್ಡೇಲ್ ; ಮಲ. ತಣ್ಡಾಲ್ ; ತುಳು. ತಂಡೆಲ್, ತಂಡೆರೆ ; ತೆಲು. ತಂಡೇಲು, ತಂಡಲು. / ಹಿಂ. ಮರಾ. ತಾಂಡೇಲ್ ]

**ತಂಡೋಮುಂಡೊ** 'ತಂಡುಂಮುಂಡು' ನೋ.

**ತಂತಿ** (ನಾ). ೧. ತಾಮ್ರ ಮುಂತಾದ ಲೋಹಗಳ ತೆಳುವಾದ ಎಳೆ ; ತೆಳಂಕಂಬಿ ; ಸರಿಗೆ : ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳ್ (ಪಂಪಭಾ. ೬-೦೦) ; ಅರಿಭೂಪಾಳ ಸಿರಂಗಳಿಂದೆ ಸೊರೆಯಂ ತದ್ವಾಹು ಸಂದೋಹದಿಂ ಕರೆಯಂ ದಂಡಿಗೆ ಮಾಡಿ ಬೆಂನೆಸೆವ ಬೀಎಂ ತಂತಿಯಂ ಕಟ್ಟಿ (ಎಕ. VI, ಕಡೂರು. ೦೫೬-೩೬ ; ಸು. 1190) ; ಪದಿನಾಲ್ಕು ತಂತಿಯಿಂ ಮಚಿರ್ವ ವೀಣೆಯನಲ್ಲಿ ಪದಪಿನಿಂ ಮ್ರೇಳಯ್ಸಿ (ತಿರುನೀ. ೮೫-೨೪) ; ನೋಟ ರಾಯನ ಮೇಲೆ ನೆನಹು ರಾಗದ ಮೇಲೆ ನೀಟ ತಂತಿಯ ಮೇಲೆ ಬೆರಳು (ಭರತ. ೫-೫೮) ; ಧಾತುಗಳಿಂದ ಬೇಕಾದಷ್ಟು ಉದ್ದ ತಂತಿಯನ್ನು ಎಳೆಯ ಬಹುದು (ಮುಂಬಯಿ. ೪-೯೩). ೨. ವೀಣೆ ಮೊದಲಾದ ತಂತಿವಾದ್ಯ : ತಾಳ್ಯಾಕ ತಂತ್ಯಾಕ ರಾಗದ ಚಿಂತ್ಯಾಕ (ಗಿ೦. ೧೨೨-೭) ; ಜೇವದ ರಸ ಹಿಂಡಿ ತುಂತೂರು ಮಳೆಯಾಗಿ ತಂತಿಯ ತುಂಬೆಲ್ಲ ಸಿಡಿದಾಂಗ (ಸಖೀಗೀ. ೫೨-೦೪). ೩. ತಂತಿಯ ಮೂಲಕ ಕಳಿಸುವ ಸುದ್ದಿ ; ತಾರು ; ಟೆಲಿಗ್ರಾಂ : 'ಜಾಗ್ರತೆಯಾಗಿ ಹೊರಟು ಬಾ' ಎಂದು ತಂತಿ ಕೊಟ್ಟಿದ್ದನು (ಹಂದುಟಿ. ೭೬). **ತಂತಿಯ ದೀಪ** = ವಿದ್ಯುದ್ದೀಪ : ವಿದ್ಯುಚ್ಛಕ್ತಿ ಎಂದು ಹೇಳುವ ಬೆಳಕಿಗೆ ತಂತಿಯ ದೀಪ ಎಂತಲೂ ಹೇಳುವುದನ್ನು ಕೇಳಿದ್ದೇನೆ (ಕಟಸಾ. ೬೩).

[ <ಪ್ರಾ. ತಂತೀ./ಸಂ. ತಂತ್ರಿ, ತಂತ್ರೀ ]

**ತಂತಿಕಂಬ** (ನಾ). ವರ್ತಮಾನವನ್ನು ದೂರಕ್ಕೆ ಸಾಗಿಸುವ ತಂತಿಗಳನ್ನು ಬಿಗಿದ ಕಂಬ; ತಂತಿ ವರ್ತಮಾನದ ಕಂಬ: "ತಂತಿಕಂಬ; ತಾರುಕಂಬ" (Telegraph-post. ಪತ್ರಿನಿ. ೮೨). [ ತಂತಿ + ಕಂಬ$_1$ (<ಕಂಭ) ]

**ತಂತಿಕಚೇರಿ** (ನಾ). ತಂತಿ ವರ್ತಮಾನವನ್ನು ಕಳಿಸುವ ಕಚೇರಿ : (Telegraph-office. ಪತ್ರಿನಿ. ೮೨). [ ತಂತಿ + ಕಚೇರಿ ]

**ತಂತಿಕಟ್ಟು** (ಕ್ರಿ). ೧. ತಂತಿಯನ್ನು ಅಳವಡಿಸು : ವೀಣೆ . . . ಮೊದಲಾದ ತಂತಿಕಟ್ಟಿ ನುಡಿವ ವಾದ್ಯವನಱಿವುದು (ಆದಪ. ೬-೦೨). ೨. (ಅಲಂ) ನಿರ್ದಿಷ್ಟಪಡಿಸು ; ಗೆರೆ ಎಳೆ : ಊರಗಾರಿಕೆ ವ್ಯವಹಾರ ದೊಳಗ ಹಾಂಗೆಲ್ಲಾ ತಂತೀಕಟ್ಟಿ ಕೆಲಸ ಸಾಗೊದುಲ್ಲ (ಗ್ರಾಮಾಯ. ೪೦).

[ ತಂತಿ + ಕಟ್ಟು$_1$ ]

**ತಂತಿಕೊಡು** (ಕ್ರಿ). ತಂತಿಯ ಮೂಲಕ ಸಮಾಚಾರವನ್ನು ಕಳಿಸು : ಕಲಕತ್ತೆಗೆ ಹೊರಟ ಬಗ್ಗೆ ಬಾಬುಗಳಿಗೆ ತಂತಿಕೊಟ್ಟು ಹೊರಟುಬಿಟ್ಟೆನು (ಜೀವಂತ. ೩೦೯). [ ತಂತಿ + ಕೊಡು$_1$ ]

**ತಂತಿಜಾಲರಿ** (ನಾ). ತಂತಿಯಿಂದ ಮಾಡಿದ ಜಾಲರಿ : ಕಿಟಿಕಿ ಬಾಗಿಲು ಗಳಿಗೆ ತಂತಿಜಾಲರಿ (wire-mesh) ಹಾಕಿಸುವುದರಿಂದ ಇವುಗಳ ಕಾಟ ಕಡಿಮೆಯಾಗುವುದು (ಗೃಹವಿ. ೧೮೬). [ ತಂತಿ + ಜಾಲರಿ ]

**ತಂತಿಟಪ್ಪಾಲು** (ನಾ). ತಂತಿಯ ಮೂಲಕ ಕಳಿಸುವ ವರ್ತಮಾನ,– ಸುದ್ದಿ ; ಟೆಲಿಗ್ರಾಂ: (ಕ). [ ತಂತಿ + ಟಪ್ಪಾಲು (<ಟಪಾಲು) ]

**ತಂತಿಬಲೆ** (ನಾ). = ತಂತಿಜಾಲರಿ : ಈ ಕೋಣೆಯೂ ಎರಡು ತಂತಿಬಲೆ ಗಳಿಂದ ಇಬ್ಭಾಗವಾಗಿತ್ತು (ಪುನರು. ೧೮೮). [ ತಂತಿ + ಬಲೆ$_1$ ]

**ತಂತಿಬಿಡು** (ಕ್ರಿ). ತಂತಿ ಸಮಾಚಾರವನ್ನು ಕಳಿಸು ; ತಾರು ಕೊಡು : ಅದನ್ನು ಕೇಳಿ ಅವರು ನನಗೆ ತಂತೀ ಬಿಟ್ಟಿದ್ದರು (ಸ್ಮೃತಿಚಿ. ೫೦೩)

[ ತಂತಿ + ಬಿಡು$_1$ ]

**ತಂತಿಮೆತ್ತೆ** (ನಾ). ಒಳಗೆ ಸ್ಥಿತಿಸ್ಥಾಪಕತ್ವವುಳ್ಳ ತಂತಿಯನ್ನು ಅಳವಡಿಸಿ ಮಾಡಿದ ಮೆತ್ತೆ,– ಆಸನ : ತಂತಿಮೆತ್ತೆಯ ಮೇಲೊಂದು ಶುಭ್ರವಾದ ಹಾಸುಗೆಯಿತ್ತು (ಪುನರು. ೨೬೫). [ ತಂತಿ + ಮೆತ್ತೆ ]

**ತಂತಿಮೇಹ** (ನಾ). = ತಂತುಮೇಹ : (೬). [ < ಸಂ. ತಂತುಮೇಹ ]

**ತಂತಿವರ್ತಮಾನ** (ನಾ). ದೂರಲೇಖಕದ ಮೂಲಕ ಕಳಿಸಿದ ಸುದ್ದಿ,– ಸಮಾಚಾರ: ೨೨೦೦೦ ಮೈಲು ದೂರ ತಂತಿವರ್ತಮಾನವು ನಡೆಯುತ್ತದೆ (ಭೂಗೋಳ. ೪೬). [ ತಂತಿ + ವರ್ತಮಾನ ]

**ತಂತಿವಾದ್ಯ** (ನಾ). ತಂತಿಗಳಿಂದ ಕೂಡಿರುವ ವೀಣೆ, ತಂಬೂರಿ ಮೊದಲಾದ ವಾದ್ಯ : "ತತಂ–ತಂತಿವಾದ್ಯಂ" (ಕಾಶಕ್ಕ. ೨೬೪); ತಂತೀವಾದ್ಯ ಯಾವುದೇ ಆದರೂ ಕಾಲಕ್ರಮೇಣ ವೀಣಾ ಎಂಬ ರೂಢನಾಮದಿಂದ . . . ಕಂಡುಬರುತ್ತದೆ (ಸಂಗೀತಂ. ೧೦೬). [ ತಂತಿ + ವಾದ್ಯ ]

**ತಂತಿವಾರ್ತೆ** (ನಾ). = ತಂತಿವರ್ತಮಾನ: ತಂತಿವಾರ್ತೆ ಕೇಳಿ ತಕ್ಷಣ ಹೊರಟರು (ಕೂಕಿ). [ ತಂತಿ + ವಾರ್ತೆ ]

**ತಂತಿಸಮಾಚಾರ** (ನಾ).=ತಂತಿವರ್ತಮಾನ : ತಂತೀಸಮಾಚಾರ, ವಾಯುಸಮಾಚಾರ, ವೀಣಾವಾದನ ಇತ್ಯಾದಿ ಸೂಕ್ಷ್ಮಸ್ವರೂಪವನ್ನು ಪಡೆಯುತ್ತದೆ (ಜೀವಾತ್ಮ. ೦೭೪). [ ತಂತಿ + ಸಮಾಚಾರ ]

**ತಂತಿಹಜಾಕ** (ನಾ). ಸಂಬಂಧವನ್ನು ಕಡಿಯುವವನು : ಸಂತ್ಯಸಿಕೊಂಡು ಹೋದನೊ ದಾರಿಯಲಿ ಸಿಕ್ಕಿ ಭ್ರಾಂತುಗೊಂಡನೊ ಬೇಡ ಹೇಳವ್ವ ಕಾಯಯನೆ ತಂತಿಹಜಾಕನನಾರು ಸೀಯದಿರ್ದರೆ ಹೋದನೆಂದಳಾ ಪದ್ಮಾವತಿ (ಗುಭಕ. ೨–೭೯): "ಅಂಕೆಯಿಲ್ಲದವನು, ಲಂಗು ಲಗಾಮಿಲ್ಲದವನು" (ಗುಭಕ. ಕೋಶ). [< ತಂತು$_2$ + ಹಜಾಕ (< ಪಜಾಕ) ]

**ತಂತು$_1$** (ನಾ). ೧. ಎಳೆ ; ದಾರ ; ನೂಲು ; ಸೂತ್ರ : "ತಂತು ಗುಣಂ ಸೂತ್ರಂ" (ವಸ್ತುಕೋ. ೬೬–೮೭) ; "ನೂತ ನೂಲೆಟಿಯಲ್ಲಿ . . . ತಂತುವದು" (ಮಂಗರಾ. ೦೫೪–೬೬) ; ಪಟವ ಹಜಿದು ತಂತುವ ನೋಡಲದೇಕೆ ಆ ಪಟವೇ ತಂತುವೆಂದಜಿದೊಡೆ ಸಾಲದೇ (ದೇವಾಪ. ೬೦–೧೨೫) ; ಸ್ನಾಯುಗಳ ಬಣ್ಣ ನಸುಗೆಂಪು; ಅವು ಹಲವು ತಂತುಗಳಿಂದುಂಟಾಗಿರುತ್ತವೆ (ಮುಂಬಯಿ. ೬–೩೦೪) ; ನಿರಾಕಾರ ಏಕಾಂತ ತಂತು ಸುತ್ತುತ್ತಲಿತ್ತು ನನ್ನ (ಅರಳು. ೦೯೯–೫). ೨. ಸಂಬಂಧ. 'ತಂತಿಹಜಾಕ' ನೋಡಿ.

**ತಂತುಮಾತ್ರಬ್ರಾಹ್ಮಣ**=ತಂತಂಹಾರುವ: ಇವುಗಳಲ್ಲಿ ೧೦೫ ಕುಲಗಳು ತ್ರಿಕರ್ಮಿಗಳು ; ತಂತುಮಾತ್ರ ಬ್ರಾಹ್ಮಣರು (ತುಳುನಾ. ೦೫೦). **ತಂತುಮಾತ್ರಬ್ರಾಹ್ಮಣ** = ಜನಿವಾರದಿಂದ ಮಾತ್ರ ಬ್ರಾಹ್ಮಣನಾಗಿರುವಿಕೆ ; ಆಚಾರವಿಲ್ಲದೆ ಜಾತಿಯಿಂದ ಬ್ರಾಹ್ಮಣನಾಗಿರುವುದು : (೬). [ಸಂ.]

**ತಂತು$_2$** (ನಾ). ೧. ಉಪಾಯ ; ತಂತ್ರ : ಆಚಾರಮಾರ್ಗ ತಂತುವನಜಿವನಾವನೊರ್ವಂ ಬ್ರಹ್ಮವರ್ಚಸನಕ್ಕುಂ (ಮಂಗರಾ. ೬೪–೧) ; ಪಥದಲ್ಲಿ ಏಕಾಂತದಲ್ಲಿ ಕಾಂತೆಯ ಸಂಗಡದಲ್ಲಿ ಸಂತರ ಬಳಿಯಲ್ಲಿ ತಂತಿನಲ್ಲಿ ವನಾಂತರದಲ್ಲಿ . . . ಎಂತಾದರೂ ಮನದುಂತಿರಲಿ ಸಂತತ ಹರಿಪಾದ ಕ್ರಾಂತನಾಗಿ (ವಿಜಾಸು. ೬೯–೫) : ಎಲ್ಲಾ ಕೊಡಗ ಮಾಡಿದ ತ್ತುತು (ಹಂಗಾಕ್ಕ. ೪೦೪). 'ತಂತುಗಾರ' ನೋಡಿ. ೨. ಮುಖ್ಯವಾದುದು ; ಪ್ರಧಾನವಾದ ವಿಷಯ: "ಮುಖ್ಯದಲ್ಲಿ . . . ತಂತುವದು" (ಮಂಗರಾ. ೦೫೪–೬೬). 'ತಂತ್ರ' ನೋಡಿ. [ ? ]

**ತಂತುಕ** (ನಾ). ೧. (ರೇಷ್ಮೆಹುಳು, ಜೇಡರ ಹುಳು ಮೊದಲಾದುವುಗಳಲ್ಲಿ) ನೂಲನ್ನು ಹೊರಡಿಸುವ ಅಂಗ: ರೇಷ್ಮೆಕೋಶಗಳನ್ನು (Cocoons) ಮಾಡಲು ತಂತುಕ (Spinneret)ದ ಮೂಲಕ ಹೊರಬರುತ್ತದೆ (ಕೀಟಜೆ. ೯೨). ೨. ದಾರವನ್ನು ತೆಗೆಯುವ ಸಾಧನ : ಸಂಶ್ಲೇಷಿತ ದಾರಗಳನ್ನು (Synthetic fibre) ತೆಗೆಯುವ ತಂತುಕಗಳನ್ನು (Spinneret) . . . ಬಳಸುತ್ತಾರೆ (ಶಿಲ್ಪನಾ. ೩೦೯). [ ಸಂ. ]

**ತಂತುಕಾರ**(ನಾ).ಜೇಡರ ಹುಳು: ನಿಚ್ಚಂ ತೊಯ್ದು ಮೃತಶಿಲೆಯ ಗೋಶಾಲೆ, ತಂತುಕಾರ ಸಹಸ್ರ ಜಾಲ ವೈರೂಪ್ಯದಿಂ, ಖಿನ್ನವಿದ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦–೦೦). [ ಸಂ. ]

**ತಂತುಕುಳ** (ನಾ). "ಬ್ರಹ್ಮವರ್ಚಸ್ಸುಳ್ಳವರ ಸಮೂಹ (ಯಜ್ಞವನ್ನು ಮಾಡುವವರ ಗುಂಪು)" (ಲಕಿಕಂ. ಕೋಶ) : ದಧೀಚಿಮುನಿ ಯಜ್ಞಮಂಟಪಕೆ ಬಂದು ತಂತುಕುಳ ನೆರೆದುದಿನ್ನೆಲ್ಲರಳಿವುದು ದಿಟಂ . . . ಎಂದು ಮುಂತಿರ್ದು ನುಡಿದಂ (ಲಕಿಕಂ. ೧೮–೬). [ ತಂತು$_2$ + ಕುಳ$_6$ (= ಕುಲ)]

**ತಂತುಕ್ರಿಯೆ** (ನಾ). ನೂಲಿನಲ್ಲಿ ಕೆಲಸ ಮಾಡುವುದು ; ಬಟ್ಟೆಯನ್ನು ನೇಯುವುದು: "ಕಿಸುವಣ್ಣ ಕೊರ್ಬುಗಳೊಳಂ . . . ತಂತುಕ್ರಿಯೆಯೊಳು ಕೆಚ್ಚೆಂದಕ್ಕು" (ಕಬ್ಬಮಂ. ೮೮) : "ಘೃತದೊಳು ಪೇಟಲೇಂ ತಂತುಕ್ರಿಯೆಯೊಳು ನೆಯ್" (ಕಬ್ಬಮಂ. ೦೦೩) [ ತಂತು$_1$ + ಕ್ರಿಯೆ ]

**ತಂತುಗಟ್ಟು$_1$** (ಕ್ರಿ). (ಪಾಕ ಮೊದಲಾದುವು) ದಾರದಂತೆ ಎಳೆ ಬರುವ ಹಾಗೆ ಜಿಗುಟಾಗು ; ಎಳೆಪಾಕವಾಗು : ಅದು ಸುಮಾರು ಮೂರು ತಾಸು ಕುದಿದು ಕಷಾಯವು ತಂತುಗಟ್ಟುವ ಹಾಗೆ ಜಿಗುಟಾದ ಮೇಲೆ . . . ಕುದಿಸುವರು (ಮುಂಬಯಿ. ೫–೨೦೦). [ ತಂತು$_1$ + ಕಟ್ಟು$_1$ ]

**ತಂತುಗಟ್ಟು$_2$** (ನಾ). ದೇಹದಲ್ಲಿಯ ಮೂಳೆಗಳನ್ನು ಒಂದಕ್ಕೊಂದು ಸೇರಿಸಿ ಬಿಗಿಯುವ ಮೆತುವಾದ ಎಳೆಗಳಂತಹ ರಚನೆ; ಅಸ್ಥಿರಜ್ಜು : ಮೆಲ್ಲೆಲುಬುಗಳು (ಕಾರ್ಟಿಲೇಜಸ್), ತಂತುಗಟ್ಟುಗಳು (ಲಿಗಮೆಂಟ್ಸ್), ಸ್ನಾಯುಗಳು ತಗುಲಿಕೊಳ್ಳುವ ಕಂಡರಗಳಲ್ಲೂ (ಟೆಂಡನ್ಸ್) ಸೇರಿಕೊಳ್ಳುತ್ತದೆ (ಕವಿಕೋ. I, ೧೫). [ ತಂತು$_2$ + ಕಟ್ಟು$_2$ ]

**ತಂತುಗಾರ** (ನಾ). ಉಪಾಯಗಾರ ; ತಂತ್ರಗಾರ ; ಮೋಸಗಾರ : ತಂತುಗಾರನೊ ಶೃಂಗಾರವರನೊ ಪಂಥದ ದೈವವೆ ವಿಜಯವಿಠ್ಠಲರೇಯಾ (ಹರಿಕೀ. ೧೬೩) ; ತಂತುಗಾರನೆ ನಮ್ಮ ವಿಜಯ ವಿಠ್ಠಲ ಸ್ವಾತಂತ್ರ ಸರ್ವೋತ್ತಮ (ವಿಜಾಸು. ೩–೪). [ತಂತು$_1$ + –ಕಾರ$_1$ (<–ಕಾಜ)]

**ತಂತುಚಿತ** (ನಾ). ನೂಲಿನಿಂದ ಕೂಡಿದುದು; ನೂಲಿನಿಂದ ನೆಯ್ದುದು; ಬಟ್ಟೆ : "ತಂತುಚಿತಂ ಕಾರ್ಪಾಸಕಂ" (ವಸ್ತುಕೋ. ೭೮–೧೯). [ ಸಂ. ]

**ತಂತುನಾಗ** (ನಾ). ಒಂದು ಬಗೆಯ ಮೀನು; ಶಾರ್ಕ್‌ಮೀನು. [ ಸಂ. ]

**ತಂತುನಾಭ** (ನಾ). ಜೇಡರ ಹುಳು. [ ಸಂ. (ತಂತು + ನಾಭಿ + –) ]

**ತಂತುಪಟ** (ನಾ). ನೂಲಿನ ಬಟ್ಟೆ : ತಂತುಪಟ ಸಾಕಿನ್ನು ಬೆಳವಿಗೆಗಂತ ವಾದುದು ಸುಲಿಯದಿರಿ ಹೋ (ಕೂರರಾ. ೫–೮–೨೬). [ ತಂತು$_1$ + ಪಟ$_2$ ]

**ತಂತುಪಾಕ** (ನಾ). ಎಳೆ ಬರುವಂತೆ ಜಿಗುಟಾದ ಪಾಕ ; ಎಳೆಪಾಕ ; ಹದವಾದ ಪಾಕ : ನಾಲ್ಕುವರಹ ತೂಕ ಪಚ್ಚಗರ್ಪೂರವಂ ಪುಡಿ ಮಾಡಿ ಪಾಕದಲ್ಲಿ ಹಾಕಿ ತಂತುಪಾಕದಲ್ಲಿಳುಹಿ (ಸಕಲವೈ. ೦೩೬). [ತಂತು$_1$+ಪಾಕ$_2$]

**ತಂತುಮೇಹ** (ನಾ). ಮೇಹರೋಗದ ಒಂದು ಅವಸ್ಥೆ : (೬). [ತಂತು$_2$ + ಮೇಹ ]

**ತಂತುಯಂತ್ರ** (ನಾ). ನೂಲುವ ಯಂತ್ರ ; ರಾಟೆ : "ರಾಟಾ — ತಂತುಯಂತ್ರಂ" (ಕಾಶಕ್ಕ. ೧೬). [ ತಂತು$_1$ + ಯಂತ್ರ ]

**ತಂತುರ** (ನಾ). ಉಪಾಯ ; ತಂತ್ರ : ಉಕಾರಕ್ಕೆ–ಅಲ್ಪ–ಅಲುವ . . . ತಂತ್ರ–ತಂತುರ (ಶಮದ. ೨೫೪ ಪ್ರಯೋ). [ < ಸಂ. ತಂತ್ರ ]

**ತಂತುವಾಯ** (ನಾ). ೧. ಬಟ್ಟೆ ನೇಯುವವನು; ನೇಕಾರ: "ಕುವಿಂದಾಖ್ಯೆ ತಂತುವಾಯಂಗೆ" (ವಸ್ತುಕೋ. ೬೬–೮೭). ೨. ಜೇಡರಹುಳು : "ತಂತುವಾಯಃ–ಜೇಡನ ಪುಳುವುಂ, ಜೇಡನುಂ" (ಕಾಶಕ್ಕ. ೨೬೪) ; ತಂತುವಾಯದಿಂದೆಮ್ಮ ಲೋಕದೊಳಗಿನ್ನದೇನು ಬಂತು? ಅಲ್ಲಿ, ಇಲ್ಲಿ, ಎಲ್ಲೆಲ್ಲಿ ತೂಗಾಡಿ, ತಂತು, ತಂತು, ತಂತು! (ಜಂತನ. ೫೪–೧೦). ೩. ನೇಯುವುದು ; ನೆಯ್ಗೆ. ೪. ಮಗ್ಗ : "ಮಗ್ಗಂ ತಂತುವಾಯವಾಕ್ಯಂ" : (ಮಂಗರಾ. ೦೦೩–೮). [ ಸಂ. ]

**ತಂತುಸ್ನಾಯು** (ನಾ). ಸೂಕ್ಷ್ಮವಾದ ಎಳೆಗಳನ್ನುಳ್ಳ ಸ್ನಾಯು: ತಂತುಸ್ನಾಯುವಿನ (Fibre Mascular) ಬೆನ್ನು ಬಳಿಯ ಪದರ (ಶರೀರ. ೩೨). [ ತಂತು$_1$ + ಸ್ನಾಯು ]

**ತಂತುಹಾರುವ** (ನಾ). ಜನಿವಾರವನ್ನು ಧರಿಸುವುದರಿಂದ ಮಾತ್ರ ಬ್ರಾಹ್ಮಣ ಎನಿಸಿಕೊಂಡವನು; ಹುಟ್ಟಿನಿಂದ ಮಾತ್ರ ಬ್ರಾಹ್ಮಣ ನಾಗಿದ್ದು ಯೋಗ್ಯ ಆಚರಣೆಯಿಲ್ಲದವನು: ತಂತುಹಾರುವನಲ್ಲ ಸಾಕ್ಷಾತ್ ಬೊಮ್ಮನಪ್ಪನು (ಬಸಪು. ೫೫-೩೩). [ ತಂತು$_1$ + ಹಾರುವ (<ಪಾರ್ವ) ]

**ತಂತೋತಂತು** (ಅ). ಎಳೆಎಳೆಯಾಗಿ; ಸಂಪೂರ್ಣವಾಗಿ; ಚಾಚೂ ತಪ್ಪದೆ; ಅಕ್ಷರಶಃ: ನಿನ್ನ ತರ್ಕ ತಂತೋತಂತು ಸರಿಯಾದದ್ದೆ ನೋಡು (ಅಶ್ವಮೇ. ೫); ನನ್ನ ಅನುಭವಕ್ಕೆ ಮಾತ್ರ ಈ ಮಾತು ತಂತೋತಂತು ಅನ್ವಯಿಸಿತು (ಕುಮಾರ. ೫೩). [ ← ಮರಾ. ತಂತೋತಂತ ]

**ತಂತ್ರ** (ನಾ). ೧. ದಾರ; ನೂಲು; ತಂತು: ನೆಯ್ದಾಳುತಿದೆ ಜಗವ ನೊಂದತಿ ವಿರಾಡ್ಮನಂ, ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯಭಾವಮಂ ನೀಡಿ (ಶ್ರೀರಾಮಾ. ೫೮-೧೩೨). ೨. ನೇಯುವಿಕೆ; ನೆಯ್ಗೆ. ೩. ಮಗ್ಗ. ೪. ಹೊದಿಕೆ; ಪರಿಧಾನ. ೫. ಧಾರ್ಮಿಕ ಉತ್ಸವ, ಸಮಾರಂಭ ಮೊದಲಾದವುಗಳ ಪ್ರಧಾನವಾದ ವಿಧಿ, ಕ್ರಮ ಮತ್ತು ಅನುಷ್ಠಾನ: ಓಂ ನಮ ಶಿವಾಯ ಎಂಬ ಮಂತ್ರದ ವಿಜಾಜಿಲಮ್ಮದೆ ನಿಂದುದು ತರ್ಕ ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ (ಬಸವ. ೬೦); ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನರಿತು ಮಾಡಲು ಬೇಕು ತಂತ್ರ (ಪುರಂದ. ೨-೭೫ ಪಲ್ಲವಿ). ೬. ಸಿದ್ಧಾಂತ; ತತ್ತ್ವ. ೭. ಶಾಸ್ತ್ರ: ನಿಜಸ್ವರೂಪ ನಿರೂಪಣ ಚಕಿತ ಸಕಲಸಮಾಮ್ನಾಯತಂತ್ರ ಲಕ್ಷ್ಮೀಕಾಂತ. (ಜಗವಿ. ೧-೬೦ ವ); ವಿದಿತವೆನೆ ವೇದಘೋಷದ ಪುರಾಣಪ್ರಸಂಗದ ತರ್ಕ ತಂ[ಪಾಠಾಂ. ಮಂ]ತ್ರ ಸಂವಾದದ . . . ಸಂಭ್ರಮಕೆ ಬೆಚಗಾದನು ಹರಿಶ್ಚಂದ್ರನು (ಹರಿಶ್ಚಾ. ೬-೩೯); ತಂತ್ರಗಳಲ್ಲಿ ಅನೇಕ ತಂತ್ರಗಳು ಶಾಕ್ತಮತವನ್ನು ನಿರೂಪಿಸುತ್ತವೆ . . . ವೇದಗಳು, ಆಗಮಗಳು, ತಂತ್ರಗಳು, ಪುರಾಣಗಳು – ಈ ನಾಲ್ಕು ವಿಭಾಗಗಳಲ್ಲಿಯೂ ಈ ಸಂಪ್ರದಾಯವನ್ನು ಕಾಣಬಹುದು (ಭಾರದ. ೨೫೦). ೮. ಇಂದ್ರಜಾಲ; ಯಕ್ಷಿಣೀವಿದ್ಯೆ. ೯. ಔಷಧಿದ್ರವ್ಯ; ಮೂಲಿಕೆ. ೧೦. ಉಪಾಯ; ಹಂಚಿಕೆ; ಯುಕ್ತಿ: ಆಗಳ್ ಮಂತ್ರಮಂ ತಂತ್ರದಿಂ ತಱಿದು ಪೊಸಮಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ . . . ಮುಕ್ಕಡಿಗೆಯ್ದು (ರಾಮಾಶ್ವ. ೧೪೩-೨೪); ಉರಗನ ವಿಷಕಿದೆ ಔಷಧಿ ಮಣಿಮಂತ್ರ ಖಳನ ವಿಷಕಿಲ್ಲವೋ ತಂತ್ರ (ಜಂಬಾಶ. ೦೧೩-೪); ಮಂತ್ರ ತಿಳಿಯದಿದ್ದರೂ ತಂತ್ರಕ್ಕೆ ಕಡಿಮೆ ಇಲ್ಲ (ಗಾದೆ). ೧೧. ಕಪಟೋಪಾಯ; ಸಂಚು: ಜ್ವಾಲೆ . . . ಅರ್ಜುನನ ಮೇಲೆ ತಂತ್ರವನೆಸಗಿ ಶಾಪಮಂ ಕುಡಿಸಿದಳ್ (ಜೈಮಿಭಾ. ೯ ಸೂಚನೆ); ಸುಟ್ಟು ಕುಹಕೋಪಾಯ ಕೆಟ್ಟ ತಂತ್ರಗಳನ್ನು . . . , ಬಟ್ಟೆ ತುದಿಯನು ಹೇಗೆ ಮುಟ್ಟಲಾಪುದೆ ನೋಡು (ಕಎಪು. ೨-೩); ಮುಕ್ರಾಂಬೆಯ ತಂತ್ರಗಳು ನಮಗೆ ಗೊತ್ತಾಗಿವೆ (ರಾವಿಜ. ೧೫). ೧೨. ಪ್ರತಿಜ್ಞೆ; ಶಪಥ. ೧೩. ಗ್ರಂಥದ ಒಂದು ಭಾಗ, ಅಧ್ಯಾಯ: 'ಪಂಚತಂತ್ರ' ಪರಾ. ೧೪. ರಾಜನ ಪರಿವಾರ: ಅರಸನಡಿವಜ್ಜೆಯಂ ನೋಡುತ್ತಂ ಪೆಱಗಣಿಂದಂ ತಂತ್ರಮೆಲ್ಲಂ ಬಂದು . . . ಊರೊಳಗೆಲ್ಲಮಱಸಿ (ವಡ್ಡಾರಾ. ೧೧೧-೦೧). ೧೫. ಕೂಟ; ಸಭೆ. ೧೬. ಸೈನ್ಯ; ಪಡೆ: ತಮ್ಮ ಬೆಸದಿಂ ತಂತಮ್ಮ ಠಾಣಾಂತರಂಗಳೊಳ್ದರ್ಗಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ (ಆದಿಪು. ೦೦-೯೭). 'ತಂತ್ರಪಾಲ', 'ತಳತಂತ್ರ$_1$' ಪರಾ. ೧೭. ಕುಲ; ವಂಶ. ೧೮. ಅಲಂಕಾರ; ಸಿಂಗಾರ. ೧೯. ಪ್ರಧಾನವಾದ ವಿಷಯ; ಮುಖ್ಯವಾದುದು. ೨೦. ಪರಮಾರ್ಥ; ಆತ್ಯಂತಿಕ ಸತ್ಯ. ೨೧. ಪ್ರಕ್ರಿಯೆ; ಪ್ರಯೋಗ ವಿಧಾನ: ಪಾತ್ರಗಳ ಅಂತರಂಗವನ್ನು ಅವುಗಳ ನಡೆವಳಿಕೆಯಲ್ಲಿಯ ವಿರೋಧಗಳ ಮೂಲಕ ಚಿತ್ರಿಸುವದು ಇಲ್ಲಿಯ ತಂತ್ರಗಳಲ್ಲೊಂದಾಗಿದೆ (ಹೊಸಕ್ಟ. ೨೮೪); ಅವರ ರಚನೆಗಳಲ್ಲಿ, ಗಾಯನದಲ್ಲಿ ಅಥವಾ ವಾದನದಲ್ಲಿ ಬಳಸಿದ ಹೊಸ ತಂತ್ರ . . . ಇಲ್ಲಿ ಕಾಣಬಹುದು (ಸಂಗೀತ. VI, ೩೮೦೪); "ಉಪಾಯ ಪರಿಧಾನ ವಿಧಾನ ಪ್ರಧಾನ ಸೇನೆ ಸಿಂಗರ ಪರಮಾರ್ಥ ತಂತು ಕುಲಭೇದಗಳಿಂತಿವು ತಂತ್ರವಾಚಕಂ" (ನಾನಾರ. ೭೭). ೨೨. ವಶ; ಅಧೀನ: ತಂತ್ರವೆಂದರೆ ಅಧೀನವೆಂದರ್ಥ (ಹಿಂದಶಾ. ೫೩೭). ೨೩. ಆಡಳಿತ; ರಾಜ್ಯಭಾರ: 'ಗಣತಂತ್ರ' ಪರಾ.

**ತಂತ್ರಮಾಡು** = ಉಪಾಯಮಾಡು: ಏನೋ ತಂತ್ರಮಾಡಿ ಕೆಲಸ ಗಿಟ್ಟಿಸಿಬಿಟ್ಟ (ರೂಢಿ). [ ಸಂ. ]

**ತಂತ್ರಂಬೆರಸು** (ಕ್ರಿ). ಪರಿವಾರದಿಂದ ಕೂಡಿಕೊಂಡಿರು; ಗುಂಪಿನೊಡನೆ ಇರು: ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂಬೆರಸಿ ಶಿವಯೋಗದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸಪು. ೫೯-೭೫). [ ತಂತ್ರ + ಬೆರಸು$_1$ ]

**ತಂತ್ರಕ** (ನಾ). ಹೊಸಬಟ್ಟೆ; ನೀರಿಗೆ ಹಾಕದೆ ಇರುವ ಬಟ್ಟೆ. [ ಸಂ. ]

**ತಂತ್ರಗಾರ** (ನಾ). ಉಪಾಯಗಾರ; ಚತುರ: ಆ ಉಮೇದುವಾರರು ಬಹಳ ತಂತ್ರಗಾರರು (ಮಲೆನಾ. ೦೫೭); ತಂತ್ರಗಾರನನ್ನು ಕುತಂತ್ರಗಾರ ಜಯಿಸಿದ (ಗಾದೆ). [ ತಂತ್ರ + – ಗಾರ (< – ಕಾಱ) ]

**ತಂತ್ರಗಾರಿಕೆ** (ನಾ). ಉಪಾಯಕುಶಲತೆ; ಚಾತುರ್ಯ: ಬಂದ ಗಂಡಾಂತರಗಳನ್ನು ಬುದ್ಧಿಪೂರ್ವಕವಾದ ಉಪಾಯಾಂತರಗಳಿಂದ ಪರಿಹರಿಸುವ ಜಾಣತನಕ್ಕೆ ತಂತ್ರಗಾರಿಕೆ ಎಂದು ಹೆಸರು (ವಾರಾಕ್ಯ. ೬೦). [ ತಂತ್ರಗಾರ + – ಇಕೆ ]

**ತಂತ್ರಗೈ** (ಕ್ರಿ). ಉಪಾಯಮಾಡು; ಯುಕ್ತಿಯನ್ನು ಹೂಡು: ಶಕ್ತಿಯಿಂದಾಗದುದಾಗದೆ ತಂತ್ರಕೆ ತಂತ್ರಗೈವುದು ನೀನು ಹಾಗೆ (ಜಂಬಾಶ. ೯೦-೩೭). [ ತಂತ್ರ + ಗೈ (<ಕೆಯ್$_1$) ]

**ತಂತ್ರಜ್ಞಾನ** (ನಾ). ಪ್ರಯೋಗ ಪರಿಜ್ಞಾನ; ಶಾಸ್ತ್ರೀಯ ಜ್ಞಾನ: ವಿದೇಶಿ ವಿಮರ್ಶಕರು . . . ಭಾರತೀಯ ಕಲಾವಿದರಿಗೆ ತಂತ್ರಜ್ಞಾನವೇ ಇಲ್ಲವೆಂದು ತಿಳಿದಿದ್ದಾರೆ (ಭಾರದ. ೫೮೦). [ ತಂತ್ರ + ಜ್ಞಾನ ]

**ತಂತ್ರನಿಯಂತ್ರಣ** (ನಾ). ಸೈನ್ಯವನ್ನು ನಿಯಂತ್ರಿಸುವುದು; ಸೈನ್ಯಕ್ಕೆ ಮಾರ್ಗದರ್ಶನ ಮಾಡುವುದು: ತಂತ್ರನಿಯಂತ್ರಣಂ ಬಿನದವೋಲಗ ಮಕ್ಕರಗೊಟ್ಟಿ ಕಾರ್ಯ ಸನ್ಮಂತ್ರಂ . . . ತ್ರಿಜಗದ್ಗುರು ಪ್ರಣತಿಯಿಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾವೆಯಂತೊಡವೊರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೭-೧೧೦). [ ತಂತ್ರ + ನಿಯಂತ್ರಣ ]

**ತಂತ್ರಪಾಲ, ತಂತ್ರಪಾಳ** (ನಾ). ೧. ಸೈನ್ಯಾಧಿಕಾರಿ; ಸೇನಾಪತಿ: ಪಡವಳ್ಳಿಚಣ ಅಡಪದ ರಾಯಣ ತಂತ್ರಪಾಲ ಕೇಸಿಯಣನಿಂತಿವರೊಳಗಾಗಿ ಸಾಸಿರ ಪರಿಗ್ರಹ ಸಹಿತಮಿಂದ್ರಕೇಸಿದೇವರಸರ್ಗ್ಗೆ ದ್ರವ್ಯನಿವೇದನಂ ಮಾಡಿ (ಸೌಇಇ. XX, ೧೪೪-೫೫; 1166). **ತಂತ್ರಪಾಳ**: ೧. ತಂತ್ರಪಾಳ ವಿಳ್ಳಯ್ಯ (ಎಇ. XV, ೭೫-೧೦; 1050); ಶ್ರೀಮತ್ತಂತ್ರಪಾಳ ಚಾವುಣ್ಣಮಯ್ಯಂ ಪ್ರಮುಖ ಪ್ರಧಾನರುಂ (ಸೌಇಇ. XX, ೩೮-೨೪; 1058); ಶ್ರೀಮತ್ ಹನ್ನಿರ್ವ್ವರ ಗಂಡ ದಾಸರಸನ ತಂತ್ರಪಾಳ ಹನ್ನಿರ್ವ್ವರು ಮುನ್ನೆಯರ ತಂತ್ರಪಾಳರ ಗಂಡ ಮಸಣಯ್ಯನ ತಮ್ಮ ಬೊಪ್ಪಣ (ಎಕ. VII, ಹೊನ್ನಾ. ೪೭-೫; 1130); ಜಯಕೇಸಿ ದೇವರುಂ ತಂತ್ರಪಾಳ ಚಟ್ಟಮಯ್ಯನಾಯಕನುಂ (ಸೌಇಇ. XX, ೦೦೭-೪೨; 1138). ೨. ರಹಸ್ಯಗಳ ಪಾಲಕ: ತಂತ್ರಪಾಳ ಎಂಬ ಪದವನ್ನು ಸಂಪಾದಕರು "Secretary or gaurdian of secrets" ಎಂದು ಅನುವಾದಿಸುತ್ತಾರೆ. ಎಂದರೆ, ರಹಸ್ಯಗಳ ಪಾಲಕ ಎಂದು ಅವರ ಅಭಿಪ್ರಾಯವಾಗಿರುವಂತೆ ಕಾಣುತ್ತದೆ (ಶಶಾಅ. ೨೫೪). [ ಸಂ. ]

**ತಂತ್ರಪಾಳ** 'ತಂತ್ರಪಾಲ' ನೋ.

**ತಂತ್ರಪ್ರಯೋಗ** (ನಾ). ಇಂದ್ರಜಾಲದ ಪ್ರದರ್ಶನ; ಯಕ್ಷಿಣೀವಿದ್ಯೆಯ ಪ್ರಯೋಗ : ಇಂದ್ರಜಾಲವ ನೋಳ್ಪರನಿಬರುಗಂ ದೃಢಾಚರಿದೋರ್ವುದದ ರೊಳಸಂದ ತಂತ್ರಪ್ರಯೋಗವೇತ್ತ್ರಗಳ್ಗರೊಡದಿಹುದೇ (ಗಗಿಜ. ೦೬-೩೦). [ ತಂತ್ರ + ಪ್ರಯೋಗ ]

**ತಂತ್ರಲಿಪಿ** (ನಾ). ಸಾಂಕೇತಿಕ ಲಿಪಿ : ಸ್ವಾಮಿ ಶಂಕರಾನಂದ ಎಂಬುವರು ಇಲ್ಲಿನ ಲಿಪಿ ತಂತ್ರಲಿಪಿಯೆಂದೂ, ಅದು ಏಕಾಕ್ಷರಗಳಿಂದ ರಚಿತವಾಗಿದ್ದು ಗುಪ್ತಭಾಷೆಯಲ್ಲಿ ಬರೆದ /ವೇದಗಳೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು (ದ್ರಾವಿ. ೨೪). [ ತಂತ್ರ + ಲಿಪಿ ]

**ತಂತ್ರವೇದಿ** (ನಾ). ತಂತ್ರಗಳನ್ನು ತಿಳಿದವನು ; ವೈದ್ಯ : "ದೋಷಜ್ಞಂ ತಂತ್ರವೇದಿ " (ವಸ್ತು.ಕೋ. ೭೪-೮೨). [ ಸಂ. ತಂತ್ರವೇದಿನ್ ]

**ತಂತ್ರಶಾಸ್ತ್ರ** (ನಾ). ೧. ಆಗಮಶಾಸ್ತ್ರ : ಆಗಮಶಾಸ್ತ್ರವನ್ನು (ತಂತ್ರ ಪ್ರಧಾನವಾದುದರಿಂದ) "ತಂತ್ರಶಾಸ್ತ್ರ"ವೆಂದೂ ಪರ್ಯಾಯನಾಮದಿಂದ ಕರೆಯುತ್ತಾರೆ (ಭಾರದ. ೬೯). ೨. ಯಂತ್ರಕಲಾಶಾಸ್ತ್ರ : ತೀವ್ರಗತಿಯಲ್ಲಿ ಬೆಳೆಯತೊಡಗಿದ ತಂತ್ರಶಾಸ್ತ್ರ (Technology) ಜನರ ಜೀವನ ವಿಧಾನವನ್ನೇ ಕ್ರಾಂತಿಕಾರಿಯಾಗಿ ಬದಲಾಯಿಸಿದುದಲ್ಲದೆ ಅವರ ಮನೋಧರ್ಮವನ್ನೇ ಬದಲಾಯಿಸಿತು (ಜುಕ್ಸಾರ. ೩೩, ೬೬೦೪). [ ತಂತ್ರ + ಶಾಸ್ತ್ರ ]

**ತಂತ್ರಶುದ್ಧಿ** (ನಾ). ಪ್ರಯೋಗದಲ್ಲಿರುವ ಶುದ್ಧತೆ; ವಿಧಾನದಲ್ಲಿ ದೋಷವಿಲ್ಲದಿರುವಿಕೆ: ಆ ಆಕ್ಷೇಪವು...(೪)ಸ್ವವಿರುದ್ಧವೆಂದೋ ಅಥವಾ (೫) ತಂತ್ರಶುದ್ಧಿ(Technical correctness)ಗೆ ವ್ಯತಿರಿಕ್ತವಾಗಿದೆಯೆಂದೋ ಇರುತ್ತದೆ (ಅರಿಶಾ. ೦೪೭). [ ತಂತ್ರ + ಶುದ್ಧಿ ]

**ತಂತ್ರಸಿದ್ಧಾಂತ** (ನಾ). ಪಾಂಚರಾತ್ರಾಗಮದಲ್ಲಿ ಪ್ರತಿಪಾದಿತವಾಗಿರುವ ನಾಲ್ಕು ವಿಧವಾದ ಸಿದ್ಧಾಂತಗಳಲ್ಲಿ ಒಂದು : ಪಾಂಚರಾತ್ರಾಗಮದಲ್ಲಿ –'ದಿವ್ಯಮಂತ್ರಸಿದ್ಧಾಂತ', 'ಆಗಮಸಿದ್ಧಾಂತ', 'ತಂತ್ರಸಿದ್ಧಾಂತ' . . . ಎಂದು ನಾಲ್ಕು ವಿಧ (ಭಾರದ. ೭೬). [ ತಂತ್ರ + ಸಿದ್ಧಾಂತ ]

**ತಂತ್ರಪಾಳ, ತಂತ್ರಾಳ** (ನಾ). =ತಂತ್ರಪಾಲ ೧ : ಹೆಮ್ಮಾಡಿನೃಪನ ನಚ್ಚಿನ ಜಯಸಂಸ್ಥಾನಕರ ಕಟ್ಟಿದಲಗದನಡಿಯರೆ ತಂತ್ರಪಾಳನಂ ತೊಂಡಮನ . . . ಅನ್ತೆನಿಸಿ ನೆಗಳ್ದ ತಂತ್ರಪಾಳ [ತೊಂ]ಡಮರಸಂಗನುಜಾತನಾಗಿಯುಂ (ಸೌಇಇ. XV, ೯೫-೦೮ : 12ನೆಯ ಶತ). **ತಂತ್ರಾಳ** : ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು . . . ಮಹಾಪ್ರಭು, ಸೇನಾಪತಿ, ತಂತ್ರಾಳ, ತಂತ್ರಿನಾಯಕ (ತುಳುನಾ. ೨೬೦). [ <ಸಂ. ತಂತ್ರಪಾಲ ]

**ತಂತ್ರಪಾಳಿಕೆ** (ನಾ). ತಂತ್ರಪಾಲನ ಅಧಿಕಾರ,-ಹುದ್ದೆ : ಅನ್ನಬ್ಬುರ ದಧ್ಯಕ್ಷಂ ಕುನ್ತಳಪತಿಯತ್ತ ಸುರಿಗೆವಿಡಿವಧಿಕಾರಂ ಸನ್ತತದ ತನ್ತ್ರಪಾಳಿಕೆ ಯನ್ನು ಮಹಾಮಾತ್ಯಪದವಿಗಿವು ಸಂಚಕರ (ಸೌಇಇ. XI-ii, ೦೭೪-೦೨ : 1126). [ ತಂತ್ರಪಾಳ + – ಇಕೆ ]

**ತಂತ್ರಹೂಡು** (ಕ್ರಿ). ಸಂಚುಮಾಡು ; ಉಪಾಯಮಾಡು: ಮುದುಕಿಯ ಆಸ್ತಿಪಾಸ್ತಿಯಲ್ಲ ಪರಭಾರೆಯಾಗುವಂತೆ ತಂತ್ರ ಹೂಡಿದ್ದ ವಕೀಲ (ಪುನರು. ೨೯). [ ತಂತ್ರ + ಹೂಡು₁ (<ಪೂಡು) ]

**ತಂತ್ರಾಧ್ಯಕ್ಷ** (ನಾ). ದಳಪತಿ ; ದಂಡನಾಯಕ : ತಂತ್ರಾಧ್ಯಕ್ಷನಂ ಬರಿಸಿ ಬೆಸಸುವುದು ಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್ (ಚಂದ್ರಪ್ರ. ೦೦-೦ ವ) : ಸಮರಪ್ರಸ್ಥಾನಭೇರಿಯಂ ಪೊಡೆಯಸೆಂಬುದುಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸಸುವುದುಂ (ರಾಜಶೇ.೬-೦೦ ವ). [ ತಂತ್ರ + ಅಧ್ಯಕ್ಷ ]

**ತಂತ್ರಾಲಯ** (ನಾ). ತಂತ್ರದ ನೆಲೆ ; ಉಪಾಯದ ನೆಲೆ : ವಿಷಯ ಲಗ್ನಾನಂದವಂ ಬೇರ್ಪಡಿಸಲಾದ ತಂತ್ರಾಲಯ ತೀರ್ಣಧಿಯ ಯತಿ ಸಿದ್ಧ ಸಂಸ್ಪೃಷ್ಟ ದೇವಾಲಯ (ಮಲಿದೇ. ೨೭-೯). [ ತಂತ್ರ + ಆಲಯ ]

**ತಂತ್ರಾವಾಪ** (ನಾ). ೧. ತಂತ್ರಗಳನ್ನು ಹೂಡುವಿಕೆ – ಪ್ರಯೋಗಿಸು ವಿಕೆ. ೨. [ರಾಜನೀ] ರಾಜ್ಯಪಾಲನೆಯ ಮತ್ತು ರಾಷ್ಟ್ರರಕ್ಷಣೆಯ ಚಿಂತೆ ; ಸ್ವರಾಷ್ಟ್ರ ಮತ್ತು ಪರರಾಷ್ಟ್ರ ವಿಚಾರ : ಮುಕ್ತಿಸಾಮ್ರಾಜ್ಯ ದೊಳತಿಪ್ರಾಜ್ಯ ಸಂಜನಿತ ನಿಸ್ಪೃಹನನವರತಕಲ್ಯಾಣ ಪರಿಮಿತದೊಳ್ ನಿರಂತರಂ ತಂತ್ರಾವಾಪ ಚಿಂತಾಂತರಾಯವ್ರಾಯ ಸುಖಲವದೊಳ್ ಮಹೀತಳರಾಜ್ಯದೊಳ್ ನಿಜಿಸುವುದುಂ ಮದುವೆ ನಿಜಿಸುವುದು ಮೆನಗಶಕ್ಯಾನುಷ್ಠಾನಂ (ಆದಿಪು. ೮-೮ ವ). [ ತಂತ್ರ + ಆವಾಪ ]

**ತಂತ್ರಾಳ** 'ತಂತ್ರಪಾಳ' ನೋ.

**ತಂತ್ರಿ₁** (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು ; ಆಗಮೋಕ್ತರೀತಿ ಯಲ್ಲಿ ಪೂಜಾವಿಧಿಯನ್ನು ನಡೆಸುವವನು: ಅವರು ಹಾಡುವ ಭೂತದ ಪಾಡ್ದನಗಳಲ್ಲಿ . . . ತಂತ್ರಿ, ಬ್ರಾಹ್ಮಣ, ಪುರೋಹಿತ, ಮೊದಲಾದವರು ಬರುತ್ತಾರೆ (ಜಾನಗೀ. ೫೪) ; ತಂತ್ರಿಯವರು ಕೂಡಾ ಹೇಳುತ್ತಾರೆ . . . ಆ ಕೊಳದ ಸುತ್ತಲೂ ಹದಿನಾರು ದೆವ್ವಗಳಿವೆ . .. ಎಂದು (ಪಡ್ಡಸ. ೨೭). ೨. ಯುಕ್ತಿಯನ್ನು ಬಲ್ಲವನು ; ಉಪಾಯಗಾರ : ಮಂತ್ರಿ ಬಸವನ ಕೇಳು ತಂತ್ರಿಗಳ ಮಂತ್ರಗಳು ಜಂತ್ರದಲಿ ತಲೆಯ ಕೊಟ್ಟಂತೆ (ಕನ್ನಜಾ. ೨೬೦) : ಅವನ ಮುಖಭಾವದಲ್ಲಿಯಾಗಲಿ ಅಥವಾ ಮಾತಿನಲ್ಲಿಯಾಗಲಿ ಅವನು ತಂತ್ರಿ ಎಂದು ಕಾಣುತ್ತಿರಲಿಲ್ಲ (ಮುಳಿಜಾ. ೧೫೯). [ ಸಂ. ತಂತ್ರಿನ್ ]

**ತಂತ್ರಿ₂** (ನಾ). ೧. ದಾರ ; ಎಳೆ ; ಸೂತ್ರ. ೨. ತಂತಿ ; ವೀಣೆ ಮೊದಲಾದ ವಾದ್ಯಗಳ ತಂತಿ : ನಯಮುಳವಟ್ಟ ಜೀವೆಯುಳವಟ್ಟ ಧರೋತ್ತರ ತಂತ್ರಮಪ್ಪ ತಂತ್ರಿಯೊಳನುವಾದಿಯಾಗೆ ಪೊಸ ಮೂರ್ಛನೆ ರಂಜಿಸೆ ಮಂದ್ರ ತಾರ ಗೀತಿಯ ಪವಣೊಪ್ಪೆ . . . ವೀಣೆಯಂ ಮಿಡಿದಳ್ಳೆರ್ದೆಯಂ ಮಿಡಿದಳ್ ಪ್ರಗೀತರಾ (ಶಾಂತಿಪು. ೯-೦೯೭) : ಸೇರಿಸಿ ತಂತ್ರಿಯುಂ ಸಂಚಿನಿಂ ಮೇಚನು ಬಾಜಿಸುತಿಸೆಯ ಭಾವೆಯರು (ಜೀವಂಧಾಂ. ೨೦-೦೩) : ಗಗನ ವೀಣಾತಂತ್ರಿಯಂ ಮಿಡಿದ ತೆರನಾಗಲ್ (ಶ್ರೀರಾಮಾ. ೦-೦೬) : ಸಹಸ್ರತಂತ್ರೀನಿಃಸ್ವನದಂತೆ . . . ಗುಡುಗಾಡುತ್ತಿದೆ ಗಗನದ ತುಂಬ ಪ್ರಣವಪ್ರವೀಣನ ನಾದಸ್ತಂಭ (ಅರಳು. ೭೭-೦). ೩. ಒಂದು ತಂತೀವಾದ್ಯ ; ವೀಣೆ : ವಾಣಿ, ಓ ಪ್ರಾಣವೀಣಾಪಾಣಿ, ಕವಿಯೆರ್ದೆಯ ರಸರಾಣಿ, ಮಿಡಿಯೆನ್ನಾತ್ಮತಂತ್ರಿಯಂ (ಶ್ರೀರಾಮಾ. ೦೪೨-೨). [ ಸಂ. ತಂತ್ರೀ ]

**ತಂತ್ರಿಕೆ** (ನಾ). ಒಂದು ಬಗೆಯ ಸಸ್ಯ ; ಅಮೃತಬಳ್ಳಿ : "ವತ್ಸಾದನೀ, ಛಿನ್ನರುಹಾ, ಗುಡೂಚೀ, ತಂತ್ರಿಕಾ . . . ಮಧುಪರ್ಣೀ – ೯ ಅಮೃತ ಬಳ್ಳಿ ಹೆಸರು" (ಸಿದ್ಧಾಂತಿ. ೦೦೫). [ ಸಂ. ತಂತ್ರಿಕಾ ]

**ತಂತ್ರಿಗ** (ನಾ). ೧. ಚಿತಾವಣಿ ಮಾಡುವವನು. ೨. ರಾಜತಂತ್ರವನ್ನು ಬಲ್ಲವನು : ನಾನು ವಾಲಗಕೆ ತಪ್ಪಿದದರಿಂದಿನ್ನು ತಂತ್ರಿಗನಪ್ಪುದದರಿಂ ರಾಜಗಪ್ರತಿಯಪ್ಪರಾರೇಗೈದರಾಗದು ಎನಲು (ಬಿಜ್ಜಪು. ೭೭-೪). [ ತಂತ್ರ + – ಇಗ ]

**ತಂತ್ರೋದಿತ** (ಗು). ತಂತ್ರದಲ್ಲಿ ಹೇಳಿರುವ ; ನೀತಿಶಾಸ್ತ್ರೋಕ್ತವಾದ : ಸಪ್ತ ರಾಜಾಪಾಲನೆಯ ನೆಗಳ್ಪುಪಾಯಂಗಳಂ ಸಾರ್ದು ಶಕ್ತಿಸ್ಫುರಣಂ ಕೈಗಣ್ಮೆ ತಂತ್ರೋದಿತ ಗುಣಗಣಮಂ ತಾಳ್ದವೋಘಂ ಪ್ರಭುತ್ವಂ ದೊರೆ ಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯಮಂ ಮಾಳ್ಪುದು (ರಾಜಶೇ. ೦-೦೩). [ ತಂತ್ರ + ಉದಿತ₂ ]

**ತಂಥಳಿಸು** 'ತಟತಟಿಸು' ನೋ.

**ತಂದನತಾನ** 'ತಂದಾನತಾನ' ನೋ.

**ತಂದನಾನ** 'ತಂದಾನತಾನ' ನೋ.

**ತಂದನೋತಾನಾನಿ** 'ತಂದಾನತಾನ' ನೋ.

**ತಂದನ್ನತಾ** 'ತಂದಾನತಾನ' ನೋ.

**ತಂದರಿ**, ತಂದಿರಿ, ತಂದುರಿ (ನಾ). ೧. ತೂಕಡಿಕೆ; ಜೊಂಪು. ೨. ದಣಿವು; ಬಳಲಿಕೆ ; ಆಯಾಸ : ತಂದ್ರಿ–ತಂದರಿ, ತಂದಿರಿ, ತಂದುರಿ (ಶಬ್ದಾನು. ೧೯೬ ವ್ಯಾಖ್ಯಾ). **ತಂದರಿ :** ಮೇಲಿನ ಪ್ರಯೋಗವನ್ನು ನೋಡಿ. **ತಂದುರಿ :** ಮೇಲಿನ ಪ್ರಯೋಗವನ್ನು ನೋಡಿ.

[ <ಸಂ. ತಂದ್ರಿ, ತಂದ್ರೀ ]

**ತಂದಲ್**, ತಂದಲು$_1$ (ನಾ). ೧. (ನೀರಿನ) ಹನಿ; ತುಂತುರು : "ಸೀವರ ಮೆಂದುಂ ತಂದಲೆಂದುಂ ಶೀಕರಂ" (ಶಶಸಾ. ೬–೧೯೩) : "ಸೀವರಂ ತಂದಲನೆ ಜಲಕಣಂ" (ಕಬ್ಬಿಕ. ೦೨) ; ಗಲ್ಲಲನೊಕ್ಕ ಪಾಲ ತಂದಲ್ಗಳಿವಾವಗಂ ಮಡಿಯ ನೀರ್ ಕಡುವೆಳ್ಪನೊಳೊಂದೆ (ಲೀಲಾವ. ೫–೫೭) : ಪಳಿದಾಗಳ್ ಪನಿಪುಲ್ಲ ಬಿಂದುಗಳ ತಂದಲ್ . . . ನೆಟಿ ಸಾರುತ್ತಿರೆ (ಕುಸುಮಾ. ೭–೦೩) ; ಚಂದ್ರಮರೀಚಿಯಂತೆ ತನಿಮಾವಿನ ಪಣ್ಗಳ ತಂದಲಂತೆ . . . ಸೋಮ ರಾಜೇಂದ್ರನ ಕಬ್ಬಥಿಂಪು (ಕಾದ್ಯಟ. ೦–೩೨); ಕನ್ನ ಕಂಬನಿಯ ತಂದಲಿಂದತಿ ಸ್ನೇಹಲತೆಯಂ ಬೆಳೆಯಿಸಿದಳ್ (ಅನಂತು. ೬–೨೭ ಪ) ; ಮುಗಿಲ ಪೊಳಿಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗ ಲಂಗೈಸುವ ಚಾದಗೆಯ ಮಱಿಗಳುಮಂ (ಕಬ್ಬಿಗಾ. ೨೩೯) ; ತನಿರಸದ ತಂದಲ್ ಸುರಿವರನೇಱಿಲ ಗೊಂಚಲಂ ಕಟ್ಟಿದಿರೊಳ್ ಕಂಡು (ಹಾಮೂಕ. ೫೯–೬). ೨. ಬಿಟ್ಟೂಬಿಡದೆ ಸುರಿಯುವ ಮಳೆ ; ಜಡಿಮಳೆ : "ಸೋನೆ ಯೊಳ್ ತಂದಲಕ್ಕುಂ" (ಕರ್ಣಾನಿ. ೫೧) ; ಸೋನೆಯಿಂ ಸರಿಗಳಿಂ ತಂದಲ್ಗ ಳಿಂದಂದು ಭೂತಳಮೇಕಾರ್ಣವಮಾಗೆ (ಆದಿಪು. ೦೩–೫೯) ; ಎಳೆನೀರ ತಂದಲಂ ಕಱಿವೆಳೆದಂಗು (ಎಕ. XI, ದಾವಣ. ೩೫–೩೭; ಸು. 1160) ; ತಂದಲ್ ಸೋನೆ ನಟ್ಟ ಬಡಪಮನಲ್ಸುರಿದುವು ಬಿಡದೆ ಮುಗಿಲ್ಗಳಿರುಳುಂ ಪಗಲುಂ (ಜಗವಿ. ೯–೩೨) ; ಉತ್ತಮವನಂ ರಾಮಣೀಯಕ ತರುಗಳಿಂ . . . ಜೇನ್ನೆಯ್ಯ ತಂದಲ್ಗಳಿಂ (ವೀಕ್ರಪು. ೩–೯–೭). 'ಸೋನೆದಂದಲ್' ಪರಾ. **ತಂದಲು$_1$:** ೧. ತಂಬೆಲರ ಮೊಗಸಿರಿಯ ತಂದಲಿನ ಮೈದೊಡವು . . . ಕಂಗೊಳಿವಂತೆ ಮಲ್ಲಿಗೆಗಳು (ಪಂಕಾರಾ. ೦–೪–೧೪). ೨. "ಮಳೆ, ಸರಿ, ಸರವು . . . ಒದ್ದೆ, ತಂದಲು, ತುಂತುರು" (ಕಂಸುಹು. ೮೯).

**ತಂದಲು$_1$** 'ತಂದಲ್' ನೋ.

**ತಂದಲು$_2$** (ನಾ). ಸೇವಕ ; ದಾಸ (?) : ಮೂರಹರ ನಿಮ್ಮ ಪರಿಚಾರಕರ ದಾಸಿಯರ ತಂದಲೆನಗಿನಿತುಚಿತವೇ (ಕೊಟ್ಟೂರಬ. ೦–೭೦). 'ತಂಡಾಲಯು' ಪರಾ. [ ? ]

**ತಂದವೂರ್** (ನಾ). ಒಂದು ಊರಿನ ಹೆಸರು ; ಬೆಳ್ಗಹೆಯಬ್ಬಕ್ಕಿಡೆ ನಾಡೆಬ್ಬಿತ್ತು ತುಂದವೂರ ಪನ್ನೆರಡು ಗೆದೆಯು ಪನ್ನೆರಡು(ಎಕ. VIII, ಸೊರಬ. ೯೭೭–೦೩ ; ೮೯1). [ ತಂದ ? + ಊರ್ ]

**ತಂದಸಿ** 'ತಂಡಸು' ನೋ.

**ತಂದಾನತಾನ**, ತಂದನತಾನ, ತಂದನಾನ, ತಂದನೋತಾನಾನಿ, ತಂದನ್ನತಾ, ತಂದಾನತಾನಾನ, ತಾಂದನಿತಾನೊ (ನಾ). ಜಾನಪದ ಹಾಡಂಗಳಲ್ಲಿ ಬರುವ ಒಂದು ಪಲ್ಲವಿ ; "ದಂರುಗಮುರಗಿಯರ ಸೊಲ್ಲು" (ಜಾನಕೋ. ೩೯). **ತಂದನತಾನ :** (+). **ತಂದನಾನ :** (+). **ತಂದನೋತಾನಾನಿ :** ತಂದನೋತಾನಾನಿ ತಂದನೋತಾನಾನಿ ತಾನು ತಂದನು ತಂದೆ, ನಾನಿ ತಂದನುತಾನಿ ತಾನುತಂದನು ತಂದೆ ಶಿವ್ನೀಗೆ ಶರಣೊ (ಹುಟ್ಟಿಹ. ೩೦). **ತಂದನ್ನತಾ :** ತಂದನ್ನತಾಯೆಂದು ಕೈಲಿ ಕಿನ್ನರಿ ಧರಿಸಿ ಅಂದವಾಗಿ ಶ್ರೀಹರಿಯ ಮುಂದೆ ಕುಣಿವ ಚರಣ (ವಿದಾಳ್ವ. ೨೭–೦). **ತಂದಾನತಾನಾನ :** (+). **ತಾಂದನಿತಾನೊ :** ಕಿನ್ನೂಡಿ ಮೇಲೆ ಕಿರುಗೆಜ್ಜೆ–ತಾಂದನಿತಾನೋ (ಜಾಪದ. ೨೦).

[ ದೇ.೫ ತುಳು. ತಂದನ; ತೆಲು. ತಂದನತಾನ, ತಂದಾನತಾನ ]

**ತಂದಾನತಾನಾನ** 'ತಂದಾನತಾನ' ನೋ.

**ತಂದಿರಿ** 'ತಂದರಿ' ನೋ.

**ತಂದುರಿ** 'ತಂದರಿ' ನೋ.

**ತಂದೆ** (ನಾ). ೧. ಅಪ್ಪ ; ಜನಕ : ತನ್ದೆಯ ತಾಯ್ಮರಾ ಸನ್ನ್ಯಾನಮ(ಂ) ನುಳಿದು ಬಿಸುಟೋಂ (ಸೌಇಇ. XI-I, ೧೦–೫ ; ೮೬೬) ; ತಾಯ್ಗಂ ತಂದೆಗ ಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದ ಱಂದಮಾ ಕೂಸಿಂಗೆ . . . ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆ ದಿಟ್ಟೊಡೆ (ವಡ್ಡಾರಾ. ೭೩–೧೭) ; ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ . . . ತನ್ನೊಳಮರ್ಕೆವೆತ್ತುದು (ಆದಿಪು. ೬–೯೩) ; ಹಿತಮಂ ತೋಱುವನಾತ್ಮಬಂಧು ಪೊರೆವಾತಂ ತಂದೆ (ಸೋಮೇಶ. ೮). ೨. ಹಿರಿಯರನ್ನು ಕುರಿತು ಭಕ್ತಿ ಗೌರವಗಳಿಂದ ಹೇಳುವ ಮಾತು: ತಂದೆ ಚಿತ್ತೈಸುವುದು ಕಿಂಕರನ ಬಿನ್ನಪಂ (ನಂಚಿಶ. ೦–೭೩) ; ಎಮ್ಮಂತಪ್ಪ ಪಾಱಗಳಿಗೊಗೆವನೇ ತಂದೆಯೆನಲ್ (ಸಿದ್ಧರಾ. ೦–೨೯) ; ಗಂಗಾವರಕುಮಾರ ದ್ರೋಣ ಕೃಪರೀ ಸಱಗ ಬಿಡಿಸಿರೆ ತಂದೆಗಳಿರೆಂದೊಱಲಿದಳು ತರಳೆ (ಕುಮ್ಯಾಸ. ೦೪–೦೦೯). ೩. ಕಿರಿಯರನ್ನು ಕುರಿತು ವಾತ್ಸಲ್ಯದಿಂದ ಹೇಳುವ ಮಾತು : ಬಾರೆಲೆ ತಂದೆ ಬಾರರಸ ಬಾ ಪೊರೆವಾಳ್ದನೆ (ಕಾದಂಪೂ. ೩೬೦); ಬಾಲಲಿಂಗವೆ ಬಾರ ತಂದೆ (ಬಸಪು. ೪೭–೨೯) ; ತಂದೆ ನಿನಗೆನ್ನಲ್ಲಿ ಋಣಸಂಬಂಧ ಸವೆದುದೆ ಶಿವಶಿವಾ ತಾ ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುಮ್ಯಾದ್ರೋ. ೮–೨೦). ೪. ಹೆಸರಿನ ಮುಂದೆ ಗೌರವಸೂಚಕವಾಗಿ ಬಳಸುವ ಶಬ್ದ. ಉದಾ : ಅಱುವಿನ ಮಾರಿತಂದೆ.

**ತಂದೆವಿರ್** (ಬಹುವ) : ವಿರ್ಗೆ–ತಂದೆವಿರ್, ತಾಯ್ವಿರ್, ಸೊಸೆವಿರ್ (ಶಬ್ದ. ೯೭ ಪ್ರಯೋ). **ತಂದೆಯ ತಂದೆ** = ೧. ಅಜ್ಜ ; ತಾತ ; ಪಿತಾಮಹ : "ತಾತ – ತಂದೆಯ ತಂದೆಗೂ . . . ಪಿತಾಮಹ ಎಂಬ ಹೆಸರು " (ನಾನಾರ. ೨೩ ಟೀಕ). ೨. ಬ್ರಹ್ಮ : "ಅಂಚೆದೇರು . . . ತಂದೆಯ ತಂದೆ, ಅರಲಿಚಂ, ನಾಲ್ಮೊಗಂ, ತಾವರೆವಸೆಯಂ – ಈ ೮ ಬ್ರಹ್ಮಂಗೆ ಪೆಸರ್" (ಶಶಸಾ. ೪೮–೦೫) ; "ಪೊಂಬೊಡೆಯಂ . . . ಬೊಮ್ಮ ತಂದೆಯ ತಂದೆ ವಿಸುಪ ತಾವರೆಗಂದನು ತಾಂ ಬ್ರಹ್ಮಗೆಸೆವ ನಾಮಂ " (ಕಬ್ಬಿಕ. ೯). **ತಂದೆಯ ತಂದೆಯಿಲ್ಲದಂ** = ತಾತನಿಲ್ಲದವನಂ ; ವಿನಾಯಕ : "ಕರಿ ಮೊಗಂ, ಇಲಿದೇರಂ . . . ತಂದೆಯ ತಂದೆಯಿಲ್ಲದವಂ–ಈ ೭ ವಿನಾಯುಕಂಗೆ ಪೆಸರ್ " (ಶಶಸಾ. ೦–೪) : " ಬಿಜ್ಜೆವಳನೆಡರ್ಗೇಡಿ ಮೋಣೆಲರುಣಿವಸಿಱನು ತಂದೆಯ ತಂದೆಯಿಲ್ಲದಂ[ತಾತಂ. ತಂದೆಯಯ್ಯನಿಲ್ಲದವಂ] . . . ಎನೆ ವಿನಾಯುಕನ ನಾಮಂ ", (ಕಬ್ಬಿಕ. ೫).

[ ದೇ.೫ ತಮಿ. ತನ್ತೈ; ಮಲ. ತನ್ದ; ತೆಲು. ತಂಡ್ರಿ, ತಂಡಿರಿ; ಪರ್ಜಿ. ತೆಂದ್; ಕುಇ. ಕುವಿ. ತಂಜ ]

**ತಂದ್ರ** (ಗು). ೧. ದಣಿದ ; ಬಳಲಿದ. ೨. ಸೋಮಾರಿಯಾದ ; ಮೈಗಳ್ಳತನದಿಂದ ಕೂಡಿದ. (ನಾ). ೩. ಮೈಗಳ್ಳತನ ; ಸೋಮಾರಿತನ; ಜಡತೆ : ಮಹೇಂದ್ರಂ ದಧೀಚಿಯೆಡೆಗಂ ತಂದ್ರಮಂನುಳಿದೆಯ್ದೆ ವಂದಿಸುತ್ತೆ ಬಳಿಕಂ (ಜಾಲಾಸ್ಯ. ೦–೨–೪೨). [ ಸಂ. ]

**ತಂದ್ರತೆ** (ನಾ). ೧. ಬಳಲಿಕೆ; ದಣಿವು. ೨. ಆಲಸ್ಯ ; ಜಡತೆ ; ಮಾಂದ್ಯ : ತಳೆದ ಸುಮನೋದಾಮಂ ನೀರೋಡಿ ಬಾಡಿದುದಾಗಳಾಗುಳಿಯನೊಳ ಕೆಯ್ಯಾಶ್ಯಾಸ್ಯಾಂಭೋರುಹಂ ನಿಜದೇಹದುಜ್ಜ್ವಳಿಕೆ ಮಸುಳ್ದೈತಂದು ದೊಂದು ತಂದ್ರತೆ ಚಿತ್ತಮಂ ಬಳಸಿದುದು (ಚಂದ್ರಪು. ೯–೭೭).

[ ಸಂ. ತಾದ್ರುತಾ ]

**ತಂದ್ರಾವಸ್ಥೆ** (ನಾ). ಸೋಮಾರಿತನ ; ಜಡತೆ : ಅತ್ತ ದೇಶವೂ ಮೂಕ–ಮೂಢ – ತಂದ್ರಾವಸ್ಥೆಯಿಂದ ಎಚ್ಚೆತ್ತು . . . ತನ್ನ ಭಾವನೆಗಳನ್ನು ವ್ಯಕ್ತಗೊಳಿಸಲು ತೊಡಗಿತು (ಮಹಾಯೋ. ೮೭). [ ತಂದ್ರ + ಅವಸ್ಥೆ ]

**ತಂದ್ರಾಸಿ**, ತಂಡರಸಿ (ನಾ). ಒಂದು ಬಗೆಯ ಗಿಡ: ತಂದ್ರಾಸಿ, ತಂಡರಸಿ, ತನಸಿವೆಳೆ (ಚ್ಕ್ಪಿಗಿ. ೯೦-೮೦೭): ಸಂಕೀರ್ಣ: . . . ಹುರಗಲು, ಕಂಗೊಂದಿ, ತಂದ್ರಾಸಿ, ವುುಕ್ಕರಿವೆ (ಸಮ್ಯಸು. ೨೩೪). **ತಂಡರಸಿ** : ಮೇಲಿನ 'ವೈಟಿಗಿ' ಪ್ರಯೋಗವನ್ನು ನೋಡಿ. [ ? ]

**ತಂದ್ರಿ** (ನಾ). ೧. ಆಲಸ್ಯ; ನಿರುತ್ಸಾಹ; ಜಡತೆ: ಸಂದ್ಯತ್ನ ವಾತ್ಮವಾತ್ಮಕೆ ಬೇರೆ ಕರಣದಿಂ ತಂದ್ರಿ ಬಿಡೆ ದೊರೆವುದದು (ಮಂಕುಳ. ೬೯೩). ೨. ನಿದ್ದೆಯ ಮಂಪರು; ಜೊಂಪು: ಲಕ್ಷ್ಮಣನನೆಬ್ಬಿಸಿದನಾತನುಂ ತಂದ್ರಿಯಂ ಬಿಟ್ಟೇಳಲನಿಬರುಂ ತೊರೆಯ ಶಿವಸಲಿಲದೊಳ್ ಮೊಗಂ ದೊಳೆದು ಮುಂಬರಿದರ್ (ಶ್ರೀರಾಮಾ. ೦೩೯-೯೦೦): ಓದು ಓದುತ್ತಿರುವಾಗಲೇ ನಿದ್ರೆಯ ತಂದ್ರಿ ಕಣ್ಣಿಗೆ ಸೋಂಕಿಹೋಗುತ್ತಿತ್ತು (೪ಮುಕ. ೦೦೦). ೩. ಗುಂಗು; ತಲ್ಲೀನತೆ: ಬಾಬು ವಿಚಾರತಂದ್ರಿಯೊಳಗಿಂದ ಹೊರಬಿದ್ದು . . . ನೋಡಿದನು (ರಕ್ತಕ್ಷ. ೦೩೦); ಮಧುಕರನು ತಂದ್ರಿಯಲ್ಲಿಯೇ ಕುಳಿತಿದ್ದನು (ಕೃತಕೃ. ೦೦೦). [ ಸಂ. ]

**ತಂದ್ರಿತ** (ನಾ). ಮಗ್ನನಾದವನು; ತಲ್ಲೀನನಾದವನು: ನೀವೂ ವಿಚಾರದಲ್ಲಿ ತಂದ್ರಿತರಾಗದೆ ಇರಲಾರಿರಿ (ನೀಕಿಸ. ೮). [ ಸಂ. ]

**ತಂದ್ರೀಭೂತ** (ಗು). ಜಡವಾದ; ಮಂದವಾದ; ಚಟುವಟಿಕೆಯಿಲ್ಲದ: ಭರತಂ ವಿಷಾದಭರ ತಂದ್ರೀಭೂತಚೇತಸನಾಗಿರ್ಪುದುಂ (ಅಂರಾಮಾ. ೭-೦೦೨ ಐ). [ ಸಂ. ]

**ತಂದ್ರೆ** (ನಾ). ೧. ಆಲಸ್ಯ; ಜಡತೆ: ಸನ್ನಿಪಾತಜ್ವರಲಕ್ಷಣಂ ತಂದ್ರೆ, ನಿದ್ರಾಭಂಗ . . . ಗಂಟಲನೋವು (ಸಕಪ್ರ. ೯೭). ೨. ಮಗ್ನತೆ; ಗುಂಗು: ಈ ತಂದ್ರೆಯು ಅವರನ್ನು ಮರುಳುಗೊಳಿಸಿತು (ಮಾಶಿಕೋ. ೯೩). [ ಸಂ. ತಂದ್ರಾ ]

**ತಂಪಗಿ** (ಕ್ರಿ). ತಂಪು ಆವರಿಸು,–ವ್ಯಾಪಿಸು: ತಿಳಿಗೊಳನ ತಂಪಗಿವ ತೆಕ್ಕೆ ೧ ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಕೆಸರದಲಿ ತೀಡಿ ೧ದು ತಂಗಾಳಿ (ತೊರರಾ. ೨-೭-೩). [ತಂಪು$_2$(<ತಣ್ಪು$_2$)+ಅಗ್ಗಿ$_1$]

**ತಂಪಿಗ** (ನಾ). ತಂಪನ್ನು ಉಂಟುಮಾಡುವವನು; ಹಿತವನ್ನುಂಟು ಮಾಡುವವನು: ನೆಲವೊಲೆಗಳಂ ತಡವುತೊತ್ತೊ ತಳಿರ್ಗೈಯ್ಯ ತಂಪಿಗ ವಿರಹವುಂ ತವಿಸಿ ನೆರೆಯೊ ಹದಗಾಳಿ (ಜಿಬಿಪು. ೦೯-೩೭). [ ತಂಪು$_2$ (<ತಣ್ಪು$_2$) + –ಇಗ ]

**ತಂಪಿಡಿ** 'ತಣ್ಪಿಡಿ' ನೋ.

**ತಂಪಿಸು** 'ತಣ್ಪಿಸು' ನೋ.

**ತಂಪು$_1$** (ಕ್ರಿ). ೧. ಶಾಖವನ್ನು ಕಳೆದುಕೊಳ್ಳು; ತಣ್ಣಗಾಗು: ಬಿಸಿಲು ತಂಪುವವರೆಗೆ ಹೊರಗೆ ಹೋಗಬೇಡ (ರೂಢಿ). ೨. (ದುಃಖ ಮೊದಲಾದ ಭಾವನೆಗಳ) ಆವೇಗ ಕಡಮೆಯಾಗು: ಮಂದಿ ಸುಳಿಯದೊಂದೆ ಗುಡಿಲು; ತೋವು, ನೆರೆಯೊಳು; ನೆರಳು ಸಾವತನಕ ನನ್ನ ನೋವು ತಂಪಲು (ಇಂಗೀತ. ೯೫-೦೪). [ <ತಂಪು$_2$ ]

**ತಂಪು$_2$** 'ತಣ್ಪು$_2$' ನೋ.

**ತಂಪುಕನ್ನಡಕ** (ನಾ). ಬಿಸಿಲಿನ ಚುರುಕು ಕಣ್ಣುಗಳಿಗೆ ತಗಲದಂತೆ ತಂಪಾಗಿಡುವ ಕನ್ನಡಕ: ಕಣ್ಣಿಗೆ ಬಿಸಿಲಿನ ತಂಪುಕನ್ನಡಕವನ್ನು ಹಾಕಿದ್ದರಿಂದಂತೂ ಯಾರಿಗೂ ನನ್ನ ಗುರುತು ಹತ್ತಲಿಲ್ಲ (ಮೋದಿದು. ೨೦೭). [ ತಂಪು$_2$ (<ತಣ್ಪು$_2$) + ಕನ್ನಡಕ$_2$ ]

**ತಂಪುಗೈ** 'ತಣ್ಪುಗೆಯ್' ನೋ.

**ತಂಪುಗೊಳ್** (ಕ್ರಿ). ತಾಪವನ್ನು ಆರಿಸಿಕೊಳ್ಳು; ತಣ್ಣಗೆ ಮಾಡಿಕೊಳ್ಳು: ಹರನುರಿಗಣ್ಣಿಂದೆ ಬೆಂದ ಸಂತಾಪ ಹೀವರಕುಚಾನ್ವಿತೆಯರ ತಾಪ ಸ್ಮರ ನಿನ್ನ ಮಯ್ಯೊಳಗಿದೆ ತಂಪುಗೊಳ್ಳೆಂದು ತರಳೆ ನೂಂಕಿದಳು ತಾಕ್ಕೊಳದೆ (ಮೋಹತ. ೦೪-೭೮). [ ತಂಪು$_2$ (<ತಣ್ಪು$_2$) + ಕೊಳ್$_1$ ]

**ತಂಪುತೀಡು** (ಕ್ರಿ). ತಣ್ಣಗೆ ಬೀಸು; ತಂಪಾಗಿ ಸುಳಿ: ಇಂದಿರನ ದೆಸೆಗೆಂಪು ಮಾಡೆ ಕತ್ತಲೆಯೋಡೆ ಮಂದಾನಿಲಂ ತಂಪುತೀಡೆ (ಜಿಬಿಪು. ೪-೭). [ ತಂಪು$_2$ (<ತಣ್ಪು$_2$) + ತೀಡು$_1$ ]

**ತಂಪುವಡೆ** 'ತಣ್ಪುವಡೆ' ನೋ.

**ತಂಪುವೆಟ್ಟು** (ನಾ). ಹಿಮವತ್ಪರ್ವತ; ಹಿಮಾಲಯ: ತಂಪುವೆಟ್ಟದ ಬಡಗಭಾಗದೊಳಗೊಪ್ಪುವುದು ಕಿಂಪುರುಷವರ್ಷಂ (ಜಿಬಿಪು. ೦೩-೦೭). [ತಂಪು$_2$ (<ತಣ್ಪು$_2$) + ಬೆಟ್ಟು (<ಬೆಟ್ಟು$_2$) ]

**ತಂಪುವೆಟು** 'ತಣ್ಪುವೆಟು' ನೋ.

**ತಂಪುಹೊತ್ತು** (ನಾ). = ತಂಪೊಟ್ಟು: ಎಂಥ ಪುಣ್ಯಾತ್ಮ! ಆತನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ). [ ತಂಪು$_2$ (<ತಣ್ಪು$_2$) + ಹೊತ್ತು$_2$ (<ಪೊಟ್ಟು) ]

**ತಂಪುಳಿ** (ನಾ). "ಕಾಯಿಸದ ಕಬ್ಬಿಣಕ್ಕೆ ಆಕಾರ ಕೊಡಲು ಉಪಯೋಗಿಸುವ ಉಕ್ಕಿನ ಅಥವಾ ಕಬ್ಬಿಣದ ಚಾಣ: ತಂಪುಳಿ" (Cold-chisel. ಇಂಕನಿ.). [ ತಂಪು$_2$ (<ತಣ್ಪು$_2$) + ಉಳಿ$_5$ ]

**ತಂಪೆರೆ** 'ತಣ್ಪೆಱೆ' ನೋ.

**ತಂಪೆಸೆ** (ಕ್ರಿ). ತಂಪಾಗಿ ಶೋಭಿಸು,–ಕಂಗೊಳಿಸು: ತಂಪೆಸೆವ ತಣ್ಣೆಲ ತಾಣಂ (ಸವಮೋ. ೪-೨೨). [ ತಂಪು$_2$ (<ತಣ್ಪು$_2$) + ಎಸೆ$_2$ ]

**ತಂಪೇರು** 'ತಣ್ಪೇಱು' ನೋ.

**ತಂಪೇಱು** 'ತಣ್ಪೇಱು' ನೋ.

**ತಂಪೊಟ್ಟು** (ನಾ). ತಂಪಾದ ಹೊತ್ತು; ಸಂಜೆಯ ಹೊತ್ತು; ಸಾಯಂಕಾಲ: ಈ ಪೊಟ್ಟು ತಂಪೊಟ್ಟು ಪೂವಿನ ಪೊಟ್ಟೆಂಬಿನಮಾಯ್ತು ಧಾರಿಣಿಗೆ ಭಾಸ್ಕರಮಂಡಲಂ ಕುಂಡಲಂ (ಸೂಕ್ತಿಸು. ೮-೭). [ ತಂ$_1$ (<ತಣ್$_3$) + ಪೊಟ್ಟು ]

**ತಂಬಟ**, ತಂಬಟೆ, ತಂಬಟ್ಟು, ತಪಟೆ, ತಪ್ಪಟ, ತಪ್ಪಟೆ, ತಬಟೆ, ತಮಟೆ, ತಮ್ಮಟ$_1$, ತಮ್ಮಟೆ, ತಮ್ಮಟ್ಟೆ (ನಾ). ಒಂದು ಬಗೆಯ ಚಪ್ಪಟೆಯಾದ ಚರ್ಮವಾದ್ಯ; ಹಲಗೆ: ಬಿಳ್ಳಿಪ ಪಟಯಿಗೆ ಸೂಳೈಪ ತಂಬ[ಹಾಕಾಂ. ಮ್ಮ]ಟಂ (ವರ್ಧಪು. ೮-೫೦): ಬೀಸುವ ಚಾಮರದ ಪೊಯ್ಯ ತಂಬಟದ . . . ಸರ್ವಸಂಭ್ರಮದ ನಡುವೆ ಸಕಲ ಜನದಾನಂದರಸಂ ಮಡುಗಟ್ಟೆ (ಸಂಬಿರ. ೮-೫೫); ತಾಟಿಸುವ ತಂಬಟದ . . . ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಡುವಡಿಸೆ (ಕಣ್ಮಕಾ. ೨೫೦): ತುಡುಕಿದವು ತಂಬಟದ ದನಿ ಜಗದಡಕಿಲನು (ಕುಪ್ಯಾದಕ್ಷೀ. ೦-೯೭): ಭೇರಿ ತಂಬಟ ಬೊಂಬುಳಿ ಬುರುಗು ಡಿಂಡಿಮದ ಮುಂಬರಿದೆಸೆವ ರವಗಳಾಕಾಶವ ತುಂಬಿದುವು (ಕಂಸವಿ. ೮-೦೯). **ತಂಬಟೆ**: ಭೇರಿ ತಂಬಟೆ ನಿಸ್ಸಾಳ ಕಹಳೆಗಳ ಭೂರಿ ನಿನದ (ಅಂಜಕ. ೫-೯೯): ತಂಬಟೆ ಡೋಳು ಚಂಬಕವಟೆ . . . ಕಹಳೆಗಳ ದನಿಯ ಬೆಂಬಳಿ (ಕುರಾಹಾಂ. ೦೦-೩೭); ಪಟೆಯ ಪೆರ್ಗಾಳೆಯ ಪಳಹದ ಕೊಟುಲ ತಂಬಟೆಯ . . . ಭೇರಿಯ ಭೂರಿ ನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಶ್ವ. ೫೦-೦): ತಂಬಟೆಯ ಹೊಯ್ದು ಮೈಮರೆತವರು ಹಲರು (ವಿಶೀಗೀ. ೨೫-೪). **ತಂಬಟ್ಟು**: "ಆನಕ" (ನಾಚಿರಾ. ೬). **ತಪಟೆ**: ಕರಿನ ದುಂದುಭಿ ತಪಟೆ ತಾಳ ಮದ್ದಲೆಗಳುಂ . . . ದಿಕ್ತಟಗಳೊಳ್ಳೊಳಗುತಿವೆ (ಅರ್ಜಾವಿ. ೨೯-೩೦). **ತಪ್ಪಟ**: ಕೊಂಬು ಕೊಳಲು ತಾಳ ತಪ್ಪಟ ಭೇರಿ ಸಂಭ್ರಮದಿಂದ ವೃಂದಾವನ ಸೇರಿ (ಪ್ರಸಧಾ. ೨೩-೪). **ತಪ್ಪಟೆ**: ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದೆ (ರಾಮವಿ. ೭-೦೨): ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ ಸರ್ವಶಯನ ರಂಗಧಾಮನ ತೇರು ಬಂದೊಪ್ಪಿತು ಮುನ್ನಿನ ಸ್ಥಳದೆ (ಕಂಸವಿ. ೨೫-೦೦೦). **ತಬಟೆ**: ತಬಟೆ ಕಾಸಿ ಸಿದ್ಧ ಮಾಡಿಕೊಂಡರು (ರೂಢಿ). **ತಮಟೆ**: ತಮಟೆಯನ್ನು

ಕಾಯಿಸಿ ಹೆಗಲಿಗೆ ಹಾಕಿಕೊಂಡು (ಹುಟ್ಟಿಹ. ೧೯) : ಎದೆ ತಮಟೆಯಂತೆ ಬಡಿಯತೊಡಗಿತು (ಸಿಡಿಲು. ೮೭). **ತಮ್ಮಟ್ಟ₁:** ಪೊಯ್ವ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ನೆರೆದುದು ಚಾತುರಂಗ ಬಲ (ಇಹರ. ದೇ. ೩೭-೨೧) ; ಸೂಳೈಪ ತಮ್ಮಟಂಗಳ . . . ಸಂಭ್ರಮದ ಸೌರಂಭದಿಂ ವಿಜಾಟ ನಡೆದನು (ಸಿದ್ಧರಾ. ೬-೨೧) ; ತಮ್ಮಟವೆಂಬ ಹಲಿಗೆ ಶಂಖವೆಂಬ ಧವಳ . . . ಜಯಘಂಟೆಯೆಂಬ ಜಾಗಟೆ ಇತ್ತೆಬದ ಪಂಚಮಹಾವಾದ್ಯಂಗಳಂ (ವಿವೇಕ. ೨೩೭); ಪಟಹ ತಮ್ಮಟ ಢಕ್ಕ ಡವುಡೆ ಕಹಳಾ ಸಮುತ್ಕಟನಾದವಳ್ಳಿಯಿಂ (ಕಲಶ. ೧೬-೧೩). **ತಮ್ಮಟೆ:** "ಆನಕಃ, ಪಟಹಃ—೨ ತಮ್ಮಟೆ ಹೆಸರುಗಳು" (ಸಿದ್ಧಾಂತಿ. ೫೪) ; ಮನಸ್ಸಿನಲ್ಲಿ ಬಂದರೆ . . . ಹದಿನೇಳುನೂರು ಡೋಳ್ಳು, ನಗಾರಿ, ಹಲಿಗೆ, ತಮ್ಮಟೆ, ಶಂಖ, ತುತ್ತೂರಿಗಳನ್ನು ಬಾರಿಸಬಹುದು (ಕುರಿಹಿಂ. ೦೯೫). **ತಮ್ಮಟ್ಟೆ:** ಟೀಜಿದವು ಕಹಳೆಗಳುಂ ತಮ್ಮಟ್ಟೆ ಭೇರಿ ನಿನಾದ (ರಾಮುಕ. ೨೩-೧).

[ದೇ. ತಮಿ. ತವ್ವಟ್ಟ, ತಪ್ಪಟ್ಟ, ತಪ್ಪಟ್ಟೈ; ಮಲ. ತಮ್ಮಿಟ್ಟ, ತಕ್ಕಿಟ್ಟ; ತುಳು. ತಂಬಟ, ತಂಬಟೆ, ತಂಬಡ, ತಬಿಟೆ, ತಮಟೆ, ತಮ್ಮಟೆ : ತೆಲು. ತಮ್ಮಟ, ತಪ್ಪೆಟ ; ನಾಯ್ಕಿ. ತಪ್ಪಟೆ, ತಪ್ಪ ]

**ತಂಬಟಜಾಲಿ** 'ತಂಬತ್ರಿಜಾಲಿ' ನೋ.

**ತಂಬಟಿಕೆ** (ನಾ). (?) : ಹರಿಸು ಧೀಯೆಂದು ತುಳ್ಳಿತ ಬುದ್ಧಿಗಂಡರೆನು ತೊರಿಸುವರ್ ಸಲಿಗೆಯಿತ್ತನ್ಯೋನ್ಯದಿಂ ಮೆಲ್ಲನೆ ತರಿಸುವರ್ ಅರಿಯ ದೋಲ್ ಮನೆಯ ತಂಬಟಿಕೆಯರ ಮೂಲದಿಂ ಲೂಟಿಯಂತೆ (ಜನಸು. ೪೯-೪೦) [ ? ]

**ತಂಬಟಿಗ** (ನಾ). ತಾಮ್ರದ ಕೆಲಸ ಮಾಡುವವನು : ಸ್ವರವಾನಜಗೆ ಶಾಂ ಭರತಜ್ಞನಂದದಿಂ . . . ಎಟಿಕಮನಜಗೆ ತಂಬಟಿಗನಂತೆ (ಮರಡ. ೧೧-೭೭). [ ತಂಬ₀ (<ತಾಂಬ್ರ) + – ಅಟಿಗ ]

**ತಂಬಟೆ** 'ತಂಬಟ' ನೋ.

**ತಂಬಟೆಗ** (ನಾ). ತಮಟೆ ಬಾರಿಸುವವನು : ಡೊಂಬಿಯ ತಂಬಟೆಗರು ಪಾಡುವ ಶಿವದಿಗಳು (ಸಾಹಿವಿ. ೮೩). [ತಂಬಟೆ (<ತಂಬಟ) + – ಗ₃]

**ತಂಬಟೆಹೊಯಿಲು** (ನಾ). ತಮ್ಮಟೆಯ ಬಡಿತ : ತಂಬಟೆಹೊಯಿಲಿಲ್ಲ ವಾದ್ಯದ ಹಲುಬಿಲ್ಲ. ಹೆಣವ ಕೋಟೆಗೆ ನಾವು ತ್ವರೆಯಲೊಯ್ದಾಗ (ಇಂಗೀತ. ೦೯-೧). [ತಂಬಟೆ (<ತಂಬಟ) + ಹೊಯಿಲು (<ಪೊಯ್ಲು)]

**ತಂಬಟ್ಟ** 'ತಂಬಟ' ನೋ.

**ತಂಬತ್ರಿ** (ನಾ) = ತಂಬತ್ರಿಜಾಲಿ : (ಕ). [ ? ]

**ತಂಬತ್ರಿಜಾಲಿ, ತಂಬಟಜಾಲಿ** (ನಾ). ಬಿಳಿಯ ಉದ್ದನೆಯ ಮುಳ್ಳು ಗಳಿರುವ, ಸುವಾಸನೆಯ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಜಾಲಿ ; ಸುಗಂಧಜಾಲಿ: (ಕ). **ತಂಬಟಜಾಲಿ :** ಪೀಕಜಾಲಿ, ತಂಬಟಜಾಲಿ (ಪ್ರಪಂಚ. ೧-೦೨). [ ತಂಬತ್ರಿ + ಜಾಲಿ₁ ]

**ತಂಬನಿ** 'ತಣ್ಬನಿ' ನೋ.

**ತಂಬಲ** (ನಾ). ೧. ಒದ್ದೆ; ತಂಪು; ತೇವ. 'ತಂಬಲಗಟ್' ಪರಾ. (ಗು). ೨. ಆರ್ದ್ರ, ತೊಯ್ದ" (ಜಾನಕೋ. ೭೫).

**ತಂಬಲದ ಹುಳು** = ಬಚ್ಚಲು, ಮೋರಿ ಮೊದಲಾದ ತೇವವಾದ ಜಾಗಗಳಲ್ಲಿ ಇರುವ ಒಂದು ಬಗೆಯ ಹುಳು ; ಬಾಲದ ಹುಳು.

[ <ತಣ್ಪು₂ ]

**ತಂಬಲಗಟ್**[3] (ಕ್ರಿ). ತೇವವನ್ನುಂಟುಮಾಡು ; ತಂಪುಗೊಳಿಸು : ಶ್ರೀಕೃಷ್ಣನಂಭೋಧಿಮಾರ್ಗಾಣದಿಂದೆ ಮುಂಬರಿದೈದುವ ಕಾಲಾಗ್ನಿಯ ಮೆಟ್ಟ ತಂಬಲಗಟ್ದನಾ ಬಲಕೆ (ಮೋಹತ. ೩೭-೫೦).

[ ತಂಬಲ + ಕಟ್₁ ]

**ತಂಬಹಾಲು** 'ತಣ್ಪಾಲ್' ನೋ.

**ತಂಬಳಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಅಳತೆ ಗೋಲು,–ಪ್ರಮಾಣ (?) : ಪವಿಹಗೆಯ ಸಾಲೆಯ ತ್ರಾಯಿಪುರುಷ ದೇವಗ್ರಗ್ರಯಲ್ಲಿಯ ತಂಬಳಕೋಲಲಿನ್ನೂಱು ಮತ್ತರು ಕೆಯ್ಯು (ಎಇ. IV, ೬೫-೦೭ ; ಸು. 11ನೆಯ ಶತ). [ ತಂಬಳ₀ + ಕೋಲ್₁ ]

**ತಂಬಳಿ** 'ತಂಬುಳಿ' ನೋ.

**ತಂಬಾಕ** 'ತಂಬಾಕು' ನೋ.

**ತಂಬಾಕು, ತಂಬಾಕ** (ನಾ). ಒಂದು ಬಗೆಯ ಗಿಡ ಮತ್ತು ಅದರ ಸೊಪ್ಪು ; ಹೊಗೆಸೊಪ್ಪು : ತಂಬಾಕು, ಕಾಡುಸಣ್ಣ ಹೊಗೆಸೊಪ್ಪು (ಪ್ರಪಂಚ. ೭೦-೧೪೫೨) ; ಅದೇ ಗುಡಿಸಲಿನಲ್ಲಿ ದೇವದಾಸ ತಂಬಾಕು ಸೇದುತ್ತಾನೆಂಬುದು ಪಾರ್ವತಿಗೆ ಗೊತ್ತಿದ್ದಿತು (ದೇವದಾ. ೮) ; ತಂಬಾಕು ಮಿಶ್ರಿತ ಕವಳವು ಅವರ ಗಲ್ಲವನ್ನು ಯಾವಾಗಲೂ ಉಬ್ಬಿಸುತ್ತಿತ್ತು (ರಂಗಕೋ. ೧). **ತಂಬಾಕ :** ಹಾಳುಭೂಮಿಗಳಲ್ಲಿ ಸಜ್ಜೆ ಮತ್ತು ಜೋಳವು ಗೊಬ್ಬರ ವಿಶೇಷವಾದರೆ ತಂಬಾಕವು ಬೆಳೆಯುತ್ತವೆ (ಕೃಷಿಶ. ೭೭) ; ಸಿಂಹಲದ್ವೀಪದಲ್ಲಿ . . . ಕಬ್ಬು, ತಂಬಾಕ, ಬುಂದು ಮುಂತಾದವುಗಳು ಬೆಳೆಯುತ್ತವೆ (ಮುಂಬಯಿ. ೪-೨೦೧) ; ತಂಬಾಕವನ್ನು ನಿಂದಿಸುತ್ತಲೇ ಅದನ್ನು ಅಗಿಯಲು ಸುರುವು ಮಾಡುತ್ತಾರೆ (ಗಾಳಿಗು. ೨೮).

[ ←ಹಿಂ. ತಂಬಾಕೂ, ತಮಾಕೂ ; ಮರಾ. ತಂಬಾಕೂ, ತಂಬಾಖು, ತಮಾಕೂ, ತಮಾಖು. / ಇಂ. Tobacco. / ಪೋರ್ಚ್. ಸ್ಪ್ಯಾನಿಷ್. ಟಬಾಕೋ ; ಜಪಾನೀ. ತಾಬಾಕೋ ]

**ತಂಬಾಲ್** 'ತಣ್ಪಾಲ್' ನೋ.

**ತಂಬಾಲು** (ನಾ). ಒಂದು ಊರಿನ ಹೆಸರು (?) : ಪಾರಾಶಗೋತ್ರದ ಆಪಸ್ತಂಬ ಸೂತ್ರದ ತಂಬಾಲದ ಕೃಷ್ಣಭಟರ ಮಕ್ಕಳು ದೇವಣಭಟರು (ಎಕ. XII, ತಿಪಟೂ. ೦೩೯-೦೨೫ : ?). [ ? ]

**ತಂಬಾಲು** 'ತಣ್ಪಾಲ್' ನೋ.

**ತಂಬಾಳ** 'ತಾಂಬಾಣ' ನೋ.

**ತಂಬಾಳೆ** 'ತಾಂಬಾಣ' ನೋ.

**ತಂಬಿ₁** 'ತಮ್ಮ' ನೋ.

**ತಂಬಿ₂** (ನಾ). ದಂಡಿಸುವಿಕೆ ; ದಂಡನೆ ; ಶಿಕ್ಷೆ.

**ತಂಬಿ ಪಹುಂಚಾಯಿಸು** = ದಂಡಿಸು ; ಶಿಕ್ಷಿಸು : ತಮ್ಮ ರಾಜ್ಯದಲ್ಲಿ ಟೀಪುಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂತಾ . . . ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ ಅವರನ್ನು ಪಲಾಯನಮಾಡಿ (ಇಹಿಲಿಪ್ರ. ೨೦). [ ←ಅರ. ತಂಬೀಹ್ ; ಮರಾ. ತಬೀ ]

**ತಂಬಿಗೆ** 'ತಂಬುಗೆ' ನೋ.

**ತಂಬಿಟ್ಟು₁, ತಣ್ಪಿಟ್ಟು** (ನಾ). ಹುರಿಕಡಲೆ, ಅಕ್ಕಿ ಮೊದಲಾದುವು ಗಳ ಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ: ಕಬ್ಬಿನ ರಸ ಜೇನುತುಪ್ಪ ನವಣೆಯ ಹಿಟ್ಟಿನ ತಂಬಿಟ್ಟು ಹೂರಿಗೆ ಕಡುಬು . . . ಮಂತ್ರಸಮನ್ವಿತವಾಗಿ ಮೂಜಾದಿನ ಬಲಿಯಂ ಕೊಡಲು (ಜಾಲಿಪ. ೦೩೨-೨) ; ತಂಬಿಟ್ಟು ಕೊಡುವೆನು ದಾಸಯ್ಯ (ಪುರಂದ. ೨-.೬-೫); ನಾಳೆಗೆ ಬೆಣ್ಣೆ ನೈವೇದ್ಯ, ತಂಬಿಟ್ಟು ನೈವೇದ್ಯ, ಕಡುಬು ನೈವೇದ್ಯ, ಅನ್ನೋದಕ ನೈವೇದ್ಯವೊಂದು ಪಲತೆರದ ಹರಕೆಯಂ ಪೊತ್ತರೆ (ಶರಲೀ. ೪೦೬) ; ನೆನಗಡಲೆ ಚಿಗುಳಿ ತಂಬಿಟ್ಟು ಉಂಡಲಿಗೆ ನಾನಾ ಫಲಂಗಳು (ಸಾಗಂಧಿ. ೪೩-೧೭) ; ತಂಬಿಟ್ಟು ತಣ್ಣುಹಿಟ್ಟು. ದೇವರನ್ನು ತಣಿಸುವ, ಅಥವಾ ದೇವರ ಕೋಪ ವನ್ನು ಶಂಪು ಮಾಡುವ ಹಿಟ್ಟು (ನಮ್ಮನು. ೮೮) ; ತಂಬಿಟ್ಟಿಗೆ ಉಪ್ಪುಂಟೆ ತವರಿಗೆ ಮುಪ್ಪುಂಟೆ ? (ಜಾಳ್ಜಾ. ೮೩). **ತಣ್ಪಿಟ್ಟು :** ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಿಟ್ಟು ರಾಯುಳ್ಳಿಯಪಿನಿಯ ಒಟ್ಟಿಲು . . . ಅಂಗಡಿಯೊಳು (ಕುರಾಸಾಂ. ೪೨-೬೧). [ತಣ್₂+ಪಿಟ್ಟು./ಕೊಡ. ತಂಬುಟ್ಟೀ]

**ತಂಬಿಟ್ಟು$_2$** (ನಾ). ಒಂದು ಬಗೆಯ ಗಿಡ: ತಂಬಿಟ್ಟು, ಕುಕ್ಕುಟ, ಉತ್ಪಾಲ (ಪ್ರುಶಿಗಿ. ೫೨-೧೦೩೮). [ ? ]

**ತಂಬಿಲ** (ನಾ). (ಕರಾ) ಭೂತಗಳಿಗೆ ಮಾಡುವ ನೈವೇದ್ಯ : ಬನದ ಪಂಜುರ್ಲಿ ಇವನಲ್ಲಿ ಕೇಳಿ 'ತಂಬಿಲ' ವನ್ನು ಸ್ವೀಕರಿಸುತ್ತಾನೆ (ದೇವಮ. ೪). [ ←ತುಳು. ತಂಬಿಲ, ತಂಬಿಲೊ ]

**ತಂಬಿಸು$_1$** 'ತಣ್ಪಿಸು' ನೋ.

**ತಂಬಿಸು$_2$** (ಕ್ರಿ). ೧. ಸ್ತಂಭೀಭೂತವಾಗು; ನಿಶ್ಚಲವಾಗು; ನಿಂತುಬಿಡು: ಸೂತ್ರ ಹಱಿದ ಕಾವನ ಕೈಯ ಜಂತ್ರದ ಪುತ್ರಿಕೆ ನಿಂದ ಮಾಳ್ಕೆಯೊಳು ಧಾತ್ರೀಪತಿಯ ಮೊಗವ ಕಾಣುತಾ ಮೃಗನೇತ್ರೆ ತಂಬಿಸಿ ನಿಂದಳಾಗ (ಶ್ರೀಪಾಂ. ೪-೧೦೯). ೨. ತಡೆ ; ನಿಲ್ಲಿಸು : ಲಂಕಾಪುರದ ಲಗ್ಗೆಗೆ ಬೇಗ ಬೆಸಸಂ ಕೊಡುವುದೆಂದೆನಲು ಧರಣಿಪತಿಗಳ ನೀತಿ ಸಂಧಿಯ ಪರುಠವಿಪುದದ ಮೀರಿದಡೆ ಸಂಗರಕೆ ನೇಮವನೀವೆನೆಂಡವರುಗಳ ತಂಬಿಸಿದ (ಅಸಂರಾ. ೫ ೮-೧೦) : ಕುಸುಮಮಂಜರಿಯಲ್ಲಿಯಧ್ಮಗರ ತಂಬಿಸುವ ಸುಸ್ವರದ ಶುಕಪಿಕಂ ಕಾಣದಿಳೆಯಿಲ್ಲ (ಜಿನಮು. ೨-೦೮). ೩. ತೊಲಗಿಸು; ನಿವಾರಿಸು: ತುಂಬಿಗಳನೋಡಿಸದ ಚಂಪಕಂ ಸೋಕ್ಯಾನೆಯಂ ಬೆದಱಿಸದ ಸಿಂಗಮುದಿ ದಂಧಕಾರಮಂ ತಂಬಿಸದ ಚಂದ್ರಮಂಡಲವಿರಲ್ (ಕೃಷಿಧಾ: ೮-೨೦). [ <ಸ್ತಂಭಿಸು ]

**ತಂಬು**, ತಂಬೂ (ನಾ). ತಾತ್ಕಾಲಿಕ ವಾಸಕ್ಕಾಗಿ ಹಾಕಿರುವ ಬಟ್ಟೆಯ ಬಿಡಾರ ; ಗುಡಾರ ; ಡೇರೆ : ಹೊದಿಸಿದ ತಂಬು ಅಂಬರ ತಾಗುವಂದದಿ ಪೈಸರಿಸಿ ನಿಲ್ಲಿಸಿದ ಬಲವಾ (ಸಾಂದಕಾ. ೬-೨೨) : ಮಹಾರಾಜರವರ ತಂಬಿಗೆ ಬಂದು (ರಾಜೇಂದ್ರ. ೯೩) ; ಈಗ ತಂಬು ಡೇರೆ ಮುಂತಾದ ದಂಡಿನ ಸಾಮಾನುಗಳನ್ನು ಮಾತ್ರ ಅವುಗಳ (ಆನೆಗಳ) ಮೇಲೆ ಹೇರುತ್ತಾರೆ (ಮುಂಬಯಿ. ೪-೨೩). **ತಂಬೂ** : ಅರಸುಮಗನ ಸ್ವಂತ ತಂಬೂದಲ್ಲಿ ಬಹಳ ಹೊತ್ತಿನಿಂದ ಸಂಗೀತ ಕಚೇರಿಯು ನಡೆದುದನ್ನು ಹೋದ ಕೂಡಲೆ ಕಂಡೆ (ಶ್ರೀಕಾಂತ: ೨) : ಸರ್ಕಸ್ಸಿನ ತಂಬೂದಲ್ಲಿ ಬಂದು ತಂತಿಯನ್ನು . . . ಸೂಕ್ಷ್ಮವಾಗಿ ನೋಡುತ್ತ ನಿಂತಾಗ (ಕೋದಿಸು. ೪೯). [ ←ಪಾರ. ಹಿಂ. ಮರಾ. ತಂಬೂ ]

**ತಂಬುಗೆ**, ತಂಬಿಗೆ (ನಾ). ತಾಮ್ರ, ಹಿತ್ತಾಳೆ ಮೊದಲಾದ ಲೋಹ ಗಳಿಂದ ಮಾಡಿದ ನೀರಿನ ಸಣ್ಣ ಪಾತ್ರೆ ; ಚೆಂಬು ; ಚರಿಗೆ : "ಜಲಪಾತ್ರೆಯ ಕಮಂಡಲಂ ಗಿಂಡಿ ತಂಬುಗೆ" (ಮಂಗರಾ. ೬೩-೨೫) ; ಮಡದಿಯರಾವಗರ [ಕೆ]ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಳ್ಬರ್ (ಕಶಿ. IV, ೧-೫೭; 1204); ನೀಗೆರ್ಗೊಟ್ಟಳೊಂದು ಪೊಸ ತಂಬುಗೆಯಿಂ (ದಕಳು.೧೨-೦೨೯); ಪೊನ್ನ ತಂಬುಗೆಗಳೊಳು ಮೊಗೆ ಮೊಗೆದು (ಬಸಪು. ೫೮-೬೮); ತಳಿಗೆ ತಂಬುಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರತ. ೪-೫೮). **ತಂಬಿಗೆ** : ಮಿಗೆ ರತ್ನವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗ ದರ್ಪಣ ಹಂಸಪುತ್ರಳಿಯ ದೀವಿಗೆಗಂಬಗಳನಿತ್ತನೊಲಿದು (ಸೌಂದರ. ೦೫-೦೮); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂಸವಿ. ೫-೫೫); ಕರತಳದಲ್ಲಿ ತಾಳ್ದು ಶಶಿಕಾಂತದ ತಂಬಿಗೆಯಂ (ಚಂದ್ರಘು. ೨-೩೦) ; ಅಲ್ಲಿ ತಂಬಿಗೆಯಲ್ಲಿ ನೀರಿದೆ ಕೈಕಾಲು ತೊಳೆದುಕೊ (ನಿಷ್ಕಾಮ. ೩೭); ಗಂಗೆಗೆ ಹೋದರೂ ತಂಬಿಗೇ ಮೇಲೆ ಜ್ಞಾನ (ಗಾದೆ); ಮನೆ ನಿಮ್ಮದು ತಂಬಿಗೆ ಮುಟ್ಟಬೇಡಿ (ಗಾದೆ). 'ಚೆಂಬು$_1$' ಪರ್ಯಾ.

**ತಂಬಿಗೆ ತೆಗೆದುಕೊಂಡು ಹೋಗು** = ಶೌಚಕ್ಕೆ ಹೋಗು ; ಮಲ ವಿಸರ್ಜನೆಗೆ ಹೋಗು : ಅವನೀಗ ಇಲ್ಲ. ಮುಂಜಾನೆಯೇ ತಂಬಿಗೆ ತೆಗೆದುಕೊಂಡು ಹೋಗಿದ್ದಾನೆ (ರೂಢಿ). **ತಂಬಿಗೆ ಕೈಗೆ ಬರು** = ಬೇಡುವಂತಾಗು ; ಭಿಕ್ಷೆಗೆ ಹೋಗುವಂತಾಗು : ಸಿರಿ ಇದ್ದಾಗ ಮೆರೆದಿದ್ದನು. ಈಗ ತಂಬಿಗೆ ಕೈಗೆ ಬರುವಂತಾಯಿತು (ರೂಢಿ). [ ದೇ.॥ ತಮಿ. ತಮ್ಪಿಕೈ ; ತುಳು. ತಂಬಿಗೆ ; ತೆಲು. ತಂಬಿಗ, ತಂಬುಗ ]

**ತಂಬುರಿ** 'ತಂಬೂರಿ' ನೋ.

**ತಂಬುಲ**, ತಾಂಬುಲ, ತಾಂಬುಳ, ತಾಂಬೂಟ, ತೊಂಬಲ$_1$, ತೊಂಬಲು (ನಾ). ೧. ಅಡಕೆ; ಕ್ರಮುಕ: "ತಂಬುಲಂ, ಕ್ರಮುಕಂ–ಈ ೨ ತಂಬುಲಂ" (ಹಲಾಯು. ೯೦-೩೯೦): ಕ[ಯ್ಯ]ಲೆ ಕಯ್ಯೊಳೆ ಬಾಯ ತಂಬುಲಂ ಬಾಯೊಳೆ ತೋಱೆ ಮೆಯ್ಮಱೆದು ನೋಡಿದಳಾ ಸಮರೈಕಮೇರುವಂ (ಪಂಪಭಾ. ೪-೩೭). ೨. ವೀಳೆಯ ; ಅಡಕೆ ಮತ್ತು ಎಲೆ : "ತಂಬೂಲಮೆಂದು ವೀಳೆಯಮೆಂದುಂ ವೀಟಿಕೆ" (ಕಶಸಾ. ೨೫-೫೩೬): ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು (ವಡ್ಡಾರಾ. ೦೦೬-೨೦) ; ತಂಬುಲಮಿಲ್ಲದ ವದನಂ . . . ಶೀತಲಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ (ಅಜಿಪು. ೬-೯೫) ; ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾವ್ಯಾ. ೦೭-೩೮). ೩. ಅಗಿದು ಉಗುಳುವ ಕವಳ ; ಚರ್ವಿತ ತಾಂಬೂಲ : ಕುರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗರೂ. ೧). ೪. ಒಂದು ಬಗೆಯ ತೆರಿಗೆ; ತಂಬುಲಿಗರು ಕೊಡಬೇಕಾದ ತೆರಿಗೆ : ಮನ್ನೆಯದೞ್ ಅಳಿವಸತಿಯ ಪೊ[ಗೆ]ವೊಗೆ ತಳಾಱಿಗೂಲಿ ಇ×ದಿ ತಂಬುಲಂ ಮೊದಲಾಗಿ ಆತನ ಮಕ್ಕಳ್ನ[ರುಳ್ನ]ರ ಸರ್ವ್ವಬಾಧಾಪರಿಹಾರಂ ಕಾದು ನಡೆಯಿಸುವರ್ (ಸಾಇಇ. XI-1, ೬೫-೨೨; 1042) : ಚೈತ್ರಪೈತ್ರಕೆ ಬಿಟ್ಟ ಪಣ ೪ ದಿವಸವಳ ದೇವ[ರ] × × × ಕೆಯರಂ × ಗಡಿಯ ತಂಬುಲಮಂ ಬಿಟ್ಟರು (ಸಾಇಇ. XX, ೦೩೬-೯; 1180). **ತಾಂಬುಲ** : ೨. ನಿಟಿಲಕ್ಕೆ ತಿಲಕವಾದು ಕುಂತಳಕೆ ಕುಸುಮಗಳ್ ತುಱಿಗೆ ತಾಂಬುಲರಸಂ (ಪರಕು. ೦೫ ೩೫). **ತಾಂಬುಳ** : ೨. ಶ್ರೀ ಕೇದಾರೇಶ್ವರ ದೇವರಂಗಭೋಗಕ್ಕಂ ಧೂಪಾರತಿ ನಿವೇದ್ಯ ತಾಂಬುಳ ನಂದಾದೀವಿಗೆ ಪಾತ್ರ ಸಾವುಳಕ್ಕಂ (ಕಇಅ. ೦೬-೫-೨೭ ; 1186). △**ತಾಂಬೂಟ** : ೨. ಬ್ರಹ್ಮೇಶ್ವರ ದೇವರಂಗಭೋಗ ಜಳ ಗಂಧಾಕ್ಷತೆ . . . ತಾಂಬೂಟವೆಂಬ ಅಷ್ಟವಿಧಾರ್ಚನೆಗಾ (ಸಾಇಇ. XX, ೮೪-೪೬ ; 1128). **ತೊಂಬಲ$_1$** : ೨. "ನಾನು ತೊಂಬಲ ತಂದುಕೊಡುತ್ತೇನೆ" ಎಂದವಳೇ . . . ವೀಳ್ಯ ಸಜ್ಜು ಗೊಳಿಸುವ ನೆವದಿಂದ ಹೊರಟುಹೋದಳು(ಇಕ್ಕೇಳ. ೨೫೦). ೩. "ತೊಂಬಲ–ಎಂಜಲು" (ಜಾನಕೋ. ೬೮). **ತೊಂಬಲು** : ೩. ಚಿತ್ರ ನಿನ್ನಲ್ಲಿಡಿಸಿ ಕಾಯೊ ಕೊತ್ತಿನ ತೊಂಬಲು ತಿಂಬೆ (ಪುಣ್ಯದೀ. ೩೦-೭) ; ಜಗದೀಶಾ ನಿನ್ನಯ ಉಗುರು ಕಾಣದವರು ಉಗುಳಿದಾ ತೊಂಬಲು ನಾನು (ಪುಣ್ಯದೀ. ೮೯-೩).

**ತಂಬುಲ ತಿನ್ನು** = ಎಂಜಲನ್ನು ತಿನ್ನು : ಅವಳ ತಂಬುಲ ತಿನ್ನೋದಕ್ಕೆ ಅಲ್ಲಿಗೆ ಏಕೆ ಹೋದೆ ? (ರೂಢಿ). **ತಂಬುಲದೆಲೆ** = ವೀಳ್ಯದೆಲೆ : ಎರ್ಚೆಯಲೆ ಸಾಸಿವೆ ತಂಬುಲದೆಲೆಯುವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೧೮) : ಒಂಭತ್ತೆಕ್ಕೆಯ ಪೂವಂ ತಂಬುಲದೆಲೆ ಮೂಱಿರಲ್ಲಿ ಮಿದಿದಿಕ್ಕುಗೆ ಶೀತಂ ಬಪ್ಪಾಗಳು (ಕಲ್ಯಾಕಾ: ೩-೪೫). [ <ಸಂ. ತಾಂಬೂಲ ]

**ತಂಬುಲಂಗುಡು** 'ತಂಬುಲಂಗೊಡು' ನೋ.

**ತಂಬುಲಂಗೊಡು**, ತಂಬಲಂಗುಡು (ಕ್ರಿ). ವೀಳೆಯವನ್ನು ಕೊಡು ; ತಾಂಬೂಲವನ್ನು ಕೊಡು : ಸಾಹಸಾಭರಣನ ಸಾಹಸಮನಳವಲ್ಲದೆ ಪೊಗಟ್ದು ತೊಡೆಯನೇಱಿಸಿಕೊಂಡು ಬಾಯೊಳ್[ಪಾಠಾಂ. ಬಾಯ್ವಾಯೊಳ್]ತಂಬುಲಂಗೊಟ್ಟಂ (ಪಂಪಭಾ. ೭-೩೮ ವ) ; ಎನಗೆ ತಂಬುಲಂಗೊಡಲುಜ್ಜುಗಂಗೆಯ್ವಲ್ಲಿ ಸಡುಗುವ ಕಂದಳಮಂ ಚೆನ್ನೆ ದಿಲೆಗೆತ್ತು (ಕಾದಂಬ. ೯೦). **ತಂಬುಲಂಗುಡು**: ಅವಂದಿರ್ಗಳ್ಗುಪಜಾತ ಪರಿಚಯದಿಂ ತಂಬುಲಂಗುಡಲ್ವೇಟ್ದು (ಕಾದಂಬ. ೨೬೨). [ ತಂಬುಲ + ಕೊಡು$_1$ ]

**ತಂಬುಲಂಗೊಳ್** (ಕ್ರಿ). ತಾಂಬೂಲವನ್ನು ತೆಗೆದುಕೊಳ್ಳು; ವೀಳೆಯವನ್ನು ಸೇವಿಸು: ದಿವ್ಯಾಹಾರಂಗಳನಾರೋಗಿಸಿ ಕೆಯ್ಗಟ್ಟಿಗೊಂಡು ತಂಬುಲಂಗೊಂಡು (ಪಂಪಭಾ. ೫-೭೭ ವ).

[ತಂಬುಲ + ಕೊಳ್$_1$]

**ತಂಬುಲಂದೀವು** (ಕ್ರಿ). ತಾಂಬೂಲವನ್ನು ತುಂಬು; ವೀಳೆಯವನ್ನು ಜೋಡಿಸು: ತಂಬುಲಂದೀವಿದ ಪೊಂಗವಳಿಗೆಯುಂ ಪಿಡಿದಂದಿಕೆಗವಟಿಯ್ಯು ದಳೊರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೧೬೦).

[ತಂಬುಲ + ತೀವು]

**ತಂಬುಲಂಬಿಡಿ** (ಕ್ರಿ). = ತಂಬುಲಂಗೊಳ್: ಮಾಸಿದೆಯಾಡೆ ಪೇಣುಡಲ. ತರಿಪೆವೆ ತಂಬುಲಂಬಿಡಿ (ಪಂಪಭಾ. ೮-೬೪). [ತಂಬುಲ + ಪಿಡಿ$_1$]

**ತಂಬುಲಗುಟುಕು** (ನಾ). ಬಾಯಿಗೆ ಬಾಯಿಟ್ಟು ಕೊಡುವ ತಾಂಬೂಲ; ಕುಟುಕುದಂಬುಲ: ದೇವಿಯ ಪಾಣಿಪದ್ಮದಿಂ ತೊಲಗದೆ ಪದ್ಮರಾಗನಿಭ ಚಂಚುವನೊಯ್ಯನೆ ನೀಡಿ ನೀಡಿ ತಂಬುಲಗುಟುಕಂ ಕೊಡುತ್ತೆ (ಶುಕಸಪ್ತ. ೦೩-೨೦). [ತಂಬುಲ + ಕುಟುಕು$_3$]

**ತಂಬುಲಪೆಚ್ಚ** (ನಾ). ತಾಂಬೂಲದ ಹುಚ್ಚು ಹಿಡಿದವನು; ಅತಿಯಾಗಿ ತಾಂಬೂಲವನ್ನು ಸೇವಿಸುವವನು: ಪಿಚ್ಚಿ ಪಿಚ್ಚಿ ಎಲೆಗಳನ್ನು ನಿವಿಃಪಾರ್ಥದಲ್ಲಿ ಅರೆದು ಅಗಿದು, ಪಿಚಿ ಪಿಚಿ ಉಗುಳುವ ತಂಬುಲಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ವಿಚಾಳ. ೦೫೭).

[ತಂಬುಲ + ಪೆಚ್ಚ (<ಪಿಚ್ಚು)]

**ತಂಬುಲಮಿಡು** (ಕ್ರಿ). ೧. ತಾಂಬೂಲವನ್ನು ಕೊಡು; ವೀಳೆಯ ನೀಡು. ೨. ಆಹ್ವಾನಿಸು; ಕರೆ: ಜಗಳಕೆ ತಂಬುಲಮಿಟ್ಟು ವುಗ್ಗಡಿಸುವ ಬಗೆಯಾದುದಾ ಭದ್ರಹಸ್ತಿ (ಶ್ರೀಪಾಂ. ೬-೫೦). [ತಂಬುಲ + ಇಡು$_1$]

**ತಂಬುಲಿ** (ನಾ). ೧. ವೀಳೆಯದೆಲೆಯನ್ನು ಮಾರುವವನು; ತಂಬುಲಿಗ: ಹರದರ ಸುವ್ವಕ್ಕರ ಕಾರುಕರ ಚಿತ್ರಕರ ತಂಬುಲಿಗಳ ವಿನೋದಿಗಳ . . . ಸೇರುವೆಯ ಕಂಡು (ಅಗ್ನಿಪು. ೬-೯೮). ೨. ವೀಳೆಯದೆಲೆಯನ್ನು ಮಡಿಚಿಕೊಡುವವನು; ಹಡಪದವನು; "ಹಡಪಾಳಿ" (ಕಪುವಿ. ೩. I, ೨೫). [ತಂಬುಲ + – ಇ$_3$]

**ತಂಬುಲಿಗ** (ನಾ). ೧. = ತಂಬುಲಿ ೧: ಗೊಜ್ಜಿಗಂ ತಂಬುಲಿಗರೆಟ್ಟಿಂ ಕಳ್ಳಕೆರ್ಳ್ವಳಿ ಕಾದಿ . . . ದೇವಲೋಕಕ್ಕೆಸೆದನ್ (ಎಕ. XVI. ೬೫-೦೮; 1007); ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಜಸಾರೆ (ಧರ್ಮಾಮೃ. ೩-೬೯); ದೂಸಿಗರ ಕಂಚುಗಾಱರ ಬಳೆಗಾಱರ ತಂಬುಲಿಗರ ಮಣಿಗಾಱರ ಗಂದಿಗ ರಾವಣಂಗಳೊಳ್ ನಡೆತಂದರ್ (ಜಗವಿ. ೬-೦೮); ಮಾಱುವಂಗೆ–ಗಂದಿಗಂ, ದೂಸಿಗಂ, ತಂಬುಲಿಗಂ (ಶಬ್ದಮ. ೦೯೭ ವೃತ್ತಿ); ತಂಬುಲಿಗ ಜಂಗಮ ಜೋಗಿಗಳ ಜಂಗುಳಿಗಳಗೇರಿಗಳೊಳಗೆ ರಭಾಡಿಸಿದನು ಶಿಶಾಳಿಗಳ (ಕೂರಾ. ೫-೮-೫೩). 'ತಂಬುಲಿಗವಸರ' ಪರಾ. ೨. = ತಂಬುಲಿ ೨: ಅಯ್ಯ ಗೆಲೆಯ ಕೊಡುತಿರ್ದ ತಂಬುಲಿಗನ ಕೈಯ ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದಗೆಲೆಯ ತನ್ನ ಕೈಯಾರೆ ಕೊಡತೊಡಗಿದನು (ಭರತ. ೫೭-೭೭).

ತಂಬುಲಿಗ ಸಾಸಿರ್ವರ್ = ವೀಳೆಯದೆಲೆಯ ವರ್ತಕ ಸಂಘದ ಸಾವಿರ ಸದಸ್ಯರು: ಸುಂಕದನ್ಯಾಯ ಪೆರ್ಚ್ಚಿದಡೆ ಬಾಳ್ಗಳೆಯಯ್ಯ ದಿಂಬರುಂ . . . ತಂಬುಲಿಗಸಾಸಿರ್ವ್ವರುಂ ಅಯ್ನೂರ್ವರುಂ ಪೋಗಿ . . . ಬಿನ್ನಪಂಗೆಯ್ದಡೆ (ಸೌಇಇ. IX-I, ೬೬-೦೦; ೬೯1); ಅಲ್ಲಿಯ ತಂಬುಲಿಗ ಸಾಸಿರ್ವ್ವರುಮಿಟ್ಟು ಹೇಱಿಗೆ × [ವೀ]ಸವಂ ಬಿಟ್ಟರು (ಸೌಇಇ. XV. ೨೭-೫೦: 1144); ದೇವರಂಗಭೋಗಕ್ಕೆ ತಂಬುಲಿಗಸಾಸಿರ್ವ್ವರಶೇಷವಿರ್ದು . . . ಕೊಟ್ಟರ್ (ಮುಂಬಭಾ. XI. ೨೫೯-೨೫; 1144).

[ತಂಬುಲ + – ಇಗ]

**ತಂಬುಲಿಗವಸರ** (ನಾ). ವೀಳೆಯದೆಲೆಯನ್ನು ಮಾರುವ ಅಂಗಡಿ; ತಂಬುಲಿಗರ ಅಂಗಡಿ: ವಾಲಿಗಾರ್ತಿಯರುಲಗಣ್ಮಾಲ್ವೆಳಗು ನಟ್ಟವೊರ್ ಬೀಯಲೆಗಳ್ ತಂಬುಲಿಗವಸರದೊಳ್ ಕರಮೆಸೆಗುಂ (ಅಜಿತಪು. ೬-೦೫). [ತಂಬುಲಿಗ + ವಸರ]

**ತಂಬುಲಿಗಸೆಟ್ಟಿ** (ನಾ). ತಾಂಬೂಲದ ವ್ಯಾಪಾರಿ; ವೀಳೆಯದೆಲೆಯ ವರ್ತಕ: ತಂಬುಲಿಗಸೆಟ್ಟಿಗಳು ಬಿಟ್ಟ ಧರ್ಮ್ಮವಾವುದೆಂದಡೆ ಹೇಱಿಂಗೆ ವೀಸ (ಸೌಇಇ. XI-II, ೦೫೮-೨೫; 1109). [ತಂಬುಲಿಗ + ಸೆಟ್ಟಿ]

**ತಂಬುಳಿ, ತಂಬಳಿ** (ನಾ). (ಕರಾ) ತೆಂಗಿನಕಾಯಿ, ಜೀರಿಗೆ ಮುಂತಾದುವನ್ನು ರುಬ್ಬಿ, ಅದಕ್ಕೆ ಮಜ್ಜಿಗೆ ಬೆಂದ ತರಕಾರಿಗಳನ್ನು ಹಾಕಿ ಕುದಿಸದೆ ಮಾಡುವ ಒಂದು ಬಗೆಯ ಮೇಲೋಗರ: ಪುಡಿಚಟ್ನಿ ಇದೆ. ತಂಬುಳಿ ಮಾಡಿದರಾಯ್ತು (ಬಂದಹಟ. ೬೦). **ತಂಬಳಿ**: ಬಟ್ಟಲಲ್ಲಿ ಅನ್ನ, ಕಾಳಿದ, ತಂಬಳಿ, ಸಾರು . . . ಕಂಡವು (ಕುಳಿತ. ೦೨೪); ಬೇಸಿಗೆ ಬಂದರೆ ಕೊಳದ ನೀರು ಹಸುರು ತಂಬಳಿಯಾಗುತ್ತದೆ (ಹಾರುದಾ. ೩೮).

[ತಂ$_1$ (<ತಣ್$_1$) + ಪುಳಿ$_2$. / ತುಳು. ತಂಬುಳಿ]

**ತಂಬೂ** 'ತಂಬು' ನೋ.

**ತಂಬೂರ** 'ತಂಬೂರಿ' ನೋ.

**ತಂಬೂರಿ, ತಂಬುರಿ, ತಂಬೂರ** (ನಾ). ಆಧಾರಶ್ರುತಿಗಾಗಿ ನುಡಿಸುವ, ನಾಲ್ಕು ತಂತಿಗಳುಳ್ಳ ಒಂದು ಬಗೆಯ ವಾದ್ಯ: ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು . . . ಹರಿ ನಂಬಲಾಟ ಈ ಡಂಭಕದ ಕೂಗಾಟ (ಪುರಂದ. ೪-೭೭-೧); ತಾಳ ಶಂಖ ಭೇರಿಯು ತಂಬೂರಿಯು ಮೊದಲಾದ ಮೇಲು ಪಂಚಕಂಗಳೆಲ್ಲ ಹೊಗಳು ಹೊಗಳಲೂ (ಚಾರಿತ್ರ. ೫೦-೨); ನಿಸ್ಸಾಳ ಪಟಹ ತಂಬೂರಿ ಪಣವ ಕಂಸಾಳೆ ಕಂಬು ಡಿಕ್ಕಿ ವಾದ್ಯ ಸೂಳೈಸುತಲಿರೆ (ವಿದಾಶ್ಯ. ೭೬-೩); ಪಟುವಾದ ಜಾರ ತಂಬೂರಿ ತುತ್ತೂರಿಗಳ್ (ಅರ್ಜುವಿ. ೨೯-೩೦); ತಂಬೂರಿ ತುಂಬೆಲ್ಲ ಕೀಸರ ಬಾಸರ ಬೇಸರ ಬಂದೈತಿ (ಸಬೀಗೀ. ೪೮-೪). **ತಂಬುರಿ**: ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಂತು ಸಂದಣಿಸಿ ಪೂರೈಸೆ (ಶ್ರೀಕಾಶು. ೪-೫೫). **ತಂಬೂರ**: ಮಾಧುರ್ಯತರದ ಸುವ್ವಾನದಿಂ ಪರವಶತೆಯಾಂತರೋಯೆನಲಂಬುಜಾಸನೆಯರತಿಶಯದ ತಂಬೂರಗಳ ಪಿಡಿದು ವಾಲಗಿ ವರಂ ಕಂಡನು (ಪಂಕಾರಾ. ೫-೪-೦೨)

[←ಅರ. ತಂಬೂರಾ; ಹಿಂ. ತಂಬೂರಾ, ತಾನ್‌ಪೂರಾ; ಮರಾ. ತಂಬೂರಾ, ತಂಬೋರಾ. / ಸಂ. ತುಂಬರಿ = ಒಂದು ಬಗೆಯ ವೀಣೆ]

**ತಂಬೆಧಡೆ** (ನಾ). ಒಂದು ಊರಿನ ಹೆಸರು. ☞ ಈಗಿನ ವಿಜಾಪುರ ಜಿಲ್ಲೆಯತಮ್ಮಧಡ್ಡಿ: ಶ್ರೀಮತು ತಂಬೆಧಡೆ ಬಲೇಶ್ವರ ದೇವರ್ಗ್ಗೆ ಬಿಟ್ಟ . . . ಮತರು ೩೦ (ಸೌಇಇ. XI-I, ೬೮-೦೦; 1088). [?]

**ತಂಬೆರಲ್** 'ತಂಬೆಲರ್' ನೋ.

**ತಂಬೆಲರ್, ತಂಬೆರಲ್, ತಂಬೆಲರು** (ನಾ). ತಂಪಾದ ಗಾಳಿ: ಕಮ್ಮಿತಪ್ಪ ತಂದೆಲರ್ ವೀಸಿ (ವಡ್ಡಾರಾ. ೦೦೬-೨೦); ಮನವಾಱ ಶೀಡಿದುದು ತೆಂಕಣ ತಂಬೆಲರಪ್ಪಿಕೊಳ್ವವೋಲ್ (ಪಂಪಭಾ. ೦೪-೦೨); ಕಾವಂಗೆ ವಸಂತ ಸಮಯಮುಂ ವಸಂತಸಮಯಕ್ಕೆ ತಂಬೆಲರುಮೆಂಬಂತೆ (ಕಾದಂಪೂ. ೮೦೪). **ತಂಬೆರಲ್**: ಶೀಡುವ ತಂ[ಪಾಣಂ ತೆಂ]ಬೆರಲ್ (ಪಂಪಭಾ. ೩-೫೭); ತಂಬೆರಲ್ಪಂಚರಿಸಿದುದಾ ಪುರದ ಪೊಱಗೆ ಸುರಭಿಸಮೇತಂ (ಉದ್ಭಟ. ೬-೫). **ತಂಬೆಲರು**: ಸುಳಿವೆಲರು ತಂಬೆಲರು . . . ಹಂಸೆ ರಾಜಹಂಸೆಗಳೆಸೆದುವಾ ವನದೊಳು (ಹಕಾ. ೩-೩೭); ಪಸರಿಸಿತು ತಂಬೆಲರು ಬೀತುದು ಬಿಸಿಲ ಬಿಂಕ (ಕುಮ್ಮಾಆ. ೦೭-೩೮); ಅಳಿವಿಂಡುಗಳ ಗಾನಕೆ ತಂದೆಲರಿಗೆ . . . ತಲೆದೂಗುವಂದದೆ ಕಳವೆಯ ತೆನೆಗಳಂದೊಲೆದಾಡುತಿರ್ದುವು (ಕಂಪವಿ. ೫-೬೨). [ತಂಪು$_3$ (<ತಣ್ಪು$_3$) + ಎಲರ್]

**ತಂಬೆಲರು** 'ತಂಬೆಲರ್' ನೋ.

**ತಂಬೆಳಕು** 'ತಣ್ಬೆಳಗು' ನೋ.

**ತಂಬೆಳಗ** (ನಾ). ತಂಪಾದ ಬೆಳಕನ್ನು ಬೀರುವವನು ; ಚಂದ್ರ : "ತಂದೆಳಗಂ[ಪಾಠಾಂ ತೆಳ್ವೆಳಗಂ] . . . ಚಂದ ಚೆಳಗದಿರ ಕತ್ತಲೆವಣಿಯ ಶಶಿಯ ನಾಮಂ" (ಅಭ್ಯಾಕ್ಷ. ೪೩). [ ತಂದೆಳಗು (<ತಣ್ಬೆಳಗು) + – ಅ₇ ]

**ತಂಬೆಳಗು** 'ತಣ್ಬೆಳಗು' ನೋ.

**ತಂಬೇಲು** (ಗು). ಹೆಚ್ಚಾದ ; ಅತಿಶಯವಾದ ; ತುಂಬಿದ : ದುಶ್ಶಾಸನೆ ಕೇಳು ತಂಬೇಲು ಗರ್ವದಿಂದ ದ್ರುಪದಾತ್ಮಜೆಯಮಗೆ ಈ ಕುಂಭಿಣಿಯೊಳು ಅಚೋದ್ಯವೆನಿಪ ಸುಖದ್ಯೂತದೊಳ್ ಸೋಲ್ದೊಳಿಸಿದ ಪ್ರಯುಕ್ತ ಬಾಯೆಂದು ಕರೆದರೆ . . . ಬಾಹೋಣಯಿಲ್ಲವೆಂದು ಪ್ರಾತಿಕಾಮಿಕನಿಗೆ ನಿರೂಪಿಸಿದಳಂತೆ (ದುಶ್ಶಾಳ. ೦೮).
[ ?. / ತುಳು. ತವೆಲ್ = ತುಂಬಿ ತುಳುಕು ]

**ತಂಬ್ಬೆಸು** 'ತಣ್ಬೆಸು' ನೋ.

**ತಂಭಾಲು** 'ತಣ್ಪಾಲ್' ನೋ.

**ತಃಖ್ತಿ** 'ತಖ್ತಿ' ನೋ.

**ತಃಖ್ತೆ** 'ತಖ್ತೆ' ನೋ.

**ತಕ** (?). (?) : ಕಗ್ಗಲಿಪುರಕ್ಕೆ ಪಡವಲು ತಕದ ಕರಿಮುರುಟಿಗೆ ಬಡಗಣ ವೊತ್ತಿನಲ್ಲೂ ನೆಟ್ಟಕಲ್ಲು ೧ (ಎಕ. XIV, ಮೈಸೂರು. ೦೦೩-೩೯೦ ; 1674).
[ ? ]

**ತಕಣೆಚಿಯ** (ನಾ). ಒಬ್ಬಾತನ ಹೆಸರು (?) : ಮನೆವಗತಿ ತಕಣೆಚಿಯ ಕೊನವಾಮಾ ಎಚಿಅಂಗ ಪೊಲುಕೇಸಿಯ ಬೂದಿಗನ ಕಾಳಗದೊಳ್ . . . ಸತ್ತ (ಎಕ. III, ಮೈಸೂರು. ೪೪-೩ ; ಸು. ೬೯೦). [ ? ]

**ತಕತಕ** (ನಾ). ಕುಣಿಯುವುದನ್ನು ಸೂಚಿಸುವ ಒಂದು ಅನುಕರಣ ಪದ: ದೀಪಾವಳಿ ಬಂದರೆ ಹುಡುಗರು ತಕತಕ ಎಂದು ಕುಣಿಯುತ್ತಾರೆ (ರೂಢಿ).

**ತಕತ್ತು**, ತಕಥು, ತಗತು₂ (ನಾ). ೧. ರಾಜ್ಯ : ಪಟ್ಟದ ಕೂರಸಿಯನವನ ಕೈಗಿತ್ತಿದಂತಿರ್ಪುದೆನಲವನಳ್ಕಿ ಹೊಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತನಾಳ್ವುದರ್ಕಯೋಗ್ಯನೆಂದು ಬಗೆದು (ಕೆಳದಿನೃ. ೯-೩೭). **ತಕಥು:** ೧. ಶಾಹಮುರ್ತಜಾ ಅಲ್ಲಿಯಾದಿಯಾಗಿ . . . ವಿಜಾಪುರದ ತಕಥನಾಳ್ದ ಪಾತುಶಾಹರ್ (ಕೆಳದಿನೃ. ೯-೩೯). **ತಗತು₂:** ೨. ಸಿಂಹಾಸನ ; ಪಟ್ಟ : ಜಗದ ರಾಯರು ನಿನಗೆ ಸಾಟಿಯೆ ತಗತನಿಳಿಯ್ಯೆ ಪಾವಕನಿಳಯದಿ ವಾಗ ಸಹಿತ ಮಂಡಿಸುವದೂಚಿಸ್ಥಾನ ಹೋಗೆಂದ (ಅಂಬಿಕಾ. ೪೮-೭೩).
[ ←ಪಾರ. ಹಿಂ. ತಖ್ತ್ ; ಮರಾ. ತಕ್ತ್, ತಖತ್, ತಖ್ತ್ ]

**ತಕಥು** 'ತಕತ್ತು' ನೋ.

**ತಕಪಕ** (ನಾ). ಒಂದು ಅನುಕರಣ ಶಬ್ದ : ಅನ್ನ ತಕಪಕ ಎಂದು ಕುದಿದು, ಉಕ್ಕಿ ಹೊರಗೆ ಬರುತ್ತಿದ್ದಿತು (ರೂಢಿ). 'ತಕಪಕನೆ' ಪರಾ.

**ತಕಪಕನೆ** (ಅ). ತಕಪಕ ಎಂದು ; ತೀವ್ರವಾಗಿ : ಒಳಗೆ ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದಾ ಕಡಲ್ ಕಣ್ಗೆಸೆದುದು (ಜಲಕ್ರೀ. ೨-೩); ಕಡಲು ತಕಪಕನುಕ್ಕಲಮರರ ಗಡಣ ಕಂಗೆಟ್ಟೋಡಲು (ಕೃಷ್ಣಾಜ. ೩-೪೫).
[ ತಕಪಕ + – ಅನೆ₁ ]

**ತಕಯೂದ** (ನಾ). ಕಟ್ಟು ; ನಿರ್ಬಂಧ : ಜುಲುಮು, ಜಬರದಸ್ತಿ, ಪಟ್ಟಿ, ಕೊಲೆ ಮಾಡಿದವರಿಗೆ ಚನ್ನಾಗಿ ಶಿಕ್ಷೆಮಾಡಿ ಮುಂದೆ ಈ ಪ್ರಕಾರ ಅನ್ಯಾಯ ವಾಗದ ಹಾಗೆ ತಕಯೂದ ಇಡಬೇಕು (ಮುಹಾಪಂ. II, ೬೩).
[ ←ಪಾರ. ತಕಯಾದ್ ]

**ತಕರಾರ್** 'ತಕರಾರು' ನೋ.

**ತಕರಾರು**, ತಕರಾರ್, ತಕರಾಲು, ತಕ್ರಾರ, ತಕ್ರಾರು (ನಾ). ೧. ವಿವಾದ; ದೂರು: ಚೌಗ್ರಾಮದವರ ಕರಸಿಕೊಂಡು ಗಡಿ ತಕರಾರು ಬಾರದಂತೆ . . . ಭೂಮಿಗೆ ಶಿಲಾಸ್ಥಾಪಿತವ ಮಾಡಿಸಿಕೊಟ್ಟು (ಎಕ. VIII, ಸೊರಬ. ೩೩೪-೩೦; 1743). ೨. ಅಡ್ಡಿ ; ಆಕ್ಷೇಪಣೆ; ವಿರೋಧ: ಯಾರಾದರೂ ಕೊಡದೆ ತಕರಾರು ಮಾಡಿದರೆ (ಮೈಆರಿ. ೦೯೩೦, ೨೧-೨೦ ; 1712) ; ನನ್ನದೇನು ತಕರಾರು ಇಲ್ಲ (ಬದುಜ. ೩೬); ತಂಟೆ ತೀರಿದರೂ ತಕರಾರು ಹೋಗಲಿಲ್ಲ (ಗಾದೆ). **ತಕರಾರ್:** ೧. ಕಂದಾಯ ಬಾಕಿ ಇರುವ ಜಮೀನಿನ ಸ್ವಾನ್‌ದಾರಿಕೆಯು ತಕರಾರ್ ಬದ್ದಿದ್ದಲ್ಲಿ . . . ಹರಾಜು ಮಾಡುವುದು ನ್ಯಾಯವಲ್ಲವು (ಗ್ರಾಮಠಾಕ. ೭೮). **ತಕರಾಲು:** ೨. ಕಂಟಿ ತನ್ನ ಮಕ್ಕಳ ಹೆಸರಿನಲ್ಲಿ . . . ನೀರಗಂಟಿತನ ನೋಡಿಕೊಳ್ಳಲು ಬಂದಾಗ ಮಾರಪ್ಪನ ಮಕ್ಕಳು ತಕರಾಲು ಎತ್ತಿದರು (ಊರುಕ. ೭೮). **ತಕ್ರಾರ:** ೧. ಗಡಿ ತಕ್ರಾರ ಬಾರದ ರೀತಿಯಲ್ಲಿ . . . ಶಿಲಾಸ್ಥಾಪಿತವ ಮಾಡಿಕೊಟ್ಟು (ಮೈಆರಿ. ೧೯೩೪, ೯-೦೪ : 1690). ೨. ಪ್ರತಿಯೊಬ್ಬ ಭಕ್ತರೂ ಹೀಗೆ ಒಂದಿಲ್ಲೊಂದು ಬಗೆಯಿಂದ ತಕ್ರಾರ ಹೂಡಿದರು (ಗಾರುಹಂ. ೦೭೬). **ತಕ್ರಾರು:** ೧. ಗಡಿ ತಕ್ರಾರು ಬಾರದ ರೀತಿಯವರ ಮುಂದಿಟ್ಟು ರೇಖೆ ಪ್ರಮಾಣು ಭೂಮಿಗೆ ಗಡಿಕಲ್ಲು ಹೂಳಿಸಿ ಕೊಟ್ಟು (ಮೈಆರಿ. ೦೯೨೯, ೭೧-೦೫ ; 1817).

**ತಕರಾರು ತೆಗೆ** = ಆಕ್ಷೇಪಿಸು ; ತಕರಾರು ಮಾಡು : ರೂಲ್ಸ ಪ್ರಕಾರ ನಾವು ನಡೆದುಕೊಂಡಿಲ್ಲ ಅಂತ ತಕರಾರು ತೆಗೆದು ನಮ್ಮ ಈ ದೀಪ ಬಂದ ಮಾಡಬಹುದು (ಮನೆಪಿ. ೦೬೩). **ತಕರಾರು ಮಾಡು** = ೧. ದೂರು: ಮಾಣಿ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯಬೇಕಾಯಿತು (ಹೊಸಕ. ೫೮). ೨. ಅಡ್ಡಿ ಮಾಡು ; ವಿರೋಧಿಸು : ಈಗ ಅವರ ಮಗ ಟೀಪುಸುಲ್ತಾನರು ತಕರಾರುಮಾಡಿ . . . ತರಾರತು ಮಾಡುತ್ತಾರೆ (ರಾಜೇಂದ್ರ. ೫೦). **ತಕರಾರು ಹೂಡು**=ತಕರಾರುಮಾಡು ೧: ಸಂಬಳ ಸಾಲದು . . . ಎಂದೆಲ್ಲರೂ ಅವರಿವರ ಮಾತು ಕೇಳಿ ತಕರಾರು ಹೂಡಿದೆವು (ಹುಚ್ಚುಹು. ೭೦) ; ನಾನು ಹಡಗಿನಿಂದ ಸಾಮಾನುಗಳನ್ನು ಇಳಿಸಿದೆನೊ ಇಲ್ಲವೊ ಇಲ್ಲಿಯ ರಾಜ ತಕರಾರು ಹೂಡಿದ (ಪ್ರವಾಸ. II, ೦೯೦). [ ←ಅರ. ಹಿಂ. ಮರಾ. ತಕರಾರ್, ತಕ್ರಾರ್ ]

**ತಕರಾರು ಅರ್ಜಿ** (ನಾ). ೧. ಕೆಳಗಿನ ಕೋರ್ಟಿನ ತೀರ್ಪನ್ನು ಪ್ರತಿಭಟಿಸಿ ಸಲ್ಲಿಸಿದ ಅರ್ಜಿ : (*). ೨. (ನ್ಯಾಯಾಲಯಕ್ಕೆ) ಒಬ್ಬನು ಸಲ್ಲಿಸಿದ ಅರ್ಜಿಗೆ ಪ್ರತಿಯಾಗಿ ಸಲ್ಲಿಸಿದ ಅರ್ಜಿ : (*). [ತಕರಾರು + ಅರ್ಜಿ₂]

**ತಕರಾರುಇಸಮು** (ನಾ). ಅಡ್ಡಿ ಮಾಡುವ ಸ್ವಭಾವದವನು : ಬಲು ತಕರಾರು ಇಸಮು (ಕಮಲ. ೦೬೮). [ತಕರಾರು + ಇಸಮು (<ಇಸಂ)]

**ತಕರಾರುತಃಖ್ತೆ** (ನಾ). ೧. ಹಳ್ಳಿಯ ಶ್ಯಾನಂಭೋಗರು ಸರ್ಕಾರಿ ಜಮೀನುಗಳ ಒತ್ತುಗಡೆ ಮುಂತಾದ ವಿಚಾರಗಳನ್ನು ಗುರುತು ಮಾಡಿ ಇಟ್ಟಿರುವ ದಾಖಲೆ ಪುಸ್ತಕ. ೨. ತಕರಾರು ಅರ್ಜಿಗಳನ್ನು ನಮೂದು ಮಾಡುವ ಪುಸ್ತಕ : ಗ್ರಾಮ ಪಂಚಾಯತಿಯವರು ಯಾವಾಗಲೂ ಒಂದು ತಕರಾರು ತಃಖ್ತೆಯನ್ನು ಇಟ್ಟಿರಬೇಕು (ರೂಢಿ).
[ ತಕರಾರು + ತಃಖ್ತೆ (<ತಖ್ತೆ) ]

**ತಕರಾಲು** 'ತಕರಾರು' ನೋ.

**ತಕಲಿ, ಟಕಳಿ** (ನಾ). ನೂಲನ್ನು ತೆಗೆಯುವ ಒಂದು ಉಪಕರಣ ; ಕದಿರು : ರಂಗಣ್ಣ ಕಾಕಾ ಪಡಸಾಲೆಯಲ್ಲಿ ಕುಳಿತುಕೊಂಡು ತಕಲಿಯಿಂದ ನೂಲು ತೆಗೆಯುತ್ತಿರುವರು (ಚಂದಯ. ೧೨) ; ಹಿಂದಿನ ಕಾಲದಲ್ಲಿ ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು (ಗೃಹವಿ. ೭೨). **ಟಕಳಿ:** ನಿತ್ಯ ನೂಲಬೇಕೆಂದು ನಿಯಮ ಮಾಡಿದವರಿಗೆ ನೂಲಲು ಟಕಳಿಯನ್ನು ಕೊಡಲಿಲ್ಲ (ಭಾರಸಂ. ೪೭) ; ಟಕಳಿಯಲ್ಲಿ . . . ನೂಲು ತೆಗೆಯುತ್ತಿದ್ದ (ದೀಪಹ. I, ೯೮). [ ←ಹಿಂ. ತಕಲೀ ]

**ತಕಲೀಫು** (ನಾ). ತೊಂದರೆ ; ಕಷ್ಟ : ಇದು ತುಂಬಾ ತಕಲೀಫು ಕೊಡುವ ಕೆಲಸ (ರೂಢಿ). [ ←ಅರ. ಹಿಂ. ಮರಾ. ತಕಲೀಫ್ ]

**ತಕಲು** 'ತಕ್ಕಿಲ್₂' ನೋ.

**ತಕಶೀರು** 'ತಕ್ಸೀರು' ನೋ.

**ತಕಶೀರುದಾರ** 'ತಕ್ಸೀರುದಾರ' ನೋ.

**ತಕಾರ** (ನಾ). 'ತ' ಎಂಬ ಅಕ್ಷರ : ಕಿಱಿದರ್ಕೆ ಕುಱಿಂಬೆಡೆಯಲ್ಲಿ ತಕಾರಂ ಸ್ವರಮಡಸೆ ಪರಕ್ಕುತ್ವಮುಸ್ವರಂ ನಿಲೆ ಪರದೊಳ್ (ಶಮದ. ೦೮೦).

[ ಸಂ. ]

**ತಕಾವಿ**, ತಗಾಯಿ, ತಗಾವಿ (ನಾ). ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಸರಕಾರದವರು ಕೊಡುವ ಸಾಲ,-ಮುಂಗಡ ಹಣ: ರೈತರಿಗೆ ಬೇಕಾದರೆ ಮುನಾಸಬು ತಕಾವಿ ಕೊಡುವುದಕ್ಕೂ . . . ಏರ್ಪಾಡಾಗಿತ್ತು (ಮುಹಾಪಂ. II, ೩೦). **ತಗಾಯಿ:** ತಗಾಯಿ ವಸೂಲಿಯ ಕೆಲಸವನ್ನು . . . ಆ ಕಾಲದಲ್ಲಿ ಅವರು ಮಾಡುತ್ತಿದ್ದರು (ಬ್ಯಾಂಕಳ್. ೦೨೬) : ಇನ್ನೊಬ್ಬರಿಗೆ ತಗಾಯಿಯ ಹಣವನ್ನು ಕೊಡಿಸುವದಾಗಿಯೂ . . . ಹೇಳುವರು (ಗಂಗಾಸಾ. ೪೮). 'ತಗಾಯಿಸಾಲ' ಪರಾ. **ತಗಾವಿ :** ತಗಾವಿಯಲ್ಲಿ ನೋಡಲಿಲ್ಲವೇ, ತಹಸೀಲದಾರ ಸಾಹೇಬರು ಸಾವಿರಗಟ್ಟಲೆ ಹೊಡ ಕೊಂಡರು (ಕ್ರೇಮುಕ್ರ. ೨).

[←ಅರ. ಹಿಂ. ತಕಾವೀ ; ಮರಾ. ತಕಾವೀ, ತಗಾಈ ]

**ತಕಾವಿರಕಮು** (ನಾ). ತಕಾವಿ ಸಾಲದ ಮೊತ್ತ : ಭೂಕಂದಾಯವನ್ನೂ ತಕಾವಿ ರಕಮನ್ನೂ ಸರಕಾರಕ್ಕೆ ತುಂಬಿ ಅಧಿಕಾರದಿಂದ ನಿವೃತ್ತರಾದರು (ವಾಕೂಟಿ. ೯).

[ ತಕಾವಿ + ರಕಮು (<ರಕಂ) ]

**ತಕಾವಿಸಾಲ**, ತಗಾಯಿಸಾಲ (ನಾ). = ತಕಾವಿ : ಸರ್ಕಾರದಿಂದ ರೈತರಿಗೆ ತಕಾವಿ ಸಾಲ (ಗ್ರಾಮಾಳ.೦೩೯). **ತಗಾಯಿಸಾಲ:** ತಗಾಯಿಸಾಲ ಮಂಜೂರ ಮಾಡುವ ಬಗ್ಗೆ ರೈತರು ಅಧಿಕಾರಿಗೆ ಅರ್ಜಿಮಾಡಿಕೊಂಡರು (ಕಕವೀ. ೬೫).

[ ತಕಾವಿ + ಸಾಲ₁ ]

**ತಕ್ಕ₁** (ನಾ). ೧. ಯೋಗ್ಯನಾದವನು ; ಅರ್ಹನಾದವನು ; ಸಮರ್ಥ ನಾದವನು: ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಱರ್ ತಕ್ಕರೇ (ಪಂಪಭಾ. ೬-೪೧) ; ಸೇನೆಯ ಬಹುಳತೆಯ ಲೆಕ್ಕಿಸಲ್ ತಕ್ಕನಾವಂ (ಕುಸುಮಾ. ೩-೧೪) ; ತಕ್ಕರಿಲ್ಲದ ಸಭೆ ಮದಾಂಬುವನುಕ್ಕದಿಭ (ಸಾಳ್ವಭಾ. ೩-೦೦) ;ತಕ್ಕನ್ ತಕ್ಕವೊಲ್ ಬಾಳ್ವವನ್ (ಅಕ್ಕಕ್ಕಾ. ೦೯-೪೦೩). ೨. ಒಳ್ಳೆಯವನು ; ಸಜ್ಜನ : "ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತನಪ್ಪಂ" (ವಸ್ತುಕೋ. ೦೦೦-೦೦) : ತಕ್ಕನಂ ಪೊಲೆಯನೆ ಮಾಳ್ಪ ಪಮಂ ಪೊಲೆಯನಂ ತಕ್ಕನೆ ಮಾಳ್ಪ . . . ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨-೯೨) ; ಪಾಪಕ್ಕಂಜುಗುಂ ತಕ್ಕಂ (ಛಾಹಾಭೂ. ೮೦ ಉದಾ) ; ಮಕ್ಕಳಾಟಿಕೆಯಾದಡಾಗಲಿ ತಕ್ಕರಲ್ಲೆಂದೆನಲಿ ಸಲಹುವಡಕ್ಕ ಸೈರಂಧ್ರಿಯುನು ಸೇರಿಸಬೇಕು ತನಗೆಂದ (ಕುಮ್ಯಾವಿ. ೨-೪೬) ; ತಕ್ಕರ ಗೋಷ್ಠಿ ತನೂದರಿಯರ ಪೊಸ ತಕ್ಕೆ . . . ಹೃದಯಕ್ಕೆ ವಿಲಾಸಮನೀವುದು (ಜಯುಕಾ. ೧-೨೪). ೩. ಹಿತವನ್ನು ಬಯಸುವವನು ; ಗೆಳೆಯ :. "ತಕ್ಕವೆಂದತ ಹಿತವಂ" (ಕಶಸಾ. ೧೮-೩೬೧) ; "ಹಿತವಂ ತಕ್ಕನೆನಿಸಿರ್ಕುಂ" (ಅಭ್ಮಿಳ್. ೩೭) ; ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು (ಪಂಪಶಂ. ೦೨೩-೦೯) : ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ (ಜಯುಕಾ. ೦೦-೩೯). ೪. ಊರಿನ ಮುಖ್ಯಸ್ಥ : "ಲಾ ಅಪ್ಪಯ್ಯ, ತಕ್ಕರಿ ದಾರೇನೊ?" ಎಂದನು (ಚಿಕಹಾ. ೨೪) : ನೀನು ಇಲ್ಲದುದು ಒಂದು ದೊಡ್ಡ ಕೊರತೆಯಾಯಿತೆಂದು ಊರ ತಕ್ಕ ಮತ್ತು ಅರುವರು ಹೇಳಿ ಕೊಂಡರು (ನಹದಾ. III, ೦೦೩೯). 'ಗ್ರಾಮತಕ್ಕ' ಪರಾ.

[ ತಕ್ಕು₂ + – ಅ₇. / ಕೊಡ. ತಕ್ಕ ]

**ತಕ್ಕ₂** 'ತಗು' ಪರಾ.

**ತಕ್ಕಡಿ₁** (ನಾ). ವಸ್ತುಗಳನ್ನು ತೂಕಮಾಡುವ ಸಾಧನ; ತ್ರಾಸು: ರತ್ನ ಪರೀಕ್ಷಕರು ಯಣಿಸಲಶಕ್ತರಾಗಿ ತಕ್ಕಡಿಗಳಿಂದಾ ಮಣಿ ಯಿಷ್ಟೆಂದು ತಿಳಿದವರಲ್ಲಾ (ಸೌಗಂಧಿ. ೬೩೩-೦೯) ; ಗೀತೆಯು ಪ್ರತಿಯೊಂದು ವಿಷಯದಲ್ಲಿ ತಕ್ಕಡಿಯನ್ನು ಸಮತೂಕವನ್ನಾಗಿ ಹಿಡಿಯಲು ಪ್ರಯತ್ನಿಸುತ್ತದೆ (ಗೀತಾಸಂ. ೧೨೫): ತಕ್ಕಡಿಗೋ ಬೇಡ ಕಾಣಿ ತೂಗುತಿರಲಿ ಸತ್ಯವಾಣಿ (ಅರಳು.೪೦೦-೫). **ತಕ್ಕಡಿ ಹಿಡಿ**=೧. ತೂಗು ; ತೂಕಮಾಡು. ೨. ವ್ಯಾಪಾರಮಾಡು. ೩. ಪರೀಕ್ಷಿಸು; ಬೆಲೆಕಟ್ಟು: ಪರಿಶೀಲಿಸಲಿ, ತಕ್ಕಡಿ ಹಿಡಿಯಲಿ, ಕೇಳಲಿ, ತೂರಲಿ (ಕೆ೬ಸಾ. IV ೬೮೩೪). [ ದೇ.॥ ತಮಿ. ತಕ್ಕಟ್ಟಿ, ತಕ್ಕಟ್ಟೈ ; ಮಲ. ತಕ್ಕಡಿ ; ತುಳು. ತಕ್ಕಡಿ ; ತೆಲು. ತಕ್ಕೆಡ ]

**ತಕ್ಕಡಿ₂** (ನಾ). ಮೋಸ : ಎಱಕಮಲ್ಲದೆ ಪೊಲ್ಲದಾಗಿಱಗಿ ದೊರೆಕೊಣ್ಕೆ ಕೊಳ್ಳ ತೆಱನಲ್ಲದ ನೆಱೆಯ ಬರಲೆ ತಕ್ಕಡಿಯಲ್ಲಿ ಬೀಸುವಲ್ಲಿಯ ಬೀಸಲಱಿದೆಯಿಲ್ಲ . . . ಆಸುವನುಂ ಕೂಕುವನುಂ ಬೀಸುವನುಂ ಗಡಯ ನೆಗಟ್ಟಿ ತಕ್ಕಡಿಯೊಳೆನುತ್ತಾಸದೆಯು ಕುಂಕದೆಯುಂ ಬೀಸದೆಯು ಬಿದ್ದ ವೆಟಿಗುಮೆಟಿವ ಬೆಡಂಗಂ (ಎಳ. II, ೦೩೩- ೦೨೪ ; ೨೨೭).

[ ದೇ.॥ ತಮಿ. ತಕ್ಕಟ್ಟಿ ; ತೆಲು. ತಕ್ಕಿಡಿ ]

**ತಕ್ಕಡಿಗ** (ನಾ). ತಕ್ಕಡಿ ಹಿಡಿಯುವವನು ; ವ್ಯಾಪಾರಿ.

[ ತಕ್ಕಡಿ₁ + – ಗ₃ ]

**ತಕ್ಕಡುಗುದುರೆ** (ನಾ). ಯೋಗ್ಯವಾದ ಅಶ್ವ ; ಚುರುಕಾದ ಕುದುರೆ : ಲಂಡಿ ಸವೆದು ಹೋದರೆ ಬಿಚ್ಚುವುದ ತಾ ಕಂಡು ತಕ್ಕಡುಗುದುರೆಯನು ಕೊಂಡು ಬಂದೀ ಹುಯ್ಯಲೊಳಗೆಱಗುವೆನೆಂದು ಬಂಡಾದ ಬೆನಕರಾವುತನು (ಮೋಹತ. ೩೮-೪೨). [ ತಕ್ಕಡು₀ (P←ಮರಾ. ತಾಖಡಾ) + ಕುದುರೆ ]

**ತಕ್ಕನೆ** (ಅ). ಒಮ್ಮೆಲೆ ; ಫಕ್ಕನೆ : ಎನೆ ನಕ್ಕನ್ ತಕ್ಕನ್ ತಕ್ಕನತಿ ಕ್ರಮಣೀಯಮಿಾ ಜಯೋತ್ಸವದೊಳ್ (ವಿಷ್ಣುಪು. ೧೩-೦೦೩).

[ ತಕ್₀ + – ಅನೆ₁ ]

**ತಕ್ಕಯಿಸು** 'ತಟ್ಟೈಸು' ನೋ.

**ತಕ್ಕಲಿ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಕರ್ಕಾಟಕಶೃಂಗಿ, ಮರದರಿಸಿನ . . . ತಾರೆಬೇರು, ತಕ್ಕಲಿ ಇವಂ ಕಷಾಯವಿಟ್ಟು ಕೊಡಲು ವಾತಜ್ವರ ನಿಲ್ಲುವುದು (ಸಕವೈ. ೬೯). 'ತಕ್ಕಿಲ್₁' ಪರಾ. [ ? ]

**ತಕ್ಕಲು** 'ತಕ್ಕಿಲ್₂' ನೋ.

**ತಕ್ಕವಲ** (ನಾ). = ತಕ್ಕೋಲ₂ ೧ : ಉಪಯುಕ್ತಮಪ್ಪ ತಕ್ಕವಲ ವುಟ್ಟಯೇಲಕ್ಕಿ[ಪಾಠಾಂ. ತಕ್ಕಪ್ಪವಲಘಟ್ಟ] ತಗರಮಲಯಜವಿನಿತೆು . . . ಉಪಸೇವಿಸಿ ಪೊಗೆಯನೊಗೆದ ಬಟಲಿಕೆಯಟುಗುಂ (ಶಮದ. ೨-೧೮೪).

[ <ಸಂ. ತಕ್ಕೋಲ ]

**ತಕ್ಕವಿಸು** 'ತಟ್ಟೈಸು' ನೋ.

**ತಕ್ಕಸೈಲ** (ನಾ). ಮೈಲುತುತ್ಥ ; ರಸಾಂಜನ : "ತಾರ್ಕ್ಷ್ಯ-ತಕ್ಕಸೈಲ" (೬೫ಧಿ. ೬೬). [ <ಸಂ. ತಾರ್ಕ್ಷ್ಯಶೈಲ ]

**ತಕ್ಕಳಿ** 'ತಕ್ಕಟು' ನೋ.

**ತಕ್ಕಳಿಸು**(ಕ್ರಿ). (ನೀರು ಮೊದಲಾದುವನ್ನು) ಚಿಮುಕಿಸು; ಸಿಂಪಡಿಸು: ತುಂಬಾ ಧೂಳಿದ್ದಿದೆ, ನೀರು ತಕ್ಕಳಿಸಬೇಕು (ರೂಢಿ). [ ? + – ಇಸು₃ ]

**ತಕ್ಕಟು**, ತಕ್ಕಳಿ(ಕ್ರಿ).೧. ಘನತೆಯನ್ನು ಕಳೆದುಕೊಳ್ಳು; ಹಿರಿಮೆಗುಂದು: ಘನತೆಗೆಡು : ತಕ್ಕಟಿದೆನಗೆ ಸಪತ್ನಿಯರಿಕ್ಕುಂಗೂಟಿಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುರಿಯಪ್ಪ ದುರ್ಯಶಮಕ್ಕುಂ ತನಯುಂ ತಪಕ್ಕೆ ಪಕ್ಕಾಗಲೊಡಂ (ಪಂರಾಮಾ. ೬-೪೦). ೨. ಎದೆಗುಂದು ; ಶಕ್ತಿಗುಂದು ; ಧೈರ್ಯವುಡುಗು : ಇಭರಿಪುವಂ ತಕ್ಕಟುವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨-೦೦೬) ; ಮಱುಪಕ್ಕದ ನಾಯಕರನಾಜಿಯೊಳ್ಕಂಡಿನಿಸುಂ ತಕ್ಕಟಿದನೆ ಬಗೆಯೊಳ್ ಬೆಳ್ವಕ್ಕಿಯ ಪಿಂಡಿಂಗವಂದಿರಂ

ಸರಿಗಂಡಂ (ಪಂರಾಮಾ. ೯-೫೮) ; ತಕ್ಕಟಿಯದೆಕ್ಕತುಳಂ ಪೊಣರ್ದು . . . ಒಂದನೊಂದಿಱಿಯಲಿರ್ದುವು ತಟ್ಟಿರಡುಗ್ರ ದಂತಿಗಳ್ (ಪುಷ್ಪಪು. ೫-೮೦); ಪಚ್ಚೆ ಪಚ್ಚೆಗೆ ತಕ್ಕಟಿದು ಬಗೆಗುಂದಿ ಕಂಡರಂ ಬೆಸಗೊಳುತುಂ (ರಾಮಾಶ್ವ. ೧೧೦-೬). ೩. ಔಚಿತ್ಯವನ್ನು ಮೀರು ; ಮರ್ಯಾದೆಯನ್ನು ತಪ್ಪು : ನೆರೆಯೊಳಘಮರ್ಷಣದೊಳಿರ್ಪ ಮುನಿಗಳಂ ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಮಾಶ್ವ. ೧೩೬-೨೧). ತಕ್ಕಳಿ : ೨. ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱಿ ನೋಡುತುಂ (ನಂಬಿರ. ೬-೧೩೦); ಕೆಲ ಪೌಜು . . . ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯಲ್ಲಿ ನಿಲ್ಲದಾಯಿತು (ಷಟ್ಕುಶಾ. ೮-೫೦) ; ಪೊಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕ ಬಲದವರು (ಜಯುಕಾ. ೬-೧).

[ ತಕ್ಕು$_2$ + ಅಟಿ$_1$ ]

**ತಕ್ಕಾಬಿಕ್ಕಿ**, ತಕ್ಕಿಬಿಕ್ಕಿ (ನಾ). ಮೋಸ ; ವಂಚನೆ ; ಅಪ್ರಾಮಾಣಿಕ ವ್ಯವಹಾರ: "ತಕ್ಕಾಬಿಕ್ಕಿ–ಮೋಸತನ" (ಜಾನಕೋ. ೬೩). **ತಕ್ಕಿಬಿಕ್ಕಿ**: (+).

[ <ತಕ್ಕು$_3$ ]

**ತಕ್ಕಾಮೆ** (ನಾ). ೧. ಘನತೆ ; ಗೌರವ : ಜೊತೆ ತಕ್ಕರನ್ನತಾರೆ ; ಕೊಡಗ ಅದನ್ನ ತಡೆಯಬಹುದೆ ? ತಡದೆ, ತಕ್ಕಾಮೆ ಉಳಿಯತ್ತೇನು ? (ಜಿಳರಾ. ೧೦೯). ೨. ಒಡೆತನ ; ಪದವಿ ; ಸ್ಥಾನಮಾನ : ಇವರು ಬೇಸರಗೊಂಡ ವರಲ್ಲಿ ಮುಖ್ಯರಾದ ಜನ ಇಂಥವರು ನಾಡಿನ ಎಲ್ಲ ಸೀಮೆ ಎಲ್ಲ ತಕ್ಕಾಮೆ ಯಲ್ಲಿಯೂ ಇರುವರು (ಜಿಳರಾ. ೫೩). 'ತಕ್ಕುಮೆ' ಪರಾ.

[ ←ಕೊಡ. ತಕ್ಕಾಮೆ ]

**ತಕ್ಕಾರಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ತಕ್ಕಾರಿ ಯೆಂಬ ಬೀಜವಂ ಚೂರ್ಣವಂ ಮಾಡಿ ನೀರಿನಲ್ಲಿ ಕದರಿ ಗಿಡಗಳ ಬೇರಿಗೆ ಹಾಕಿದರೂ . . . ಆ ಗಿಡಗಳು ಚನ್ನಾಗಿ ವೃದ್ಧಿಯಂ ಹೊಂದುವದಿಲ್ಲ (ಸೌಗಂಧಿ. ೪೩೬-೭೦). 'ತಕ್ಕಿಲ್$_1$' ಪರಾ. [ <ಸಂ. ತರ್ಕಾರೀ ]

**ತಕ್ಕಾಳಿ** (ನಾ). ಟೊಮ್ಯಾಟೊ; ಚಪ್ಪರಬದನೆ: ತಕ್ಕಾಳಿ (ಟೊಮ್ಯಾಟೋ) ಬೇರನ್ನು ಕಷಾಯಮಾಡಿ ಕಲ್ನಾರು ಗ ೧ ತೂಕವನ್ನು ಅರೆದು ಕಲಸಿ ತೆಗೆದುಕೊಳ್ಳಲು ಬಹುಮೂತ್ರ ನಿಲ್ಲುವುದು (ಸಕವ್ಯ. ೫೦೦ ಪಠಿ) : ಗೂದೆ ಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ಪ್ರುಶಿಗಿ. ೫೦–೦೦೩೦) ; ವಿಟಮಿನ್ ಸತ್ವ ಅಧಿಕವಾಗಿರುವುದು ತಕ್ಕಾಳಿ ಹಣ್ಣುಗಳಲ್ಲಿ (ಕರಜಿ. ೪೦).

[ ದೇ.॥ ತಮಿ. ಮಲ. ತಕ್ಕಾಳಿ; ತೆಲು. ತಕ್ಕಲಿ ]

**ತಕ್ಕಿಬಿಕ್ಕಿ** 'ತಕ್ಕಾಬಿಕ್ಕಿ' ನೋ.

**ತಕ್ಕಿಲ್$_1$**, ತಕ್ಕಿಲೆ (ನಾ). ಒಂದು ಬಗೆಯ ಮರ ; ತಗ್ಗಿಮರ : ಎಲವಂ ಪಾದರಿ ಹಾಲೆ ನುಗ್ಗೆ . . . ಬೊಬ್ಬುಲಿ ತಕ್ಕಿ[ಪಾಠಾಂ. ತೊಕ್ಕ, ತೊಲ್ಕಿ] ಲ್ತರುಕಾಸು ನೆಲ್ಲಿ (ಸೂಕ್ತಿಸು. ೩-೨೩). **ತಕ್ಕಿಲೆ**: "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ–ಇ ತಕ್ಕಿಲೇಗಿಡ, ತಗ್ಗೀಸೊಪ್ಪಿನ ಗಿಡ" (ಸಿದ್ಧಾಂತಿ. ೦೦೧); ಈಡಿಗಿಡ, ಅಗ್ನಿಮಂದ, ತಕ್ಕಿಲೆ, ಛಾಟಣಿಗೆ ಮರ (ಪ್ರುಶಿಗಿ. ೬೪–೦೩೦೦).

**ತಕ್ಕಿಲ್$_2$**, ತಕಲು, ತಕ್ಕಲು, ತಕ್ಕಿಲು, ತರ್ಕಿಲ್ (ನಾ). ವ್ಯವಸಾಯಕ್ಕೆ ಯೋಗ್ಯವಾದ ಭೂಮಿ : ತಕ್ಕಿಲ ೩ ಮತ್ತರ್ಕ್ಕೆಯುಮಂ . . . ಬಿಟ್ಟರು (ಕಇ. II, ೦೦-೩೧ ; 1080) ; ನೆಸಱುಪಾಡವಾ ಗಡಿಂಬದಿಂ ತಕ್ಕಿಲ ನೆಲ ಮತ್ತ ೨ (ಸೌಇಇ. IX-I, ೨೫೩-೬೯ ; 1149) ; ಹಳ್ಳದಿಂ ಪಡುವಲ್ ತಕ್ಕಿಲ ಮತ್ತರು ೩ (ಎಇ. XIV, ೨೭೨-೪೦ ; 1173) ; ಖಂಡಸ್ಫುಟಿತ ಜೀರ್ಣೋದ್ಧಾರವಿನ್ನಿನಿತಕ್ಕಂ ಬಿಟ್ಟ ತಕ್ಕಿಲ ಮತ್ತರ್ ೨ (ಸೌಇಇ. IX-I, ೨೯೬–೬೩ ; 1176). **ತಕಲು** : ಯೆರಡನೆಯ ವರಿಸಕೆ ಪ ೨ ಮೂಱನೆಯ ವರಿಸಕೆ ಪ ೩ ಯರಿ ಹೊಲ ತಕಲು ನೂಱಕೆ ಪ ೧ (ಎಕ. XIV, ತಿರುಮ. ೬೨-೨೩ ; 1809). **ತಕ್ಕಲು**: ಮಣ್ಣ ಮೊರಟಿ ಕೆಳಗಿರುವ ಕುರುಬರ ತಕ್ಕಲ ಮೂಡಣ ತೆವಿರೊತ್ತಿನಲ್ಲಿ ನೆಟ್ಟ ಕಲ್ಲು (ಎಕ. XIV, ನಂಜನ. ೨೯೫-೨೦೬ ; 1716) **ತಕ್ಕಿಲು** : ತೆವರಕೇರಿಯಡ್ಡವಸುಗೆಯ ತಕ್ಕಿಲು ಮತ್ತರು (ಎಇ. XIII, ೪೯-೮೧ ; 1112) : ಹಟ್ಟಣದ ದಾರಿಯಿಂ ತೆಂಕಲು ತಕ್ಕಿಲು ಒಡ್ಡಿಹಟ್ಟಿಯ ಗಡಿಂಬದ ಘಳೆಯಲು ಮತ್ತರು (ಸೌಇಇ. IX-I, ೨೯೭–೪೩ ; 1177) ; ಸೋಭನೇಶ್ವರದ ಹೊಲಸ ಮೇರೆ ಮಸ್ತಂ(ತ್ರಂ) ತೋಂಟ್ಟ[ತ]ಕ್ಕಿಲು ಅರವನ್ತ(ತ್ತ)ರು (ಸೌಇಇ. XV, ೦೩೦–೭ ; 1178) ; ಹಲವು ತಕ್ಕಿಲ ನಡುವೆ ಸವೆದ ಬೆಳೆಕ್ಕೆಯಂತೆ ಹಲವು ಬಸದಿಯ ನಡುವೆ ಸುರಹೊನ್ನೆ ಬಸದಿ ಯಗ್ಗಲಿಸಿ ಮೆಱೆಯಲು (ಸೋಮಶ. ೪-೦೫). △ **ತರ್ಕಿಲ್** : ನಾಗಯ್ಯ ಗೇರಿಯ ಶತದ ತರ್ಕ್ಕಿಲ್ಗೆಯ್ಯ ಮತ್ತರು ೩ (ಕಇ. II, ೯-೦೯ ; 1075).

**ತಕ್ಕಲು ಕೀಳು** = ವ್ಯವಸಾಯದ ಭೂಮಿಯಲ್ಲಿರುವ ಕಳೆಯನ್ನು ಕೀಳಂ,–ಕಿತ್ತುಹಾಕು : ಆ ಸಾಲಿನಲ್ಲಿ ಸ್ವಲ್ಪ ತಕ್ಕಲುಕಿತ್ತು ಹೊಗೆಹಾಕ ಬೇಕೆಂದೂ ಅವರ ವಾದ (ಹಂಗಾಳ್ಕ. ೩೦೩) : ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಅರುವತ್ತು ವರಹ ಬಂತು (ಹಂಗಾಳ್ಕ. ೩೦೩).

**ತಕ್ಕಿಲು** 'ತಕ್ಕಿಲ್$_2$' ನೋ.

**ತಕ್ಕಿಲೆ** 'ತಕ್ಕಿಲ್$_1$' ನೋ.

**ತಕ್ಕಿಸು$_1$** (ಕ್ರಿ). ಅಪೇಕ್ಷಿಸು ; ಬಯಸು : ತಕ್ಕಿಸಲೆ ತಕ್ಕ ಶೋಭೆಗೆ ಪಕ್ಕಾ ದೊಡಮರಸನಲ್ಲಿ ಪುಗಲೊಲ್ಲದೊಡಂ ಪಕ್ಕಣಮಂ ಬಲ್ಪಿಂದಂ ಪೊಕ್ಕುವು ನಿಯಮಿಸುವರಾರೊ ಕಣ್ಣಂ ಮನಮಂ (ಲೀಲಾವ. ೮–೪೦) ; ಅಸಮಶರನ ತನುವಾಂತನೆಳಸೆಯದು ತನಗಿನಿತು ಶೋಭೆಯೆಂದೊಲವಿಂ ತಕ್ಕಿಸಿದುದು ಕಡುಗಾಡಿಯೆನಲ್ ವಸುದೇವನ ಗಂಡಗಾಡಿ ಗಣನೆಗಳುಂಬಂ (ಮಹಾನೇ. ೪–೨). [ ತಕ್ಕು$_2$ + –ಇಸು$_3$ ]

**ತಕ್ಕಿಸು$_2$** 'ತಟ್ಕಿಸು' ನೋ.

**ತಕ್ಕಿಱಿ** (ಕ್ರಿ). ಸಾಮರ್ಥ್ಯ ತಗ್ಗು ; ಶಕ್ತಿಗುಂದು : ಏಳಯಜಳಧರದ ಪೊಳ್ ಕಡುಮುಳಿಸಿಂ ಖಚರೇಂದ್ರಸೇನೆ ಕವಿದೆನಸುಂ ತಕ್ಕಿಱಿಯೆ ರಿಪು ಬಲದ ಮೇಲಾಗಳೆ ಸುರಿದುದು ತರನೆ ಸರಲ ಬಲುಸರಿವಱೆಯಂ (ಶಾಂತೀಶ್ವ. ೩–೯೩). [ ತಕ್ಕು$_2$ + ಇಱಿ ]

**ತಕ್ಕು$_1$** (ಕ್ರಿ). ೧. ಪಡೆ ; ತೆಗೆದುಕೊಳ್ಳು : ಎಮ್ಮಣ್ಣ ಖ್ಯಾತಿಯಿಂ ರಣವ ಜಯಿಸಲು ದಿವ್ಯವಸ್ತುಗಳ ನೀ ತಕ್ಕಿಕೊಂಡು ಬಹುದಯ್ಯಾ ಸೈರಂಧ್ರಿ ಯೆಂದುರೆ ಹರಸಿ ಬೀಳ್ಕೊಟ್ಟಳು (ಲಕ್ಷ್ಮೀಭಾ. ೪–೪–೬). 'ತೆಗೆ$_1$' ಪರಾ. ೨. (?) : ಮೆರೆವ ಮಧುಮಾಸವಿದು ವರ್ಷರ್ತುವಲ್ಲಲೇ ಬೆರಗಿದೇನುಕ್ಕಿ ದಂತೈತಂದು ಪೆರ್ಜಲಂ ಪರಿದುಕ್ಕಿ ತಕ್ಕುತಿದೆ ಮಚ್ಚಿವಾರಾಧನೆಯು ವೊಂದಲ್ಲದೆರಡು ವೇಳೆ (ಶರಹ. ೦೩–೨೯). [ ? ]

**ತಕ್ಕು$_2$**, ತರ್ಕು (ನಾ). ೧. ಶ್ರೇಷ್ಠತೆ ; ಘನತೆ; ದೊಡ್ಡಸ್ತಿಕೆ ; ಹಿರಿಮೆ; ಯೋಗ್ಯತೆ : ಅಂತದಟರನೊಂದೆವೊಯ್ದು ಮರಡುಂ ಬಲಮೆನ್ನನೆ ನೋಡೆ ತಕ್ಕನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ (ಪಂಪಭಾ. ೦೦–೪೦) : ಪುಸಿವುದೆ ತಕ್ಕು ಕೊಟ್ಟಱಿಕಿಕೊಳ್ವುದೆ ಮನ್ತಣಂ (ಎಕ. II, ೧೩೩–೪೫ ; 982) ; ತಕ್ಕಿನ ಪವಳದ ಸಂಕೆಯ ಟಿಕ್ಕೆಯ ಮಣಿ ಗಳನೇಕವಂ . . . ಸೂಱೆಗೊಳ್ವನವನುತ್ಸವದಿಂ (ಧರ್ಮಾಮೃ. ೨–೩೬) ; ಒಕ್ಕಲ್ತನವುಮನಱಿವಿನ ತಕ್ಕುಮನಱಿವವಗುಣಂಗಳೆಮಾಗೇವುವು(ಬಂಹರಿ. ೦–೨೦) : ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಕವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂಡು ಪೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೦–೪೯). ೨. ತಕ್ಕುದು; ಯೋಗ್ಯವಾದುದು ; ಉಚಿತವಾದುದು : ರಕ್ಕಸನ ಮಾಡದೊಳಗಂ ಪೊಕ್ಕಾವಂ ಸುಖದಿನಿರ್ದನಾತಂಗೆ ಕರಂ ತಕ್ಕಪ್ಪೆ[ಪಾಠಾಂ. ತಕ್ಕಿಪ]ನ್ನಾತ್ಮ ಜೆಯಂ ಮಿಕ್ಕಿರ್ದಾ ನಾಡುಮಂ ನಿತಾಂತಂ ಕುಡುವೆಂ (ಜೀವಸಂ. ೨೦೫–೪೯):

ಮಾರ್ಗಮಂ ತಕ್ಕನಿಸಿ ಪನ್ನೆರಡು ಸಾಸಿರದ ಗಾವುದಮಂ ಕ್ಕದನುದಿನಕೆ ಪೋಪವನಾರುಯೆನುತಲಾ ಮಂತ್ರಿ ಸಹ ಯೋಚಿಸುತಿರೆ (ತುರಂಗ. ೩೨–೧೧). ೩. ಯೋಗ್ಯವಾದ ಮಾತು ; ನಾಣ್ನುಡಿ ; ಗಾದೆ : ಕಾಲಕ್ ಬುದ್ಧಮಂಡ ಎದೆ ಚವುಟತ್ತೆ ಎಂಬ ಕೊಡವ ತಕ್ಕನ್ನು ಅರಿತು ನಡೆಯುವ ವರು ದೊರೆಗಳು (ಹುಲಿಹಾ. ೮೩) ; ಕೈಲಾಗದವನಿಗೆ ಮೂಗಿನ ತುದಿಯಲ್ಲಿ ಚೊಡಿ ಎಂಬ ತಕ್ಕನ್ನು ನೀನು ಕೇಳಿಲ್ಲವೆ? (ಹುಲಿಹಾ. ೧೩೦). ೪. ಶೌರ್ಯ; ಸಾಮರ್ಥ್ಯ ; ಪರಾಕ್ರಮ : “ಪನ್ನತಿಕೆ, ಪೆಟ್ಟುಮೆರ್ಚು, ತಕ್ಕು . . . ಆರ್ಪು, ಅಣ್ಮು–ಈ ೮ ಪರಾಕ್ರಮಂ” (ಶಶಾ. ೦೩–೨೬೩) ; ನಲ್ಲಂಬಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ದೆಳ್ಳಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾ ಸಲ್ಲೀಳೆಯರ್ ಬಾಲೆಯರ್ ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೫೫೦ ಕೊದ್ರಳ) ; ಕಡುಗೆಯ್ಮನಾಗಿ ಶೀಘ್ರಸಂಧಾನವಿಸು ವಶ್ವಗ್ರೀವನ ತಕ್ಕುಂ ಬೇಗಯ್ಮೆಯುಂ ಕಿಡೆ (ಶಾಂತಿಪು. ೫–೬೦ ವ) ; ತಕ್ಕಿನಿನೀ ಶನೆಚ್ಚ ತಿಮಿರೇಷುಗಿನೇಷುಮನಗ್ನಿಮಿತ್ರ ಬಾಣಕ್ಕಹಿಬಾಣಮಂ . . . ಅಧೋಕ್ಷಜನೆಚ್ಚು ಪೊಡರ್ಪುದೋಱಿದಂ (ಜಗವಿ. ೦೮–೨೯) : ಧುರದೊಳಿದಿರ್ಚಿದ ಪಗೆವರನುರವಣೆಯಿಂ ಗೆಲ್ವ ತಕ್ಕು . . . ಅಂಗರಕ್ಕೆಗೆ ನಿಜಂ (ಎಕ. ೪, ಅರಸೀ. ೪೯–೩೦ ; 1186) ; ಏಕ್ಕರಸನುಂ ತಕ್ಕಂ ಬಿಸುಟ್ಟೋಡಿದಂ (ಪ್ರುಅರಿ. ೦೯೪೦, ೦–೩೨ ; 1800) ; ಎಕ್ಕಲಗಳು ತಮ್ಮ ತೆಗೆದ ಹಾಯಿಲಗಳ ನಿಕ್ಕಡಿಮಾಡಿ ಹಾಯ್ದುದನು ತ[ಪಾಠಾಂ. ಟ]ಕ್ಕಿನ ದೇಡರ ಕೆಡಹಿದುದನು ಕಂಡಿಕ್ಕಿದನಾ ವನಚರನು (ಜೈಮಿಸಂ. ೨–೫೬) ; ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ಮಿಗಿಲ್ಕೆಕ್ಕತುಳಂ ಪೊರ್ಕುಳಿಪೊಕ್ಕು ಕರಂ ಹಾಡಾಹಾಡಿ ಯೊಳುಱದಿಱದರ್ ತಮ್ಮೊಳಗೆ (ಜಯುಕಾ. ೬–೩೦). ೫. ಬೆಡಗು ; ರೀತಿ : ಅವಿರಳವಾದ ತುಂಗಕುಚಭಾರದೆ ತೋಳ್ಸೆಣೆದಿಟ್ಟ ತಕ್ಕಿನೊಳ್ ಕವಣೆಯ ಗುಂಡು ಪಾಯವು ಮೃಗಾವಳಿ ಪಾಯವು . . . ಪಾಂಥರೆರ್ದೆ ಪಮ್ಮನೆ ಪಾಱುವುವಾ ಪ್ರದೇಶದೊಳ್ (ಅನಂಪು. ೦–೮೨). ೬. ಸ್ನೇಹ ; ಪ್ರೀತಿ : “ತಕ್ಕು, ಅಬ್ಬಱು, ಒಱಲ್ . . . ಎಜ ೨, ಓವು–ಈ ೮ ಸ್ನೇಹಕ್ಕೆ ಪೆಸರ್” (ಶಶಾ. ೦೯–೩೯೦); “ತಕ್ಕೆಂಬುದು ನೇಹಮಪ್ಪುದು” (ಚತುನಿ. ೩೬) ; “ಎಱಕಂ ತಕ್ಕಬ್ಬಱು ಕೂರ್ಪೊಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ” (ಕವಿಕಂ. ೦೬೩). ೭. ಆಸೆ ; ಇಚ್ಛೆ ; ಉತ್ಸಾಹ : ಕ್ಷಿತಿತಲಮಂ ಗೆಲ್ದಿರ್ದಪ್ರತಿಮಲ್ಲನನಿಕ್ಕಿ ಮುಯ್ಯನಣ ಮಾನದೆ ದಟಿಸಿತ ದುರಿತಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದ ನಿಂದ್ರಾರ್ಚಿತನಾ (ಆದಿಪು. ೦೯–೦೩೪); ನಡೆತಂದರಾಜಗಿರ್ವಾಲದಲರಾತಿ ನಾಯಕರುಮೊರ್ಬರನೊರ್ಬರೆ ಗೆಲ್ವ ತಕ್ಕಿನೊಳ್ (ಪಂಪಭಾ. ೦೦–೫೨) ; ಮುಕ್ಕುಪೋಗದಳುರ್ಕುಮಂ ನೋಟಕರಪ್ಪನಮಪ್ಪವರಿಂ ಪೊಗಱಿಸುವೆನೆಂದು ತಱಿಸಂದು ತಮ್ಮ ತಿರ್ವರುಮನಿಕ್ಕುವ ತಕ್ಕು ಕೈಮಿಕ್ಕು ನಿಲೆ (ಶಾಂತಿಪು. ೪–೩೬ ವ) : ಮಹೇಂದ್ರುಂ ಪುರಮಂ ಪೊಱಮಟ್ಟು ಮಱುವಕ್ಕಮ ನಿಕ್ಕುವ ತಕ್ಕು ಮಿಕ್ಕು ಬರೆ ಕಡಂಗಿ ಕಾದುವಲ್ಲಿ (ಪಂಪರಾಮಾ. ೦೦–೫೦ ವ) ; ಪ್ರತಿರೋಧಕನಾರಟಗೊಳ್ವ ತಕ್ಕಿನವಂ (ವಸುಕೋ. ೬೫–೮೨) ; ಈ ಗೋಪಾಲಬಾಲಕರಂ ಮುಟ್ಟಿಸುವೆನೆಂಬ ತಕ್ಕು ಮಿಕ್ಕು ಬರೆ (ಜಗವಿ. ೬–೯ ವ) : ದೆಳ್ಳಿಯು ಬಳ್ಳಿಮಾಡಮಂ ತಕ್ಕನೊಳೇಱ ನೋಡಿದಳ ದೂರ್ವಳಿಗುರ್ವಿಪ ಕರ್ಪುವಿಲ್ಲನಂ (ಕಬ್ಬಿಗಕಾ. ೩೪೦). ೮. ನೆರವು; ಬೆಂಬಲ; ಆಶ್ರಯ: ‘ತಕ್ಕುಗುಡು’ ಪರಾ. ೯. ಕಾವ್ಯದಲ್ಲಿರುವ ಔಚಿತ್ಯ : ಕವಿತೆಯ ಬರ್ದು ಮೆಯ್ಸಿರಿ ಬೆಡಂಗು ರಸಂ ಚದುರೊಳ್ಪು . . . ಸವಿ ತಕ್ಕು ಪೊದಳ್ಕೆ ಬಿನ್ನಣಂ . . . ಪೊಡರ್ಪುವರಿನಿತಿಂತುಟೆಂದಳೆದರಂ ಧರೆ, ಪೇಳ್ಪೆಯ ಶಾಳ್ದಿಯೆಂದದಂ ? (ಸಂಸಪ. ೬–೧೧). △ ತರ್ಕು : ೪. ನಾಳೆ ನೋಡುವೆನಾತನ ಚಕ್ರದುರ್ಕುಮಂ ಮೊನೆಗನುಕೂಲರಾಗಿ ನೆಱವಂದ ನೃಪಾಳರ ತೋಳ ತರ್ಕುಮಂ (ಮಹಾನೇ. ೦೦–೯೯). [ <ತಗು ]

ತಕ್ಕು$_3$ ‘ಟಕ್ಕು$_1$’ ನೋ.

ತಕ್ಕು$_4$ ‘ತಟ್ಕು’ ನೋ.

ತಕ್ಕು$_5$ (ನಾ). ಒಂದು ಬಗೆಯ ಔಷಧಿ ಸಸ್ಯ : “ಪಟ್ಟರಣ – ತಕ್ಕು, ಗರುಗ” (ಓಷಧಿ. ೦೬೩).

ತಕ್ಕುಂಗೆಡು, ತಕ್ಕುಗಿಡು, ತಕ್ಕುಗೆಡು (ಕ್ರಿ). ೧. ಘನತೆಯನ್ನು ಕಳೆದುಕೊಳ್ಳು ; ಹೀನಸ್ಥಿತಿಗೆ ಬರು ; ದೈನ್ಯಾವಸ್ಥೆಯನ್ನು ಹೊಂದು : ಶಾಮುಸವಿಲ್ಲದೆ ತಕ್ಕುಂಗೆಡದಧರಾಮಂ ರಿಪುನಿರ್ಧೂಮಂ ಶರಣಲಲಾಮಂ ಕೇದೋಧಾಮಂ . . . ಕುಳ್ಳಿದು ಸೋಮೇಶನನೀಕ್ಷಿಸಿ (ಉದ್ಭಟ. ೩–೬೦). ತಕ್ಕುಗಿಡು : ೧. ಬಾಹುಬಲಮಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪–೩೦ ವ). ೨. ಶಕ್ತಿಗುಂದು ; ನಿರ್ಬಲನಾಗು : ತೇರಚ್ಚುಂ ಮುಱಿಯಚ್ಚುಂ . . . ಸಾರಥಿಯುಂ ಕೆಡೆಯಚ್ಚುಂ ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ (ಪಂರಾಮಾ. ೦೦–೫೨). ತಕ್ಕುಗೆಡು : ೧. ತಕ್ಕುಗೆಟ್ಟಿಲ್ಲ ಶಿವಶಿವಯೆನುತ್ತಂ ಜನಂ (ಪುಣ್ಯಕಥಾ. ೬೫–೦೬) ; ಚಿತ್ರಜಚಾಪಂ ಮನಮಂ ಸುತ್ತಿರೆ ಮಿಗೆ ತಕ್ಕುಗೆಟ್ಟು ಪೌರೋಹಿತನುದ್ವೃತ್ತತೆಯನೊಕ್ಕು ಧೈರ್ಯಗೆಡುತ್ತಂ ದತ್ತೂರಮಂ ಸವಿದ ಮಾಟ್ಕೆಯೊಳಿರ್ದಂ (ಪುಣ್ಯಾಸ್ರ. ೦-೯೨). [ ತಕ್ಕು$_2$ + ಕೆಡು$_1$ ]

ತಕ್ಕುಗಿಡು ‘ತಕ್ಕುಂಗೆಡು’ ನೋ.

ತಕ್ಕುಗುಡು (ಕ್ರಿ). ನೆರವನ್ನು ನೀಡು ; ಒತ್ತಾಸೆಯಾಗು ; ಬೆಂಬಲವಾಗು : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ಱೋಡಗರ ನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ಗಳಿಗಿಂಗೆ ತಕ್ಕುಗುಡುವಂತೆಯುಂ ಕೋಮಳಾಂಗುಳಿಜಾಳಕಂ ಮೆಱೆಯೆ (ಅನಂಪು. ೮–೭ ವ). [ ತಕ್ಕು$_2$ + ಕುಡು$_1$ (<ಕೊಡು$_1$) ]

ತಕ್ಕುಗೆಡಿಸು (ಕ್ರಿ). ಘನತೆಯನ್ನು ತಗ್ಗಿಸು ; ಹಿರಿಮೆಯನ್ನು ಕುಂದಿಸು : ಕರೆಸೊಮ್ಮೆ ಬಾರದಿರ್ದರೆ ತಕ್ಕುಗೆಡಿಪೆನೆಂದೊರೆದ ಚೋಳನ ಬಿಱುನುಡಿಯ ಶಿರಸ[ ಸಾ ]ವಹಿಸಿಕೊಂಡು (ಭೃಚವೀ. ೦–೦೯೩); ತಕ್ಕದಿರ್ಪ ಮುನಿಸಾಹತ್ಮ ಸಂತಾನಮಂ ತಕ್ಕುಗೆಡಿಸಿ ರಾಜ್ಯಂಗೆಯ್ವನಾ ಷಣ್ಮುವಧುವಾಟಿಯೊಳಗನಂಗಂ (ಉದ್ಭಟ. ೪–೦೭). [ ತಕ್ಕು$_2$ + ಕೆಡಿಸು$_1$ ]

ತಕ್ಕುಗೆಡು ‘ತಕ್ಕುಂಗೆಡು’ ನೋ.

ತಕ್ಕುಗೊಡು (ಕ್ರಿ). ವಂಚಿಸು ; ಟಕ್ಕಿಸು : ಚಂತಾಗತಿಯುಂ ತನ್ನ ಪೆಸರಂ ನನ್ನಿಮಾಡಿ ತರುಣಿಗೆ ತಕ್ಕುಗೊಟ್ಟು ಪೆಱಗೆ ಪಾಱ ಪೋಗಿ (ಅರ್ಧನೇ. ೩–೦೮ ವ). [ ತಕ್ಕು$_3$ (<ಟಕ್ಕು$_1$) + ಕೊಡು$_1$ ]

ತಕ್ಕುದಕ್ಕು (ನಾ). ಖಡ್ಗಯುಂದದ್ದ ಒಂದು ವರಸೆ (?) : ಪುಸಿ ನಸು ವಂಚನೆ ನೋರ್ಪನುಮಿಡಗಲಿತು ತಕ್ಕುದಕ್ಕು ಪಗೆ ಕೆಯ್ಪುಗೆ ಕೆಯ್ಕುಸುರಿನುಸುಳೆಂಬ ಕೇಣದ ಕುಸುರಿಯನಱದಿಱದು ಮೆಱದು ನೆಱದುಱದರೆಬರ್ (ಪಂಪಭಾ. ೦೦–೮೦).

[ ಈಲ್ಲಿ ತಕ್ಕು ಮತ್ತು ದಕ್ಕು ಎಂಬವು ಭಿನ್ನ ಶಬ್ದಗಳಿರಬಹುದು ]

ತಕ್ಕುಬೊಕ್ಕು (ನಾ). ಒಂದು ಅನುಕರಣ ಶಬ್ದ : ತೆಱಪಂ ನಿಟ್ಟಿಸಿ ಕುಕಿಱದಿಱಕಡಂ ಮೆಟ್ಟಿ ತಕ್ಕುಬೊಕ್ಕೆನೆಯೆನೆ ಕತ್ತಱದಱದ ಕಡಿತಲೆಯೊಳ್ಪಱಿಸಿಡಿಲರಹಲ್ಲವೀರನಂ ಮದ್ದನಂ (ಎಕ. XV, ಬೇಲೂರು ೩೬೧–೯ ; ಸು. 1200).

ತಕ್ಕುಮೆ (ನಾ). ೧. ತಕ್ಕುದಾಗಿರುವಿಕೆ ; ಔಚಿತ್ಯ : ಉಮೆಗೆ – ತಕ್ಕುಮೆ (ಕಮುದ. ೨೦೦ ಪ್ರಯೋ). ‘ತಕ್ಕುಮೆಗಿಡು’, ‘ತಕ್ಕುಮೆವಡೆ’ ಪರಾ. ೨. ಯೋಗ್ಯತೆ ; ಅರ್ಹತೆ : ಗಂಡಿಲ್ಲದ ಭಟನ ಯುದ್ಧಮುಂ . . . ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ (ಧರ್ಮಾಮೃ. ೬–೪೯); ಅಧಿಕಾರಿಗಳ್ಗಂ ಬಲ್ಲಿತ್ತಾದ ತಕ್ಕುಮೆಯುಂ ಬಿತ್ತರಿಪ ಬಗೆಬಗೆಯ ಮಹಾಬಿರುದುಗಳಂ ದಯೆಗೆಯ್ಮಲೊದಲ್ಕಾಡಿಯುಂ (ಮುದ್ರಾಮ. ೬–೩೬) : ತನ್ನ

ದಂಡಿನವರಿಗೆ ಅವರವರ ತಕ್ಕುಮೆಯಂತೆ ಹಣವನ್ನು ಕೊಟ್ಟು, ಉಳಿದುದನ್ನು ಕಾಬೂಲಿನಲ್ಲಿದ್ದ ತನ್ನ ಪ್ರಜೆಗಳಿಗೆ ಹಂಚಿದನು (ಕೋಬಾದ. ೨೪). ೨. ಶೌರ್ಯ ; ಪರಾಕ್ರಮಂ : " ಪನ್ನತಿಕೆ ಪೆಟ್ಟು ತಕ್ಕುಮೆಯುನ್ನಂ ಕಾಂಸಾಸ ದಪ್ಪಮದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೦೨೩). 'ತಕ್ಕೂರ್ಮೆ$_1$' ಪರಾ. [ ತಕ್ಕು$_2$ + – ಉಮೆ$_1$ ]

**ತಕ್ಕುಮೆಗಿಡು** (ಕ್ರಿ). ಔಚಿತ್ಯವಿಮೀರು : ನಿಮ್ಮ ಬಗೆಯ ದ್ರೋಹಿ ದುರಾತ್ಮರಿಗೆ ತಕ್ಕುಮೆಗಿಡದ ಒಂದೇ ದಂಡನೆ ಎಂದು ತರಿಸಂದು ತೀರುಕಣೆಗೊಟ್ಟರುವರು (ಚಿಟ್ಯಅ. ೨೦೪–೨೨). [ ತಕ್ಕುಮೆ + ಕಿಡು (<ಕೆಡು$_1$) ]

**ತಕ್ಕುಮೆವಡೆ** (ಕ್ರಿ). ೧. ಔಚಿತ್ಯವನ್ನು ಪಡೆ ; ತಕ್ಕುದಾಗಿರು : ಮಹಾರಾಜ ಸನ್ನಿಧಿಯ ಭೋಗೋಪಭೋಗಗಳಿಗೆ ತಕ್ಕುಮೆವಡೆದ, ಉಪಸ್ಕರಾಲಂಕಾರಾದಿ ವಸ್ತು ಪ್ರಪಂಚವು . . . ರಂಜಿಸುತ್ತಿರುವುದು (ಚಿಟ್ಯಅ. ೦೩೮–೬) : ಮಹಾರಾಣಿಗೆ ತಕ್ಕುಮೆವಡೆದ ಬೀಡಾರವನ್ನು ನಿಮಗೆಂದೇ ಅಣಿಮಾಡಲಾಗಿದೆ (ಸವತಿ. ೨೬೯). ೨. ಘನತೆಯಂನ್ನು ಪಡೆ : ದುಃಖದಿಂ ಪರಿಪಕ್ವಮಾದೆ ; ತಕ್ಕುಮೆವಡೆದೆ (ಸಂಸಹ. ೨೩–೦೬).

[ ತಕ್ಕುಮೆ + ಪಡೆ$_1$ ]

**ತಕ್ಕೂರ್ಮೆ$_1$** (ನಾ). ಹಿರಿತನ ; ದೊಡ್ಡಸ್ತಿಕೆ ; ಘನತೆ : ತನ್ನದೊಂದು ಸವಿಗಂ ಸೋಲಕ್ಕಮಿತ್ತ್ರಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂದೊಂದಪಖ್ಯಾತಿ ಲೋಕಮನಾವರ್ತಿಸೆ ಬಟ್ಟೊಡೆನ್ನ ಕುಲಮುಂ ತಕ್ಕೊ[ಪಾಠಾಂ. ತ್ಕೊ]ರ್ಮೆಯುಂ ಮಾಸದೆ (ಪಂಪಭಾ. ೦–೬೦) ; ಪೇಸುಗೆಗೆಟ್ಟೀ ನಾಣವುತ್ತಪ್ಪೆಟ್ಟಜಗಟದೊಳೀನವ್ಮ ತಕ್ಕೂರ್ಮೆಯುಂಟೇ (ಶಾಂತಿಪು. ೬–೮೭) ; ಸರ್ವ್ವ ಜನೋಪಕಾರಿ ತಕ್ಕೂರ್ವ್ಮೆಯ ಜನ್ಮಭೂಮಿ (ಶಾಶಾಇ. XI-II, ೦೩೩–೨೪ : 1087) ; ಕಲಿಯುಂ ಛಾಗಿಯುಮಿನ್ನರಾರ್ ಮನುಕುಲರ್ ಮುನ್ನಾದರೆಂಬನ್ನೆಗಂ ನೆಲನಂ ನೇಸಱುಮುಳ್ಳಿನಂ ನಿಲಿಸಿದಂ ತಕ್ಕೊ[ಪಾಠಾಂ. ತ್ಕೊ]ರ್ಮೆಯಂ ಪೆರ್ಮೆಯಂ (ಪಂಪಾಮಾ. ೬–೦೬೦). [ ತಕ್ಕು$_2$ + ಊರ್ಮೆ. /ತಮಿ. ತಕ್ಕೊವ್ಮೆ ]

**ತಕ್ಕೂರ್ಮೆ$_2$** (ನಾ). ಪ್ರೀತಿ ; ಸ್ನೇಹ : ಬಮ್ಮೆಯನೀಗಳಿಯ್ದು ಪರಿಭಾವಿಸಿ ನೋಳ್ಪಡೆ ಮೇಲೆನಿಪ್ಪನಾ ಧರ್ಮ್ಮತನೂಭವಂಗೆನುತೆ ಬಣ್ಣಿಪುದೀ ಜಗವೆಲ್ಲಮೊಲ್ದು ತಕ್ಕೂರ್ಮೆಯನೆನ್ನೊಡೇವೊಗಳ್ವನಿಂ ಪೊಗಳ್ವಂ ಬುಧಕಲ್ಪವೃಕ್ಷನಂ (ಕೊಲ್ಲಾಶಾ. ೮–೦೭ : 1147). [ ತಕ್ಕು$_2$ + ಕೂರ್ಮೆ ]

**ತಕ್ಕೂರ್ಮೆಗೆಡು** (ಕ್ರಿ). ಘನತೆಯಿಲ್ಲವಾಗು ; ಯೋಗ್ಯವಾದುದನ್ನು ಕಡೆಗಣಿಸು : ಮಿಱನಕ್ಕೆ ತೆರಳ್ವನ್ನವರಾಂ ಪೊಱಮಟ್ಟೆನೆಂದು ಕೇಳ್ದು ಮಗಲ್ದಿರಲಾಱದೊಂದು ಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೂರ್ಮೆಗೆಟ್ಟುಂ ಪೇಟದೆಯುಮಾನೆ ಪಱುಮಿಂಗಟ್ಟಿದೆನೇ (ರಾಮೂಕ್ಕ. ೪೩–೨೨).

[ ತಕ್ಕೂರ್ಮೆ$_1$ + ಕೆಡು$_1$ ]

**ತಕ್ಕೆ$_1$** 'ತಟ್ಕೆ' ನೋ.

**ತಕ್ಕೆ$_2$** (ನಾ). ಯೋಗ್ಯಳಾದವಳು ; ತಕ್ಕವಳು : ನಿಮ್ಮಡಿಗಾಹಾರದಾನಂಕುಡಲ್ ತಕ್ಕೆನಲ್ಲೆನಾಂ ಸೂಳೆಯುಂ (ಪಾಪುಂಪು. ೩೮–೩೦).

[ ತಕ್ಕ$_1$ + – ಎ$_2$ ]

**ತಕ್ಕೆ$_3$, ಟಕ್ಕೆ$_1$, ತೆಕ್ಕೆ$_2$** (ನಾ). ದಿಂಬು ; ಒರಗುದಿಂಬು ; ಲೋಡು : ಕಚೇರಿಯ ತುಂಬ ಹಾಸಿದೆ ; ನಟ್ಟನಡುವೆ ಎದುರಿನ ಗೋಡೆಗೆ ಒಂದು ತಕ್ಕೆ (ವೃದ್ಧರಾ. ೯) : ಹಾಸಿದ್ದ ಹೊಸ ಜಮಖಾನೆಯ ಮೇಲೆ ತಕ್ಕೆಗೆ ಒರಗಿ ಚೆನ್ನಪ್ಪ ಕುಳಿತುಕೊಂಡಿದ್ದ (ಜನಜೀ. ೩೪). **ಟಕ್ಕೆ$_1$:** ಮೂರೆಲೆ ಆಟ ಆಡಲು ಕುಳಿತಿದ್ದಾರೆ. ಹತ್ತಿರ ಒಂದೆರಡು ಟಕ್ಕೆಗಳು (ತಿಱುಗು. ೪೬). **ತೆಕ್ಕೆ$_2$** : ಗಾದಿಗಳನ್ನು ಜೋಡಿಸಿ, ಅವರ ತೆಕ್ಕೆಯನ್ನೇ ತಲೆಗಿಂಬುಮಾಡಿ ನಾನು ನನ್ನ ಸಜ್ಜಿಕೆಯನ್ನು ಸಜ್ಜುಗೊಳಿಸಿದೆ (ದೀಪಹ. II, ೦೮೦).

[ ←ಅರ. ಪಾರ. ಹಿಂ. ತಕಿಯಾ ; ಮರಾ. ತಕಿಯಾ, ತಕ್ಯಾ ]

**ತಕ್ಕೆಗಟ್ಟು$_1$** 'ತೆಕ್ಕೆಗಟ್ಟು' ನೋ.

**ತಕ್ಕೆಗಟ್ಟು$_2$** (ನಾ). ಅಪ್ಪುಗೆಯ ಹಿಡಿತ; ಆಲಿಂಗನದ ಬಂಧನ: ಬಟ್ಟೆಗರ ಬಗಸೆಗಣ್ಣಂ ಕರೆದು ಸವಿದಕ್ಕೆಗಟ್ಟಿನೊಳ್ನಾಸಿಕೆಯೊಳಟ್ಟಧರಪಾನಮಂ ಕೊಟ್ಟು (ಪದ್ಮರಾ. ೮–೦೦) ; ಪಟುಭಟರು . . . ಸುರಾಂಗನೆಯರ ತೋಳ ತಕ್ಕೆಗಟ್ಟಿನೊಳೊಱಗಿದರು (ಕುರಾಸಾಂ. ೦೨–೬೭).

[ ತಕ್ಕೆ$_1$ (<ತಟ್ಕೆ) + ಕಟ್ಟು$_2$ ]

**ತಕ್ಕೆಗೊಳ್** 'ತಟ್ಕೆಗೊಳ್' ನೋ.

**ತಕ್ಕೆಗೊಳಿಸು** (ಕ್ರಿ). ಅಪ್ಪುಗೆಗೆ ಒಳಪಡಿಸು; ತಬ್ಬಿಕೊಳ್ಳು: ಹೊಸಹೊನ್ನ ಬಿಂದಿಗೆದುಂಬಿಯೋಕುಳಿಯ ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದರಂದು ಕೃಷ್ಣನ ತಕ್ಕೆಗೊಳಿಸಿ (ಮೋಹತ. ೦೪–೬೯).

[ ತಕ್ಕೆಗೊಳ್ (<ತಟ್ಕೆಗೊಳ್) + – ಇಸು$_3$ ]

**ತಕ್ಕೆಬೀಳು, ತಳಿಕೆಬೀಳು, ತೆಕ್ಕೆಬೀಳು** (ಕ್ರಿ). ತೋಳುಗಳಿಂದ ಗಟ್ಟಿಯಾಗಿ ಅವುಚಿಕೊಳ್ಳು ; ತಬ್ಬು : ನಾನೂ ಅಳುತ್ತ ಅಮ್ಮನನ್ನು ತಕ್ಕೆಬಿದ್ದೆ (ಹಂದುಟಿ. ೨೦) : ನನಗೆ ಚೆಲೋ ಚೆಲೋ ಗೊಂಬೆ ತಂದಿದ್ದೀಯಾ . . . ಕೊರಳಿಗೆ ತಕ್ಕೆಬಿದ್ದು ಮಗು ಕೇಳಿತು (ಎರಡಿ. ೩). **ತಳಿಕೆಬೀಳು** : ಅವಳು ಕಣ್ದೆರೆದುದನ್ನು ಕಂಡು ಎದ್ದು ಹಾರಿಹೋಗಿ ಅವಳ ಕೊರಳಿಗೆ ತಳಿಕೆಬಿದ್ದಳು (ಪ್ರೇಮೂಕ್ರ. ೬೦). **ತೆಕ್ಕೆಬೀಳು** : " ಅಪ್ಪಯ್ಯ " ಎಂದು ಶಾಸ್ತ್ರಿಗಳಿಗೆ ತೆಕ್ಕೆಬಿದ್ದು ತಡೆದಷ್ಟೂ ಅವಳಿಗೆ ಅಳು ಉಕ್ಕಿ ಬರುತ್ತಿತ್ತು (ಹೊಸಕ್ಷ. ೨೨) ; ಭಯ್ಯಾ ಮಲ್ಲನನ್ನು ತೆಕ್ಕೆಬಿದ್ದು ಅಳಹತ್ತಿದ (ಜೀದಾಪ. ೦೨೬).

[ ತಕ್ಕೆ$_1$ (<ತಟ್ಕೆ) + ಬೀಳು$_1$ (<ಬೀೞ್$_1$) ]

**ತಕ್ಕೆಮುಕ್ಕೆ, ತೆಕಿಮಂಕ್ಕಿ, ತೆಕ್ಕಾಮಂಕ್ಕೆ, ತೆಕ್ಕಿಮಂಕ್ಕಿ** (ನಾ). ಬಿಗಿಯಾಗಿ ಹಿಡಿದುಕೊಳ್ಳುವಿಕೆ ; ಗಟ್ಟಿಯಾಗಿ ತಬ್ಬಿಕೊಳ್ಳುವುದು : ಒಬ್ಬರನೊಬ್ಬರು ತಕ್ಕೆಮುಕ್ಕೆಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರರಿಬ್ಬರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯವನ್ನು ಸೂರೆಗೊಂಡರು (ಕವೀರ. ೬೩). **ತೆಕಿಮುಕ್ಕಿ** : 'ತೆಕಿಮುಕ್ಕಿಬೀಳಂ' ಪರಾ. **ತೆಕ್ಕಾಮುಕ್ಕೆ** : 'ತೆಕ್ಕಾಮುಕ್ಕೆಬೀಳಂ' ಪರಾ. **ತೆಕ್ಕಿಮುಕ್ಕಿ** : 'ತೆಕ್ಕಿಮಂಕ್ಕಿಬೀಳು' ಪರಾ. [ <ತಕ್ಕೆ$_1$ ]

**ತಕ್ಕೆಯ್ಸು** 'ತಟ್ಕೈಸು' ನೋ.

**ತಕ್ಕೆವರ್** (ಕ್ರಿ). ಗಂಪುಗೂಡಂ : ವಾಸವವ್ಯರಿ ಮತ್ತ ಮುಗುಟ್ದಿನ್ನೊಳೆ ಕೀಳ್ಪನದಟ್ಟು ಪುಟ್ಟೆಯುಥ್ಯಾಸನಿಮಿತ್ತದಿಂದಿರದೆ ಬರ್ಕೆಮೆನುತ್ತಮೆ ತಕ್ಕೆವಂದು ಕೈಲಾಸಮನಂತಮಾಯ್ತನೆ ವಿಯತ್ತಳವಂ ತುಡುಕುತ್ತು ಮಿರ್ಪವೋಲ್ ಭಾಸುರಮಾಗೆ ಸಾಂದ್ರ ಶಶಿಕಾಂತದ ದೇವನಿವಾಸ ಕೋಟಿಗಳ್ (ಕುಹುಮಾ. ೦೦–೦೩೯). [ ತಕ್ಕೆ$_1$ (<ತಟ್ಕೆ) + ಬರ್$_1$ ]

**ತಕ್ಕೈಸು** 'ತಟ್ಕೈಸು' ನೋ.

**ತಕ್ಕೋಲ$_1$** (ನಾ). ಒಂದು ಊರಿನ ಹೆಸರು. P ತಮಿಳುನಾಡಿನ ಅರಕೋಣದ ಬಳಿಯ ಈಗಿನ ತಕ್ಕೋಲ : ಶ್ರೀಮತ್ ಕನ್ನರದೇವ ಅಟ್ಟೋವದೆ ಚೋಳರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊನ್ದು ಬಿಜಯಂಗೆಯ್ಯುತ್ತಿಱ್ದು (ಎಕ. III, ಮಂಡ್ಯ. ೪೦–೪ ; 950).

**ತಕ್ಕೋಲ$_2$** (ನಾ). ೧. ಒಂದು ಬಗೆಯ ಸುಗಂಧದ ವೃಕ್ಷ ಮತ್ತು ಅದರ ಕಾಯಿ : " ಪಂಚಸುಗಂಧಃ– ಶ್ರೀಗಂಧ, ತಕ್ಕೋಲ, ಜಾಯಿ ಫಲ, ಪದ್ಮಕೇಸರ, ತಾವರೆಯ ಕೇಸರ" (ಒಹಿ. ೯೨); ಜಾಜೀಕಾಯಿ, ಲವಂಗ, ಚವ್ಯ, ತಕ್ಕೋಲ . . . ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೃದ್ಧಸಾ. II, ೩೩) ; ಬದರಿ ತಕ್ಕೋಲ ನಾರಿಕೇಳಾಶ್ವತ್ಥ . . . ಭೂರುಹವೃಂದದಿಂ ಪೂಜ್ಯಮಾಗಿರ್ಪ ಆರಾಮಗಳು ಎಸೆವುತಿರ್ದವು (ಕುಜೀಕೋ. ೪೪) ; ಜಂಜೀರ ಮಾಧವೀ ಮಧೂಕ ತಾಲ ತಕ್ಕೋಲ ತಮಾಲ ಹಿಂತಾಳ . . . ಸುಮನಸಭರಿತವಾಗಿ

**ತಗ್ಗೆತ್ತು** (ಕ್ರಿ). ಪಾತ್ರೆಗಳ ತಗ್ಗುಗಳನ್ನು ಸರಿಪಡಿಸು : ನುಗ್ಗಾದ ಪಾತ್ರೆಗಳನ್ನು ತಗ್ಗೆತ್ತದಿದ್ದರೆ ಚೆನ್ನಾಗಿ ಕಾಣುವುದಿಲ್ಲ (ಊ೦).
[ ತಗ್ಗು$_2$ + ಎತ್ತು$_1$ ]

**ತಗ್ಗೊತ್ತು**, **ತರ್ಗೊತ್ತು** (ಕ್ರಿ). ೧. ತಗ್ಗುವಂತೆ ಒತ್ತು ; ಅದುಮು ; ಹತ್ತಿಕ್ಕು ; ನಿಗ್ರಹಿಸು : ಆದರಿಸುತಮರೇಂದ್ರನೆದ್ದನು ಹೋದ ವಜ್ರವ ಕೊಂಡು ನಗುತ ವಿಷಾದವನು ತಗ್ಗೊತ್ತಿ ನುಡಿದನು ದೈತ್ಯಪತಿಯೊಡನೆ (ನಿಘಾಗ. ೬-೦೦-೦೦). **ತರ್ಗೊತ್ತು** : ೨. (ಆಲಂ) ತಗ್ಗಿಸು ; ಕಡಮೆ ಮಾಡು : ಈ ಮತ್ಸರಮಂ ತರ್ಗೊತ್ತಿ . . . ರಕ್ಷಿಪ್ಪುದೆನ್ನಂ (ಕಣ್ಣಾಕ. ೦೦).
[ ತಗ್ಗು$_1$ (<ತಟ್ಟು) + ಒತ್ತು$_1$ ]

**ತಚ್ಚಣ** 'ತತ್‌ಕ್ಷಣ$_2$' ನೋ.

**ತಜವಿಜಿ** 'ತಜವೀಜು' ನೋ.

**ತಜವೀಜಿ** 'ತಜವೀಜು' ನೋ.

**ತಜವೀಜು**, **ತಜವಿಜಿ**, **ತಜವೀಜಿ**, **ತಜುಬಿಜಿ** (ನಾ). ೧. ಏರ್ಪಾಟು ; ವ್ಯವಸ್ಥೆ ; ಸಿದ್ಧತೆ : ನಾ ಬಂದು ಎಷ್ಟೊತ್ತಾತು . . . ಚಹಾದ್ದೇನಾದರೂ ತಜವೀಜು ಮಾಡ್ರೀಯೋ (ದೀಪಜ. I. ೦೯). 'ತಜವೀಜುದಾರಿ' ಪರಾ. ೨. ಪ್ರಯತ್ನ ; ಉದ್ಯೋಗ : (ಪ್ರಗತಿ. IV, ೭೮೭). **ತಜವಿಜಿ** : ೨. ಕಾಯಿ ತನಗೆ ಬೇರೆ ಮದುವೆ-ಮಾಡಿಸುವ ತಜವಿಜಯಲ್ಲಿದ್ದಾಳೆಂದು . . . ಅತ್ತೆಯನ್ನು ಇನ್ನಷ್ಟು ಅಂಜಿಸಿದ್ದ (ಹೊಸಕ್ಕ. ೨೭). ೩. ವಿಚಾರಣೆ ; ಶೋಧನೆ ; ಚೌಕಸಿ (ಉಕ) : "ತಜವಿಜ-ಹುಡುಕುವುದು; ಶೋಧ" (ಜಾವಕೋ. ೬೩). **ತಜವೀಜಿ** : ೨. ಅಸ್ತಿ ವಿಲೇವಾರಿಮಾಡುವ ತಜವೀಜಿಯಲ್ಲಿದ್ದಾರೆ. (ಊ೦). **ತಜುಬಿಜಿ** : ೧. ಅಮುದಾ ನಗರಕ್ಕೆ ಬರುವ ಮಧ್ಯಮಾರ್ಗದಲ್ಲಿ ಪಾದಶಹಾರು ತಜುಬಿಜಿಮಾಡಿ (ಕೆಳದಿ. ೩೮-೦೯).
[ ←ಅರ. ಹಿಂ. ತಜವೀಜ್ ]

**ತಜವೀಜುದಾರಿ** (ನಾ). ವಿಚಾರಣೆ ; ಶೋಧನೆ : ಪಟೇಲರ ಬಹಿರಂಗ ಹಾಜರುಬಾಕಿ ಮತ್ತು ತಜವೀಜುದಾರಿ ಹೆಚ್ಚಾದವು (ಕಲಿಸ. ೩೦೩).
[ <ತಜವೀಜು ]

**ತಜಿನೆವಟಯಿಗೆ** (ನಾ). ಒಂದು ಬಗೆಯ ಧ್ವಜ (?) : ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜಿನೆವಟಯಿಗೆಗಳುಂ ಚಂದ್ರಾದಿತ್ಯರ್ಕಗಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಗಳೆಂದಿವು ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ಪದ್ಮಾರಾ. ೦೩೩-೦೯). [ ತಜಿನೆ? + ಪಟಯಿಗೆ ]

**ತಜಿವಿಜಿ** (ನಾ). ಪಿಸುದನಿ(?) : ಗಜಬಜಿಸಿ ಕೆಲಕೆಲರು ಹಾಸ್ಯದ ತಜಿವಿಜಿಗಳಿಂ ಕೆಲರು ಮುಸುಕಿನ ಗುಜುಗುಜುಗಳಿಂ ಕೆಲರು ಸಂಜ್ಞೆಗಳಿಂದ ಕೆಲರಿರ್ದಲು (ಅಹಂರಾ. ೬-೪-೨೩). 'ಗಜಿಬಿಜಿ' ಪರಾ. [ ? ]

**ತಜುಬಿಜಿ** 'ತಜವೀಜು' ನೋ.

**ತಜ್ಞ** (ನಾ). ವಿಷಯವನ್ನು ಬಲ್ಲವನು ; ತಿಳಿದವನು ; ನುರಿತವನು ; ಬುದ್ಧಿವಂತ : . ಮೋಹರಾಜನ ಸಂದಾಜ್ಞೆಯನಾವ ತಜ್ಞನುಮಣಂ ಮಿಸಲ್ಕೆ ಮೇಣ್ ಬರ್ಪನೇ (ನೇಮಿಪು. ೦-೮೯) ; ತಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪಕ್ಕಾಗೆ (ಪುಷ್ಪಪು. ೦೨-೩೦). [ ಸಂ. ]

**ತಜ್ಞ** (ನಾ). = ತಜ್ಞ : ಕಲಿಸಿದ ಭಾರ್ಗವಾತ್ಮಜರ ನೋಡಿದ ತಜ್ಞರ ಮುಯ್ಯು ನೆತ್ತಿಯಂ ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಱೆ ಕಲ್ತರೊ ಕೈದುವೆಲ್ಲಮಂ (ಪಂರಾಮಾ. ೩-೦೩೦) ; ತಡೆಯದೆ ವಿಚಾರಿಸೆಂಬಜ್ಞತಜ್ಞರ ಬಗೆಗೆ ಸಂಶಯಂ ಸರಿಯಾದುದು (ಹಡಶಾ. ೦೦-೨೭). [ ಸಂ. ತಜ್ಞ ]

**ತಜ್ಞತೆ** (ನಾ). ನಿಪುಣತೆ ; ಪಾಂಡಿತ್ಯ : ಉದಾತ್ತಾಲಾಪ ಪ್ರಯೋಗಂಗಳಿಂ ತಜ್ಞತೆಯನಾ ಮಾನಧರರ ಮುಂದಿಡಿಯುಂ (ಶಾಂತಿಪು. ೪-೬೨೪).
[ ಸಂ. ತಜ್ಞತಾ ]

**ತಟ$_1$** (ನಾ). ಒಂದು ಅನುಕರಣ ಶಬ್ದ. 'ತಟಗುಟ್ಟು' ಪರಾ.

**ತಟತಟ$_1$** (ದ್ವಿರುಕ್ತಿ) : ಜನಕೆಲ್ಲ ತಟತಟ ಬೆವರು ಸುರಿವುದು (ಸಿದ್ಧಪು. ೫-೪೭) ; ವರುಷವರುಷವೂ ನಾವಿದ್ದಲ್ಲಿಯೆ ಹೊಸ ವಿದ್ಯಾರ್ಥಿಗಳಾಗುವೆವು ಪುಟಗಳ ತೆರೆಯದೆ ತಟತಟ ಓದದೆ ಬಿಸಿಲಿಗೆ ಗಾಳಿಗೆ ಮಾಗುವೆವು (ಶಿಲಾಂ. ೦೭-೦೦).

**-ತಟ$_2$** (ಪ್ರ). ಒಂದು ಭಾವನಾಮ ಪ್ರತ್ಯಯ : 'ಎಳೆತಟ' ಪರಾ.

**ತಟ$_3$** (ನಾ). ೧. ಬೆಟ್ಟದ ತಪ್ಪಲು$_1$-ಇಳುಕಲು : "ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮೆಂಬದು ತಪ್ಪಲ್ ತಾನೆನಿಸುಗುಂ" (ವಸ್ತುಕೋ. ೨೦-೨೭) : "ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯಕ್ಕು" (ಮಂಗರಾ. ೩೦-೨). ೨. ದಡ ; ಅಂಚು; ತೀರ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ" (ವಸ್ತುಕೋ. ೨೪-೧೩); "ತಟಂ ದಡಂ" (ಚತುನಿ. ೯೩) ; ಕಾಸಾರದಾ ತಟದಿ . . . ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಭರಾ. ೦೦-೦೮) ; ಬಾಲಲೀಲೆಗಳಾಡಿದ್ದು ಯಮುನಾ ತಟದಲ್ಲಿಯೇ (ನಸದಿ. ೦೩). ೩. ಸ್ಥಳ; ಪ್ರದೇಶ; ವೃಂದಾವನ ತಟದೊಳ್ ಗೋವೃಂದಾವನ ವಾಂಛೆಯಿಂದೆ ಮನೆಗಟ್ಟಿದನಾ ನಂದ (ಜಗವಿ. ೩-೬೭). ೪. ಹೊಲ; ಕ್ಷೇತ್ರ. ೫. ಆಕಾಶ. ೬. ದಿಗಂತ ; ಕ್ಷಿತಿಜ.

**ತಟತಟ$_2$** (ದ್ವಿರುಕ್ತಿ) : ತಟತಟ ಕಾಗಿದ ಪರಮಾನಂದದಿ ಪುಟವೇಱಿದ ತನುಕಾಂತಿಯ ಲಿಂಗದಿ (ಹೋಗಾಂವಿ. ೬-೦೩) ; ಅಟಮಟ ಕುಟಿಲೇಂದ್ರಿಯಗಳ ತಟತಟಗಳ ಜಯಿಸಿದವನೆ ಪಟುಭಟನಣುಗ (ಚತಿಲ. ೨-೩೮). **ತಟತಟವಾಗಿ**=ಸಂಪೂರ್ಣವಾಗಿ : ನೀವು ತಟತಟವಾಗಿ ರೋಗರ ಸೇವೆಯಲಿ ಬೆಂದೊಡಲ ಹೊಱುವಿರಿ (ಕುಪ್ಪಾವಿ. ೩-೭೪). [ ಸಂ. ]

**ತಟಂಕ**, **ತಡಂಗ** (ನಾ). ಕೆರೆ ; ತಟಾಕ : ಗೊಪ್ಪಯ ಸುತನ್ ಪರಮೇಶ್ವರ ದೇವಶಕ್ತಿಯಾಕ್ಷತ್ಯಣೆಯಾ ತಟಂಕಮಿದು (ಎಕ. XVI, ಶಾಪುಗ. ೦೨-೩ : ೫೩). **ತಡಂಗ** : ಅದೇಂ ನೆಱೆ ಪೋಲ್ವುದೋ ಚಂಡಹುಂಡ ಸಂಸ್ಥಾನದ ಗುಂಡುದೀವಿದ ತಡಂಗಮನಂಗದ ವಾಂಗಮಂದಿರಾ (ಅದಿಪು. ೫-೯೦) : ಕೊಲ್ಲೆಸಕದಿಂ ಬಿಸಿನೀರ ತಡಂಗದಂದದಿಂದಿರೆ . . . ಪಾಂಥಜನಂ ನಡೆಯುತ್ತು ಮಾರ್ಗದೊಳ್ (ಜಗವಿ. ೦೭-೭).
[ <ಸಂ. ತಟಾಕ ]

**ತಟಂಕಷ** (ಗು). ೧. ದಡವನ್ನು ಕೊರೆಯುವ. ೨. ಸಮಗ್ರವಾದ ; ಸಂಪೂರ್ಣವಾದ : ಜಿನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಿಂ ತಟಂಕಷಮನೆ ತೋಱೆ (ಪುಷ್ಪಪು. ೦-೩೪). 'ಕೂಲಂಕಷ' ಪರಾ. [ಸಂ.]

**ತಟಂಬಿಡಿ** (ಕ್ರಿ). ದಂಡೆಗುಂಟ ಸಾಗು; ತೀರವನ್ನು ಅನುಸರಿಸು: ಓರಂತು ಪೋಪ ದಿವಿಜರ ಹಾರಿ ತಟಂಬಿಡಿದು ಪೊಕ್ಕು ಪೊಜಮಡುವೊಂದಾಕಾರಂ (ಶಾಂತಿಪು. ೦೦-೨೭). [ ತಟ$_3$ + ಪಿಡಿ$_1$ ]

**ತಟಕನೆ** 'ತಟಕ್ಕನೆ' ನೋ.

**ತಟಕಾವು** (ನಾ). ಅಡ್ಡಿ ; ತಡೆ; ವಿಘ್ನ : ಹೆಂಡ ಮಾರುವುದಕ್ಕೆ 'ತಟಕಾವು' ಮಾಡುವರಂತೆ (ಜೀವಮು. ೦೩೯). 'ಅಟಕಾವು' ಪರಾ.
[ ?. / ಮರಾ. ತಟಕಾ = ತಂಟೆ, ವಿವಾದ ]

**ತಟಕಿ** (ನಾ). ತಡಿಕೆ ; ತಟ್ಟಿ : ಮರುಗ ಪಚ್ಚೆಯು ದವನದಿಂದೆ ತಟಕಿಯ ಬಿಗಿದು ಸುರುಚಿರ ಸುಲಾಮಂಚದಿಂದ ಪಂದರ ರಚಿಸಿ (ನವಮೋ. ೭೦-೬೭).
[ <ತಡಿಕೆ ]

**ತಟಕು$_1$**, **ತುಟುಕು$_1$**, **ತೊಟಕು$_1$** (ಕ್ರಿ). ಹನಿ ; ತೊಟ್ಟಿಕ್ಕು : ಒಂಟಿ ಕುಕಿಲಿದು ಕೂಗದೇಕೆ ? ಬಿರಿನನೆ ನಾರು ಬೀರದೇಂ ? ತಟಕದೇ ಎಲೆವನಿ ಇದೇನು ? (ಗೀವಿಂ. ೨೦-೪೦). **ತುಟುಕು$_1$** : ಹನಿಗಳು ಬೀಳುತ್ತಲೇ ಇದ್ದುವು. ಮುಖಕ್ಕೊಂದೆರಡು ಬಾರಿ ತುಟುಕಿದಾಗ ಮಾತ್ರ ನನ್ನ ಮೂಗು ಮುರಿದಿರಬೇಕು (ಬೃಲಿಮಾ. ೦೨೨). **ತೊಟಕು$_1$** : ಮೈಯಿಂದ ಬೆವರು ತೊಟಕುತ್ತಿತ್ತು (ಬಂಗಾಹ. ೨೨). 'ತೊಟ್ಟಿಕ್ಕು' ಪರಾ.

**ತಟಕು₂**, ತಟಂಕು, ತಟುಗು, ತುಟುಕು₂, ತೊಟಕು₂ (ನಾ). ೧. ಹನಿ; ತೊಟ್ಟು; ಬಿಂದು: ಗುಟುಗುಟುಗುಟು ಎನುತಾ ತೆರಳುವ ಕಾಲಕ್ಕು ಗುಟುಕು ತಟಕಿನ ಚಿಂತೆ ತೊಲಗದಯ್ಯ (ಮೋಕ್ಷದೀ. ೦೩೪-೩); ಬಾಯೊಳಗಿನ ಎಂಜಲ ತಟಕು ಆ ಹೂಜೆಯ ಮೇಲೆ ಬೀಳುವವು (ಮುಂಬಯಿ. ೩-೯೨); ಉಪ್ಪಿನ ರಾಶಿಯ ಮೇಲೆ ಮಜ್ಜಿಗೆ ತಟಕು (ಗಾದೆ). ೨. ಕೊಂಚ; ತುಸು; ಸ್ವಲ್ಪ: ತಟಕೂ ಅವರಿಗೆ ಚಿಂತೆಯಿರಲಿಲ್ಲ (ಪದ್ಮಸ. ೨೪೦). **ತಟುಕು:** ೧. ಎಣ್ಣೆಯ ತಟುಕನ್ನು ಕೆಲಕಾಲದಿಂದಲೂ ನೋಡದಿದ್ದು ಅವನ ಮುಂಗುರುಳು . . . ಜಡೆಕಟ್ಟಿ ಇತ್ತು (ವಿಧಿಪ್ರ. ೬೬). ೨. ಮೊಲೆಯುಣ್ಣನವ್ವ ತಟುಕು ಮುಖ ಮೇಲಕ್ಕೆತ್ತನವ್ವ (ಪುರಂದ. ೦-೬೪-೦); ತನ್ನಿಂದ ಉಪಕಾರ ತಟುಕಾದರೂ ಇಲ್ಲ ಬಿನ್ನಾಣ ಮಾತಿಗೆ ಕೊನೆಯಿಲ್ಲವು (ಪುರಂದ. ೦-೦೦೬-೩). **ತಟುಗು:** ೨. ಮೊದಲೇ ತಟುಗು ಸೂಕ್ಷ್ಮ ಹೇಳಿದ್ರೆ ನಾನು ಕೂಗಾಡುತಿದ್ನಾ (ಮರಳಿ. ೪೦). **ತುಟುಕು₂:** ೧. ಅಲ್ಲಿ ಇದ್ದವರೆಲ್ಲರು ಅವಳ ಬಾಯಿಗೆ ಒಂದೊಂದು ತುಟುಕು ಹಾಲು ಎರೆದರು (ಕಗದ್ದ. ೪೦). **ತೊಟಕು₂:** ೧. ಗುಟುಕು ಕೊಡು ತೊಟಕು ಕೊಡು (ಸಬೀಗೀ. ೦೯-೦೬). ೨. ತುಣಾಕು ರೊಟ್ಟಿಗೂ ತೊಟಕು ಮಾನಕ್ಕೂ ಪಶುಗಳಂತೆ ಸಂಕಟಪಡಬೇಕಾದ ಈ ಕಾಲದಲ್ಲಿ (ವಿಜಾಮಂ. ೬೪).

**ತೊಟಕು ತೊಟಕು** (ದ್ವಿರುಕ್ತಿ): ಕಿಂಡಿಗಿಂಡಿಯಿಂದ ಬೆಳಕು ಜಿನುಗುತಿತ್ತು, ತೊಟಕು ತೊಟಕು (ನಡಬಂ. ೬೭-೩). [ <ತಟಕು₁ ]

**ತಟಕುಹನಿ**, ತುಟುಕುಹನಿ, ತೊಟಕುಹನಿ (ನಾ). ೧. ತೊಟ್ಟಿಕ್ಕುವ ಹನಿ; ಉದುರುವ ಹನಿ: ತಟಕು[ಪಾಠಾಂ. ಟುಕು]ವನಿ ನೆತ್ತರಿನ ಲಯ ಸಂಘಟದ ಚಂಚಲ ಜೀವದಿಂದವಘಟಿಯ ಖಳ ನೆಮ್ಮಿದನು ಬಳಲಿಕೆಯಿಂದ ಹಳವಿಗೆಯ (ಕೊರರಾ. ೬-೪೦-೪೫). **ತುಟುಕುಹನಿ:** ೨. (ಆಲಂ) ಅಲ್ಪ ಸ್ವಲ್ಪ; ತೀರ ಸ್ವಲ್ಪ: ಏನಾದರೂ ಬಂದರೆ ತುಟುಕುಹನಿ ಮಾತ್ರ (ಸಣ್ಣಾಸಿ. ೦೨೩). **ತೊಟಕುಹನಿ:** ೧. ಒಂದು ತೊಟಕುಹನಿ ಅಗಸದಿಂದ ಸಿಡಿದು ಬೀಳಲಿಲ್ಲ (ಬರಹಾ. ೫೮). [ ತಟಕು₁ + ಪನಿ₂ ]

**ತಟಕ್ಕನೆ**, ತಟಕನೆ (ಅ). ಬೇಗನೆ; ಕೂಡಲೆ; ಒಮ್ಮೆಲೆ; ಇದ್ದಕ್ಕಿದ್ದಂತೆ: ಕಳಂಕಗಳು ಇದ್ದುದಿದ್ದ ಹಾಗೆ ತಟಕ್ಕನೆ ಹುಟ್ಟುವುದಿಲ್ಲ (ಜ್ಯೋತಿವೀ. ೮೯); ಇಂದಿರೆಗೆ ತಟಕ್ಕನೆ ಕೋಪ ಬಂತು (ನಿರಾತ. ೧೩೮). **ತಟಕನೆ:** ಕೋಟೆಗಂ ತಟಕನೆ ಬಿಟ್ಟರೆನ್ನ ವ್ರತವೆಲ್ಲವ ತೀರಿಸಿಕೊಂಡು ನಿಲ್ಲದೆ (ಹಂಪೋಲ. ೬೭). [ ತಟಕ್° + - ಅನೆ₁ ]

**ತಟಗಿ** (ನಾ). (?): ಮೆಣಸು ಸಂಬಾರ ತಟಗಿಯುಲ್ಲವಕ್ಕಿ ಸಹಿತ (ಸೌಇಇ. ೦೯೨೯, ಮಂಗಳೂರು. ೪೬೩-೩೪; 1312). [ ? ]

**ತಟಗುಟ್ಟು** (ಕ್ರಿ). ೧. ಸುತ್ತಾಡು; ಅಲೆದಾಡು; ತೊಳಲು; ತಾಟಾಡು: ನಾನಾ ಯೋನಿಯಲಿ ತಟಗುಟ್ಟ[ಪಾಠಾಂ. ಭವಪಟ್ಟು]ಬಳಲುವುದುಚಿತವೇ (ಕುಮಾರಾ. ೪-೦೨). ೨. ತಡವರಿಸು (?): ಗಾಢಾಂಧಕಾರದಲಿ ತಟಗುಟ್ಟಿ ನಿದ್ರೆಯಲ್ಲಿರುತಿರ್ಪ ನೀರೆಯಂ ಸಾರ್ದೊಡುರಿವಪಾರಿಯುಂತೊಪ್ಪಿರ್ದಳು (ಪರಕು. ೨೪-೦೨). ೩. ಹನಿಹನಿಯಾಗಿ ಸುರಿ; ತಟತಟನೆ ಸುರಿ; ತೊಟ್ಟಿಕ್ಕು: ಥಗೆಹೊಡೆದಳ್ಳೆ ಹೊಯ್ಯುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟಿ ಸುರಿಯೆ (ಮೋಹತ. ೦೯-೦೪); ಅವನ ಕಣ್ಣೊಳಗಿಂದ ನಡು ನಡುವೆ ನೀರು ತಟಗುಟ್ಟುತ್ತಿತ್ತು (ನಿರಾಥ. ೯೩). ೪. ಗೊಣಗು: ಅವಳು ಬೆಳಗಿನಿಂದ ತಟಗುಟ್ಟುತ್ತಲೇ ಇದ್ದಾಳೆ (ರೂಢಿ).

[ ತಟ₁ + ಕುಟ್ಟು₁ ]

**ತಟಗುಡು** (ಕ್ರಿ). ತೊಟ್ಟಿಕ್ಕು; ಹನಿಹನಿಯಾಗಿ ಬೀಳು; ಸ್ರವಿಸು: ಗೌಳಿಗರ ಹಿಂದೆ ಧಾವಿಸಿ ಹೋಗಿ ಬಿದ್ದುಬಿದ್ದು ಆ ತಟಗುಡುತ್ತಿರುವ ಹನಿಗಳನ್ನು . . . ನೆಕ್ಕತೊಡಗಿದರು (ಅನ್ನ. ೩೩೭).

[ ತಟ₁ + ಕುಡು₁ (<ಕೊಡು₁) ]

**ತಟಜ** (ಗುಂ). ೧. ತೀರದಲ್ಲಿ ಹುಟ್ಟಿದ,-ಬೆಳೆದ: ತೊಲಗದೆ ಗಂಧಶಾಲಿ ವನಮಂ ತಟಜೋತ್ಪಳ ಗಂಧದೊಳ್ ತಡಂಗಲಸಿದ ಕಂಪಿನಾಸೆಗೆ ಮುಸುಂಕಿದ ಭೃಂಗಕದಂಬಕಂ (ಚಂದ್ರಪ್ರ. ೦-೯೪). (ನಾ). ೨. ತೀರದಲ್ಲಿ ಹುಟ್ಟಿದ ಮರ ಮೊದಲಾದುವು: ಕಿಡವಲ್ಕೇಕೆಳಸುವ ಕೂಲಂಕಷ ಶೈವಲಿನಿಯ ಪೋಲ್ ತಿಳಿದ ಜಲಮುಮಂ ತಟಜಮುಮಂ (ಶಾಕುಂತ. ೬೯-೨). [ಸಂ.]

**ತಟತಟ₁** 'ತಟ₁' ಪರಾ.

**ತಟತಟ₂** 'ತಟ₂' ಪರಾ.

**ತಟತಟನೆ** (ಅ). ೧. ಪಟಪಟನೆ; ದಡದಡಿಸುತ್ತ: ಹಸಿದು ಬಳಕುಗುತು ತಟತಟನೆ ತಾಟಸ್ಯಗಡಿಗಳಂ ಪೊಡವಿಯೊಳು ಹೊಸೆಹೊಸೆದುಕೊಳುಗಂತ ಸಿಯ ಬಸುಜಿಂ (ಬಸಪು. ೧೪-೦೬); ವಾತಪಿತ್ತವೆರಡಜ ದ್ವಂದ್ವಜರೋಗದಲ್ಲಿ ಅಡಿಗಡಿಗೆ ಹಾವಿನ ಹಾಗೆ ನಡೆಯುತ್ತಾ, ತಟತಟನೆ ಹಾರಿಯಾಡುತ್ತಾ ಇಹುದು (ವೈದ್ಯಸಾ. I, ೪). ೨. ಬೇಗಬೇಗನೆ; ಶೀಘ್ರವಾಗಿ: ಸಂಹಾರ ನಿಟಲರುದ್ರನವೋಲು ಬಗೆಯದತಿ ಪಟುಬಲರ ತಟತಟನೆ ಮಾರ್ಗವಂ ನಡಸಿದಂ ಯಮುನಗರಿಗಂ ಭೀಮ ಕಲಿತನದೊಳು (ಕುರಂಗ. ೫೫-೩೦).

[ <ತಟ₁ + - ಅನೆ₁ ]

**ತಟತಟಿಸು** (ಕ್ರಿ). ತಳಮಳಿಸು; ಸಂಕಟಪಡು: ನಿಂದು ಡಿಳ್ಳಿಸಿ ತಟತಟಿಸಿ ಮನನೊಂದು ಸುಯ್ಯುತೆ . . . ಚಿಂತಿಸುತಿರ್ದನಾ ಕಂಸ (ಅಕ್ರೂರ. ೬-೦೪).

[ <ತಟ₁ + - ಇಸು₃ ]

**ತಟಪಟ₁** (ನಾ). ಪ್ರಾಣಾಪಾಯ; ಪ್ರಾಣಬಾಧೆ: "ತಟಪಟ[ಪಾಠಾಂ. ಕಟ, ತಟ, ಮಟ]ಮನೆ ತಾಂ ಪ್ರಾಣಬಾಧೆ" (ಛಾಠನಿ. ೩೦); ತಟಕಿನಿಂದ ತಟಪಟವಾಯಿತು (ಗಾದೆ). [ ? ]

**ತಟಪಟ₂** (ಅ). ೧.=ತಟತಟನೆ: ದಿಟಭಕ್ತನಂತೆ ಭಸಿತೋದ್ಧೂಳನಂ ಮಾಡಿ ತಟಪಟಿಸುತಂಗಂ ಕರನ್ಯಾಸಮಂ ಮಾಡಿ (ಸೌದಿಠ. ದೀ. ೬೩-೨). ೨. ಜೋರಾಗಿ ಮಿಡಿಯುತ್ತ; ವೇಗವಾಗಿ ಹೊಡೆದುಕೊಳ್ಳುತ್ತ: (+).

**ತಟಪುಟನೆ**, ತಟಪೊಟನೆ, ತಟಹೊಟನೆ (ಅ). ದಡದಡನೆ; ಪಟಪಟನೆ; ಬೇಗಬೇಗ: ತಳರ್ವಜ್ಜೆ ತಟಪುಟನಿಡುವಾಗ ಮಿಟರೆದ ತಳಹೊಳಗೊಳು ತಿಹುದೊಡನೆ (ಭರಪ. ೦೨-೩೮); ಅಂಬರ ತುಡುಕೆ ಗಳೆಯನೇಱ ನೃಪನ ಮುಖಾಂಬುಜವನೆ ನೋಡುತಿರ್ದು ಕಂಬೆಳಗೊಲೆಯಲೊಡನೆ ತಟಪುಟನುಬ್ಬಿ ಡೊಂಬರು ಲಾಗುದೋಱುವರು (ಭರಪ. ೨೦-೩೯). **ತಟಪೊಟನೆ:** ಅಟಮಟಲಿಹಿಗಾಗಿ ಕಟಕವಱಯೆ ಬಾಯ ತಟಪೊ[ಪಾಠಾಂ. ಮು] ಟನುಱ ಹೊಯ್ಯುಕೊಂಡು ತುಟಿಯ ಚುಂಬಿಸುವ ಹಲ್ಲುಗಳ ನೀಗಿದರೆಂದು ವಿಟನಕ್ಕು ನುಡಿದನೆಲ್ಲರೊಳು (ಭರಪ. ೩೬-೯೨). **ತಟಹೊಟನೆ:** ವೈಶ್ಯನಿಕುರುಂಬಮೆಲ್ಲಂ ತತ್ಸಲಂಗಳಂ ತಿಂದೊಡಲು ತುಂಬುವನಿತಱೊಳಿಕಾತಳಕೆ ತಟಹೊಟನೆ ಬಿಳ್ದುರುಳ್ದುದಂ ಕಂಡು (ಸಮ್ಯಕ್ತ್ವ. ೦೦-೫೦).

[ ತಟಪುಟ್₀ + - ಅನೆ₁ ]

**ತಟಹೊಟನೆ** 'ತಟಪುಟನೆ' ನೋ.

**ತಟಬಂದಿ** (ನಾ). ರಕ್ಷಣೆಗಾಗಿ ಕಟ್ಟಿದ ಗೋಡೆ; ಪ್ರಾಕಾರ; ಕೋಟೆ; ಕಿಲ್ಲೆ: ಕೈಲಾಸಪರ್ವತದ ಸುತ್ತಲಿನ ತಟಬಂದಿಯು ಸಿಡಿಯಹತ್ತಿ, ಪರ್ವತವೆಲ್ಲ ಲಿಕಿಲಿಕಿಯಾಗಿ ಮೇಲಿನವರು ಒಟ್ಟೊಬ್ಬರ ಕೆಳಗುರುಳ ಹತ್ತಿದರು (ಕೈವಸು. ೩೨೬); ಬಂಡುಗಾರರು ವಿಹನೆಗಾರ್ ಹಿಲ್ಲದ ಮೇಲೆ ತಟಬಂದಿಯನ್ನು ಕಟ್ಟಿಕೊಂಡು ಕೆಲವು ದಿವಸಗಳವರೆಗೆ ಇದ್ದರು (ಇಂಗ್ಲೆಇ. ೫೦). [ ←ಮರಾ. ತಟಬಂದೀ ]

**ತಟಮಟ** (ನಾ). ಕೊರತೆ; ಅಭಾವ; ತೊಂದರೆ: (+). [ ? ]

**ತಟವಟ** 'ತಾಟುಪೋಟು' ನೋ.

**ತಟವಟಗಾರ** (ನಾ). ಮೋಸಗಾರ; ಕಪಟಿ; ವಂಚಕ: (+).

[ ತಟವಟ (<ತಾಟುಪೋಟು) + - ಗಾರ (< - ಕಾಱ) ]

**ತಟವಾಣಿ₁** 'ತಟ್ಟುವಾಣಿ' ನೋ.

**ತಟವಾಣಿ₂** (ನಾ). ಗಟ್ಟಿಗಿತ್ತಿ; ದಿಟ್ಟೆ; ತಾಟಗಿತ್ತಿ: ಯಾರಿಗೂ ಅರೆ ಹೊಟ್ಟೆಯೂ ಇಲ್ಲದ ಹಾಗೆ ಮಾಡಿದೆಯಲ್ಲೇ, ತಟವಾಣಿ, ನಿನ್ನ ಹಾಳವಿದ್ಯಕ್ಕೆ ಬೆಂಕೀ ಹಾಕ (ಮಹಮರಾ. ೪೭); ಇವಳು ಸಾಧಾರಣ ಹೆಂಗಸಾಗಿ ತೋರುವುದಿಲ್ಲ; ಬಹು ತಟವಾಣಿಯಾಗಿ ತೋರುತಾಳೆ (ಶಾಟಿಮಾ. ೫೭). 'ಗಟ್ಟಿವಾಳಿ' ಪರಾ. [ ? ]

**ತಟವುಚ್ಚು** 'ತಟ್ಟುಚರ್ಚು' ನೋ.

**ತಟಸ್ತ** (ನಾ). = ತಟಸ್ಥ ೩: ತಟಸ್ತರಾಗಿಯಿದ್ದವರು ಅವ್ವಾ ಯೇನು ದುಃಖವ ಪಡುತ್ತಿದ್ದೀರಿಯೆಂದು ಕೇಳಿದರೆ (ಹುಕ್ಕೃಷ್ಣ. ೭-೦೩).

[ <ಸಂ. ತಟಸ್ಥ ]

**ತಟಸ್ಥ** (ಗಂ). ೧. ದಡದಲ್ಲಿರುವ; ಹತ್ತಿರ ನಿಂತಿರುವ. ೨. ಯಾವ ಪಕ್ಷವನ್ನೂ ವಹಿಸದ: ನಮ್ಮದು ತಟಸ್ಥ ರಾಷ್ಟ್ರ (ರೂಢಿ). (ನಾ). ೩. ಯಾವ ಪಕ್ಷಕ್ಕೂ ಸೇರದವನು: ತಟಸ್ಥನಾದವನಿಗೆ ತಂಟೆಯೇನು (ಗಾದೆ). ೪. ಔದಾಸೀನ್ಯವನ್ನು ತಾಳಿದವನು; ಆಸಕ್ತಿಯಿಲ್ಲದವನು: ಅವಳು ಸರ್ವಾಂಗಸುಂದರಿಯಾಗಿರಲಿಲ್ಲವಾಗಿ ನಾವು ತಟಸ್ಥರಾದೆವು (ಕಥಾಕುಂ. ೯೩). ೫. ಚಲನೆಯಿಲ್ಲದಿರುವಿಕೆ; ನಿಷ್ಕ್ರಿಯತೆ: ಸಮಯವು ಸ್ತಬ್ಧವಾಯಿತು. ಜಗತ್ತು ತಟಸ್ಥವಾಯಿತು (ಸೀತಾರ. ೧); ಪ್ರಗತಿ ಮಾರ್ಗದಲ್ಲಿಯೇ ಅಥವಾ ತಟಸ್ಥವಾಗಿದೆಯೇ (ಭಾರದ. ೫೪೩). [ ಸಂ. ]

**ತಟಸ್ಥತೆ** (ನಾ). ಯಾವ ಪಕ್ಷವನ್ನೂ ವಹಿಸದಿರುವುದು: ಅಮೇರಿಕಾ ದೇಶವು ಸಜ್ಜನರಂತೆ ತಟಸ್ಥತೆಯಿಂದ ಸತ್ಯಾಸತ್ಯ ಪರೀಕ್ಷೆಯನ್ನು ನಡೆಸಿರುವರು (ವಿಜಾಮಂ. ೮).

[ ಸಂ. ತಟಸ್ಥತಾ ]

**ತಟಹಾಯ್**, ತಟಹಾಯು, ತಟಾಯು (ಕ್ರಿ). ೧. ಸೀಳಿಕೊಂಡು ಹೋಗು; ಭೇದಿಸಿಕೊಂಡು ಹೋಗು: ಸುರುತಾಳ ಖಾನರ ಗಂಡ ನೆನಿಸಿಕೊಂಬ ಬಿರಿದಿನ ಭಟನಾರಿವನು ಇರದೇಳು ಕೊಪ್ಪರಿಗೆಯ ತಟಹಾಯ್ದುಚ್ಚ ಧುರಧೀರ ಬಾದುರಖಾನ (ಕಂಠೀರಾ. ೨೧-೮೫). ತಟಹಾಯು: ೧. ಕಟಕಿಯ ಮಾತುಗಳೇಕೆ ಕನ್ಯಾಚೋರ ದಿಟ ನೋಡು ನೋಡು ನಿನ್ನೆದೆಯ ತಟಹಾಯಬೇಕೆಂದು ಮಸೆದ ಕೂರ್ಗಣೆಯನಾರ್ಭಟದಿಂದಲಿಕ್ಕಿದರ್ ಖಳರು (ಪ್ರೋಹಕ. ೩೪-೨೭); ಆ ಬಾಣ ಸುಬಾಹುವಿನ ಎದೆಯೊಡೆದು ತಟಹಾಯಲು ಅವನು ಗತಪ್ರಾಣನಾಗಿ . . . ಒರಗಿದನು (ಕಳುಮಾ. ೦೯೯-೪). ತಟಾಯು: ೧. ಅದು . . . ಸುಯೋಧನನ ದೇಹದಲ್ಲಿ ನೆಟ್ಟು . . . ಆಚೆಗೆ ತಟಾದು ಭೂಮಿಯಲ್ಲಿ ಪ್ರವೇಶಿಸಿತು (ಕ್ಷವಾಳ. ೨೩). ೨. ದಾಟು; ಹಾಯ್ದುಹೋಗು: ಅವನ ಅಂಗಡಿ ತಟಾದು ನೇರವಾಗಿ ಪೂರ್ವದಿಕ್ಕಿನ ಕಡೆ ಹೋಯಿತೆಂದರೆ ಸ್ವಲ್ಪ ದೂರದಲ್ಲೇ ಓಣಿ ಬಾಗುತ್ತದೆ (ಸಾಹೇಬ್. ೨). [ ತಟ್ಟು₃ + ಹಾಯ್₁ (<ಪಾಯ್) ]

**ತಟಹಾಯಿಸು**, ತಟಾಯಿಸು (ಕ್ರಿ). ೧. ದಾಟಿಸು; ದಡವನ್ನು ಮುಟ್ಟಿಸು: ಆ ಕುರಿಗಳ ದೊಡ್ಡಿಯನ್ನು ಅಟ್ಟಿಕೊಂಡು ಹೋಗಿ, ಈ ನಾಡಿನ ಎಲ್ಲೆಯಿಂದಾಚೆಗೆ ತಟಹಾಯಿಸಿಬಿಡಬೇಕೆಂದು (ಮುಂತ್ರಿಶ. ೯೬-೨೪). ೨. ದಾಟು; ಹಾಯ್ದು ಹೋಗು: ಅಪ್ರಮೇಯನನ್ನು ಕರೆದುಕೊಂಡು ಹೋಗುತ್ತಾ ಒಂದು ಕೊಟ್ಟಡಿಯಿಂದ ಇನ್ನೊಂದು ಕೊಟ್ಟಡಿ ಹೀಗೆ ಎಂಟು ಹತ್ತು ಬಾಗಿಲನ್ನು ತಟಹಾಯಿಸಿ ಹೋದರು (ಮುಸುಗ. ೦೦೦). ತಟಾಯಿಸು: ೧. ತಟ್ಟು ಇದ್ದರೆ ತಟಾಯಿಸಿ ನಡೆದಾನು (ಗಾದೆ). ೨. ಮೂರು ಪಹರೆಗಳನ್ನು ತಟಾಯಿಸಿ ಹೋಗಿ (ಬಾಂಕ್. ೨೨೪); ಇಷ್ಟು ಏರುಪೇರುಗಳನ್ನು ತಟಾಯಿಸಿ ಇಂಥ ಸತ್ವವನ್ನುಳಿಸಿಕೊಂಡು ಬಂದಿರುವುದು ಜಗತ್ತಿನ ಇತಿಹಾಸದಲ್ಲೇ ಹೊಸದು (ಭಾರದ. ೪೦೭).

[ ತಟಹಾಯ್ + -ಇಸು₃ ]

**ತಟಹಾಯು** 'ತಟಹಾಯ್' ನೋ.

**ತಟಹೊಟ** (ನಾ). ೧. ಆತುರ; ಉದ್ವೇಗ (?): ಪಟುವಾಗಿ ಕರ್ಮಭಟನಂ ಜಯಿಸು ಬಯಲ ತಟಹೊಟದ ಕಾಂಕ್ಷೆಯನೆ ಪರಿಹರಿಸು (ಸಮ್ಯಕ್. ೦-೫); "ಟಕ್ಕು, ಮೋಸ" (ಸಮ್ಯಕ್. ಟಿಪ್ಪಣಿ). ೨. ತೊಂದರೆ; ಜಂಜಡ: ಆವ ಸಂಕಟದ ತಟಹೊಟಂ ಸಮನಿಸಿಲ್ಲ (ಪರಶು. ೯೦-೫೦). ೩. ಗದ್ದಲ; ಗಲಾಟೆ (?): ಕಟಕಿಗಳ ಧನಿಯವೃತ್ತಕಟೆಯ ಮಾಗಧರ ಉಬ್ಬಟೆಯ ಕಾವಮಾಟದರ ತಟಹೊಟ ಮಹೋನ್ನತೆಯಕಟಕಟಾ ಬ್ರಹ್ಮಾಂಡಘಟ ಪೊಡೆಯುದಿರದೆನಲ್ ಪಟುತರದೊಳೊಪ್ಪಿರ್ದುದು (ಲಕ್ಷ್ಮೀಶಾ. ೬-೧-೩೦).

[ ? ]

**ತಟಹೊಟನೆ** 'ತಟಪುಟನೆ' ನೋ.

**ತಟಾಕ** (ನಾ). ಕೆರೆ; ಕೊಳ; ಕಾಸಾರ; ಪುಷ್ಕರಿಣಿ: "ಸರಸಿ ಸರಂ ಕಾಸಾರಂ ಸರೋಜಷಂಡಂ ತಟಾಕಮಾಧಾರಂ ಪುಷ್ಕರಿಣಿಯದು" (ಪಸ್ತುಕೋ. ೨೪-೦೫); "ತಟಾಕಂ ಜಲಾಧಾರಮೆನೆ ಕೆಱೆ" (ಮಂಗರಾ. ೦೨೩-೦೪); ಗಗನತಳಮ ಪಱಿದು ಬಿಟ್ಟುದೆನಿಪ ಬಹು ತಟಾಕದಿಂ (ಹಂಪರಾ. ೧-೫೭ ರಗಳೆ); ಕುಟಿಗಳ್ ಬಹು ತಟಾಕವಾದುವು (ಲೋಕೋಪ. ೧-೮ ಟೀಕೆ); ಉದಕವಜಿತ ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನಟ್ಟನೆ ಜೋಡಿಯಾದುದಾ ಪುರಜನಂ (ಹಡಕಾ. ೯-೨೪). [ ಸಂ. ]

**ತಟಾಯಿಸು** 'ತಟಹಾಯಿಸು' ನೋ.

**ತಟಾಯು** 'ತಟಹಾಯ್' ನೋ.

**ತಟಾರನೆ** (ಅ). ಕೂಡಲೇ; ಇದ್ದಕ್ಕಿದ್ದಂತೆ; ತಟ್ಟನೆ: "ತಟಾರನೆ- ತಟಕ್ಕನೆ" (ಜಾನಕೋ. ೬೪). [ತಟಾರ್₀ + -ಅನೆ₁. / ತೆಲು. ತಟಾಲುನ]

**ತಟಿ** (ನಾ). ದಡ; ತೀರ: ಸಕಲವೆಂದಡೆ ಇಷ್ಟ ನಿಷ್ಕಲವೆಂದಡೆ ಆದಟ ಅಭೀಷ್ಟ ಈ ಉಭಯದ ತಟಗಾಱದೆ ಹೊತ್ತು ಹೋರುವ ಪ್ರಾಣಿನ ಕತ್ತಿಯ ಬಾಯಧಾರೆಯ ಘಾಯಕ್ಕೆ ಇನ್ನೇತಱ ಮದ್ದು (ಪ್ರೋಕೆಮಾ. ೪೪-೦೮೧).

[ ಸಂ. ತಟೀ ]

**ತಟಿಚ್ಚಂಚಳೆ** (ನಾ). ಮಿಂಚಿನಂತೆ ಚಂಚಲಳಾದವಳು,-ಅಸ್ಥಿರಳು: ತಟಿಚ್ಚಂಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಬಿಟದಿಸ್ಥೈರ್ಯಮಂ ತಾಳ್ದಿದಳ್ (ಮಲ್ಲಿಪು. ೩-೦೯). [ಸಂ. ತಟಿಚ್ಚಂಚಲಾ (ತಟಿತ್ + ಚಂಚಲಾ)]

**ತಟಿಚ್ಛೃಂಗಾಟ** (ನಾ). ೧. ಮಿಂಚಿನಂತೆ ತಳತಳಿಸುವ ಚೌಕ,-ಚತುಷ್ಪಥ. ೨. ಮಿಂಚಿನ ಧಾರೆಯ ಸಂಚಾರ,-ಚಲನೆ; ಮಿಂಚುಗಳಿಂದಾದ ಚತುಷ್ಪಥ. ೧, ೨: ನಾಟಕ ಪ್ರಕರದಂತೆ ವಿಪುಳ ವೀಥಿ ವಿಭಾಸಿಯುಂ ಮೇಘಪಟಳದಂತೆ ತಟಿಚ್ಛೃಂಗಾಟನಿರತಮುಂ (ಪುಷ್ಪಪು. ೯-೩೦ ವ). [ ಸಂ. (ತಟಿತ್ + ಶೃಂಗಾಟ; ತಟಿತ್ + ಶೃಂಗ + ಅಟ) ]

**ತಟಿತ್ಕಣ** (ನಾ). ಮಿಂಚಿನ ಕಣ; ವಿದ್ಯುತ್ತಿನ ಕಿಡಿ: ಕುರುಕ್ಷೇತ್ರದೆರಡು ಬಣ ವಿಜ್ಞಾನದ ತಟಿತ್ಕಣ (ಸೂರ್ಯಪಾ. ೪೦-೫). [ಸಂ. ತಟಿತ್ + ಕಣ]

**ತಟಿತ್ತು** (ನಾ). ಮಿಂಚು: ಉಚ್ಚ ತಟತ್ಕರವಾಳನಾಂತು ತಜ್ವಲದ ಭಟಂ ಗದಂ ಕುಡದೆ ತನ್ನಯ ಜೀವನಮಿತ್ರುದಬ್ದ (ರಾಜಶೇ. ೧-೯೯); ತಟಿತ್ಕೋಟಿನಿಭಕಾಯ ಜಗನ್ನಾಥವಿಠಲಯ್ಯಾ ವಿಠಲಯ್ಯ (ಜಗದಾ. ೦೫೮); ತಟಿತ್ತು ಮೇಘಂಬೊಕ್ಕು ಮರೆಯಪ್ಪವೊಲ್ (ಶ್ರೀರಾಮಾ. ೫೯೫-೨೯೨).

[ ಸಂ. ತಟಿತ್]

**ತಟಿತ್ಪ್ರಭೆ** (ನಾ). ಮಿಂಚಿನ ಹೊಳಪು,-ಪ್ರಕಾಶ: ತಟಿತ್ಪ್ರಭಾಪರಿವೃತಮಾದ ವಾಜಿಗಳ ವಂಗಡದಿಂದಮುಮಂ (ಶಾಕುಂತ. ೧೦೦-೧೭೦).

[ ಸಂ. ತಟಿತ್ಪ್ರಭಾ (ತಟಿತ್ + ಪ್ರಭಾ) ]

**ತಟಿದ್ವಲ್ಲರಿ**(ನಾ). ಬಳ್ಳಿಮಿಂಚು: ತಟಿದ್ವಲ್ಲರಿ ಬಳಸಿದ ಶರಲ್ಲಕ್ಷ್ಮಿಯಂತೆಯುಂ ತಾರಾವಳಿ ಬಳಸಿದಿಂದುಕಳೆಯಂತೆಯುಂ . . . ಕನ್ಯಕಾಕದಂಬದ ಬಳಸಿಂ ಬಗೆಗೊಳಿಸಿ (ಹಂಪಾಪಮ. ೫-೫೭ ವ). [ ಸಂ. (ತಟಿತ್ + ವಲ್ಲರಿ) ]

**ತಟಿದ್ವಳಯ** (ನಾ). ಮಿಂಚಿನ ಆವರಣ,-ವರ್ತುಲ : ತಟಿದ್ವಳಯವಿಳಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ೧೫-೩೩).
[ ಸಂ. ತಟಿದ್ವಲಯ (ತಟಿತ್ + ವಲಯ) ]

**ತಟಿದ್ವಿಲಾಸ, ತಟಿದ್ವಿಳಾಸ** (ನಾ). ಮಿಂಚಿನ ಲೀಲೆ,-ಹೊಳಪು : ಈ ಕೇವಲ ಸೌಂದರ್ಯದ ಅದ್ಭುತವಾದ ತಟಿದ್ವಿಲಾಸವನ್ನು ನಾವು ಲಲಿತಾಸಹಸ್ರನಾಮದಲ್ಲಿ ಗುರುತಿಸಬಹುದು (ಸೌಂದರ್ಯ.೧೧೩). **ತಟಿದ್ವಿಳಾಸ:** ದಶನಾಂಶು ಪೊದಟ್ದ ತಟಿದ್ವಿಳಾಸಮಂ ಗೆಲೆ ನುಡಿದಂ. . . ಖೇಚರಾಧಿಪಂ (ಶಂರಾಮಾ. ೫-೦೭). [ ಸಂ. (ತಟಿತ್ + ವಿಲಾಸ) ]

**ತಟಿದ್ವಿಳಾಸ** 'ತಟಿದ್ವಿಲಾಸ' ನೋ.

**ತಟಿನಿ** (ನಾ). ಹೊಳೆ; ತೊರೆ; ನದಿ: ಉರ್ವೀಧರ ಚಕ್ರಪ್ರಾಂತದೊಳ್ಬಿಳ್ದು ರತತಿ ತಟಿನೀವ್ಯೂಹದೊಳ್ಪೂರವಾರಂ . . . ಪರ್ವಿಸುತ್ತಿರ್ದುವೆತ್ತಂ (ಕಾದಂಸಂ. ೫೩೨); ಇವರಲ್ಲಿ ಗುಪಿತಚರಿತೆಯ ಕಂಡು ದೇವಮುನಿ ತಟಿ[ಪಾಠಾಂ. ಟ]ನಿಗಳು ತವಸು ಫಲವಾಯಿತೆಂದು (ವಿದಾಳ್ಯ. ೧೧೦).
[ ಸಂ. ತಟಿನೀ ]

**ತಟಿನೀತನೂಜ** (ನಾ). ನದೀಸುತ ; ಗಂಗೆಯ ಮಗ ; ಭೀಷ್ಮ : ವಿವರಿಸಿ ತಿಳುಹಿದನು ತಟಿನೀತನೂಜನಜಾತಶತ್ರುವಿಗೆ. (ತಿಮ್ಮಅ. ೭ ಸೂಚನೆ).
[ ಸಂ. (ತಟನೀ + ತನೂಜ) ]

**ತಟಿನ್ನಾದ** (ನಾ). ಗುಡುಗು; ಮೇಘನಾದ: ಚತುರ್ದಶ ಭುವನಾವಧಿಯೆನೆ ದುರ್ಯಶಸ್ತಟಿನ್ನಾದ[ ಪಾಠಾಂ. ಪಟಹನಾದ ]ಮಾದಮೇನೊದವಿದುದೋ (ಶಂರಾಮಾ. ೭-೯೭).
[ ಸಂ. (ತಟಿತ್ + ನಾದ) ]

**ತಟಿನ್ಮಾಲಿಕೆ, ತಟಿನ್ಮಾಳಿಕೆ** (ನಾ). ಮಿಂಚಿನ ಮಾಲೆ : ಜಲಮಯಮಿಳೆಯೆಲ್ಲಂ ಪ್ರಜ್ವಲಿತ ತಟಿನ್ಮಾಲಿಕಾಮಯಂ ದೆಸೆಯೆಲ್ಲಂ (ವೃಷವಿ. ೧೪-೨೭). **ತಟಿನ್ಮಾಳಿಕೆ:** ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲ ಕೀಲಾವಳಿಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ . . . ಬಂದುದು . . . ಅಬ್ದಕಾಲಂ (ಚಂದ್ರಪು. ೪-೨೯).
[ ಸಂ. ತಟಿನ್ಮಾಲಿಕಾ (ತಟಿತ್ + ಮಾಲಿಕಾ) ]

**ತಟಿನ್ಮಾಳಿಕೆ** 'ತಟಿನ್ಮಾಲಿಕೆ' ನೋ.

**ತಟಿಲ್** (ನಾ). ಒಂದು ಅನುಕರಣ ಶಬ್ದ : ತಟಿಲ್ತಟಿಲ್ಪಟಿಲ್ ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಕೆ. ೬-೩೮).

**ತಟಿಲ್ಲತೆ** (ನಾ). ಬಳ್ಳಿಮಿಂಚು : ತಟಿಲ್ಲತೆವೊಲಾಕಾಶಕ್ಕೆ ನೆಗೆದು ಪಾಱಿದಳಾಗಳ್ (ಶಂರಾಮಾ. ೯-೪೧) ; ಇನಿಸಿನಿಸು ಮುಗಿಲ ತುಂತುರ್ವನಿಯ ತಟಿಲ್ಲತೆಯ ಮಿಮಳ ಶಶಿರವಿಗಳ್ (ಅಟ್ಟಮು. ೮-೧೩೪) ; ನಯನಾಂಶು ಗಗನಕೆ ತಟಿಲ್ಲತೆಯ ಪರ್ಬಂ ಪಡೆಯಲು (ಚಲಿಪು. ೫-೦೨).
[ ಸಂ. ತಟಿಲ್ಲತಾ (ತಟಿತ್ + ಲತಾ) ]

**ತಟಿಸು**$_1$ 'ತಟ್ಟಿಸು' ನೋ.

**ತಟಿಸು**$_2$ (ಕ್ರಿ). ಆವರಿಸು ; ಮುಸುಕು (?) : ಛಿಟಿಲು ಛಿಟಛಿಟಿಲೆಂದು ಸಿಡಿಯುತ ಛಟಛಟನೆ ಛಟಲೆಂದು ಕಣಗಳು ತಟಪಟನೆ ಹಾರುತಲಿ ಕಾರ್ಬೊಗೆ ತಟಿಸುತಾಕ್ಷಣದಿ (ಹಮಚ. ೬೬). [ ? ]

**ತಟುಕು** 'ತಟಕ್ಕು$_2$' ನೋ.

**ತಟುಗು** 'ತಟುಕಂ$_2$' ನೋ.

**ತಟುವಳ್ಳುವೆರೆ** (ನಾ). ಒಂದು ಗದ್ದೆಯ ಹೆಸರು (?): ಕೊಡುಗೂನ್ನಾಡಾ ಕಲ್ಲಿಪುಸೂರಾ ಚೆಡಿ ಅಕ್ಕೆ ಕರ್ಗುಲಪ್ಪೊಲತ್ತಟುವಳ್ಳುವೆರೆಉಂ ವಸಮಿಗಾಲುಂ ಎರಡು ಕಳನಿಉಂ ತೋಟ್ಟಮುಂ (ಮೈಆರಿ. ೧೯೫೫, ೧೦೭-೧೮ ; ೨ನೆಯ ಶತ).
[ ? ]

**ತಟಿ**$_1$ (ಕ್ರಿ). ತಟ್ಟು ; ಬಡಿ : ಹತವಿಧಿಯೆ ! ಕದ ತೆರೆಯಲಿಲ್ಲ ಕದ ತಟಿದಾಗ. ಕದ ತೆರೆಯೆ, ಆ ಪುರುಷ ಬರಲೊಲ್ಲ (ಉಯ್ಯಾಲೆ. ೧೦-೧೩) : ತಾಗು, ತಗಲು; ಪಳಂಚಲೆ, . . . ತಟಿ, ಬಡಿ, ಸೋಂಕು (ಶಂಸುಹು. ೮೪). 'ತಟ್ಟು$_1$' ಪರಾ. [ <ತಟ್ಟು$_1$ ]

**ತಟಿ**$_2$ (ನಾ). ತಡಿ ; ದಡ : ತುಂಗಭದ್ರೆಯ ತಟಿಯ ಕನ್ನನ (ಕಕಾಅ. ೧೦೯-೨೪-೦೦ : ?). [ ಸಂ. ತಟಾ ]

**ತಟಿತಟಿ** (ನಾ). ವ್ಯರ್ಥ (?) : ತಟಿತಟಿಯಹ ಲಾಲಸೆಯನು ಸೂಡಿ ಪಟ ಪಟನೈದಿ ಪರರ ತಾ ಬೇಡಿ ದಿಟಹುಸಿಗಳ ಮನದೊಳಗೆಡೆ ಮಾಡಿ ತಟ ಮನುಜರು ಬಳಲ್ವರು ಸುಖಕಾಡಿ (ಅಅಧೂ. ೨೯). [ ? ]

**ತಟ್ಟ**$_1$ (ನಾ). ತಟ್ಟನ್ನು ಧರಿಸಿದವನು ; ಜೈನಯತಿ : ತಱಟುದಲೆಗಳ ತಟ್ಟರೋ ನೊರೆ ಸುರಿವ ಬಾಯ್ಗಳನಿಕೆ ಹಡಿಕೆಗಳೊ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸಪು. ೫೦-೫೩).
[ ತಟ್ಟು$_7$ + – ಅ$_7$ ]

**ತಟ್ಟ**$_2$ 'ಥಟ್ಟು' ನೋ.

**ತಟ್ಟಗ್ಗೆಱೆ** (ನಾ). ಒಂದು ಊರಿನ ಹೆಸರು : ಪೊಲಮೇರ ತಟ್ಟಗ್ಗೆಱೆಯ ಕಿಟ್ಕೆಱೆ ಪೋಗಿ ಅಕ್ಷರಕಲ್ಲ ಮೇಗೆ (ಎಕ. II, ೩೫-೫ ; ಸು. ೮೦೦).
[ ? + ಕೆಱೆ ]

**ತಟ್ಟಡಿ** 'ದಟ್ಟಡಿ' ನೋ.

**ತಟ್ಟನೆ** (ಅ). ಕೂಡಲೆ; ಬೇಗನೆ: ಪೂಸರಲಿಂದ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟು ಮನ್ಮಥ (ಮೋಹತ. ೫-೬೦); ನಿನ್ನಯ ಕರುಣಾದೃಷ್ಟಿಯೊಳೆನ್ನನುದ್ಧರಿಸಿ ತಟ್ಟನೆ ಸಲಹು (ಕಂನವಿ. ೪-೩೮) ; ನೈಜವಾದ ಉಪಮಾನಗಳು ; ಮನಸ್ಸಿಗೆ ತಟ್ಟನೆ ಹೊಳೆಯುವಂತೆ ಜನಜೀವನದಿಂದಲೇ ಆರಿಸಿದ ಆಣಿಮುತ್ತುಗಳು (ಜಗದಾ. ೬೨).
[ <ತಟಕ್ಕನೆ ]

**ತಟ್ಟಮ್ಮ** (ನಾ). ಮೈಮೇಲೆ ಸಣ್ಣಗುಳ್ಳೆಗಳೇಳುವ ಒಂದು ಬಗೆಯ ರೋಗ; ಗೋಣಿತಟ್ಟು; ದಡಾರ:"ಗೊಬ್ಬರರೋಗ" (ಜಾನಕೋ. ೬೪).
[ ತಟ್ಟು$_2$ + ಅಮ್ಮ$_2$ ]

**ತಟ್ಟಲ್** (ನಾ). ಒಂದು ಊರಿನ ಹೆಸರು (?) : ತಟ್ಟಲ ಏಚಗಾವುಣ್ಣನ ಮಾವ ಸಾನ್ತಯ್ಯ ಕೊಟಗಮ್ಮನ್ನು ತುಱುವ ಕೊಣ್ಡು ಪೋಪಾಗ (ಮೈಆರಿ. ೧೯೪೧, ೨೫-೦೨ ; 1030). [ ? ]

**ತಟ್ಟಲಿ, ತಟ್ಟಲೆ** (ನಾ). (ಉಕ) "ಹೆಣ್ಣುಮಕ್ಕಳ ಚಪ್ಪಲಿ; ಕೆರವು" (ಜಾನಕೋ. ೬೪). **ತಟ್ಟಲೆ:** ಮಗಳಿಗೆ ಒಂದು ಜೊತೆ ಹೊಸ ತಟ್ಟಲೆ ಕೊಡಿಸಿದರು (ರೂಢಿ). [ ? ]

**ತಟ್ಟಲೆ** 'ತಟ್ಟಲಿ' ನೋ.

**ತಟ್ಟಾಡು** (ಕ್ರಿ). ೧. ಒಂದಕ್ಕೊಂದು ತಗಲು ; ಘರ್ಷಣೆಯಾಗು : ಜೋಗಿ ಜೋಗಿ ತಟ್ಟಾಡಿದರೆ ಮೈಯೆಲ್ಲಾ ಬೂದಿ (ಗಾದೆ). ೨. ಅತ್ತಿತ್ತ ಓಲಾಡು ; ತೂರಾಡು ; ತೂಗಾಡು : ಶಕ್ತಿಯು ಬತ್ತಿ ಕರಗಳು ಜಾರಿ ತಟ್ಟಾಡುತ್ತ ಓಂಗಡೆಗೊಲೆದು ನಿಂದನು (ಜನಭಾ. ೨೦-೧೨) ; ನೀತಿಯ ಮೆಟ್ಟಲ ಮೇಲೆಯೇ ನಿಲ್ಲಲಾರದೆ ತಟ್ಟಾಡುವವನು ನಿಯಮಗಳನ್ನು ಹೇಗೆ ಹಿಡಿದಾನು (ನೀಗಟ್ಟು. ೭). 'ತಾಟಾಡು' ಪರಾ.
[ ತಟ್ಟು$_1$ + ಆಡು$_1$. / ತೆಲು. ತಟ್ಟಾಡು ]

**ತಟ್ಟಾಮಾಲೆ** (ನಾ). ಅಪ್ಪಾಲೆ ತಿಪ್ಪಾಲೆ; ಕಳ್ಳಿಮಳ್ಳಿ (ಉಕ).
[ ←ತಮಿ. ತಟ್ಟಾಮಾಲೈ ]

**ತಟ್ಟಾರ** (ನಾ). ಅಕ್ಕಸಾಲಿಗ: ಚೋಮತ್ತಟ್ಟಾರ ನಾಮಧೇಯೇನ ಲಿಖಿತಂ ತಾಮ್ರಸಾಧನಂ (ಮೈಆರಿ. ೧೯೪೫, ೩೦-೫೨ ; ಸು. 610).
[ <ಸಂ. ತ್ವಷ್ಟೃ ]

**ತಟ್ಟಾಱಿಸು** (ಕ್ರಿ). ಸಂಪೂರ್ಣವಾಗಿ ಒಣಗಿಸು ; ನಿರ್ದ್ರವಗೊಳಿಸು ; ಬಳಲಿಸು : ತುಟಗಂಟಲಿರ್ಪೊಡಿ ನೆಱ ಪೊತ್ತಿ ಕರಮೆ ನೀರಡಿಕೆ ಏಗೆ ತಟ್ಟಾಱಿಸುತ್ತ ಬರೆ ಮರಗಿಟ್ಟನಂತೆ ಪಸಿವೊಳಗೊಳಗೆ ಸುಡುತ್ತ ಬರೆ (ಸಾವಂಕ. ೪-೧೭೧). [ ತಟ್ಟಾಱು + -ಇಸು$_{3}$ ]

**ತಟ್ಟಾಱು** (ಕ್ರಿ). ೧. ಒಣಗಿ ತಾರಲಾಗು ; ಸಂಪೂರ್ಣವಾಗಿ ನೀರು ಇಂಗಿಹೋಗು : ನಿರ್ದ್ರವಮಪ್ಪುದೇ ಕಾರಣವಾಗಿ ಕಡುವಿಸಿಲಿಂಗೆ ತಟ್ಟಾಱಿದ ಚರ್ಮದಿಂ ಪೃಷ್ಠದ್ವಾರಂ ಮುಚ್ಚಲ್ (ಹಂಚಹಂ. ೦೯-೯): ಮರ ತಟ್ಟಾಱಬೇಡೆಂದು ಇರಿಸಿ ಬಂದೆ (ಸರ್ವಪ. ೦೦೫-೫೭೬). ೨. (ಆಲಂ) ಇಲ್ಲವಾಗು; ಅದೃಶ್ಯವಾಗು: ಮೆಯ್ಯುಗ್ಗಷ್ಣ ಏಱಿತು ಬೇಟ ಬೇರೂಱಿತು ಲಜ್ಜೆ ತಟ್ಟಾಱಿತವಳಿಗೆರ್ದೆಯೊಳಗೆ (ಕುರಾಸಾಂ. ೨೨-೯). 'ತಾಱು$_{1}$' ಪರಾ. [ ತಟ್ಟು$_{0}$ + ಆಱು$_{1}$ ]

**ತಟ್ಟಿ$_{1}$, ಚಟ್ಟಿ$_{3}$, ಚಟ್ಟೆ$_{3}$** (ನಾ). ೧. ಬಿದಿರಿನ ತಡಿಕೆ ; ಬಿದಿರನ್ನು ಹೆಣೆದು ಮಾಡಿದ ಗೋಡೆ : ರಾಜಿಪವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ ಬಳ್ಳಿವಲ್ಲಿಗೆಯ ಮಂಡಪಮೆಂಬಿನಿತುಂ ಬಸಂತದೊಳ್ (ಶಾಂತಿಪು. ೭-೦೩೦): ವರವೇಲಿ ತಟ್ಟಿ ತಳೆ ಗೋಪುರವಾಳ್ವೆಱ ಪಡಿ ತವಂಗ ವಂಕದ ಕಳನೋವರಿ ಸೀಯಬಾರವಂತಃಪುರಮುಯ್ಯಾಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೬-೨೩) ; ನಮ್ಮನೆಯ ಮುಂಭಾಗಕ್ಕೆ ಕಾಂಪೋಂಡು ಹಾಕಿಸಬೇಕೆಂತ ತಟ್ಟಿಗಳನ್ನು ಕೊಂಡಿಟ್ಟಿದ್ದೆ (ಮುಳ್ಳಿಹಾ. ೦೭) : ಗಳಗಳು ನಿಂತವು; ತಟ್ಟಿಯೂ ತಯಾರಾಯಿತು; ಕೆಮ್ಮಣ್ಣು ಸೆಗಣಿಗಳನ್ನು ಕಲೆಯಿಸಿ ದಂಟಿನ ತಟ್ಟಿಗಳಿಗೆ . . . ತುಂಬ ಮೆತ್ತಿಸಿ ಭದ್ರಮಾಡಿಸಿದರು (ಗಂಗಾಸಾ. ೦೫೨). ೨. ಬಿದಿರಿನ ಚೌಕಟ್ಟು ; ಚಪ್ಪರ : ಮಿಂಚಿನ ತಟ್ಟಿಯುಂ ಬಳಸಿದಂತಿರೆ ಕಣ್ಗೆಳೆ ಮಿಂಚು ಮೇಗೆ ಪೂಗೊಂಚಲ ಪಂದರಂ ಪಡೆಯೆ (ಅರ್ಧನೇ. ೨-೯೫); ನಡು ಜಗುಪ್ಸಾರಸದ ನಟ್ಟನಡುವೆಂದಿರದೆ ಎಡಬಲದ ಪ[ಪಾಠಾಂ.ಬ] ರಿಗಳಲ್ಲಿನ ತಟ್ಟಿಯುಂ[ಪಾಠಾಂ. ಕಟ್ಟಿಡೆ]ದಿರದೆ (ಬಿಂದೂರಿ. ಹ. ೫೦೩-೧೦). ೩. ಚಾಪೆ ; ಬಿದಿರಿನ ಚಾಪೆ : ಗುಣನಾತೀತ ವಿಮುಕ್ತ ಮಾರ್ಗಣಗಣಾಂ ಗೀರ್ವಾಣಮಾರ್ಗಾಂತದೊಳ್ ಪೆಱದರ್ ತಟ್ಟಿಯನೆಂಬಿನಂ ದಳಿನೆ ಪರ್ವಿರ್ವನ್ನಮೆಚ್ಚೆಚ್ಚು . . . ಕಾದುತ್ತಿರಲ್ಕೆ (ನೇಮಿಪು. ೦೨-೩೩೮) ; ಮುಱಿದ ಗುಡಿಲೊಳಗೆ ಹಱಿದ ತಟ್ಟಿಯ ಮೇಲೆ ಹಱಿದ ಬೊಂತೆಯ ಹಾಸಿಕೊಂಡು ಕೆಡೆದಿಹಂಗೆ (ಸರ್ವಪ. ೦೭೩-೭೭೬); ಹಿರಿಯ ಗಗನವ ಒಡಿದು ತೆರೆ ತಟ್ಟಿಯಂತೆ ಸುತ್ತಿರಿಸಲಳವಡೆ ಮುಕ್ತಿ ನರರ್ಗಪ್ಪುದು (ಸಾನಂಕ. ೨-೨೦೫) ; ಎನಗೊಂದು ಪಱಿದ ತಟ್ಟಿಯುಂ ಮಠದ ಗೊಂಟನೊಳ್ ಪಾಸಿ ಕೊಟ್ಟೊಡೆ (ದಶಕು. ೦೦-೩೩೪) : ಒದೆದು ಸತ್ವದೊಳೊಂಕಿ ತಟ್ಟಿಯ ಮುದುಡುವಂದದಿ ಸುತ್ತಿ ಧರಣಿಯ (ಪ್ರಭಾ್ತ. ೩-೦೦). ೪. ತಡಿಕೆಯ ಬಾಗಿಲು,-ಕದ : ಸದನ ತಾನಿರಲಡವಿ ಯಾತಕೆ ಕದವಿರಲು ತಟ್ಟಿಗಳ ದ್ಯಾತಕೆ (ಕನಕಾಂ. ೨೩) ; ತಟ್ಟಿ ಮುಚ್ಚು (ರೂಢಿ). ೫. ಬಿದಿರಿನಿಂದ ಮಾಡಿದ ಬುಟ್ಟಿ ; ಮಂಕರಿ. ೬. ಜೇನುಗೂಡು : ನಾಲ್ಕೆಂಟು ತಟ್ಟಿಗಳು, ಆನೆಯ ಕಿವಿಗಳಂತೆ ಬಂಡೆಯ ಸೆರಗಿಗೆ ಅಲಂಕಾರವಾಗಿ ತೂಗಿ ಕೊಂಡಿದ್ದುವು (ಕುಡಿಕೂ. ೨೯). ೭. ಗುರಾಣಿ; ಢಾಲು : ಕರಮೆಸೆದತ್ತು ಕಲಾಭೃದ್ಬಿಂಬಂ ಬಿರಿಮುಗುಳ್ಗಣೆಯನ ಬಿಂಗದ ಬಿಜ್ಜಣದರಲಂಬನ ಮೂಲದ ತಟ್ಟಿಯ ಕಾಮನ ಕೈಗನ್ನಡಿಯ . . . ವಿಲಾಸಮನನುಕರಿಸಿ (ಜಯುಕಾ. ೦೪-೭). **ಚಟ್ಟಿ$_{3}$** : ೮. ಯಾತ್ರಿಕರಿಗಾಗಿ ನಿರ್ಮಿಸಿದ ಹುಲ್ಲಿನ ಚಪ್ಪರ : ಒಂದು ರಾತ್ರಿ ಆತ ಒಂಟಿಯಾಗಿ ಚಟ್ಟಿಯೊಂದರಲ್ಲಿ ಮಲಗಿದ್ದ (ಸನ್ಯಾಸಿ. ೪೪). **ಚಟ್ಟೆ$_{3}$** : ೫. ಚಟ್ಟೆಯಾದರೂ ಬುಟ್ಟಿಯಷ್ಟು ದೊಡ್ಡದಿದೆ ಯಲ್ಲ (ರೂಢಿ).

**ತಟ್ಟಿಯ ಬಿಲ್ಲು** = ಒಂದು ವಿಧವಾದ ಬಿಲ್ಲು : ಅಲ್ಲಿಯಾತನ ಕೂಡೆ ತಟ್ಟಿಯ ಬಿಲ್ಲುಗಳನಾ ಪೊಂಗುವಿಲುಗಳ ಬಲ್ಲಿತೆನಿಪಾ ನಾಳಿವಿಲ್ಲುಗಳ . . . ಒಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೧೩). **ತಟ್ಟಿ ಹಾರಿಸು**= ಲಘುವಾಗಿ ಎಣಿಸು : ಸಲಹೆ ಕೊಟ್ಟ ಹಿತೈಷಿಗಳ ಮಾತನ್ನು ಅವನು ಮುಗುಳುನಕ್ಕು ತಟ್ಟಿ ಹಾರಿಸಿದ್ದನು (ಮಲಿಮ. ೦೧೦).

[ ದೇ.೩ ತಮಿ. ತಟ್ಟಿ, ತಟ್ಟಿಯ; ಮಲ. ತುಳು. ತಟ್ಟಿ; ಕುಇ. ತಟ. /ಪ್ರಾ. ತಟ್ಟೀ. / ಹಿಂ. ಮರಾ. ಚಟ್ಟೀ ]

**ತಟ್ಟಿ$_{2}$** (ನಾ). ಒಂದು ಬಗೆಯ ಸಸ್ಯ (?) : " ಕಾಷ್ಠವಲ್ಲಿಕಾ – ತಟ್ಟಿ " (ಒಷಧಿ. ೩೨). [ ? ]

**ತಟ್ಟಿಕೆ** (ನಾ). ತಾಗುವಿಕೆ ; ಸೋಂಕುವಿಕೆ ; ಸ್ಪರ್ಶ : ಪುಟ್ಟುಗೆ ಸದ್ವಂಶದ ಸವಿದಟ್ಟಿಕೆ ಸಲೆ ಸರಸಮೆನಿಸೆ . . . ಊದುವಿರಿನ್ನುಂ (ಜಳಪಿ. ೬-೦೨೮). [ ತಟ್ಟು$_{1}$ + – ಇಕೆ ]

**ತಟ್ಟಿಗಟ್ಟು** (ಕ್ರಿ). ತಡಿಕೆ ಕಟ್ಟು (?) : ನೆರೆದು ಪೊತ್ತ ನೃಪಾಳಜಾಳ ಕಿರೀಟಕೋಟಿ ಮಣಿಪ್ರಭಾ ಪರಿಕರಂ ಧೃತಮೌಕ್ತಿಕಾತಪವಾರಣಕ್ಕೆ ಕದಂಬ ರಷಲ್ಲರಿಗಳಟ್ಟಿನಮುಂದುಸಾರದದಂತೆ ತಾಳ್ದಿದುದಿತ್ತಲುಂ ಸುರಶರಾಸನ ದಿಂದಮೆಣ್ದೆಸೆ ತಟ್ಟಿಗಟ್ಟಿದ ಭಂಗಿಯಂ (ಅನಂಪು. ೯-೭೨) : ಶರದೊಳಿ ತಟ್ಟಿಗಟ್ಟಿದುದು ದಿಕ್ತಟಮಂಬಿನ ಹಂದರಿಕ್ಕಿದಂಬರತಳಮೆಂಬಿನಂ (ಅನಂಪು. ೧೪-೬). [ ತಟ್ಟಿ$_{1}$ + ಕಟ್ಟು$_{1}$ ]

**ತಟ್ಟಿಗೆ** (ನಾ). ತಡಿಕೆ (?) : ಚೌರಾಸಿ ಲಕ್ಷ ಜೀವಿಗಳೆಲ್ಲ ತಿರುಗುವ ರಾಟಲಗಂಟೆಂಬ ಕರರಾಟಳವ ಮಾಡಿ ಭಕ್ತೆಂಬ ಕದರಿಗೆ ಸರವುಕ್ತಿ ಬಿಲ್ಲ ಪೂಡಿದನು ಅಷ್ಟತನುಗಳ ಸೆಡೆಯ ತಟ್ಟಿಗೆಯ ಮಾಡಿ ಅಷ್ಟಂತರಂಗಪ್ಪ ಮದವಾ ಜೇಷ್ಠ ಕುಂಟಿಯ ಮೊಳಗೆಗಳ ಮಾಡಿ ದಾರವ ಘಟ್ಟೊಸ್ತ ಕಟ್ಟಿಗೆಸಿದದ (ದೇವಾಂಪು. ೫-೭೮). [ ? ]

**ತಟ್ಟಿಗೋಡೆ** (ನಾ). ಬಿದಿರು ಮೊದಲಾದುವನ್ನು ಹೆಣೆದು ಮಾಡಿದ ಗೋಡೆ; ತಡಿಕೆಗೋಡೆ: ಅಡಕೆದಬ್ಬೆಯ ತಟ್ಟಿಗೋಡೆಗಳನ್ನು ಹಾಕಿದ್ದರು (ಮಲಿಮ. ೦೦) ; ತಿಮ್ಮಪ್ಪಹೆಗ್ಗಡೆ ತಟ್ಟಿಗೋಡೆಯ ಒಳಗೆ ಹೋಗಿ (ಮಲಿಮ. ೭೦೪). [ ತಟ್ಟಿ$_{1}$ + ಗೋಡೆ ]

**ತಟ್ಟಿಡು** (ಕ್ರಿ). "ಪರಿತ್ಯಾಗಮಾಡು" (ಸಾವಂದ. ಕೋಶ) : ಓಡಾಂತು ಕಯ್ಯಲ್ಲಿ ಮೋಚಾಂತು ತಲೆಯಲ್ಲಿ ಮಾನಮಂ ತಟ್ಟಿಟ್ಟು ಕೀರ್ದ ತಟ್ಟುಟ್ಟಂಗೆ (ಸೌಸಂದ. ೭-೪೮).

[ ತಟ್ಟು$_{0}$ + ಇಡು$_{1}$ ]

**ತಟ್ಟಿಬಲೆ** 'ತಟ್ಟಿವಲೆ' ನೋ.

**ತಟ್ಟಿಮೆಡಱು** (ಕ್ರಿ). ತಟ್ಟಿಯನ್ನು ಹೆಣೆ; ತಡಿಕೆ ಕಟ್ಟು: "ತಟ್ಟಿಮೆಡಱಿದಂ –ತಟ್ಟಿವೆಣೆದಂ " (ಶಮದ. ಶಬ್ದ. ೨) ; ಮಿಂಚಂ ತ[ಪಾಠಾ. ಕ]ಟ್ಟಿ ಮೆಡಱ ದಂತೆ ಸುತ್ತಿಱಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯ ಪಣ್ಯಾಂಗನಾ ಜನದ ನಡುವೆ ಮಣಿಮಯ ಪೀಠಂಗೆಳನೇಱ (ಶಂಖಭಾ. ೩-೫೫ ವ) : ನೂಱುಯೋಜನದಳವಿಯ ಖಾಂಡವವನಮೆಲ್ಲಮಂ ತಟ್ಟಿಮೆಡಱ ಮಶಕಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರ ದೊಳ್ ಮುಚ್ಚಿ ಮುಸುಕಿದಾಗಳ್ (ಶಂಖಭಾ. ೫-೯೬ ವ).

[ ತಟ್ಟಿ$_{1}$ + ಮೆಡಱು ]

**ತಟ್ಟಿಯ, ತಟ್ಟೆಯ** (ನಾ). ತಡ ; ಸಾವಕಾಶ ; ನಿಧಾನ : ತಡೆಯದೀ ಕಾರ್ಯವನು ನೀ ಕೈಯೊಡನೆ ಮಾಡುವುದುಚಿತವಿದನೀನೊಡಬಡದೆ ತಟ್ಟಿಯವ ಮಾಡಲುಯೆಮ್ಮ ವಂಶಾಳಿ ಕೆಡುವುದು (ಜೀವಂಧ. ೪-೭೯) ; ಗಾಳಿಯಳ್ಳಿಯನಿಱಿಯಲಗ್ನಿಜ್ವಾಲೆಯಲಿ ತಟ್ಟಿಯವೆ (ಕುಮಾ. ಸ. ೧೪-೭೦). **ತಟ್ಟೆಯ** : ಹೋಗು ಫಲುಗುಣ ಕಂಸಮಥನನ ಬೇಗ ಬಿಜ ಯಂಗೈಸಿ ತಾ . . . ತಟ್ಟೆಯವಾಗದೀಕ್ಷಣವೆನಲು (ಕುಮಾ. ಸ. ೬-೧೮) ; ಗಮನ ತಟ್ಟೆಯವಾಯ್ತು ವೇಗಭ್ರಮಣ ಜಡವಾಯ್ತು (ಕುಮಾ. ದ್ರೋ. ೦೦-೨೫). [ ?. / ತಮಿ. ತಟ್ಟಿಯ = ಗುರಾಣಿ, ಢಾಲು ]

**ತಟ್ಟೆರಾಯ** (ನಾ). (ಕರಾ) ಬಿದಿರು, ಹುಲ್ಲು ಮೊದಲಾದುವುಗಳಿಂದ ಮಾಡಿದ ಬೆದರುಬೊಂಬೆ; ಬೆಚ್ಚು : ಅವುಗಳನ್ನು ಹೆದರಿಸಲು ಬೈಹುಲ್ಲಿನ ತಟ್ಟೇರಾಯನನ್ನು ತಯಾರಿಸಿದರು. ಮನುಷ್ಯಾಕೃತಿಯ ಈ ತಟ್ಟೇರಾಯನಿಗೆ ಹರಕು ಅಂಗಿ ತೊಡಿಸಿ . . . ಮಡಕೆಯ ಕುಲಾವಿಯನ್ನಿಟ್ಟರು ತಲೆಗೆ (ಚಾಳಿ. ೧೦೭). [ ತಟ್ಟೆ$_1$ + ರಾಯ ]

**ತಟ್ಟೆವಲೆ, ತಟ್ಟೆಬಲೆ** (ನಾ). ಒಂದು ಬಗೆಯ ಬಲೆ : ತಡಿಕೆವಲೆ ತಟ್ಟೆವಲೆ ಹಾಸುವಲೆ ಬೀಸುವಲೆ ಕೊಡತಿವಲೆ ಕೋಲುವಲೆ (ಹಜಕಾ. ೫-೮) : ಕಟ್ಟಿದನು ಕಣೆಗಳಲಿ ಸುತ್ತಲು ತಟ್ಟೆವಲೆಗಳ ಸೋಹಿನಲಿ (ಕುಮ್ಯಾದ್ರೋ. ೫-೭೪) : ಹಾಸುವಲೆ ಬೀಸುವಲೆಯು ತಟ್ಟೆವಲೆ ತಿಣ್ಣವಲೆ . . . ಪೇರ್ವಲೆಯ ಪೊಳಿಗಳು ವಿಂಧ್ಯಕನ ಕೂಡೆ (ಶಾಳ್ಮಭಾ. ೫-೦೮) : ತಡಿಕೆವಲೆ ತಟ್ಟೆವಲೆ ಸಾಲುವಲೆ ಕೋಲುವಲೆ . . . ಮಲೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೬). **ತಟ್ಟೆಬಲೆ** : ಪಾರವಲೆ ಗುಂಡಿವಲೆ ಮತ್ಸ್ಯಾನೆಯ ಬಲೆ ತಟ್ಟೆಬಲೆಗಳೆಂಬಿವನು (ಪುಕ್ಕಾಸ್ಕ. ೯-೬೭). [ ತಟ್ಟೆ$_1$ + ಬಲೆ$_1$ ]

**ತಟ್ಟೆವೆಣೆ** (ಕ್ರಿ).=ತಟ್ಟೆಮೆಡಱು : "ತಟ್ಟೆಮೆಡಱಿದಂ – ತಟ್ಟೆವೆಣೆದಂ" (ಶಮುದ. ಶರಿ. ೨). [ ತಟ್ಟೆ$_1$ + ಪೆಣೆ$_1$ ]

**ತಟ್ಟೆಸು, ತಟಿಸು$_1$** (ಕ್ರಿ). ೧. ತಗುಲಿಸಂ ; ತಾಕಿಸು ; ಸೋಕಿಸು ; ಅನುಭವಕ್ಕೆ ತರು : ಕಟ್ಟಿದಾಗಳೆ ಕರ್ಮಗಳು ಫಲಗೊಡವವು ಕಟ್ಟಿರ್ದು ಕಾಲದ ಮೇಲೆ ಬಿಟ್ಟು ಪೋಪಾಗ ಜೀವಗೆ ಸುಖದುಃಖವ ತಟ್ಟಿಸಿ ತಾವು ಜಾಱುವುವು (ಭರಿಶ. ೬೮-೫೫). **ತಟಿಸು$_1$** : ೧. ತೋಟದಲಿಹ ಹೂವಿಗೆಲ್ಲ ತಟಿಸೆ ನಾವು ನಿನ್ನ ಗಲ್ಲ . . . ನಕ್ಕೆ ನೀನು (ಜಂತಸ. ೨೪-೧೦). ೨. ಅಡ್ಡಿಪಡಿಸು; ತಡೆದು ನಿಲ್ಲಿಸು ; ತಡೆಹಿಡಿ : ಅಲ್ಲಿಯ ಸರ್ಪ ಫೂತ್ಕಾರಗಳಿಂದೆದ್ದ ವಿಷಧೂಮವು ಜಗತ್ತಿನ ಮೂಗನ್ನೇ ಮುಸುಕುತ್ತಿದೆ. ಯಾವ ಶಿವನು ಇದನ್ನು ತಟಿಸುವನೊ ಯಾರು ಬಲ್ಲರು (ಸಾಹಿಸಂ. ೨೦೦).

**ತಟ್ಟಿಸಿ ಮಾತಾಡು**=೧. ತಡವರಿಸಿ ಮಾತನ್ನಾಡು. ೨. (ಮಾತನಾಡುವಾಗ; ಓದುವಾಗ) ತಡವರಿಸು ; ಉಗ್ಗು ; ಗಂಕ್ಕು (ಉಕ) : "ಉಗ್ಗು–ತಟ್ಟಿಸಿ ಮಾತಾಡು" (ಗಂಗಾಕು. ೩೮).

[ ತಟ್ಟು$_1$ + – ಇಸು$_3$ ]

**ತಟ್ಟೆಹುಚ್ಚ** (ನಾ). ವಿವೇಚನೆ ಇಲ್ಲದವನು ; ಮೂರ್ಖ : ಅವನೇನು ತಟ್ಟೆಹುಚ್ಚನಲ್ಲ (ಅಜಾಘೂ. ೫೯).

[ ತಟ್ಟೆ$_0$ (P ← ತಮಿ. ತಟ್ಟೈ) + ಹುಚ್ಚ (< ಪಿಚ್ಚ$_1$) ]

**ತಟ್ಟೆಱಿ** (ಕ್ರಿ). ಅಪ್ಪಳಿಸಿ ಹೊಡೆ : ಅಂತೆರಡುಂ ಬಲದ ಕರಿಘಟೆಗಳೊಂದೊಂದಱೊಳ್ ತಾಗಿ ತಟ್ಟೆಱಿಯೆ ಬಿಸುನೆತ್ತ [ರ] ಬಿಂಗಳುರ್ವಿ ಪಾಯೆ (ಪಂಪಭಾ. ೧೦-೯೬ಪ). [ ತಟ್ಟು$_1$ + ಇಱಿ$_1$ ]

**ತಟ್ಟು$_1$** (ಕ್ರಿ). ೧. ಬಡಿ ; ಕುಟ್ಟು ; ಹೊಡೆ ; ಬಾರಿಸು ; ಅಪ್ಪಳಿಸು : "ತಟ್ಟು–ತಾಡನೇ" (ಶಮುಧಾ); ಮಯ್ಯಂ ವನಜವದನೆ ಕೇಳ್ ಗ್ರೀಷ್ಮದೊಳ್ ನಿಚ್ಚವುತ್ತಂ ಸತಿ ತಟ್ಟುತಿರ್ಪ [ ರ್ಪ ] [ಪಾಠಾಂ. ತಟ್ಟಂತಿರ್ಪ] ಕಾಯ್ಕುಂದುರಿವ ಬಿಸಿಲೊಳ್ (ಕಾವ್ಯಾವ. ೮೦೮); ಪೊಯ್ವ ರಣತೂರ್ಯರವಂ ತಱಿಸಂದುತಾಗಿ ತಟ್ಟುತ್ತಿಱಿದವು (ಮಹಾನೇ. ೧೨-೨೨೦) : ಮೆಟ್ಟುವ ತಟ್ಟುವ ಮೇಲೆವಾಯ್ವ . . . ದುಷ್ಟಮುಷ್ಟ ಹಯಮಂ (ಧರ್ಮಾಪ. ೮-೦೩) : ಕೈವಾರಿಸಿ ತೊಡೆದಟ್ಟಲೊಡನೆ (ಸೋಹಶ. ೧೮-೦೦೦). ೨. ಮುಟ್ಟು ; ತಾಗು ; ಸೋಕು : ತನ್ಮೃಗಶಾಬಾಕ್ಷಿಯ ಕಂಪು ತಟ್ಟಿ ಮಧುಪಂದೊಲ್ ಸೋಲ್ತು (ಪಂಪಭಾ. ೦-೭೦) : ಪೊಡರ್ದುದ್ಯದ್ದ್ಯೋತಿ ತಟ್ಟುತ್ತಡಿದಳಿರ್ಗಳ ವಿನ್ಯಾಡಿದಂತಪ್ಪುವೀಗಳ್ (ಕಾವ್ಯಾವ. ೦೩೭) : ಕನಕದಾಸನ ಕಾವ್ಯದೊಳ್ ದೋಷ ತಟ್ಟದು (ಮೋಹಶ. ೧-೨೪) ; ಕಲಿದೋಷಂ ತಟ್ಟದವೋಲ್ ಕುಲಜರನುದ್ಧರಿಸೆ (ಅಪ್ರತಿ. ೫೨-೨) : ಲೋಕದ ಚೆಲುವಿನ ವಸ್ತುಗಳು ಕವಿಯ ಮನವನ್ನು ಮುಟ್ಟುವ ಮತ್ತು ತಟ್ಟುವ ಪರಿಗಳನ್ನು ಹೀಗೆ ಗುರುತಿಸುತ್ತಾನೆ (ಸೌಂದಸ. ೨೪). 'ಮನದಟ್ಟು' ಪರಾ. ೩. ಬೆನ್ನು ಚಪ್ಪರಿಸು ; ಉತ್ಸಾಹಗೊಳಿಸು ; ಉಬ್ಬಿಸು : ಈಗಳೆ ನಿಮ್ಮಾಳ್ದನಂ ತಟ್ಟಿ ರಣಕಟ್ಟಿಂ (ರಾಮಾಶ್ವ. ೧೦೦-೧೪). ೪. ರೊಟ್ಟಿ, ವಡೆ, ಒಬ್ಬಟ್ಟು ಮುಂತಾದ ಭಕ್ಷ್ಯಗಳನ್ನು ಕೈಯಿಂದ ಬಡಿದು ಮಾಡು : ಮೃದುಪಾಕ ಮಾಡಿ . . . ಹೆಱದುಪ್ಪದಿಂದವೆ ಬೆರಸಿ ವಡೆಯಂತೆ ತಟ್ಟಿಕೊಂಡು (ಸೂಪಶಾ. ೧-೬೮) : ನಾಳೇನೇ ಒಬ್ಬಟ್ಟು ತಟ್ಟಿಟ್ಟುಕೊಂಡರೆ ನಾಡಿದ್ದು ಗೌರೀ ಬಾಗಿನ ಕೊಡೋದಕ್ಕೆ ಅನುಕೂಲವಾಗುತ್ತೆ (ಮಾಂಗಲ್ಯ. ೬೭) : ರೊಟ್ಟಿ ತಟ್ಟು (ರೂಢಿ). ೫. ಲೇಪಿಸು ; ಬಳಿ ; ಸವರು : 'ತಟ್ಟುಕ' ಪರಾ. ೬. ಅಟ್ಟು ; ಓಡಿಸು : (+). ೭. ಮೆಲ್ಲನೆ ಬಡಿ : ಮಗುವನ್ನು ತಟ್ಟಿ ಮಲಗಿಸಿದಳು (ರೂಢಿ). ೮. ಅನ್ವಯಿಸು ; ಹೊಂದು : ಶಾಕುಂತಲ ನಾಟಕಕ್ಕಾದರೆ ಈ ಮಾತು ತಟ್ಟುವುದಿಲ್ಲ (ಕಾವ್ಯಸ. ೩೫). ೯. ಹಿಡಿಸು : ಇಷ್ಟವಾಗು : ಜಿನವಚನಮೆಂತುಟಂತುಟುಮನನುನಯದಿಂ ಪೇಟದಂತೆ ತನ್ನಿಚ್ಛೆಗೆ ಕೆಮ್ಮನೆ ತ[ಪಾಠಾಂ. ಕ]ಟ್ಟಿ ಗಟಪಿ ಪೆಱರಂ ತನಗೆ ವಶಂ ಮಾಳ್ಪನೆಯ್ದುಗುಂ ದುರ್ಗತಿಯಂ (ಧರ್ಮಾಮೃ. ೫-೧೦೦). ೧೦. ಉಂಟುಮಾಡಂ; ತಗುಲಿಸು : ಕೊಟ್ಟು ಕುಡುಕುದಂಬುಲಮಂ ಸವಿಯಂ ತಟ್ಟುವ ತನಿಗಲೆಯುಪಚರದಿಂ ಮನಮುಟ್ಟಿ ಕರಂ ಕೂಡಿದರ್ (ಜಯುಕಾ. ೨-೫೩). ೧೧. ಬಯಸು ; ಇಚ್ಛಿಸು (?) : ಖ್ಯಾತಿ ಲಾಭ ಪೂಜೆಯಂ ತಟ್ಟದೆ ಇಹಪರಂಗಳಂ ಸಾರದೆ ಭವಬಂಧಕ್ಕೆ ಬಾರದೆ ಗೆಲ್ಲ ಸೋಲಕ್ಕೆ ಹಾರದೆ (ಅದವ. ೩೦-೮೭) . ೧೨. (?) : ತನ್ನನೆ ತಾನೊಲವಿಂದೆ ಜಾನಿಸುತ್ತಗಲದೆ ನಿಂದನೊರ್ವ ಸವಣಂ ಬಗೆಗೊಳ್ವೆಱ ತಟ್ಟತೆಂಬಿನಂ (ಕಾವ್ಯಕಾ. ೨೨೭).

**ತಟ್ಟಿ ನೋಡು** = ಪರೀಕ್ಷಿಸು : ಶಿವಮಂತ್ರ ಶಿವಲಿಂಗ ಭಸಿತ ರುದ್ರಾಕ್ಷಿಯೆಂಬಿವು ನೆಲಸಿ ನಿಂದೆಡೆಯೊಳವು ನಿಲ್ಲವೆಂಬುದಿದು ಶಿವವಾಕ್ಯವಿನ್ನೆನ್ನ ಮನವನಿನ್ನೇಂ ತಟ್ಟಿ[ಪಾಠಾಂ. ಥಟ್ಟಿಸಿ]ನೋಡುವೆ ಯತೀಶಯೆನಲು (ಸೋಮುಚ. ೩-೪೪).

[ ದೇ.೫ ತಮಿ. ಮಲ. ತಟ್ಟು ; ಕೊಡ. ತಟ್; ತುಳು. ತೆಲು. ತಟ್ಟು ]

**ತಟ್ಟು$_2$** (ನಾ). ೧. ಅಪ್ಪಳಿಕೆ ; ಅಂಗೈ ಹೊಡೆತ. ೨. ಒಂದು ಬಗೆಯ ರೋಗ ; ಗೋಣಿತಟ್ಟು ; ದಡಾರ. ೩. ಸ್ಪರ್ಶ ; ಸೋಕುವುದು; 'ತಾಗುದಟ್ಟು', 'ಮುಟ್ಟುದಟ್ಟು' ಪರಾ. ೪. ಇಚ್ಛೆ ; ಬಯಕೆ : ಸ್ತ್ರೀ ಸಂನ್ಯಾಸಿಯಾದಡೇನಯ್ಯಾ ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ತಟ್ಟಿ [ಪಾಠಾಂ. ಪ್ಪಿ]ಲ್ಲದಿರಬೇಕು (ಮಹಾದೇ.ಬ. ೦೦೫-೫೩೭). ೫. ಲೇಪಿಸುವುದು; ಲೇಪನ : ತಟ್ಟು ಚಟ್ಟು ಶಬ್ದೌ ಶ್ರೀಖಣ್ಡಕುಂಕುಮಾದಿ ಗಂಧದ್ರವ್ಯ ಕರ್ದಮಕೃತ ಸ್ಥಾಸಕವಚನೌ (ಅಭ್ಯಾಸು. ೪೪೦ ವ್ಯಾಖ್ಯಾ). ೬. [ನಾಟ್ಯ] ಭರತ ನಾಟ್ಯದ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ (೧) ತಟ್ಟು. (೨) ಮೆಟ್ಟು. (೩) ನಾಟು . . . (೧೦) ನಡೈ (ಅಭಾನ್ಯ. ೩೨) . [ < ತಟ್ಟು$_1$ ]

**ತಟ್ಟು$_3$** 'ತಟ್ಟೆ' ನೋ.

**ತಟ್ಟು$_4$, ಥಟ್ಟು$_1$** (ನಾ). ಪಕ್ಕ ; ಕಡೆ : ಆಗ್ನೇಯ ಮೊದಲಾಗಿ ನೈಋತ್ಯ ಪರಿಯಂತರ ತೆಂಕಣ ತಟ್ಟು . . . ಪಡುವಣ ತಟ್ಟು (ಪ್ರುಆರಿ. ೮೪೪೭. ೦೮-೦೩; 1488); ಗೃಹಸ್ಥಾಶ್ರಮಮೇ ಒಂದು ತಟ್ಟುಂ ವಿಶ್ವಾದ ಮೂಱುಮಾಶ್ರಮಂಗಳುಮೊಂದು ತಟ್ಟು (ಭಾರಚಾಂ. ೧೨-೫೮); ಬೀಳ್ವರು ಸಾವಿರದ ಸಂಖ್ಯಾತ ಬಲವು ಅತಿರಾಮದಲಿ ಬಳಿಕೆರಡು ತಟ್ಟಿನ ಬಿಲ್ಲನತಿಬಲರು (ಕೋಗಮು. ೨೦-೬); ತಂಗಾಳಿ ಮೊದಲಾದ ವಿರಹೋದ್ದೀಪನಕಾರಿಗಳೆಲ್ಲವು ಒಂದು ತಟ್ಟು ಈ ಪಾಪಿಯಾದ ಚಂದ್ರನೆ ಒಂದು ತಟ್ಟು (ವಚಕಾ. ೩೩). **ಥಟ್ಟು$_1$**: ಕಟ್ಟಿವಕಟಕಟೆನುತ ನಾಲ್ವರೊಂದಾಗಿ ಬಾಯ್ಬಿಟ್ಟರೈ ಥಟಥಟ ಧ್ವನಿಗಂಜಿ ಶಿಖಿ ಯಾವ ಥಟ್ಟನೋಳ್ಪೆಂತೆನುತ (ಕುರಂಗ. ೮೪-೪೦).

**ತಟ್ಟಾಗು** = ಪಕ್ಕಕ್ಕೆ ಸರಿ ; ಕೆಲಸಾರು ; ಹಿಂದೆಗೆ : "ಕೆಲಸಾರು = ಬದಿಗಾಗು, ತಟ್ಟಾಗು, ಸರಿ" (ಗಂಗಾಮ. ೯೭) ; ತುರಗದ ತಟ್ಟು ತಟ್ಟಾದು ದಾತನ ಭಟರೊಳಸರಿದು (ಜಂಪ್ರಸಾಂ.೮-೮೭); ಆರ್ಭಟಿಸುತ್ತ ಬರ್ಪಾಯುಧಕೆ ತನ್ನಯ ಮೆಯ್ಯಗೊಡದೆ ತಟ್ಟಾಗಲು (ನವಮೋ. ೧೨-೮೩).
[ ದೇ.॥ ತಮಿ. ತೆಲು. ತಟ್ಟು ]

**ತಟ್ಟು$_5$** 'ಥಟ್ಟು$_2$' ನೋ.

**ತಟ್ಟು$_6$** (ನಾ). ಕುದುರೆಗಳಲ್ಲಿ ಒಂದು ಬಗೆ ; ಗಿಡ್ಡ ಕುದುರೆ : ಹೆಣ್ಣು ಕುದುರೆಗಳನ್ನು ಟಾಕಣಾಗಳನ್ನು ತಟ್ಟುಗಳನ್ನು (ಗ್ರಾಮೂಳ. ೧೦೪) ; ಅವರ ಕುದುರೆಗಳು ತಟ್ಟುಗಳಾಗಿದ್ದವು (ಕೋಳಮು. ೭೬).

**ತಟ್ಟಿನ ಬೆಂಬಳಿ** = ತಟ್ಟುಕುದುರೆಗಳ ಮೇಲೆ ಹಾಕುವ ತೆರಿಗೆ (?) : ಅನುಪ್ರ ಕೊಡವೀಸ ಹಂದರ ಹಣ ಹರವಿಗೂಳು ವೋಟುಕೊಳಗ ಕಪಿಲೆಯ ಪಾವಂಶಿಗೆ ತಟ್ಟಿನ ಬೆಂಬಳಿಯ ಆರು ಹನ್ನೆರಡರ ದಂಡ (ಪ್ರಅರಿ. ೧೯೩೪, ೨೭-೨೦ ; 1430). [ ←ಮರಾ. ತಟ್ಟೂ; ತಟೂ; ಹಿಂ. ತಟ್ಟೂ ]

**ತಟ್ಟು$_7$, ತಾಟು$_6$** (ನಾ). ೧. ಗೋಣಿಯ ಪಟ್ಟೆ : ಕುನ್ನಿ . . . ಕಾಲೊರಸುವ ತಟ್ಟಿನ ಮೇಲೆ ನಿಂತು ಬಾಲವನ್ನು ಅಲುಗಾಡಿಸಿತು (ಪ್ರೇಮುತ. ೧೮) ; ಹರಿದ 'ತಟ್ಟು'ಗಳ ಮೇಲೆ ಒರಗಿಕೊಂಡು ಉರುಳಾಡುತ್ತಿದ್ದ (ಜನಸಿ. ೮೫). ೨. ಜೈನ ಅಥವಾ ಬೌದ್ಧ ಸಂನ್ಯಾಸಿಗಳ ವಸ್ತ್ರ,- ಹೊದಿಕೆ : "ತಟ್ಟು ಶಾಡನೇ, ಕ್ಷಪಣಕಾಚ್ಛಾದನೇ ಚ (ಜೈನ ಸಂನ್ಯಾಸಿಯ ಹೊದಿಕೆ)" (ಶಮುಧಾ) : "ಸವಣರ ಉಳ್ಪುಡೆ" (ಚತುವಿ. ೬. I, ೬೪) ; ತಟ್ಟು ದೋಷಮೆಂಬೊಡೆ ತಟ್ಟೆಂಬುದು ಪಸೆ (ಧರ್ಮಾಮೃ. ೯-೮೯) ; ತಟ್ಟು ಕುಂಚ ಕಮಂಡಲುಗಳೆಂಬ . . . ಬೌದ್ಧಕಾರಿಗಳು ಕೇಳಿರೊ (ಮನುಗುಂ. ೨೪೭-೪) ; ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ (ಅಸಂಪು. ೨-೨೮ ವ) ; ಋಷಿಯರ್ಗೆ ತಟ್ಟು ಕುಂಚ ಪುಸ್ತಕಂಗಳುಮಂ ಅಜ್ಜಿಯರ್ಗೆ ವಸ್ತ್ರಂಗಳುಮಂ ಕುಡುವುದು (ಪುಣ್ಯಾಸ್ರ. ೧-೧೦೭ ವ) ; ತಟ್ಟುಗಳ ಹೆಗರಣಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸಪು.೫೦-೫೩).

**ತಾಟು$_6$** : ೧. ಚಾಪೆತಾಟುಗಳನ್ನು ಕಂಕುಳಲ್ಲಿರಿಸಿ . . . ಕೊನೆಯ ಬಾರಿ ಕಲಾವಿದರನ್ನು ಕಂಡು (ಬಡ್ಡಿಮಾ. ೩೨).

**ತಟ್ಟು ಸೀಳು** = ಚರ್ಮವನ್ನು ಸುಲಿ : ಕಟ್ಟಧಿಕ ಜಿನನನಾ ಪರಿಕರವನೆಯ್ದೆ ಹುಡಿಗುಟ್ಟುವನೆಯಿವನನಿನ್ನಾವುಪಾಯದಿ ಪಿಡಿದು ತಟ್ಟ[ಪಾಠಾಂ. ಕಟ್ಟ, ದಟ ]ಸೀಳುವೆವೆಂದು ನೆರೆದ ಶ್ರವಣನಿಕಾಯ ಕೆರಳಿ ಕಿಡಿಕಿಡಿಯೋದುದು (ಸೋಮುಚ. ೪-೮೭). [ ?. / ಮರಾ. ತಾಟ್ ]

**ತಟ್ಟುಂಗೆಡೆ** (ಕ್ರಿ). ಶಕ್ತಿಗುಂದಿ ಬೀಳು; ದುರ್ಬಲವಾಗಿ ಕುಸಿ: ಒಡೆದೆಡದ ಬರಿಯ ಪಲಗೆಯನುಡಿಯಲ್ಗಳ್ ನೆಳ್ಕು ನೆಳಲೆನಲ್ ಕರಿ ತಟ್ಟುಂಗೆಡೆಯೆ ಭಗದತ್ತನಿಟ್ಟಂ ಕಡುಪಿಂ ಪಿಡಿದಿರ್ದ ನಿಶಿತ ವಜ್ರಾಂಕುಶದಿಂ (ಮಹಾನೇ. ೧೨-೧೪೩). [ತಟ್ಟು$_8$ (<ತಟ್ಟೆ) + ಕೆಡೆ$_1$ ]

**ತಟ್ಟುಂತಾಱುಂ, ಥಟ್ಟುತಾಱು** (ಅ). ಛಿನ್ನಭಿನ್ನವಾಗಿ ; ಚೆಲ್ಲಾಪಿಲ್ಲಿಯಾಗಿ ; ಅಸ್ತವ್ಯಸ್ತವಾಗಿ : ನಾಲ್ಕುಂ ತೆಱದ ಶಸ್ತ್ರಾಸ್ತ್ರಮುಖಂಗಳೊಳ್ ತಟ್ಟುಂತಾಱುಂ ಬೀಟ್ವ ಚತುರಂಗ ಪೃತನಾಪ್ರತಾನದ ತುಮುಲ ಸಮರಸಂಘಟ್ಟನಾಕಾಂಡ ಪ್ರಚಂಡ ಪ್ರಳಯಪ್ರಕ್ಷೋಭದೊಳಗೆ (ಅವಂಪು. ೦೪-೧ ವ). **ಥಟ್ಟುತಾಱು** : ಪರತ್ಥರ್ಟ್ಟುತಾಱಾದರ್ (ಶಬ್ದಾನು- ೬೫ ಪ್ರಯೋ). 'ತಾಳುತಟ್ಟುಂ', 'ತಾಱುಂತಟ್ಟುಂ' ಪಠಾ. [ ? ]

**ತಟ್ಟುಕ** (ನಾ). ೧. ತಟ್ಟುವವನು ; ಹೊಡೆಯುವವನು : ಕಟ್ಟುಕಂ, ತಟ್ಟುಕಂ (ಶಮುದ. ೨೦೩ ಪ್ರಯೋ). ೨. ಸುಗಂಧದ್ರವ್ಯವನ್ನು ಮೈಗೆ ಲೇಪಿಸುವವನು : "ತಟ್ಟುಕಂ, ಚಟ್ಟುಕಂ, ತಟ್ಟು ಚಟ್ಟು ಶಬ್ದೌ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯಕರ್ದಮಕೃತ ಸ್ಥಾಸಕವಚನೌ ತತ್ಕುರ್ವನ್" (ಶಬ್ದಾನು. ೪೪೦ ವ್ಯಾಖ್ಯಾ). [ ತಟ್ಟು$_1$ + -ಕ$_3$ ]

**ತಟ್ಟುಗಿ, ಥಟ್ಟುಗಿ** (ಕ್ರಿ). ಜೋರಾಗಿ ಭೇದಿಸುವಂತೆ ಇರಿ ; ಬಲವಾಗಿ ನಾಟು ; ನಟ್ಟು ಹೊರಬೀಳು : ಕಾದಿ ತಟ್ಟುಗಿದು (ರಣದೆ) ತೆಗೆದ ನಕ್ಕುಂ ನಷ್ಟಂ (ವಸುಕೋ. ೮೫-೫); ಮದನಂ ವಿಯೋಗಿಗಳನಿಸಲೆರ್ದಯಂ ತಟ್ಟುಗಿದು ಲೋಹಿತಂಬೊರೆದಿರದುಣ್ಮಿದ ಶರವೆನೆ (ಉದ್ಭಟ. ೫-೪೮) : ಅಳಿಯ ಮಾವನುಂ × × ಕಕಡೆ ಕಠಾರದೇಱು ತಟ್ಟುಗಿದು ಮುತ್ತ ಹೊತಂ (ಎಕ. VIII, ತೀರ್ಥಹ. ೨೫-೧೭; 1250); ನುಡಿದ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟುಗಿಯಲ್ (ಭಾವಚಿಂ. ೯-೩೩). **ಥಟ್ಟುಗಿ** : "ಥಟ್ಟುಗಿ[ಪಾಠಾಂ. ರಿ]ದುದೆನಲ್ಕೆ ಬೆಂಗೆ ಮೂಡಿದುದಕ್ಕುಂ" (ಭಾರವಿ. ೪೫) : ಅಂಗಜಾಸ್ತ್ರತತಿ ಮೆಲ್ಲೆರ್ದಯಂ ಸಂಧಿಸಿ ಥಟ್ಟುಗಿಯಲ್ ಧೃತಿಗುಂದದೆ (ಉದ್ಭಟ. ೬-೧೩೦); ಶಕಟವ್ಯೂಹವನು ಮಧ್ಯದೊಳು ಥಟ್ಟುಗಿದುರವಣಿಸಿ ಪವಮಾನಸುತ ನಡೆದ (ಕುಮಾವ್ಯಾ.ದ್ರೋ. ೧೨-೧೮); ಮದನ ವಿಯೋಗಿಗಳೆದೆಯ ಥಟ್ಟುಗಿದೆಚ್ಚ ಪದುಮಾಸ್ತ್ರದಲಗಿನಗ್ರದಲಿ (ಕಂನವಿ. ೯-೧೮). 'ತಟ್ಟುಚುರ್' ಪಠಾ. [ ತಟ್ಟು$_1$ + ಉಗಿ$_3$ ]

**ತಟ್ಟುಗುಟ್ಟು** (ಕ್ರಿ). ತಾಗಿ ಹೊಡೆ ; ಅಪ್ಪಳಿಸಿ ಹೊಡೆ : ಮುರಹರಂ . . . ಕೋಪದಿಂ ಧುರಧರೆಗೆಯ್ದೆವಂದು ರಿಪುಸೇನೆಯನೋವದೆ ತಟ್ಟುಗುಟ್ಟೆ ಕಿಂಕರ ರಥವಾಜಿ ವಾರಣದಳಂ ಪಡಲಿಟ್ಟುದು ಯುದ್ಧಮಧ್ಯದೊಳ್ (ಮಹಾನೇ. ೬-೯೯). [ ತಟ್ಟು$_1$ + ಕುಟ್ಟು$_1$ ]

**ತಟ್ಟುಗೆಡಹು** 'ಥಟ್ಟುಗೆಡಹು' ನೋ.

**ತಟ್ಟುಗೆಡೆ** 'ಥಟ್ಟುಗೆಡೆ' ನೋ.

**ತಟ್ಟುಚ್ಚು** 'ತಟ್ಟುಚುರ್' ನೋ.

**ತಟ್ಟುಡು** (ಕ್ರಿ). ಕಾವಿಯ ಬಟ್ಟೆಯನ್ನು ಧರಿಸು : ಮಾನಮಂ ತಟ್ಟುಟ್ಟು ಕೀರ್ದ ತಟ್ಟುಟ್ಟಂಗದಾಗುರ್ಂಟು ರಾಗಂ (ಸೌನಂದ. ೬-೪೮); ಪೊರಮಟ್ಟನುಂ ಪೊರಮಡದ ಕಾಮನಾರವಂ ತಟ್ಟುಟ್ಟನುಂ ಬಿಟ್ಟು ಕಳೆಯದೆ ಕಷಾಯನುಂ (ಸೌನಂದ. ೬-೪೯). [ ತಟ್ಟು$_7$ + ಉಡು$_1$ ]

**ತಟ್ಟುಪಳಗು** (ನಾ). ಒಂದು ಲೇಪನ ದ್ರವ್ಯ (?) : ಕರ್ಪೂರದ ಕಳಂಜು ೧ ಕಸ್ತೂರಿ ಕಳಂಜು॥ ಕುಂಕುಮ[ದ ಹೂ]ಕಳಂಜು ೧ ತಟ್ಟು ಪಳಗು ಕಳಂಜು॥ (ಸೌಇಇ. IX-II, ೫೫೧-೪ ; 1532). [ ತಟ್ಟು$_8$ + ಪಳಗು? ]

**ತಟ್ಟುಪೊಟ್ಟು** (ನಾ). ಒಂದು ಅನುಕರಣ ಶಬ್ದ : ತಮ್ಮ ಬಲಮುಂ ಮಾರ್ವಲಮಂ[ನ]ಱಿಯದೆಯುಂ ಚಾತುರ್ಬಲಂಗಳ್ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದೆಚ್ಚುಮಿಟ್ಟುವಿಱಿದುಗ್ಗಡಿಸೆ (ಪಂಪಭಾ. ೧೦-೭೦ವ) ; ಎರಡು ಬಲದ ದಟಿಂಗಳ್ಮೋಲಾಟಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಟ್ಟುಕಟ್ಟೆ (ಪಂಪಭಾ. ೧೦-೮೦ವ).

**ತಟ್ಟುಬಳೆ** (ನಾ). ಚಪ್ಪಟೆಯಾಗಿ ಅಗಲವಾಗಿರುವ ಸಾದಾ ಬಳೆ : (ಕ).
[ ತಟ್ಟು$_8$ (<ತಟ್ಟೆ) + ಬಳೆ$_3$ ]

**ತಟ್ಟುಬೀಳು** 'ತಟ್ಟುವೀೞ್' ನೋ.

**ತಟ್ಟುಮಟ್ಟಿ** (ನಾ). ಲೇಪನದ ಮಣ್ಣು ; ಮತೀಯ ಲಾಂಛನವನ್ನು ಧರಿಸುವುದಕ್ಕಾಗಿ ಬಳಸುವ ಮಣ್ಣು: ತಟ್ಟುಮಟ್ಟಿ[ಪಾಠಾಂ. ತಟಮಟ, ತಟ್ಟುಮುಟ್ಟಿ]ಯನಿಟ್ಟ ಭ್ರಷ್ಟಂಗೆ ಶಿಷ್ಯನಾದ ಕಷ್ಟನ ಮುಟ್ಟಲಾಗದಯ್ಯಾ (ಚನ್ನವ. ೪. ೦೭೭-೩೩೩). [ ತಟ್ಟು$_8$ + ಮಟ್ಟಿ ]

**ತಟ್ಟುಮಣೆ** (ನಾ). ನೆಲ, ಮೊದಲಾದುವುಗಳನ್ನು ತಟ್ಟಿ ಸಮಮಾಡಲು ಉಪಯೋಗಿಸುವ ಸಾಧನ,-ಮಣೆ; ಧಮ್ಮಸ್ಸು: ತಟ್ಟುಮಣೆ ಹೊಡೆದು ಸಮ ಮಾಡಬೇಕು (ರೂಢಿ). [ ತಟ್ಟು$_1$ + ಮಣೆ ]

**ತಟ್ಟುಮುಟ್ಟು** (ನಾ). ೧. ಮೈಲಿಗೆ ; ಸೂತಕ ; ಹೊಲೆ : ಮೃತಕ್ಕೆ ಮುನ್ನವೆ ತಟ್ಟುಮುಟ್ಟು ತಾಗು ಸೋಂಕು ಬಪ್ಪುದನಱಿಯಬೇಕು (ಏಕೋಶ್ರ. ೪೩೫-೪೦) ; ತಟ್ಟುಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ (ಚನ್ನವ. ೦೦೨-೫) : ಮಂಗಳವಾರದ ದಿನ ಮನೆಯ ಸಾರಿಸೆಯುಮ್ಮ

ತಟ್ಟುವುಟ್ಟು ಹೊಱಯಿಕೆ ಬಿಸಾಡೆಯುಮ್ಮ (ಶಿಪಗೀ. ೭೯೯ ಪ); ಅಶುದ್ಧ ಸಲೇಪಭಾವವಾ ಶ್ವಪಚನ ತಟ್ಟುವುಟ್ಟನೆಡೆಯಲ್ಲಿಯೆ ಬರ್ಪುದಱಿಂ ಶಿವಾಧವಾ (ಶಿಕಳ. ೨೬). ೨. ದುರದೃಷ್ಟಕರವಾದ ಪೆಟ್ಟು; ಆಘಾತ; ಅಪಾಯ; ಸಂದಿಗ್ಧ ಪರಿಸ್ಥಿತಿ; "ಸಮಸ್ಯೆ" (ಜಾ ನ ಕೊ ೬. ೬೪). ೩. (?) : ಇಷ್ಟಲಿಂಗದಲ್ಲಿ ತಟ್ಟುವುಟ್ಟು ಬಲ್ಲವಂಗೆ ಇಷ್ಟವ ಮುಟ್ಟುವ ಭೇದವು ತಟ್ಟದಿಹ ಪರಿ ಇನ್ನೆಂತೋ (ಮೋಳಿಮಾ. ೧೯-೭೦); "ಲಿಂಗ ಭೋಗೋಪಭೋಗ" (ಮೋಳಿಮಾ. ಕೋಶ); ಸಕ್ಕರೆಯ ರಾಶಿಗೆ ಕೇಸಿಯ ಕೆಲಸುಂಟೇ ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟುವುಟ್ಟೆಂಬೀ ಗುಟ್ಟಿನ ಕುಲವಿಲ್ಲ (ಮುಡೇವ. ೨೬೬-೨೭); ಪ್ರಾಣಲಿಂಗಿ ಎಂದಡೂ ತಾನಾಗಿ ಶರಣನೆಂದಡೂ ತಾನಾಗಿ. . .ಸತ್ತು ಚಿತ್ತಾನಂದವೆಂಬ ಗೊತ್ತ ಹರಿದವಂಗೆ ತಟ್ಟು ವುಟ್ಟು ಹತ್ತುವ ಭಾವ ಒಂದೂ ಇಲ್ಲ (ವಚಶಾ. I, ೧೨೧); ಇಷ್ಟ ಲಿಂಗಂ ಸುತ್ತಿ ಸಜ್ಜೆಯೊಳಗಿರುತಿಹುದು ತಟ್ಟುವುಟ್ಟನ ಸುಖವನೆಹಗೆ ಯರ್ಪಿಸಬಹುದು (ದೀಕ್ಷಾಬೋ. ೩-೭೮). [ ತಟ್ಟು$_1$ + ಮುಟ್ಟು$_2$ ]

**ತಟ್ಟುಮೆಟ್ಟು** (ನಾ). [ನಾಟ್ಯ] ಭರತನಾಟ್ಯದ ಹತ್ತು ಬಗೆಯ ಅಡವು ಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ : (೧) ತಟ್ಟು, (೨) ಮೆಟ್ಟು, (೩) ನಾಟು, (೪) ತಟ್ಟುಮೆಟ್ಟು (ಅಭಾನ್ನ. ೩೨). [ ತಟ್ಟು$_2$ + ಮೆಟ್ಟು$_2$ ]

**ತಟ್ಟುರ್ಚು**, ತಟವುಚ್ಚು, ತಟ್ಟುಚ್ಚು, ತಟ್ಟುಟ್ಟು, ಘಟ್ಟುಚ್ಚು (ಕ್ರಿ). ಸೀಳಿಕೊಂಡು ಹೊರಬರು; ಭೇದಿಸಿಕೊಂಡು ಹೊರಗೆ ಕಾಣಿಸು; ನಟ್ಟು ಪಾರಾಗು : ರೋಮಾಂಚಸಂಚಯಂ ತೊಟ್ಟಂಗಿಗಳ ತಟ್ಟುರ್ಚಿ ಪೆರ್ಚಿದ ಮುಯ್ಯನೆಡೆ ಪೊಟ್ಟನೊಡೆಯ ಪರಸ್ಪರಾಲಿಂಗನಂಗೆಯ್ದು (ಅನಂಪು. ೧೧-೨೪ ವ); ಇಟ್ಟೆಡೆ ಸೆಲ್ಲೆಹ ಕಂಗಲ ಜೋಡನು ತಟ್ಟುರ್ಚಿ ಮೆಯ್ಯನುಚ್ಚಳಿಸಿ (ಕುಮಾಸಾಂ. ೧೩-೧೧೭); ನೆಱೆ ತಾಗಿ ತಟ್ಟುರ್ಚಿತೆಂಬ ಶಕ್ತಿಯ ಕೈಮಱೆಯದೆ ಕೃಷ್ಣ ಖಂಡಿಸಿದ (ಮೋಹಚ. ೪೦-೭೭); ಪೆರ್ವೆಟ್ಟನ ತಟ್ಟನೊಳ್ ನಟ್ಟು ತಟ್ಟುರ್ಚಲಱುಗುವ ಬಱಿಸಿಡಿಲಂತೆಯುಂ (ಚಿಳವಂ. ೮೪-೩). **ತಟವುಚ್ಚು** : ಕರಿಯುರವಣಿಸಿ ಬಂದು ದೀರ್ಘಕರಾಗ್ರದಿಂ ಪಿಡಿದು ಭರದೊಳುದ್ಧಕಿ ಹಾಯ್ಕಿ ಕೊಂಬುಗಳೆರಡ ನೆಗ್ಗಲು ದೇಹವದು ನೆತ್ತರು ಸುರಿಯೆ ತಟ[ಪಾಠಾಂ. ಟು]ವುಚ್ಚಿ ಜೀವವಿಯೋಗತಾಪದಲಿ (ಬಸಪು. ೬೨-೧೧); ಉರಗವಿದು ಕರ್ಕೋಟಕನ ಬಗೆಯದಱ ಹಲ್ಲಂಗಳು ಎರಡೆರಡು ತಟವುಚ್ಚಿದವು (ಬಸಪು. ೪೬-೩೩). **ತಟ್ಟುಚ್ಚು** : ಗಿರಿಘಟವಂ ತಟ್ಟುಚ್ಚ ಲಿಸುವವು (ಕುಮರಾ. ೮-೬೨); ಗಾಜಿನ ಕುಪ್ಪಿಗೆಯೊಳಗಿನ ದೀಪವನ್ನಟ್ಟರಾ ಜ್ಯೋತಿ ಹೊಱಗೆಸೆವಂತೆ ಶ್ರೀಜನನುಜ್ಜ್ವಲ ದೇಹವ ತಟ್ಟುಚ್ಚಿ ರಾಜಿಸುತಿ ಹುದಾತ್ಮಕಾಂತಿ (ಭರಚ. ೬೬-೯೦); ತಟ್ಟುಚ್ಚಿದ ಸರಂಗಳಂ ಕೀಳ್ದ (ಜಬಪು. ೫೬-೦೬). △ **ತಟ್ಟುಟ್ಟು** : ನಿಶ್ಶ್ರೀಷಮಾ ಯುದ್ಧದುಳ್ ಉಚಕೀಲಿಚ್ಚಿದ ವಂಬುವಾಳ್ಪಲಗೆಯುಳ್ತಟ್ಟುಟ್ಟು ವಲ್ಪನ್ನಿಪಿನ್ ಮಱುಮೋಗೀಶ್ವರನುಳ್ಳಿ ಕದಿ ತಣದ ಸಾಗಮ್ಮಾನೀ ಶೂದ್ರುಕನ್ (ಸೌಇಇ. IX-I, ೩೯೨-೩; ೭ನೆಯ ಶತ); ☞ ಇದು 'ತಟ್ಟುಚ್ಚು' ಎಂಬುದರ ಅಪಲಿಖಿತವಿರಬಹುದು. **ಘಟ್ಟುಚ್ಚು** : ತೊಡು ನಿನ್ನ ಶರವ ನೀಂ ಗಿಡುಮರದ ಹೊದಱೊಳಡೆ ಯಾಡುತಿಹ ಹಕ್ಕಿಗಳ ಗಡಣವನು ಘಟ್ಟುಚ್ಚ[ಪಾಠಾಂ. ತಟ್ಟುರ್ಚ]ಲೆಸುವ ಬಲು ಬಿಲುಗಾಱ (ಸಾಳ್ವಭಾ. ೨೩-೨೭); ಚುಚ್ಚಿದವು ಕೂಡೆ ಘ[ಪಾಠಾಂ. ತ]ಟ್ಟುಚ್ಚಿದವು ಸೀಳಾಗಿ ಪಚ್ಚಿದವು ಮೈಯೊಳಗೆ ಹೊಚ್ಚಿದವು ಹೊಗರಲಗು (ಕೃಮಿಭಾ. ೦೩-೧೮) : [ ತಟ್ಟು$_1$ + ಉರ್ಚು ]

**ತಟ್ಟುವರಿಯಿಸು** 'ಘಟ್ಟುವರಿಯಿಸು' ನೋ.

**ತಟ್ಟುವಾಣಿ**, ತಟವಾಣಿ$_1$ (ನಾ). 'ತಟ್ಟು' ಜಾತಿಯ ಹೆಣ್ಣು ಕುದುರೆ : ಕಡಿವಾಣಂಗಳಂ ಕಟ್ಟಿರುವ ತಟ್ಟುವಾಣಿಗಳ ಮೇಲ್ಕುಳಿತು (ಸೌಗಂಧಿ. ೧೦೯೩-೬). **ತಟವಾಣಿ$_1$** : (೬). [ ←ಹಿಂ. ಟಟವಾನೀ ]

**ತಟ್ಟುವೀೞ್**, ತಟ್ಟುಬೀಳು (ಕ್ರಿ). ಕುಗ್ಗು; ದುರ್ಬಲವಾಗಿ ಕುಸಿದು ಬೀಳು : ಅಹಿರಾಜಂ ಪಡೆ ತಟ್ಟುವೀೞೆ ದಿಗಿಭವ್ರಾತಂ ಕೊರಲ್ಕುಗ್ಗೆ (ಲೀಲಾವ. ೦-೮೭). **ತಟ್ಟುಬೀಳು** : ಸೂರ್ಯಾಸ್ತ್ರವುಯಕ್ಕೆ ಪಾಂಡವರ ಪಡೆಯು ಮುರಿದು ತಟ್ಟುಬಿದ್ದಿತು (ಭೀಷ್ಮಪ. ೦೭೭). [ ತಟ್ಟು$_3$ (<ತಟ್ಟೆ) + ಬೀೞ್$_1$ ]

**ತಟ್ಟುಸೆಱಗು** (ನಾ). ಜರತಾರಿ ವಂತ್ತು ರೇಷ್ಮೆಯ ಕುಸುರಿಗೆಲಸ ಮಾಡಿದ ಸೆರಗು (?) : ಪೀತಾಂಬ್ರ ೧ಕ್ಕೆ ತಟ್ಟುಸೆಱಗು ಲತೆ ಹೂಗಳು ಸಹಾ ತೂಂಕ ೧೯೯ಕ್ಕೆ ವಿವರ ಸುತ್ತಣ ಲತೆ ಹೊಗಳು ೫೪ ಕೆಂಪು ೧೦೫೫ (ಸೌಇಇ. IX-II, ೫೪೭-೩; 1532). [ ತಟ್ಟು$_0$ (<ತಗಡು) + ಸೆಱಗು (<ಸೆಱಂಗು) ]

△ **ತಟ್ಟುಟ್ಟು** 'ತಟ್ಟುರ್ಚು' ನೋ.

**ತಟ್ಟೆ**, ತಟ್ಟ$_1$, ತಟ್ಟು$_3$ (ನಾ). ೧. ಚಪ್ಪಟೆ; ಸಮತಲ : ಭೂಮಿ ತಟ್ಟೆಯಾಗಿಲ್ಲ, ಗುಂಡಾಗಿದೆ (ರೂಢಿ). ೨. ಹಣ್ಣು-ಹಂಪಲು ಮೊದ ಲಾದುವುಗಳನ್ನು ಹರಡಿ ಇಡಲು ಉಪಯೋಗಿಸುವ ಬಿದಿರು ಅಥವಾ ಬೆತ್ತದ ಹೆಣಿಕೆಯಿಂದ ಮಾಡಿದ ಚಪ್ಪಟೆಯಾದ, ಮುಚ್ಚಳ ದಂತಹ ಬುಟ್ಟಿ : ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯು ಬೈಚಿಟ್ಟು (ಚೂನ್ನಸಂ. ೨೬೦-೧). ೩. ಬೆತ್ತ, ಲೋಹ ಮೊದಲಾದುವು ಗಳಿಂದ ಮಾಡಿದ ಅಂಚುಳ್ಳ ಮುಚ್ಚಳದಂತಹ ಪಾತ್ರೆ : ಆಧಾರದಲಿಪ್ಪ ಮೂಲಿಕೆಯ ಬೇರನಗಿ(ರೆ)ದು ಆ ಇಂದ್ರಿಯವ ಕೂಡಿಕೊಂಡು ಮಲ ಮೂಱು ಮುಟ್ಟದ ತಟ್ಟೆಯಲ್ಲಿ ಬೇಗ ತೆಗೆದುಕೊಳ್ಳಿ (ಸರ್ವನ. ೧೯-೯೧). ೪. ತಳಿಗೆ; ಹರಿವಾಣ; ಗಂಗಾಳ : ತಟ್ಟೆ ಬಟ್ಟಲಲ್ಲಿ ಎಡೆಮಾಡಬೇಕಾದರೆ (ಮಹಾದೇ. ಬ. ೧೨೪-೨೮೪); ವಿಸುನಿದಟ್ಟೆಯೊಳೊಪ್ಪುವುಜ್ವಲ ಸೀಧುವಂ ನಡೆ ನೋಡಿ . . . ಮಗುಟ್ಟು ವಂದಿಸಿಯಾಂಟದೆಳ್ (ಉದ್ಭಟ. ೩-೮೨); ತಿಗುರನಿಕ್ಕುವ ಲೇಪಿಸುವ ತಟ್ಟೆಗಳ ತಿಲಕಾಂಜನಕರಂಡದ (ಬ ಸ ಪು. ೧೨-೧೧). ನವರತ್ನದಡ್ಡಣಿಗೆಯೊಳ್ ತಟ್ಟೆಬಟ್ಟಲನಿಟ್ಟು ಹೊನ್ನ ಹರಿಯಣ ಮುಂದೆ ಧಗಧಗಿಸುತಿರಲಲ್ಲಿ (ಸಮ್ಯಕ್ಶಾ. ೪-೯). ೫. (ತಕ್ಕಡಿಯ) ಬಟ್ಟಲು; ಪರಡಿ : ತಕ್ಕಡಿಯ ತಟ್ಟೆಗಳನ್ನು ನಿರ್ದೇಶಿಸುವ ಎರಡನೆಯ ವರ್ಗಕ್ಕೆ ಸೇರಿದ ಎರಡು ನಕ್ಷತ್ರಗಳು (ಜ್ಯೋತಿರ್ವಿ. ೪೦). ೬. (ಅವರೆಕಾಯಿ, ಕಡಲೆಕಾಯಿ ಮೊದಲಾದುವುಗಳಲ್ಲಿ) ಬೀಜ ಬಲಿಯದಿರುವ ಕಾಯಿ; ಚಟ್ಟು : ತಟ್ಟೆ ಬೈಸಿ ಕೊಂಡರೂ ತಟ್ಟೆ ಹುಳಿ ಚೆನ್ನಾಗಿದೆ (ಗಾದೆ). ೭. ಸೀಳಿದ ಬಿದಿರು; ದೆಬ್ಬೆ : (೬). **ತಟ್ಟು$_1$** : 'ತಟ್ಟತಳ$_4$' ಪರಾ. **ತಟ್ಟು$_3$** : ೧. ಚಟ್ಟುವಂ ತಟ್ಟುವಂ ತಟ್ಟು ಗೆಯ್ದಂತಪ್ಪತಿ ವಿಶಾಲವೆನಿಪ್ಪ ಪಾಸಱೆಯಂ . . . ಗಳಲನಿಟಾಪಿದಾಗಳ್ (ಶಾಂತೀಶ್ವ. ೧೦-೧೮೬ ವ); ಹೋಗುತ್ತ ಹೋಗುತ್ತ, ಬಂಡೆಯ ವೈ ತಟ್ಟಾಗಿ ಇರುವ ಬದಲು, ಕೆಳಕ್ಕೆ ಇಳಿಯತೊಡಗಿತು (ಕುಡಿಕಾ. ೨೩). ೫. ಕೋಪವವನ್ನು ತೆಗೆದು ಒಂದು ತಟ್ಟಿನಲ್ಲಿ ಇರಿಸಲು ಅಮರನೀತಿಯು ನೂತನ ವಾದ ಒಂದು ವಸ್ತ್ರವನ್ನು ತಂದು ಎರಡನೆ ತಟ್ಟಿನಲ್ಲಿ ಇರಿಸಲು (ಶಿವಚ. ೮೩-೬); ತ್ರಾಸಿನ ಒಂದು ತಟ್ಟಿನಲ್ಲಿ ಜಂಗಮರ ಕೌಪೀನವನ್ನು, ಮತ್ತೊಂದು ತಟ್ಟಿನಲ್ಲಿ ಬೇರೊಂದು ಕೌಪೀನವನ್ನಿಟ್ಟು ಮೇಲಕ್ಕೆತ್ತಿದರು (ಪುರಾವಿ. ೬೩). ೮. ಕತ್ತಿಯ ಅಲಗು,-ಧಾರೆ: "ಖಡ್ಗಫಲ, ಪುಷ್ಕರ – ಅಡ್ಡಾಯುಧದ ತಟ್ಟು" (ಹಲಾಯು. ೬); ಕತ್ತಿಕೊಂತದ ತಟ್ಟಿನ ಮೇಗೆ ಏನಾದರುವೆ ಚುಕ್ಕೆ ಕಂಡರೋ ತೀರಿ ಹೋಯಿತು ಅವನ ಬಾಳು (ಮಂತ್ರಕ. ೮೦-೦). ೯. ನಿತ್ರಾಣ; ದುರ್ಬಲತೆ; ಅಶಕ್ತಿ : ಕಂಬನಿಗಳಿಂದುಂಬ ಗಳಗಳನೆ ಅಳುತ ನಿಟ್ಟುಸುರುಗಳಂ ಬಿಟ್ಟು ತಟ್ಟುತಟ್ಟಾಗಿ (ಸೌಗಂಧಿ. ೪೭೩-೩); ದನ ಹುಲ್ಲು ಇಲ್ಲದೆ ತಟ್ಟಾಗಿವೆ (ರೂಢಿ). ೧೦. ಕಿವಿಯ ಒಂದು ಆಭರಣ: ಮಗುವಿನ ಕಿವಿಗೆ ತಟ್ಟು ತೊಡಿಸಬೇಕು (ರೂಢಿ).

**ತಟ್ಟಾಗು** = ಸೋತುಹೋಗು; ನಿತ್ರಾಣವಾಗು: ಮುಟ್ಟಲೞಿಯವು ಯೋಗಿಗಳ ನಿರ್ಮಲ ಚಿತ್ತ ತಟ್ಟಾದುವಱಿಸಿ ವೇದಗಳು (ಕೃಷ್ಣಗೋ. ೧-೧೦೩). **ತಟ್ಟು ಮಾಡು** = ನಿತ್ರಾಣಗೊಳಿಸು ; ದುರ್ಬಲಗೊಳಿಸು; ಒಣಗಿಸು : ಕಾಲು ಕೈಯನಗಚಿ ತೋರಣದೊಳು ಕಟ್ಟಿ ಸೀಳಿ ನರರನಾೞಿಸುವರು ತಟ್ಟು ಮಾಡಿ ಪೋಳ್ದು ನೂಱುವರುಮವಿಟ್ಟು ವಕ್ತ್ರ ಭಾಳ ಚರಣ ಕರ ದೊಳಿಡಿಯೆ ಮೊಳೆಯನಿಕ್ಕಿ ಹೆಟ್ಟಿ (ಸಾಸಂಪ. ೬-೧೪೯ ರಗಳೆ). **ತಟ್ಟೆ ಹಾಕು** = ಊಟಕ್ಕೆ ಬಡಿಸು : ಅಡಿಗೆ ಮನೆಯಲ್ಲಿ ತಟ್ಟೆಹಾಕಿಕೊಂಡು (ದೂಶಿಟ್ಯ. ೧).
[ ದೇ.॥ ತಮಿ. ತಟ್ಟ, ತಟ್ಟಿ, ತಟ್ಟು, ತಟ್ಟೈ; ಮಲ. ತಟ್ಟ, ತಟ್ಟು; ತುಳು. ತಟ್ಟು; ಕೊಡ. ತಟ್ಟ; ತೆಲು. ತಟ್ಟ ]

**ತಟ್ಟೆಕಾಲು** (ನಾ). ಮಗ್ಗದ ಹಾಸಿಗೆ ಆಧಾರವಾಗಿ ನಿಲ್ಲಿಸುವ ಕತ್ತರಿ ಕಾಲು ; ತಿಕ್ಕಡಿ: (ರೀವ್).
[ ತಟ್ಟೆ + ಕಾಲು$_1$ (<ಕಾಲ್$_1$) ]

**ತಟ್ಟೆಕೆಱೆ** (ನಾ) ಒಂದು ಊರಿನ ಹೆಸರು (?) : ದತ್ತಿ ತಟ್ಟೆಕೆಱೆ ಸರ್ವಬಾಧಾ ಪರಿಹಾರಾ (ಮ್ಯಾಆರಿ. ೧೯೩೩, ೧೦೩-೩೪ ; 10ನೆಯ ಶತ) ; ಪಟ್ಟದ ಬಸದಿಯ ಪ್ರತಿಬದ್ಧವಾಗಿ ಸವಾದೇಯಮರ್ಯಾಧ್ಯವಾಗಿ ಬಿಟ್ಟ ದತ್ತಿ ತಟ್ಟೆಕೆಱೆ ಸರ್ವ್ವಬಾಧಾ ಪರಿಹಾರ (ಎಕ. VII, ಶಿವಮೊ. ೪-೭೦ : 1122).
[ ? ]

**ತಟ್ಟೆಗಲ್ಲು** (ನಾ). ಚಪ್ಪಟೆಯಾದ ಕಲ್ಲು : ಅಲ್ಲಿಂದಂ ಪಡುವ ನಡದು ವಟ್ಟ ಹಲಗೆಗಲ್ಲು ಅಲ್ಲಿಂ ಪಡುವ ನಡದು ನಟ ತಟ್ಟೆಗಲ್ಲು (ಎಕ. XII, ತಿಪಟೂ. ೧೩೯-೭೩ ; ೪). [ ತಟ್ಟೆ + ಕಲ್ಲು (<ಕಲ್$_2$) ]

**ತಟ್ಟೆಗೋಡು** (ನಾ). ಚಪ್ಪಟೆಯಾದ ಕೋಡು,-ಕೊಂಬು : ನಮ್ಮ ಮನೆ ಎಮ್ಮೆಗೆ ತಟ್ಟೆಗೋಡು (ಜಾಪ). [ ತಟ್ಟೆ + ಕೋಡು$_5$ ]

**ತಟ್ಟೆಯು** 'ತಟ್ಟಯು' ನೋ.

**ತಟ್ಟೆವಟ್ಟಲು** (ನಾ). ೧. ತಟ್ಟೆ ಮತ್ತು ಬಟ್ಟಲು. ೨. ತಟ್ಟೆಯ ಸುತ್ತಲು ಇಡುವ ಬಟ್ಟಲು ; ಎಡೆಬಟ್ಟಲು : ಪೊನ್ನ ಪರಿವಾಣದೊಳು ದಿವ್ಯಾನ್ನಮುಮನು ತೀವಿ ತಾ ಪೊಳೆವ ಚಿನ್ನದುರೆ ತಟ್ಟೆವಟ್ಟಲಲಿ ತಿಳಿದುಪ್ಪಮಂ ಪೊರೈಸಿ (ನವಕೋ. ೯-೨೭). 'ಎಡೆವಟ್ಟಲ್' ಪರಾ.
[ ತಟ್ಟೆ + ಬಟ್ಟಲು (<ಬಟ್ಟಲ್) ]

**ತಟ್ಟೆವಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಪಡೆದ ತಟ್ಟೆವಳ್ಳವ ಕಲ್ಲ ನಟು (ಮ್ಯಾಆರಿ. ೧೯೨೪, ೧೦೭-೧೦ ; ೩ನೆಯ ಶತ). [ ? ]

**ತಟ್ಟೈಸು** 'ಥಟ್ಟೈಸು' ನೋ.

**ತಟ್ಟ್ಯ** (ನಾ). ಎದುರಿಸುವವನು; ಪ್ರತಿಭಟಿಸುವವನು : ಆತನೀ ಪರಿ ಕಣೆಗಳಲಿ ಸತ್ವಾತಿಶಯುವನು ತೋಱಿದಡೆ ಮಾಂಧಾತನಲಿ ತಟ್ಟ್ಯರ ತಱಿದೊಟ್ಟಿದನು ಬೇಗದಲಿ (ಉತ್ತರಾ. ೧೭-೩೭). [ ? ]

**ತಡ$_1$** (ನಾ). ೧. ಅಡ್ಡಿ ; ತಡೆ; ವಿಘ್ನ : ತಂದೆ ಪೇೞ್ದಟ್ಟಿದ ರಾಜಸೂಯಮಖಮಂ ತಡವಿಲ್ಲದೆ ಬೇಳ್ದ ಬೀರಮಂ ನೆಟ್ಟನೆ ನೀನೆ ಕಂಡಿಟೆಸಲಕ್ಕುಮೆ ಗಾಂಡಿವಿಯುಂ ಸುಯೋಧನಾ (ಗದಾಯು. ೩-೩೭). ೨. ಹೊತ್ತು ಮೀರುವುದು ; ಸಾವಕಾಶ ; ವಿಳಂಬ : ತಡವಾದರೆ ಬಡವಾದೆ ತಾಯ (ಮಹಾದೇ. ಬ. ೧೪೨-೩೨೩) : ತಡವಾದುದುಂಟು ನಲ್ಲನೆ (ಯಶೋಧ. ೨-೫೦) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ ಹೊಕ್ಕು ನಿಮಿಷದೊಳೊರಸಿದನು ಚತುರಂಗ ಬಲವನು (ಕುಮಾರರಾ. ೫-೪೦). ೩. ಗಜಾರೋಹಣದ ರೀತಿಗಳಲ್ಲೊಂದು (?) : ಅಗ್ಗಳವಾಗಿ ಕಾಲ್ಗಿಡಿಸಲುಂ ಮುರಿದು ಕಿಟ್ಟಿಡಂ ತಡವೆಂಬಿವಱಿಂದಂ ಬಾಹು ಕೈಕೊಳ್ಳೆಂಬಿವು ಮೊದಲಾಗಿ ಗೋಮೂತ್ರ ಮಂಡಲಮುಮಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆನೆನ್ನ ಕೆಯ್ಯೊಳ್ (ಶಾಂತಿಪು. ೩-೨೩ ವ).

**ತಡಮಾಗು$_1$**, **ತಡವಾಗು$_1$** = ೧. ವಿಳಂಬವಾಗು ; ನಿಧಾನವಾಗು : ಮರಣಕ್ಕೆನ್ನಿಂದೆ ನೀಂ ಮುಂಚಿದಯ್ ಮೊನೆಯೊಳ್ಸೂಟ್ಟಿಡಮಾಯ್ತು ದೊಂದೆಡೆಯೊಳಂ ಹಾ ವತ್ಸ ದುಶ್ಶಾಸನಾ (ಗದಾಯು. ೫-೭) ; ತಡವಾದ ಪುದುಟೆದರನೀ ಯೆಡೆಗೆ ನಿಯೋಜಿಸಲಿಕೆಂಬವೊಲ್ ನೃಪವರನಿರ್ದೆಡೆಗೆ ಬಿಡದೆಡೆಯಾಡುವ ಬೆಸಕೆ ಕನ್ನೆ ತನ್ನಯ ಮನಮಂ (ಕಾದಂಬ. ೮೭) ; ಅಲ್ಪ ಶ್ರೀಮಂತನಂತೆ ನಡೆ ತಡವಾಗಲುಂ (ಧರ್ಮಾಮೃ. ೬-೩೮). ೨. ತಡವರಿಸು ; ತೊದಲು : ನುಡಿ ತಡವಪ್ಪುದೊಂದು ಮೊಗದೊಳ್ ಮಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು (ಪಂಪಭಾ. ೨-೪೯). **ತಡ ಮಾಡು$_2$** = ಕಾಲಹರಣ ಮಾಡು ; ವಿಳಂಬ ಮಾಡು : ಮಾಡಿಸಿ ಲಾಕ್ಷಾಮಯವಂ ಮಾಡಮನತಿ ಗೋಪ್ಯದಿಂದಂ . . . ತಡ ಮಾಡದೆ ನಡೆತಂದು ತಮ್ಮ ಜನಕಂಗಾಗಳ್ (ಮಹಾನೇ. ೯-೪೯); ನಾನೇನು ಬೇಕೆಂದು ತಡಮಾಡಲಿಲ್ಲ (ತೀಮೋತ. ೧೦೯).
[ ದೇ.॥ ಮಲ. ತಡ = ಅಡ್ಡಿಪಡಿಸುವಂತಹುದು ; ಕೊಡ. ತಡು ; ತುಳು. ತೆಲು. ತಡ ]

**ತಡ$_2$**, **ದಡ$_3$**, **ಧಡ$_1$** (ನಾ). ೧. ತಡಿ ; ದಂಡೆ; ಅಂಚು ; ತೀರ : ತಟ – ತಡ, ತಟಿ – ತಡಿ (ಶಮದ. ೨೫೫ ಪ್ರಯೋಗ) ; ತನ್ನಲ್ಲಿ ಸ್ನಾನವನ್ನು ಮಾಡಿದ ಮನುಷ್ಯರ ಸಕಲ ಪಾಪಗಳನ್ನು ಪರಿಹರಿಸುವಂತಾಗಿ ತನ್ನ ತಡದಲ್ಲಿ ಹುಟ್ಟಿದ ಹುಲ್ಲುಬಳ್ಳಿಗಳು (ಶಿವತ. ೨೮-೩). ೨. ಹೊಂದಾಣಿಕೆ ; ಬೆರೆಯುವಿಕೆ: 'ತಡಂಗಲಸು' ಪರಾ. ೩. ಸಮವಾದುದು ; ಸಾಟಿ ; ಸಮಾನ: 'ತಡಂಬರೆ$_2$' ಪರಾ. **ದಡ$_3$** : ೧. ಇಂದು ನೀರದಡದಲ್ಲಿರುವನೆ ಏನೆಂದರು ಮುಖವೆತ್ತಿ ನೋಡನೆ (ಪುರಂದ. ೧-೫೪-೧) ; ಕಲಿ ವಸುದೇವ ಮಿಂದೀಸಾಡಿ ದಡದಲಿ ದೇವರನು ವಂದಿಸಿ (ಸಾಳ್ವಭಾ. ೧೭-೧೦) ; ತಟ, ದಡ (ಶಬ್ದಾನು. ೧೪೩ ಪ್ರಯೋ) ; ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ (ಕನ್ನಡಾ. ೧೦೧-೬). **ಧಡ$_1$** : ೧. ಹೊಳೆಗಳ ಧಡದಲ್ಲಿದ್ದ ಭೂಮಿಯಂತು ಕೇವಲ ಚಿನ್ನವೆಂದೆನ್ನಿಸಿಕೊಳ್ಳುತ್ತದೆ (ಮುಂಬಯಿ. ೫-೧೯೫) ; ವಿಶಾಲವಾದ ಅನಂತ ನೀಲ ಸಮುದ್ರದಲ್ಲಿ ಧಡ ಕಾಣದೇ ಅಲೆಯುತ್ತಿರುವ ಹಡಗ ದಂತಾಗಿರುವೆನು (ವಿದ್ಯೋಡ. ೦೫೭) ; ಸಮುದ್ರ ಧಡಕ್ಕೆ ಬಂದು ಕುಳಿತೆವು (ಮೇದಿನು. ೫೩).

**ತಡತಡಮಾಗು** = ತಡಮಾಗು$_2$ : ಅದರಿ ಕಟಾಕ್ಷಚಂದ್ರಿಕೆ ಪಳಂಚಿ ಗವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನ ಘರ್ಮವಾರಿಯೊಳ್ ತಡತಡಮಾಗೆ ಮಾಧವಿ ಮುಗುಳ್ತಪೊಲಿರ್ದಳ ವಿಂಡಿರಿಂದಂ (ಮಲ್ಲಿಪು. ೨-೭೦). **ತಡಮಾಗು$_2$**, **ತಡವಾಗು$_2$** = ೧. ಸಾಟಿಯಾಗು ; ಸಮಾನವಾಗು : ಅಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚಿ ಗೇಯದ ರುಚಿ ಕಂತುಚಾಪರುಚಿಯೊಳ್ ತಡಮಾಗೆ . . . ಕಾಂತೆ ಮಿಂಚು ಪೊಳೆದಾಡುವವೊಲ್ 'ಪೊಳೆದುಯ್ಯಲಾಡಿದಳ್ (ಜಗವಿ. ೧೭-೧೦೩) ; ಆಮೋದಿತಮುದಿತ ಮಧುಕರ ದಾಮಕದೊಳ್ ನೀಲರತ್ನದಾಮಂ ಮಲ್ಲೀಧಾಮಕದೊಳ್ ಮುಕ್ತಾಫಲದಾಮಂ ತಡವಾದುವೊಡನೆ ಮಣಿಮಂಡಪದೊಳ್ (ಪಂರಾಮಾ. ೫-೧೦೫). ೨. ಹೊಂದಿಕೊಳ್ಳು ; ಜೊತೆಯಾಗಂ : ಮೊಱೆ ತಡಮಾಗೆ ನಾಣಗಲೆ ತಳ್ವದನೊಳ್ವದನಾಗಿ ಪಾಯೆ (ಸೂಕ್ತಿಸು. ೧೪-೩೩) ; ಸುರಸುಂದರಿಯರ್ ನಡೆತಂದರಂದು ಸುಯ್ಯೊಗೆ ವಳಿಮಾಲೆ ತಮ್ಮ ಲುಲಿತಾಲಕದೊಳ್ ತಡವಾದುದೆಂಬಿನಂ (ಪಂರಾಮಾ. ೧೭-೯೩). [ <ಪ್ರಾ. ತಡ. / ಸಂ. ತಟ ]

**ತಡ$_3$** (ನಾ). ಆಧಾರ ; ನೆಲೆ ; ತಳ : ತಡದಿಂ ಕಿತ್ತಡಿಯಂಬುದಗಡಿಗಡೆ ಪೊಕ್ಕು . . . ಪೊಯ್ದರ್ (ಗದಾಯು. ೮-೧೭). 'ತಡಂಗಿಡಿಸು' ಪರಾ.
[< ತಳ ]

**ತಡ$_4$** (ನಾ). ಗಾಬರಿ ; ಗೊಂದಲ ; ತಬ್ಬಿಬ್ಬು ; ದಿಗ್ಭ್ರಾಂತಿ : (ಕಿ).

**ತಡತಡ, ತಡದಡ** (ದ್ವಿರುಕ್ತಿ) : 'ತಡತಡವರ್', 'ತಡತ್ತಡಿಸು', 'ತಡ ದಡವರ್' ಪರಾ.

**ತಡತಡಂದೊಡರ್** = ಅಸ್ಥಿರತೆಯುಂಟಾಗು ; ತೂಕತಪ್ಪು : ಇರದೆ ಮನಕ್ಕೆ ಸೊಕ್ಕಡರೆ ಪೊಂಪುಳಿ ವಕ್ತ್ರದೊಳುಣ್ಮೆ . . . ಕಣ್ಮಲರೊಳ್ ನಸುಗಂಪು ಪೊಣ್ಮೆ ತಚ್ಚರಣಸರೋಜದೊಳ್ ತಡತಡಂದೊಡರ್ದಾ ರಸನಾಗ್ರದೊಳ್ ತೊದಳ್ವೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೦-೦೬೦). **ತಡತಡಾಗು, ತಡತಡವಾಗು**=ಅಸ್ಥಿರವಾಗು ; ತತ್ತರಿಸು : ಅದು ತಡತಡಾದೊಡರ್ಹತ್‌ಪದ ಮನೆ ನಾಲಗೆಗೆ ತರ್ಪುದದು ಬಾರದೊಡಿರ್ಪುದಕಾರವೊಂದಱೊಳ್ (ಆದಿಪು. ೨-೩೬) ; ಬಾಡಿದ ಪೂಮಾಲೆಯೊಡನೆ ಬಟಲ್ದ ಸೋರ್ಮುಡಿಗಳು ಮಡಿಗಡಿಗೆ ತಡದಡವಪ್ಪ ನಡೆಗಳುಂಬೆರಸು (ಆದಿಪು.೧೦-೬೫). **ತಡಮಾಗು₁, ತಡವಾಗು₁**=೧. ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ದಿಗ್ಭ್ರಾಂತವಾಗು: (*). ೨. ತೊಡಕಾಗು; ತಪ್ಪಾಗು: ಪದದಪ್ಪದೆಯುಂ ಬಗೆ ಬೆದಱದೆಯುಂ ಕತೆ ಕೆಡದೆಯುಂ ಭವಾವಳಿ ತಡಮಾಗದೆಯುಂ (ಶಾಂತಿಪು. ೩-೧೦); ಸುಖದ ಸೊರ್ಪಿಯೆನಲ್ಕೆ ಪಾಡಿ ಮೆಚ್ಚಿಸುವನಿವೇಷಗಾಯಕಿಯರಾಲಯದೊಳ್ ತಡಮಾಗದೋದಿ ಬಾಜಿಸುವ ಮರುದ್ದರಾ ವಿವಿಧವಾದ್ಯವಿಶಾರದ ವಾದಕರ್ಕಳುಂ (ಸುಕಾನೇ. ೨-೯೬) ; ಶಕ್ಕಳಿದು ತಡವಾಗಿ[ಪಾಠಾಂ. ಉಕ್ಕಿ ತಡಬಡಪೋಗಿ, ತಳರ್ದುತಡಬಡವಾಗಿ]ಹೊರೆಯೇಱೆ ನೋಡುತುಂ (ನಂಚಿಕ. ೬-೦೩೦). **ತಡಮಾಡು₁** = ತಳ್ವಂಕೆಗೊಳ್ಳು ; ಅಕುಲಗೊಳ್ಳು ; ಕಳವಳಗೊಳ್ಳು : ರೋಮೋದ್ಗಮಂ ಪೊಣ್ಮೆ . . . ಮತ್ತಂತೆ ನಡೆನೋಡಿ ಚಿತ್ರದೊಳ್ ತಡಮಾಡಿ (ಜಗವಿ. ೦೭-೦೦೮ ರಗಳೆ) ; ನಿಂದ ಧರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟಲಯಕ್ಕೆ ದಿಗ್ಗಜಂ ಪಿಂದಡಿಯಿಟ್ಟು ಬೆರ್ಚುತಿರೆ ಪಿಂದೆಸೆಗಳ್ ತಡಮಾಡೆ[ಪಾಠಾಂ. ವಾಗೆ]ತಾಂಡವಾನಂದದಿನಾಡುವಲ್ಲಿ ಹರಿ (ಅನಂಪು. ೩-೯೮). [ ? ]

**ತಡಂ** (ಅ). ೧. ಬೇಗನೆ ; ಕೂಡಲೆ : ಓಲೆಯಂ ಬಾಚಿಸುವುದು ತಡಮೇಟ್ಟಂದು ತಾಂ ಕಾಣ್ಬುದೆಮ್ಮಂ (ಕಾದಂಬ. ೨೩೯). ೨. ಮೆಲ್ಲನೆ ; ನಿಧಾನವಾಗಿ : ಸೊಗಯಿಸೆ ತೊಟ್ಟ ಪೂದುಡುಗೆ ಮೆಲ್ಲೆರ್ದೆಯೊಳ್ ತಡಮಾಡೆ ಗಾಡಿ (ಶಂಪಭಾ. ೨-೧೮) ; ಆನೆಯನೇಱಿ ಸೌಷ್ಠವದೆ ಬರ್ಪರಿಕೇಸರಿಯೊಂದು ಗಾಡಿಯುದ್ಧಾನಿ ತಗುಳ್ದು ಕಣ್ಗೊಳೆ ತೊಟಲ್ದೆರ್ದೆಯೊಳ್ ತಡಮಾಡೆ (ಶಂಪಭಾ. ೪-೩೮) ; ಮಲಿನಂಗಳಂ ತೊಳೆಯದೊ ತಡಂಬಡಿಸಿದೆಯೊ ಬಿಂದಿಗೆಯ (ಬಸಪು. ೪೭-೦೩). [<ತಡ₁ ]

**ತಡಂಗ** 'ತಟಂಕ' ನೋ.

**ತಡಂಗಡಿ, ತಡಗಡಿ** (ಕ್ರಿ). ೧. ಸಂಪೂರ್ಣ ಕತ್ತರಿಸು ; ಪೂರ್ತಿ ಕಡಿ : ಸಂಧಿ ಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ (ಸುಕುಮಾ. ೧೦-೪೭ ವ) : ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) : ಮಾಳವನಂ ತಡಂಗಡಿದು (ಎಕ. XV, ೩೨೦-೨೦ : 1172) : ಕೊಯ್ಯೆ ಪೊರಳ್ದೆ ಕುತ್ತೆ ಕೊಱೆದಿಕ್ಕೆ ತಡಂಗಡಿದೊಟ್ಟೆ ನೆತ್ತಿಯುಂ ಪೊಯ್ಯೆ (ಅನಂಪು. ೯-೩೨). ೨. ದಡವನ್ನು ಕೊಚ್ಚು ; ತಟವನ್ನು ಮೀರು : ಅದಱ ಬಿದುಮುಟ್ಟೆ ದಿವಮಂ ಮದಧಾರಾಸಾರದಿಂ ತಡಂಗಡಿದ ವಿಯನ್ನದಿಯಸಿತಮಾಗೆ ಮೃಗವಮದನದಿಯಿಂದೇವೈಪರಮರರಘಮರ್ಷಣದೊಳ್ (ಅನಂಪು. ೦೩-೨೦). **ತಡಗಡಿ** : ೧. ಕತ್ತರಿಯ ಮೊತ್ತಮಂ ತಡಗಡಿದು ಬೆಳಗುತ್ತ ಪತ್ರಮಿತ್ರನುಪ್ಪುದಿಸಿದ (ನಳಚ. ೦೦-೪೩). [ತಡ₂ + ಕಡಿ₁]

**ತಡಂಗಲಸು, ತಡಂಗಲಿಸು** (ಕ್ರಿ). ೧. ಕೂಡಿಕೊಳ್ಳು ; ಒಂದಂಗೊಡು ; ಸೇರಿಕೊಳ್ಳು; ಬೆರೆ : ಆ ದೇವಗಣಿಕೆಯರ್ ಪೆಂಡವಾಸದೆಳಮಂಡಿರೊಳ್ ತಡಂಗಲಸಿ ನಿಲೆ (ಜಗವಿ. ೦೪-೯೨ ವ). ೨. ವ್ಯಾಪಿಸಂ: ಲವಲಿಕೆಯೆಂಬಳೆಂಪ್ಪಿ ನಖರುಚಿ ತಡಂಗಲಸೆ ಪೂವಲಿಗೆದಱಿಯುಂ (ಚಂದ್ರಪ್ರ. ೧೧-೧೪೩ ವ) : ಯುವತಿಯರ ನುಡಿಯೊಳ್ ತಡಂಗಲಸಿದ ಪುಣ್ಯಪಾಠಕಜನಂಗಳಾಶೀರ್ವಾದನಾದಮುಮಂ (ಚಂದ್ರಪ್ರ. ೬-೯೬ವ). **ತಡಂಗಲಿಸು** : ೧. ನೇಱಿದ ನೇಱಿಲ ಪಣ್ಗೊನೆಯ ಸೀಗುರಿಗಳಮದಱೊಳ್ ತಡಂಗಲಿಸಿ ತೂಗುವ ಪೊಂಬಾಟೆಯ ಪೊಸ ಚಾಮರಂಗಳಂ (ಲೀಲಾವ. ೧೦-೩೩ವ) ; ನಳನಳಿಪ ಕೇಸರದ ಸಸಿಯೊಳ್ ತಡಂಗಲಿ[ಪಾಠಾಂ. ಲ]ಸಿ ಬೆಳೆದ ದವನದ (ಚಂದ್ರಪ್ರ. ೬-೯೩ವ);ಸಂಚರಿಸುವ ಚಂಚರೀಕಚಯದಿಂಪಿನ ಸೊಂಪಿನ ಗಾವರಂ ವಿಯಚ್ಚರಿಯರ ನೂಪುರಧ್ವನಿ ತಡಂಗಲಿಸಿತ್ತು ವಿವಾಹಗೇಹದೊಳ್ (ಶಾಂತೀಶ್ವ. ೪-೦೯೯). ೩. ಒಂದುಗೂಡಿಸು ; ಸೇರಿಸು : ಇಳೆಯಂ ವ್ಯೋಮಮುಮಂ ತಡಂಗಲಿಸಿ ದಿಕ್ಚಕ್ರಕ್ಕೆ ನಿಂದಿಕ್ಕೆ ಮಂಗಳ ತೂರ್ಯಧ್ವನಿ (ಅನಂಪು. ೦೪-೬೮). ೪. ಸಮಾನವಾಗು : ಎಲೆವಚ್ಚೆಯ ಪಲ್ಲಣಮುಳ್ಳಲರ್ದಜ್ಜಂ ಛತ್ರಮುಡರ್ದ ನೊರೆ ಜಲ್ಲಿ ತಡಂಗಲಿಸೆಸೆಯೆ ರಾಜಹಂಸಂ ನಲವಿಂ ತೆರೆಗುದುರೆಯೇಱಿ ಕುಣಿಯಿಪನದಱೊಳ್ (ವ್ಯಷವಿ. ೪-೦೩).

[ ತಡ₂ + ಕಲಸು₁ ]

**ತಡಂಗಲಿಸು** 'ತಡಂಗಲಸು' ನೋ.

**ತಡಂಗಲು** (ನಾ). ಅಡ್ಡಿ ; ತೊಂದರೆ : ರಾಜಕೀಯ ಕಾರಣಗಳಿಂದಲೋ ಏನೋ ಈ ಮುನ್ನಡೆಗೆ ತುಸು ತಡಂಗಲಾಗಿ (ನಂಜುಂಡ. ೩೯).

[←ತಮಿ. ತಟಙ್ಕಲ್ ]

**ತಡಂಗಾ** (ಕ್ರಿ). ನಿಲ್ಲುವಂತೆ ರಕ್ಷಿಸು ; ತಡೆದಿಟ್ಟುಕೊಳ್ಳು : ಕಣ್ಗೊಳಿಪ ವರಂ ಕಾವುದು ಸುತ್ತಿ ಪತ್ತಿ ಸವಿಯೊಳ್ ಸೆಱೆಗೆಯ್ವುದು ಜೀವಮಂ ತಡಂಗಾವುದು (ಲೀಲಾವ. ೦೪-೪೩). [ ತಡ₁ + ಕಾ₁ ]

**ತಡಂಗಾಲ್, ತಡಂಗಾಲು, ತಡಗಾಲ್** (ನಾ) ೧. ನಡೆಗೆ ಅಡ್ಡಿಪಡಿಸುವ ಕಾಲು; ಅಡ್ಡಗಾಲು; ತೊಡರುಗಾಲು: ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅವರ್ಕೆ ಪ್ರಯೋಗಂ—ಬೆಡಂಗು . . . ತೊಡಂಕು, ತಡಂಗಾಲ್ (ಶಮದ. ಮ. ೪೬ ಪ್ರಯೋ). ೨. ಅಡ್ಡಿ ; ತಡೆ; ನಿರೋಧ; 'ತಡಂಗಾಲ್ವೊಯ್' ಪರಾ. **ತಡಂಗಾಲು** : ೨. 'ತಡಂಗಾಲುವೊಯ್' ಪರಾ. **ತಡಗಾಲ್** : ೧. ಅರಬರ್ ತಡಗಾಲಿಂಬಂತಬಿಂದುವು ಮನಾಚರಿಪರ್ (ಶಮದ. ೦೭೩).

**ತಡಗಾಲ್ಮಾಧವ, ತಡಂಗಾಲಮಾಧವ** = ಶತ್ರುರಾಜರಿಗೆ ತೊಡರುಗಾಲಿನಂತಿರುವ ಮಾಧವ; ಒಂದು ಬಿರುದು: ಗಂಗನಿಂ ಭಯಮಿಲ್ಲದ ಹರಿವರ್ಮ್ಮ ವಿಷ್ಣುನ್ರಿಪನಿಂ ನಿಜದಿಂ ಬಲ್ಲೆ ತಡಂಗಾಲ್‌ಮಾಧವನಲ್ಲಿಂ ಬಳಿ ಚುಚ್ಚುರ್ವಾಯ್ದು ಗಂಗನ್ರಿಪಾಳಂ (ಎಕ. VII, ಶಿವಮೊ. ೩೭-೮ ; 1116) : ಬಿರುದರಂ ತಡಂಗಾಲುಪೊಯ್ದುಡಿಗಿಡಿಸುವ ತಡಂಗಾಲಮಾಧವನ್ (ಎಕ. VII; ಶಿವಮೊ. ೪-೪೦ ; 1122). [ ತಡ₁ + ಕಾಲ್₁ ]

**ತಡಂಗಾಲು** 'ತಡಂಗಾಲ್' ನೋ.

**ತಡಂಗಾಲುವೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ಗೊಳ್** (ಕ್ರಿ). ಅಡ್ಡಗಾಲಾಗು ; ಕಾಲಿಗೆ ಅಡ್ಡಲಾಗಿ ಬರು : ಪೊಸವಾಣತಿವಲ್ಲೆ . . . ತವಕದಿಂ ಬರುತ್ತುಂ ಕೂಡೆವರಲುಮಿರಲುಮಱಿಯದೆ ತಡಂಗಾಲ್ಗೊಂಡು ತಡೆದು ತಡದಡವರ್ಪ ತರುಣ ಹರಿಣಿಂ (ಪುಷ್ಪಕು. ೩-೭೭ ವ). [ ತಡಂಗಾಲ್ + ಕೊಳ್₁ ]

**ತಡಂಗಾಲ್ವೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ವೊಯ್, ತಡಂಗಾಲುವೊಯ್, ತಡಂಗಾಲ್ಪೊಯ್** (ಕ್ರಿ). ಅಡ್ಡಗಾಲು ಹಾಕು; ಅಡ್ಡಿಯನ್ನು ಉಂಟುಮಾಡು; ಅಡ್ಡಡ್ಡ ಬರು: ಮೊಗೆದು ಮೊಗೆದು ನೀರ ಮೊಗಕೆ ಚೆಲ್ಲುವ ಪುಟನೆಗೆವ ತಡಂಗಾಲ್ವೊಯ್ವ (ಕುರಾಸಾಂ. ೨೭-೦೦೦). **ತಡಂಗಾಲುವೊಯ್** : ಬಿರುದರಂ ತಡಂಗಾಲು ಪೊಯ್ದುಡಿಗಿಡಿಸುವ ತಡಂಗಾಲಮಾಧವಂ (ಎಕ. VII, ಶಿವಮೊ. ೪-೪೦ : 1122). **ತಡಂಗಾಲ್ಪೊಯ್** : ತೊಡರೆ ತಡಂಗಾಲ್ಪೊಯ್ದೊಡೆ ಕೆಡದುಂ

. . . ಮೋದಿದೊಡಿರದಲ್ಲಡಗಾಗಿ ಮಡಿದು ಬಿಬ್ಬುವು ಗಡಣದ ಕರಿಘಟಿಗಳೇಂ ಬಲಸ್ಥನೋ ಭೀಮಂ (ಪಂಪಭಾ. ೧೧-೬೮); ಎನಿತಾನುಂ ಕುತ್ಸಿತಮಪ್ಪುದಾಹರಣೆಗಳಂ ತೋಱಿ ಶೂನ್ಯವಾದಮಂ ಮಾಡಿ ತಡಂಗಾಲ್ಗೊಯ್ಯುದುಂ ಸಂಘಶ್ರೀಯ ವೃಥಾಲಾಪಕ್ಕೊಳಗಾಗಿ (ಧರ್ಮಾಮೃ. ೧೧-೧೫೭): ನೂಪುರದುಲಿಯ ಸನ್ನೆಗೆ ಬನ್ನನೆ ಬಂದು ಮಲ್ಲಡಿಗಳಂ ತಡಂಗಾಲ್ಗೊಯ್ಯರ ಸಂಚೆಗಂಜಿಸೆ . . . ಮಣಿಗಂಭವಮನಿಂಬುಗೊಳ್ವ ಮಂದಗಮನೆಯರಿಂ (ಧರ್ಮನಾ. ೨-೧೩೨ ಪ). [ ತಡಂಗಾಲ್ + ಪೊಯ್$_1$ ]

**ತಡಂಗಿಡಿಸು**, ತಡಗೆಡಿಸು (ಕ್ರಿ). ನೆಲೆಗೆಡಿಸು; ಆಧಾರವಿಲ್ಲದಂತೆ ಮಾಡು; ನಿರಾಧಾರಗೊಳಿಸು : ಸಿಂಧುತೋಯದಂತೆಬಿಗದರು ತಡಂಗಿಡಿಪ ನಮ್ಮರನುರ್ವಿಪ ರಾಜಲೀಲೆ ಕಣ್ಗೆಱಿದುದು ಪುಷ್ಪದಂತ ಮಹಿಪಾಳನೊಳತ್ಯ ಮಳಾರ್ದ್ರಶೀಲನೊಳ್ (ಪುಷ್ಪಪು. ೦೩-೬). **ತಡಗೆಡಿಸು** : ಗಿಡುವುಗಿಸಿತ್ತು ಪಾಂಡುಸುತರಂ ಯದುವಂಶವನೊರ್ವರೊರ್ವರಿಂ ತಡಗೆಡಿಸಿತ್ತು . . . ಮಿಕ್ಕರಂ ಬಿಡುವುದೆ ಬಾತೆಗೆಟ್ಟ ವಿಧಿ (ನಳಚಂ. ೬೪೩).

[ ತಡ$_3$ + ಕಿಡಿಸು (<ಕೆಡಿಸು$_1$) ]

**ತಡಂಗು** (ನಾ). ಕುದುರೆ ಸವಾರ ಕಾಲಿರಿಸಿಕೊಳ್ಳಲು ಇರುವ ಸಾಧನ ; ರಿಕಾಪು (?).

**ತಡಂಗಿನವ** = ರಿಕಾಪು ಹಿಡಿಯುವವನು ; ಕುದುರೆ ಚಾಕರ (?): ಇಬ್ಬರೂ ಕುದುರೆಗಳನ್ನೇರಿ ಎದುರಲ್ಲಿ ನಾಲ್ಕು ಜನ ಹರಿಕಾರರನ್ನು ಬಿಟ್ಟುಕೊಂಡು ಜೊತೆಗೆ ನಾಲ್ಕು ಜನ ತಡಂಗಿನವರೊಂದಿಗೆ ಅಪ್ಪಂಗೊಳಕ್ಕೆ ಹೊರಟರು (ಚಿಕರಾ. ೩೪೨); ಅರಸ . . . ತಡಂಗಿನವನ ಸಹಾಯದಿಂದ ಕುದುರೆಯಿಂದಿಳಿದನು (ಚಿಕರಾ. ೩೪೫). [ ? ]

**ತಡಂಗುಂಡಿ** (ನಾ). ಸುತ್ತಲೂ ಕಟ್ಟೆಯಿರುವ ನೀರಿನ ಗುಂಡಿ ; ಕೊಳ ; ಸರೋವರ : ಸರಸಿಜದ ಸಿರಿಯ ನಾಣವಹರಿಸಂ ಮನ್ಮುಖದಿನದುವೆ ನಿಜಮೆಂದು ತನೂದರಿ ತಂಡ[ ತಡಂ ]ಗುಂಡಿವುಗುವವೊಲರಸನ ಕೆಲದಲ್ಲಿ ಮುೞುಗಿದಳ್ ನಲಿದೊರ್ವಳ್ (ಚಂದ್ರಪು. ೬-೦೩೭); ಕರ್ಮಡುವಿನ ತಡಂಗುಂಡಿಯೊಳಡಂಗುವುವು (ರಾಮಾಶ್ವ. ೩-೧೯); ತಡಂಗುಂಡಿಯೊಳೊತ್ತಿ ಬಾಳ್ಗಿಡಿಪ ಸಂಧಾನಕ್ಕೆ (ಸಂಸಪ. ೧೯-೧೦). [ ತಡ$_3$ + ಗುಂಡಿ$_2$ ]

**ತಡಂಗೂಡು** (ಕ್ರಿ). ಬೆರಸಿಕೊಳ್ಳು ; ಕೂಡಿಕೊಳ್ಳು : ತಳರಂ ತೂಗಿ ಪರಾಗಮಂ[ ಪೊರೆ ]ದು ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು . . . ಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೬). [ ತಡ$_3$ + ಕೂಡು$_1$ ]

**ತಡಂಗೆಡೆ** (ಕ್ರಿ). ಕಂಸಿದು ಬೀಳು; ತತ್ತರಿಸಿ ಬೀಳು; ನೆಲೆಗೆಡು : ಓರಿಯ ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗದಂಪತಿಗಳಂ (ಗಿರಿಳ. ೧-೧೩೮ಪ); ಬೆದಱಿದುದಭ್ರಮೂರಮಣನೊಟ್ಟಜೆಗೆಟ್ಟುದು ಪುಂಡರೀಕವಟ್ಟುದು ಕುಮುದಂ ತಡಂಗೆಡೆದುದಂಜನಂ (ಪುಷ್ಪಪು. ೫-೮).

[ ತಡ$_3$ + ಕೆಡೆ$_1$ ]

**ತಡಂತಡಿಸು** 'ತಡತಡಿಸು' ನೋ.

**ತಡಂತೊಡರ್**(ಕ್ರಿ). ಸಮನಾಗಿ ತೊಡಕಿಕೊಳ್ಳು; ಚೆನ್ನಾಗಿ ಸೇರಿಕೊಳ್ಳು: ಸಂಚಳ ಮಿನಸಂಚಯಂ ಪೊದುೞುಗಲ್ ತಡಂತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಿಂ ನಿೞಿಗೊಂಡು ಬಟಲ್ದ ಭಂಗಿಯಿಂ (ಅರ್ಧನೇ. ೦-೬೧). [ ತಡ$_3$ + ತೊಡರ್$_1$ ]

**ತಡಂನುಡಿ** (ನಾ). ನಿಧಾನವಾಗಿ ಆಡುವ ಮಾತು; ತಡೆದು ತಡೆದು ಆಡುವ ಮಾತು : ನಡೆತಂದರ್ ಚೆಲ್ವಿಂದೊಲ್ನುಡಿಯ ತಡಂನುಡಿಯ ತೊದಳ ನುಡಿಯೊಳ್ವೆಂಡಿರ್ (ಜಗವಿ. ೪-೦೩೭). [ ತಡ$_1$ + ನುಡಿ$_2$ ]

**ತಡಂಬಡ** 'ತಡಬಡ' ನೋ.

**ತಡಂಬಡಿಸು** 'ತಡಬಡಿಸು' ನೋ.

**ತಡಂಬಡು$_1$** (ಕ್ರಿ). ತಡಮಾಡು ; ವಿಳಂಬಮಾಡು : ಈಗಳೆನಸುಂ ತಡಂಬಡದೆ ಬಣ್ಣಿಸಿ ನಿನತೊಂದೊಲ್ಮೆವಡೆದಪೆಂ (ರಾಮಾಶ್ವ. ೮೮-೧೫); ತಡಂಬಡದಯ್ಯನ ನೇಹದಿಂ ತಾಂ ಮಱುಗದೆ ಬಗೆಗುಂದದೆ ಕಾಂತನಂ ರಣಕೆ ಬೀೞ್ಕೊಟ್ಟಳ್ (ರಾಮಾಶ್ವ. ೧೩೦-೫).

[ ತಡ$_1$ + ಪಡು$_1$ ]

**ತಡಂಬಡು$_2$** 'ತಡಬಡು' ನೋ.

**ತಡಂಬಡು$_3$** (ಕ್ರಿ). = ತಡಂಬಡೆ : ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕ ರತ್ನಗರ್ಭಶುಕ್ತಿಕೆ ಪೆಱಿಯೊಳ್ ತಡಂಬಡೆ ಸುಧಾರ್ಣವವೊಪ್ಪಿದುದುದ್ಗತಾರ್ಣವಂ (ಜಗವಿ. ೦-೪೪).

[ ತಡ$_3$ + ಪಡು$_1$ ]

**ತಡಂಬಡೆ** (ಕ್ರಿ). ಸಮಂಕ್ಕೆ ಬರು; ಸಮಾನತೆಯನ್ನು ಪಡೆ; ಸರಿಯಾಗು: ಹೀರಮನೊಂದಿಸಿದ ಹಾರಮನುರಸಿಜಕೆಳಲಿಟ್ಟು ಸುಧಾಗಾರಮನೇಱಿ ತಡಂ[ಪಾಠಾಂ. ಜುತೆದ್ದಂ]ಬಡೆದಳ್ ನೀಹಾರಮಹೀಧರವಂ ಪರ್ವಿದ ಶೃಂಗಾರವಮರುಲ್ಲತೆಗೆ (ಅದ್ಯಚೇ. ೪-೪೪).

**ತಡತಡಂಬಡೆ** (ದ್ವಿರುಕ್ತಿ) : ತುಂಬಿಗುರುಳೊಳ್ ತಡತಡಂಬಡೆದು ತುಂಬಿಗಳ ಬಿಂಬವೆಳಸುತಿರೆ (ಸೂಕ್ತಿಸು. ೦೩-೧೦). [ ತಡ$_4$ + ಪಡೆ$_1$ ]

**ತಡಂಬರ್**, ತಡವರ್ (ಕ್ರಿ). ೧. ತಡವಾಗಿ ಬರು; ನಿಧಾನವಾಗಿ ಬರು (?) : ಮತ್ತೊಂದು ದಿವಸಂ ಪ್ರಭಂಕರಿಯೆಂಬ ಕೊಳದೊಳ್ ಸ್ವೇಚ್ಛೆಯಿಂ ನೀಡುಂ ಕ್ರೀಡಿಸುತ್ತಂ ತಡಂಬಂದು ಮನಃಪೂರ್ವಕಮಲ್ಲದೆ ಪೊಱಮಡುವಾಗಳ್ (ವಡ್ಡಾರಾ. ೩೬-೩೦). **ತಡವರ್** : ೨. ಅಡ್ಡಿ ಬರು: ತಲೆಗರೆಯದಣ್ಣ ಸತ್ತರ ತಲೆಗಳನಟ್ಟಿಯೊಳವರ್ಚಿಕೊಂಡೊಯ್ಯೆಡೆಯೊಳ್ ತಲೆ ತಡವರಲವರಿಯರೇಂ ತಲೆಯಂ ತಲೆವಿಡಿದು ಬಿಡದೆ ತಲೆವತ್ತಿದರೋ (ಪಂಪಭಾ. ೦೩-೫೬); ನಟ್ಟಿರೆ ಕಿವಿಯುಂ ಕಣ್ಗಳ್ ಬಿಟ್ಟಿರೆ ಮೆಯ್ಯಱಿಯದೆಱಿಗಿ ತಡವಂದು ತಡಂಮೆಟ್ಟಿ . . . ಕರಂ ವಿಕಲನಾದ ತುರಗಂ ಸಾಯ್ತುಂ (ಅಕ್ಷಪಾ. ೧೧-೪೬). [ ತಡ$_1$ + ಬರ್$_1$ ]

**ತಡಂಬರ** (ನಾ). ಕಳವಳ; ಗಾಬರಿ; ಸಂಕಟ; ತಲ್ಲಳ (ತಲ್ಲಣ), ತಳಮಳ, ತಡಂಬರ, ಕಳವಳ, ಸಿಡಿಮಿಡಿ, ಕಸಿವಿಸಿ, ಬೇಗುದಿ, ಅಳಲು, ತೊಳಲು (ಕಂನುಹು. ೮೪). [ ? ]

**ತಡಂಬರಿ** (ಕ್ರಿ). ೧. ಮುನ್ನುಗ್ಗು (?) : ತಳರೆ ತಳರ್ಚ್ಚುವಂಗೆ ಕನಕಾಚಳ ಮೊತ್ತುವವಂಗೆಲೇ ವಿಯತ್ತಳಮಲರ್ವ್ವಂಗೆ ತೀವಿ ತೆಗೆದಂಬು ತಡಂಬರಿವಂಗೆ ಕಂಟಕಪ್ರಳಯಂ . . . ಚಟ್ಟಮನೆಂಬ ಜೆಟ್ಟಿಗಂ. (ಎಪಿ. XI. ದಾವಣ. ೪೩-೪೮ ; 1164). ೨. ಹೊರಹೊಮ್ಮು-ಸೂಸಂ : ಮುಸುಂಕುವ ಕುಂಕುಮಾಂಬು ಸಂಕುಲದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡಿಮಿಂಚುಗಳ್ ತಡಂಬರಿವವೊಲೇಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲ ತಾಂಗಿಯರ್ (ಅನಂಪು. ೬-೨೮).

**ತಡಂತಡಂಬರಿ** (ದ್ವಿರುಕ್ತಿ) : ಪಿಡಿದರಂಗನೆಯಂ ಪಿಡಿದೊಯ್ದರೆಂದು ತಲ್ಲಟಿಸಿ ತಡಂತಡಂಬರಿಯ ಪುಯ್ಯಲ ಗಾವಳ ಕೆಯ್ಯನಿಟ್ಟುದೀ ತೊಟಿಸಿದ ಪಾಂಗೆ ಕಟ್ಟಲೆ ಕಟಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೧-೬೩).

[ ತಡ$_2$ + ಪರಿ$_2$ ]

**ತಡಂಬರೆ$_1$** (ನಾ). ಅಡ್ಡಿಪಡಿಸುವಿಕೆ ; ಪ್ರತಿಭಟನೆ: ತಳ್ಪೊಯ್, ತಡಂಬರೆ ಪೋರ್ಕುಳಿ . . . ವಿಗು, ತಡಂಬೊಯ್ . . . – ಈ ೨೫ ಪ್ರತಿಹತಕ್ಕೆ ಪೆಸರ್ " (ಕಶಸಾ. ೦೫-೨೯೬) ; " ತಡಂಬರೆಯು ಪ್ರತಿಹತಾಖ್ಯಂ " (ಕವಿಕಂ. ೦೩೯). [ ತಡ$_1$ + ಬರ್$_1$ + ? ]

**ತಡಂಬರೆ$_2$** (ನಾ). ಸಮನಾದುದು: " ತಡಂಬರೆಯುಮೆಂದು ಸಮನೆನಿಪುದಕ್ಕೆ ನಾಮಂ " (ಅಭಿಕ್ಷೆ. ೬೯).

[ ತಡ$_3$ + ಬರ್$_1$ + ? ]

**ತಡಂಬಾಯ್**, ತಡವಾಯ್, ತಡವಾಯಂ, ತಡಹಾಯು (ಕ್ರಿ). ೧. ಅಧಿಕವಾಗು; ಅತಿಶಯವಾಗು; ಮೇರೆಮೀರು: ಬಲ್ಲಂ ನಿಷಾದಿಗಳಂ ದೊಲ್ಲದೆ ಕಟ್ಟಿ ಗೇಣೊಳೆ ತಡಂಬಾಯ್ದುಯ್ದು ತದ್ವೈರಿಯೋಧಿಗಳಂ ತಾನನೆ ತಕ್ಕಿನೆಕ್ಕತುಳದಿಂ ಕೈಯಾರ್ವಿನಂ ಕಾದಿದರ್ (ಚಂದ್ರಪ್ರ. ೧೦-೮೩). **ತಡವಾಯ್** : ೧. ಹೊತ್ತುವದೆಗಳ ಹೊಗೆವ ಮೋಟೆಯ ಕಿತ್ತಡದ ಕಡುಗೋಪ ಸುವತ[ಪಾಠಾಂ. ಸಮತೆ]ಗಳಿತ್ತಡಿಯ ತಡವಾಯ್ದು ನೃಪ ರೈತಂದರೊಗ್ಗಿನಲಿ (ಕುಮಾ.ಸ. ೧೬-೬೭). ೨. ಸಮನಾಗು; ಸಾಟಿಯಾಗು: ವರವರಧವಳಾಂಗದ್ಯುತಿ ಚರಚರದೂರ್ವಿ ಸ್ಫುಟತ್ತಟೋಚ್ಛಲ ಫೇನೋತ್ಕರಕರದೊಳ್ ತಡವಾಯ್ದಿರೆ ಪರಿಪರಿ ರಂಜಿಸುವುದೊಂದು ಕೊಳನಂ ಕಂಡಂ (ಜಗವಿ. ೧೦-೩೮); ಅಳಿಗೆ ಕುರುಳ್ ತಳಿರ್ಗೆ ತಳಂ ಕಳಿಕೆಗೆ ಬೆರಲ್ಪಲರ್ಗೆ ಕಣ್ಮಲರ್ ದೊರೆಯೆನೆ ಕೋಮಳಲತೆಗಳೊಳಂ ಸಲೆ ಕೋಮಳೆ ಯರ್ ತಡವಾಯ್ದುರೆಯ್ದೆ ಪೂಗೊಯ್ಯೆಡೆಯೊಳ್ (ಚಂದ್ರಪ್ರ. ೬-೯೯). **ತಡವಾಯು** : ೧. ರಾಯರೆಲ್ಲರ ಗೆಲಿದು ತಂದೆನು ನಾಯಕವನನುಪಮಿತ ಮೌಲ್ಯವನಮಲ ಮೌಕ್ತಿಕವ ತಾಯ ಚಿತ್ತೈಸಿದಿರೆಯೆನೆ ತಡ[ಪಾಠಾಂ. ಕಡೆ] ವಾಯಿದಳು ತನಿಹರುಷದಲಿ ಲೇಸಾಯಿತೈವರು ಕೂಡಿ ಭೋಗಿಪುದೆಂದಳಾ ಕಂತಿ (ಕುಮಾ.ಆ. ೧೬-೬). **ತಡಹಾಯು** : ೩. ಎಲ್ಲೆಯನ್ನು ದಾಟಿ ಹೋಗು ; ನುಗ್ಗಿಹೋಗು : ಕೊಪ್ಪರಿಗಗೆಳೇಳನು ತಡ[ಪಾಠಾಂ. ಟ] ಹಾಯಲೆಸೂವೆನು (ಕುರಾಸಾಂ. ೧೮-೮೦) ; ಹೆಣ್ಣಾನೆಯು ಅದನ್ನು ತಡ ಹಾಯ್ದು ಬೇರುಸಹಿತವಾಗಿ ಕೆಡವಿದಂತೆ ಆಯಿತು (ತುಳಸಿ. ೦೦೪).

[ ತಡ$_{3}$ + ಪಾಯ್$_{1}$ ]

**ತಡಂಬುಗಿಸು** (ಕ್ರಿ). ಕೂಡಿಸು ; ಸೇರಿಕೊಳ್ಳುವಂತೆ ಮಾಡು; ಬೆರಸು: ಆ ನರ್ತಕಿಯರ ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂ ಬುಗಿಸೆ (ಅನಂಪು. ೦೦-೨೩ಅ). [ತಡಂಬುಗು (<ತಡಂಬೊಗು)+-ಇಸು$_{3}$]

**ತಡಂಬುಗು** 'ತಡಂಬೊಗು' ನೋ.

**ತಡಂಬೂರು** (ನಾ). ಒಂದು ಊರಿನ ಹೆಸರು: ಪರಮೇಶ್ವರ ದತ್ತಿಯಾಗಿ . . . ಗುಡಿಯಊರು ತಡಂಬೂರು . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಇಅ. ೦೦೯-೦೩-೩೩ ; 1050). [ ? + ಊರು$_{3}$ (<ಊರ್) ]

**ತಡಂಬೊಗು**, ತಡಂಬುಗು (ಕ್ರಿ). ಒಂದರೊಡನೊಂದು ಸೇರಿಕೊಳ್ಳು; ಸಮನಾಗಿ ಬೆರೆ ; ಮಿಶ್ರವಾಗು : ದೆಸೆಯಂ ತಳ್ಪೊಯ್ವ ಕೀರ್ತಿಪ್ರಸರ ದೊಡನೆ ಕಾಲ್ಪೊಡ್ಡಿ ತೀವ್ರಪ್ರತಾಪಂ . . . ಧರ್ಮಾವಸಥಂ ತಾನಾಗೆ ದಾನೋನ್ನತಿಯೊಡನೆ ತಡಂಬೊಕ್ಕು ಸತ್ಯಬ್ರತಂ (ಎಕ. V. ಚನ್ನರಾ. ೨೦೩-೯; 1223). **ತಡಂಬುಗು** : 'ತಡಂಬುಗಿಸು' ಪರಾ. [ ತಡ$_{3}$ + ಪೊಗು ]

**ತಡಂಬೊಯ್**$_{1}$(ಕ್ರಿ). ೧. ವಿರೋಧಿಸು; ಪ್ರತಿಭಟಿಸು. ೨. ಜೋರಾಗಿ ಹೊಡೆ (?) : ಪಿಡಿದೊಂದೊಂದಱ ಗಾತ್ರಮಂ ತಿರಿಪಿಕೊಡೊಂದೊಂದ ಱೊಳ್ ಪೊಯ್ದು ಮಲ್ಲಡಗಪ್ಪನ್ನೆಗಮೆತ್ತಿಕೊಂಡಸಗಪೊಯ್ಲ್ಗೊಳ್ ತಡಂ ಬೊಯ್ದುಂ[ಪಾಠಾಂ. ಪೊಯ್ದುಪತುಂ, ಪೊಯ್ದುಂ, ಪೊಯ್ದೊಯ್ದು] . . . ಕೊಂದಂ ಮದೇಭಂಗಳಂ (ಪಂಪಭಾ. ೧೦-೦೦೪) : "ಬಿರುಸಾಗಿ, ಜೋರಾಗಿ ಹೊಡೆದಂ " (ಪಂಪದೀ. ೩೭೪). [ ತಡ$_{1}$ + ಪೊಯ್$_{1}$ ]

**ತಡಂಬೊಯ್**$_{2}$ (ನಾ). ಅಡ್ಡಿಪಡಿಸುವಿಕೆ; ಪ್ರತಿಭಟನೆ : " ತಳ್ಪೊಯ್, ತಡಂಬರೆ . . . ತೊಡರ್, ಉರ್ಕೇರ್ಕೆ, ಮಿಗು, ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್ " (ಕಶಸಾ. ೧೩-೨೯೬). [ ತಡ$_{1}$ + ಪೊಯ್$_{2}$ ]

**ತಡಂಮಾಡು**, ತಡಮಾಡು$_{1}$ (ಕ್ರಿ). ತಬ್ಬಿಬ್ಬುಗೊಳಿಸು; ದಾರಿತಪ್ಪಿಸು ; ತಳ್ಳಂಕಗೊಳಿಸು : " ತಡಮಾಡು, ತಡಂಮಾಡು – ವಿಪರ್ಯಾಸೇ (ದಾರಿ ತಪ್ಪಿಸು) " (ಕಮುಧಾ). **ತಡಮಾಡು** : ೧. " ತಡಮಾಡಿದಂ=ತಳ್ಳಂಕ ಗೊಳಿಸಿದಂ " (ಕಮುದ. ಪರಿ. ೨): " ತಡಮಾಡಿದನೆನಲ್ಕೆ ತಳ್ಳಂಕಗೊಳಿಸಿದಂ" (ಕಬ್ಬಿಗ. ೯೦). [ ತಡ$_{4}$ + ಮಾಡು$_{1}$ ]

**ತಡಂಮೆಟ್ಟು**, ತಡಮೆಟ್ಟು (ಕ್ರಿ). ೧. ಸಾವಕಾಶವಾಗಿ ನಡೆ; ನಿಧಾನಿಸು: ಚತುರಂಗಂ ಚತುರಂಗಸೈನ್ಯದೊಳಡು[ರ್ತಂ]ತಿಬ್ಬನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೦-೬) ; ಗುರುಜಘನಭರಂಗಳಿಂ ತಡಂ ಮೆಟ್ಟುತುಂ . . . ಸೀತೆ ಸೆಡೆದು ಮೆಲ್ಲನೆ ನಡೆದಳ್ (ಪಂರಾಮಾ. ೬-೨೬) ; ಮೆಯ್ಮಱಿಯದೆಱಗಿ ತಡವಂದು ತಡುಮೆಟ್ಟಿ ತಿದಿಯಂತೆ ಬಾತಿರೆ ಪೊಟ್ಟೆ ಕರಂ ವಿಕಲನಾದ ತುರಗಂ ಸಾಯ್ದುಂ (ಅಶ್ವಶಾ. ೦೦-೪೬). ೨. (ಭಯ ದಿಂದ) ಮುಗ್ಗರಿಸು : ಬೆರ್ಚಿ ಪೊಳೆದು ಪರಿವ ಪೊಳೆವುಲ್ಲೆಗಳುಮಂ . . . ಸೋಂಕಿ ಪರಿವೆಯ್ಗಳುಮಂ ತಡಂಮೆಟ್ಟಿ ಪರಿವ ಕಡವಿನ ಕಾಡೆಮ್ಮೆಯ ಮರಿಯ ಹಿಂಡುಗಳುಮಂ (ಪಂಪಭಾ. ೩-೪೮ ವ). **ತಡಮೆಟ್ಟು**: ಹರಳೊತ್ತಿ ಸೆಡೆವುತಂ . . . ಗುರು ಜಘನ ಭಾರದಿಂ ತಡಮೆಟ್ಟುತಂ(ಕುಮುರಾ. ೬-೩).

**ತಡತಡಮೆಟ್ಟು** (ದ್ವಿರುಕ್ತಿ) : ಜೋಲ್ವ ರ್ಝೋಂಪಿಸುವ ಭಂಗಿ ಮನಂ ಗೊಳೆ ತಕ್ಕಿನೆಕ್ಕೆಯೊಳ್ ತಡತಡಮೆಟ್ಟಿ ಪಾಡಿ ಪೊಸಕಳ್ಗಳನೀಂಟಿದುದಂಗ ನಾಜನಂ (ಸೂಕ್ತಿಸು. ೧೩-೬) ; ಕಡಲಿಟ್ಟೆಳೆವ ಕಂಬನಿಯ ತಡತಡಮೆಟ್ಟಿ ಬಳಲುತ ಬಳುಕುತೇಳುತ . . . ಗೋಳಿಸಲಖಿಳಜನ ನಡೆತಂದುದರಮನೆಗೆ (ನಿಭಾಗ. ೪-೧೨-೩). [ ತಡ$_{1}$ + ಮೆಟ್ಟು$_{1}$ ]

**ತಡಕಯ್** 'ತಡಕೆಯ್' ನೋ.

**ತಡಕಲ್** (ನಾ). ಒಂದು ಊರಿನ ಹೆಸರು. Pಈಗಿನ ಮಹಾರಾಷ್ಟ್ರದ ತಡಿಖೇಲ್ : ದೆಯಿಗಾವೆಯ ತಡಕಲ್ಲೆಡೆವೊಲದಲೆರಡೂರ ಪ್ರಜೆಗಳ ಸನ್ಮತದಿಂ ಬಿಟ್ಟ ಕರಿಯ ನೆಲಂ (ನಾಂದೇಡ್. ೮-೩೪ ; 1070) ; ತಡಕಲ್ಲ ಪ್ರಭು ದಣ್ಣನಾಯಕಂ ನಾಗವರ್ಮ್ಮಯ್ಯನುಂ (ನಾಂದೇಡ್. ೮-೪೧; 1070).

[ ? ]

**ತಡಕಸ** 'ತಡಗಸ' ನೋ.

**ತಡಕಾಟ** (ನಾ). ಹುಡುಕಾಟ ; ಅರಸುವಿಕೆ: ಒಡಕುಬಾಯಿಯ ಸಿಡುಕು ಕಿಡಕುನುಡಿ ಮಾರ್ನುಡಿಯ ತಡಕಾಟ ಪರಿದಾಟವೆನಿತುವರೆಗೆ (ಧಾಶಚೀ. ೨-೩೪). [ <ತಡಕಾಡು ]

**ತಡಕಾಡು** (ಕ್ರಿ). ೧. = ತಡಕು ೧: ಕತ್ತಲಲ್ಲಿ ತಡಕಾಡುವವನಿಗೆ ಬೆಳಕು ಸಿಕ್ಕಂತಾಯಿತು (ಹಂಗೀತ. ೮೬); ಬೆಂಕಿ ಪೊಟ್ಟಣಕ್ಕಾಗಿ ಅಂಗಿಯ ಕಿಸೆಗಳನ್ನು ತಡಕಾಡಿದ (ಹುಚ್ಚುಹ. ೨); ಒಂದೊಂದು ದಿನ ನನಗೆ ಪಾಠ ಹೇಳಿ ಕೊಡು ವಾಗ ಮಾತಿಗೆ ತಡಕಾಡಿ,ಜ್ಞಾಪಕಕ್ಕೆ ಬರದೆ, ಆತನಿಗೆ ನಾಚಿಕೆಯಾಗುತ್ತಿತ್ತು (ನಿಬಂಧ. II, ೭೮). ೨. = ತಡಕು ೨ : ಅವನ ಮಾತುಗಳು ನೇರವಾಗಿ ಹೃದಯವನ್ನು ತಡಕಾಡಿದವು (ಮುಹಾಕ್ಕಾ. ೭೩). [ ತಡಕು + ಆಡು$_{1}$ ]

**ತಡಕಿಲು** (ನಾ). ಒಂದು ಬಗೆಯ ಔಷಧಿ ಸಸ್ಯ: ತಡಕಿಲು ಬೇರನ್ನು ಗೋ ಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು(ಸಕವೈ.ಪರಿ.೯೩೩). {?}

**ತಡಕಿಸು** (ಕ್ರಿ). ತಡಕುವಂತೆ ಮಾಡು ; ಹುಡುಕಿಸು : (+).

[ ತಡಕು + – ಇಸು$_{3}$ ]

**ತಡಕು** (ಕ್ರಿ). ೧. (ಕತ್ತಲಲ್ಲಿ) ಕೈಯಾಡಿಸಿ ನೋಡು ; ತಡವರಿಸು ; ಹುಡುಕು ; ಅರಸು : ಬೆಟ್ಟಂಗಾಡನಡರ್ದು ಪೊಕ್ಕು ತಡಕುತ್ತಾ ದಿಟ್ಟಿ ಮುಂಗೆಟ್ಟು(ಹಮ್ಮೀರ. ೮-೩೩); ಒಂದು ಗೊಂಟನೊಳಾನಿರಲ್ಕೆ ಕರತಳದಿಂದೆ ತಡಕಿ ಕಂಡೆನ್ನ ತಲೆಯಂ ಸೋಣೆದು (ಪಾಸೋಪು. ೧೧-೨೯); ಬರೆಬರೆದಂತದಂ ತೊಡೆದು . . . ಒಂದುಮಂ ಸರಸ ಪದಾರ್ಥಮಂ ತ[ಪಾಠಾಂ. ತು]ಡಕಿ ಕಾಣದೆ. ಕಳ್ದು ಪರೋಕ್ತಿಯುಕ್ತಿಯಂ (ರಾಜಶೇ. ೦-೨೩) : ಪುಣ್ಯಭೂಮಿ ಗಳಲ್ಲೆಲ್ಲಾ ವ್ಯಾಪಿಸಿ ತಡಕಿ ನೋಡಿದಾಗ್ಯೂ . . . ಕಾಣದೆ (ಅರ್ಕಾವಿ. ೨೯ ಸೂಚನೆ.) : ಎರಡೂ ಜಗಲಿಗಳನ್ನು ತಡಕಿ ನೋಡಿದ (ಅನಾಥ ೦೪೨). ೨. ತಗುಲು ; ತಾಕು ; ಮುಟ್ಟು : ಕಣಜದಲ್ಲಿನ ಅಕ್ಕಿ ತೆಗೆ ಯುವುದಕ್ಕೆ ಕೈಹಾಕಿದ ತುಳಸಾಬಾಯಿಗೆ ಕೈಗೆ ಏನೋ ತಡಕಿದ ಹಾಗಾ ಯಿತು (ನಡೆದಾ. II, ೮೩೪). 'ತಡವು$_{1}$' ಪರಾ.

**ತಡತಡಕು** (ದ್ವಿರುಕ್ತಿ) : ಆ ನೆನಹಿನೊಸಗೆಗಳ ನಿಧಿಗೊಳುತ, ಗುಡಿಯ, ನಿಂತ ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು ತಡತಡಕಿ ತೀರದಂತೆ (ಪುಳದೀ. ೨-೧೧). [ <ತಡವು$_2$ + - ಕು ]

**ತಡಕೆ** 'ತಡಿಕೆ' ನೋ.

**ತಡಕೆವಂದ್ಯ** 'ತಡಿಕೆವಂದ್ಯ' ನೋ.

**ತಡಕೆಯ್**, ತಡಕಯ್, ತಡಕ್ಕೈ, ತಡೆಕ್ಕೈ (ನಾ). ಅಪ್ಪುಗೆ ; ತಕ್ಕೆ ; ಆಲಿಂಗನ: "ಪಟ್ಕೆತಟ್ಕ್ಯಸಿದಂ[ಪಾಠಾಂ. ಬಳ್ಕಿ ತಟ್ಕ್ಯಸಿದಂ, ಪಟ್ಕ್ಯಸಿದಂ]= ತಡಕೆಯ್ಯಂ[ಪಾಠಾಂ. ಕಯ್ಯಂ, ಕೈಯಂ, ಕೈಸಂದು]ಮಾಡಿದಂ" (ಕಮದ. ಶಬ್ದ. ೧). **ತಡಕಯ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಡಕ್ಕೈ**: "ಪಟ್ಕಿ ತಟ್ಕ್ಯಸಿದನೆಂಬಲ್ಲಿ ತಡಕ್ಕೈಯ್ಯಂ ಮಾಡಿದನೆಂಬರ್ಥಂ" (ಕಮದ. ೧೯ ಪ್ರಯೋ). **ತಡೆಕ್ಕೈ**: ವ್ಯಡನತಿ ಸಂತಸದಿಂದಂ ತಡೆಕ್ಕೈಯಂ ಮಾಡಿ ಮುದ್ದಿಸುತ್ತಿನಿವಾತಂ ನುಡಿವುತ (ವೀರಪಿ. ೮-೫೧). [ <ತಟಿಕ್ಕೆ ]

**ತಡಕ್ಕೈ** 'ತಡಕೆಯ್' ನೋ.

**ತಡಗ** (ನಾ). ಗಂಟು ; ಮೂಟೆ : ದೇವಾಂಗವಸ್ತ್ರಂಗಳು ಮುಂತಾದ ಸರಿತಡಗ ಗಂಧ ಕಸ್ತೂರಿ ಕರ್ಪೂರ ಬಾಳು ಜವಾದಿ . . . ಮುಂತಾದ ಸಮಸ್ತ ಬೆವಹಾರಕೆಉ (ಎಕ. XII, ಸಿರಾ.೭೬-೧೯; 1370): ಪಠ್ಠಾವಳಿ ಮಂಜಿಷ್ಠಿಯ ಕಾಂಚಿನಾಲದ ಜವಳಿಯ ತಡಗದ[ ವ ]ಬೀಜಾದರು (ಜ್ಞಾನಸಿಂ. ೬-೭೩) : ಗುಡಿ ಗೂಡಾರ ಸರಾತಿಪೆಟ್ಟಿಗೆ ಬೋನ ಗುಡಿಕೆ ನೂತನ ವಸ್ತ್ರಗಳ ತಡಗಗಳಾದಿ ನಾನಾ ಹೊಟಕಾಆರ ಗಡಣವೆಸೆದುದಲ್ಲಲ್ಲಿ (ರಾಮವಿ. ೬-೦೩) : ಉರಿಯ ಮಳೆ ಸಂಗಡಿಸಿದೆಡೆಯೊಳು ಸಸಿದ ಹತ್ತಿಯ ತಡಗಮುಳಿವುದೆ (ಅಂಬಿಕಾ. ೩೦-೨೧). [ ? ]

**ತಡಗಡಿ** 'ತಡಂಗಡಿ' ನೋ.

**ತಡಗಣೆ** 'ತಡಗುಣೆ' ನೋ.

**ತಡಗಸ**, ತಡಕಸ (ನಾ). ಕ್ಷೋಭೆ ; ತೊಂದರೆ ; ಅಪಾಯ ; ಕೇಡು : "ತಡಗಸಮನಲುಪಹತಿಯಕ್ಕು" (ಜಕುನಿ. ೨೦೨) ; ಕಾಯ ತಡಗಸವ ಪರಿಹರಿಸು ಎಂದಾಣತಿಯನಿತ್ತು (ಕಗದ್ಯ. ೬೯). **ತಡಕಸ** : "ತಡಕಸ [ಪಾಠಾಂ. ತಡಗಸ, ಗಡಗಸ]ಮನಲುಪಹತಿಯಕ್ಕು" (ಛಾಉವಿ. ೬೦). [?]

**ತಡಗಾಲ್** 'ತಡಂಗಾಲ್' ನೋ.

**ತಡಗು** (ಕ್ರಿ). ತಡೆ ; ಅಡ್ಡಿಪಡಿಸು : ಇಂತಪ್ಪವಂ ತಡಗ[ಪಾಠಾಂ. ಸ] ಲಾಗದೆಂಬುದುತ್ತರ ವಾಕ್ಯಂ (ನೀತಿವಾ. ೨೪-೧೧).
[ ದೇ.I ತಮಿ. ಮಲ. ತಟುಕ್ಕು ]

**ತಡಗುಂಡಿಗೆ** (ನಾ). ಜಲಪಾತ್ರ : "ತಡಗುಂಡಿಗೆಯನಲ್ಕಿ ತಾಂ ಜಲಪಾತ್ರ [ಪಾಠಾಂ. ಜಲಪ್ರತ್ಯಯಾಖ್ಯಂ]" (ಅಭಿಕೈ. ೬೩). [ ತಡ$_1$ + ಗುಂಡಿಗೆ ]

**ತಡಗುಣೆ**, ತಡಗಣೆ, ತಡುಗಣೆ, ತಡುಗುಣೆ (ನಾ). ಒಂದು ಬಗೆಯ ದ್ವಿದಳಧಾನ್ಯ; ಅಲಸಂದೆ; ಕಾರಾಮಣಿ: ಹೆಸರು ತಡಗು[ಪಾಠಾಂ. ಗ]ಣೆ ಕಡಲೆತೊಗರಿಗಳ ಬೇಳೆಯಂ ಹೊಸಬೆಲ್ಲವಿಕ್ಕಿ ಬೇಯಿಸಿ (ಸೂಪಶಾ. ೧-೭೦). **ತಡಗಣೆ**: ಅಲಸಂದಿ, ತಡಗಣೆ (ಮೃಕಿಗಿ. ೭೭-೧೫೯). **ತಡುಗಣೆ**: ಬದನೆ ಹೆಗ್ಗುಳ್ಳ ಪಡವಲ ಪಲಸು ತಡುಗಣೆ ಬಾಳೆ ಚಪ್ಪರದವರೆ (ಅನಂರಾ. ೬-೨೫-೭೯). **ತಡುಗುಣೆ** : ಎಳದಾದ ಕಡಲೆ ತಡುಗುಣೆ ಹೆಸರು ಕುಸುಬೆ ಮೊದಲಾದ ಹುರುಕಲಂ ರುಚಿನೋಡುತ್ತ (ಸೌಗಂಧಿ. ೩೭-೧೧).

**ತಡಗೆಡಿಸು** 'ತಡಂಗಿಡಿಸು' ನೋ.

**ತಡಗೆಯ್** (ಕ್ರಿ). ತಡೆ; ನಿಲ್ಲಿಸು; ಕಾಯು: ನಾಳಿನುದಯಕ್ಕೆ ಕೋಂಟೆಯ ನಿಕ್ಕಿಸಿದ ಬಳಿಕ ಪಾಳೆಯಂ ಸಹಿತ ಬಿಜಯಂಗೆಯ್ವರೆಂಬ ನುಡಿಗೇಳಿಯಂತೆಯೆ ಗೆಯ್ವೆನೆಂದು ತಡೆಗೆಯ್ದು (ಸಮ್ಮಳ. ೨-೫೨).
[ ತಡ$_1$ + ಕೆಯ್$_1$ ]

**ತಡಗೊಳ್** (ಕ್ರಿ). ತಡವಮಾಡು; ವಿಳಂಬಮಾಡು: ತಡಗೊಂಡೆ[ಪಾಠಾಂ. ದ] ನಲ್ಲದೆ ಹಿಡಿಯ ನಾ ಕದ್ದನೆ (ಸರ್ವಜ್ಞ. ೧೯೦೧). [ ತಡ$_1$ + ಕೊಳ್$_1$ ]

**ತಡತ** 'ತಡೆತ' ನೋ.

**ತಡತಡವರ್**, ತಢದಡವರ್ (ಕ್ರಿ). ೧. ತೊಡರಂ ; ತಪ್ಪುತಪ್ಪಾಗು : ಕುಡುವುಂ ಕಯ್ಯಂ ಜತಿಯೊಳ್ ತಡತಡವರೆ ವಾದಕಂಗೆ ಪೂರ್ವಿಂ ಜತಿಯಂ ತೊಡರದೆ ನಡಯಿಸಿ . . . ನರ್ತಕಿಯ ಸಭೆಗೆ ವಾದಕಿಯಾದಲ್ (ಅದಿಪು. ೯-೩೨). ೨. ತೊದಲು ; ತಡವರಿಸು : ಮಗನನಪ್ಪಿಕೊಂಡಶ್ರುಜಲಂ ಗುಡುಗುಡನೆ ಸುರಿಯೆ ನಾಲಗೆ ತಡತಡವರೆ ನುಡಿದನಂಧನೃಪನಾ ನೃಪನಂ (ಗದಾಯು. ೪-೦೩). **ತಢದಡವರ್** : ೧. ತಡದಡವಾರದೆ ಗತಿಯೊಳ್ ತೊಡರದೆ ರಂಜಿಸಿದರಮರಲಂಜಿಕೆಯರ್ . . . ಕಡೆಯ ತಾಳದ ಯತಿಯೊಳ್ (ಅಜಿಪು. ೫-೪೦). [ <ತಡ$_4$ + ಬರ್$_1$ ]

**ತಡತಡಿಸು**, ತಡಂತಡಿಸು, ತಡದಡಿಸು (ಕ್ರಿ). ೧. (ಗಾಬರಿಯಿಂದ) ಮುಗ್ಗರಿಸು ; ತತ್ತರಿಸು ; ನಡಂಗು ; ತಡೆದು ತಡೆದು ನಡೆ : ತಡತ[ಪಾಠಾಂ. ವ]ಡಿಸಿ ಯತಿಯನಿಂತಿರೆ ತೊಡರ್ಚಿ ಕೆಡೆ ಪೇಟ್ಬೊಡಕ್ಕುಮುದು ಯತಿಭಂಗಂ (ಕವಿರಾ. ೧-೭೩) ; ನಡೆದೊಡೆ ತಡತಡಿಸುವ ಕುಳ್ಳಿರ್ದೊಡೀ ರೋರ್ವರಂ ಮಲಂಗುವ ಕಟ್ಟಲಸರಪ್ಪರಸುಗಳ್ಗೆ ರಾಜ್ಯಶ್ರೀ ಕೈಗೆಣ್ಮೊಣ್ಪುವುದು (ಧರ್ಮಾಮೃ. ೬-೧೩೩). **ತಡಂತಡಿಸು**: ೧. ಪದಂ ತಡಂತಡಿಸೆ ಹಮ್ರ್ಯಾಗ್ರಂಗಳಂ ಬಂದು ಸಂಗಡದಿಂದೇಱ ಲತಾಂಗಿಯರ್ತವಕದಿಂ ಶಾಂತೀಶನಂ ನೋಡಿದರ್ (ಶಾಂತೀಶ. ೧೫-೩೮). **ತಡದಡಿಸು** : ೧. ತಡದಡಿಸದೆ ನಡದು ದಹನನ[ಂ] . . . ವಾಯ್ದು ಸಮ್ಮುವೆ ದೀರಂ (ಇಆ. XX, ೬೯-೩ ; ೧ನೆಯ ಶಶ) ; ತೂಂಕಡಿಂ ತಡದಡಿಸುತ್ತಿರ್ದು ತಡವರಿಸಿ (ಲೀಲಾವ. ೫-೦೩೪). ೨. ರಭಸದಿಂದ ಮುನ್ನುಗ್ಗು : ದಶನನಿಪೀಡಿತ ದಶನವಸನನತಿಧೇನುವಂ ಕಿಟ್ಟು ನ ಡ ನ ಡ ನ ಡು ಗಿ ತಡದಡಿಸುತ್ತು ವಿಱಯಲ್ ಪರಿವಾತಂ (ಅದಿಪು. ೨-೦೪ ವ). [ <ತಡ$_4$ + - ಇಸು$_2$ ]

**ತಡದಡ** 'ತಡತಡ' ನೋ.

**ತಡದಡವರ್** 'ತಡತಡವರ್' ನೋ.

**ತಡದಡಿಸು** 'ತಡತಡಿಸು' ನೋ.

**ತಡಪಡಿಸು** 'ಧಡಪಡಿಸು' ನೋ.

△**ತಡಪು$_1$** 'ತಡವು$_2$' ನೋ.

△**ತಡಪು$_2$** 'ತಡವು$_3$' ನೋ.

**ತಡಪು$_3$** 'ತೊಡಪು$_1$' ನೋ.

**ತಡಫಡಿಸು** 'ಧಡಪಡಿಸು' ನೋ.

**ತಡಬಡ**, ತಡಂಬಡ (ನಾ). ೧.ತಬ್ಬಿಬ್ಬು; ಗೊಂದಲ; ಆತಂಕ; ಭಯ: ಸಡಗರಂಗಳು ಗುಜುಗುಜುಗಳಾಬಿಡಿಗಳನುಚಿತ ಕಾರಣಂಗಳು ತ[ಪಾಠಾಂ. ಚ]ಡಬಡಂಗಳು ತಪ್ಪುಗಳು ಮುಂಡುಗಳು ಮುಱುಹುಗಳು (ಬಸಪು. ೪೦-೬೨). ೨. ನಡೆನುಡಿಗಳಲ್ಲಿ ಉಂಟಾಗುವ ವ್ಯತ್ಯಾಸ, - ಅಸ್ಥಿರತೆ; ಅಸ್ತವ್ಯಸ್ತತೆ ; ತೊಡರು ; ತೊದಲು : ನುಡಿದ ಮಾತಿಂಗೆ ತಡಬಡ ಬಂದಲ್ಲಿ ನುಡಿದ ಭಾಷೆಗೆ ಭಂಗ ನೋಡಯ್ಯ (ಶೂನ್ಯಸಂ. ೨೫೪-೦೭); ನಡೆಗೆ ತಡಬಡಮಾಯ್ತು ವಾಣಿ ತಬ್ಬಿಬ್ಬಾಯ್ತು (ಚಬಪು. ೨೦-೦೯); ತಡಬಡ - ವಾಕ್ಕುಂಠನಾರ್ಥಃ (ಶಬ್ದಾನು. ೨೦ ವ್ಯಾಖ್ಯಾ). ೩. ಅಡ್ಡಿ ; ತಡೆ : ಪರಿಪರಿ ಗೃಹವಸ್ತುಗಳನು ನೆರೆವುದವನೊಂದು ವಿಭವವ ಮಾಳ್ಪನೆಂದರೆ ತಡಬಡ ವುಂಟೆ ಬಲುಹ (ಭರತ. ೦೭-೧೦೩). **ತಡಂಬಡ** : ೧. "ತಡಂಬಡಮನೆ ತಳ್ಳಂಕಮದು" (ಚತುನಿ. ೨೧). ೨. ಮೊಗಮುಲದೊರ್ವ್ವ ಬಾಸೆ ಕಡು ನೇಱದವಾಗಿರೆ . . . ಕೈವಿಗೆ ನಡೆದಲ್ ತಡಂಬಡಮೊಡಂಬಡೆ ಗರ್ಭದಗುರ್ವಿಂ (ಪುಣ್ಯಾಸ್ರ. ೩-೨೩).
[ ←ತಮಿ. ತಟಪಟ = ಆತುರಪಡು, ತತ್ತರಿಸು ]

**ತಡಬಡಂಗೊಳ್**, ತಡಬಡಗೊಳ್ (ಕ್ರಿ). ೧. ತಬ್ಬಿಬ್ಬಾಗು; ಗೊಂದಲದಲ್ಲಿ ಬೀಳು : ಅನುಮಿಸುವ ಭಕ್ತನುರವಣೆಗೆ ಸಿಡಿಮಿಡಿಗೊಂಡು ಮನದೊಳಂಜುತ್ತ ನಡನಡುಗಿ ತಡಬಡಂಗೊಂಡು [ಪಾಠಾಂ. ಗೊಂಬುತ, ಬೋಗುತ] (ಶಿರುರ. ದೇ ೧೨-೦೨). ೨. ತೊದಲು ; ತಡವರಿಸು : ಮೃಡನರ್ತನೋತ್ಸವದೊಳಿರದೆಯುಂಗದೊಳು ಬೆಮರಿಡೆ . . . ಸೆರೆ ಬಿಗಿದು ನುಶಿ ತಡಬಡಂಗೊಳುತೆ ಕೊಂಡಾಡಿ ನೋಡಿ (ಪಾಸೋಪು. ೬-೨೨). **ತಡಬಡಗೊಳ್** : ೩. ಚಿಂತೆಗೊಳಗಾಗು ; ಆತಂಕಪಡು : ಊರ ಸೀರೆಗೆ ಅಗಸ ತಡಬಡಗೊಂಬಂತೆ [ಪಾಠಾಂ. ತಡಬಡಿಹಡೆದಂತೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ(ಬಸವ. ೩೦೯).
[ ತಡಬಡ + ಕೊಳ್$_1$ ]

**ತಡಬಡಂಬೋಗು** (ಕ್ರಿ). ತಬ್ಬಿಬ್ಬಾಗು ; ತಳ್ಳಂಕಗೊಳ್ಳು : ಬೇಡಲ್ಕೆ ಬೇಡದಿರಲ್ಕೆಯಂಜುತ್ತ ಬಂದು ಭಯದಿಂ ಕುಗ್ಗಿ ತಡಬಡಂಬೋಗುತ್ತ (ಮೂನರ. ದೇ. ೦೬೨-೧೨). [ ತಡಬಡ + ಪೋಗು$_1$ ]

**ತಡಬಡಗುಟ್ಟು** (ಕ್ರಿ). ತಡವರಿಸು ; ತೊದಲು : ಪ್ರೀತಿಯಿಂ ನೋಡುವಾ ವೈಶ್ಯನಂದನನ ಕಾತರಿಪ ಚಿತ್ತ ಕರಗುವ ಲಜ್ಜೆಯೋಸರಿಸುವೞಿವು ತಡಬಡಗುಟ್ಟುವಾ ಮಾತು (ಸಮ್ಯಕ್. ೯-೧೨). [ ತಡಬಡ + ಕುಟ್ಟು$_1$ ]

**ತಡಬಡಗೊಳ್** 'ತಡಬಡಂಗೊಳ್' ನೋ.

**ತಡಬಡಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸಂ; ತಡವರಿಸುವಂತೆ ಮಾಡು: ನುಡಿಗೆಡಿಸುವ ಕೂಡೆ ನುಡಿಸುವ ನುಡಿಗಳ ತಡಬಡಗೊಳಿಸಿ ನಗುವನು (ಭರತ. ೬-೮೬). [ ತಡಬಡಗೊಳ್ (<ತಡಬಡಂಗೊಳ್) + – ಇಸು$_3$ ]

**ತಡಬಡನೆ** (ಅ). ಗೊಂದಲವಾಗಿ : ಕಡುಜಾಣೆವೆಣ್ಣುಗಳು ಕೂಡಿ ಆಗ ತಡಬಡನೆ ಹಿಡಿದು ಬಡಿದಾಡಿ . . . ಪೆಸರ ಬೆಡಗ ಪೇಳೆಂದು ಹೊಡೆದಾಡಿ (ಶರಲೀ. ೧೪೫-೧); ನಡುಗುತಲಿ ಬೆಮರಿಟ್ಟು ತಡಬಡನೆ ಕೆಡಹುತಲಿ ಅಡವಿಯೊಳಗವರು (ಹಮಹ. ೬೦). [ ತಡಬಡ + – ಅನೆ$_1$ ]

**ತಡಬಡಾಯಿಸು** (ಕ್ರಿ). ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಅಗಾಧವಾದ ಅಂತರಾಳದ ಮುಂದೆ ನಮ್ಮ ಮನಸ್ಸು ತಡಬಡಾಯಿಸಿ ಬೆರಗಾಗದೆ (ಜ್ಯೋತಿರ್ವಿ. ೨೬೨) ; ಉತ್ತರಕೊಡಲು ಸ್ವಲ್ಪ ತಡಬಡಾಯಿಸಿದುದು ನಿಜ (ಅವತಂ. ೦೬೬). [ < ತಡಬಡಿಸು ]

**ತಡಬಡಿಸು**, ತಡಂಬಡಿಸು, ತಡಮಡಿಸು, ತಡವಡಿಸು (ಕ್ರಿ). ೧. (ಭಾವಾತಿರೇಕದಿಂದ) ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಮಜ್ಜನಕೞಿದು ತಳ್ಕೞಿದು ತಪ್ಪಿ ತಡಬಡಿಸುತಂ ಪೊಸಪೂಜೆಯಂ ಮೞಿದು(ಹರಿಶ. ಹ. ೦೯೩-೧೬) : ಗಿರಿಜೆಯೊಡನುಸಿರ್ದುಂ ತಡಬಡಿಸುತ್ತ ಮಿಸುವ ಪೊಸಪುಸಿವಾತಂ (ಗಿರಿಕ. ೯-೯೯). ೨. ತಡವರಿಸು; ತತ್ತರಿಸು; ಮುಗ್ಗರಿಸು; ಎಡವು ; ನಡಗೆ ಅಸ್ಥಿರವಾಗು : ಹೋಗಲ್ಕಂಜಿ ಹೋ ಎನುತ ಕಾಲ ತಡಬಡಿಸುತ್ತ ನಿಲುತಂ (ಬಸಪು.೨೬-೨೮); ನಡೆ[ಪಾಠಾಂ. ನುಡಿ] ತಡಬಡಿಸುತ ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲಮಡಿಗಳಗಿಳಿವ ಗಿಳಿಗಳ (ಕುರಾಸಾಂ. ೨-೩೬) ; ಇದಿರ್ವರ್ಪನಂ ಪದೆದು ನಿಟ್ಟಿಸಿ ಮೆಯ್ಮರವಟ್ಟಳಟ್ಟಿಯಿಂ ತಡಬಡಿಸುತ್ತ ನಿಂದು ಪಳಗಾಜಿನ ಪುತ್ತಳಿಯಂತಿರೊಪ್ಪಿದರ್ (ರಸರ. ೧೦೯-೨) ; ಅಧರಂ ಬೆಳರ್ತುದು ನಡಗೆ ತಡಬಡಿಸಿದುದು (ಚಬಪು. ೩೭-೭೭) ; ಬಳಲುತ್ತಡವಿಯಲಿ ತಡಬಡಿಸಿ ಬೆಂಡಾಗುತ್ತ ಬೇಸರಿಸಿ (ರಾಮಾಸಂ. ೫-೩-೩). ೩. ತಬ್ಬಿಬ್ಬಾಗಿ, ತಡೆತಡೆದು ಮಾತನಾಡು ; ತಡವರಿಸುತ್ತ ನುಡಿ ; ತೊದಲು : ಅಂದದಿಂ ಶರಣಾರ್ಥಿಯೆಂದಹೆನೆಂದು ಬಾಯ್ತುಡಬಡಿಸಿ (ಬಸಪು. ೩೭-೦೯) : ಬಂಬಲುಬಾಡುವಂಗ ತಡಬಡಿಪ ನುಡಿ (ಸಮ್ಯಕ್. ೧೦-೪೯): ರಾಜವಾರ್ತೆಯನು ತಡಬಡಿಸದೆ ಪೇಳ್ವ ರಾಯಭಾರಿಗಳಿಂ (ಕುರಾಸಾಂ. ೨೯-೬೮) : ತಡಬಡಿಸದ ಹಿಂದು ಮೆಟ್ಟದ ವಾಚಕ ವಡಗದ ವಕ್ಕಣೆ ಕೆಡದ . . . ರಾಯಸವಿಡಿದವನೋದಿದನಿಂತು (ರಾಮವಿ. ೧೫-೩೨) : ತೇಲಿ ಮುಗಿವ ಕಣ್ . . . ನಾಲಿಗೆಯೊಳ್ತಡಬಡಿಪಿನಿನುಡಿಗಳ್ (ಉದ್ಭದೇ. ೨-೬೫). ೪. ವ್ಯತ್ಯಸ್ತವಾಗು : ಬೀಯಲ್ ನುಣ್ಗೊರಲುಲಿ ಬಳಲಲ್ ಸುಯ್ ತಡಬಡಿಸಲ್ ಬಾಯ್ಗೊಟಂ ದಣಿಯುತ್ತಿರಲು(ಜಯುಕಾ. ೮-೩೪). ೫. ಶಬ್ದಮಾಡು ; ಕೋಲಾಹಲವುಂಟುಮಾಡು : ಸಡಗರಂಗಳು ಬರಿಯ ಠಕ್ಕಿನ ಗಡಬಡಂಗಳು ಟಾಂಗು ಢಲಗಳು ಕೊಡೆಗಳುಂ ಹಳವಿಗೆಗಳುಂ ತಡಬಡಿಪ ವಾದ್ಯಗಳು (ಬಸಪು. ೫೬-೧೬). ೬. ಚಡಪಡಿಸು ; ಕಳವಳಿಸು : ದ್ರಾಕ್ಷಾರಸ ತಪ್ಪಿಹೋದಾಗ ಅವಳ ಮನಸ್ಸಿಗೆ ತುಂಬ ಸಂಕಟವಾಗಿ ತಡಬಡಿಸುತ್ತಿದ್ದಳು (ಪುನರು. ೧೧) **ತಡಂಬಡಿಸು** : ೩. ಚರಣಂಗಳುಂ ನುಡಿಗಳುಂ ತಡಂಬಡಿಸಲತಿ ಭರವಸದೊಳಯ್ತಂದು ನೋಳ್ಪ ತರುಣೀಜನಂ (ಚಬಪು. ೫-೧೩) ; ದಡದಡಿಪಡಿ . . . ತಡಂಬಡಿಪ ತಳರ್ನುಡಿ (ರಾಜಶೇ. ೬-೩೩). **ತಡಮಡಿಸು** : ೧. ನುಡಿಯೊಳ್ಪುಸಿಮಾತಂ ಮೆಟ್ಟಡಿಕುಂ ತಡಮಡಿಸಿಪೊಂದನೊಂದಂ ನೆಗಟ್ಗುಂ (ಮುದಶಿ. ೧೧-೩೪). **ತಡವಡಿಸು** : ೧. ಅಚ್ಚಿಗಂಗೊಳಿಸಿ ತಡವಡಿ [ಪಾಠಾಂ. ಕಳವಳಿ]ಸಿತೆನ್ನಯ ಭಕ್ತಿ (ಶಿರುರ. ದೇ. ೨೧-೨೦); ಶೆಟ್ಟಿಯೆಂದುದ ಕೇಳಿ ತಡವಡಿಸುತಲವನಿಂತೆಂದ (ತ್ರಿಭುತಿ. ೨೦-೧೨) ; ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮಯಿಸುವರು ತಡವಡಿಸುವರು ಮತ್ತಲ್ಲಿ (ಕೊಲ್ಲಾಪ. ೨೯). ೭. ತಡಕಾಡು : ತಡವರಿಸಂ : ಬಟ್ಟೆಯೊಳ್ ಬಟ್ಟನೇೞಿಲ ಚೆಂಗಾರೆಯ ಮಲ್ಲುಗುಟ್ಟ ಸಹಕಾರೋಚ್ಚಿಷ್ಟ ಪಕ್ಷಂಗಳಂ ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದು ಮಱುಗುತಿರೆ ಕಂಡು (ಸುಕುಮಾ. ೪-೫೪). [ ತಡಬಡ + – ಇಸು$_3$ ]

**ತಡಬಡು**, ತಡಂಬಡು$_2$ (ಕ್ರಿ). ೧. ತತ್ತರಿಸು ; ದಡದಡಿಸು : ತಡಬಡುತ ಖಳನೆದ್ದು ಕಂಗಳ ಕಿಡಿಯುದುರೆ ಹೂಂಕರಿಸಿ (ಅನಂರಾ. ೬-೧೬-೨೯) ; ನಿನ್ನ ಸೈನ್ಯಗಳಲ್ಲಿ ಕೆಲವರು ಕಾಲುಗಳು ತಡಬಡಲು, ಶರೀರಗಳು ಬೆವರಲು . . . ಕೆಳಕ್ಕೆ ಬಿದ್ದು ಮುದುರಿಕೊಂಡಿದ್ದರು (ಕ್ವಾಭೀ. ೧೪೦). ೨. ದುಡುಕು ; ಆತುರಪಡು : ಗಡಿಗೆ ಮಡಿಕೆಯ ಕೊಂಡು ಅಡಿಗೆಯ ವೇಳೆಯೊಳು ಬಿಡದೆ ಮಳೆಪೋಡ ಪೊಡೆಯಲ್ಕೆ ಈರ್ವರಿಗೆ ತಡಬಡಲಾಯ್ತು (ಸರ್ವಜ್ಞ. ೮). **ತಡಂಬಡು$_2$** : ೧. ಅನಂಗಾವೇಶದಿಂ ಕಾಲ್ತಡಂಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ ಶ್ರೀವಿಪ್ರಮಾರ್ತಂಡನಂ (ಕಾವ್ಯಾವ. ೮೦೩). [ ತಡ್$_4$ + ಪಡು$_1$. / ತೆಲು. ತಡಬಡು ]

**ತಡಬೆ** 'ತಡಮೆ' ನೋ.

**ತಡಮಡಿಸು** 'ತಡಬಡಿಸು' ನೋ.

**ತಡಮಾಗು$_1$** 'ತಡ$_1$' ಪರಾ.

**ತಡಮಾಗು$_2$** 'ತಡ$_2$' ಪರಾ.

**ತಡಮಾಡು$_1$** 'ತಡೆಂಮಾಡು' ನೋ.

**ತಡಮಾಡು$_2$** 'ತಡ$_1$' ಪರಾ.

**ತಡಮಾಡು$_3$** 'ತಡ$_2$' ಪರಾ.

**ತಡಮಾರಿ** (ನಾ). ತಡಮಾಡುವ ಸ್ವಭಾವದವನು : ಯಾವಾಗಲೂ ತಡಮಾರಿಯಾದ ಮ್ಯಾಥ್ಯೂ ನಿಕಿತಿಷ್ ಕೊಟ್ಟಕೊನೆಗೆ ಬಂದನು (ಪುನರು.೩೨) 'ಹಠಮಾರಿ' ಪರಾ.
[ ತಡ$_1$ + – ಮಾರಿ$_1$ ]

**ತಡಮಿಕ್ಕು**, ತಡವಿಕ್ಕು$_1$ (ಕ್ರಿ). ತಡೆದಿಡು ; ತಡೆದು ನಿಲ್ಲಿಸು ; ಕಟ್ಟಿಹಾಕು : ಮನೋಜ ಜೈತ್ರಪತಾಕಾಪ್ರತಿಮಭ್ರೂವಿಭ್ರಮೆಯರಾ ಸ್ಮರಶರಾಸನ ಭ್ರೂವಿಭ್ರಮನಂ ತಮ್ಮ ಭ್ರೂವಲ್ಲಿಗಳೊಳ್ ತಡಮಿಕ್ಕಿಯುಂ (ಸುಕುಮಾ. ೦೦-೧೦೧ ವ). **ತಡವಿಕ್ಕು$_1$**: ಹಸ್ತಿಯ ಬೆಂಗೆವಂದು ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕಿಯ್ದಾವಿಗೆಗಳ ಬೆಳಗೆ ಬೆಳಗಾಗೆ (ಪಂಪಭಾ. ೦೨-೫೨ ವ). [ ತಡ$_1$ + ಇಕ್ಕು ]

**ತಡವೆ**, ತಡಬೆ, ತೊಡವೆ (ನಾ). ೧. ದನಕರಂಗಳು ಒಳಗೆ ಬರದಂತೆ ಬೇಲಿಗೆ ಅಳವಡಿಸಿರುವ ಬಿದಿರು ಅಥವಾ ಬೊಂಬಿನ ಚೌಕಟ್ಟು; ತಡೆಬಾಗಿಲು: ಮನೆಯ ಮುಂದಿನ ಅಡ್ಡಗಟ್ಟದ ಗುಜ್ಜು ತಡವೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು . . . ಕರೆದರು (ಕೋಟಿಚ. ೨೩): ಸಿದ್ದಣ್ಣ ಕೊಕ್ರನ ಮನೆಯ 'ತಡವೆ' ದಾಟುವಾಗ (ಒಡ್ಡಿಉ. ೪೯): ಹೆಗ್ಗಡೆಯವರು . . . ತಡವೆಯುತನಕ ಹೋದರು (ನಂಬಿನಾ. ೨೫೮). **ತಡಬೆ**: ೧. ತಡಬೆಯ ತೆಗೆಯುವ ಸದ್ದಾಯಿತನುವಳು ಅಡಿಗೆಯ ಮನೆ ಯಿಂದ ಬಂದು (ಚಂದ್ರವೀ.೨೨-೫೬); ಗುತ್ತಿ...ಹೆದ್ದಾರಿಯ ಅಂಚಿಗೆ ಹಾಕಿದ್ದ ಬಿದಿರಡ್ಡೆಯ ಬೇಲಿಯನ್ನು ಉಣುಗೋಲಿನ ಬದಿಯ ಇದ್ದ ತಡಬೆಯ ಮೇಲೆ ಹತ್ತಿ ದಾಟಿ ಮುಂಚೆಕಡೆಯ ಅಂಗಳಕ್ಕೆ ಹೋದನು (ಮಲೆಮ. ೫೮). ೨. ಅಡ್ಡಿ; ತಡೆ; ಪ್ರತಿಬಂಧ: ಧರೆಯ ನಿಮ್ನೋನ್ನತಂಗಳ ತಡಬೆ ಯೇನೊಳದೆ ವೃತಿಥೆಯ ವಿಮಾನಯಾನಕ್ಕೆ ? (ಶ್ರೀರಾಮಾ. ೦೨೩-೨೨). **ತೊಡವೆ**: ೧. ಅವರು ಜಗಲಿ ಇಳಿದು, ತೊಡವೆ ದಾಟಿ, ಮನೆ ಹಾದಿ ಯಲ್ಲಿ ಅರ್ಧ ಸಾಗಿಯಾಯಿತು (ಹಹಹ. ೪೨): ಆ ತಂಡ ರಸ್ತೆಯ ಹತ್ತಿರದ ಬಯಲಂಚಿಗೆ ಬಂದು . . . ಮತ್ತೆ ಎತ್ತರದ ತೊಡವೆ ಹತ್ತಿ ಹಾರಿ . . . ಹೊರಟು ಹೋದರು (ಶದ್ಮಸ. ೬೫): ಅಪ್ಪರಲ್ಲೆ ಐತಾಳರ ಬಾಯಿಂದ, ಪದ್ಧತಿಯಂತೆ, ತೊಡಮೆ ದಾಟುವಾಗ 'ಸಾಂಬಶಿವ' ಎಂದು ಕೇಳಿಬಂತು (ಮರಳು. ೩೨). [ <ತಡೆ₁./ತುಳು. ತಡವೆ./ಹ್ಯಾ. ತಡಿವ ]

**ತಡವೆಟ್ಟು** 'ತಡಂವೆಟ್ಟು' ನೋ.

**ತಡಲು** (ಕ್ರಿ). ಹೂತುಹೋಗು: ಸಿಕ್ಕಿಕೊಳ್ಳು (?): ಗಾಲಿಗಳ್ಗಣನೊಗನ ಕೀಲಚ್ಚುಗಳ್ತಡಲಿ ಮೇಲೇಳದಿರೆ ಕುದುರೆಗಳ್ಪಳಿ ನಿಂದಿರಲ್ (ತುರಂಗ. ೬೦-೨೧). [ ? ]

**ತಡವಡಿಸು** 'ತಡಬಡಿಸು' ನೋ.

**ತಡವರ್** 'ತಡಂಬರ್' ನೋ.

**ತಡವರಿಸು₁** (ಕ್ರಿ). ೧. ಕೈಯಾಡಿಸಿ,ಹುಡುಕು; ತಡಕಾಡು; ಅರಸು; ಬೆದಕು: "ತಡವರಿಸು – ಅನ್ವೇಷಣೇ" (ಶಮಧಾ): ನೇಱಲವಮರದ ಕೆಟಗೆ ತಡವರಿಸಿ ನೇಱಲವಣ್ಣಳಂ ತಿಂಬ ಜಾತ್ಯಂಧೆಯಪ್ಪ ಪೂರೆಯರ ಕೂಸಂ ಕಂಡು (ವಡ್ಡಾರಾ. ೯-೨೯); ಬಿಲ್‌ಕಟ್ಟುವರ್ ಕೀಲಂ ತಡವರಿಸಿದ ರೆಂಬಂತೆ (ಧರ್ಮಾಮೃ. ೦೨-೬೫); ನಿಂದಿರದೆ ಹರಿದು ತಡವರಿಸಿ ಕಾಣದೆ ಮನಂ ನೊಂದು (ಸಿದ್ಧರಾ. ೨-೪೬); ಬಾಗಿಲನೊಂದು ಠಾವಿನೊಳಱಸಿ ತಡವರಿಸಿದೆನು ಭಿತ್ತಿಗಳ (ಕುಮಾರ.ಸ. ೧೨-೪೧). ೨. ಕೈಯಿಂದ ನೇವರಿಸಂ; ಸವರಂ; ಮುಟ್ಟು: ಇರ್ವರುಂ ಪರಸಿ ತಡವರಿಸಿಯುಂ ತೆಬ್ಬರಿಸಿಯು ಮಪ್ಪಱೊಳಕ್ಕೊಂಡು (ಪಂಚಧಾ.೦೩-೮ ವ): ಶಿರವ ತಡವರಿಸುತ ಮಹಾ ದೇವರಿಯ ಬವರದ ಬೋಳಕೊಮ್ಮಿಗೆ ಹರಣವುಳಿದುವೆಯೆನುತ ರವಿಸುತ ಕೇಱಿದನು ಗಿರಿಜು (ಕೃಷ್ಣರಾ. ೪-೩-೧೬); ಅವರಿಬ್ಬರೂ ಕೆಳಗೆ ಬಿದ್ದಿದ್ದ ವರತ್ತು ತಡವರಿಸಿ ನೋಡಿ (ಹಂಗಾಕ್ಕ. ೪೩೪). ೩. ನಡೆಗೆಡು; ಶೆತ್ತರಿಸಂ; ದಡದಡಿಸು: ತಡವರಿಸುತ್ತಿರಲ್ಕೆ ತೊಡೆ ಜೋಲೆ ಸಡಿ ಲ್ಪುಡೆ . . . ಸಂಭ್ರಮದಿಂ ಮಱಿಗೆಯಾಂಡು ನೋಡಿದರ್ (ಕಾದಂಬ. ೦೩೬); ತಡವರಿಸಿ ಬೀಟ್ಟ ಮುನಿನಾಥನಂ ಬೀಟಲೀಯದೆ ತರ್ಕೈಸಿಕೊಂಡು (ಧರ್ಮಾಮೃ. ೪-೦೬೯). ೪. ತಡೆತಡೆದು ಮಾತನಾಡು: ಭಾಸ್ಕರ ಅವಾಕ್ಕಾದ, ನಾಲಗೆ ತಡವರಿಸತೊಡಗಿತು (ಕಮನಿ. ೨೨೩); ಇಂಗ್ಲಿಷಿ ನೆಲ್ಲಾದರೆ, ಒಂದೊಂದು ವೇಳೆ ತಡವರಿಸಬಹುದು (ಬಂಕಿಮ.೩೪): ಒಂದು ಸಲವಾದರೂ ತಪ್ಪಿದನೆ? ತಡವರಿಸಿದನೆ? (ನನ್ನತೂ. ೩). [ <ತಡವು₂ ]

**ತಡವರಿಸು₂** (ಕ್ರಿ). ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ಕಂಗೆಡು: ತಮ್ಮ ಬಲಹುಂ ಮಾರ್ವಲಮನಱಿಯದೆಯುಂ ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟು ಪೊಟ್ಟೆಂದೆಚ್ಚುಮಿಟ್ಟುಮಿಱಿದು (ಪಂಪಭಾ. ೦೦-೬೦ ವ): ನಡುಗಿ ತಡವರಿಸಿ[ಪಾಠಾಂ. ದಡಿಸಿ]ಬೆಂಕೆಯ ಕಡುಗಾಯ್ಪಿಂಗಗಿದು ಪೆಡೆಗಳಿಡುವಿನೊಳೆಹಿಗಳ್ ತೊಡರ್ದು ನುಸುಳ್ದೋಡಿ ಗಂಗೆಯ ಮಡುಗಳನಡಹಡಿಸಿ ಪುಗುವಿನಂ ಭಯವಶದಿಂ (ಕಾವ್ಯಾವ. ೪೧೦). [ <ತಡ₄ + - ಇಸು₂ ]

**ತಡವಳಿ** (ನಾ). ತಡ; ಸಾವಕಾಶ; ವಿಳಂಬ: ಒಂದೇ ಒಂದು ನಿಮಿಷದ ತಡವಳಿ ಇಲ್ಲದೆ ನಮ್ಮ ಚಕ್ರವರ್ತಿಗಳ ಭೇಟಿ ಸಾಗುತ್ತಿದೆ (ವೀರಬಂ. ೩೬). [ ತಡ₁ + - ವಳಿ₁ ]

**ತಡವಾಗು₁** 'ತಡ₁' ಪರಾ.

**ತಡವಾಗು₂** 'ತಡ₂' ಪರಾ.

**ತಡವಾಯ್** 'ತಡಂಬಾಯ್' ನೋ.

**ತಡವಾಯು** 'ತಡಂಬಾಯ್' ನೋ.

**ತಡವಿಕ್ಕು₁** 'ತಡಮಿಕ್ಕು' ನೋ.

**ತಡವಿಕ್ಕು₂** (ಕ್ರಿ). ೧. ಹಿಂದೆಹಾಕು; ಸೋಲಿಸಂ: ಇನಿಯವೆನಿಪ್ಪ ಮೆಲ್ನುಡಿಗಳುಂ ಕಳಕೋಕಿಳನಾದಮುಂ . . . ನಡೆಯುಂ ಕಳಹಂಸ ಯಾನಮುಂ ತಪತನಗೊಂದನೊಂದು ತಡವಿಕ್ಕು [ಪಾಠಾಂ. ಕ್ಕಿರ್] ಗುಮಕ್ಕೆಯಿನಾ ಬನಂಗಳೊಳ್ (ಮಲ್ಲಿಪು.-೧೯-೦೦೦). ೨. ನಿಧಾನಮಾಡು; ಸಾವಕಾಶಮಾಡು: ಕಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರ ಕಾಂಚನೋಜ್ವಳ ಕಳಶಂಗಳಿಂದಮಿರುಳುಂ ಪಗಲುಂ ತಡವಿಕ್ಕೆ ಕೈರವಂಗಳ್ ಕಮಲಂಗಳುಳ್ಳಲರ್ವುದಂ ತಡವಿಕ್ಕುವುದಾ ಜಿನಾಲಯಂ(ಲೀಲಾವ. ೮-೬೦). [ ತಡವು₁ + ಇಕ್ಕು₁ ]

**ತಡವಿಡು₁** (ಕ್ರಿ). ತಬ್ಬಿಬ್ಬಾಗು; ಗಾಬರಿಯಾಗು: ಕೊಡಟಿ ಕುಂಭಸ್ಥಳವ ತಡವಿಡಲುಡುಗಿದವು ದಿಗುದಂತಿ (ನಿಭಾಗ. ೮-೧೫-೩೬). [ ತಡ₄ + ಇಡು₁ ]

**ತಡವಿಡು₂** (ಕ್ರಿ). ೧. ತಡವರಿಸು; ತಡಕಾಡು; ಹುಡುಕು: ಒಡನೆ ಮಾನಿಸರಿಲ್ಲ ಕರೆದೊಡೆ ನುಡಿವರಿಲ್ಲ ಕರದ್ವಯದಿ ತಡವಿಡುತ ಪೈಸರದೊಳಗೆ ಸೂಸಿತು ಮೈ ಮಹಾಸತಿಯ (ಕುಮಾರ.ಅ. ೯-೨೬). [ ತಡವು₂ + ಇಡು₁ ]

**ತಡವಿಡು₃**, ತಡಹಿಡಂ (ಕ್ರಿ). ೧. ತಡಮಾಡು: ಕೋಪದಿಂ ಹೊಡಕರಿಸಿ ತಡವಿಡದೆ ಕುದುರಾಡೆಯಂ ಬೇಡವಡೆಯೊಡಲನೀಡಿಱಿವುತ (ಹರಿಕಾ.೬-೮). **ತಡಹಿಡು**: ೨. ತಡೆದಿಡು; ನಿರೋಧಿಸು: ಕಡೆಗಾಣದ ದುಃಖವೆಂಬ ಕಡಲೊಳಾ ಮಡದಿಯಾಳುತಲೇಳುತಿಹಳು ನುಡಿಯಲಮ್ಮದೆ ಮೌನವಿಡಿದು ಸಖೀಜನ ತಡಹಿಟ್ಟರೆನೆ ಸುಮ್ಮನಿಹರು (ಅಂಜನ. ೬-೨೫). [ ತಡವು₂ + ಇಡು₁ ]

**ತಡವಿರ್**(ಕ್ರಿ). ತಡೆ; ನಿಲ್ಲು: ಹರಿದಾಡುತಿಹ ರಥಗಾಲಿಗಳ್ನೂಳಿ ಕೆಲಕಡಗಲಾ ರಥಂ ತಡವಿರ್ದುದು (ತುರಂಗ. ೬೦-೨೦). [ ತಡವು₁ + ಇರ್₁ ]

**ತಡವು₁**, ತಡಹು₁ (ಕ್ರಿ). ೧. ತಡೆ; ನಿಲ್ಲು; ವಿಳಂಬವಾಗು; ಸ್ತಿಮಿತ ವಾಗು: "ತಡವು–ಹಸ್ತಾನ್ವೇಷಣೇ, ಸ್ತಿಮಿತಭಾವೇ ಚ" (ಶಮಧಾ); "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಂ. ೦೦೯): ತಡವಲುಱಿ ಬೈದು ತೆಗೆದಾನು ಸಾಲಿಗನು ನಡುವೆ ಜಗಳವನು (ಸರ್ವಜ್ಞ. ೦೪೦೦). **ತಡಹು₁**: ೨. ತಡಮಾಡು; ಸಾವಕಾಶಮಾಡು: ಒಡೆಯಗೆ ಚಿಂತೆಯಾದಾಗೂಟವಿವಾಹದ ಸಡಗರವೆ ನನಗಿಲ್ಲ ಸುಡುಸುಡಾ ಸುಖವ ಸಾಕಾ ಮಾತ ಮಱಿಯನ್ನು ತಡಹಲಾಗದು ಸ್ವಾಮಿಯೊಂದಾ (ಭರತ. ೫೬-೬೮): ತಡಹದೆ ಮಾಡಿದ ನಿರ್ಜರೆ ಭವವೆಂಬ ಕಡಲೊಳು ತೊಳಲಿಸುತಿಹುದು (ಭರತ. ೬೮-೬೭).

[ ದೇ.೫ ತಮಿ. ತಟಾುಕ್ಕು; ಮಲ. ತಡಯು,ತಡುಕ್ಕು; ತುಳು. ತಡೆಯು, ತಡೆವು; ತೆಲು. ತಡಯು ]

**ತಡವು₂**, ತಡಪು₁, ತಡಹು₂ (ಕ್ರಿ). ೧. ತಡವರಿಸು ; ತಡಕಾಡು ; ಹುಡುಕು : "ತಡವು – ಹಸ್ತಾನ್ವೇಷಣೇ ಸ್ತಿಮಿತಭಾವೇ ಚ" (ಕರ್ಣಾ); ಕತ್ತಲೆಯ ಕಾಹೊನಲನೀಸಾಡುವಂತೆ ತಡವುತ್ತ ನೋಡುತ್ತ . . . ತವುತಮಗೆ ಕರೆದರು (ಸಿದ್ಧರಾ. ೩-೪೭) : ಪೊಂಗಳಶಂಗಳೊ ತನ್ನುರೋರು ಹಂಗಳೊ ದಿಟಮೆಂದು ಕೈ ತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳ ಕಳಶಂಗಳಂ (ಅನಂಪು. ೪-೧೧೧) : ರೂಪಕಂದರ್ಪನೆಂದೆನಿಸುವ ತನ್ನ ಪ್ರಾಣೋಪನ ತಡವಿ ನೋಡಿದಳು (ಪ್ರೋಹಕ. ೩೭-೪೫); ಕಗ್ಗತ್ತಲೆಯಲ್ಲಿ ತಡವುತ್ತಾ ನಡೆದನು (ಮಲಿಮ. ೪). ೨. ನೇವರಿಸಂ; ಸವರು; ಮಂಟ್ಟು: "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಣಿ. ೧೦೯) : ಚಿತ್ರಭ್ರಾಂತಿಭ್ರಾಂತಂ ಪೊತ್ತುದುವಂ ತಡವಿ ನೋಡುತುಂ ಭಾಗಲವಂ (ಶಂಕಕಂ. ೧೪೭-೧೩) : ಕಯ್ಯಿಂದಲವಯವಂಗಳನೋವಿ ತಡವುತುಂ (ಕುದ್ರಕ. ದೇ. ೨೧೬-೪); ಸಂದಿಯಿಂ ಪೊಱಮಟ್ಟು ತನ್ನ ತಲೆಯಂ ತಡವಿ ನೋಡುತ್ತಿಪ್ಪನ್ನೆಗಂ (ಪುಣ್ಯಾಸ್ರ. ೫-೩೫ ಪ); ನಡೆ ವಿಜಯನಾಗೆಂದು ತನುವನು ತಡವಿದರು (ಕುಮಾವ್ಯಾ. ೪-೩೩) . ೩. ಕೆಣಕು ; ಕೆರಳಿಸು : ವಿರಾಧನೆಂಬಾಸುರಂ ತಡವಲಿಕೆ ಕೊಬ್ಬ ಮುರಿದಾತನಂ ಸೀಳ್ದೊಗೆದು (ಜರಕು. ೨-೭); ತಡವದೆ ಬಹುತರವಾಗಿ ಹಾವುಗಳು ಕಚ್ಚುವದಿಲ್ಲ (ಮುಂಬಯಿ. ೨-೩೪) ; ಅವಳನ್ನು ತಡವುವದೂ ಸರ್ಪವನ್ನು ಕೆಣಕುವದೂ ಒಂದೇ (ರಂಗಕೋ. ೦೮೩). △ **ತಡಪು₁** : ೨. ಆ ಕುವರನ ನಟ್ಟಿನ ಬಿನದಕ್ಕೆ ಬಗೆವೆತ್ತು ನೋಡಿ ಮುಂದ್ವಾಗೆಯ್ದು ಮುಂಡಾಡಿ ಮೆಯ್ಯಂ ತಡಪಿ ಮನ್ನಿಸಿ (ವ್ಯಹವಿ. ೩೩-೮ ಪ). **ತಡಹು₂** : ೧. ಕುರುಡನೆಡಹುತ್ತ ತಡಹಿ ಹಿಡಿದು ಕಂಡಂತಾಯಿತ್ತು (ಅವತಂ. ೨೦೯-೯೪೦) ; ಸಡಿಲುವ ಮುಡಿಯು ಸಾಗಿಸದೆ ಸೇವಕಿಯರ ತಡಹದೆ ಪತಿಗೆ ಶಂಕಿಸದೆ ನಡೆತರುತಿರ್ದರು (ಭರಕ. ೪೭-೭೫). ೨. ಕೌರವ ಬಲದ ನಾಯಕರು ಶಿರವ ತಡಹುತ ತಮ್ಮ ಶಿಬಿರಕೆ ತಿರುಗಿದರು (ಕುಮಾವ್ಯಾ. ೭-೭೬) ; ಪಣ್ಣಿನ ರಸಾಯನಮನೀಂಟಿ . . . ನೀರ್ಗುಡಿದು ಹೊಟ್ಟೆಯ ತ ಡ ಹು ತೆ ಳ್ದು ಕೈದೊಳೆದರಾಗ (ಸಮ್ಯಕ್ತಾ. ೭-೨೫) ; ಮೈಯ ಗಾಯಂಗಳಂ ತಡಹಿ ತಕ್ಕೈಸಿ (ಜೈಮಿಭಾ. ೩೦-೫೯) : ಎತ್ತಿನ ಗಂಟುಗಳ ತಡಹುತ ಬಣ್ಣದುಟಿಯು ಭಾವವ ದೀಱುತ ಮುದ್ದು ಮೆಣ್ಣುಗಳ್ಳೆ ತಂದರಾಗ (ಕಂಪವಿ. ೨೧-೭೪) . ೩. ಱೊಪ್ಪವಿಡಿದ ಹಂದಿಗೆ ತಡಹಿ [ಪಾಠಾಂ. ವಿ]ಬಿಡು ನಾಯನೆಚ್ಚರಳೆಯಂ. . . . ಎಂಬ ಬೇಡರ ಬೊಬ್ಬೆ ಯಿಂದಡವಿ ಘೀಳಿಟ್ಟುದು (ಹರಿಶ್ಚಾ. ೫-೨೩) ; ಈಗವಳ ಸುದ್ದಿಯನು ತಡಹದೇಡಮ್ಮಾಡಿ ರಾಯನ ವನಕೇಳಿಗೆಡೞಾಗದಿರದು ನಿನ್ನಾಣೆ (ಜಾಗಕು. ೪-೩೨) ; ಯಕ್ಷ ರಾಕ್ಷಸ ಗಂಧರ್ವರಿಗೆ ಸಹ ನನ್ನ ತಮ್ಮಂದಿರನ್ನು ತಡಹುವ ಶಕ್ತಿಯಿಲ್ಲ (ಕಪತು. ೭-೪೪). ೪. ಬಳಿ; ತೊಡೆ ; ಸವರು ; ಲೇಪಿಸು : ಪರಿಯಣಕೆ ತುಪ್ಪಮಂ ತಡಹಿ (ಸೂಪಶಾ. ೧-೨೦); ಹೊರಿಗೆಗೆ ಸಮದುಂಡೆ ಯೊಂದನೆ ತೆಗೆದು . . . ಪದಪಿನಿಂ ಹಂಚಿನೊಳು ತುಪ್ಪವ ತಡಹಿ ಅದಲು ಮಂಡಗೆಯೆನಿಸಿಕೊಂಬುದು (ಸೂಪಶಾ. ೧-೨೯). ೫. ತಟ್ಟು ; ಬಡಿ : ನಿಶೆಯೊಳೈತಂದು ಬಾಗಿಲ ತಡಹಲು (ಸವಪೋ. ೧೫-೨) ; ಬಂದೊರ್ವ ಜಾರ ಬಾಗಿಲ ತಡಹಲು (ಸವಪೋ. ೧೭-೨೫). [ ದೇ.ಶ ತಮಿ. ತಟವು ; ಮಲ. ತಡವು ; ಕೊಡ. ತಡ್ವ್ ; ತೆಲು. ತಡವು, ತಡಮು ]

**ತಡವು₃**, ತಡಪು₂, ತಡಹು₃ (ನಾ). ೧. ಅಡ್ಡಿ ; ತಡೆ ; ವಿಘ್ನ : ಈ ನಿವನೆನಗೆ ಕೊಡಬೇಕೆಬೇಕೆಂದು ಕೊಂಡೊಯ್ವರೆನಗಿಲ್ಲಿ ತಡವುಂಟೆ ತಾತ ನರ್ಥಾಂಗಿ (ಕುರಾಸಾಂ. ೩೨-೯೭). ೨. ಸಾವಕಾಶ ; ವಿಳಂಬ : ಚರರಂ ತಡವಿಲ್ಲದೆ ಬೇಗಮಟ್ಟೆ ಪಂಕೇರುಹನಾಭನಂ ಬರಿಸಿ (ಶಂಜಭಾ. ೬-೨೦) ; ಮಗಂ ಪುಟ್ಟಿದಾಗಡೆ ಮಾಡಲ್ಪಗೆದಂದೆನಿಲ್ಲಿನಿಸುವಾಯುಷ್ಕಾಮುಮಂ ಯಜ್ಞಮಂ ತಡವಂ ಮಾಡಿದೆನೀಗಳಿಂದೆ ಬಗೆ ನೀಂ ತತ್ಕಾರ್ಯಸಂಸಿದ್ಧಿಯಂ (ಕಾದಂಬಾ. ೭೨೪) : ತಡವು ಬೇಡೆನೆ ಕೌರವೇಂದ್ರನ ನುಡಿಗೆ ಮುನ್ನನಂ ವಾಯ್ತು (ಕುಮಾವ್ಯಾ. ೧-೩೭). ೩. ಅವಕಾಶ ; ತೆರವು ; ಬಿಡುವು: 'ತಡವುಗೊಡು' ಪರಾ. △ **ತಡಪು₂** ೧: (ಕ). ೪. ತಿರುಪಿನ ಮೊಳೆಯು ಸಡಿಲವಾಗದಂತೆ ಅದರ ಕೊನೆಯಲ್ಲಿಡುವ ತಡೆಬಿಲ್ಲೆ : (ಕ). **ತಡಹು₃** : ೧. ಶರಣರ್ಗೆ ತಡಹಿಲ್ಲವೆಂಬುದಂ ತನ್ನ ಮನಜ್ಞಾನ ದಿಂದವೇ ಅಱಿದು (ಭಸವ. ೩೧) ; ಬಿರಿದು ಕಟ್ಟಿದ ಬಂಟಂಗೆ ತಡಹಿಲ್ಲದೆ ಬಱುಬಂಗುಂಟೆ ಮನೆದಗಹು (ಕೋಲಶಾಂ. ೧೩-೫೭). ೫. ಏರಿ; ಕಟ್ಟೆ (?): ಕಡುಗಲಿ ವರುಣನಾತ್ಮಜರು ತಡಹನೊಡವ ಸಿಡಿಲಂತು ಗರ್ಜಿಸುತವೆ ನಡೆದು ಬಂದರದೇನೆನಲಿ (ಅಂಜಕ. ೬-೧೭೭) ; ಶೋಕಿಪ ಮಡದಿಯರ ಕಂಗಳ ಜಲ ತಡಹನೊಡೆದ ಹೊಳೆಯಾಯಿತು (ಅಂಜಕ. ೭-೯೯).

[ < ತಡವು₁ ]

**ತಡವು₄** (ನಾ). ಸೋಂಕು ; ಸ್ಪರ್ಶ : ಹೊಣಕೆಗಳ ತಡಹುಗಳ ಕಲಿತಸದ ಕಡುಹುಗಳ ರಣದವಕದಿಂ ಕುದಿಯುತಿಹುದು ಹಂಸಧ್ವಜನ ಪರಿವಾರಂ (ಜೈಮಿಭಾ. ೦೦-೪೧) ; ಸವಿ ಬೆಳಗು ತಡವು ದನಿ ನಾತವೆಂಬೈದಱ ಬಗೆ ತಿಳಿವನೆಡೆಯುದೇ ಲೋಕಂ (ಕುಂಜಳ್. ೧-೩-೭). 'ಕೈತಡವು' ಪರಾ.

[ < ತಡವು₂ ]

**ತಡವುಗೊಡು** (ಕ್ರಿ). ಅವಕಾಶಕೊಡು ; ತೆರವುಗೊಡು : ಇವು ಪಟ್ಟಣಂಗಳು ಇವು ಅರಣ್ಯಗಳು ಎಂದು ವೆರ್ಬಡಿಸಿ [ ಬೇರ್ಪಡಿಸಿ ] ನೋಡುವುದಕ್ಕೆ ತಡವುಗೊಡದೆ (ಪಾಗಂಧಿ. ೦೭೮-೨೦). [ ತಡವು₃ + ಕೊಡು₁ ]

**ತಡವೆ** (ನಾ). ಸಲ ; ಸರತಿ ; ಬಾರಿ : ವೆಂಕಟ್ರಾಮ ಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ದರಿಂದ (ಮೈಆರಿ. ೧೯೩೮, ೫೩-೫ ; 1805) ; ಎರಡು ದಿನ ಮೂರುದಿನಕೆ ಒಂ ದೊಂ ದು ತಡವೆ ಬೆಂಗಳೂರು ಪ್ಯಾಟೆ ಹೊಕ್ಕು (ಹೃದರ. ೭೬) ; ಬಡಿಸುವಾಗ ಒಂದೆರಡು ತಡವೆ ಅಳಿಯನಾಗುವವನನ್ನು ನೋಡಿದಳು (ಸಾವಿತ್ರಿ. ೧೧).

[ ದೇ.ಶ ತಮಿ. ತಟವೈ ; ತೆಲು. ತಡವ ]

**ತಡಸ** 'ತಡಸು₁' ನೋ.

**ತಡಸಲ₁** 'ತಡಸಲು₁' ನೋ.

**ತಡಸಲ₂** 'ತಡಸಲು₂' ನೋ.

**ತಡಸಲು₁**, ತಡಸಲ₁ (ನಾ). (ಉಕ) ೧. = ತಡಸು₁ : (ಕ). ೨. ಎತ್ತರದಿಂದ ಆಳಕ್ಕೆ ಧುಮುಕುವ ನೀರು; ಅಬ್ಬಿ ; ಜಲಪಾತ ; ಧಬಧಬೆ (ಉಕ) : ತಡಸಲು ತಡಸಲು ಅಗೊ ಅಲ್ಲಿ, ದಡದಡ ಎನ್ನುವುದು ಎದೆ ಇಲ್ಲಿ (ಉಯ್ಯಾಲೆ. ೭೭-೦) ; ವಚನಗಳ ಪ್ರವಾಹ ಹತ್ತುಕಡೆಗೆ ಹರಿದು ತಡಸಲಾಗಿ ಬೀಳತೊಡಗಿತು (ಕಸಾಇ. ೩೧೫). **ತಡಸಲ₁** : ಸೆಳವಿನೋಳ್ಸಿಕ್ಕೊದರಿ ತಡಸಲಕೆ ಬಿದ್ದು ಸುವನಳಿವಲ್ಲಿ (ದುರಕು. ೨೦-೧೧); ಗೋಕಾವಿಯ ಪಶ್ಚಿಮಕ್ಕೆ ಸುಮಾರು ಮೂರೂವರೆ ಮೈಲುಗಳ ಮೇಲೆ ಘಟಪ್ರಭೆಯ ತಡಸಲವುಂಟು (ಮುಂಬಯಿ. ೫-೭೭) ; ಕನ್ನಡದ ಈ ತುದಿಯು ತಡಸಲದಂದ ಜೋಗದ ಮಿಂಚಿಗೂ . . . ಇದುವು ನಡುಗಿಸಲರಿಯದೋ (ಅರಳು. ೩೦೨-೩). [?]

**ತಡಸಲು₂**, ತಡಸಲ₂ (ನಾ). ಒಂದು ಬಗೆಯ ಮರ : ತಡಸಲು ತಡ್ಸಾಲ್ (ಮೈಶಿಗಿ. ೪೧-೮೦೯) ; ಮರಗಳು: ಹೆಸವ . . . ಬೀಟೆ, ಪಚರಿ, ಬಿರಿಡಿ, ಕೂಲಿ, ತಡಸಲು, ತಪಸಿ, ನಂದಿ, ಕುಂಕುಮ (ನಮ್ಮನು. ೨೩೭). **ತಡಸಲ₂**: ತಡಸಲ (ಧಾಮಣ),–ತಕ್ಕಮಟ್ಟಿಗೆ ದೊಡ್ಡದು, ಕಟ್ಟಿಗೆ ನಸುಗೆಂಪು . . . ಗಾಡಿಗಳಿಗೆ ಮೇಲಾದದ್ದು (ಕಭಾಗಿ. ೪೦). [ ? ]

**ತಡಸಲುದೀಪ** (ನಾ). ನಿರ್ದಿಷ್ಟವಾದ ಕಡೆಗೆ ಅತಿಶಯವಾದ ಬೆಳಕನ್ನು ಹರಿಸುವ ವಿದ್ಯುದ್ದೀಪ : ರಂಗದ ಮೇಲೆ ವಿಶೇಷ ರೀತಿಯ ಕತ್ತಲೆ – ಬೆಳಕು ನಿಯೋಜನೆಗಾಗಿ ಹೊಸದಾಗಿ ನಾಲ್ಕು 'ತಡಸಲುದೀಪ' (Flood-light) ಕೊಂಡದ್ದಾಯಿತು (ನಟಸಾ. ೬೨೨).

[ P ಇದು ಇಂಗ್ಲಿಷಿನ 'Flood-light' ಎಂಬ ಪದದ ಅನುವಾದ ]

**ತಡಸು$_1$**(ನಾ).(ಗದ್ದೆಯಲ್ಲಿ ಒತ್ತಾಗಿ ಬೆಳೆದ ಸಸಿಗಳಂತೆ) ಒಂದಕ್ಕೊಂದು ತಡೆಯಾಗಿರುವಿಕೆ; ಪರಸ್ಪರ ಪ್ರತಿಬಂಧಕವಾಗಿರುವುದು: (ಕ).

[ದೇ.॥ ಮಲ. ತಡಸ್ಸು]

**ತಡಸು$_2$**, ತಡಸ (ನಾ). ಒಂದು ಬಗೆಯ ಮರ; ತಡಸಲು ಮರ: "ತಡಸು[ಪಾಠಾಂ. ತಟಸು] ನಿಟಿಳಂ" (ಮಂಗರಾ. ೩೭-೦೮); ಹಲಸಾಲಂ ತಡಸಾಸು ತೇಗು ತದಿಕು . . . ಎಂಬೀ ಮರದುಱುಗಲಿಱುಂಬಿನಿಂದತಿ ಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೫೮); ಅಂಬಟೆ ತಡಸೀಳೆ ಬಾಳೆ ಸಿರಿಸಂ . . . ಇಡಿಕಿಱಿದಿರ್ದು ಪೇರಡವಿ (ಧರ್ಮಾಪ. ೩-೪೭); ಪಾಲಾಶಮರಟಾಳಮಾ ತಡಸು ಕಕ್ಕೆಯಂಕೊಲೆ . . . ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಜಿಬಪು. ೫೩-೧೮). **ತಡಸ**: ತಂಡಸ ತಡಸ[ಪಾಠಾಂ. ಲು]ತುಗ್ಗಿಲು ತದಿಕು ತಪಸಿಗಳ . . . ತಮಾಲತರು ಮೊದಲಾದ ವನ ಭೂಜಾಳಿಯಲಿ ಹೊಳೆದರು (ತೊರಟಾ. ೭-೦೮-೧೭); ತಡಸ ತಾಱ ನೆಲ್ಲಿ ಹುಣಿಸೆ ಬಸುರಿ ಬೇವು ಮೊದಲಾದ ತರುಗಳು ಎಣಿಕೆಗೆ ಇಲ್ಲದಲ್ಲಿಹವು (ರಾಮವಿ. ೦೫-೫೮); ತಾ . ವ ತಡಸದ ಬೇವಿನ ಬೇಲದ . . . ಮರದೋಳಿಯಿಂದೆಸೆದುದಾ ವಿಟಿನ (ಕುರಾಸಾಂ. ೨೭-೫೭).

**ತಡಹ** (ನಾ). ಗೊಡವೆ; ಗೋಜು; ಪ್ರಸಕ್ತಿ: ಕಾನನದಡೆಯ ಮೃಗಪಕ್ಷಿಗಳ ವಾರ್ತೆಯ ತಡಹವೇತಕ್ಕೆಕಟ (ಸದ್ಮರು. ೭-೦೭). [<ತಡವು$_2$]

**ತಡಹರ** (ನಾ). "ಬೊಕ್ಕೆ; ಗುಳ್ಳೆ; ಹೊಪ್ಪಳೆ" (ಶಬ್ದಮ.): ಮೆಯ್ಯೊಳಿಟ್ಟ ಕೈ ಸಿಡಿವಿನಮಳ್ಕಿಕೊಳ್ವ ವಿರಹಜ್ವರದುಗ್ರತರಾತಿರೇಕದಿಂ ತಡಹರಮೆರ್ದು ವೆಂಬಿನೆಗಮೆರ್ದುವು ಮೆಯ್ಯನಿರಾ ಮೃಗಾಕ್ಷಿಯಾ (ಲೀಲಾವ. ೧೨-೩೭). 'ದಡಾರ' ಪರಾ. [?]

**ತಡಹಾಯು** 'ತಡಂಬಾಯ್' ನೋ.

**ತಡಹಿಡು** 'ತಡವಿಡು$_2$' ನೋ.

**ತಡಹು$_1$** 'ತಡವು$_1$' ನೋ.

**ತಡಹು$_2$** 'ತಡವು$_2$' ನೋ.

**ತಡಹು$_3$** 'ತಡವು$_3$' ನೋ.

**ತಡಹು$_4$** (ನಾ). ೧. ಧೈರ್ಯ. ೨. ಸಮಾಧಾನ: ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ ಕಂಜನಾಭ ಕಪರ್ದಿಗಳ ಪದಕಂಜಗಳ ಮೇಲಾಣೆ ದಿಟವಿದುವಂಜ ಬಿಡು ತಡಹಿರಲಿ ಮನದೊಳಗೆ (ಕೊ೯ಗಯು. ೦೦-೪೬). [?]

**ತಡಾಕ** (ನಾ). ಕೆರೆ; ತಟಾಕ. [ಸಂ.]

**ತಡಾಗ** (ನಾ). = ತಟಾಕ: ತಡಾಗತತಿ ಕಣ್ಗೆಸೆನುನ್ನತ ಪಾದಪೋತ್ಕರಂ ಸೀಗುರಿಯಿಂ ಕರಂ ಕಿಱಿಯವಾದವು ಕಣ್ಗೆ (ಅರ್ಧನೇ. ೭-೪); ಮಹಾಮಾಯೆ ತಡಾಗದಂಬಿಕೆ ವಸಂತಾದೇವಿ . . . ಶ್ರೀ ಗುಪ್ತಚಾಮುಂಡಿಯೆಂಬ ಮಹಾದೇವಿಯರಿರ್ಪ ಸೈಪಿನೊದವಿಂದಂ ಕುಕ್ಕನೂರ್ಪಾವನಂ (ಜಾಸಪ. ೮೭; 1179); ಕದಂಬವಂಶದ ಮಯೂರಶರ್ಮನು ತಡಾಗವನ್ನು ಕಟ್ಟಿಸಿದನೆಂದು ಬರೆದಿದೆ (ಕರ್ನಾಅ. ೦೬). [ಸಂ.]

**ತಡಾಯಿಸು** (ಕ್ರಿ). ದಾಟಿಸು; ದಂಡೆಗೆ ಮುಟ್ಟಿಸು: ದೊಡ್ಡ ಕಾರ್ಯ. ದೊಡ್ಡ ಮನಸ್ಸುಮಾಡಿ ನದಿ ತಡಾಯಿಸಬೇಕು (ಮಾಪುನ. ೦೯೭). 'ತಟಾಯಿಸು' ಪರಾ. [ತಡ$_2$ + ಹಾಯಿಸು (<ಪಾಯಿಸು)]

**ತಡಿ$_1$** (ನಾ). ತೇವ; ಒದ್ದೆ: ಅಳ್ಳೆಗಳನು ಹೊಯ್ಯುತ್ತ ಉಬ್ಬಸದಿ ತಡಿಯಿನಿತು ಬಾಯೊಳಗಿಲ್ಲದಾರಿ ಒಣಗಿದ ನಾಲಿಗೆಯಲಿ ತೊದಲ್ನುಡಿಯಿಂದಯಿಂತೆಂದನು (ಶವಪೊ. ೨೮-೫೭). 'ತಡಿಯಾರಂ' ಪರಾ.

[←ತೆಲು. ತಡಿ]

**ತಡಿ$_2$**, ದಡಿ$_2$, ಧಡಿ$_1$ (ನಾ). ೧. ದಡ; ದಂಡೆ; ತೀರ: ತುಂಗಭದ್ರೆಯಾ ತಡಿಯೊಳ್ ತಾಣ ಬೀಡುಗಳ್ ಇಟ್ಟು (ಇಅ. XI, ೦೨೭-೮: ೬೦೩): ವಿಶಾಳೆಯೆಂಬ ತೊಱೆಯ ತಡಿಯೊಳನಿಬರುಮೇಕಪಾರ್ಶ್ವದೊಳ್ ಪಟ್ಟಿರ್ದು (ವಡ್ಡಾರಾ.೧೦೦-೧೧); ಪೂಗೊಳದ ತಡಿಯ ಮಾಮರದಡಿಯೊಳ್ . . . ನಿತ್ಯನಿಯಮಂಗಳಂ ತೀರ್ಚಿ (ಪಂಚತಂ. ೧೨೦-೮); ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ (ಮಹಾದೇ.ಬ.೪೫-೧೦೭); ಕಂದನ . . . ಜಾಹ್ನವಿ ತರಂಗದಿ ನೋಯಲೀಯದೆ ಮುಳುಗಲೀಯದೆ ಚಾಚಿದಳು ತಡಿಗೆ (ಕುವ್ಯಾಅ. ೩-೨೨). ೨. ಎಲ್ಲೆ; ಮೇರೆ; ಮಿತಿ: ಲೋಗರ ಲೋಕದ ತೃಷ್ಣೆಗೆ ತಡಿಯುಂಟೆ (ರಾಮೂಕ್ಕ. ೭೫-೪). ೩. ಸಮೀಪ; ಹತ್ತಿರ: ನೀ ನಡೆವೈ ಸಂಪತ್ತಿನ ತಡಿಗೆ (ಕವಿಪು. ೭-೨೦). **ದಡಿ$_2$**: ೨. ಘುಡುಘುಡಿಸಿದನು ರೋಷವಹ್ನಿಯ ದ[ಪಾಠಾಂ. ತ]ಡಿಯ ಹೊಕ್ಕನು (ಕುವ್ಯಾಸ. ೧೫-೫೬). ೪. ವಸ್ತ್ರ ಮೊದಲಾದವುಗಳ ಅಂಚು: ನನನಲ್ಲ ಮಲ್ಲಗ ದಡಿಯುಳ್ಳ ದೋತರ ಮಾನವಿಮ್ಮಿಕೊಂದು ತರುವೇನ ಮಾರಾಯ್ನ ಮೈಗೆ ಮುಡುಪಾಗಿ (ಜಾಸಿಗ.೯೩-೧೧). ೫. ದಿಂಡು; ಕಟ್ಟೆ: ಇದಿರಿನ ಕಿಡಕಿಯ ದಡಿಯಮೇಲೆ ಕೂತು . . . ಗೆಳೆಯನ ಮಾತನ್ನು ಆಲಿಸಹತ್ತಿದ (ಮೂರುದಾ. ೨೦೦). **ಧಡಿ$_1$**: ೧. ಸಂಸಾರವೆಂದೆಂಬೊ ಉಬ್ಬಲದೊಳು ಬಿದ್ದು ಬಳಲಿ ತೊಳಲಿ ಒಬ್ಬರಾವರು ಧಡಿಗೆ ನಿಲಿಪಾರಿಲ್ಲ (ಮೋಕ್ಷದೀ. ೦೯೯). ೪. ಕಲ್ಲಪ್ಪ . . . ಧಡಿಯ ದೋತರವನ್ನು ಹೆಗಲಮೇಲೆ ಸರಿಯಾಗಿ ಒಗೆದುಕೊಂಡು . . . ನುಡಿದ (ಅಚೋಳ. ೪).

**ತಡಿದಡಿ, ತಡಿತಡಿ** (ದ್ವಿರುಕ್ತಿ): ತಡಿತಡಿಯ ತೆಂಗಿನೆಳ ನೀರ್ ಕೂಡೆ ಕರೆಗಣ್ಮುವ ಕೊಳಂಗಳೊಳಪೊಕ್ಕು . . . ಎಳವಿದಿರ ಬಣ್ಣಮಂ ತಳೆದ ನೀರ್ವಣ್ಣಂತಿರ್ಪಳ್ (ಕಬ್ಬಿಕಾ. ೩೧೫); ಜಿನಮತಾಂಭೋಧಿಯುಮಂ ಪುಗದಾಗಮಮಜೀವರ ಬಗೆವುಗದೆ ಕೆಲರ್ ಕವಿಗಳಾಡಿದರ್ ತಡಿದ[ಪಾಠಾಂ. ತ]ಡಿಯೊಳ್ (ಅಜಿಪು. ೦-೯೫); ಕಡಲ ತಡಿದಡಿಯೊಳಾತಂ ನಡಿಸಿದ ಕಾಂಚನ ಜಗಜ್ಜಯಸ್ತಂಭಂಗಳ್ (ಚಂದ್ರಪು. ೭-೩೧). **ತಡಿಗಾಗು**=ದಡವನ್ನು ಸೇರು: ತೆಪ್ಪವನು ನಂಬಿದಡೆ ತಪ್ಪದಲೆ ತಡಿಗಹುದು (ಸರ್ವಜ್ಞ. ೨೭೮).

[<ಪ್ರಾ. ತಡಿ./ಸಂ. ತಟೀ]

**ತಡಿ$_3$**, ಥಡಿ, ದಡಿ$_3$ (ನಾ). ೧. ಕುದುರೆಯ ಬೆನ್ನ ಮೇಲೆ ಹಾಕುವ ಹಲ್ಲಣ; ಜೀನು: ತ[ಪಾಠಾಂ. ದ]ಡಿಯ ಬಲಿಸುವ ಗುಳವ ಱಂಚೆಯ ಗಡಣಿಸುವ . . . ಉತ್ಸಹವಾಯ್ತಾವರ ಪಾಂಡವರ ಬೀಡಿನಲಿ (ಕುವ್ಯಾಉ. ೧೦-೧೨); ಅರೆಗಡಿದ ಪಕ್ಕರೆಯ ಖಂಡಿಸಿದ ತಡಿಯ . . . ಹೇರಾಳದಿಂ ಬಿಡದೆಸೆದುದು ರಣಭೂಮಿ (ಕುರಾಸಾಂ. ೨೦-೪೪); ಕುದುರೆಗೆ ತಡಿಯನ್ನು ಕೂಡ ಹಾಕದೆ ಅದನ್ನು ಹತ್ತಿಕೊಂಡು ಹೊರಟನು (ಪ್ರಮುಹ. ೭೦). **ಥಡಿ**: ೧. ಕುದುರೆಯ ಥಡಿಯಂಥ ಮೆತ್ತನ್ನ ಹಾಸಿಗೆ ನನಗೆ ಒಳ್ಳೆಯದೆನಿಸಿತು (ಸ್ವಕಿಜಿ. ೨೫೫): ಥಡಿ ಹಾಕೊ ರಾಯ ಕುದುರೇಗೆ (ಹಳ್ಳಿಯು. ೯೨). ೨. ಹಾಸು; ಹಾಸಿಗೆ: ನಡುಮನೆಯಲ್ಲಿ ಶೀನಪ್ಪಯ್ಯನಿಗೊಂದು ಥಡಿ ಹಾಕಿದರು (ಪ್ರಕ್ಕ. ೦೪೨). **ದಡಿ$_3$**: ೧. ತೆಗೆ ದಡಿಯ ಹಾಯಿಕು ಗುಳವ ಕಾ ಮೊಗವಡವ (ಕುವ್ಯಾಕ. ೮-೧೧); ಕಡಿದ ಹಕ್ಕರಿಕೆಗಳ ಸೀಳಿದ ದಡಿಯ ನೆಗ್ಗಿದ ಗುಳದ ಱಂಚೆಯ . . . ಕುಸುರಿಗಳಲಸೆದುದು ರಣಭೂಮಿ (ಕುವ್ಯಾಕ. ೧೫-೩೦). ೩. (?): ಜೋಡಿ ಹಱಿದುದು ಸೀಸಕದ ದಡಿ ಬೀಡು ಬಿರಿದುದು ತಲೆಯ ಚಿಪ್ಪಿನ ಜೋಡು ಜಱಿದುದು ಮನಕೆ ಸುಱಿದುದು ಸೊಗಡು ರಣರಭಸ (ಕುವ್ಯಾಅ. ೦೯-೩೭).

[←ಹಿಂ. ಮರಾ. ಥಡಾ]

**ತಡಿಕೆ**, ತಡಕೆ (ನಾ). ೧. ಬಿದಿರು, ಗರಿ ಮೊದಲಾದುವುಗಳನ್ನು ಹೆಣೆದು ಮಾಡಿದ ತಟ್ಟಿ: ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ (ಮಹಾದೇ. ಬ. ೪೭-೧೦೮); ಹಡಹಿನಾಸೆಯೊಳೊರ್ವ ಬಡ ಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಏಡಿದಬ್ಬೆಯಿಂದ ಮಿಡಿಸಿ . . . ನಿಂದಿಹಳು (ಅಂಜಿಡಿ. ೩-೦೫೦); ತಡಿಕೆ ಮಕ್ಕರಿ ಸಹ ಬಹ ಕಾಮಾಟದ ಬಿಡುಮಂದಿಗೆ

ಲೆಕ್ಕವಿಲ್ಲ (ಶಂಪವಿ. ೧೧-೪೦) ; ಮುಂಡಿವಾಳ ಚಾವೆಗಳಿಂ ತಡಿಕೆಗಳಂ ರಚಿಸಿ (ಸೌಗಂಧಿ. ೧೩೬-೧೭) ; ಒಳಗೋಡೆಗಳೆಲ್ಲಾ ತಡಿಕೆ (ಅರಿಮ. ೧೬೩). ೨. ಒಂದುಂ ಬಗೆಯ ಬಲೆ ; ತಡಿಕೆವಲೆ : ತಡಿಕೆ ದೀವದ ಖಗಮೃಗ ಸಂತತಿ ಗೂಡಿ ನಡೆತಂದನಾ ವನಚರನು (ನೇಮಿಸಂ. ೨-೩೮) : ಬಾಣನಂದನನೆಂಬ ತಡಿಕೆಯ ಮಱೆಯ ಸುಜಾಣ ಮನ್ಮಥನುರುಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೩-೧೬) ; ತಡಿಕೆಯುಂ ಪಿಡಿದೊರ್ವ ಮಾಯಾ ಪುಳಿಂದನಡಿಯಿಡುವುದುಂ ಕಂಡೊಂದು ಪುಲ್ಲೆ ತನ್ನೆರ್ದೆಯೊಳಂ ನಡುಗಿ (ಜಿಬಪು. ೫೩-೨೯) : ಪಾಸುವಲೆ ಬೀಸುವಲೆ ತಡಿಕೆ ಕಾಲ್ಗಣ್ಣಿಂಟುಗಟ್ಟಿಗೆಯು (ರಾಘಾಶ. ೧೭-೭೭). ೩. ತೆರೆ ; ಮರೆ : ಇವರನಂಗಡಿಯ ತಡಿಕೆಯು ಕೀಳಲ ಕೆಳಗಿಱದೊಡೆ ದಣ್ಡಮುಂ ದೋಷಮುಮಿಲ್ಲ (ಎಕ. XV, ೬೯-೨೭ ; 1050) : ಲೋಹದ ತಡಿಕೆಗಳ ನಳವಡಿಸಿ ಬೀಡಿನ ನಡುವೆ ರಚಿಸಿದರವನಿಪಾಲನ ರಾಜಮಂದಿರವ (ಕುಮ್ವಾಭೀ.೧-೩೦) : ಈ ಪೀಠಗಳ ಸುತ್ತ ಬೆಳಕು ತೂರದ ಗಾಜಿನಿಂದ ಮಾಡಿದ ತಡಿಕೆಗಳಿವೆ (ಪ್ರಪಾಇ. I, ೪೯೭). ೪. ಚೌಕಟ್ಟು ; ಚಪ್ಪರ ; ಹಂದರ ; ಹೆಣಿಗೆ : ಕತೆಯ ತಡಿಕೆಯುನ್ನು ಎಲ್ಲಿಂದಲೋ ಎತ್ತಿಕೊಂಡಿದ್ದರೂ . . . ಮುನ್ನೂರು ಬರವಣಿಗೆಯ ಪುಟಗಳಷ್ಟು ವೃದ್ಧಿಯಾಗಿತ್ತು (ದಮ್ಮಮು. ೪) : ಕಲೆಗಾರನೊಬ್ಬನು ಒಂದು ವಿಚಿತ್ರ ಸನ್ನಿವೇಶಕ್ಕೆ ಒಳಗಾಗಿ ಅವಸಾನ ಹೊಂದುವುದು ಇವುಗಳೆರಡರಲ್ಲಿಯೂ ಇರುವ ತಡಿಕೆ (ಅನುಕ. ೦೧೭) ತಡಕೆ : ೪. ಬಳ್ಳಿಯನ್ನು ತಡಕೆಗಳ ಅಥವಾ ಕಂಬಗಳ ಮೇಲೆ ಹಬ್ಬಲು ಬಿಡಬಹುದು (ಅಡುಸಾ. ೧೨೪). [ ದೇ.೩ ತಮಿ. ತಟುಕ್ಕು ; ಮಲ. ತಡುಕ್ಕು ; ತೆಲು. ತಡಕ, ತಡಿಕ ; ಕೊಲಾ. ತಡ್ಕಾ ]

**ತಡಿಕೆಗಟ್ಟು** (ಕ್ರಿ). ತಡಿಕೆಬಲೆಯನ್ನು ಕಟ್ಟು : ಎರೆಯ ಚೆಲ್ಲು . . . ಕೋಹುಗೊಡು ತಡಿಕೆಗಟ್ಟಂಟುದೊಡೆ (ಹಡಕಾ. ೫-೨೩). [ ತಡಿಕೆ + ಕಟ್ಟು₁ ]

**ತಡಿಕೆಗೋಡೆ** (ನಾ). ಬಿದಿರು ಅಥವಾ ಅಡಕೆ ದಬ್ಬೆಗಳನ್ನು ಹೆಣೆದು ತಡಿಕೆಗೆ ಮಣ್ಣು ಮೆತ್ತಿ ಮಾಡಿದ ಗೋಡೆ : ಪ್ರವೇಶಿಸಿತು ಪ್ರಥಮ ಕಿರಣಂ . . . ವರ್ಣಕುಟಿಯಂ, ತರಗೆಲೆಯ ತಡಿಕೆಗೋಡೆಯ ಬಿರುಕಿನಿಂದೆ (ಶ್ರೀರಾಮಾ. ೪೮೭-೨). [ ತಡಿಕೆ + ಗೋಡೆ ]

**ತಡಿಕೆಪಡಿ** (ನಾ). ಬಿದಿರಿನಿಂದ ಹೆಣೆದುಮಾಡಿದ ಬಾಗಿಲು ; ತಟ್ಟಿಯ ಬಾಗಿಲು : ಪನ್ನಗುಡಿ ತಡಿಕೆಪಡಿಯಂ ಕೆಲಕ್ಕೋಸರಿಸಿ ಬಂದಳು ಬಯಲ್ಗೆ (ಶ್ರೀರಾಮಾ. ೪೮೭-೪೦).

[ ತಡಿಕೆ + ಪಡಿ₂ ]

**ತಡಿಕೆಬಲೆ** 'ತಡಿಕೆವಲೆ' ನೋ.

**ತಡಿಕೆವಲೆ, ತಡಿಕೆಬಲೆ** (ನಾ). ತಡಿಕೆಗಳಿಂದ ಮಾಡಿದ ಒಂದು ಬಗೆಯ ಬಲೆ : ತಡಿಕೆವಲೆ ಕಣ್ಣೆವಲೆ ನಿಟ್ಟಡಕಿಲ್ವಲೆ ಗೂಂಟವಲೆ . . . ಸಿಡುವಲೆಗಳೊಪ್ಪಿದವು (ಗರಿಶ. ೦-೮೦) : ತೊಡಕಿದನು ಗಡ ಗರುಡ ಹಾವಿನ ತಡಿಕೆವಲೆಯಲಿ (ಕುಮ್ವಾಶ. ೦೭-೩೦) ; ಮಡದಿ ಮನೆ ಮನೆವಾರ್ತೆ ಮಕ್ಕಳಗಡಣವೆನ್ನದೆನುತ್ತ ಮಮತೆಯ ತಡಿಕೆವಲೆ[ಪಾಠಾಂ. ತಡಕೆವೊಲೆ] ಯಲಿ ತನು ಸಿಲುಕಿ (ನಿಭಾಗ. ೬-೧೪-೧೦) ; ಅಂಟುವಲೆಯ ತಡಿಕೆವಲೆಯು ಬೀಸುಬಲೆಯ (ರಾಮಾಶ್ವ. ೯೩-೨೨). ತಡಿಕೆಬಲೆ: ಮಡದಿಯನೋಟವೆಂಬೀ ತಡಿಕೆಬಲೆಯಲಿ ಸಿಕ್ಕಿ (ಅಮೃತ. ೨-೬೨). [ ತಡಿಕೆ + ಬಲೆ₁ ]

**ತಡಿಗಾಣ್** (ಕ್ರಿ). ದಡವನ್ನು ಕಾಣು ; ತೀರವನ್ನು ಸೇರು : ಈ ಸಂಸಾರಾಂಭೋಧಿಯನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯನಾಯಾಸದೊಳೆ (ಆದಿಪು. ೫-೬೦). [ ತಡಿ₂ + ಕಾಣ್ ]

**ತಡಿಗೂಡು** (ಕ್ರಿ). ದಡವನ್ನು ಸೇರು : ಹಬಿಗೋಲನೇಱದಡೆ ಅದ ಹಿಡಿವ ತೆಱನಱಿದಿರಬೇಕು ತಡಿ ಮಡು ಅದಱಿಯನಱಿದು ತಡಿಗೂಡಬೇಕು (ಮೋಳಿಮಾ. ೫೭-೨೩೫). [ ತಡಿ₂ + ಕೂಡು₁ ]

**ತಡಿಗೆಹಣ** (ನಾ). ಕೊಡದೆ ಉಳಿದ ಹಣ ; ಬಾಕಿ ನಿಲ್ಲಿಸಿದ ಹಣ : ಮಿಟ್ಲಕೊಪ್ಪದ ಚಂನವೀರ ಗೌಂಡನು ತಡಿಗೆ ಹಣ ಅದೆ ಅಂತ ಹೇಳಿದ್ರಿಂದ (ಎಕ. VIII, ಸಾಗರ. ೪೭-೧೭ : ?). [ <ತಡೆ₁ + -ಗೆ + ಹಣ ]

**ತಡಿಗೊಳ್** (ಕ್ರಿ). ದಡವನ್ನು ಅನುಸರಿಸು ; ದಂಡೆಗುಂಟ ಇರು : ಆ ತರಂಗಿಣಿಯ ತಡಿಗೊಂಡು ಬೆಳೆದರವಿಂದ ಸರಸಿಜದರಲ್ (ರಾಜಶೇ. ೨-೮ ವ).

ತಡಿತಡಿಗೊಳ್ (ದ್ವಿರುಕ್ತಿ) : ತಡಿತಡಿಗೊಂಡಿಂಬಾಗೆ ಪೊಳೆವ ಪಚ್ಚೆಯ ಕೊಂಬುಗಳಂ ಪಿಡಿದು ನಿಳಿಕಿ ನೆಯ್ದಿಲನಾಯ್ದರ್ (ಲೀಲಾವ. ೫-೩೩). [ ತಡಿ₂ + ಕೊಳ್₁ ]

**ತಡಿದೆರೆ** (ನಾ). ದಡಕ್ಕೆ ಅಪ್ಪಳಿಸುವ ತೆರೆ : ತ್ರಿದಶೋರ್ವೀಜಂ ಪಯೋವಾರ್ಧಿಯ ತಡಿದೆರೆಗಳ್ ಪೊಯ್ದುವೊಲ್ ನೀಡುಮಳ್ಳಾಡಿದುವು (ವರ್ಧಪು. ೧೦-೫೭). [ತಡಿ₂ + ತೆರೆ₄ ]

**ತಡಿಮೀಱು** (ಕ್ರಿ). ದಡವನ್ನು ಮೀರು ; ಮೇರೆ ಮೀರು : ತಡಿಮೀಱಿ ಬಂದ ತೆಂಕಣ ಬಡಗಣ ಕಡಲೊಂದನೊಂದು ತಾಗುವ ತೆಱದಿಂ (ಕಬ್ಬಿಕಾ. ೨೭೫). [ ತಡಿ₂ + ಮೀಱು ]

**ತಡಿಮುಟ್ಟು** (ನಾ). ದಡವನ್ನು ತುಳಿ ; ತೀರವನ್ನು ಸೇರು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳೆಗೈದಿ ತಡಿಮುಟ್ಟಿ ಶಶಿಕಾಂತಕೂಲದೊಳಗೆ ಸಾಲುವಿಡಿದೊಪ್ಪಿದರು (ಶಂಸವಿ. ೨೫-೧೩೦).

[ ತಡಿ₂ + ಮುಟ್ಟು₁ ]

**ತಡಿಯಾರು** (ಕ್ರಿ). ತೇವ ಒಣಗು ; ದ್ರವ ಬತ್ತು : ಒಡನೆ ದುಃಖಾನಲನು ಒಡಲನಾವರಿಸೆ . . . ಚೇತನದಿ ಸೊರಗಿ ಛಾಯ್ದುಡಿಯಾರಿ ಹಮ್ಮೈಸಿ (ನವಪುರಾ ೭-೭). [ ತಡಿ₁ + ಆರು₄ (<ಆಱು₁) ]

**ತಡಿವಲೆ** (ನಾ).=ತಡಿಕೆವಲೆ: ತಡಿವಲೆಯ ಬಗರಗೆಯ ವಾಜಿಯ ಸಿಡಿವಲೆಯ ಕಾಲ್ಗಣ್ಣಿಗಂಪಿಲ ಬಡಿವಲೆಯ ಬೆಳ್ಳಾರವಲೆ ಪೇರ್ಬೀಸುವ ವಲೆಗಳನು (ಅನಂರಾ. ೩-೩-೫). [ <ತಡಿಕೆವಲೆ ]

**ತಡಿವಿಡಿ** (ಕ್ರಿ). = ತಡಿಗೊಳ್ : ಏಂ ನಡೆದುದೋ ಪೆರ್ಬಡೆ ಗಂಗೆಯ ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ (ಆದಿಪು.೧೨-೬೩); ತಡಿವಿಡಿದೊಪ್ಪಿ ತೋಱುವ ತಮಾಲವನಂಗಳ ಮರ್ವು ಪರ್ವಿ (ಕಾದಂಪೂ. ೬೪೯); ತತ್ಕೂಪ ಸಮೀಪದೊಳ್ ನಿಂದು ಪೋಗಲಿಂಬಿಲ್ಲದೆ ತಡಿವಿಡಿದೆಬಲುತ್ತಿರ್ದ ಸರ್ಪನ ಬಾಲಮಂ ಬಳ್ಳಿಯೆಂದು ಬಗೆದು (ಹಂಚಶಂ. ೧೦೯-೧೮) ; ತಡೆದ ರಕ್ಕಸ ತಳವೞರ ಜವನಡೆಗೆ ಜಾಳಿಸುತಾಳುವೇರಿಯ ತಡಿವಿಡಿದು ಶೋಧಿಸಿದನಲ್ಲಿ ಸದನಸಂಕುಲವ (ತೊರರಾ. ೫-೨-೧೭). [ ತಡಿ₂ + ಪಿಡಿ₁ ]

**ತಡಿಸರಿ** (ಕ್ರಿ). ಹತ್ತಿರಬರು (?): ಇರಿವುುರಿವಳ್ಳಂ ತಡಿಸರ[ರಿ]ದೆರದಪ್ಪಿದ ಹಾವು ಪಸಿದ ಪೆಣ್ಬುಲಿಯಾಂದಾ ಕರಡಿ ಕಡುಮುಳಿದ ಸಿಂಹಂ ಸ್ಪುರದನಲನ ಜ್ವಾಲೆ ಬಾಲೆಯೆಂಬನೆ ಸುಜನಂ (ಉಷಾರ. ೨೦೨). [ ತಡಿ₂ + ಸರಿ₁ ]

**ತಡಿಸಾರ್** (ಕ್ರಿ). ಕೊನೆಯನ್ನು ಮುಟ್ಟು ; ಮುಗಿ ; ತೀರು : ಪೊಣ್ಮಿರ್ದ ಮೋಹೋದಯಂ ತಡಿಸಾರ್ದಿರ್ದಪುದು (ಅಜಿಪು. ೧೧-೫೪).

[ ತಡಿ₂ + ಸಾರ್₁ ]

**ತಡಿಹುಡಿ** (ನಾ). "ಪುಡಿಪುಡಿ" (ಪ್ರಭಂ) : ಹೆಜ್ಜೆಹೆಜ್ಜೆಗೆ ವಸುಧೆ ತಡಿಹುಡಿಯಾಗುತಿರ್ದುದು (ಅಂಬಿಕಾ. ೪೨-೨೦). [ ? ]

**ತಡುಂಬು** (ಕ್ರಿ). ತಡೆ ; ನಿಧಾನಿಸು (?) : ಕುಡಿದು ಚಿಲಲ್ಬುಳಲ್ಗರೆಯ ನಾಲಗೆಯಂ ಮಿಗೆ ನೀಡಿ ನೀರನೋಗಡಿಸಿ ಮರಲ್ದು ನಕ್ಕಿ ತುಟಿಯಂ ಕಡೆವಾಯ್ಗಳನಗ್ರುವಾದದಿಂ ತೊಡೆದು ತಡುಂಬಿ ತಾಂ ತೊಡಬಗೆತ್ತುವ [ಪಾಠಾಂ. ದೊಡಲನೆತ್ತುತ]ಮಾಗುಳಿಸುತ್ತೆ ಬಿಟ್ಟು ಕಣ್ಬೊರ್ದರ್ಗಳನಿ ಕ್ಕೆಲಕ್ಕಲಿಸಿ ಪೋಪ ತರಕ್ಷುವನುದ್ಬುಭುಕ್ಷುವಂ (ಲೀಲಾವ. ೬-೫೯). [ ? ]

**ತಡುಗಣೆ** 'ತಡಗುಣೆ' ನೋ.

**ತಡುಗುಣಿ** 'ತಡಗುಣಿ' ನೋ.

**ತಡುಪು** 'ತೊಡಪ್ಪು' ನೋ.

**ತಡುಮಾಡು** (ಕ್ರಿ). ನೆಲೆಯಾಗಿ ನಿಲ್ಲು ; ಆಸಕ್ತವಾಗು ; ತೊಡಗು : ಬಾಡದ ಬಾಸಿಗಮುಡೆ ಬೆಲ್ವೋಡದ ದಿವ್ಯಾಂಬರಂ ಮನಂಗೊಳೆ ಸುಖದೊಳ್ ಮೂಡುವ ಮುಟ್ಟಾಡುವ ತಡುಮಾಡುವ ಬಗೆಯಿಲ್ಲದಲ್ಲಿ ಬಗೆ ಪೆಱತುಂಟೇ (ಆದಿಪು. ೬-೪೦). [ P 'ತಡಮಾಡು' ಎಂಬುದರ ಅಪಲಿಖಿತ ]

**ತಡೆ**₁ (ಕ್ರಿ). ೧. ತಡಮಾಡು ; ಹೊತ್ತುಗಳೆ ; ನಿಧಾನಿಸು : "ತಡೆ- ಕಾಲಕ್ಷೇಪೇ" (ಶಮದ) ; ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯೆ ಪಗಲ್ ಪಿರಿಯುವವ್ವಾ ಪುರವರದೊಳ್ (ಕಾವ್ಯಸಾ. ೧೭೮ ಚಂದ್ರಶೇ); ಜಡಜನಮುವೆಲ್ಲವೋದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ (ಕವಿರಾ. ೩-೦೦) ; ನೀರಂ ಕೊಂಡು ತಡೆಯದೆ ಬಾಯೆಂಬುದುಂ (ಪಂಪಭಾ. ೮-೪೦ ವ) ; ತಡೆದೈ ವಂಚಕ ಕೊರ್ತವೊಲ್ ಕುಱುಪುವೇಟ್ಟಲ್ಲಿರ್ದೆ (ಶಾದಂಪು. ೩೨೩); ಅನಲಜೆಯನಂದು ಪರಿಭವಿಸಿಯೆ ದಳ್ಳೆಂದುರಿದು ಸೋರ್ಕಿದವನಂ ಕೊಂದೆಂ ಕುರುಪತಿಯನಿಂ ಕೊಲಲ್ತಡೆದ ಪೆನೇ (ಗದಾಯು. ೬-೨೭); ಮಹಾಮಹಿಮ ರಾಜಸುತ ಪ್ರತಿಪಕ್ಷಿಯೆಂಬಿವಂ ತಡೆಯದೆ ವೀರಸಾನ್ವರ ಮಹೀಪತಿ ತಾ ದಯೆಗೆಯ್ದು ಕೊಳ್ವೊಡಂ. . . ನೆಗಟ್ದಿಯನೆಯ್ದೆ ಕೊಟ್ಟನ್ (ಮ್ಯಾಅರಿ. ೦೯೩೦, ೭೪-೫೭ : 1053); ಮಗನೆ ನಿಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ (ಕುಮಾವ್ಯಾ.ದ್ರೋ. ೩-೨೨) ; ಪೆಣ್ಣಳಿ ತನ್ನ ಮನದನ್ನ ಮಧುಮಿತ್ರನೆಂಬರಸಗಿಳಿಯರುಳ್ ತಡೆಯ ಶೋಕಿಸುತಿರ್ದುದು (ಚಿಬಪು. ೪೭-೪). ೨. ತಡವಾಗು ; ವಿಳಂಬವಾಗು : ಗಾಂಧಾರಿ . . . ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ (ಪಂಪಭಾ. ೧-೧೨ ವ). ೩. ಉಳಿ ; ನಿಲ್ಲು : ಆತನ ಕೆಲದೊಳ್ನೀರ ತಡೆದ ಬೇಗವೆನಿತು (ಶಾದಂಪು. ೮೦೬) ; ನಡೆದೊಡೆ ಕಾಲ್ನೊಂದವುದೆಂದಡಿಗಡಿ ಗಾರಯ್ದು ತಡೆಯುವಂದಾಳಿಯರಂ ಜಡಿವಾ ಜನನಿಯುಂ (ಧರ್ಮಾಮೃ. ೩-೫೫) ; ತಡೆಯದು ಜವ್ವನಂ ಪದವಿ ನಿಲ್ಲದು (ಅನಂಪು. ೯-೪೫); ಅರಮನೆ ಯೊಳಗೆ ಮತ್ತಾ ದಿನ ತಡೆದು ಶ್ರೀ ಗುರುಹಂಸನಾಥನ ಭಜಿಸಿ (ಭರತೇ. ೩೭-೫೪). ೪. ಅಡ್ಡಗಟ್ಟು ; ಎದುರಿಸು ; ನಿರೋಧಿಸು ; ನಿಲ್ಲಿಸು : ಅಡರ್ಪದೆ ವಿಜಯಾರ್ಧ ಗಿರಿಯನಿಂತೀಗಳೆ ಪೂಣ್ದಡಗಿಡುವುದೆ ಸಿಂಧುವನಿಂ ತಡೆವಂದುಮಿದಾವುದಮ್ಮನೆವ್ಮನೆ ಬೆಸಸಾ (ಆದಿಪು. ೧೩-೨೦) ; ಆರ್ ಕೊಳ್ವೊಡಂ ತಡೆಯದ ಕನಕರಾಶಿಯುಮಂ (ಆದಿಪು. ೦೦-೦ ವ); ಖತಿಯಲಿ ಮಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ (ಕುಮಾವ್ಯಾ.ದ್ರೋ. ೫-೫೦) ; ಮೇದಿನಿಯೊಳಾರಾದೊಡಂ ಮಿಡುಕುಳ್ಳೊಡುನ್ನತ ಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೦) ; ತಡೆದೊಡೆ ತಡೆವೆಮೆಂದು ಕಟ್ಟಿ ನುಡಿವುದುಂ (ರಾಮಾಶ್ವ. ೧೫೯-೦೦). ೫. ತಾಳಿಕೊಳ್ಳು ; ಸೈರಿಸು ; ಸಹಿಸು : ಪೆರ್ಚಿಟ್ಟುಕ್ಕಿ ನೂಕುವ ಮಹಾವಾತಘಾತವಂ ತಡೆದೊರೆ ಯದಿಪ್ಪಂತಿರೆ (ಜೈಮಿಭಾ. ४-೨೯). ೬. ಸರಿಹೋಗು; ಸಹನೀಯವಾಗು; ಒಗ್ಗು : ಮುಪ್ಪಿನವರಿಗೆ ರಾತ್ರೀಊಟ ತಡೆಯುವದಿಲ್ಲ (ಕುಂಬಯು. ೫-೧೫೨). ೭. ಹೆಚ್ಚು ಕಾಲ ಬಾಳು; ತಾಳಿಕೆ ಬರು; ಬಾಳಿಕೆ ಬರು : ಹೋದವರ್ಷ ಕೊಂಡ ಸೀರೆ ನಾಲ್ಕು ತಿಂಗಳು ತಡೆಯಲಿಲ್ಲ (ರೂಢಿ). 'ತಡೆತ' ಪರಾ. ೮. ನಿಂತುಹೋಗು ; ಸ್ಥಗಿತವಾಗು : ಬಾಳಂ ಕಿತ್ತಿತ್ತಿ ಪೊಯ್ಯಲದು ನಾಗವೇದಿಕೆಯಂ ತಾಗಿ ತಡೆಯೆ[ಪಾಠಾಂ.ದೊಡೆ](ಪಂಚತಂ. ೦೯೭-೯); ಬೆರ್ಚಿ ಭಯವಶದಿಂ ಮೈನಡುಗೆ ಮತಿಗೆಟ್ಟು ಕಾಲ್ಗಳ್ ತಡೆದೊಡೆ (ಧರ್ಮಾಮೃ. ೭-೮೪); ಉಸಿರಿಕ್ಕುತಿರ್ಪುಸಿರ್ ತಡೆದೊಡಮಿಲ್ಲ (ಪಂಪಾಶ. ೮೩); ತಡೆಯದೆಲ್ಲಡೆಯೊಳ್ ತಾನು ಬೀಸುವನೀಯೆಡರನೇಳಿಪನೆಂದೆಲರು ಸಡಗರದಿಂದ . . . ಮುಡಿಯೊಳಾನುವುದು (ಹರಿಬ. ೨-೭). 'ತಡ₁' ಪರಾ.

**ತಡಕೊಳ್ಳು**=ತಾಳಿಕೊಳ್ಳು; ಸಹಿಸು; ಸೈರಿಸು: ಹವಣಸಿ ಹಲವು ಕಬ್ಬುನವ ಕಾಡಿವ ತನ್ನ ತವರವ ತಡಕೊಂಬುದರಿದೆ (ಮೋಹತ. ४೧-४೯) ; ಕಡು ಕೋಪ ಬಂದಾಗ ತಡಕೊಂಡವನೇ ಜಾಣ (ಗಾದೆ).

[ ದೇ.₁ ತಮಿ. ತಟು, ತಟ್ಟೈ ; ಮಲ. ತಟು, ತಟಿ ; ತುಳು. ತಡೆ ; ಕೊಡ. ತಡೆ ]

**ತಡೆ**₂ (ನಾ). ೧. ತಡ ; ಸಾವಕಾಶ ; ವಿಳಂಬ : 'ತಡೆವಡು' ಪರಾ. ೨. ಅಡ್ಡಿ ; ನಿರ್ಬಂಧ ; ವಿಘ್ನ : ಬಯಲಿಂಗೆ ಕಡೆಯಿಲ್ಲ ಮರುತಂಗೆ ತಡೆಯಿಲ್ಲ (ಅವಚಂ. ೨೫೭-೦೧೭೪) ; ತಪನರಥಮದಾ ಪುರದೆ ಮಿಗೆ ಪುಗಲ್ ತಡೆಯಿಲ್ಲದಬ್ಜಜಂ ಮಾಡಿದ ರಂಧ್ರಪಥಂಗಳೆಂಬಿನಂ ರಾಜಿಪುವಾ ತನೆತೆನೆಗಳಂಬುಗಂಡಿಗಳೆನಸುಂ (ಕುಸುಮಾ. ೨-೭೮) ; ತೊಡೆಗಳೊ . . . ರಂಭಾವಿಭವದ ತಡೆಗಳೊ ಸಿಂಗರದ ಕಡೆಗಳೋ ಶಶಿಧರನಾ (ಗಿರಿಕ. ೧೦-೫೯); ನಿರಾಯುಧರನಿಱಿವಲ್ಲಿ ತಡೆಗಿಡೆಗಳುಂಟೇ (ಚಿಬಪು. ೨೧-೦೯) ; ಈ ಕಲ್ಲುಮಣ್ಣಿನ ರಾಶಿ, ನದಿಯ ಓಟಕ್ಕೆ ತಡೆಯಾಗುತ್ತದೆ (ಸನದಿ. ೨೩). ೩. ಅಡ್ಡವಾಗಿ ಬರುವಿಕೆ : ಬಳಿಕ ಕಲಿ ರಾಧೇಯ ಬರುತಿರೆ . . . ವಾಯುಸದ ತಡೆ ಭೂಮಿಕಂಪ ನಿಜಾಯುಧಂಗಳ ಕಿಡಿ ಗಜಾಶ್ವನಿಕಾಯ ರಥವಾಜಿಗಳ ಕಂಬನಿ ಕಾಣಲಾಯ್ತೆಂದ (ಕುಮಾವ್ಯಾಕ. ೮-೨೭). ೪. ಸಂಕೋಚ: ನುಡಿ ನೋಟ ಸರಸಗಳಿಂದ ಅಡಿಗಡಿಗಬಲೆಯರಂತರಂಗದ ತಡೆಯೊಡೆಯಿಸುತಿಹನೇನನೆಂಬೆ (ಭರತೇ. ೬-೭೪). ೫. ರಕ್ಷೆ ; ತಾಯಿತಿ: 'ತಡೆಗಟ್ಟು₂' ಪರಾ. ೬. (ನಿಂತಲ್ಲಿಯೇ ನಿಲ್ಲುವಂತೆ) ಹಾವುಗಳಿಗೆ ಹಾಕುವ ಮಂತ್ರ; ಸ್ತಂಭನಮಂತ್ರ : ತಡೆಯೆಂಬ ನುಡಿ ಪಾವಡಿಗರೊಳಲ್ಲದಾ ಪೊಡವಿಯೊಳಿಲ್ಲ ಭಾವಿಸಲು (ಕುಲಾಸಾಂ. ೨-೭೪) ; ಕೊಡೆಯೆಂಬರಾತಪತ್ರವನು ತಡೆಯೆಂಬುದಹಿಮಂತ್ರದೊಳಗಲ್ಲದಾ ದೇಶದೆಡೆಯೊಳೀ ಶಬ್ದಂಗಳಿಲ್ಲ (ಮೋಹತ. ೨-೨೦). ೭. ತಿರುವು ಅಥವಾ ತಿರುಗಣೆ ಸಡಿಲವಾಗದಂತೆ ಅದರ ಕೊನೆಯಲ್ಲಿ ಅಳವಡಿಸುವ ಚಿಕ್ಕ ಬಿಲ್ಲೆ : (ಕ). ೮. ಕಿವಿಯ ಹಾಲೆಯ ವೆಜ್ಜ ಮುಚ್ಚಿಹೋಗದಂತೆ ಇರಿಸುವ ಕಡ್ಡಿ,–ಬೆಂಡು : (ಕ). ೯. ಮಾಸಲು ಪಡೆ ; ಕೈಗಾವಲಿನ ಸೈನ್ಯ (?) : ಶ್ರೀಮನ್ಮಹಾಪ್ರಧಾನಂ ತಡೆಯ ದಣ್ಣನಾಯಕಂ ಲಕ್ಷ್ಮಣಯ್ಯಂಗಳ್ (ಎಕ. XII. ೩೩४-೫; 1125). ೧೦. ಆಜ್ಞೆ ಅಥವಾ ಕಾರ್ಯ ಜಾರಿಯಾಗದಿರುವಿಕೆ,–ಸ್ಥಗಿತಗೊಳಿಸುವಿಕೆ : ತಡೆಯು ಆಜ್ಞೆ ಹಠಾತ್ತನೆ ಆಗಮಿಸಿತು (ನಿಶಿಉ. ೨೪). ೧೧. ವೇಗವನ್ನು ತಡೆಯುವ ಸಾಧನ ; ಬಿರಿ : ಗಾಳಿಯ ತಡೆ (ರೂಢಿ).

**ತಡೆಹಾಕು**=೧. ನಿಲ್ಲಿಸು ; ತಡೆಗಟ್ಟು ; ತಡೆಯುಂಟುಮಾಡು : ನೀಲ, ಅರ್ಕನ ಹೂಂಕಾರಕ್ಕೆ ತಡೆಹಾಕಿ ಹೇಳಿದನು (ಬಂಗಾಹ. ೭೩). ೨. ಆಕ್ಷೇಪಿಸು ; ಆಕ್ಷೇಪಣೆಮಾಡು : (ಕ). [ <ತಡೆ₁ ]

**ತಡೆ**₃ (ನಾ). ದಡ ; ತೀರ : "ತೀರಂ ತಟಂ ಕೂಲಮನೆ ತ್ರೂಱಿಯು ತಡೆ [ಪಾಠಾಂ. ಡಿ]ಗೆ ನಾಮಂ" (ಮಂಗರಾ. ೧೨೨-೦೦) ; "ತಡೆ–ತಟಾ=ದಂಡೆ" (ಕರ್ಣಕೋ. ೧೭); ದೇವರೊಲವುಳ್ಳವರ ಕಂಡು ತಾನಾದನೆಂದೊಡೆ ಚಲಿಸದು ಕಂಡಯ್ಯ ನೇಮವೆಂದಡೆ ತಡೆಮುಟ್ಟಸಲೀಯ್ಯ (ಸಮೂವ. ೧೧-४०).

[ <ಸಂ. ತಟಾ ]

**ತಡೆಅರ್ಜಿ** (ನಾ). "ಪ್ರತಿಪಕ್ಷದ ಹೇಳಿಕೆಯನ್ನು ಕೇಳಿದ ಹೊರತು ಮುಂದಿನ ಕ್ರಮ ಜರುಗಿಸಕೂಡದೆಂದು ಹಾಕುವ ಅರ್ಜಿ ; ತಡೆ ಅರ್ಜಿ : ಎಚ್ಚರಿಕೆಯ ಅರ್ಜಿ" (Caveat. ಇಂಕಪ.).

[ ತಡೆ₂ + ಅರ್ಜಿ₂ ]

**ತಡೆಕಟ್ಟು** 'ತಡೆಗಟ್ಟು₁' ನೋ.

**ತಡೆಕವಾಟ** (ನಾ). ತಡೆಯುವ ಬಾಗಿಲು,–ಕದ : ನೀರು ನಿರ್ಗಮನಾಳವನ್ನು ಹಾಯ್ದು ತಡೆಕವಾಟದ (ಚೆಕ್‌ವಾಲ್) ಮೂಲಕ ಉಗಿಯ ಗುಡಾಣವನ್ನು ಸೇರುತ್ತದೆ (ಕವಿಕೋ. I, ೭४). [ ತಡೆ₁ + ಕವಾಟ ]

**ತಡೆಕಾವಲುಗಾರ** (ನಾ). (ಮುಷ್ಕರ ಮೊದಲಾದಂವುಗಳಲ್ಲಿ ತಮ್ಮವರು ಕೆಲಸಕ್ಕೆ ಹೋಗದಂತೆ) ತಡೆಯುವ ಕಾವಲುಗಾರ : "ಕಾವಲುಪಡೆ, ಗಸ್ತುಪಡೆ; ತಡೆಕಾವಲುಗಾರರು ; ಪಿಕೆಟ್" (Picket. ಪ್ರತಿನಿ. ೬೨).
[ ತಡೆ$_{2}$ + ಕಾವಲುಗಾರ (< ಕಾವಲುಗಾಱ) ]

**ತಡೆಕ್ಕೆ** 'ತಡಕೆಯ್' ನೋ.

**ತಡೆಗ** (ನಾ). ತಡೆಯುವವನು ; ಅಡ್ಡಿಪಡಿಸುವವನು : "ರುಂಧನ್ ರೋಧಕ: – ಈ ೨ ತಡೆಗಂ" (ಶಾಶಕ್ಕ. ೨೩೩). [ ತಡೆ$_{2}$ + – ಗ$_{2}$ ]

**ತಡೆಗಂಬಿ** (ನಾ). ತಡೆಯುವ ಕಂಬಿ,–ತಂತಿ : (ಇಳಿಜಾರಿನಲ್ಲಿ ಹೋಗುತ್ತಿರುವಾಗ) ಗಾಲಿ ತಿರುಗದಂತೆ ತಡೆಯುವ ಕಂಬಿ; ತಡೆಗಂಬಿ (Spoke. ಇಂಕನಿ.). [ ತಡೆ$_{2}$ + ಕಂಬಿ$_{1}$ ]

**ತಡೆಗಟ್ಟು$_{1}$**, ತಡೆಕಟ್ಟು (ಕ್ರಿ). ೧. ಅಡ್ಡಿಪಡಿಸು ; ಅಡ್ಡಗಟ್ಟು ; ತಡೆದು ನಿಲ್ಲಿಸು ; ಪ್ರತಿಬಂಧಿಸು ; ಸ್ತಬ್ಧಗೊಳಿಸು : ಕಂಪೆನಿಯ ಸೈನ್ಯವು ಅವರನ್ನು ತಡೆಗಟ್ಟುತ್ತಿದೆ (ಝಾರಾಶಿ. ೪೩೭) ; ರಾಜಭಟರು ರಾಜಒಡೆಯನನ್ನು ತಡೆಗಟ್ಟಲಿಲ್ಲ (ಶ್ರೀರಾಯ. ೩೦೦) ; ಅದನ್ನು ತಡೆಗಟ್ಟುವುದು ಅಪ್ಪಾಜಿಯವರಿಂದಲೂ ಸಾಧ್ಯವಲ್ಲ (ಚದೇವ. ೨೦೦) ; ವೃದ್ಧಾಪ್ಯ ಮತ್ತು ಮೃತ್ಯುಗಳನ್ನು ತಡೆಗಟ್ಟುವ ಉಪಾಯವನ್ನು ಈತ ಕಂಡುಹಿಡಿದಿದ್ದಾನೆ (ಅಶ್ರಮ. ೬೮) : ನಿಯಂತ್ರಣ ಕ್ರಮಗಳಿಂದ ನೊಣಗಳನ್ನು ತಡೆಗಟ್ಟಬಹುದು (ಅಡುಸಾ. ೫೦). **ತಡೆಕಟ್ಟು :** ೨. ಮಳೆ, ಬೆಂಕಿ, ಹಾವು, ಹುಲಿ ಮುಂತಾದುವನ್ನು ಮಂತ್ರಬಲದಿಂದ ಸ್ತಂಭನಗೊಳಿಸು : ಭವಭೂತಿಯು ತನ್ನ ವಿದ್ಯೆಯ ಶಕ್ತಿಯನ್ನು ತೋರಿಸಬೇಕೆಂದು ತಡೆಕಟ್ಟಿದನು; ಬರುತ್ತಿದ್ದ ಮಳೆಯು ನಿಂತು ಹೋಯಿತು (ನೀತಿಕಂ V, ೨೪) ; ಬೇಟೆಯಾಗದಿದ್ದರೆ ಯಾರೋ ತಡೆಕಟ್ಟಿರುವರು; ಅದನ್ನು ಬಿಡಿಸಬೇಕೆಂದು ಮಂತ್ರವಾದಿಯ ಬಳಿಗೆ ಹೋಗಿ ಆ ಶಾಸ್ತ್ರವನ್ನು ನೆರವೇರಿಸುತ್ತಿದ್ದರು (ಹುಟ್ಟುಹ. ೨೭). [ ತಡೆ$_{2}$ + ಕಟ್ಟು$_{1}$ ]

**ತಡೆಗಟ್ಟು$_{2}$** (ನಾ). ೧. ಅಣೆಕಟ್ಟು : (ಕ). ೨. ಪೀಡಾಪರಿಹಾರಕ್ಕಾಗಿ ಕಟ್ಟುವ ರಕ್ಷೆ,–ತಾಯಿತ. ೩. ಅಡ್ಡಿ ; ತಡೆ; ಪ್ರತಿಬಂಧಕ : ಯಕ್ಷಿಣಿಯಾಟದಂತೆ ಥಕ್ಕನೆ ತೆರವ–ಕಣ್ಮಾಯವಾಗುವ – ಎದ್ದರೆಯ ತಡೆಗಟ್ಟಾಗಿ ನಿಲ್ಲುವ–ಕದಬಾಗಿಲ್ಗಳೂ (ಚಿಟ್ಟುಅ. ೪೯–೮). [ ತಡೆ$_{2}$ + ಕಟ್ಟು$_{2}$ ]

**ತಡೆಗಟ್ಟೆ** (ನಾ). ಅಡ್ಡಗಟ್ಟೆ ; ಅಣೆಕಟ್ಟು : (ಕ).
[ ತಡೆ$_{1}$ + ಕಟ್ಟೆ ]

**ತಡೆಗಡಿ** (ಕ್ರಿ). ೧.=ತಡಂಗಡಿ ೧ : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟಿ (ಇಹರ. ದೇ. ೪೨. ೪) ; ಮಾಱಿದಡೆ ಕೆಡಹಿ ತಡೆಗಡಿವೆನು (ಹಕಾ. ೧೧–೩೮); ತಡೆಗಡಿ ಸುಯೋಧನನೂರುಗಳನು (ಕುವ್ಯಾಸ. ೧೫–೩೦) : ತಾನೀ ಬಲವನೆಱೆ ತಡೆಗಡಿದು ಗೋಸಂಕುಲವ ತಿರುಹುವೆನೆಂದು ಮುಳಿದೀಕ್ಷಿಸಿ ಕುಮಾರಕರ (ಜೈಮಿಂಚ. ೪೦–೩೪) ; ಎಚ್ಚೊಡಚ್ಯುತನ ಬಾಣಂಗಳ ತಡೆಗಡಿದು (ಮೋಹತ. ೪೦–೩೪) ; ಬಂದ ವಾಜಿಗಳ ನಾನಳವಿಯೊಳ್ಕಾಣೆನೆಂಬಂದವಾಗಲ್ಕೆ ತಡೆಗಡಿದು ಮೆದೆಗೆಡಹಿದಾ (ಜೈಮಿಭಾ. ೦೨–೪೩). ೨. ಅಡೆತಡೆಗಳನ್ನು ಗೆಲ್ಲು ; ವಿಘ್ನವನ್ನು ದಾಟು : (ಕ). ೩. ನಡುನಡುವೆ ಭಂಗವಾಗು : ಆಗಾಗ್ಗೆ ನರಳುದನಿಯಿಂದ ತಡೆಗಡಿಯುತ್ತಿದ್ದ ಅವಳ ಮೇಲುಗೊರಕೆಯನ್ನೂ . . . ಕೇಳಿಸಿಕೊಳ್ಳುತ್ತಿದ್ದಾಗ (ಪುನರು. ೫೪೪). ೪. ನಡುನಡುವೆ ನಿಲ್ಲಿಸು,–ಭಂಗಪಡಿಸು : ಇತರರು ತನ್ನ ಮಾತನ್ನು ತಡೆಗಡಿಯುಲವಕಾಶಕೊಡಲಿಲ್ಲ (ಪುನರು. ೦೦೫). 'ತಡಂಗಡಿ' ಪರಾ.
[ ತಡೆ$_{2}$ + ಕಡಿ$_{2}$ ]

**ತಡೆಗಡಿಸು** (ಕ್ರಿ). ಸಂಪೂರ್ಣವಾಗಿ ಕತ್ತರಿಸಿ ಹಾಕಿಸು : ಕ್ಷಾತ್ರವ ತಡೆಗಡಿಸಿ ಚತುರಂಗ ಬಲವನು ಹುಡಿಹುಡಿಯ ಮಾಡುವರು (ಕುವ್ಯಾಉ. ೪–೭೭).
[ ತಡೆಗಡಿ + – ಇಸು$_{3}$ ]

**ತಡೆಗರ್ಚು** (ಕ್ರಿ). ದಂಡೆಯನ್ನು ಹಿಡಿ ; ದಡಕ್ಕೆ ಬರು (?) : ಎಡವಿಡದಾವಾವ ಕೆಱೆ ತೊಱೆ ಬಾವಿಯೊಳ್ತಡೆಗರ್ಚಿದುವು ನೀರ್ವಕ್ಕಿ ತಡೆಯದೆ ಬಹುಮೃಗ ಪೊಸ ತುಪ್ಪುಳಾಂತು ಮಯ್ವಡೆಯಲ್ಕೆನರರಳಲಿದರು (ಮೋಹತ. ೪–೪೪). [ ತಡೆ$_{3}$ + ಕರ್ಚು$_{1}$ ]

**ತಡೆಗಾಲ್**, ತಡೆಗಾಲು (ನಾ). ೧. ಮುಂದೆ ಹೆಜ್ಜೆ ಇಡದಂತೆ ಅಡ್ಡಿಪಡಿಸುವ ಕಾಲು ; ಅಡ್ಡಗಾಲು : ಪೌಜು ಬಂದೊಡನೊದಗಲಿಟ್ಟಣಪ ಜನದ ತಡೆಗಾಲ್ಗಳಿಂದಾ ಸುತಂ ಪೊಡೆಗೆಡೆಯಲು (ಥಾವಚಿಂ. ೮–೧೮) ; ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವ ಪಡೆಯ ತಡೆಗಾಲ್ಪೊಡೆಯ ಪೊಡವಿಯೊಳ್ಕೆಡೆದು ಕಣ್ಗೆಟ್ಟಳಲ್ದು (ರಾಜಶೇ. ೦೩–೯೫ವ). 'ತಡೆಗಾಲ್ಪೊಯ್' ಪರಾ. ೨. ತಡೆತಡೆದು ನಡೆಯುವ ಕಾಲು ; ತಡವರಿಸುವ ಕಾಲು : ಸಡಿವ ನಡೆ ತೊಡೆಯ ತಡೆಗಾಲ್ ನಡುವಿಂಗತಿ ಗಾಢದುಡಿಗೆ ಬ ಡ ತ ನು . . . ಸೊಗಯಿಸಿತ್ತು ಪಂಕಜಮುಖಿಯೊಳ್ (ಗಿರಿಕ. ೩–೨೨). **ತಡೆಗಾಲು :** ೧. ತಿವಿದು ಹಿಂಗುವ ಭಟನ ಪವನಜನವಟಿ ತಡೆಗಾಲಿಂದ ಕೆಡಹಲು (ತೊರಆ. ೫–೫–೩೩) ; ಓಡೆ ಬೆಂಬತ್ತುತಂ ತಡೆಗಾಲ ಹೊಡೆದಲ್ಲಿ ಕೂಡೆ ಬೊಬ್ಬಿಱಿದು (ವೀಕೃತ. ೨–೧೨–೨೩); ತಡೆಗಾಲೊಳಾತನಂ ಕೆಡಹಿ ಭುಜಯುಗ್ಮಮಂ ಕೊಡರಿಕೊಂಡುಪ್ಪರಿಸಿ (ಜೈಮಿಭಾ. ೨೪–೫೪)
[ ತಡೆ$_{1}$ + ಕಾಲ್$_{1}$ ]

**ತಡೆಗಾಲು** 'ತಡೆಗಾಲ್' ನೋ.

**ತಡೆಗಾಲ್ಪೊಡೆ** (ಕ್ರಿ). ತೊಡರುಗಾಲು ಹಾಕು ; ಕಾಲಿಗೆ ಅಡ್ಡ ಬರು : ಮೊಗವಂ ಮುರಿದು ಮೊಲೆಯೂಡಲಡ್ಡಸಾರ್ಚಿದ ಪುಲ್ಲೆಯಿರ್ದಂತೆ ಪರಿಚಯಕ್ಕೆ ಪರಿತಂದು ಡೆಕಹಾಯಪಾಲಂ ತೊಡೆಯೊಳ್ ತಡೆಗಾಲ್ಪೊಡೆದು ಕೊಣಕಿಡುವ ಕೊಣಸುಗಳಂ ಪಿಡಿದು ಮುದ್ದಾಡಿಸುತ್ತುಂ (ಅರ್ಧನೇ. ೧–೯೨ ವ). [ ತಡೆಗಾಲ್ + ಪೊಡೆ$_{1}$ ]

**ತಡೆಗಾಲ್ಪೊಯ್** (ಕ್ರಿ). ಅಡ್ಡಗಾಲುಹಾಕು,–ಹೊಡೆ: ಹೊಯ್ದು ತುಱು ಬನು ಹಿಡಿದು ತಡೆಗಾಲ್ಪೊಯ್ದು ಕೆಡಹಿದನು (ಕುವ್ಯಾಕ. ೦೯–೪೮); ಬಾಸುಳೇಳ್ವಂತೆ ಬಡಿವ ತಡೆಗಾಲ್ಪೊಯ್ದು ಓಸರಿಸದೆ ಕೆಡಹುವನು ಗಾಸಿಮಾಡುವನು ಮಕ್ಕಳನು (ನೇಮಿಶಂ. ೦೫–೧೦೦).
[ ತಡೆಗಾಲ್ + ಪೊಯ್$_{1}$ ]

**ತಡೆಗಾಱ** (ನಾ). ಹಾವಿಗೆ ತಡೆಮಂತ್ರವನ್ನು ಹಾಕುವವನು; ಗಾರುಡಿಗ: ಹಾವನು ನಾ ಪಿಡಿವರೆ ತರಳ ನಾ ತಡೆಗಾಱನೆ (ಕನಕ. ೫೦–೬).
[ ತಡೆ$_{2}$ + – ಕಾಱ ]

**ತಡೆಗಿಡು** 'ತಡೆಗೆಡು' ನೋ.

**ತಡೆಗೆಡವು** 'ತಡೆಗೆಡಹು' ನೋ.

**ತಡೆಗೆಡಹು**, ತಡೆಗೆಡವು (ಕ್ರಿ). ಅಡ್ಡಗಟ್ಟಿ ಕೆಡಹು,–ಉರುಳಿಸು : ನುಡಿಯುವೆ ನೀನಿಂತಿರ್ದೊಡೆ ಕೆಡೆನೂಂಕಿ ಪೊರಳ್ಚಿ ಗಂಟಲಂ ಮೆಟ್ಟಿ ಕರಂ ತಡೆಗೆಡಹಿ ತನುವ ಜಡಿದೆನ್ನೊಡಮೆಯನುಗುಱಿಸದೆ ಮಾಣೆಂ (ಧರ್ಮಾಮೃ. ೧೨–೨೦೯) ; ತಡೆಗೆಡಹಿ ಮೂಗಂ ಕೊಯ್ಯದೆ ಮಾಣ್ಬನೆ (ಬಸವ. ೪೦೩). **ತಡೆಗೆಡವು :** ವಾನರ ವರಧ್ವಜಂ ಮುಳಿದು ನೀಲಧ್ವಜನ ಸೇನೆಯುಂ ತಡೆಗೆಡವು[ಪಾಠಾಂ. ಗಡಿಯು]ತಾತನಂ ಮುಸುಕಿದನನೂನ ಶರಜಾಲದಿಂ (ಜೈಮಿಭಾ. ೮–೩೭). [ ತಡೆ$_{2}$ + ಕೆಡಹು (< ಕೆಡವು) ]

**ತಡೆಗೆಡು**, ತಡೆಗಿಡು (ಕ್ರಿ). ತಡೆಯಿಲ್ಲದಂತಾಗು ; ಅನಿರ್ಬಂಧವಾಗು ; ಅಡ್ಡಿಯಿಲ್ಲದಿರು : ನಡೆಗೆಡೆ ಚಿತ್ತಂ ಧೃತಿಲತೆ ಕುಡಿಗೆಡೆ ಮನಸಿಜವಿಕಾರತತಿ ಮಾನಸದೊಳ್ತಡೆಗೆ[ಪಾಠಾಂ. ಗಿ]ಡೆ ಕೈಯಂಕುಶಮದಂ ಪಡಲಿಡೆ ಧರಣಿಯೊಳೆ ವಿರಹವಿಹ್ವಳನಾದಂ (ವೃಷವಿ. ೨೮–೨೧). **ತಡೆಗಿಡು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ತಡೆ$_{2}$ + ಕೆಡು$_{1}$ ]

**ತಡೆಗೆಡೆ** (ಕ್ರಿ). ನಡೆಗೆಟ್ಟು ಬೀಳು ; ಎಡವಿ ಬೀಳು : ಉಡಿದುಡಿದು ಸೂಸಿದ ಮೃದುಮೃಣಾಳನಾಳ ತಂತುಜಾಲಕದೊಳೊಯ್ಯನೊಯ್ಯನೆ ರಯ್ಯಮನೆ ನಡೆವೆಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). [ ತಡೆ$_2$ + ಕೆಡೆ$_1$ ]

**ತಡೆಗೆಯ್** (ಕ್ರಿ). ಸ್ತಂಭನಗೊಳಿಸು ; ಚಲಿಸದಂತೆ ಮಾಡು : ಚ್ಯವನಂ ತನ್ನೊಂದು ಬಲ್ಮೆಯಿಂ ಸುರಪನುಮಂ ಕೈದುಮಂ ತಡೆಗೆಯ್ದಂ (ರಾಮಾಶ್ವ. ೭೦-೧೯). [ ತಡೆ$_2$ + ಕೆಯ್$_1$ ]

**ತಡೆಗೊಳ್** (ಕ್ರಿ). ಅಡ್ಡಬರು; ಅಡ್ಡಿಯಾಗು; ಅಡ್ಡಗಟ್ಟು; ತರುಬು: ಕೂರ್ಪುಡುಗದೆ ಬಂದು ತಾಗೆ ಯಮಳರ್ ತಡೆಗೊಂಡೊಡೆ[ಪಾಠಾಂ. ರರಾರ್ತೆಡೆಗೋದಡೆ] . . . ರಥಂಗಳನಚ್ಚುಡಿಯೆಚ್ಚು (ಪಂಪಭಾ. ೦೨-೧೬೨) [ ತಡೆ$_2$ + ಕೊಳ್$_1$ ]

**ತಡೆಗೊಳಿಸು** (ಕ್ರಿ). ೧. ಅಡ್ಡಿಪಡಿಸು ; ನಿಲ್ಲಿಸು : (+). ೨. ಕಟ್ಟು ; ಬಂಧಿಸು: ಉದ್ದಾನಂ, ಬಂಧನಂ – ೨ ಕಟ್ಟಿಹಾಕುವುದಕ್ಕೆ ಹೆಸರುಗಳು, ಕಟ್ಟು; ತಡೆಗೊಳಿಸುವಿಕೆ (ಸಿದ್ಧಾಂಕಿ. ೨೦೯). [ ತಡೆಗೊಳ್ + – ಇಸು$_3$ ]

**ತಡೆತ**, ತಡತ (ನಾ). ಹೆಚ್ಚುಕಾಲ ಉಳಿಯುವಿಕೆ ; ಬಾಳಿಕೆ ; ತಾಳಿಕೆ : ಈ ರೀತಿ ತಡೆತ ಬಾರದ ಬಟ್ಟೆಗಳನ್ನು ಇಂಥಾ ಉಪಯೋಗಕ್ಕೆ ಕೊಳ್ಳುವುದು ಅನುಚಿತ (ಗೃಹವಿ. ೮೧) ; ಹೊರಗಡೆ ತಡೆತ ಬರುವ, ಮೃದುವಾದ ಅಸ್ಥಿಪಂಜರ–ಬಾಹ್ಯ ಚರ್ಮವಿದೆ (ಕೀಟಬಿ. ೫). **ತಡತ** : ಯಾಕೋ ಈ ಸೀರೆ ತಡತ ಬರಲೇ ಇಲ್ಲ (ರೂಢಿ). [ ತಡೆ$_2$ + – ತ$_2$ ]

**ತಡೆನಡೆ** (ನಾ). ನಿಧಾನವಾದ ನಡಿಗೆ : ನಿಧಾನಚಲನ; ಮಂದಗತಿ; ತಡೆನಡೆ (Drag. ಇಂಕನಿ). [ ತಡೆ$_2$ + ನಡೆ$_2$ ]

**ತಡೆಪ** (ನಾ). ತಡ ; ಸಾವಕಾಶ ; ನಿಧಾನ : ತೊಡೆಪಂ, ನಡೆಪಂ, ಮೊಗೆಪಂ, ತಡೆಪಂ, ಅಣೆಪಂ (ಶಬ್ದಾನು. ೫೬೧ ಪ್ರಯೋ). 'ತಡೆಪಂಬೆಱು' ಪರಾ. [ ತಡೆ$_2$ + – ಪ$_2$ ]

**ತಡೆಪಂಬೆಱು** (ಕ್ರಿ). ಸಾವಕಾಶವಾಗು ; ನಿಧಾನವಾಗು : ಬೆಳರ್ಗಂಪಿಡಿದಧರಮಿಂಪನಪ್ಪಿದ ನುಡಿ ತಡೆಪಂಬೆತ್ತ ನಡೆ ನಿಜಂ ಕೋಮಳೆಯಾ (ಚಂದ್ರಪ್ರ. ೬-೬೮). [ ತಡೆಪ + ಪೆಱು$_1$ ]

**ತಡೆಬಂಡೆ** (ನಾ). ತಡೆಯುವ ಬಂಡೆ : ಓಡಿ ಹೋಗುವ ಬಾಣಭಟ್ಟ ಅಂದು ಪ್ರಳಯಪೂರದ ತಡೆಬಂಡೆಯಾಗುತ್ತಾನೆ (ಬಾಣಆ. ೧೪೨). [ ತಡೆ$_1$ + ಬಂಡೆ$_1$ ]

**ತಡೆಬಡೆ** (ನಾ). ೧. ಅಡ್ಡಿ ; ಆತಂಕ ; ಅಡೆತಡೆ : ಜನಗಳ ತಡೆಬಡೆ ಇಲ್ಲದ ಮಾತಿನ ಪ್ರವಾಹವನ್ನು ಕೇಳಿ ಕೇಳಿ ಮಾಲತಿಗೂ ಚಟ್ಟುಹಿಡಿದಿತ್ತು (ಶತಂಗ. ೨೯) ; ಅವರ ನಿವೃತ್ತಿಯ ಕುರಿತ ಇತ್ಯರ್ಥವು . . . ತಡವಾಗುತ್ತಿರುವಾಗ ಬಂದಿತು ಮೃತ್ಯುವು ಅದಕ್ಕೆ ತಡೆಬಡೆಯಿಲ್ಲವಾಗಿ (ಇಂಚಾಪ. ೨೦-೯೩). ೨. ನಿಲುಗಡೆ ; ವಿರಾಮ : ನಾಲ್ಕೈದು ದಿನ ತಡೆಬಡೆಯಿಲ್ಲದೆ ಆಗೆದರು (ಹುಟ್ಟಿಹ. ೬೨) : ಊರನ್ನು ತಲುಪುತ್ತಲೇ ತಡೆಬಡೆಯಿಲ್ಲದೆ ಅಂಗಡಿಯನ್ನು ತೆರೆಯುವ ಯೋಚನೆಯಲ್ಲಿ ಬಂದ (ಗಂಗಾಳ. ೦೩). 'ಅಡೆ ತಡೆ' ಪರಾ. [ ತಡೆ$_2$ + – ಪಡೆ$_6$ ]

**ತಡೆಬಿಡು** 'ತಡೆವಿಡು' ನೋ.

**ತಡೆಮಂತ್ರ** (ನಾ). ಸ್ತಂಭನಗೊಳಿಸುವ ಮಂತ್ರ : ಕಡಿಕಡಿದು ಕೆಡಹಿದರ್ ಕುರಿಕೋಳಿ ಲಕ್ಕಮಂ . . . ಕೂಗಿದರ್ ತಡೆಮಂತ್ರಮಂ (ಶ್ರೀರಾಮಾ. ೬೭೦-೨೪೦). [ ತಡೆ$_1$ + ಮಂತ್ರ ]

**ತಡೆಯಿಡು** (ಕ್ರಿ). ಅಡ್ಡಿಯುಂಟುಮಾಡು ; ತಡೆಯೊಡ್ಡು : ಬಲ್ಲಿದನಂಕಮಾಲೆಗೆ ತಡೆಯಿಡಲೇಕೆ ಹಲ್ಲ ಹೋಗಾಡಲದೇಕೆ (ಭರತ. ೩೯-೨೩). [ ತಡೆ$_2$ + ಇಡು$_1$ ]

**ತಡೆಯಿಸು**, ತಡೆಸು (ಕ್ರಿ). ಅಡ್ಡಿಪಡಿಸು ; ವಿಘ್ನಬರುವಂತೆ ಮಾಡು ; ನಿರ್ಬಂಧಿಸು : ನಿನ್ನನೆ ಪೂಜಿಸಿ ಪಡೆದರ್ಕನ್ನೆಯರಭಿಮತಮನಾದಮಾರಾಧಿಸಲಾನಿನ್ನೆವರಂ ರತಿಪತಿ ನೀನೆನ್ನ ಮನೋರಥಮನೇಕೆ ಪೇೞ್ ತಡೆಯಿಸಿದ್ದೈ (ಕಾದಂಸಂ. ೬೮೪). **ತಡೆಸು** : ನುಡಿಸು ಕೈಲಾಸಮಂ ಕೆಡಿಸು ಹರಸಾಸಮಂ ತಡೆ[ಪಾಠಾಂ. ಡ]ಸದೆನ್ನಂ ದಾಳಿಯಿಡಿಸು ಬೇಗದೊಳೆನುತ್ತೊಡನೊಡನೆ ನೇಮಿಸಿದನು (ಚಬಪು. ೪೭-೨೨) ; ಆರೆನ್ನನಿಂತು ತಡೆ[ಪಾಠಾಂ. ಡ]ಸಿದರಾಯ್ತು ದುರ್ಭಿಕ್ಷಮುರೊಳ್ಪಳಿಯದೆ ಧಾನ್ಯಂ (ಜೈಮಿಭಾ. ೬-೫೧). [ ತಡೆ$_2$ + – ಇಸು$_3$ ]

**ತಡೆಯುಸಿರ್** (ನಾ). ತಡೆತಡೆದು ಆಡುವ ಉಸಿರು : ಕಿರುಬೆಮರ ತಡೆಯುಸಿರ ಕರುಣಾಸ್ಪದೆಯಾಗಿ (ಮಂತ್ರಶ. ೫೮-೧೫). [ ತಡೆ$_1$ + ಉಸಿರ್$_2$ ]

**ತಡೆಯೋಟ** (ನಾ). "ಸ್ವಾಭಾವಿಕವಾಗಿರುವ ಅಥವಾ ಕೃತಕವಾದ ತಡೆಗಳನ್ನು ದಾಟಿಕೊಂಡು ಓಡಬೇಕಾದ ಜೂಜೋಟ : ತಡೆಯೋಟ" (Obstacle-race. ಇಂಕನಿ.) [ ತಡೆ$_2$ + ಓಟ ]

**ತಡೆರಾಜ್ಯ** (ನಾ). "ಎರಡು ಪ್ರಬಲರಾಜ್ಯಗಳ ಮಧ್ಯೆ ಇದ್ದು ಒಬ್ಬೊಬ್ಬರಿಗೆ ಕಾದಾಟದ ಸಂಭಾವ್ಯವನ್ನು ಕಡಮೆ ಮಾಡುವ ಸಣ್ಣ ರಾಜ್ಯ : ತಡೆರಾಜ್ಯ" (Buffer-state. ಇಂಕನಿ.). [ ತಡೆ$_2$ + ರಾಜ್ಯ ]

**ತಡೆವಡು** (ಕ್ರಿ). ತಡವಾಗು ; ನಿಧಾನವಾಗು : ಬನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯ ತೆಳ್ಗದಂಪು ಕಂಪಡರೆ ಎರ್ದೆ ದಡದಡಿಸೆ ಸುಯ್ ಪೆರ್ಚೆ ನಡೆ ತಡೆವಡೆ (ರಾಮಾಶ್ವ. ೧೨೩-೬). [ ತಡೆ$_2$ + ಪಡು$_1$ ]

**ತಡೆವಡೆ**, ತಡೆಹಡೆ (ಕ್ರಿ). ಅಡ್ಡಿಗೊಳಗಾಗು ; ತಡೆಯಲ್ಪಡು ; ನಿಂತುಹೋಗು : ಸಡಗರಗಳಲ್ಲಲ್ಲಿ ತಡೆವಡೆದು ಸುಗಿದು ನುಡಿಯರಾರುಂ (ಶಾಲಿಚರಿ. ೧೫೮-೩೪೮). **ತಡೆಹಡೆ** : ಅಲ್ಲಿ ತಡೆಹಡೆದು ತಾಂ ತಳುಹಿಲ್ಲದೆ ನಿಜದೇಶಕೆಯ್ದೆವಂದು (ಧರ್ಮಪ. ೨-೩೯). [ ತಡೆ$_2$ + ಪಡೆ$_1$ ]

**ತಡೆವರ್** (ಕ್ರಿ). ಅಡ್ಡಿಯಾಗಿ ಬರು : ತಡೆಯುಂಟುಮಾಡು : ಕಿಱುಂಬನಿರ್ಝರಮಿಾಪ್ರಜಪ್ಲಗಕ್ಕೆ ತಡೆವರ್ಪರ್ (ರಾಮಾಶ್ವ. ೫೬-೨). [ ತಡೆ$_2$ + ಬರ್$_1$ ]

**ತಡೆವಲೆ** (ನಾ). ಒಂದು ಬಗೆಯ ಬಲೆ : ನಡುವಲೆ ತಡವಲೆ ಓಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಜಾ. ೧-೮೦). [ ತಡೆ$_1$ + ಬಲೆ$_1$ ]

**ತಡೆವಿಡು**, ತಡೆಬಿಡು (ಕ್ರಿ). ೧. ತಡೆಯನ್ನು ತೆಗೆದುಹಾಕು ; ಬಂಧನದಿಂದ ಬಿಡುಗಡೆ ಮಾಡು : ಪಟುಭಟತರ್ಾಗಿದರ್ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನಲ್ಕಣೆಗಱೆಯುತೆ (ಜೈಮಿಭಾ. ೮-೨೯). ೨. ಮಂತ್ರಪ್ರಭಾವದಿಂದ ಮುಕ್ತವಾಗು. ೩. ಬಿಡುಗಡೆ ಹೊಂದು; ಸ್ವತಂತ್ರವಾಗು : ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ತನ್ನಿಚ್ಚೆಯಿಂ ಪೋಗೆ (ರಾಮಾಶ್ವ. ೧೩೮-೧೨). **ತಡೆಬಿಡು** : ೧. ತಡೆಬಿಟ್ಟ ಕಂಬನಿಯ ಕೈಯಿಂದ ಮುಂಗಾಣದೆಡಹುತ್ತ ಕಾಗುತ್ತ ಒಡವರ್ಪ ಪರಿವಾರಮಂ ಕಂಡು (ಹಚಕಾ. ೯-೨೦). [ ತಡೆ$_2$ + ಬಿಡು$_1$ ]

**ತಡೆವೇಂಟೆ**, ತಡೆವೇಟೆ (ನಾ). ಒಂದು ಬಗೆಯ ಬೇಟೆ ; ಮೃಗಗಳನ್ನು ತಡೆದು ಆಡುವ ಬೇಟೆ : ಭಾಸುರ ವರೂಥವನೇಱ ಭೂಪಾಲಮಕರಧ್ವಜಂ ನಡೆಯೆ ತಡೆವೇಂಟೆಗೆ (ಹಚಕಾ. ೬-೧); ಮೇಲ್ವಾಸು ಮಂಚಗಳ ಗಡಣವೆಯ್ದಿತು ರಾಯನ ನಿಯಮದೊಳಂದು ತಡೆವೇಂಟೆಯ ಸಮಕಟ್ಟು (ಕುಠಾಸಾಂ. ೨೬-೪೬). **ತಡೆವೇಟೆ** : 'ತಡೆವೇಟೆಕಾತಿ' ಪರಾ. [ ತಡೆ$_2$ + ಬೇಂಟೆ ]

**ತಡೆವೇಂಟೆಕಾತಿ**, ತಡೆವೇಟೆಕಾತಿ (ನಾ). ತಡೆವೇಟೆಯನ್ನು ಆಡುವವಳು: ಜನಮನದ ಸಂಕಲೆವನೆದೊ ಲೋಚನಮೃಗದ ತಡೆವೇಂ[ಪಾಠಾಂ. ವೇ] ಟೆಕಾತಿಯೊ ಮನುಮಥನ ಸಂಜೀವನೌಷಧಿಯೋ . . . ಎನಿಸಿದೂರ್ವಶಿ ಬಂದಳು (ಕುಪ್ವಾಅ. ೮-೧೦). **ತಡೆವೇಟೆಕಾತಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಡೆವೇಂಟೆ + – ಕಾತಿ$_{6}$ ]

**ತಡೆವೇಟೆ** 'ತಡೆವೇಂಟೆ' ನೋ.

**ತಡೆವೇಟೆಕಾತಿ** 'ತಡೆವೇಂಟೆಕಾತಿ' ನೋ.

**ತಡೆಸು** 'ತಡೆಯಿಸು' ನೋ.

**ತಡೆಹಡೆ** 'ತಡೆವಡೆ' ನೋ.

**ತಡೆಹಿಡಿ** (ಕ್ರಿ). ೧. ತಡೆದು ಹಿಡಿ ; ಅಡ್ಡಿಪಡಿಸು ; ನಿಗ್ರಹಿಸು : ಅವರಿವರು ಓಡಿ ಬಂದು ಜಗಳವನ್ನು ಬಿಡಿಸಿ ತಿಮ್ಮನನ್ನು ತಡೆಹಿಡಿದರು (ತಿಂಮುತ. ೩೫). ೨. (ದುಃಖ ಮೊದಲಾದ ಭಾವಗಳನ್ನು) ಒತ್ತಿರಿಸು; ಅದುಮಿಡು; ಹತ್ತಿಕ್ಕು: ಉಮ್ಮಳಿಸಿ ಬರುತ್ತಿರುವ ಎದೆಯ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿಯುವಂತೆ . . . ತೋರುತ್ತಲಿತ್ತು (ಚಕಸ. ೧೦೪); ಉಕ್ಕುತ್ತಿದ್ದ ಕಣ್ಣೀರನ್ನು ಬಿಗಿಯಾಗಿ ತಡೆಹಿಡಿದನು (ಪುನರು ೧೯೦). ೩. ಪ್ರಕಟ ಪಡಿಸದೆ ಇರು ; ಜಾರಿಗೆ ತರದೆ ನಿಲ್ಲಿಸು : ಪರೀಕ್ಷೆಯ ಫಲಿತಾಂಶವನ್ನು ತಡೆಹಿಡಿದಿದ್ದಾರೆ (ರೂಢಿ). [ ತಡೆ$_{2}$ + ಹಿಡಿ$_{1}$(<ಪಿಡಿ$_{1}$) ]

**ತಣ್**$_{1}$, ತಣಿ$_{2}$ (ಕ್ರಿ). ತಣ್ಣಗಾಗು ; ಉಷ್ಣವಳಿ ; ಆರು : ಲಂಕೆ ಮುಳ್ಗಿಳನೆ ಬೆಬ್ಬಳಿಸೆ, ಭಯಕೆ ನೆತ್ತರ್ ತಣ್ತುಪೋದರ್ (ಶ್ರೀರಾಮಾ. ೬೩೩-೬೬೦). **ತಣಿ**$_{2}$ : ಬಿಸಿಲ್ ತಣಿಯೆ ತಂಗಾಳಿ ಮೆಯ್ದೋಱೆ . . . ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೊಱಮಟ್ಟರ್ (ರಾಮಾಶ್ವ. ೩೨-೩) : ತಣಿದನ್ನ ತಂಗುಳೆನಿಕ್ಕುಂ (ಕಶರ. ೧೨೪); ಚಹಾ ಆಗಲಿ. ಬಿಸಿ ಇರುವಾಗಲೇ ಅದನ್ನು ತಣಿಯುವ ಮೊದಲೇ ತೆಗೆದುಕೊಳ್ಳಿ (ಒಂಟಿದ. ೦೬೦).

[ ದೇ.॥ ತಮಿ. ತುಳು. ತಣಿ ]

**ತಣ್**$_{2}$, ತಂ$_{1}$, ತಣು$_{1}$ (ನಾ). ೧. ತಂಪು ; ಶೈತ್ಯ : (೬). (ಗು). ೨. ತಂಪಾದ ; ಶೀತವಾದ ; ತಣ್ಣಗಿರುವ : 'ತಣ್ಗದಿರ್', 'ತಣ್ಗಳಸ', 'ತಣ್ಜೊಡರ್', 'ತಣ್ಬಿಸಿಲ್' ಪರಾ. **ತಂ**$_{1}$ : ೨. 'ತಂಗಡಲ್', 'ತಂಗಾಲ' ಪರಾ. **ತಣು**$_{1}$ : ೧. ತಣುವಿರಬಲ್ಲುದೇ ಅತಿಶುಷ್ಕವಾದ ಪರ್ಣತರುವಿಡಿದ ಅನಲನ ನಡುವೆ (ಮೋಳಿಮಾ. ೧೬೦-೬೦೧) : ಸಕಲ ಗಣಸಂಕುಳಂ ತಣು[ಪಾಠಾಂ. ನು]ವಿನೋಕುಳಿಯಾಡಿ (ಬಸರ. ೭-೧೮೪); ಭಾನು ತಣುವಾದಾನು ಸೋಮ ಸುಟ್ಟಾನು . . . ಜಗ ಶೂನ್ಯವಾದೀತು ಮೌನದಲಿ ಸಿದ್ಧನಿರಂ (ಮುಂಕುಕ. ೭೮೪).

[ <ತಣ್$_{1}$. / ತಮಿ. ಮಲ. ತಣ್ ; ತುಳು. ತಣು ; ಕೊಡ. ತಣಿ. / ಪ್ರಾ. ತಣ್ಹಾಯ = ಒದ್ದೆಯಾದ, ತೇವವಾದ ]

**ತಣವು** 'ತಣೆವು' ನೋ.

**ತಣಾಪತ್ತಿ** (ನಾ). ದೇವಾಲಯದ ವ್ಯವಸ್ಥಾಪಕ: ಸ್ಥಾನಪತಿ: ತಣಾಪತ್ತಿ ದೆಯಿಳ ಜೀಯನುಂ ಊರವುರವನ್ನು × × ಸಕ್ಷಿ (ಎಕ. III. ನಂಜನ. ೦೯೯-೨೧; ?). 'ತಾನಪತಿ' ಪರಾ. [ <ಸಂ. ಸ್ಥಾನಪತಿ ]

**ತಣಿ**$_{1}$, ದಣಿ$_{1}$ (ಕ್ರಿ). ೧. ತೃಪ್ತಿಹೊಂದು; ಸಮಾಧಾನಗೊಳ್ಳು : "ತಣಿ ತೃಪ್ತೌ" (ಶಮುಧಾ) ; ನೆಲನುಂ ಪೆಳಗಾ ಪಾರ್ವ್ವರು[ಂ] ಪ್ರಜೆಯುಂ ತಣಿಗೆ (ಎಕ. VII, ಶಿಕಾರಿ. ೧೫೪-೧೮ ; ೧೧೧೬) ; ಕರುಣಿಸಿ ಪರ್ವವೊಂದು ತಣಿಯೆಯುಣಲಿಕ್ಕಿದನೆಂದೊಡೆ (ಪಪ್ಪಾರಾ. ೬೬-೧೫); ಆತಂ ಬೆರಸದೆಲ್ಲಮಂ ತಿಂದು ತಣಿಯದೆ ಪಲ್ಲಂ ತಿಂಬಂ (ಹಂಪಧಾ. ೩-೨೫) ; ಜಗಮೆಲ್ಲಂ ತಣಿಗುಪೊಂದು ಬಳ್ಳಿಯ ಕಾಯೊಳ್ (ಚೋಳಿಪಾ. ೬-೫೮) ; ಮೂಣುದರವಿದೆ ಬೀಗಿಹುದು ಕಲ್ಯಾಣದೇವಾ ತಣಿಯಿರೇ (ಬಸಪು. ೫೯-೩) ; ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ದಮ್ಮನೆ ತಣಿದವೆಂದೆನುತ (ಮೋಹತ. ೩-೫೯) ; ಅದಕ್ಕೆ ತಂದೆನು ನಿನ್ನಡೆಗಿಂದು ಕಡುಬಂ ತಣಿವಂದಂ ನೀಡೆಂದು (ಗಜೇಶ. ೨-೩೦). ೨. ಆಯಾಸಗೊಳ್ಳು ; ಸೋತುಹೋಗು : "ದಟ್ಟಿಂದಱಿದು[ಪಾಠಾಂ. ಗೆಂಟೆಂದೆಱೆದು] ದೆನಲ್ ತಣಿದುದು" (ಚತುನಿ. ೩೪) : ಧೈರ್ಯಗೆಟ್ಟಿದು ಕೊಡೆ ಕುರುಸೇನೆ . . . ತಣಿದುದ್ಯ ಪರಿಭವದ ಸೂಱೆಯಲಿ (ಕುಪ್ವಾದ್ರೋ. ೧೬-೧೨). **ದಣಿ**$_{1}$ : ೧. ಇತ್ತುದನೆ ಕೊಂಡು ದ[ಪಾಠಾಂ. ತ]ಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ವುಮೂರ್ಘರ್ (ಸಮುಪ. ೩೯೦-೨೬ ಅನು. I) ; ಆಡಿ ಕಾಲು ದಣಿಯವು ನೋಡಿ ಕಣ್ಣುದಣಿಯುವು ಹಾಡಿ ನಾಲಗೆ ದಣಿದುದು (ಬಸವ. ೪೮೬); ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ದ[ಪಾಠಾಂ. ತ]ಣಿಯನು (ಕುಪ್ವಾಉ. ೧೦-೦೮); ಹಂಸ ನೀಕ್ಷಣದಿಂದುಮ್ಮಿದಮೃತವ ಹಂಸನಂತೀಂಟೆ ದಣಿವನು (ಧರಪ. -೨೯) : ಕಂಡು ದಣಿದೆಯೋ ಉಂಡು ದಣಿದೆಯೋ (ಗಾದೆ). ೨. ಅರಿಗದಾಘಾತದಲಿ ಕೈಮೈದಣಿದು ಮನದಣಿದು ತೆರಳಿದರು (ಕುಪ್ವಾದ್ರೋ. ೩-೭೯) : ಶ್ರುತಿ ಶಾಸ್ತ್ರ ಪುರಾಣಗಳನೋದಿ ಬೆಂಡಾದೆ ಅತಿಶೀಲಗಳನೆಲ್ಲ ಮಾಡಿ ದಣಿದೆ (ಪುರಂದ. ೨-೧೮-೨). ೧, ೨ : ಚಣಚಣಕು ಪರಿಪೂರ್ಣ ನೀನು ತಣಿದೇ ದಣಿವೆ ; ನನಗೆ ಪೂರ್ಣತೆಯೆಂದೊ, ನಾನು ದಣಿದೇ ತಣಿವೆ (ಉಯ್ಯಾಲೆ. ೧೮-೧೩).

**ತಣಿತಣಿ** (ದ್ವಿರುಕ್ತಿ) : ತಣಿತಣಿದು ತಕ್ಕೈಸಿ ಮುಕ್ಕು ಮಲೆಮಲೆದಾಡಿ (ಬಸರ. ೩-೧೧೪).

[ ದೇ.॥ ತಮಿ. ಮಲ. ತುಳು. ಕೊಡ. ತೆಲು. ತಣಿ ]

**ತಣಿ**$_{2}$ 'ತಣ್$_{1}$' ನೋ.

**ತಣಿ**$_{3}$, ತನಿ$_{3}$ (ನಾ). ತೃಪ್ತಿಪಡಿಸುವಿಕೆ ; ತರ್ಪಣ : ತೊಡು ಜವದಿ ಬಿಡು ಬೇಗದಿಂದವನ ತಲೆಗಡಿದು ತಮ್ಮಂಗೆ ನೆತ್ತರ್ ತಣಿಯನೆರೆವೆ (ಶ್ರೀರಾಮಾ. ೮೦೨-೪೯). 'ತಣಿಯೆಱೆ' ಪರಾ. **ತನಿ**$_{3}$ : ಗರುಡನೂರವರೆಱೆವರೇ ನಾಗರಿಗೆ ತನಿಯನು (ಕುಪ್ವಾಕ. ೨-೧೫). 'ತನಿಯೆರೆ' ಪರಾ.

[ <ತಣಿ$_{1}$ ]

**ತಣಿಗೆ** 'ತಳಿಗೆ' ನೋ.

**ತಣಿಪು**$_{1}$, ತಣುಪು, ತಣ್ಪು$_{1}$ (ಕ್ರಿ). ತಣಿಸು; ತೃಪ್ತಿಯನ್ನುಂಟುಮಾಡು; ಸಂತೋಷಪಡಿಸು : "ತಣಿಪು – ತೃಪ್ತೌ" (ಶಮುಧಾ) ; ದಿವ್ಯಾಹಾರವನೂಡಿ . . . ತಾಂಬೂಲಾದಿಗಳಿಂ ತಣಿಪಿದಾಗಳ್ (ಪಪ್ಪಾರಾ. ೫೫-೨೦) : ದೇವ್ರ್ಪರನುತ್ಸಾಹದಿನಾವಗಂ ತಣಿಪಿ (ಎಇ. XIII, ೩೨೯-೫ ; ೯೭೭) : ನಿಜ ಸಂತತಿಯಂ ತಣಿಪಿ ಸುಹೃತ್ಸಂತತಿಯಂ ಪೆರ್ಚಿಪುದು (ಆದಿಪು. ೮-೬೫) ; ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯಧ್ವನಿ ತಣಿಪಿದಪುದು ವಿಶ್ವಜನವಂ (ಅಜಿಪು. ೮-೧೧) ; ತನ್ನಿಂದೆ ತಿಳಿದು ತನ್ನಂ ತನ್ನೊಳ್ ತಾಂ ನಿಂದು ತನ್ನೊಳುದಯಿಸಿದ ಸುಖಂ ತನ್ನನೆ ತಣಿಪುತ್ತಿರೆ (ಚಂದ್ರಪು. ೯-೨೨) : ಜಾಗದೊಂದೆಸಕವಲಂಪಿನಿಂ ಬಡವರಂ ತಣಿಪುತ್ತಿರೆ (ಕಬ್ಬಿಗಾ. ೪೬) ; ಒಂದೆ ಶಶಿಬಿಂಬವೀ ಜಗದಿಂದೀವರತತಿಯನೆಯ್ದೆ ತಣಿಪುವ ತೆಱದಿಂ (ಕಾವ್ಯಸಾ. ೫೫೪). **ತಣುಪು** : ಪೆಂಪಿನಿಂದೀವ × × ಮಂ ತಣುಪಿ ಕಲ್ಪಕುಜಕ್ಕೆಣೆ × × × ಸುದ್ದ ಮತಿವರದಾನ ಗುಣಭೂಷಣೆ (ಎಕ. VII. ಶಿವಮೊ. ೯೭-೨೦ : 1118) : ಬಸವಾದಿ ಶರಣರಾರೋಗಣಂ ಬರಲವರ ತಣುಪಲಂದಾಯ್ದಕ್ಕಿಮಾರಣ್ಣನೊಪ್ಪಿದನು (ವೀಕ್ಕಪು. ೭-೧೧-೧೨). **ತಣ್ಪು**$_{1}$: ಅನ್ನಯದೊದವು ತಾಯುಮಂ ತಂದೆಯುಮಂ ತಣ್ಪಿದುದಪಾರರಾಗಾಮೃತದಿಂ (ಶಾಂತಿಪು. ೧-೭೮). [ ತಣಿ$_{1}$ + – ಪು$_{1}$ ]

**ತಣಿಪು**$_{2}$ (ನಾ). ತೃಪ್ತಿ ; ಸಮಾಧಾನ ; ಸಂತುಷ್ಟಿ : ಪಾಲ್ ಕಟ್ಟಲೊಳ್ ತಣಿವು ಊಟದೊಳ್ ಸೀರೆ ನೂಲೊಳ್ . . . ಪುಟ್ಟುವಂತೆ (ಧರ್ಮಾಮೃ. ೮-೮೩) : ಲೋಕ ತಾಪದಿ ಬೆಂದು ತಣಿವನೆಳಸಿದವಂ ಈ ಕಂತೆಯಲ್ಲಿ ತನ್ನ ನಂದಿಕೆಯ ನೆಯ್ದಿಹನು (ಮುಂಕುಕ. ೯೪೦). [ ತಣಿ$_{1}$ + – ಪು$_{2}$ ]

**ತಣಿಯಿಸು**, ತಣಿಸು$_2$, ದಣಿಯಿಸು, ದಣಿಸು (ಕ್ರಿ). ೧. ತೃಪ್ತಿಪಡಿಸು; ಸಂತೋಷಪಡಿಸು: ಎಳಮಾವಿನ ಚಿಲ್ಪಿಂ . . . ತೆಂಕಣೆಲರಿನೆಳನೀರ್ಗಳಿನಿಂದೊಳದಿಂ ತಣಿಯಿಪುದು ಜನಂಗಳ ಪಂಚೇಂದ್ರಿಯಮನಂದು ಬಂದು ವಸಂತಂ (ಕಾದಂಬ. ೭೭೯); ತಮ್ಮೆಲ್ಲ ಹಸಿವುಗಳ ತಣಿಯಪನಿತನ್ನೋನ್ಯ ಹೊಮ್ಮುಗೌದಾರ್ಯ ಜನಜನಪದಂಗಳಲಿ (ಮಂಕುಳ. ೯೯೪). **ತಣಿಸು$_2$:** ೧. ಗುಣಮೇಱಿದ ಧರ್ಮಂ . . . ನೃಪಾಗ್ರಣಿಯನಿಹಸೌಖ್ಯದಿಂದಮೆ ತಣಿವುದದೆ ಪರಮಸುಖೈಕಕಾರಣಮಲ್ತೇ (ಪ್ರಪೃಪು. ೩-೧೧); ಮಾಹೇಶ್ವರರಿಗಿಷ್ಟಾರ್ಥಂಗಳಿಂದಾದರಿಸಿ ಪರಿಚಯಂಗಳಿಂ ತಣಿಸುತ್ತ (ಬಸಪು. ೪-೪೭); ರಣದೊಳಾಡುವ ಮರುಳ ಬಳಗವ ತಣಿಸಿದನು (ಕುಮಾರವ್ಯಾ. ೩-೭೭); ಎಣಿಸುವುದವನೊಲಿದೆಸಗುವ ನಲ್ಮೆಯ ತಣಿಸುವುದಿಂತು ಚಿತ್ರವನು (ಹದಿಬ. ೩-೪೩); ಕಣ್ಣುಗಳ ಹೊಳಪು ಮೊದಲೆ ಅವನ ನೀರಡಿಕೆಯನ್ನು ತಣಿಸಿತ್ತು (ಚಾಹುತ್ತ. ೮೯). **ದಣಿಯಿಸು:** ೧. ಧರಣಿಯ ಮರರ ದಣಿಯಿಸಿದಳು ಹಿರಣ್ಯದಾನದಲಿ (ಸಂಭಾಶ. ೨೦-೨೨). **ದಣಿಸು:** ೧. ಪರಿವಾರವನು ನಿರ್ದಾಯದಲಿ ದಣಿಸುವನು ರಿಪುಗಳ ಸಿರಿಯ ಸೂಱೆಯಲಿ (ಕುಮಾರವ್ಯಾ. ೧-೦೭); ನಾನಾ ವರ್ಣಮಂ ಮಹಾಭೂರಿ ದಕ್ಷಿಣೆಗಳಿಂ ದಣಿಸುತಂ . . . ಬರುತಿರ್ದನು (ಜಲಪು. ೫-೦೭); ವಿಪ್ರವೃಂದಮಂ ದ[ಪಾಠಾಂ. ತ]ಣಿಸು ಬಹುವಿಧದಿಂದೆ (ಕೃಮಿಥಾ. ೩೦-೭೦). ೨. ಆಯಾಸಗೊಳಿಸಂ; ಶ್ರಮಪಡಿಸು; ದಣಿವುಂಟುಮಾಡು: ಗಂಡನ ದಣಿಸುವುದಿಲ್ಲಿಯಮಕುಂಡದೊಳಗೆ ಹಾಕಿ ಕುದಿಸುವರಲ್ಲಿ (ಪುರಂದ. ೨-೩೯-೨).

**ತಣಿತಣಿಸು, ತಣಿಸುತಣಿಸು** (ದ್ವಿರುಕ್ತಿ): ಚೆನ್ನೆಯರು ಕುಣಿಯುತಿಹರು ದಣಿವಿಲ್ಲ ಮೈಗೆ ತಂತಾನೆ ಒಳಗೆ ತಣಿತಣಿಸಿ ತಣಿಯುತಿಹರು (ಸೂರ್ಯಪಾ. ೫೭-೬); ದಾನಾರ್ಥಿಗಳನಂಬರ ಹೇಮಮಣಿಗಣ ಭೂಷಣಾವಳಿಯಿಂ ತಣಿಸಿ ತಣಿಸಿ (ಬಸಪು. ೬-೨೯). [ ತಣಿ$_1$ + -ಇಸು$_2$ ]

**ತಣಿಯುಣ್**, ದಣಿಯುಣ್ (ಕ್ರಿ). ತೃಪ್ತಿಯಾಗುವಂತೆ ಊಟಮಾಡಂ: ದಿವ್ಯಾಹಾರಮನಾಕಂಠಪ್ರಮಾಣಂಬರೆಗಂ ತಣಿಯುಂಡು (ಪದ್ಮಪು. ೭೮-೨೨); ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯುಮ್ಮಿಸಿದವೋಲ್ (ಪಂಪಭಾ. ೬-೪೮); ತಣಿಯುಂಡನಂತೆ ಸಾಲ್ಗುಮೆನ್ನದೆ (ಧರ್ಮಾಮೃ. ೧-೧೩೫); ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ದು ಚೆಣ್ದು ಮರಲ್ದಿಂನ್ನುಮದಕ್ಕಿಸಲಾಱವೆನ್ದೊಡೆ (ಎಪಿ. XVI, ಚಿಕ್ಕನಾ. ೯೮-೨೫ : 1170); ಪಸಿವಿಂದೆ ನಿನ್ನ ಮೇಲೆ ಕಟ್ಟಿದ ದಿನಮೆಲ್ಲ ತಣಿಯುಣುತ (ಬಿದ್ದಪ್ರ. ೫೪-೧೦೬೫). **ದಣಿಯುಣ್:** ಗಗನದ ಮೇಘಂಗಳೆಲ್ಲಾ ಸುರಿದವು ಭೂಮಿಯ ಮೇಲೆ ಭೂಮಿ ದಣಿಯುಂಡು ಸಸಿಗಳೆಲ್ಲಾ ಬೆಳೆದವು (ಅಪಕಂ. ೧೦೭-೯೮೭); ಅನಿತೋಗರವನೊಡನೆ ಕಱುಗಾವ ಮಕ್ಕಳುಗಳನಿಬರ್ಗೆ ದಣಿಯುಣಲಿಕ್ಕಿ ತಣಿದು (ಸಿದ್ಧರಾ. ೨-೦೭). [ ತಣಿ$_1$ + ಉಣ್ ]

**ತಣಿಯುಣಿಸು** (ಕ್ರಿ). ತೃಪ್ತಿಯಾಗುವಂತೆ ಉಣಿಸು: ಸುಪ್ರೀತನಾಗುವೊಲು ತಣಿಯುಣಿಸಿ (ಪಾರಸಿ. ೨೭-೮೮೩). [ ತಣಿ$_1$ + ಉಣಿಸು$_1$ ]

**ತಣಿಯೂಡು** (ಕ್ರಿ). ತೃಪ್ತಿಯಾಗುವಂತೆ ಊಟಮಾಡಿಸಂ ; ತಣಿಯುಂವಂತೆ ತಿನ್ನಿಸು: ತೊಱೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೭ ವ); ದಾನಜಳಮಂ ತಣಿಯೂಡಿದಡೆ (ಬೊಂಕಣಾ. ೧೯೩೭. ಹಾನಗಲ್. ೭೭-೪೭ ; ?). [ ತಣಿ$_1$ + ಊಡು$_1$ ]

**ತಣಿಯೆಱೆ**, ತನಿಯೆರೆ (ಕ್ರಿ). ೧. ತರ್ಪಣ ಕೊಡು; (ಹಾಲು ಮಂತಾದುವನ್ನು ಅರ್ಪಿಸಿ) ತೃಪ್ತಿಯನ್ನುಂಟುಮಾಡು : ಪೆಣಮಾರೊ ಇದು ತಾನೆ, ಮಣ್‌ಮಾಡಿ ಪೋದರ್; ಬಱುಮಣ್ಣನೆಱೆ, ತಾವ್ ಶ್ರದ್ಧೆಯಿನ್ ತಕ್ಕಂತೆ ತಣಿಯೆಱೆದುಮಿರ್ಪರ್ (ಅಂತಿಗೊ. ೦೨-೨೨೮). **ತನಿಯೆರೆ:** ಇದೊ ತಂದೆ ತನಿಗಳನು. ನನ್ನ ಮಗನಯ್ಯಂಗೆ, ಪಿತೃಗಳಿಗೆ ತನಿಯೆರೆಯೆ (ಪಾರಸಿ. ೨೩-೫೦೮); ನಾಗರಿಗೆ ತನಿಯೆರೆಯುತ್ತಾರೆ (ರೂಢಿ). [ ತಣಿ$_1$ + ಎಱೆ$_1$ ]

ತಣಿರು 'ತಳಿರ್$_2$' ನೋ.

**ತಣಿವೀ** (ಕ್ರಿ). ತೃಪ್ತಿಯನ್ನು ನೀಡಂ ; ತಣಿವನ್ನುಂಟುಮಾಡಂ: ಅಱಿಯದೆಳಸಿದೆನೆಂದು ನಮಿಸಿದಸುರೆಯ ಬಸುರ ಬಱಿನಳಿಯೆ ತಣಿವಿತ್ತು (ಸಿದ್ಧರಾ. ೬-೯); ಅಂತದು ತಣಿವೀವುದು ಬಾನುದ್ದಮಪ್ಪ ಪೇರೊಡಲವರ್ಗಂ (ಶಬ್ದಾನು. ೫೪೨ ಪ್ರಯೋ). [ ತಣಿವು + ಈ$_2$ ]

**ತಣಿವು**, ತಣವು, ತನಿವು, ದಣಿವು, ದಣುವು (ನಾ). ೧. ತೃಪ್ತಿ ; ಸಮಾಧಾನ: "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿ, ಸೌಹಿತ್ಯಂ-ಈ ೪ತ (ಣಿ) ಣುವು " (ಹಲಾಯು. ೫೪-೧೭೧); ತಣಿವಂ ಕೈಕೊಂಡಮೂರ್ತರ್ಚರಮತನುಸಮಾಕಾರರ್ (ಆದಿಪು. ೧-೨); ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಿಸಿದರೊಳರೇ (ಶಾಂತಿಪು. ೪-೯೮); ತಣಿವಿಲ್ಲದರಂ ಪೂಜಿಸೆ ತಣಿವಕ್ಕುಮೆ (ಮಲ್ಲಿಪು. ೦೨-೧೭೦); ಪರಮಶಿವಸುಖ ಸಂಗಸುಧೆಯಂ ಸವಿಸವಿದು ತಣಿವಿಲ್ಲದೀಂಟುತ್ತ (ಬಸಪು. ೩೫-೨); ಕಿಚ್ಚಿಂಗೆ ತಣಿವಿಲ್ಲ ಮೊಚ್ಚೆಗೆ ಹೊರೆಯಿಲ್ಲ (ಸರ್ವಜ್ಞ. ೪೮೯). **ತಣವು:** ೧. "ಸೌಹಿತ್ಯಂ, ತರ್ಪಣಾಂ, ತೃಪ್ತಿಃ - ೩ ತಣವು[ಪಾಠಾಂ. ತಣುವು]" (ಸಿದ್ಧಾಂತ. ೨೨೯); ಆರಾ ಅಮರ್ದನ ತೀರಾ ತಣವಿನ್ (ಹೊಂಗಳು. ೪೪-೫). **ತನಿವು:** ೧. ತಂಬೆಲರು ಜೀವಕ್ಕೆ ತನಿವು ನೀಡಿತ್ತು (ಜೀವನ.೭). **ದಣಿವು :** ೧. ಭೋಜನದ ದ[ಪಾಠಾಂ. ತ]ಣಿವು ಪರ್ಯಾಪ್ತಮುಪಪನ್ನಮಾತ್ಮತೃಪ್ತಿ ಸೌಹಿತ್ಯಮಕ್ಕುಂ (ಮಂಗರಾ. ೬೫-೭). ೨. ಆಯಾಸ ; ಬಳಲಿಕೆ ; ಶ್ರಮ : ನಿಪುಣತೆ ಕ್ರಮಕ್ರಮೇಣ ದಣಿವಿನಿಂದ ಹಣ್ಣಾಗುತ್ತಲೆ ಇದ್ದಳು (ಬಾಡಳ. ೩೦೧); ಶ್ರೀನಿವಾಸ ಮಾತ್ರ ದಿನದ ದಣಿವಿನಿಂದ ಕೂಡಲೆ ನಿದ್ದೆಹೋದ (ಶೀಮೋಹ. ೪೫). **ದಣುವು:** ೨. ದಣುವಿಲ್ಲದೊಲ್ದು ಕುಣಿವಚ್ಚ ಕೇಳಿಕೆಗಳಿಂ (ಉದ್ಭಟ. ೩-೯೮); ದಾರಿಗರಿಗೆ ದಣುವು ತೋರುತ್ತಿರಲಿಲ್ಲ (ಶ್ರೀರಾಪ. ೦೩). ೩. ಆಸೆ ; ತೃಷೆ : ಪಾಂಡುಕುಮಾರರ ಚರಿತ್ರವು ಎಷ್ಟು ಕೇಳಿದರೂ ದಣುವು ತೀರದು (ಕೃಷ್ಣಾಭೀ. ೮೮).

**ತಣವು ಮುದ್ದೆ** = ತಂಬಿಟ್ಟು: ಅವರೂ ತಮ್ಮ ಕಾಹಿಲೆ ವಾಸಿಮಾಡಲು ಮಾರಮ್ಮನಿಗೆ ಕುರಿ, ಕೋಳಿ, ತೆಂಗಿನಕಾಯಿ, ತಣವು ಮುದ್ದೆಗಳನ್ನು ಅರ್ಪಿಸಲು ಮುಂದೆ ಬಂದಿದ್ದರು (ಊರುಕ. ೫).

[ ತಣಿ$_1$ + - ವು. / ತಮಿ. ತಣಿವು; ತೆಲು. ತನಿವು, ತನಿವಿ, ತನ್ವಿ, ತನ್ವು ]

**ತಣಿವೇಱು** (ಕ್ರಿ). ತೃಪ್ತಿಯನ್ನು ಹೊಂದು: ಪೊಗೆಸುತ್ತದಂತೆ ಕೈಕೊಂಬುದು ಹವ್ಯಮಂ ಬಯಸಿಯುಣ್ಬಮರರ್ ತಣಿವೇಱುವಂತೆವೋಲ್ (ಚಿಕವಿ. ೪-೭೭).

[ ತಣಿವು + ಏಱು$_1$ (<ಏಱ್$_1$) ]

**ತಣಿಸು$_1$**, ತಣ್ಣಿಸು, ತಣ್ಣೈಸು (ಕ್ರಿ). ೧. ತಣ್ಣಗೆ ಮಾಡು ; ತಂಪುಗೊಳಿಸಂ ; ಆರಿಸು : ತಣ್ಣೀರಾದಡಂ ತಣಿಸಿ ಕುಡಿ (ಪಾರ್ತಿಸು. ೭೭); ಕುಡಿಯುವ ನೀರನ್ನು . . . ಕುದಿಸಿ ಆದಮೇಲೆ ಮಣ್ಣಿನ ಪಾತ್ರೆಗಳಲ್ಲಿ ಹಾಕಿ ತಣಿಸಬೇಕು (ಆರುಪಾ. ೮೪). **ತಣ್ಣಿಸು :** ೧. ಕಳ್ವಲಿಗಣಂ ಮಾರಾಂಪ ಶೂರಂ ಲಸಲ್ಲಲಿತಂ ತಣ್ಣಿಪ ಚಂದ್ರನಂ ನುಡಿವರ್ (ಸಂಸಪ. ೦೪-೪); ಅಣ್ಣಾ ದತ್ತನ ಬಗೆಯ ಬೇಗೆಯನು ತಣ್ಣಿಸೈ (ನನಲ್ಲ. ೮೭-೦). ೨. ಅಡಗು ; ಇಲ್ಲದಂತಾಗು : ಬಯಲಾತು ಮಾತಿನ ಭ್ರಾಂತಿ ತಣ್ಣಿಸಿತು . ಶಾಂತಿ (ಸೂರ್ಯಪಾ. ೧೮-೪). **ತಣ್ಣೈಸು :** ೧. ಸಣ್ಣಕ್ಕಿಯಶನ ಸದ್ಘೃತದೊಳೆ . . . ಕೈದಣ್ಣಲರ್ ದಧಿಪತ್ರಮಾಲೆ ತಣ್ಣೈಸಿದ ಪದಾರ್ಥಂಗಳ ರುಚಿಯ ಮುಕ್ಕಣ್ಣಗರ್ಪಿತವ ಮಾಡಿದರು (ಮೋಹಶ. ೨೭-೯). [ ತಣ್$_2$ + - ಇಸು$_3$ ]

ತಣಿಸು$_2$ 'ತಣಿಯಿಸು' ನೋ.

**ತಣಿಸು$_3$** (ನಾ). ೧. ತಂಪು ; ಶೈತ್ಯ : " ಸ್ವಿದಿ - ಶೈತ್ಯೇ, ತಣಿಸಿನೊಳ್ " (ಕಾಶಳ್ಕ. ೮೨). ೨. ತೇವ ; ಒದ್ದೆ : (ಸ). ೩. ತೃಪ್ತಿ ; ತುಷ್ಟಿ : ಗುಲಾಬಿ ನಗುವುದೊಂದರೆನಿಮಿಷ; ನಗಲು ಬಾಳ್ಕುಗಿಯುವುದು ಮುಗುಳು ದುಡಿತಕೆ ತಣಿಸು (ಮಂಕುತಿ. ೪೭೮). 'ತಣ್ಣಸ' ಪರಾ. [ ತಣಿ$_1$ + - ಸು$_3$ ]

**ತಣು₁** 'ತಣ್₂' ನೋ.

**ತಣು₂** (ನಾ). (?) : ಕೆಲವಱೊಳ್ ವ್ಯಂಜನಮಿಲ್ಲ. . . ಕರು, ತಣು, ಅನು, ಕಟು (ಶಮದ. ೪೮ ಪ್ರಯೋ). [ ? ]

**ತಣುಕು** (ನಾ). ಒಂದಂ ಬಗೆಯ ಗಿಡ : ತಣುಕು, ಕಾಡುಬೆಂಡೆ (ವ್ಯಶಿಗ. ೪೦-೮೨೨). [ ? ]

**ತಣುನೆಳಲು** 'ತಣ್ಣೆಲ್' ನೋ.

**ತಣುಪು** 'ತಣಪು₁' ನೋ.

**ತಣೆಸೆ** (ನಾ). (?): ತಾವರೆಯ ತಣೆಸೆಯೊಳು (ಇಎ. ೦೯೪೬, ಮುಂಡರಗಿಶಾಸ. ೩೩೫-೯ ; ?). [ P ಇದು 'ತಣ್ಣಸೆ'ಯ ಅಪಲಿಖಿತವಿರಬಹುದು ]

**ತಣ್ಗಂಪು** (ನಾ). ಆಹ್ಲಾದಕರವಾದ ಸುವಾಸನೆ : ಅಧರದ ಪೊದಟ್ಟ ತಣ್ಗಂಪಿಂಗಂ ಮೃಗನಯನೆಯರನೆ ಬಡದೋಲಗಿಸಿದುದಳಿನಿಕರಂ (ಆದಿಪು. ೧೧-೧೧೨) ; ವನಲತಾಳಿ ಪ್ರಸೂನಾವಳೀ ಗಂಧವಹಂ . . . ತಣ್ಗಂಪನೀ ಬೀಱಿದಪುದು (ಕಾದಂಬ. ೭೦೬) ; ಕಂಪಿನೊಳ್ ಪೊಂಪುಱೆವೋಗುತಿರ್ದ ಮಳ ವಕ್ತ್ರಸರೋಜಮೆ ಸಾಲ್ಗುಮೆಂದು ತಣ್ಗಂಪನುಣಲ್ಕೆ ಬಂದೆಱಗಿ (ಧರ್ಮಾಮೃ. ೭-೨೦೦); ಮುಡಿಯಿಂದಂ ಬೀಟ್ಟ ಪೂವಮಾಲೆಯಿಂ ತ[ಪಾಠಾಂ. ವು]ಣ್ಗಂಪಂ ಸವಿದಲ್ಲಿ ವಂಗಡದೆ ಪಾಡುತಿರ್ಪ ಪೆಣ್ದುಂಬಿಯಿಂ (ಶಬ್ದಶಾ. ೩೫) ; ನಸುಬಿರಿದ ಜಾಜಿಯ ನನೆಯ ತಣ್ಗಂಪನುಂಡು . . . ಸುಳಿವ ಮಱಿದುಂಬಿಯ ವಿಳಾಸದಂತೆ (ಸೌಂದಪು. ೧-೧೬).

[ ತಣ್₂ + ಕಂಪು ]

**ತಣ್ಗದಿರ್**, ತಂಗದಿರ್ (ನಾ). ತಂಪಾದ ಕಿರಣ : ಸ್ಮರಶರಮೇವುವೆಂಬ ಶಿಶಿರಾಂಶುವ ತಣ್ಗದಿರೇವುವೆಂಬ ಬದ್ಧರನಱಿಯಟ್ಟಿ (ಅಜಿಪು. ೭-೨೬) ; ನೆಱೆದಿಂಗಳ ತಣ್ಗದಿರಂತೆ . . . ಲೋಲಲೋಚನರುಚಿ ಸುತ್ತಿಮುತ್ತಿದುದು (ಪಂಪಾಮಾ. ೫-೭೦) ; ಭುವನವನಾವಗಂ ಪುದಿದು ಶೀವಿದ ತಣ್ಗದಿರ್ಗಳ್ ಪೊದಟ್ಟ ಕೈರವವನಮಾದುವು (ಲೀಲಾವ. ೩-೭) ; ವರ ಹಿಮಕರಬಿಂಬದ ಬೆಂಬಳಿಯೋಳಿವ ತಣ್ಗದಿರ್ಗನೆನಲ್ (ಗಿರಿಕ. ೭-೯) : ಸೊಗಯಿಪ ಬೆಳ್ಪಸದನಮಂ . . . ಕೈಕೊಂಡಾಗಳ್ ಮಿಗೆ ತಣ್ಗದಿರಾವರಿಸಿದ ಮೃಗಧರಮಂಡಳಿಯವೋಲ್ ವಿರಾಜಿಸುತಿರ್ದಳ್ (ಪಾರ್ಶ್ವಪು. ೭-೧೦೦೦). **ತಂಗದಿರ್**: ತಂಗದಿರ್ಗಳು ಸರ್ವಾಂಗದಿ ನೆಲಸಿರೆ (ಶಿವಗೀ. ೦೭೦-೫೩೧) ; ತಳಿತ ತಂಪಿನ ತಂಗದಿರ ತೊಱೆಯೊಳಗೆ ತೇಂಕಾಡಿದುದು ಬಲ (ಕುಮಾ್ರವ್ಯಾ. ೦೭-೦೮).

[ ತಣ್₂ + ಕದಿರ್₂ ]

**ತಣ್ಗದಿರ**, ತಂಗದಿರ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಜೋನ್ನೊಡಲಂ . . . ತಣ್ಗದಿರಂ, ಅಲಿವೆಳಗಂ, ಮಂಜುಗೈಯ್ಯಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಶಕಸಾ. ೩-೨೩) ; "ತಣ್ಗದಿರನೆನಲ್ಕೆ ಚಂದಿರಂ ಸೊದೆಗದಿರಂ" (ಶಕಾರ್ಣ. ೯) ; ಆನನಾಂಬುಜಂ ತಣ್ಗದಿರಂಗೆ ಸೋಲವುನೊಡರ್ಚೆ (ರಾಜಶೇ. ೦೩-೬೦); ಬೆಂಗದಿರನ ಕಾಯ್ಪು ತಣ್ಗದಿರನ ತಣ್ಪು . . . ಪಡಿಗೊಳೆ (ರಾಮಾಶ್ವ. ೭-೧೭) ; ಬೆಂಗದಿರನ ಬಿಸಿ ನಾನು, ತಣ್ಗದಿರನ ತಂಪಾನು ! (ಪಾಂಚಜ. ೦೬-೨೦). **ತಂಗದಿರ** : "ತಂಗದಿರನೆಂದೊಡಂಬುಜಬಾಂಧವಂ" (ಶಕರ. ೦೨೦); ತಂಗದಿರನಿಂದಿಂಗಡಲ್ ಪೆರ್ಚದಿರಲ್ (ನಂದಿಮಾ. ೯-೭೩) ; ಸರಸದಿಂ ತಂಗದಿರನುದಯದಿ ಶರಧಿ ಪೆರ್ಚುವ ತೆರದೊಳ್ (ಕೃಶರ್ಮ. ೩-೭೮) ; ತಂಗದಿರ ನೇಸರರ್ ತಾವು ಕಡುಹರುಸದಿಂದೆಸಗುತಿರಲು (ಕವಿಕಾ. ೨-೧); ತಂಗದಿರನೆಸಕ ಕಣ್ಗಮೃತ, ಕಣಜಕದೇಂ ? (ಮಂಕುಕ. ೪೯೮). 'ಬೆಂಗದಿರ' ಪರಾ.

**ತಣ್ಗದಿರನನ್ವಯ** = ಚಂದ್ರವಂಶ : ತಣ್ಗದಿರನನ್ವಯದ ಪಾರ್ಥನ ತುರಂಗಮದು ಪೆಣ್ಗುದುರೆಯಾಗಿ . . . ಸ್ತ್ರೀ ರಾಜ್ಯಮಂ ಪೊಕ್ಕುದು (ಜೈಮಿಭಾ. ೦೫ ಸೂಚನೆ). [ ತಣ್ಗದಿರ್ + – ಅ₇ ]

**ತಣ್ಗದಿರವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಣ್ಗದಿರಱೆ** (ನಾ). ಚಂದ್ರಕಾಂತ ಶಿಲೆ ; ಅಮೃತಶಿಲೆ : ಪಾಸಿದ ತಣ್ಗದಿರಱೆಯ ಪಾದವಟ್ಟಗೆಗೊಳಗೇರಿಯ ನಿಡುಮರಂಗಳಿಱುಂಬಿನ ಕಟ್ಟಲೆಯನೊಳಕೊಂಡು (ರಾಮಾಶ್ವ. ೫೨-೧೯). [ ತಣ್ಗದಿರ + ಅಱೆ₄ ]

**ತಣ್ಗದಿರಾಡಿ** (ನಾ). ಚಕೋರ ಪಕ್ಷಿ ; "ಜೊನ್ನವಕ್ಕಿ" (ಚತುನಿ. ಕ. 1, ೩೮).

[ ತಣ್ಗದಿರ್ + – ಆಡಿ₁ ]

**ತಣ್ಗದಿರ್ಗಲ್**, ತಂಗದಿರ್ಗಲ್ (ನಾ).=ತಣ್ಗದಿರಱೆ: ಪೊಳೆವ ತಣ್ಗದಿರ್ಗಲ್ಲ ಪಸೆಯೊಳೇಳೆಲೆವಾಳೆಯೆಳೆಯಲೆಯ ಪಚ್ಚಡಿಸಿ . . . ಕಾಂತೆಯ ಮಲಂಗಿಸಿ (ಪದ್ಮರಾ. ೬-೯೨) ; ತಲೆವೆಱೆ ಸೆಜ್ಜೆವನೆಯ ತಣ್ಗದಿರ್ಗಲ್ಲ ಮೆಲ್ವಲ್ಗೆಯುಂ ಸೋಂಕೆ ಕರಗಿ ಸೂಸೆ (ಸೌಂದಪು. ೭-೧) ; ತಳಿರೆಲೆ ಬಿಜ್ಜಳ ತಣ್ಗದಿರ್ಗಲ್ . . . ಬೌವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಯಕಾ. ೪-೪೦) ; ಮೆಱೆವ ತಣ್ಗದಿರ್ಗಲ್ಲ ಮಂಟಪದೊಳ್ . . . ಸಂಭ್ರಮದೆ ಕುಳಿರ್ವಟ್ಟಣಾಗಿಯೊಡನೆ ಪಸೆನಿಂದು (ಭಾವಚಿಂ. ೯-೫೭). **ತಂಗದಿರ್ಗಲ್** : ಕಂಗೊಳಿಪ ಸೋಪಾನದಂತರಂಗಳೊಳೆಸೆವ ತಂಗದಿರ್ಗಲ್ಲ ಪುತ್ಥಳಿಗಳೋ (ಹ ಬ ಪು. ೪೫-೬೩); ತಂಗದಿರ್ಗಲ್ಲ ಗಹ್ವರದ ಚೆಂದಳಿರ್ವಾಸಿನೊಳತ್ತ ಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದರಲುಂ (ಶಬಶಂ. ೧-೫೦). [ ತಣ್ಗದಿರ್ + ಕಲ್₃ ]

**ತಣ್ಗದಿರ್ವಕ್ಕಿ**, ತಂಗದಿರ್ವಕ್ಕಿ, ತಣ್ಗದಿರವಕ್ಕಿ (ನಾ). ಬೆಳುದಿಂಗಳ ಹಕ್ಕಿ; ಚಕೋರ ಪಕ್ಷಿ ; ಜೊನ್ನವಕ್ಕಿ : "ಜೊನ್ನವಕ್ಕಿ, ತಣ್ಗದಿರ್ವಕ್ಕಿ – ಈ ೨ ಚಕೋರಂ" (ಶಕಸಾ ೦೦-೨೦೨) ; ತಣ್ಗದಿರ್ವಕ್ಕಿ ಮೊಗವಿಟ್ಟು ನಭವನೋಡೆ (ರೀಪಂಚ. ೬೪-೧೬). **ತಂಗದಿರ್ವಕ್ಕಿ** : "ತಂಗದಿರ್ವಕ್ಕಿ ಜೊನ್ನದ ವಕ್ಕಿಯೆನೆ ಚಕೋರಂಗಳ ಪೆಸರ್" (ಶಬ್ದಕ್ಕೆ. ೨೦) ; "ಜೀವಂಜೀವ – ತಂಗದಿರ್ವಕ್ಕಿ" (ಪಾಠಬೀ. ೨-೭-೩೫ ಪ). **ತಣ್ಗದಿರವಕ್ಕಿ** : "ತಣ್ಗದಿರವಕ್ಕಿಯೊಡನದು ಚಕೋರಾಖ್ಯೆಯಕ್ಕು" (ಶಕರ. ೪೨).

[ ತಣ್ಗದಿರ್ + ಪಕ್ಕಿ₁ ]

**ತಣ್ಗದಿರ್ವೊದಱ್** (ನಾ). ತಂಪಾದ ಕಿರಣಗಳ ಸಮೂಹ : ತಿಂಗಳ ತಣ್ಗದಿರ್ವೊದಱೊಳ[ಪಾಠಾಂ. ಬನ]ಪಾಂಗಚ್ಛವಿ ಸೆಣಸೆ ತಂದು ತಲೆವಾಗಿಪ ಪೊಲ್ . . . ಅಮರಾಂಗನೆ ಚಾಮರವನಿಕ್ಕಿದಳ್ (ಅನಂಪು. ೪-೮೩).

[ ತಣ್ಗದಿರ್ + ಪೊದಱ್ ]

**ತಣ್ಗರಗ**, ತಂಗರಗ (ನಾ). ತಂಪಾದ ಕೊಡ ; ಶೀತಲ ಕಲಶ: ತಣ್ಗರಗದ ನೀರ್ವೆರಸು ಕೆಲದೊಳಿರ್ದ ಕೆಳದಿಯರನಟ್ಟುವುದುಂ (ಪಂಪಾಮಾ. ೭-೦೦೬ ಪ): ಅಱವಟ್ಟಗೆಯೊಳ್ ಕಡುಗೋಡುವೆತ್ತ ತಣ್ಗರಗವನೆತ್ತಿ ನೀರೆಱೆಯೆ (ಅಗವಿ. ೦೭-೭೯) ; ಹಗಲಿನೊಳು ತಂದ ಪೊಸನೀರನಾಕ್ಷಣದೊಳಗೆ ಮಿಗೆ ಸೋದನೆಯ ಮಾಡಿ ತಣ್ಗರಗ[ಪಾಠಾಂ. ತಂಗರಗ]ದೊಳು ತುಂಬಿ (ಸೂಪಶಾ. ೨-೪೩) ; ತಣ್ಗರಗದ ನೀರಿಂದ ತೊಳೆದಾನನ ಕರಚರಣಂಗಳನು (ಕುಶಾಸಾಂ. ೩೬-೫) ; ಕುಳಿರ್ವಾಲಿನೀರನಬಳಾವಳಿ ತಣ್ಗರಗದೊಳೆ ತೀವಿ ಪಥಿಕರ್ಗಱೆಗುಂ (ಪ್ರಷಪಿ. ೪-೨೫). **ತಂಗರಗ** : ತಂಗರಗದಿಂ ಶೈತ್ಯೋದಕಮಂ ಕುಡಿಯಲೆಱೆವುತ್ತ (ಪುಣ್ಯಾಸ್ರ. ೨-೨೦ ಪ) : ತಂಗರಗದ ತಿಳಿನೀರನಂಗದ ಮೇಲೆ ತಳಿವುತಿರಲು (ಪ್ರಭುಲಿಂ. ೪-೧೩) ; ತನಿವಣ್ಣ ಹೊಱೆಗಳಿಂ ತಿಳಿದ ಜಲಪೂರ್ಣವಹ ತಂಗರಗದಿಂದಲಾಭರಿತ ಚಂದ್ರಾನನೆಯರಿಂ . . . ನಿರ್ಮಳ ವಸಂತಂ ಸಹಿತ ನಡೆದು ಪೊಱವೊಳಲ ಬನವೊಕ್ಕು ಬರೆ (ಕೀರಮ. ೫-೨೨).

[ ತಣ್₂ + ಕರಗ ]

**ತಣ್ಗಲ್**, ತಂಗಲ್, ತಂಗಲ್ಲು (ನಾ). ಚಂದ್ರಕಾಂತ ಶಿಲೆ : "ಸಸಿಗಲ್, ತಣ್ಗಲ್–ಈ ೨ ಚಂದ್ರಕಾಂತಂ" (ಶಕಸಾ. ೪-೫೩). **ತಂಗಲ್** : ಮಿಸುಪ ಪೇಡಾಕುಳಿಯ ಕುಂಕುಮರಸದ ಕತ್ತುರಿಗೆಸರ ತಂಗಲ್ಸೊಸರ್ವ ಪನ್ನೀರುಗಳ . . . ಓಕುಳಿಯಾಡಿದರು (ಅನಂರಾ. ೧-೨೩-೩೦). **ತಂಗಲ್ಲು** : ಒಸರಲಾ ತಂಗಲ್ಲು ಕರಗಾದ ಜಲ ತಣ್ಣಸದೋಱೆ ಶ್ರಮವಡಗಿಪುದು (ಶಂವಪಿ. ೭-೭೭). [ ತಣ್₂ + ಕಲ್₃ ]

**ತಣ್ಣಲಸುಗೂಟ್‌** (ನಾ). ತಣ್ಣನೆಯ ಕಲಸನ್ನ,-ಕಲಸಿದ ಅನ್ನ : ಕೆನೆಗೊಂಡ ಗೆಡ್ಡೆ ಮೊಸರಂ ಸುರಿದೇಲೆಯು ಚೂರ್ಣವಿಕ್ಕಿ . . . ಪವಣ್ಬುಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೫-೭೦). [ ತಣ್‌$_2$ + ಕಲಸುಗೂಟ್‌ ]

**ತಣ್ಣಳಸ** (ನಾ). = ತಣ್ಣರಗ : ತಾವರೆಯ ಕೊಡೆಯೆಲೆಗಳಿಂ ಮುಚ್ಚಿದ ಪಚ್ಚೆಯ ಪವಳದ ಪದ್ಮರಾಗದ ಪಳುಕಿನ ತಣ್ಣಳಸಂಗಳುಮಂ (ಶಾಂತೀಶ. ೨೧೬) : ಪಱಪಡೆ ಸೇದೆ ಪಿಂಗೆ ತೃಷೆ ತಣ್ಣಳಸಂಗಳನೆತ್ತಿ ನಿಂದು ನೀರೆಱೆವ ಚೆಳ್ಳಲ್ತತಾಂಗಿಯರ್ (ಅನಂಪು. ೧-೮೫). [ ತಣ್‌$_2$ + ಕಳಸ$_1$ ( = ಕಲಸ) ]

**ತಣ್ಗಾಚು** (ನಾ). ಹಿತಕರವಾದ ರಂಚಿಯುಳ್ಳ ಕಾಚು : ಬೆಳ್ಳಿಲೆ ಕ್ರಮುಕ ತಣ್ಗಾಜ[ಚ]ನಂ[ಪಾಠಾಂ. ಮೊದಲಾದಂ]ಗಡಿಯಿರೆ (ಅಬ್ಬಲೂ. ೩-೭೫). 'ತಂಗಾರ' ಪರಾ. [ ತಣ್‌$_2$ + ಕಾಚು$_1$ ]

**ತಣ್ಗಾಲ್‌** (ನಾ). = ತಣ್ಗಾಲುವೆ : ಸೊಕ್ಕೇಱದರ್ ಬೀಟ್ಗಿ ಕಾಮನ ಕರಂಬಿನ ಕೋಳ್ಗೆ ಸುಗ್ಗಿ ಪೊಸವೆಳ್ಳಿಂಗಳ್ ಬನಂ ಬಂದ ಮಾವಿನಿತುಂ ತಣ್ಣದುವಕ್ಕೆ ತಂಬೆಲರ್ಗಳಿಂ ತಣ್ಗಾಲೊಳೆಂದೊರ್ವಳಚ್ಚನೆಯಾಟಂ ಸತಿ ಬೇಟದೇವತೆಗೆ ಪಾನೋನ್ಮತ್ತೆ ನಿಂದಾಡಿದಳ್ (ಅನಂಪು. ೮-೩೦). [ ತಣ್‌$_2$ + ಕಾಲ್‌$_2$ ]

**ತಣ್ಗಾಲುವೆ** (ನಾ). ತಂಪಾದ (ನೀರಿನ) ಕಾಲುವೆ : ನೀಲದ ನೆಲಗಟ್ಟು ಪರಿವೇಷ್ಟಿಸಿರ್ದ ತಣ್ಗಾಲುವೆ ತಳಿರ್ವಾಸಿನಲಿ ಮೂಲೋಕಮೋಹನರನ್ನೆಯ ಸೈಪಿಡೆ (ಮೋಹತ. ೨೮-೦೩). [ ತಣ್‌$_2$ + ಕಾಲುವೆ (<ಕಾಲ್ವಾಯ್) ]

**ತಣ್ಗಾಳಿ, ತಂಗಾಳಿ** (ನಾ). ತಂಪಾದ ಗಾಳಿ : ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯಂ ವಿಗುರ್ವಿಸಿ ದೇಹಕ್ಕಾಪ್ಯಾಯನಂ ಮಾಡೆ (ವಡ್ಡಾ. ರಾ. ೫೬-೦೩); ಎಲೆ ತಣ್ಗಾಳಿಯೆ ನೀನೇಕಲೆದಪೆ (ಕಬ್ಬಿಗಾ. ೬೫) : ಆಳಿಯರ್ ಬೀಸುವ ಚಮರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು . . . ಧಡಾಳಿಸಿತು (ಮೋಹತ. ೨೭-೬೨). **ತಂಗಾಳಿ :** ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಅಜಿಪು. ೬-೨೮) : ಬಡತನದೊಳ್ ಸಿರಿ ಮೆಯ್ ಬೆಮರ್ವೆಡೆಯೊಳ್ ತಂಗಾಳಿ ಮರ್ವು ಪರ್ವಿದ ಸಮಯಕ್ಕುಡುಪೋದಯಮೆಂಬಂದದ ಗಡಣಸಿದುದು ಸುತನ ಬರವು ಬಯಸುವ ಪದದೊಳ್ (ಚಂದ್ರಪು. ೬-೯೨) ; ವುಳಿನಕ್ಕೆ ತಂಗಾಳಿಗೆಸೆವ ದೀಹದ ಮೃಗಾವಳಿಗೆ ಬೆಚಗಾಗುತ್ತ ನಡೆತರುತ್ತ (ಹರಿಶಾ. ೫-೫೬) ; ಅಗ ದಟ್ಟವಾಗಿ ಮೋಡಗಳು ಕವಿದುಕೊಂಡು ತಂಗಾಳಿ ಬೀಸಲಾರಂಭವಾಗಿತ್ತು (ರಾವಿಚ. ೨೫). [ ತಣ್‌$_2$ + ಗಾಳಿ$_1$ ]

**ತಣ್ಣೂಳ್‌** 'ತಣ್ಣೂಟ್‌' ನೋ.

**ತಣ್ಣೂಟ್‌, ತಂಗಳು, ತಂಗಟ್‌, ತಂಗುಳಂ, ತಂಗೂಟ್‌, ತಂಗೂಳು, ತಂಗೂಟ್‌, ತಣ್ಣೂಳ್‌** (ನಾ). ೧. ತಣ್ಣಗಾದ ಅನ್ನ ; ಆರಿದ ಅನ್ನ : ತಣ್ಣೂಟಂ ಪಡವಿನೊಳೆಲೆಗಟ್ಟಿ ಮುಟ್ಟುಪಡೆದಬಿಸುವುದೇ (ಲೀಲಾವ. ೨-೧೧೫). **ತಂಗಳು :** ೧. ಇದ್ದ ತಂಗಳು ನನಗಿಕ್ಕು ನಿನಗೆಂದೆಂದಿಗೂ ಹಸಿವಿಲ್ಲದ ಹಾಗೆ ಮಾಡುತ್ತೇನೆ (ಗಾದೆ). ೨. (ಆಹಾರ ಪದಾರ್ಥಗಳ ವಿಷಯದಲ್ಲಿ) ಆರಿದುದಂ ; ಮಾಡಿ ಬಹಳ ಹೊತ್ತಾದುದು : ತಂಗಳು ಎರಡು ಮುದ್ದೆಗಳಿವೆ (ಜಂಗಾಳ್ಕ. ೧೭) ೩. ತಂಗಳೂಟ : ಬೆಳಗ್ಗೆ ಎದ್ದು ಸ್ನಾನ, ಶಿವಪೂಜೆ, ತಂಗಳು ತೀರಿಸಿಕೊಂಡು (ನಾಲ್ಕು. ೩೪). ೪. ಹಳೆಯದು ; ಹಳಸಲಾದುದು ; ಹೊಸತನವಿಲ್ಲದುದು : ಹೋಗಲಿ ಆ ಹಳಬರ ತಂಗಳು – ಈ ನಿನ್ನ ಹಿರಿಯರೊಳಗೆ ಈಗ ಯಾರಿದ್ದಾರೆ ? (ನಡೆದಾ. I, ೪೪೫). 'ತಂಗಳಂತತ್ತ್ವಜ್ಞಾನ' ಪರಾ. **ತಂಗಟ್‌ :** ೧. ತಂಗಟಲ್ತು ಕದನ್ನಮಲ್ತು ಪೂರಣಗಡುಬುಂಟು (ರಾಮಾಶ್ವ. ೨೩-೨೨). **ತಂಗುಳು :** ೧. ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲೂ ತಂಗುಳವೇ ಲೇಸು (ಸರ್ವಜ್ಞ. ೧೫೩೪). ೨. ಶೈತ್ಯವಾದ ಜಲಪಾನದಿಂದಲೂ, ತಂಗುಳು ಅನ್ನವನ್ನುಂಬುವುದರಿಂದಲೂ . . . ಬಿಕ್ಕಳನ್ನುಂಟುಮಾಡುವುದು (ಸಕಲವೈ. ೨೪೧) : ಮುಂದುಕಿ ಬಲು ಬುದ್ಧಿವಂತೆ . . . ಅವನಿಗೆ ಬೆಚ್ಚಾಗಿ ತಂಗುಳು ಹಾಕಿದಳು (ಪಂಚಾಮ್ರು. ೫೭). ತಂಗುಟ್‌ : 'ತಂಗುಟ್ಬಿಡಿಕೆ' ಪರಾ. **ತಂಗೂಳು :** ೧. ಬಿಸಿಗೂಡಿ ತಂಗೂಳುಣಬೇಡ (ಸರ್ವಜ್ಞ. ೨೦೧೧). ೨. ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು (ನೆಲಮು. ೩೨-೧೪). **ತಂಗೂಟ್‌ :** ೧. ಉಣಲಱಿಯಂ ತಂಗೂಟಂ ಗುಣಮುಳ್ಳ ಗೃಹಸ್ಥನೆಂದೊಡಿಂ ತಪಸಿಗೆ ಪೇಟುಣಲಕ್ಕುಮೆ ತಂಗೂಟಂ (ಸಮುಶ. ೧೪-೬೪). **ತಣ್ಣೂಳ್‌ :** ೧. ಇಪ್ಪ ಭೋಜನಮುನುಂಡ ಪ್ಯಾಸಿರಿಯೆತ್ತ ಖಳವ ಸೆಱೆವನೆಯ ತಣ್ಣೂಳೆತ್ತ (ಶ್ರೀರಾಮ. ೫-೮೫). [ ತಣ್‌$_2$ + ಕೂಟ$_1$ ]

**ತಣ್ಗೆಸಱ್‌** (ನಾ). ತಣ್ಣನೆಯ ಕೆಸರು,-ಪಂಕ : ಚಿಗಿದು ಹಾಱಿದ ಏಹಗೇಶನುಬ್ಬಟೆಗೆ . . . ಕೂರ್ಮನ ದೇಹ ಹುಗಿದುದು ತಣ್ಗೆಸಱೊಳಗೆ (ಮೋಹತ. ೩೭-೪೭). [ ತಣ್‌$_2$ + ಕೆಸಱ್‌ ]

**ತಣ್ಗೊಳ, ತಂಗೊಳ** (ನಾ). ತಂಪಾದ (ನೀರಿನ) ಕೊಳ : ತಣ್ಗೊಳದೊಳ್ವಿಜೃಂಭಿಪರಸಂಚೆ (ಉದ್ಭಟ. ೬-೪೫) ; ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ (ಕಬ್ಬಿಗಾ. ೩೨೦) ; ಚಂದ್ರಕಾಂತ ಕಲ್ಗಟ್ಟಿ ಸೋಪಾನ ತಣ್ಗೊಳದ ಮಧ್ಯದಲಿ . . . ವಿಮಾನಾಂಕನಿರ್ದನೋಲಗದಿ (ಮೋಹತ. ೫-೩೨) : ತಣ್ಗೊಳಂ ಕಱಕಾಲ್ವೆಗಳಿಲ್ಲದಿಳಯಿಲ್ಲ (ಜ್ಞಮಿಥಾ. ೧೯-೦೩). **ತಂಗೊಳ :** ತಂಗೊಳದೊಳಾಡಿ ತೊಯ್ದು ಮನಂಗೊಳಿಪರ ಸಂಚಿಯಂತೆ (ಉದ್ಭಟ. ೪-೨೪) ; ಉದಿಸಿತು ಘುಳುಘುಳು ಘುಳುಘುಳು ಧ್ವನಿ ತಂಗೊಳದೊಳು ತನುತಾಪದಿಂದೆ (ಮೋಹತ. ೯-೪೨) ; ಎಳನನೆಕೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨-೩೭). [ ತಣ್‌$_2$ + ಕೊಳ$_2$ ]

**ತಣ್ಗೊಳ್ಳು** (ಕ್ರಿ). ತಂಪಾಗು ; ಶೀತಲವಾಗು : ದಕ್ಷಿಣದಿಕ್ಕಿನಿಂದ ಮೃದು ಮಧುರವಾಗಿ ಬೀಸುತ್ತಿದ್ದ ತಣ್ಗೊಂಡ ಮಂದಮಾರುತದಿಂದ (ದೇವಿಕಾ. ೮೦). [ ತಣ್‌$_2$ + ಕೊಳ್ಳು$_1$ (<ಕೊಳ್‌$_1$) ]

**ತಣ್ಗೋಡು** (ಕ್ರಿ). ತಂಬ ತಂಪಾಗು : ತಣ್ಣರಗದ ತಣ್ಗೋಡುವಾಲಿನೀರಂ ಅರ್ಪನಿತಂ ಕುಡಿದು (ಧರ್ಮಾಮೃ. ೦-೦೫೨). [ ತಣ್‌$_2$ + ಕೋಡು$_1$ ]

**ತಣ್ಸೊಡರ್‌** (ನಾ). ತಂಪಾದ ಬೆಳಕನ್ನು ಬೀರುವ ದೀಪ ; ಹಿತಕರವಾದ ದೀಪ : ಬೇಱದೊಂದು ಬಗೆಗಿಕ್ಕಿದ ಟಕ್ಕನೆ ವಕ್ಕದೊಂದು ತಣ್ಸೊಡರೆ[ಪಾಠಾಂ. ಕಣ್ಸೊಡವೆ]ನೆ ನೋಟ್ಟು ನೋಟಕರ ಕಣ್ಗೊಳಗಾದುದು (ಪಂಪಾಮಾ. ೩-೩೯) ; ರನ್ನದ ತಣ್ಸೊಡರ್ ಮಳಯಜಂ ಕಸ್ತೂರಿ ಕಾಶ್ಮೀರಮೆಂಬಿವಱಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದು (ಆಗವಿ. ೧೦-೯೮) ; ಎಳವೆಱಯಂತೆ ಮಾಣಿಕದ ತಣ್ಸೊಡರಂತೆ . . . ತಳತ್ತಳಿಪಂಗಕಾಂತಿಯಿಂ ತಳೆದೆಸೆದಿರ್ಪ ಬಾಲಕನ ಮುಗ್ಧಮುಖೇಂದು ವನಂದು ನೋಡಿ (ಪುಷ್ಪಪು. ೪-೩೮) ; ಮುಂಜೆರಂಗು ; ತಣ್ಸೊಡರ್ (ಕಮುದ. ೬೮ ಪ್ರಯೋ). [ ತಣ್‌$_2$ + ಸೊಡರ್‌ ]

**ತಣ್ಣಗಮ್ಮ** (ನಾ). ಶೀತಕರ ; ತಂಪನ್ನುಂಟು ಮಾಡುವವನಂ ; ಚಂದ್ರ : 'ತಣ್ಣಗಮ್ಮಂದಲೆಯ' ಪರಾ. [ ತಣ್‌$_2$ + ಕಮ್ಮ$_3$ ]

**ತಣ್ಣಗಮ್ಮಂದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು ; ಶಿವ : ತಣ್ಣಗಮ್ಮಂದಲೆಯ ನಿನ್ನನಿತ್ತುಂ ನಮಗೆ ಕೆನ್ನವಿತ್ತಂ (ಪ್ರಭುಶ. ೩-೦೦೨). [ ತಣ್ಣಗಮ್ಮ + ತಲೆ$_1$ + – ಅ$_7$ ]

**ತಣ್ಣಗೆ$_1$** (ನಾ). ತಂಪನ್ನು ಬೀರುವ ನಗೆ ; ಉಲ್ಲಾಸಕರವಾದ ನಗೆ ; ಸುಖ ತರುವ ನಗೆ : ಬಿಸಿನಗೆ ಯಾವುದು ತಣ್ಣಗೆ ಯಾವುದು ಹುಸಿನಗೆ ಮುಗುಳು ನಗೆಗಳು . . . ಎಂತಿಹುವೆಂದು ನಸುನಗುತವಳು ಪಾಡಿದಳು (ಧರಹ. ೦೦-೩೦). [ ತಣ್‌$_2$ + ನಗೆ ]

**ತಣ್ಣಗೆ₁, ಥಣ್ಣಗೆ** (ಅ). ೧. ತಂಪಾಗಿ ; ಶೀತಲವಾಗಿ : ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೪೯ ಪ್ರಯೋ) ; ತಣ್ಣಗೆ ಮೊಸರಲ್ಲಿ ಬೆಣ್ಣೆ ಮುದ್ದೆಯಹಾಗೆ ಕಣ್ಣಿಗೆ ಕಾಣುವ ಹುಣ್ಣಿಮೆಚಂದ್ರನ (ಕಎಪು. ೮-೪). ೨. ಸುಖವಾಗಿ ; ಹಾಯಾಗಿ ; ಸಂತುಷ್ಟವಾಗಿ ; ಕ್ಷೇಮವಾಗಿ : ಹೋದವರು ಹೋಗಲಾಗಿ ಇರುವವರನ್ನು ತಣ್ಣಗೆ ಕಾಪಾಡಿಕೊಂಡು ಬಾ ಸ್ವಾಮಿ (ಎಸಮ್ಮ. XII, ೧೧ ಅಡಿಟಿ) : ಆ ಮಹಾತಾಯಿ ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಹು. ೯೮). ೩. ಶಾಂತವಾಗಿ : ಹೆಣ್ಣಿನ ಪುಣ್ಯದೇವತೆ ಪಂಪಾದೇವಿ ತಣ್ಣಗಿರ್ದಡೆ ಸಾಕವಳು ಕಣ್ಣ ಬೇಡಿದರಿತ್ತಪಳು (ಕುರಾಸಾಂ. ೨೩-೪೮) : ತಾಯಿಹೊಟ್ಟೆ ತಣ್ಣಗೆ ಮಾಡುವ ಸೀರೆಗಳನ್ನಷ್ಟು ಉಡಿಸಿ ಕಳಿಸಿದರೆ ಪಾರಾದನೆಂದು ಕಲ್ಲಪ್ಪ . . . ಓಡಾಡುತ್ತಿದ್ದಾನೆ (ಅಟೋಳ. ೦೪). ೪. ತೆಪ್ಪಗೆ ; ಕೆಲಸಮಾಡದೆ ; ನಿಶ್ಚಿಂತೆಯಾಗಿ ; ನಿಷ್ಕ್ರಿಯವಾಗಿ : ತಣ್ಣಗಿದ್ದರೆ ಮಣ್ಣಾದರೂ ಅಸಾಧ್ಯ (ಗಾದೆ): ಏನಾದರೂ ಕೆಲಸ ಮಾಡು ಯಾಕೆ ತಣ್ಣಗೆ ಕುಳಿತಿರುವೆ? (ರೂಢಿ). **ಥಣ್ಣಗೆ :** ೨. ನಂಮ್ಮಾರಿ ವಿಶ್ವಾಸಿಟ್ಟು ಥಣ್ಣಗ ಕೂಡು ಅಂತ (ಅಶ್ವಮೇ. ೧೦೦) ; ಊರ ಥಣ್ಣಗ ಇರಲಿ ಅಂತ (ನಿಸರ್ಗ. ೧೫೪) : ಊರ ಥಣ್ಣಗ ಇರತದ (ಗ್ರಾಮಾಯ. ೯೪).

**ತಣ್ಣಗಾಗು**=೧. ಕಾವು ಕಳೆದುಕೊಳ್ಳು ; ತಂಪಾಗು ; ಉಷ್ಣವಳಿ : ಪ್ರತಾಪದೊಳಗೆ ನಂದಿ ಮಿಗೆ ಕುಂದಿ ರವಿ ತಣ್ಣಗಾದನೆನೆ (ಕ್ರಮಿಥಾ. ೨೮-೫); ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಲ.೨ರ. ೧೬, ಕಥಾಸಾರ). ೨. (ದೀಪ, ದೀಪ ಮೊದಲಾದುವು) ನಂದಿ ಹೋಗು; ಆರಿ ಹೋಗು: ಆ ಜ್ವಾಲೆಯು . . . ಜಾಜ್ವಲ್ಯಮಾನವಾಗಿ ನಿಲ್ಲದೆ ಉರಿದು ತಣ್ಣಗಾಯಿತು (ಪಾರಾಳ್ಯ. ೨೬). ೩. ಅಡಗು ; ಇಲ್ಲದಂತಾಗು : ಅದನ್ನು ನೋಡಿದ ಮೇಲೆ ಉತ್ಸಾಹವೆಲ್ಲ ತಣ್ಣಗಾಯಿತು (ದ್ರಾವಿವಿ. ೧೪೩); ಮಹಡಿಯ ಮೇಲೆ ಗದ್ದಲ ಮತ್ತೆ ತಣ್ಣಗಾಯಿತು (ಪುನರು. ೨೦೯). ೪. ನಿಷ್ಕ್ರಿಯವಾಗು; ಸುಮ್ಮನಾಗು : ಅಲ್ಲಿನ ಸುತ್ತಮುತ್ತಣ ಗಿರಿಚರರು, ವನಚರರು ತಣ್ಣಗಾದರು (ರಾಜಸೂ. ೩೬) : ಗುಣಗಳನು ತಾವೆಣಿಸಲಾರದೆ ದಣಿದು ಶ್ರುತಿಗಳು ತಣ್ಣಗಾದವು (ರಘುವಂ. ೧೦-೩೩). ೫. ಸಮಾಧಾನಗೊಳ್ಳು ; ನೆಮ್ಮದಿಗೊಳ್ಳು ; ಶಾಂತವಾಗು : ನಾಲ್ಕು ಸೂತ್ರ ಓದಿ ಅರ್ಥಮಾಡಿಕೊಳ್ಳುವುದರೊಳಗೆ ಮನಸ್ಸು ತಣ್ಣಗಾಗುತ್ತೆ (ಹೊಸಕ್ಷಿ. ೧೬೪). ೬. ಸಾಯು ; ಮರಣಹೊಂದು : ರೋಗಿಗಳೂ ನಿರೋಗಿಗಳೂ ತಣ್ಣಗಾಗುವ ಹೊತ್ತು ಬಂದಂತೆಯೇ (ಸ್ವ್ಯ.ಶಿಜ. ೩೧೧). **ತಣ್ಣಗಿರು** = ೧. ತಂಪಾಗಿರು : ಬೇಸಿಗೆಯಲ್ಲಿ ಮರದ ನೆರಳು ತಣ್ಣಗಿರುತ್ತದೆ (ರೂಢಿ). ೨. ಹಾಯಾಗಿರು ; ಸುಖವಾಗಿರು : ದುಡಿವ ಬಡವನ ಹೊಟ್ಟೆ ತಣ್ಣಗಿರಲಿ (ನೆಲಮು. ೨೦-೨೨). ೩. ತೆಪ್ಪಗೆ ಇರು ; ಸುಮ್ಮನಿರು : ಯಾವುದಕ್ಕೂ ಉತ್ತರ ಕೊಡದೆ ತಣ್ಣಗೆ ಇದ್ದರೆ ಆಯಿತೆ ? (ರೂಢಿ). **ತಣ್ಣಗೆ ತಣಿ** = ಚೆನ್ನಾಗಿ ತೃಪ್ತಿಯನ್ನು ಹೊಂದು ; ಸಂಪೂರ್ಣವಾಗಿ ತಣಿ : ಧೂಪದ ಕವಲ್ಗೊಗೆಯೊಳ್ ತನಿಗಂಪನಉಂಡು ತಣ್ಣಗೆ [ಪಾಠಾಂ. ನ್ನೆ]ತಣಿದೊಯ್ಯನೊಯ್ಯನಿದಿರಂ ಬಟ್ಟೆಯುಂ ನೆಗೆಯುತ್ತಮಿರ್ಪ ತುಂಬಿಗಳ್ (ಪಂರಾಮೂ. ೩-೬೬). 'ತಣ್ಣನೆ' ಪರಾ. [ ತಣ್₂ + – ಅಗೆ₃ ]

**ತಣ್ಣನೆ, ಥಣ್ಣನೆ** (ಅ). ೧. ತಂಪಾಗಿ ; ಶೀತಲವಾಗಿ ; ತಣ್ಣಗೆ : ತಿಂಗಳ ತಣ್ಣನಪ್ಪ ಕದಿರ್ಗಳೊಳಭ್ಯಸಿಸಿತ್ತೊ ಕಾಮಬಾಣಂಗಳೊಳಾದ ಮೋದಿದುದೊ . . . ಮೋಹನಮನಗ್ಗಳ ನಿನ್ನಯ ವಾಕ್ಪ್ರಗುಂಭನಂ (ಚಂದ್ರಪು. ೧-೫೯) : ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತ ಶೀತಾನಿಲಂ (ಕುಸುಮಾ. ೧-೫೨) : ಸುಣ್ಣವೆಲ್ಲಂ ತಣ್ಣನಾಗೆ (ವಾಗೀರ. ದೇ. ೨೬೬-೧೪) ; ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೪೯ ಪ್ರಯೋ). ೨. ಸುಖವಾಗಿ ; ಹಾಯಾಗಿ : ತಣ್ಣನೆ ಲೇಸಾಗಿ ಮಲಗಿದನುಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದಂತು ಮಾಡಿದ್ದೈ ದೂರ್ತಿಂದಂ (ಧರ್ಮಾಮೃ. ೯-೧೩೬) ; ಎನ್ನಯ ಪಳ್ಳಿಗೆಯಿತಂದು ತಣ್ಣನಿರು (ಬಸಪು. ೦೮-೧೬) ; ಭಕ್ತಿಯ ತಿಣ್ಣದಿಂ ತಲೆವಾಗಿ ಮರಕೆಯ ತಣ್ಣನಾಂತು ಮಗುಳ್ದು ಪುರದೊಳು ಸುಖದೊಳಿರುತಿರ್ದ (ಸಾಳ್ವಭಾ. ೪-೨೪). ೩. ಶಾಂತವಾಗಿ : ಅನುದ್ವಿಗ್ನವಾಗಿ : ಸಾವಿರ ಚೇಳ್ಗಳೊಮ್ಮಿಗಕಟಾ ಕಡಿವ ಯಾತನೆಯ ಸಿಲುಬೆಯುಳಲುರಿಯು ತಣ್ಣನೆ ತಳೆದು (ಗೊಲ್ಲಥಾ. ೧೨-೨೯೬). **ಥಣ್ಣನೆ :** ೧. ಮುಳುಗಿ ಥಣ್ಣನೆ ತಣಿದು ನಿಂದನು (ಭಜಜ. ೪-೪೧). ೨. ನೀವು ಥಣ್ಣನೆ ಸಿರಿ ಸಹಿತ ಮೃದು ಹಾವಿನಂಕದಲೊಱಗುತ [ಗಲ]ವರನು ದೇವಕಾರ್ಯಕೆ ತಂದೆವಾತ್ಮಜನೆಂಬ ಸಲುಗೆಯಲಿ (ಎಭಾಗ. ೧೧-೧೧-೩೬).

**ತಣ್ಣತಣ್ಣನೆ, ತಣ್ಣನೆತಣ್ಣನೆ** (ದ್ವಿರುಕ್ತಿ): ಅವ್ಯಯ ಪದಾಂತ ಲೋಪಕ್ಕೆ– ಕಮ್ಮಕಮ್ಮನೆ, ತಣ್ಣತಣ್ಣನೆ (ಶಮದ. ೧೯೩ ಪ್ರಯೋ) : ಕೋಪದಿದಿರೊಳೂರ್ವಾನಳಂ ತಣ್ಣತಣ್ಣನೆ (ಹಕ್ಷಕಾ. ೧-೪೧) ; ಮಾವಿನ ಸೊನೆದಂದಲೊಳ್ ನೆನೆದು ತಣ್ಣನೆ ತಣ್ಣನೆ ಬಂದುದಂದು . . . ಮಾರುತಂ (ಶಬ್ದಾನು. ೯೪ ಪ್ರಯೋ). **ತಣ್ಣನೆ ತಣಿ, ದಣ್ಣನೆ ದಣಿ**=ಸಂಪೂರ್ಣವಾಗಿ ತೃಪ್ತಿಯನ್ನು ಹೊಂದು : ನಾಳಿಕೇರೀಫಳಾಮೃತಾಸ್ವಾದದೆ ತಣ್ಣನೆ ತಣಿದು (ಆದಿಪು. ೧೧-೬೧) ; ಕಣ್ ತಣ್ಣನೆ ತಣಿವಿನಮೊಲ್ದು ನೋಡಿ (ಸಮುಹ. ೧-೦೦೪) ; ತಣ್ಣನೆ ತಣಿದಿರೆ ಬನದೊಳ್ ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ (ಕಾವ್ಯಾವ. ೨೨೨) ; ನಡುಹರೆಯದಿಂದೆಸೆವ ಸಿರಿಯು ನಡೆನೋಡಿ ದಣ್ಣನೆ ದಣಿವ ಕಾಲದೊಳು (ಧಾಪಚಂ. ೯-೧೫). **ತಣ್ಣನೆಯುವನು** = ತಂಪಾಗಿರುವವನು ; ಚಂದ್ರ : ಬಂದನು ಸೋಮನು ಸೊದೆವನಿ ಸೋನೆಯ ಸಿಂಪಿಸಿ ತಣ್ಣನೆಯುವನು (ಇಂದಾಪ. ೧೧೦-೩೮). [ ತಣ್₂ + – ಅನೆ₁ ]

**ತಣ್ಣನೆಯ, ತಣ್ಣನ್ನ** (ಗು). ೧. ತಂಪಾದ; ತಣ್ಣಗೆ ಇರುವ : ತಣ್ಣನೆಯ ಗಾಳಿ ಬೀಸುತ್ತಿದೆ (ರೂಢಿ). ೨. ಪ್ರಶಾಂತವಾದ : ಗಿಡಮರಗಳು, ಹುಲ್ಲು, ತೊಳೆದ ಹಸಿರುಬಣ್ಣವಾಗಿ ತಣ್ಣನೆಯ ನಗು ನಗುತ್ತಿವೆ (ಚಕಂದಾ. ೧). **ತಣ್ಣನ್ನ :** ೧. "ತಣ್ಣೀಲು – ತಣ್ಣನ್ನ ಉಸುಬು" (ಗಂಗಾಮು. ೧೪೬). [ ತಣ್₂ + – ಅನೆಯ₃ ]

**ತಣ್ಣನ್ನ** 'ತಣ್ಣನೆಯ' ನೋ.

**ತಣ್ಣಲೆ** (ಕ್ರಿ). ತಂಪನ್ನುಂಟುಮಾಡು ; ತಂಪನ್ನು ಹರಡು : ತಣ್ಣ[ಪಾಠಾಂ. ಣ್ಮ]ಲೆವ ಕೊಳಕ್ಕೆವಂದಮಳಿನಂ ಪುಳಿನಂ ನಳಿನಂ ನಿಜಾರ್ತಿಯಂ ನೆಲೆವಿಡಿ[ಪಾಠಾಂ. ಗೆಲೆವಡೆ]ಯಲ್ ಬಳಿಕ್ಕವಳಟಲ್ದು ಬಟಲ್ದು ತೊಟಲ್ದು ಜಾನಿಪಳ್ (ಜಗವಿ. ೧೦-೨೩) : ಅವಳ ಬಿಸುಸುಯ್ಯ ಬೆಂಕೆಯೊಳ್ ಬೆರಸಿದನಿತಱಿಂ ಒಳೆ ತಣ್ಣ[ಪಾಠಾಂ. ಣ್ಮ]ಲೆವ ತೆಂಗಾಳಿಯುಂ ನಂಜಿನ ಧಾಳಿಯೆನಿಸಿ (ವರ್ಧಪು. ೪-೫೮ ವ): ಅಲರ್ವಂಡಂ ಮೊಗೆದು ತಳಿಯುತಿರೆ ತಣ್ಣೆಲರಿರ್ಕೆಲದ ಪರಿಕಾಲ್ಗಳಿಂ ತಣ್ಣ[ಪಾಠಾಂ. ಣ್ಣೆ]ಲೆವಳವಸಲೆಗಳನೆಳಸಿ ಸುಟ್ಟವೆಳೆಯುವಳಂ (ವರ್ಧಪು. ೪-೬೫). 'ತಣ್ಮಲೆ' ಪರಾ. [ ತಣ್₂ + ಅಲೆ₁ ]

**ತಣ್ಣಲೆಯಿಸು** (ಕ್ರಿ). ತಣಿಸು ; ತಂಪನ್ನುಂಟುಮಾಡು : ನಿಜಕೀರ್ತಿ ಬಂಧುರ ಸುಧಾವರ್ಷದಿಂ ಧರೆಯ ತಣ್ಣಲ[ಲೆ]ಯಿಸಿದನಾ ದಿಳೀಪಂ (ಕುಮುರಾ. ೧-೬೪). [ ತಣ್ಣಲೆ + – ಇಸು₃ ]

**ತಣ್ಣಸ, ತಣ್ಣಸು** (ನಾ). ೧. ತಂಪು ; ಶೈತ್ಯ : "ತಣ್ಣಸಮೆನೆ ಶೈತ್ಯಂ" (ಚತುನಿ. ೨೮) ; ಅರಲ್ದನೇಕ ಕೋಕನದವನಂಗಳೊಳ್ ಸುಟ್ಟಿದು ತಣ್ಣ[ಪಾಠಾಂ. ನ್ನೆ]ಸಮಾಗದೆ ಕೂಡೆ ಬಂದ ಮಾವಿನಪೊಸಪೂವಿನೊಳ್ ಪೊರೆದು ಪೊಣ್ಮಿದ[ಕ]ಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಕೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಶಭಾ. ೫-೩೪) : ಪೊದಟ್ದು ಕಣ್ಬನಿಯ ಬಾನಲ ತಣ್ಣಸದೊಳ್ ಪಗಿಲ್ತು ಪಾವಸೆಗೊಳೆ ಕಾರ ತಂದಲೊಳಗುಂದಲೆಯಾಗಿರೆ ನಟ್ಟು ಸೋರ್ವ ಪಾಳ್ಸದಿಯ ಪೆಣ್ಣ ದೋಹದಪೊಲೊಪ್ಪಿದಲ್

(ಶಾಂತಿಪು. ೮-೮೮) ; ಸೊಗಯಿಸುವ ಸಕ್ಕರೆಗೆಳೆಳನೀರ ಕುಯಿದಿಳುಪಿ ತಣ್ಣಸವಾದ ತಾಣದೊಳಗಿರಿಸಿ (ಸೂಪಶಾ. ೨-೩೦) ; ಬೆಂಗೆ ತಣ್ಣಸಮೇಱಲೆಚ್ಚತ್ತು (ಜಲಪು. ೪೬-೨೨) ; ರೋಷಾಗ್ನಿ ಕರ್ಣನ ಸಿರಿಮೊಗಮಂ ನೋಡಿದ ಮಾತ್ರದೊಳೆ ತಣ್ಣಸಮನೊಂದಿ ನಲ್ಮೆಯುಂಟಾಗುವುದು (ಭಾರತಾಂ. ೧-೬). ೨. ಒದ್ದೆ; ಆರ್ದ್ರವಾದುದು : 'ತಣ್ಣಸಗೊಳ್', 'ತಣ್ಣಸವಸ್ತ್ರ' ಪರಾ. ೩. ತೃಪ್ತಿ; ಸಮಾಧಾನ; ಸಂತುಷ್ಟಿ : ಪುಣ್ಣಮೆಯಾದುದು ಮುಖಚಂದ್ರಮಂಡಲ ತಣ್ಣಸವೆದೆಯೊಳಾದರಿಸೆ ಕಣ್ಣೞಿಯದೊಡೇನು ಕರುಳ್ಗಳ್ಗಲ್ದುದೆಂಬಂತೆ ಚಿಣ್ಣನ ತಾಯಿ ನೋಡಿದಳು (ಮೋಹತ. ೧೩-೨೫) : ಹಣ್ಣಿದುತ್ಸಾಹಮಂ ಕೇಳ್ದು ತನ್ನೊಡಲೊಳಗೆ ತಣ್ಣಸಂ ತಳ್ತು ಬಹ ನಿನ್ನ ನಿಜಮಾತೆಯಂ ಕಣ್ಣಾರೆ ಕಾಣ್ಬೆನೆಂತು (ಕೃಮಿಥಾ. ೧೩-೫೬). **ತಣ್ಣಸು :** ೧. 'ತಣ್ಣಸುವುಟ್ಟು' ಪರಾ. ೨. ಚಮರೀಮೃಗಂಗಳ ಸಾರಣೆಯೊತ್ತುಗೊಂಡು ನೆಲನ ತಣ್ಣಸಾಱ್ ತಮ್ಮ ಮೊಗದ ನರೆನವಿರಿನಂದುತಿ ಪೋಪ ಗಂಡುಗರಡಿಗಳಿಂ (ರಾಮಾಶ್ವ. ೪೩-೨೬). [<ತಣ್₂./ತುಳು. ತಣಸ್, ತನಸ್]

**ತಣ್ಣಸಂದೋರು** 'ತಣ್ಣಸಂದೋಱು' ನೋ.

**ತಣ್ಣಸಂದೋಱು,** ತಣ್ಣಸಂದೋರು, ತಣ್ಣಸದೋಱು (ಕ್ರಿ). ತಂಪುಂಟಾಗು ; ಶೀತವಾಗು : ಮೈಗಳ್ಗೆ ತಣ್ಣಸಂದೋ[ಪಾಠಾಂ. ತೋ] ಱಲಾ ಕೊಳದಿಂದೆ ಪೊಱಮಟ್ಟರು (ಕೃಮಿಥಾ. ೩೦-೧೨). **ತಣ್ಣಸಂದೋರು:** ಮೈಯೆಲ್ಲ ತಣ್ಣಸಂದೋರಿ ಮತಿಗೆಟ್ಟು ಕಾರುವುದುಂ (ಸಕಪ್ರ. ೧೯೯). **ತಣ್ಣಸದೋಱು:** ಒಸರಲಾ ತಂಗಲ್ಲು ಕರಗದ ಜಲ ತಣ್ಣಸದೋಱ್ ಶ್ರಮವಡಗಿಪುದು (ಕಂಜವಿ. ೬-೬೬). [ತಣ್ಣಸ + ತೋಱು]

**ತಣ್ಣಸಂಬಡೆ** (ಕ್ರಿ). ತಂಪಾಗು ; ಶೈತ್ಯವನ್ನು ಹೊಂದು : ಹಿಮದಿಂದ ತಣ್ಣಸಂಬಡೆದಿರ್ದ ಮಾಗಿಯಂ ಕ್ರಮದಿಂದೆ ಜಾಱಿಸಿ (ಕೃಮಿಥಾ. ೩೦-೧೬).
[ತಣ್ಣಸ + ಪಡೆ₁]

**ತಣ್ಣಸಗಯಿರ್** 'ತಣ್ಣಸಗೆಯ್ರ್' ನೋ.

**ತಣ್ಣಸಗಯ್ಯ** 'ತಣ್ಣಸಗೆಯ್ಯ' ನೋ.

**ತಣ್ಣಸಗೆಯ್ರ್,** ತಣ್ಣಸಗಯಿರ್ (ನಾ). ತಂಪಾದ ಕಿರಣ ; ಶೀತಲವಾದ ಕಿರಣ : 'ತಣ್ಣಸಗೆಯ್ಯ' ಪರಾ. **ತಣ್ಣಸಗಯಿರ್ :** 'ತಣ್ಣಸಗಯ್ಯ' ಪರಾ. [ತಣ್ಣಸ + ಕೆಯ್ರ್₂]

**ತಣ್ಣಸಗೆಯ್ಯ,** ತಣ್ಣಸಗಯ್ಯ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : 'ತಣ್ಣಸಗೆಯ್ಯವಟ್ಟು' ಪರಾ. **ತಣ್ಣಸಗಯ್ಯ :** ಬಿಸುಗಯ್ಯಂ [ಪಾಠಾಂ. ಮ್ಯಂ]ತಣ್ಣಸಗಯ್ಯಂ[ಪಾಠಾಂ. ಮ್ಯಂ]ಪೊಸ ಕಿಸುಬಿಸುಮಯ್ಯಂ ಕಣ್ಣಾದಂ (ಉದ್ಭದೇ. ೧-೨). [ತಣ್ಣಸಗೆಯ್ರ್ + -ಅ₇]

**ತಣ್ಣಸಗೆಯ್ಯವಟ್ಟು** (ನಾ). ಚಂದ್ರಬಿಂಬ; ಚಂದ್ರಮಂಡಲ: ತಣ್ಣಸಗೆಯ್ಯವಟ್ಟನವರ್ದಾನನವೇಳಿಸೆ . . . ನಡೆದರ್ವರ್ಗಿಲಂದಿಯರ್ (ಉದ್ಭಟ. ೨-೩೩).
[ತಣ್ಣಸಗೆಯ್ಯ + ಬಟ್ಟು₁ (<ಬಟ್ಟ₁)]

**ತಣ್ಣಸಗೊಳ್,** ತಣ್ಣಸುಗೊಳ್ (ಕ್ರಿ). ೧. ತಣ್ಣಗಾಗು : ತಂಪಾಗು. ೨. ಒದ್ದೆಯಾಗು ; ತೇವವಾಗು : ಒಸರ್ವ ಬೆರಲ ಬೆಮರ್ವನಿಯಿಂ ತಣ್ಣಸಗೊಂಡ ತಂತಿಗಳನಾಱಿಸುವರ್ ಬಿಸುಸುಯ್ಯುದ್ದ ಕಿನ್ನರರ್ ಬೀಣೆಗಳಂ (ಲೀಲಾವ. ೯.೩೦). **ತಣ್ಣಸುಗೊಳ್ :** ೧. ಇನಶಶಿಗಳ್ ಬೆಳಗದಿರೆ ಕಿಟ್ಟು ತಣ್ಣಸುಗೊಳೆ (ಪುಣ್ಯಾಸ್ರ. ೮-೫೯). [ತಣ್ಣಸ + ಕೊಳ್₁]

**ತಣ್ಣಸದಳೆ** (ಕ್ರಿ). = ತಣ್ಣಸಂಬಡೆ : ಪುಳಕಾಂಬುವಿನಿಂದ ತನುಲತೆ ತಣ್ಣಸದಳೆಯೆ ನಿದ್ರಾಂಗನೆ ಸರಿಯೆ (ಕಂಜವಿ. ೯-೧೯೬). [ತಣ್ಣಸ + ತಳೆ₁]

**ತಣ್ಣಸದೋಱು** 'ತಣ್ಣಸಂದೋಱು' ನೋ.

**ತಣ್ಣಸವಸ್ತ್ರ** (ನಾ). ಒದ್ದೆಬಟ್ಟೆ ; ನೆನೆದ ವಸ್ತ್ರ : ಕಳೆದು ತಣ್ಣಸವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂಜವಿ. ೨೫-೧೩೪).
[ತಣ್ಣಸ + ವಸ್ತ್ರ]

**ತಣ್ಣಸವಿಡಿ** (ಕ್ರಿ). ತಂಪು ಹಿಡಿ; ತಣ್ಣಗಾಗು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳ್ಗೈದಿ ತಡಿವೆಟ್ಟಿ . . . ಒಪ್ಪಿದರು ಚಲುವೆಯರಂ (ಕಂಜವಿ. ೨೫-೦೫೦). [ತಣ್ಣಸ + ಪಿಡಿ₁]

**ತಣ್ಣಸವೆಱು** (ಕ್ರಿ). = ತಣ್ಣಸಂಬಡೆ : ಉಡುವಸನಂಗಳು ತೋಯ್ದು . . . ಕುಡಿತೆಗಣ್ಣಬೆಳೆಯರುಗಳು ತಣ್ಣಸವೆತ್ತು ನಡುಗಿದರ್ (ಮೋಹತ. ೦೪-೯೧). [ತಣ್ಣಸ + ಪೆಱು₁]

**ತಣ್ಣಸಿಗ** (ನಾ). ೧. ತಂಪಾದವನು. ೨. ಜಡಸ್ವಭಾವದವನು; ಆಲಸ್ಯಸ್ವಭಾವದವನು; ಆಲಸಿಗ: ನ ಶೀತಲಃ–ತಣ್ಣಸಿಗನಲ್ಲದೊಂ (ಆಲಸ್ಯನು) (ನೀತಿವಾ. ೧೦-೩೩). [ತಣ್ಣಸ + -ಇಗ]

**ತಣ್ಣಸು** 'ತಣ್ಣಸ' ನೋ.

**ತಣ್ಣಸುಗೊಳ್** 'ತಣ್ಣಸಗೊಳ್' ನೋ.

**ತಣ್ಣಸುವುಟ್ಟು** (ಕ್ರಿ). ತಂಪುಂಟಾಗು ; ಶೈತ್ಯ ಒದಗು : ತಣ್ಣಸುವುಟ್ಟಿ ಬಿಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಕ್ಷಿಮಾನಿಲಂ (ಶಂಕರಾಮಾ. ೬-೦೫೯). [ತಣ್ಣಸು (<ತಣ್ಣಸ) + ಪುಟ್ಟು₁]

**ತಣ್ಣೆ,** ಥಣ್ಣೆ (ನಾ). ನೀರು ; ಜಲ : ನೊಂದು ಬಾಯಾಱ್ ತಣ್ಣೀರ್ ತಣ್ಣೆ[ಪಾಠಾಂ. ಣ್ಣಿಯೆ]ಎನುತವಿರೆ (ಚಂಡೀರ. ದೀ. ೨೫೦-೧೬). **ಥಣ್ಣೆ :** ಥಣ್ಣೆಯೊಳಗೆ ಮುಳುಗಿದರೇನು (ಚಿದಾವ. ೦೫೯-೧).
[ದೇ.॥ ತಮಿ. ಮಲ. ತಣ್ಣ]

**ತಣ್ಣತು** 'ತಣ್ಣತ್ತು' ನೋ.

**ತಣ್ಣತ್ತು,** ತಣ್ಣತು (ನಾ). ೧. ತಂಪಾದುದು; ತಂಪು; ಶೈತ್ಯ : "ತಣ್ಣತ್ತು ಶೈತ್ಯಮಕ್ಕುಂ" (ಕಕರ. ೪೩). (ಗು). ೨. ತಂಪಾದ ; ತಣ್ಣನೆಯ ; ಶೀತಲವಾದ : ಕೂರಿತ್ತು; ಉದ್ದಿತ್ತು; ನುಣ್ಣಿತ್ತು; ತಣ್ಣತ್ತು; ಬಿಣ್ಣಿತ್ತು (ಶಮದ. ೭೭ ಪ್ರಯೋ). **ತಣ್ಣತು :** ೧. " ಕೋಡುಂ ಕೊಟ್ಟಮುಂ ತಣ್ಣತೆಂದುಂ ಶೈತ್ಯಕ್ಕೆ ನಾಮಂ " (ಅಭಿಕ್ಕ. ೨೨) ; " ಕುಳಿರು ತಣ್ಣತು ಕೋಡು ಕೊಟ್ಟವಿಂತಿವು ಶೈತ್ಯಕಳವಟ್ಟ ನಾಮವಕ್ಕುಂ " (ಶಬ್ದಮಂ. ೩೬) ; ವಡಬಶಿಖಿ ತಣ್ಣತನೆ ಕೋಪವಮಂ ತಾಳುವರು (ಸಿದ್ಧರಾ. ೧-೨೦); ಉರಿವ ಬೆಂಕಿಯು ತಣ್ಣತಾಗಲಿ (ರಾಮಾಸಂ. ೫-೪-೨೬).

**ತಣ್ಣದುವು** (ಬಹುವ) : ಚಂದ್ರಕರಂಗಳಿಂದು ತಣ್ಣದುವರ್ದೆಗಳ್ಕೆ (ಪಂಪಭಾ. ೫-೦೮). **ತಣ್ಣದಂ, ತಣ್ಣದೊಂ** = ತಣ್ಣಗೆ ಇರುವವನು ; ತಂಪಾದವನು : ಖರಕರನುಷ್ಣಮಂ ತೊಱ್ದು ತಣ್ಣದನಪ್ಪೊಡಮಿಂದು ತಣ್ಣನಚ್ಛರಿಯನೆ ಬಿಟ್ಟು ತೀವ್ರಕರನಪ್ಪೊಡಂ (ಧರ್ಮಾ ೯ಮೃ. ೫-೦೯೮) : ಅತಿದೀಪ್ತಬೋಧಮಯನಾಗಿ ತಣ್ಣದೊಂ ಜನನಿಯುದರದೊಳ್ ರತ್ನಸ್ತ್ರೀ ಪ್ರತಿಕೃತಿಯೊಳರ್ಕಬಿಂಬ ಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ (ಶಾಂತಿಪು.೯-೨೧೪). **ತಣ್ಣದೆಯಾಗು**=ತಂಪಾದವನಾಗು: ಮಟ್ಟಿ ಬರವನಗ್ನಿ ದೇವಂ ಬೇಡಿಕೊಳ್ಳಿಮೆಂದೊಡಮ್ಮನ್ನ ವಯಕ್ಕೆ ನೀನ್ ತಣ್ಣದೆಯಾಗೆಂದು ಬೇಡುವುದುಂ (ಪಂಪಭಾ. ೫-೧೦೦ ವ).
[<ತಣ್₂]

**ತಣ್ಣರ್ಪದಲೆ** (ನಾ). ಒಂದು ಪ್ರದೇಶದ ಹೆಸರು : ಅನ್ತೆ ಬಂದು ತಣ್ಣರ್ಪದಲೆಯ ಪುಣುಸೆಯ ವಾಯವ್ಯನಾ ದೆಸೆಗೆ ಸೀಮೆನೊಕ್ಕಿಯೊಟ್ಟಿಯ (ಎಕ. IX (8). ಬೆಂಗಳೂ. ೧೫೦-೪೨ ; 829). [ ? ]

**ತಣ್ಣಸು** 'ತಣಸು₁' ನೋ.

**ತಣ್ಣೞ್** (ಕ್ರಿ). (ತೆಳ್ಳಗಾಗುವಂತೆ) ಒತ್ತು (?) : ನುಣ್ಣನೆಯ ಹಿಟ್ಟನಂಗಯ್ಯ ಸರಿದಟ್ಟದೊಳು ತಣ್ಣೞಿದು[ಪಾಠಾಂ. ತಣಿದು]ಮಡಗಿಯೆಮ್ಮೆಯ ಬೆಣ್ಣೆಯಂ ಕಾಸಿ ಬೇಯಿಸೆ ಸಮುದ್ರಫೇನ (ಸೂಪಶಾ. ೧-೨೩). "ತಟ್ಟು" (ಸೂಪಶಾ. ಟೀಕೆ). 'ಲತೆಯಿಱ್' ಪರಾ. [P ಇದು 'ಸಣ್ಣಱ್' ಎಂಬುದರ ಅಪಲಿಖಿತವಿರಬಹುದು]

**ತಣ್ಣೀರ್, ತಣ್ಣೀರು** (ನಾ). (ತಂಪಾದ) ನೀರು : ಮುನ್ನೀರ್ ಬೆನ್ನೀರನೆ ಬೆರಸಲಣ್ಣ ತಣ್ಣೀರೊಳವೇ (ಪಂಪಾಮಾ. ೯-೯೨); ತಣ್ಣೆಲರ್, ತಣ್ಣೀರ್ (ಭಾಷಾಭೂ. ೧೧೪ ಉದಾ): ತಣ್ಣೀರ ಕಣಿಕೆಯು ಹೊತ್ತು (ಗುಹ್ಯಮಂ. ೧೫-೧೮೭). **ತಣ್ಣೀರು** : ತನಿವಾಲೊಳುಕ್ಕರಿಸಿದಕ್ಕಿ ತಣ್ಣೀರೊಳಗೆ ನೆನೆದಕ್ಕಿ ಯಾವನು ಸರಿಗೂಡಿ ಹಾಲೊಳಗೆರೆದು (ಸೂ ಶ ಶಾ. ೧-೬೦); ತಣ್ಣೀರು ಬೇಸಿಗ್ಗೆ ಗುಣ ತೋಱಿತಲ್ಲ (ಪುರಂದ. ೩-೫೭-೫); ಸರೋಜಪತ್ರಿಕೆಯ ಪೊಟ್ಟಣದಿ ರಾಜಾಮೃತವೆನೆ ತಣ್ಣೀರ ತಂದಿತ್ತರು (ಮೋಹತ. ೧೯-೫೩); ತಣ್ಣೀರು ಆದರೂ ಪುಣ್ಯದಿಂದ ದೊರಕಬೇಕು (ಗಾದೆ).

**ತಣ್ಣೀರವನು**=(ದೇವಸ್ಥಾನಕ್ಕೆ) ನೀರನ್ನು ತರುವ ಕಾಯಕದವನು (?): ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರುನಾರಾಯಣ ಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮಯಿಗಳೂ . . . ತಿರುಪಣೆ ತಿರುವಡಿ ತಣ್ಣೀರವರು ನಾಲ್ವತ್ತೆಂಟು ಜನಂಗಳು (ಎಕ. II, ೩೪೪-೧೨ : 1368). [ ತಣ್$_2$ + ನೀರ್$_1$ ]

**ತಣ್ಣೀರು** 'ತಣ್ಣೀರ್' ನೋ.

**ತಣ್ಣೀರೆರಚು** (ಕ್ರಿ). ೧.=ತಣ್ಣೀರೆರೆ. ೨. (ಆಲಂ) ನಿರುತ್ಸಾಹಗೊಳಿಸು: ಲಲಿತ ಬರುವುದಿಲ್ಲವೆಂದಾಗ ಅವರ ಉತ್ಸಾಹದ ಮೇಲೆ ತಣ್ಣೀರೆರಚಿದ ಹಾಗಾಯಿತು (ರೂಪಚ. ೩೩); ನೆಕ್ಕಲದೋಪನ ಉತ್ಸಾಹಕ್ಕೆ ತಣ್ಣೀರೆರಚಲು ಪ್ರಯತ್ನಿಸುತ್ತಿರುವಂತೆ ಅವನು ಮೌನವಾಗಿ ಹೊಗೆಯೆಳೆಯುತ್ತ ಕುಳಿತಿದ್ದನು (ಪುನರು. ೫೭೬). ☞ ಇದು ಇಂಗ್ಲಿಷಿನ 'To throw cold water on' ಎಂಬ ಪದಪುಂಜದ ಅನುವಾದವಿರಬಹುದು.

[ ತಣ್ಣೀರು (<ತಣ್ಣೀರ್) + ಎರಚು (<ಎಱಚು) ]

**ತಣ್ಣೀರೆರೆ** (ಕ್ರಿ). ೧. ತಣ್ಣೀರು ಸುರಿ. ೨. (ಆಲಂ) ಸಮಾಧಾನಮಾಡು: ಯುವರಾಜರೆದೆಯ ಸುಡುನೀರಿಗೆ ಒಂದಿಷ್ಟು ತಣ್ಣೀರೆರೆದಿರುವಂತೆ ತೋರಿಸಿ ಕೊಂಡಿದ್ದಾರೆ (ವೀರಬಂ. ೬೫).

[ ತಣ್ಣೀರು (<ತಣ್ಣೀರ್) + ಎರ್$_1$ (<ಎಱೆ$_1$) ]

**ತಣ್ಣೀರ್ದಳೆ** (ಕ್ರಿ). ತಣ್ಣೀರನ್ನು ಚಿಮುಕಿಸು,-ಸಿಂಪಡಿಸು : ಬಳಿಕ ಸೌಮಿತ್ರಿ ಮಱುಗಿ ತಣ್ಣೀರ್ದಳಿದು ಪತ್ರದೊಳ್ಗೊಡವಿಡಿದು . . . ರೋದಿಸಿದನು (ಕೃಮಿಥಾ. ೧೯-೧೭). [ ತಣ್ಣೀರ್ + ತಳಿ$_1$ ]

**ತಣ್ಣುಣುಕ** (ನಾ). ಒಂದು ಬಗೆಯ ಗಿಡ : ತಣ್ಣುಣುಕ, ಅಂಡಿಲು (ಮೃಜಿಗಿ. ೪೯-೯೭೬). [ ? ]

**ತಣ್ಣುಸಿರು** (ನಾ). ತಣ್ಣನೆಯ ನಿಶ್ವಾಸ: ಉತ್ಸಾಹ ಅಥವಾ ಕಾವು ಇಲ್ಲದ ಉಸಿರು : ಅವಳು ತಿರಸ್ಕಾರದ ತಣ್ಣುಸಿರಿನೊಡನೆಂದಳು (ನಿರಾಭ. ೩೦); ನಿನ ಮುಸುಕ ಕತ್ತಲೀಯೊಳಗ ಹೊರಳಿ ಬೆಳ್ಳಿಳಗ ಬಿಡತ ತಣ್ಣುಸಿರು (ನಾದಲೀ. ೫೫-೯). [ ತಣ್$_2$ + ಉಸಿರು$_2$ (<ಉಸಿರ್$_2$) ]

**ತಣ್ಣೆ** (ನಾ). (ಕರಾ) ತಂಗಳನ್ನ ; ನೀರುಹಾಕಿ ಇರಿಸಿದ ತಂಗಳನ್ನ : 'ತಣ್ಣೆಮಡೆ' ಪರಾ. [ ←ತುಳು. ತಣ್ಣಾಣ, ತಣ್ಣಾನ ]

**ತಣ್ಣೆಮಡೆ** (ನಾ). (ಕರಾ) ತಂಗಳು ; ತಂಗಳನ್ನ : ಅದಕೂ ಇದಕೂ ಬೀಗ, ತಣ್ಣೆಮಡೆಗೂ ಬೀಗ (ರೂಢಿ). [ ತಣ್ಣೆ + ಮಡೆ$_1$ ]

**ತಣ್ಣೆರಲ್** 'ತಣ್ಣೆಲರ್' ನೋ.

**ತಣ್ಣೆಲರ್, ತಣ್ಣೆರಲ್** (ನಾ). ತಂಪಾದ ಗಾಳಿ; ತಂಗಾಳಿ : ಅಲರಿಂ ತುಂಬಿಗಳಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ (ಪಂಪಭಾ. ೫-೨); ತಣ್ಣೆಲರೊಡುತ್ತಿರಲಾನದರ್ಕೆಳಸಿ ಪಟ್ಟರ್ದಂ ಶಿಲಾಪಟ್ಟದೊಳ್ (ಕಾದಂಉ. ೫೭೨): ಮೆಲ್ಲನೆ ತೊನೆಯುತ್ತುಮಿರ್ಪೆಲೆಯ ತಣ್ಣೆಲರಿಂ ಬೆಮರಾಱೆ . . . ಸುಖಮಂ ಪಥಿಕರ್ ಪಡೆವರ್ (ಚಂದ್ರಪು. ೩-೧೫); ಬಣ್ಣವಳಿಯದ ಪೂಗಳಂ ಕೊಯ್ದು ಬೆಂಡಾಗಿ ತಣ್ಣೆಲರ್ಗೊಡ್ಡಿ ಮೈ ಬೆಮರನಾಱಿಸಿಕೊಂಡು (ಕೃಮಿಥಾ. ೮-೧೮). **ತಣ್ಣೆರಲ್**: ತಣ್ಣೆರಲೆಸಗೆ ಕುಸುಮವರ್ಷಂ ದೊರೆಕೊಳೆ ಸಾಶ್ಚರ್ಯವಾಯ್ತು ಪಂಚಾಶ್ಚರ್ಯಂ (ಆದಿಪು. ೬-೩); ಪತ್ರಿದೆಸೆಟ್ಟೆಲ್ಗಿನೆ ಬಿರ್ಚ ತಣ್ಣೆರಲ್ಗೆಡೆದೆಱವಾಗೆ ಪೊತ್ತು ಸುಱಿಯುತ್ತಿರೆ (ಚಂದ್ರಪು. ೮-೧೦೩): ಪೊಸ ಬೆಳೆಯಿಂ ಭೂಮಿ ಭೂಮಿಜದಿಂ ತಣ್ಣೆರಲಿಂ ಮಾರ್ಗಂ . . . ಎಸಗುಂ ದೇಶದೊಳ್ (ರಾಜಶೇ. ೩-೨೭).

[ ತಣ್$_2$ + ಎಲರ್ ]

**ತಣ್ಣೆಲೆ** (ನಾ). ೧. ತಣ್ಣನೆಯ ಎಲೆ; ಹಸಿರೆಲೆ: ತಿಕ್ಕಿ ತಣ್ಣೆಲೆಗಳಿಂ ಕಣ್ಣಳನದೊಬ್ಬನಾ ಕಕ್ಕುಗುರಿನೇಗರ್ಗಳಂ ಸುಯ್ಬುಟ್ಟು ಸುಗಿದಂ (ಕಾಲಭಾರ. ೯೮-೧೯೭). ೨. ತಣ್ಣನೆಯ(ಹೂವಿನ) ಎಸಳು,-ದಳ: ಅರಲ್ದ ತಾವರೆಯ ತಣ್ಣೆಲೆಯ ಪಲಗೆಗಟ್ಟಿ[ಟ್ಟ]ನೋವರಿಗಳೊಳಗಣ ಕರ್ಪೂರ ವಳಿಕನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಳ ಪಸೆಗಳೊಳಂ (ಚಂದ್ರಪು. ೬-೯೫ ವ). [ ತಣ್$_2$ + ಎಲೆ$_1$ ]

**ತಣ್ಣೆಳಲ್** 'ತಣ್ಣೆಲರ್' ನೋ.

**ತಣ್ಣೆಲರ್, ತಣುನೆಳಲು, ತಣ್ಣೆಳಲ್** (ನಾ). ತಂಪಾದ ನೆಳಲು,-ಛಾಯೆ: ಪಿಂಥಾತಪತ್ರಂ ಪುದಿದಿತ್ತಂ ತಣ್ಣೆಲರ್ಮಾಡುವುದು ಗಡಂ (ಪಂಪಭಾ. ೧೩-೯೮); ರಕ್ತಾಶೋಕ ತರುವಿನ ತಣ್ಣೆಲರೊಳ್ (ಕಾದಂಪೂ. ೨೩೦); ನಿನ್ನ ಬೆಳ್ಗೊಡೆಯ ತಣ್ಣೆಲರೊಳ್ ನಿಲಲಾರೊ ಯೋಗ್ಯರ್ (ಪಂಪಾಮಾ. ೧೪-೧೯೪); ಕಲ್ಪಪಾದಪದ ತಣ್ಣೆಲಲ್ಲಿ ವಸಂತಲಕ್ಷ್ಮಿಪೋಲ್ ನೆಲಸಿದ ಯಕ್ಷಿ (ಅರ್ಧನೇ. ೧-೯): ತಣ್ + ನೆಟಲ್ = ತಣ್ಣೆಲರ್ (ಶಮದ. ೧೫೪ ಪ್ರಯೋ).

**ತಣುನೆಳಲು** : ತೊಳಪ ಪಲ್ಲವ ಸತ್ತಿಗೆಯ ತಣುನೆಳಲೊಳ್ (ಸಾಳ್ವಭಾ. ೧೯-೬೫). **ತಣ್ಣೆಳಲ್** : ಎತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ (೧೧೦ಕ. ೧-೧೦೭); ಮಲ್ಲಿಕಾಮಂಟಪದ ತಳಿದ ತಣ್ಣೆಳಲ ತಿಳಿಗೊಳನ ಪುಳಿನ ಸ್ಥಳದಿ ದಿವ್ಯಲಿಂಗಂ ಮೆಱೆದುದು (ಸಿದ್ಧರಾ. ೩-೧೫); ಮುತ್ತಿನ ಸತ್ತಿಗೆಯ ತಣ್ಣೆಳಲೊಳಿತ್ತರದಾಲವಟ್ಟದ ಸೊಗಸಿನೊಳಮರ್ದು (ಬಸಪು. ೫-೪೫); ತಳಿತ ತಣ್ಣೆಳಲೊಳಗೆ ಹಾಸಿದ ತಳಿರ ಸಿಂಹಾಸನದ ಸುತ್ತಲು (ಕುಮ್ಯಾಅ. ೬೦೫. ೪-೫೦). [ ತ$_2$ಣ್ + ನೆಟಲ್$_1$ ]

**ತಣ್ಣೆಟಿ** (ನಾ). ತಂಪಾದ ಎಳೆ ; ತಣ್ಣನೆಯ ನೂಲು : ಎಳೆದೆನಿಸಿರ್ದ ಪಾವಸೆಯ ತಣ್ಣೆಟಿಯಿಂದಮೆ ನೆಯ್ದ ಸೀರೆ . . . ಕಣ್ಗೊಳಿ ನೆಲಸಿರ್ದರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಕಾದಂಉ. ೪೩೯).

[ ತಣ್$_2$ + ಎಟಿ$_2$ ]

**ತಣ್ಣೆಸು** 'ತಣಿಸಂ$_1$' ನೋ.

**ತಣ್ಗೊಡಲ್** (ನಾ). ತಂಪಾದ ಒಡಲು,-ಬಸಿರು; ಪ್ರಸನ್ನವಾದ ಶರೀರ: ತಿಂಗಳ ಬಾಲಸಂ ಪಡೆದ ತಣ್ಗೊಡಲಿಂದಿರಯಿರ್ಪ ತೌರು . . . ಎಂದನಿಸಿರ್ದುದಾ ಕಡಲ್ (ಕವಿಚ. III, ೫೨ ಹಾಲಾಸ್ಯಮಾಹಾತ್ಮ್ಯ).

[ ತಣ್$_2$ + ಒಡಲ್ ]

**ತಣ್ಗೊಱೆಗಲ್ಲು** (ನಾ). ತಂಪಾದ ನೀರನ್ನು ಒಸರುವ ಕಲ್ಲು,-ಚಂದ್ರ ಕಾಂತಶಿಲೆ: ತಿಣ್ಣವಾದರೆ ತನ್ನ ತಲೆದೊಱೆಯನು ಮುಕ್ಕಣ್ಣನೀ ಬನದೊಳಿಟ್ಟಂತೆ ತಣ್ಗೊಱೆಗಲ್ಲ ಸೋಪಾನದ ಕೊಳ (ಮೋಹತ. ೨೪-೫೫).

[ ತಣ್$_2$ + ಒಱೆಗಲ್ಲು ]

**ತಣ್ಣೋಟ** (ನಾ). ತಂಪಾದ ನೋಟ ; ಪ್ರಸನ್ನತೆಯಿಂದ ಕೂಡಿದ ದೃಷ್ಟಿ: ನಿಮ್ಮೂರ ಹೆಣ್ಣುಗಳ ಕಣ್ಣೋಟ; ತಣ್ಣೋಟ ಕರ್ಪೂ, ಬಲು ಕರ್ಪೂ (ಹೊಂಗಳು. ೧೫-೧೭).

[ ತಣ್$_2$ + ನೋಟ ]

**ತಣ್ತೊಡವು** (ನಾ). ತಂಪನ್ನುಂಟುಮಾಡುವ ಆಭರಣ; ಮೈಗೆ ತಣ್ಣಗೆ, ಹಿತವಾಗಿರುವ ಒಡವೆ: ಕಂಪಿನೊಳ್ ಪೊರೆದ ವಸಂತದೊಳ್ಮಿಗುಳ ತಣ್ತೊಡವಂ ತುಡಿಸಲ್ಕೊಡರ್ಚಿದರ್ (ಕಾದಂಉ. ೭೮೫).

[ ತಣ್$_2$ + ತೊಡವು ]

**ತಣ್ಣಳಿರ್** (ನಾ). ತಣ್ಣನೆಯ ಚಿಗುರು,–ತಳಿರು: ಎಯ್ದೆ ಮುಸುಂಕಿನಿಂದ ತಣ್ಣಳಿರ್ಗಳಿನೊಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಕಾದಂಬ. ೪೫೮). [ ತಣ್$_2$ + ತಳಿರ್$_2$ ]

**ತಣ್ಪಟಿ** (ಕ್ರಿ). ತಂಪು ನಾಶವಾಗಂ ; ಶೈತ್ಯವಿಲ್ಲದಂತಾಗು : ಅತುಳತುಷಾರಜನ್ಮಗೃಹವಿಂತಿದಂ ತಾನೆನಿಪಿಂದುಕಾಂತನಿರ್ಮಿತದೆಸೆದಿರ್ಪ ಸೆಜ್ಜೆವನೆ ತಣ್ಪಟಿದುಂ ನೃಪಕಂತುಕಾಯದುದ್ಧತ ವಿರಹಾನಲ ಪ್ರಬಲತಾಪಕಳಾಪದೆ ಕಾಯ್ದು ಸಂತತಂ ಹುತವಹನಿರ್ಪ ಸೆಜ್ಜೆವನೆಯಂತೆ ಪೊಲಿರ್ದುದು (ಕುಸುಮಾ. ೧೦-೨೦). [ ತಣ್ಪು$_2$ + ಅಟಿ$_1$ ]

**ತಣ್ಬಟ್ಟು** 'ತಂಬಿಟ್ಟು$_1$' ನೋ.

**ತಣ್ಬಿಡಿ, ತಂಪಿಡಿ** (ಕ್ರಿ). ತಂಪಿನಿಂದ ಕೂಡಿರು ; ಶೀತಲದಾಗಿರಂ : ಪೊಸಮಲ್ಲಿಗೆ ಮಲ್ಲಗೆ ಕಂಪು ನಾಱೆ ತಣ್ಬಿಡಿದೆಲರೂಡೆ . . . , ಗುಣಾರ್ಣವಂ ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಜಾವಮಂ (ಪಂಪಭಾ. ೪-೧೧೦). **ತಂಪಿಡಿ** : ಬಿಸಿಮಾಣ್ದ ರವಿಯೊ ತಂಪಿಡಿದಿರದ ಚಂದ್ರಮನೊ . . . ಪೇಳೆಂಬ ಸೌಭರಿಮುನಿಪನು (ಜೈಮಿಭಾ. ೦೦-೧೬). [ ತಣ್ಪು$_1$ + ಇಡಿ$_1$ ]

**ತಣ್ಬಡು** (ಕ್ರಿ). ತಂಪುಂಟುಮಾಡು : ಕಾಳಿಂದೀಜಲದಿಂದಮೇಂ ತೊಳೆದನೋ ತಣ್ಬಟ್ಟನೋ ಕಾರಗಿಲ್ಧೂಪಂ ಕತ್ತುರಿಯಿಂದಮಣ್ಪಿಡಿದನೋ . . . ಎಂಬಾಳಾಪಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪೆರ್ಮಿರ್ಬಿನಿಂ (ಚಳವಿ. ೬-೧೨). [ ತಣ್ಪು$_2$ + – ಇಡು$_1$ ]

**ತಣ್ಬಿಸು, ತಂಪಿಸು, ತಂಬಿಸು$_1$, ತಂಬೈಸು, ತವಿಸು, ತವ್ಮಿಸು** (ಕ್ರಿ). ೧. ತಂಪುಗೊಳಿಸು ; ತಣ್ಣಗೆಮಾಡು : ತಿಳಿಪೊಸರ ಚೆಲ್ಲುವರ ಸವಿನುಡಿಯ ಹರಕೆಯಿದು ಬೇಗೆಗಳ ತಣ್ಬಿಸುವ ಮಾತು (ನಳ್ನ. ೩೭-೬). **ತಂಪಿಸು** : ೧. ಬಿಸಿಲಿನ ಬೇಗೆಗೆ ತಲೆಯಾನಿಸಿ ತರುವುಂ ಶ್ರಿತರ ತಂಪಿಸುವುದೆಲೆ ನೆಳಲಿಂ (ಹಾಳಂತ. ೬೩-೧೦೭). ೨. ಆರಿಸು ; ನಂದಿಸು : ಪಾವಕಮಹಾಬಾಣವಂ . . . ತೆಗೆದೆಚ್ಚೊಡಮನಂದು ಕೈಗೆಡದೆ ಕರ್ಣಾತ್ಮಜಂ ವಾರುಣಾಸ್ತ್ರ ಪ್ರಯೋಗದೊಳದಂ ತಂಪಿಸಿದನು (ಜೈಮಿಭಾ. ೪-೩೬); ತನುವ ನಂಡಲೆವ ತಾಪಾಗ್ನಿಯ ರಘುಳವ ಪುಳಕಾಂಬುವಿನಿಂದ ತಂಪಿಸು (ಕಂನವಿ. ೯-೦೮೩). **ತಂಬಿಸು$_1$** : ೩. ಆರು ; ತಣ್ಣಗಾಗು : ಬಾಣದ ಮದ್ದನರವ ಸಮಯಕೆ ಕಿಚ್ಚು ಮಾಣದೆ ಮನೆಗಳ ಸುಡಲು ಕ್ಷೋಣೀಶ ಸಿದ್ಧರಾಮನ ಪಾದದರಾಣೆಯಿಡಲು ತಂಬಿಸಿತು (ಅಮುಸಾಂ. ೪-೪೩). ೪. ಕೋಪ, ದುಃಖ ಮೊದಲಾದುವನ್ನು ತಗ್ಗಿಸಂ ; ಸಮಾಧಾನ ಮಾಡಂ ; ಶಮನಗೊಳಿಸು ; ಶಾಂತಗೊಳಿಸಂ : ಚಂದೂಡಲ ಬೇಗೆಯವನೇತರದಿ ತಂಬಿಸುವೆಂ (ಸಮ್ಮಳಾ. ೫-೨೨) ; ಆ ಖಗನ ಅತಿಕೋಪವನು ತಂಬಿಸಿ (ನೇಮಿಸಂ. ೧೧-೫೦); ಬಳಲಿದ ಶ್ರಮವನು ತಂಬಿಸುವೆನೆಂದು ಅಳಿದು ರಕ್ಷಕರ ಕಾವಲಿಟ್ಟು (ಚಂದ್ರಹಾ. ೨-೬೪). ೫. ಇಂಗಿಸು; ನಿವಾರಿಸು: ಲಲಿತ ಕರ್ಪೂರ ತಾಂಬೂಲವಂ ತಮ್ಮಣಲೊಳಳಿವಡಿಸಿ ಪುದಿದ ಬೆಮರ್ಪನಿಗಳಂ ತತ್‌ಕ್ಷಣಂ ಕಳನ ದೂಳಿಯೊಳಿ ತಂಬಿಸಿ ಮುಪ್ಪಿಯಂ ಬಲಿದು (ಹಬಪು. ೧೬-೩೬). **ತಂಬೈಸು** : ೨. ತುರಗಗಳನೋಡಿಸುತ ನಿಲ್ಲಿಸುತ್ತ ನಿಲ್ಲಿಸುವ ತುರುಬಿ ತಂಬೈಸುವರುವಾಳಿಸಿ ಮುರಿವ ಹೋರುವ ಮೆರೆವ ಕುಣಿಸುವ ಚಪಳಗತಿಗಳಲಿ (ಮೂಲರಾ. ೪-೯). **ತವಿಸು** : ೨. ಅಸ್ತ್ರಗಳು ದೇವಲೋಕಮನ್ನಿಂದು ಸುಡುತ್ತಿದೆ ಬೇಗೆ ಪರಿಹರಿಸುಯೆನಲಿಂದ್ರನಂದನಂ ತವಿಸಿದನು (ತುರಂಗ. ೩೦-೨೯). ೪. ಹೊಂದಿರುವ ದುಃಖವಂ ತಮಿಸಿ (ತುರಂಗ. ೩೪-೬); ಬಳಲಿಕೆಯ ತಮಿಸಿ ಮುಂದುರವಣಿಸಿ (ತುರಂಗ. ೭೩-೧೬). **ತವ್ಮಿಸು** : ೪. ಸೊಗಸಿನಿಂ ಬಸವ ನೀಲಾಂಬಿಕೆಯು ಗುರುವರನ ಹಸುವ ತವ್ಮಿಸುವೆನುತ (ಚೋರಬ. ೯-೪೨); ನೀವೀಗ ಕೋಪವ ತವ್ಮಿಪುದು ತವ್ಮಿಪುದು ಗಾಂಗೇಯಯೆಂದನು ನೋಡಿ ಧರ್ಮಜನು (ಜಿನಭಾ. ೩೯-೫೯). [ ತಣ್ಪು$_2$ + – ಇಸು$_3$ ]

**ತಣ್ಪು$_1$** 'ತಣಿವು$_1$' ನೋ.

**ತಣ್ಪು$_2$, ತಂಪು$_2$** (ನಾ). ೧. ತಣಿವು ; ಶೈತ್ಯ : "ತಣ್ಪೆಂದು ಶೈತ್ಯಂ" (ಶಶಸಾ. ೨೬-೫೭೮) ; ಕುಡಿಯರ್ ನೀರುಂಟು ಪದ್ಮಾಕರಾಳಿಗಳೊಳ್ ತಣ್ಪುಗಳುಂಟು ಹೇಮಲತಿಕಾ ಕುಂಜಂಗಳೊಳ್ (ಪಂಪಭಾ. ೬-೩೦) ; ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳವತರಿಸಿ (ಕಾದಂಬ. ೪೬೨): ತಣ್ಪಂ ಬಿಟ್ಟು ಬಿಸಿಲಂ ಕಾಯ್ದು ಪಿತ್ತಾಧಿಕನುಮಂ ಪೋಲ್ವೆಂ (ಧರ್ಮಾಮೃ. ೮-೩೦) ; ಕಾಲ ತಳಂ ನೆರೆ ತಣ್ಪಾಗಿರೆ ಸರುಜಂ (ಕಲ್ಯಾಕಾ. ೨-೫೨) ; ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ . . . ಪುಟ್ಟುವಂತಿರೆ ಪುಟ್ಟಿದಂ (ಬಸರ. ೧-೧೨೬) ; ಕಂಪಿಸುವ ಸುಣ್ಪಿನ ತಣ್ಪ[ಪಾಠಾಂ. ತಂಪಿ]ನಾಮೋದಿಸುವ ಸೊಂಪಿನ ಬಿಲ್ವಪತ್ರೆಯ ನಾಗಕೊಯ್ಯೆಂದು (ಬಸಪು. ೧೮-೩೦); ರವಿರುಚಿ ತಣ್ಪನೇಱೆ [ಪಾಠಾಂ. ತಣ್ಣಸೆರೆ] ಕೇತಕಿವನಂ ಸುಳಿಯೇಱೆ (ಸಾಳ್ವಭಾ. ೨೬-೦೮) ; ನಿನ್ನ ತಣ್ಪು ಶಾಂತಿ ಸವಿದು ಶಾಂತಿಗೊಳುವೆನು (ಪಿಸೀಗೀ. ೬೫-೧೬). ೨. ತೃಪ್ತಿ; ಸಂತುಷ್ಟಿ; ಸುಖ : ವಜ್ರಮಂ ಮಸೆದಂತೆ ತಣ್ಪು ಮನದೊಳ್ ಪೊಂಪುಳಿಪೋಗೆ (ಶಾಂತಿಪು. ೨-೨೭ ವ). **ತಂಪು$_2$** : ೧. ಪೂಗೊಲಂಗಳೊಳ್ ತೇಂಕಿ ಪಾಱುವ ಪಕ್ಕಿಗಳೆಱಂಕೆ [ವಿಡಿದುದಿರ್ಪ] ತಂಪನೀವ ತುಂತುರ್ವನಿಯ ತುಱುಗಲಮುಂ (ಕಾದಂಬ. ೫೨೭) ; ಬೇವಿನ ಗೊಟ್ಟೆಯೊಳಿನಿದನರ್ಕನೊಳ್ ತಂಪಂ . . . ಘನಮಾಗಿರಲಱಸಿ ತೊಟಲುವಾತನೆ ಗಾಂಪಂ (ಧರ್ಮಾಮೃ. ೫-೧೬೦) ; ಮನದ ಕೋಪವ ಹೃದಯದಲ್ಲಿಟ್ಟುಕೊಂಡಿಪ್ಪವನ ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ (ಸಿದ್ಧವ. ಶ. ೧೦೨-೩೪೪) ; ತೆಗೆದುದಗ್ಗದ ತಂಪು ನದಿ ಸರಸಿಗಳ ತಡಿಯಲಿ (ಕುಮಾವ್ಯಾಭ. ೫-೫) ; ದೆಸೆದೆಸೆಗೆ ಬೀರ್ಪ ತನಿಗಂಪಿನಿಂ ತಂಪಿನಿಂ . . . ಆ ಕೊಳಂ ಕಣ್ಗೆಸೆದುದು (ಜೈಮಿಭಾ. ೧೫-೯). ೨. ಹೆತ್ತ ನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳ ತಾಪದ ಮುತ್ತಯನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ (ಕುಮಾವ್ಯಾದ್ರೋ. ೪-೨) ; ಅಕ್ಕತಮ್ಮದಿರೊಬ್ಬರೊಬ್ಬರನೋರಂತೆ ನೆನೆಯದಿದ್ದರೆ ತಂಪೆ ಮನಕೆ (ಇಂಚಾಪ. ೩.೨-೪೯). ೩. ನೆಳಲಿನ ತಂಪಾದ ಪ್ರದೇಶ: ದಕ್ಷಿಣದ್ವಾರದ ವೃಕ್ಷದ ತಂಪಿನಲ್ಲಿ ಸ್ವಯಂಜ್ಯೋತಿಯ ಕಂಡೆನಯ್ಯ (ಅಡಪ. ೨೪-೬೯) : ತಳಿತ ಮರನಡಿಗಳೊಳಗೆಳಲತೆಯ ತಂಪಿನೊಳು . . . ಅಱಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬). ೪. ಹಿಮಂ ; ಮಂಜು. 'ತಂಪುಬೆಟ್ಟ' ಪರಾ.

**ತಣ್ಪಾಗು, ತಂಪಾಗು**=೧. ತಣ್ಣಗಾಗು: ಪೊಱಗಣ್ಗೆ ಪೋಗಿ ತಣ್ಪಪ್ಪೆಡೆಯೊಳ್ ಪಡುಗುಂ (ಧರ್ಮಾಮೃ. ೧-೧೫೬). ೨. ದುಃಖ ಮೊದಲಾದ ಭಾವನೆಗಳ ಆವೇಗ ಕಡಮೆಯಾಗಂ : ಶಶಿವದನೆಯ ಮನಸ್ತಾಪ ತಂಪಾದುದು (ಮೋಹತ. ೪-೯೩). **ತಂಪಿನ ಗಿರಿ** = ಹಿಮವತ್ಪರ್ವತ ; ಹಿಮಾಲಯ: ಭಾರತವರುಷವನು ದಾಂಟಿದನು ತಂಪಿನಗಿರಿಯ ತಪ್ಪಲನಿಳಿದನು (ಕುಮಾವ್ಯಾಆ. ೪-೩೫). **ತಂಪಿನ ಬೆಟ್ಟ**=ತಂಪಿನ ಗಿರಿ : ತರಳಾಕ್ಷಿ ತಂಪಿನ ಬೆಟ್ಟದಬಲಿಗೆ ವಿಧಿ ಸದಸ್ಯವ ಕೊಟ್ಟಪೊಲು ತನುವೆಳದಳಾ ಮೇಣಕಿಯ ಜಠರದಲಿ (ನಿಭಾಗ. ೪-೫-೨).

[ ತಣ್$_2$ + – ಪು$_2$. / ತಮಿ. ತಣ್ಪು ; ಮಲ. ತಣುಪ್ಪು ]

**ತಣ್ಪುಗಂಪು** (ನಾ). ತಂಪಾದ ಸುಗಂಧ ; ಹಿತಕರವಾದ ಪರಿಮಳ : ಪಾದರಿಗಳ ತಣ್ಪುಗಂಪು ಸರಸೀರುಹದೊಳ್ ತನಿಗಂಪು . . . ಬಗೆಗೊಂಡುದು ತದ್ವನದೊಳ್ (ರಾಜಶೇ. ೧೦-೧೯). [ ತಣ್ಪು$_2$ + ಕಂಪು ]

**ತಣ್ಪುಗೂಡು** (ಕ್ರಿ). ಶೈತ್ಯದಿಂದ ಕೂಡಿಕೊಂಡಿರಂ ; ತಂಪಿನಿಂದ ಬೆರೆತಿರಂ : ವದನಶಶಿಯ ತಣ್ಪುಗೂಡಿ ಸೌರಭ್ಯದೆ ಪುದುಗಿದ ಮಂದಮಾರುತನ . . . ಸೂಸುಪೋಲೊರ್ಪ ಚದುರೆ ಬೀಸಿದಳಾಲವಟವ (ಕಂನವಿ. ೨೪-೮೦). [ ತಣ್ಪು$_2$ + ಕೂಡು$_1$ ]

**ತಣ್ಪುಗೆಯ್, ತಂಪುಗೈ** (ಕ್ರಿ). ೧. ತಂಪನ್ನುಂಟುಮಾಡು : ಕರಿಯ ಕರ್ಬಿನ ಕಾವಿ[ನ]ಳ ಮೈಂದವಾಟಿಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ವೇಟ್ಟು ತಣ್ಪುಗೆಯ್ಯೆ (ಪಂಪಭಾ. ೫-೬ ವ). **ತಂಪುಗೈ** : ೨. ಪ್ರಸನ್ನತೆಯುಂಟು ಮಾಡು ; ಸಂತೋಷಪಡಿಸು : ಆದಿದೇವರೆ ಮುನ್ನ ತಂಪುಗೈದನು ದೇವರಾದರಿಸಿದಿರೆಮ್ಮನಿಂದು (ಭರತ. ೫೮-೮). [ ತಣ್ಪು$_2$ + ಕೆಯ್$_1$ ]

**ತಣ್ಪುಗೊಳಿಸು** (ಕ್ರಿ). ೧. ತಣ್ಣಗೆಮಾಡು. ೨. ಸಮಾಧಾನಗೊಳಿಸು : ಮನದೊಳುರ್ಕುವ ಮುಳಿಸನೀಜಾತಿಗಿದುಚಿತವೆಂದು ತಿಳಿದು ಮನದೊಳಿ ತಣ್ಪುಗೊಳಿಸಿ (ಚಳವಿ. ೬-೨೫೬ ವ). [ ತಣ್ಪು$_2$+ ಕೊಳ್$_1$ + – ಇಸು$_3$ ]

**ತಣ್ಪುದರ್** (ಕ್ರಿ). ತಂಪನ್ನು ತರು ; ತಂಪನ್ನುಂಟುಮಾಡು : ಸತಿಯರ್ ಕರ್ಪೂರ ಪಾಳೀಕೃತ ಸತಿಯರೆನಲ್ ನಲ್ಲರೊಳ್ ತಣ್ಪುದಂದರ್ (ಜಗವಿ. ೧೬-೮೧). [ ತಣ್ಪು$_2$ + ತರ್ ]

**ತಣ್ಪುವಡೆ, ತಂಪುವಡೆ** (ಕ್ರಿ). ತಂಪನ್ನು ಹೊಂದು ; ತಣ್ಣಗಾಗು : ತುಹಿನಕರನ ತಣ್ಗದಿರ್ಗಳ ತನಿಸೋಂಕಿನಿಂ ತಣ್ಪುವಡೆದ ತಾರಹಾರಂಗಳೊಳಂ (ಕಾದಂಬ. ೫೬೮) ; ವನದೇವತೆಯರಮೃತಸಾರವಾರಿಯಂ ಪಚ್ಚವರಲ ಕರಗಂಗಳೊಳ್ ತೀವಿ ತೆಂದೆಲರ ಪೊಯ್ಲನಿಂ ತಣ್ಪುವಡೆಯಲೆಂದು ನೆಱಪಿದಂತಿರ್ದ ನೀಗ್ರ್ಗಾಯ ತುಱುಗಲಿಂದೆಱಗಿದ ನಾಳಿಕೇರ ಭೂರುಹಂಗಳುಂ (ಚಂದ್ರಪು. ೦-೦೦೫ ವ). **ತಂಪುವಡೆ** : ಹಂಸಧ್ವಜಂ ನಂದನನನೆಣ್ಗಾದಿರ್ದ ಕೊಪ್ಪರಿಗೆಯೊಳ್ತಂದು ಕೆಡಹಿಸಲಚ್ಯುತಧ್ಯಾನದಿಂ ತಂಪುವಡೆದನವನಚ್ಚರಿಯೆನೆ (ಜೈಮಿಭಾ. ೧೧ ಸೂಚನೆ). [ ತಣ್ಪು$_2$+ಪಡೆ$_1$ ]

**ತಣ್ಪುವೀಱು** (ಕ್ರಿ). ೧. ತಂಪನ್ನುಂಟುಮಾಡು. ೨. ನೆಮ್ಮದಿಯುಂಟು ಮಾಡು; ಸುಖ ತರು : ಚಿಂತಿಸುತೆ ಪಲವಂದದೆ ಬಗೆ ನೊಂದು ಹಮ್ಮದಂ ಬೋಗಿರೆ ಪಾರ್ಥಂ ದಯೆಯಿಂದವನಿರ್ದೆಡೆಗಿಂದುಧರಂ ತಳರ್ದು ತಣ್ಪುವೀಱಿದನಾಗಳ್ (ಕಲಶಂ. ೪-೦೩೬). [ ತಣ್ಪು$_2$ + ಬೀಱು$_1$ ]

**ತಣ್ಪುವೆಸ** (ನಾ). ತಂಪನ್ನುಂಟುಮಾಡುವ ಕೆಲಸ ; ಶೈತ್ಯೋಪಚಾರ : 'ತಣ್ಪುವೆಸಕೆಯ್' ಪರಾ. [ ತಣ್ಪು$_2$ + ಬೆಸ$_1$ ]

**ತಣ್ಪುವೆಸಕೆಯ್** (ಕ್ರಿ). ತಂಪನ್ನುಂಟುಮಾಡುವ ಕೆಲಸವನ್ನು ಮಾಡು; ಶೈತ್ಯೋಪಚಾರ ಮಾಡು : ಮಲಯಸಮೀರಣೇರಣ ಚಲತ್ತರುಶಾಖೆಗಳೊರ್ಮೊರ್ಮೆ ನೀರೊಳಗೆ ಬಬಲ್ದು...ನ್ನಭಂಬರಂ ಮಿಳಿರ್ದಲಂಪಿನ ದಂಪತಿಯಿರ್ಪ್ಪ ಜೊಂಪಮಂ ತಳತಳದಲ್ಲಿ ತಣ್ಪು[ಪಾಠಾಂ. ಸಾಂಕು, ಗೂಂಕು]ವೆಸಕೆಯ್ವುವು ತೀರವನಾಂತರಾಳದೊಳ್ (ಆದಿಪು. ೧೧-೬೬). [ ತಣ್ಪುವೆಸ + ಕೆಯ್$_1$ ]

**ತಣ್ಪುವೆಱು, ತಂಪುವೆಱು** (ಕ್ರಿ). ತಂಪನ್ನು ಹೊಂದು ; ತಂಪಾಗಿರು : ಮರಂಗಳ ಚಿಗುರ್ಗಳಿಂದೊಗೆದೆಲರಿಂ ತಣ್ಪುವೆತ್ತಿರ್ಪ ತೀರಜಲಂಗಳೊಳಂ (ಕಾದಂಪೂ. ೦೧೬) ; ಕಮಲಭವಂ ಲಸತ್ಪರಿಮಳೋತ್ಕರದಿಂ ಕರುವಿಟ್ಟು ಮಾಡಿದಂಗಮಿದೆನೆ ತಣ್ಪುವೆತ್ತ ವಿಜಯಾವತಿದೇವಿಯ ಮೆಯ್ (ಕುಸುಮಾ. ೫-೧೨೬). **ತಂಪುವೆಱು** : ಓಪರೊಳ್ನೆರೆದು ವಿರಹಿಗಳ್ಮಲಯಜದ ಘನಸಾರದೊಳ್ದಂಪುವೆತ್ತು (ಜೈಮಿಭಾ. ೮-೫). [ ತಣ್ಪು$_2$ + ಪೆಱು$_1$ ]

**ತಣ್ಪುವೇಱು** (ಕ್ರಿ). ತಂಪನ್ನು ಹೊಂದಿರು ; ಶೈತ್ಯವನ್ನು ತುಂಬಿಕೊಂಡಿರು: ಕುಕಿಲ್ವ ಒಕಾಳಿ ತಣ್ಪುವೇಱಿದ ಸುಟಿಗಾಳಿ (ಪುಷ್ಪಪು. ೨-೨೦). [ ತಣ್ಪು$_2$ + ಪೇಱು$_1$ ]

**ತಣ್ಪುಳಿಲ್** 'ತಣ್ಪುಟಿಲ್' ನೋ.

**ತಣ್ಪೂಳಿಗ** (ನಾ). ತಂಪನ್ನುಂಟುಮಾಡುವ ಸೇವೆ ; ಶೈತ್ಯೋಪಚಾರ : ವ್ಯಮರತೊರಗಲಾಕೆ, ಪಿಡಿದೆತ್ತಿ ಕುಳ್ಳಿರಿಸಿ ತಣ್ಪೂಳಿಗವನೆಸಗಿ . . . ಕರ್ಟಿದನ್ ಕಣ್ಪನಿವೊನಲ್ಗಳಿಂ ಭರತನಾ ರಘುರಾಮನಂಬಿಕೆಯ ಪುಣ್ಯಮಯ ಪದ್ಮಪಾದಂಗಳಂ (ಶ್ರೀರಾಮಾ. ೧೧೬-೧೦೯). [ ತಣ್ಪು$_2$ + ಊಳಿಗ (<ಊಟಿಗ) ]

**ತಣ್ಪೆಱೆ, ತಂಪೆರೆ** (ಕ್ರಿ). ತಂಪನ್ನು ಸೂಸು,–ಬೀರು : ಓಡಿದೆನ್ . . . ತಣ್ಪೆಱೆವ ಪೊನಲೆಡೆಗೆ (ಬದ್ಧಶ್ರ. ೩೬-೬೬೩). **ತಂಪೆರೆ** : ತಂಪೆರೆಯಬೇಕಾದ ಎಲೆ, ಹುಲ್ಲಿನ ಹಸಿರು, ಬಿಸಿಯನ್ನೇ ಕಕ್ಕುತ್ತಿವೆ (ದೆಶಂಬಾ. ೦೦). [ ತಣ್ಪು$_2$ + ಎಱೆ$_1$ ]

**ತಣ್ಪೇರಿಸು** (ಕ್ರಿ). ೧. ತಂಪನ್ನುಂಟುಮಾಡು. ೨. ತೃಪ್ತಿಗೊಳಿಸು : ಧಾರುಣಿಯುಂ ಶಕ್ರಂ ತಣ್ಪೇರಿಪನೊಳ್ಸರಿಯು ಸೂಸಿ ಕೃಷ್ಣಮಹೀಶಂ ಸಾರತರೋತ್ಸರ್ಗಪಯಃಪೂರದೆ ತಣ್ಪೇರಿಪಂ (ನರಪ. ೪೧-೯೦). [ ತಣ್ಪೇರು (<ತಣ್ಪೇಱು) +– ಇಸು$_3$ ]

**ತಣ್ಪೇರು** 'ತಣ್ಪೇಱು' ನೋ.

**ತಣ್ಪೇಱು, ತಂಪೇರು, ತಂಪೇಱು, ತಣ್ಪೇರು** (ಕ್ರಿ). ತಣ್ಣಗಾಗು ; ಉಷ್ಣತೆಯನ್ನು ಕಳೆದುಕೊಳ್ಳು : ಸರಳಾಂಗಂ ಮಿಗೆ ಕುಂದಿ ತೋಱಿಕಿವಿಗಳ್ ತಣ್ಪೇಱಿ[ಪಾಠಾಂ. ಗಂಪೇಱಿ] (ರಾಜಶೇಖ. ೯-೨೧೨) ; ತಣ್ಪೇಱಿದ ಪಱಿಯಂತೆ ದನಿ ಪೊಱಮಡದೆ (ಧರ್ಮಾಮೃ. ೧-೧೬೮) ; ಸರಸೀಜಾತ ಪಯಃಕಣಪ್ರತತಿಯಿಂ ತಣ್ಪೇಱಿ . . . ತೀಡಿದುದಿಂತು ಜಾಂಬುಕವನೋದ್ಯಂಗೀರುತಂ ಮಾರುತಂ (ಕುಸುಮಾ. ೬-೪೫). **ತಂಪೇರು** : ನಿರುತಮೈಶ್ವರ್ಯ ಕೈಸಾರಿದೊಡೆ ಸಂತಸದಿ ಪರಮಶಾಂತಿಯಲಿ ಪೆರ್ಚುವ ಮಾಳ್ಕೆಯಿಂದೆ ಮೈ ತಂಪೇರಿ (ನವಮೋ. ೧೫-೮). **ತಂಪೇಱು** : ಬೆದಱ ಬಂದಿಗೆ ಸಿಲುಕಿತವನಿಪನದಟು ವಿಕ್ರಮವಹ್ನಿ ತಂಪೇಱಿದುದು (ಕುಮಾ.ಭೀ. ೧೦-೧೬). **ತಣ್ಪೇರು**. 'ತಣ್ಪೇರಿಸು' ಪರಾ. [ ತಣ್ಪು$_2$ + ಏಱು$_1$ (<ಏಱ್$_1$) ]

**ತಣ್ಪೊದವು** (ಕ್ರಿ).=ತಣ್ಪೇಱು: ತಣ್ಪೊದವಿದ ನಿರ್ಝರಾಂಬುಗಳನೊಯ್ಯನೆ ಪೀರ್ದು (ಕಾವ್ಯಾವ. ೬೨೨). [ ತಣ್ಪು$_2$ + ಒದವು$_1$ ]

**ತಣ್ಬಗೆ** (ನಾ). ಆರ್ದ್ರ ಹೃದಯ ; ಕರುಣೆಯಿಂದ ಕೂಡಿದ ಮನಸ್ಸು : ಕಣ್ಬಡಿಯೊನಲ್ ಗುಣಂಗಳ್ ಪೆಣ್ಬರಿಜಂ ತಳೆದು ತೊಳವುವೆಂಬಂತೆವೂಲೀ ತಣ್ಬಗೆಯ ರಾಣಿಯೊಲವಿಂ ಪಣ್ಬಡೆಗುಂ ಕಲ್ಪಕಲ್ಪ ಸಂಕಲ್ಪಂಗಳ್ (ಚಳವಿ. ೩-೭೩). [ ತಣ್$_2$ + ಬಗೆ$_3$ ]

**ತಣ್ಬನಿ, ತಂಬನಿ** (ನಾ). ತಂಪಾದ ಹನಿ ; ತಣ್ಣನೆಯ ಬಿಂದು : ಮೊನ ಮೊಲ್ಲಾತನ ಗಾಡಿಯುಂ ದರವುರುಂಗಂಡಾಕೆಗಳ್ . . . ಚಂದನಕಂ ಪಸುಪೆಸವ ಬಾಳ್ಬೊಂಪಕ್ಕಮೊಂದೊಂದೆ ತಣ್ಬನಿಯೊಳ್ಸೋಡಿಸುತಿರ್ಪ [ಪಾಠಾಂ. ಯೊಳ್ಸೂಡಿರಿಸಿರ್ಪ]ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೧-೭೫) ; ತಣ್ಬನಿಯುಂ ಚಂದನಗಂಧಮುಂ ಮಳೆಯೆರಲ್ತಂದೀಯೆ ಬಂದತ್ತು ಫಾಲ್ಗುನಂ (ಅರ್ಧನೇ. ೨-೫೬) ; ತದ್ವನದ ಕೊಳಂಗಳೊಳ್ದೆರೆಯಿನುಣ್ಮುವ ತಣ್ಬನಿಯಿಂದೆ ಪಾದ್ಯಮಿತ್ತು (ಚಂದ್ರಪು. ೬-೮೩) ; ಚಂದನದ ಪೊಟ್ಟಣಂಗಳಿಂ ಪಟ್ಟನೆ ಪನಿವ ತಣ್ಬನಿಯ ತಂದಲುಂ (ವರ್ಧಪು. ೫-೬೧ ವ). **ತಂಬನಿ** : ಬೇಗ ಮಾಸಗಲಿಂತು ಶಾನೆ ದೂರವೆ ವೃಷ್ಟಿ ತಂಬನಿಗಿಂಬಾಗೆ ತಾನೆ ಮೊಳೆಯದೆ ಸೃಷ್ಟಿ ? (ಗೀವಿಂ. ೧೦೭-೩೦) ; ತೊಳೆವ ಮಳೆಯೆನಿತರಿಂ ಚೆಲ್ವಡೆದುದೀ ಸುಗ್ಗಿ ಕುಳಿರ ತಂಬನಿಯನಿತರಿಂ ಮಿಂದಿರುವುದು (ಕಾಲೂರ. ೧೧೮-೨೪೬). [ ತಣ್$_2$ + ಪನಿ$_2$ ]

**ತಣ್ಬಸಲೆ** (ನಾ). ತಂಪಾದ ಹುಲ್ಲುನೆಲ,–ಹುಲ್ಲುಗಾವಲು : ಸ್ಮರನೊತ್ತಿದನುಂಡಿಗೆಯುಂ ಬಿರುದಿಂಗೀ ಧರೆಯ ಬೆನ್ನೊಳೆನಿಸಿರ್ಪುವು ತದ್ವಿರಹಾರ್ತೆ ಮೆಯ್ಯನಿಕ್ಕಿರೆ ಕರಿಂಕುವೋದೆಡೆಯ ಪಚ್ಚೆ ತಣ್ಬಸಲೆಗಳೊಳ್ (ವರ್ಧಪು. ೪-೫೯). [ ತಣ್$_2$ + ಪಸಲೆ ]

**ತಣ್ಪಾಲ್, ತಂಬಹಾಲು, ತಂಬಾಲ್, ತಂಬಾಲು, ತಂಭಾಲು** (ನಾ). ತಣ್ಣನೆಯ ಹಾಲು : ಚಾರಿವರಿದು ಚಂದ್ರಸುರಧೇನು ಕೂರ್ತು ಚಕೋರವತ್ಸಗೆ ಮೊಲೆಗುಡಲು ಪೂರಿಸಿ ಕಡೆವಾಯೊಳಿವ ತಣ್ಪಾಲೆನೆ ಸೋರಿತು ಬೆಳ್ದಿಂಗಳಿಳೆಗೆ (ಮೋಹತ. ೧೬-೫೫). **ತಂಬಹಾಲು**: ಉದಯದಲಿ

ಒಂದು ಸಿದೆ ತಂಬಹಾಲು ಅಸ್ತಮಯದಲಿ ಒಂದು ಸಿದೆ ತಂಬಹಾಲ ಲೆಕ್ಕದಲಿ ಶ್ರೀ ಪಾರಿಸ್ವನಾಥ ದೇವರಲಿ . . . ಬಿಟ್ಟ ಧರ್ಮಸಾಧನ (ಕಇ. III-1, ೧೧-೪೫ ; 1542). **ತಂಬಾಲ್ :** ಎಳಗಂದಿ ಕರ್ಮಿಜುವಿನ ತೊಟ್ಟಿದ ತಂಬಾಲಂ ಬೆರೆದು ಹಸಿಸಿ (ರಾಮೂಶ್ವ. ೧೦೧-೧). **ತಂಬಾಲು :** ಬೆಲುವಾಲು ತಂಬಾಲು ಕೆನೆವೆರೆಸಿದ ಪಾಲು ಸುಲಲಿತ ಬಟ್ಟವಾಲುಗಳ . . . ಲಲನೆಯರುಣಬಡಿಸಿದರು (ಕಂನವಿ. ೮-೯೧) ; ಶಾಂತಲಾದೇವಿ . . . ತಂಬಾಲಿನ ಗಿಂಡಿಯನ್ನು ತನಿವಣ್ಣುಗಳ ಹರಿವಾಣಗಳನ್ನು ನೋಡಿದಳು (ಸವತಿ. ೮೫). **ತಂಭಾಲು :** ಯಿಪ್ಪತ್ತನಾಲ್ಕು ಮುಡಿ ಭತ್ತಕೆ ತಂಭಾಲು ಯರಡು ಸಿದ್ದೆ ಹಾಲನೂ ಯರಡು ಹೊತ್ತು ನಡಿಸಿ ಬಹರು . . . ಹಂನೆರಡು ಮುಡೆ ಭತ್ತಕ್ಕೆವೊಂದು ಸಿದ್ದೆ ತಂಭಾಲನುವೊಂದು ಹೊತ್ತು ನಡಸುಉವದು (ಕಇ. III-1, ೧೧-೮ ; 1542).

[ ತಣ್$_2$ + ಪಾಲ್$_1$ ]

**ತಣ್ಬಿಸಿಲ್, ತಣ್ಬಿಸಿಲು** (ನಾ). ೧. ತಂಪಾದ ಬಿಸಿಲು ; ತೀಕ್ಷ್ಣವಲ್ಲದ ಬಿಸಿಲು ; ಎಳೆಬಿಸಿಲು ; ಹಿತವಾದ ಬಿಸಿಲು : ಅ ನು ಕ್ರ ಮ ದಿ ಂ ತಣ್ಬಿಸಿಲಾಯ್ತನಂತರಂ ಪೊಂ ಬಿ ಸಿ ಲಾ ದು ದು (ಶಂರಾಮೂ. ೧೧-೧೭೬) ; ರವಿಕಿರಣಂ ನೀರೋಡುತ್ತಿವೆ ತಣ್ಪಂ ಬೀಱುತಿವೆ ರಥಾಂಗಕುಲಂಗಳ್ ತವೆ ತಣ್ಬಿಸಿಲೊಳ್ ನಿಂದಿರ್ದಿವೆ ಮೇಘಂ ಹಿಂಡಿ ಹರಹಿದುತಿವೆ ನಭದೊಳ್ (ಗಿರಿಕ. ೯-೬೩) ; ಎಸೆದನಚ್ಚರಿ ನಡುವಗಲಿವನೊಬ್ಬ ತಣ್ಬಿಸಿಲ ಭಾಸ್ಕರನೋಯೆಂದೆನಿಸಿ (ಭರತ. ೩-೨೪) ; ತರಣಿ ನಿ ಶಿ ಸಂ ಗ ಮ ಂ ಬಯಸಿ ವಿಧುವೇಷಮಂ ಧರಿಸಿ ಬರಲೊಗೆದ ತಣ್ಬಿಸಿಲೊ ಪೇಳೆಂಬಿನಂ ಕರಮೆ ಸೆದುದ್ದೆದ ಚಂದ್ರಾತಪಂ (ಚಬಪು. ೯-೩೦); ನೇಸರಿದೊ ತಣ್ಬಿಸಿಲ ಬೆಳ್ಮಳೆಯ ಕರೆಯುತಿದೆ (ಹಬ್ಬರ. ೫-೭೬). ೨. ತಂಪಾದ ಕಾಂತಿ,–ಪ್ರಕಾಶ: ಉತ್ತಂಸ ಮಣಿಮರೀಚಿಗಳಿಂ ಭೂ ಪಾ ಲ ನ ಚರಣಸರೋಜಕ್ಕೋಲಗಿಸಿದನುದಯ ಸುಂದರಂ ತಣ್ಬಿಸಿಲಂ (ಶಂರಾಮೂ. ೩-೫). ೩. ಬೆಳುದಿಂಗಳು ; ಚಂದ್ರಿಕೆ : ನೆಱೆದಿಂಗಳ ತಣ್ಬಿಸಿಲ್ಮುಗುಳ್ನಲ್ಲಿಗೆ ಬಂದ ಮಾವು . . . ತುಂಬಿಯ ಗೇಯಮೆಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಪು. ೧.೪೪). **ತಣ್ಬಿಸಿಲು :** ೨. ಎಱಗುವ ದಿವಿಜರ ಮಕುಟದ ತುಱುಗಿದ ಮಾಣಿಕದ ತಣ್ಬಿಸಿಲುಗಳ ಪೊಳಪಿಂ (ಎಕ. VI, ಚಿಕ್ಕಮ. ೧೬೦-೪೪ ; 1109).

[ ತಣ್$_2$ + ಬಿಸಿಲ್ ]

**ತಣ್ಬಿಸಿಲು** 'ತಣ್ಬಿಸಿಲ್' ನೋ.

**ತಣ್ಬುಳಿಲ್** 'ತಣ್ಬುಟಿಲ್$_1$' ನೋ.

**ತಣ್ಬುಟಿಲ್$_1$, ತಣ್ಪುಳಿಲ್, ತಣ್ಬುಳಿಲ್** (ನಾ). ತಂಪಾದ ಮಳಲು,–ಮರಳ ದಂಡೆ : ತರುಣಿಯರಾ ವಿಲಾಸ ಕುಸುಮಾಸ್ತ್ರನಿರೀಕ್ಷಿಸೆ ಕಾಮತಾಪದಿಂ . . . ಕೊರಗಿ ಮೃಣಾಳನಾಳಿಕೆಗೆ ಚಂದನದಣ್ಕೆಗೆ ತಣ್ಬುಟಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇಗೆರ್ಗಡಲುಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩-೨೪); ಪಾಸಿದ ಪಸೆಯ ಪಸರದಂತಸದಳಮೆಸೆವ ಸುಣ್ಬೆಳಂತಿಗೆ ಮಟಲ ತಣ್ಬುಟಿಲೊಳ್ ವಿಲಾಸಂಬಡೆದ ಬಾ ಲ ಸ ಹ ಕಾ ರ ನಂ ದ ನ ಂ (ಅನಂಪು. ೭-೭ ವ). **ತಣ್ಪುಳಿಲ್ :** "ತಣ್ಪುಳಿಲನೆ ಸೈಕತಂ" (ಚಕುನಿ. ೧೦). **ತಣ್ಬುಳಿಲ್ :** ಸುಖದ ತನಿರಸದ ಪೆರ್ಮಡು ಸುಖದೊತ್ತಿನ ಸುತ್ತಸುಖದ ತಣ್ಬುಳಿಲನಿಕುಂ (ಶ್ರೀಶದಾ. ೭೭) ; ತಳಿರ್ಜೊಂಪದೋಪರಿಯ ತಣ್ಪುಳಿಲೆಡೆಯೊಳ್ಮಸುಪ ಚಂದ್ರಕಾಂತದ ಘಟ್ಟದೊಳ್ . . . ತೀವಿ ಪಥಿಕರ್ಗೆಱಗುಂ (ದೃಷವಿ. ೪-೩೬) ; ತಣ್ಬುಳಿಲಿರ್ಪೆಡೆಯೊಳುಮಾರವೆಗಳ ತಣ್ಣೆಳಲೊಳು (ಗೊಮ್ಮಟ. ೩-೧೩೦). [ ತಣ್$_2$ + ಪುಟಿಲ್$_1$ ]

**ತಣ್ಬುಟಿಲ್$_2$** (ನಾ). "ತಂಪಾದ ತೋಪು" (ಶಂಪದೀ. ೧೦೧) : ಎಲ್ಲಿ ಕೊಳನೆಲ್ಲಿ ತಣ್ಬುಟಿಲೆಲ್ಲಿ ಲತಾಭವನಮೆಲ್ಲಿ ಧಾರಾಗೃಹಂ (ಶಂಪಥಾ. ೩-೧೯).

[ ತಣ್$_2$ + ಪುಟಿಲ್$_2$ ]

**ತಣ್ಬೆಮರ್** (ನಾ). ತಣ್ಣಗಿರುವ ಬೆವರು : ಆತನ ರೂಪಮೆಂಬಾತು ಸುಧಾರಸಮಂ ನಯನಂಗಳೆಂಬ ಸತ್ಪಾತ್ರಗಳಲ್ಲಿ ಕಾಮಿನಿಯರಾತುರದಿಂ ಕುಡಿದಂತರಂಗದೊಳ್ನೂತನಮಾಗಿ ತೀವಿದೊಡಮುಣ್ಮುವ ತಣ್ಬೆಮರೊಂದು ದಂಭದಿಂದಾತತಮಾಗಿ ತಾಂ ಪೊಱಗೆ ಪೊಣ್ಮಿದುದೆಂಬಿನಮೊಪ್ಪಿ ತೋಱುಗುಂ (ಪಾಥಪು. ೩-೩). [ ತಣ್$_2$ + ಬೆಮರ್$_2$ ]

**ತಣ್ಬೆಳಗು, ತಂಬೆಳಕು, ತಂಬೆಳಗು** (ನಾ). ೧. ತಂಪಾದ ಬೆಳಕು ; ಶೀತಲವಾದ ಕಾಂತಿ : ನುಣ್ಬುಟಿಲೊಳಗದಿರ್ಮುತ್ತೆ ಪವಣ್ಬಡೆ ಕಟ್ಟಲಿಸಿ ಬೆಳೆದು ಬಳಸಿದರ್ಗಡದಂ ತಣ್ಬೆಳಗನೀಯೆ ಬೆಳತಿಗೆಗಣ್ಬೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ (ಚಂದ್ರಪು. ೭-೧೦೫) ; ರತ್ನಕಲಶಂಗಳ ತಣ್ಬೆಳಗುಣ್ಮೆ ಪೊಣ್ಮೆ (ಕುಸುಮಾ. ೧೧-೧೪೦). ೨. ಬೆಳುದಿಂಗಳು ; ಚಂದ್ರಿಕೆ : ಅ ಭ ಷ ವ ವಿ ಧಿ ಯ ಂ ಮಾಡುವೆಂ ಚಂದ್ರಿಕಾವಾರಿಯಿನೆಂಬಂತೆತ್ತಲುಂ ತಣ್ಬೆಳಗಿನ ಬಳಗಂ ಸಿಂಪಿಸಲ್ . . . ಬಂದುದಯಿಸಿತುದಯಾದ್ರೀಂದ್ರದೊಳ್ಚಂದ್ರಬಿಂಬಂ (ಕಾದಂಉ. ೩೭೬) ; ಬಂದೆಳಮಾವೆಂದೊಡೆ ನೆಱೆದಿಂಗಳ ತಣ್ಬೆಳಗೆಂದೊಡೂನ್ನಮುರಿವಂ ಗೌರವಂ (ಕಬ್ಬಿಗಕಾ. ೧೪೬). **ತಂಬೆಳಕು :** ೨. ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೀ ಹೊರಸೂಸಲಿ (ಅರಳು. ೩೦೧-೭) ; ಹೊತ್ತು ಮೇಲೇರಿದರು, ಬಿತ್ತದಲೆ ಸುಡುಬಿಸಿಲ ಸುತ್ತ ಹೂಬಿಸಿಲು ದೀಪಾಗಿ ಬೆಳಗುವದು ಎತ್ತ ನೋಡಿದರು ತಂಬೆಳಕು (ಕನ್ನಜಾ. ೩೦೫). **ತಂಬೆಳಗು :** ೧. ಎಳೆಯ ಬೆಳದಿಂಗಳವೊಲೀಕೆಯ ತಳತಳಿಪ ಮುಖಚಂದ್ರಮನ ತಂಬೆಳಕು ಸುಳಿದುದು (ಕುವ್ಯಾಅ. ೮-೧೭೬). ೨. ಅಬ್ಬುದು ಪಶ್ಚಿಮಾಬ್ಧಿಯೊಳ್ ತಂಬೆಳಗೊಂದೆ ಜೋಡೆ ನಲಿದಾಡೆ ಸಮುಜ್ಜ್ವಲ ಚಂದ್ರಮಂಡಲಂ (ಉದ್ಭಟ. ೧೦-೧೦೪). [ ತಣ್$_2$ + ಬೆಳಗು$_2$ ]

**ತಣ್ಬೆಳಗುವಣಿ** (ನಾ). ತಂಪಾದ ಬೆಳಕನ್ನು ಸೂಸುವ ಮಣಿ,–ರತ್ನ : ಅರಗಿಳಿಯೆಸಗುಂ ತಣ್ಬೆಳಗುವಣಿಯ ಪೇಟಿಯೊಳಿಂಬಾಗಿ ಮನಂಗೊಳಿಪ್ಪ ಮರಕತಮಣಿವೊಲ್ (ಉದ್ಭಟ. ೩-೨೫). [ ತಣ್ಬೆಳಗು + ಮಣಿ$_3$ ]

**ತಣ್ಪೊಲ** (ನಾ). ತಂಪಾದ ಹೊಲ : ತಣ್ಪೊಲಂ ಕಲ್ಮರಂ ಪೊರೆವ ನಾಡಲ್ಲಿ (ಕಾಲಂರ. ೩-೨೫). [ ತಣ್$_2$ + ಪೊಲ ]

**ತಣ್ಪೊಳೆ** (ನಾ). ತಂಪಾದ ಹೊಳೆ : ತಣ್ಣನೆಯ ನದಿ : ಅ ಸಿ ಯ ಳ ಯೌವನವನವುಂಟು ಲಾವಣ್ಯರಸದ ತಣ್ಪೊಳೆಯುಂಟು ಭಾವಾ (ಭರತ. ೯-೪೭) ; ಬೀಯೋಷಿಯದ ಬಯಲ ತಣ್ಪೊಳೆ ಆಸೋಪಸಿನ ದಡದಲ್ಲಿ ಚಳಿಗಾಲವನ್ ನೂಂಕೆ ಬಿಡಿಸುವನು (ಪಾರಸಿ. ೩೦-೭೯೨).

[ ತಣ್$_2$ + ಪೊಳೆ$_4$ (<ಪೊಟೆ$_1$) ]

**ತಣ್ಪೊಟ್ತು** (ನಾ). ತಂಪು ಹೊತ್ತು : ತಣ್ಪೊಟ್ಪ್ತುದುದು ತಳದರ್ಮದು ನುಣ್ಪುಸಲೆಗೆ ಹಂಸಮಿಥುನಂ (ಲೀಲಾಶ. ೫-೭೫). [ ತಣ್$_2$ + ಪೊಟ್ತು ]

**ತಣ್ಮಡು** (ನಾ). ತಂಪಾದ ನೀರಿನ ಮಡು; ತಣ್ಣೀರ ಕೊಳ: ಹಿಮವೃಂಡು ಬಾಟ್ಟಿ ತಣ್ಮಡುವಿನ ಪೂವೆ ಸುಟ್ಟಪುದು (ಅರ್ಧನೇ. ೪-೮೨) ; ಕರ್ಪೂರದ ಪುಳಿಲ್ ಪಗಿಲ್ತಲರ ಬಾಡಿನ ಸಣ್ಣ ಮಣಲ್ ಮನಕ್ಕೆ ಬಂದಿರೆ ಕೃತಕ ಪ್ರವಾಹಿನಿಯ ತಣ್ಮಡುವಂ[ಪಾಠಾಂ. ಳಲಂ] ಬಿಡದಿರ್ಪ ನಲ್ಲಳಂ (ವರ್ಧಪು. ೪-೭೩). [ ತಣ್$_2$ + ಮಡು$_2$ ]

**ತಣ್ಮಲೆ** (ಕ್ರಿ). ೧. (ಅಲಂ) ಹಿತವಾಗಿ ಪಸರಿಸು,–ಹರಡು,–ಆವರಿಸು,–ವ್ಯಾಪಿಸು : ಅರ್ಹತ್ಪದಮಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ (ಆದಿಪು. ೩-೫೭): ಕಂಪು ತ[ಪಾಠಾಂ.ಕ]ಣ್ಮಲೆಯೆ ಪೂತ ಸುರಯಿಯಿಂ (ಶಂಪಥಾ. ೩-೨೩) ; ಅರ್ಕನೆ ಸಸಿ ದಿವಸಮೆ ರಾತ್ರಿಯಾದುದೆನೆ ಕಲ್ಮಲೆಯೊಳ್ ವಿಸುಕದೆ ಶಾಂತರಸಂ ಮಾನಸದೊಳ್ ತಣ್ಮಲೆಯೆ ನೆಲಸಿದಂ ಯೋಗೀಂದ್ರಂ (ಚಂದ್ರಪು. ೧೧-೧೩) ; ಓರೊರ್ಮೆ ತಣ್ಮಲೆವ ಕರ್ಪೂರದ ಜಗಲಿಯೊಳ್ ಕರಮೆ ಕೊರಗಿದ ಶರೀರವಲ್ಲರಿಯ ನೀಡಾಡಿ (ವರ್ಧಪು. ೪-೫೮ ವ) ; ಸುತ್ತಿ ನಡೆ ನೋಟ್ಟಿ ದೇವರ ಮೊತ್ತಂ

ತಣ್ಮಲೆಯ ಘುಸೃಣಮಲಯಜರಸಮಂ ಬಿತ್ತರದಿಂ ಕಱದವುವಿದೆ ಮುತ್ತಿನ ಮಾಣಿಕದ ಲಂಬಣಂ ನುಣ್ಪೆಳಗಂ (ಅನಂಪು. ೫-೫೩) : ಸೇದೆಯಂ ನೂಂಕಿ ದೊಂದುಳಿಯಣ್ಮ ತಣ್ಮಲೆಯ (ಕಾಲೂರ. ೧೫೩-೨೨೫). ೨. (ಅಲಂ) ಹಿತವನ್ನು ಹೊಂದು ; ಸುಖಿಪಡು : ನೆಗಟ್ದೀ ಷಟ್ಖಂಡಮಂ ಸಾಧಿಸಿದೊಡೆ ಫಲವೇಂ ಭೋಗದಿಂ ಸಾಧ್ಯಮೇಂ . . . ಪಡೆವ ಶಾಶ್ವತ ಶ್ರೀಯನೆಂಬುಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯ ನೆಱಯ ನಿಶ್ಚೈಸಿದಂ ಸಾರ್ವಭೌಮಂ (ಆದಿಪು. ೬-೨೬) ; ಎರೆ ಪರಪುಷ್ಟ ಕೇಳಿಲೆ ಮಧುವ್ರತ ಕೇಳ್ . . . ನೆನೆಯುತಿರ್ಪುದು ಕೂರ್ಪುದು ಸೈರಿಸಿರ್ಪುದಗ್ಗಲಿಸಿದ ನಲ್ಮೆ ತಣ್ಮಲೆಯ ಬೆನ್ನನೆ ಪೋದಪೆಮೆಮ್ಮ ಸ್ವಾಮಿಯಾ (ಅಜಿಪು. ೬-೧೧೩); ಅಂತು ತಣ್ಮ[ಪಾಠಾಂ. ಣ್ಮೆ]ಲೆದು ನಲಿವ ಮನದೊಳ್ ತದೀಯ ವಿರಹೋಪಚಾರಿತ ಚೇಷ್ಟೆಗಳೆ ಮತ್ತಮವಿಚಳಂಗಳಾಗೆ (ವರ್ಧಪು. ೪-೭೩ ವ).

[ ತಣ್$_2$ + ಮಲೆ ? ]

**ತಣ್ಮಲೆಯೆಲರ್** (ನಾ). ಬೆಟ್ಟದ ತಂಗಾಳಿ: ತಣ್ಮಲೆಯೆಲರೊಳಲೆದುದಯ್ ಸಿಪಿಲೆವಕ್ಕಿಯ ಸಿಳ್ಳೆನಿಂಚರಂ (ಶ್ರೀರಾಮಾ. ೩೦೧-೮).

[ ತಣ್$_2$ + ಮಲೆ$_4$ + ಎಲರ್ ]

**ತಣ್ಮಳಲ್** (ನಾ). = ತಣ್ಬುಳಿಲ್$_1$ : ಭಾಸುರದ ಪೌಳಿಯಂಗಣದಲ್ಲಿ ತಣ್ಮಳಲ ಪೊನ್ನ ಜಗುಲಿಯನಾಗಿಸಿ (ನವಮೋ. ೨೨-೧೭).

[ ತಣ್$_2$ + ಮಳಲ್ (<ಮಣಲ್) ]

**ತ್ಮಣೆಯ್** (ನಾ). ತಂಪಾದ ದೇಹ ; ತಣ್ಣನೆಯ ಒಡಲು.

ತಣ್ಮೆಯ್ಯವೆಟ್ಟ=ಹಿಮಾಲಯ ಪರ್ವತ; ಹಿಮವಂತ: ತ್ಮಣೆಯ್ಯವೆಟ್ಟ ಮಗಳಣ್ಮ (ನಂದಿಮಾ. ೧೮-೧೫). [ ತಣ್$_2$ + ಮೆಯ್ ]

**ತಣ್ವಣ** (ನಾ). ವೀಣೆಯ ಧ್ವನಿ : "ತಣ್ವಣ [ಪಾಠಾಂ. ತಿತ್ರಣಂ, ತಿಣ್ಣಣಂ] ವೀಣೆಯ ಧ್ವನಿಯಕ್ಕು" (ಮಂಗರಾ. ೨೪-೮).

**ತಣ್ವಳ್ಳಿ** (ನಾ). ಒಂದು ಊರಿನ ಹೆಸರು : ವಡಗಣ್ಣಾ ಸೀಮೆ ಪೆರವಟಿ ಪಡುವಣ್ಣಾ ಸೀಮೆ ತಣ್ವಳ್ಳಿ ಗಾರಪಾಟಿ(ಎಇ. XXI, ೨೯-೧೭೪; 8 ನೆಯಶತ). [P ಇದು ಹೊನ್ನಾವರದ ಸಮೀಪದಲ್ಲಿರುವ 'ತುಂದೊಳ್ಳಿ' ಇರಬಹುದು.] [ ? + ಪಳ್ಳಿ$_1$ ]

**ತಣ್ಸಾಲಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ತೆ ಬನ್ದು ಕಾಯೂರ ಇಗ್ಗಲಿಯ ಅರಿಪುರ ಮೂಜೂರ ಸನ್ದಿನಲ್ಲಿ ತಣ್ಸಾಲಿಗಾಲ ಮೂಡಣ ಪೇರೊಟ್ಟೆಯಿಂ (ಎಕ. III, ನಂಜನ. ೧೩೯-೧೯ ; 916).

[ ತಣ್ಸಾಲಿ$_0$ + ಕಾಲ್$_2$ ]

**ತಣ್ಹೆ** (ನಾ). ತೃಷ್ಣೆ ; ವಿಷಯಲಾಲಸೆ : ತಣ್ಹೆಯರಣ್ಯಮಂ ತರಿದು ತೋರ್ದನರಿಯಟ್ಮಂಗಿಕದ ಧಮ್ಮಮಗ್ಗಂ (೧೪ವಿಂ. ೪೫-೭).

[ <ಪ್ರಾ. ತಣ್ಹಾ. / ಸಂ. ತೃಷ್ಣಾ ]

**ತತ** (ಗು). ೧. ವಿಸ್ತರಿಸಿದ ; ಬಿಚ್ಚಿದ ; ಹರಡಿದ ; ವ್ಯಾಪ್ತವಾದ : ವಿಳಸದ್ವಂದನಮಾಳೆಯಿಂ ತತಪತಾಕಾನೀಕದಿಂ ಕೀರ್ಣಪುಷ್ಪಳಸತ್ಸಂಗದಿ ನಂಗನಾಲಟಹ ವಾದ್ಯವ್ರಾತದಿಂ ಗೀತದಿಂ (ಪುಷ್ಪಪು. ೧೩-೧೧೮). (ನಾ). ೨. ವೀಣೆ ಮೊದಲಾದ ತಂತೀವಾದ್ಯ : "ತತವೆಂಬುದು ತಂತ್ರಿಯೊಳನ್ವಿತಂ" (ಪಸು ಕೋ. ೭೯-೨೫) ; ಅತಿಮೃದುರವದಾಯಿಗಳಂ ತತ ಘನ ಸುಷಿರಾವನದ್ಧ ವಾದ್ಯಂಗಳಂ (ಆದಿಪು. ೫-೩೫); ದಿವಿಜವಾದಕ ಕರಹತ ತತವಿತತಘನ ಸುಷಿರಾವನದ್ಧ ವಾದಿತ್ರಂ ಸಂಗೀತ ತೂರ್ಯಮಾಗೆ(ಶಾಂತಿಪು. ೧೦-೭೦ ವ) ; ತತವಿತತಾದಿ ವಾದ್ಯಪ್ರಸರಮೇಳನದಲಿ ಸೊಗಸಲಾಡುತ್ತ ಕೇಳಿಸಲು (ಬಸಪು. ೩೭-೨) ; ತಂತಿಯಂ ಕಟ್ಟಿ ನುಡಿಸುವ ವೀಣಾದಿಕವೇ ತತವೆನಿಸುವುದು (ವಿವೇಳ. ೨೩೭). ೩. ಗಾಳಿ ; ವಾಯು. ೪. ಭೇರಿ ಮೊದಲಾದ ಚರ್ಮವಾದ್ಯ : ಚರ್ಮತತ ನಿಮಿತ್ತ ಪುಷ್ಕರ ಭೇರೀ ಮೃದಂಗಾದಿ ಪ್ರಭವಂ ತತವೆಂಬುದು. (ಶಬ್ದ ಪ್ರ. ೨೪೩). [ ಸಂ. ]

**ತತಲೋಚನ** (ನಾ). ವಿಶಾಲವಾದ ಕಣ್ಣು : ವಿರಹಶಿಖಿ ಪ್ರತಪ್ತ ತರುಣೀ ತತಲೋಚನರೋಚಿಯಿಂ (ರಾಜಶೇ. ೭-೯೨). [ ತತ + ಲೋಚನ ]

**ತತಾತಪ**(ನಾ). ಹರಡಿದ ಬಿಸಿಲು: ಸುಳಿಗೊಳುತೆತ್ತೆ ಸುಟ್ಟುರೆ ಧರಾರಜಮಂ ಕೆಳಗೊಂದೆ ದಂಡದಂತುಳಿದ ತತಾತಪಂ ಬಳಸಿ ಪಲ್ಲವದಂತಿರೆ . . . ಬಟ್ಟ ಬಲ್ಮುಗಿಲ್ಪುಳಿದುದು ಕಾಲಭೂಪತಿಯ ಪೀಲಿಯ ಸತ್ತಿಗೆಯೊಂದು ಲೀಲೆಯಿಂ (ರಾಜಶೇ. ೮-೯೫). [ತತ + ಆತಪ ]

**ತತಿ$_1$, ತತು, ತತುವು** (ನಾ). ೧. (ಮುಖ್ಯವಾಗಿ ಕೃಷಿಗೆ ಸಂಬಂಧಿಸಿದಂತೆ) ಸರಿಯಾದ ಸಮಯ ; ಹದವಾದ ಕಾಲ: ತತಿ ಮೀರದ ಹಾಗೆ ರಾಗೀ ಅಗೆ ಹೊಯ್ಯು (ಸ್ಯಾಂಡರ್. ೨೮) ; ಗಂಗಿ ಹತ್ತಿ ಕೆಂಪುಹತ್ತಿಯನ್ನು ಮೃಗಶಿರ ಆರದ್ರಿ ಪುಷ್ಯ ಮಳೆಗಳಲ್ಲಿ . . . ಬಿತ್ತಬೇಕು. ಈ ಹತ್ತಿಗೆ ಇದೇ ತತಿಯು (ಕೃಷಿಪ್ರ. ೭೬) ; ತತಿಗೆ ಸರಿಯಾಗಿ ಒಂದು ಮಳೆ ಹೊಡೀತು ಅಂದರ ಹದಿನೈದು ಚೀಲ ಕಾಳ ಬರತೈತಿ (ಜಾಬಂ. ೧೦). **ತತು** : ೨. ಸುಗ್ಗಿಯ ಕಾಲ; ಸುಗ್ಗಿ : ಈಗ ಮಾವಿನ ಹಣ್ಣಿನ ತತು (ಕಂಠ). **ತತುವು**: ೧. (ಶಿ). [ ದೇ.॥ ತಮಿ. ತೆಲು. ತತಿ ]

**ತತಿ$_2$** (ನಾ). ಗುಂಪು ; ಸಮೂಹ ; ಶ್ರೇಣಿ : ಸಕಲಂ ತತಿ ವ್ರಾತಂ . . . ರಾಶಿ ಚಯ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧) ; ಕಳಹಂಸ ಕೋಮಲ ಸ್ವರತತಿಯಿಂ ಕಳಾಪಿಗಳ ಚಾಪಳ ನಿಸ್ಸ್ವನದಿಂ ಬಹುಸಾರಸ ಪ್ರಭಾಸುರ ರುತಿರಾಜಿಯಿಂದೆ ವಿಪುಳಾನದಿ ನಾದಮಯಂ ನಿರಂತರಂ (ಕುಸುಮಾ. ೧-೮೨) ; ಸುಧೆಯು ಜನಿಸಲು , ಯಾ ವಿಬುಧರ ತತಿಗೆಱದಮರರ ಮಾಡಿದ್ದೆ ನೀನು (ಸಂಥಷ. ೮-೯೦). [ ಸಂ. ]

**ತತು** 'ತತಿ$_1$' ನೋ.

**ತತುಕ್ಷಣ$_1$, ತಕ್ಷಣ$_1$** (ನಾ). ಆ ಕ್ಷಣ ; ಅದೇ ಸಮಯ : ಮುತ್ತದ ಬೂದಿಯಜೀಲೆ ತಚ್ಚತುರ್ಗುಣಮನೆ ಕೊಂಡದನಟ್ಟು ಪೂಸಿದೊಡಂ ತತುಕ್ಷಣದೊಳೆ ಮಾಣಿಸುಗುಂ ಗುದಾಂಕುರದೇಟ್ಗಿಯಂ (ಲೋಕೋಪ. ೯-೧೪೩); ಸದುಗುರುವಿನಂಘ್ರಿಸ್ಮರಣೆ ಜನಿಸಲು ಹಿಂಗುವುದು ಗರವದು ತತುಕ್ಷಣಕೆ (ನಿಧಾಗ. ೪-೧೫-೧೫). **ತಕ್ಷಣ$_1$** : ತಕ್ಷಣದೊಳರಸನ ತಾಗಿ ದ್ರೋಣನ ಕಣಕಿ . . . ಸೆಣಸಿ ನಿಂದನು (ಕುಮಾರವ್ಯಾ. ೧೬-೪೮).

[ <ಸಂ. ತತ್ ಕ್ಷಣ ]

**ತತುಕ್ಷಣ$_2$, ತಕ್ಷಣ$_2$, ತಚ್ಚಣ** (ಅ). ಆ ಕ್ಷಣದಲ್ಲಿ; ಆಗಲೇ; ಕೂಡಲೇ: ಆ ತತುಕ್ಷಣವೊಯ್ದುದಂ ಸಂಪ್ರೀತಿಯೊಳೆ ಮಾಡಿದಳು ಪಾಕವಂ (ಬಸಪು. ೨೪-೨೬) ; ಆ ತತುಕ್ಷಣ ಧನುವ ಬಿಸುಟು ವಿಧೂತರಿಪುಬಲ ಪಾರ್ಥನಿದ್ದನು ಹೊತ್ತ ದುಗುಡದಲಿ (ಕುಮಾರವ್ಯಾ. ೩-೬೩) : ಪೂತುರೆನುತಂಗದನು ಪುಟನೆಗೆದಾ ತತೂ [ ತು ] ಕ್ಷಣ ಖಳನ ಮುಂದಲೆಯಾತು ಒಡಿದರೆ ಕೊರಳು ಸಿಕ್ಕಿತು ಕೈಗೆ ಹಾರದಲಿ (ಲಾಶಿರಾ. ೨೮-೫೪). **ತಕ್ಷಣ$_2$** : ಅವನು ತಕ್ಷಣವೆ ಪ್ರಶ್ನಿಸಿದನು (ಪುನರು. ೩೦೧). **ತಚ್ಚಣ** : "ತಚ್ಚಣ – ತತ್ಕ್ಷಣ = ಆಗಲೇ" (ಶಬ್ದಕೋ. ೦೬).

[ <ತತುಕ್ಷಣ$_1$ ]

**ತತುವ, ತತ್ತುವ** (ನಾ). = ತತ್ತ್ವ : ಕಾಯಸೌಖ್ಯಕೆ ಕಾಮಸುಖದ ವಿಡಾಯ ತತುವಕೆ ವೇಡೆಗೊಂಡು ನವಾಯಿಯಲಿ ದರ್ಗತಿಗೆ ದುವ್ವಾಳಿಸುವನಲ್ಲೆಂದ (ಕುಮಾರವ್ಯಾ. ೮-೩೧). 'ತತುವಮಾರ್ಗ' ಪರ್ಯಾ. **ತತ್ತುವ** : (ಶಿ). [<ಸಂ. ತತ್ತ್ವ ]

**ತತುವಮಾರ್ಗ** (ನಾ). ತತ್ತ್ವದ ಹಾದಿ ; ತತ್ತ್ವಮಾರ್ಗ : ಶ್ರುತಿಕಥಾ ಭಾಗ ಪದ್ಯ . . . ತತುವಮಾರ್ಗದಿ ನುಡಿವ ಬಲು ಉನ್ನತ ಮಹಿಮರಾ ನೋಡಿದೆ (ತೀರ್ಥಮ. ೬೨). [ ತತುವ + ಮಾರ್ಗ ]

**ತತುವು** 'ತತಿ$_1$' ನೋ.

ತಮ್ಮಂದಿರ್, ತಮ್ಮಂದಿರು, ತಮ್ಮಗಳು, ತಮ್ಮದಿರು, ತಮ್ಮರು (ಬಹುವ): ತಮ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತಿಕಂ ಬಳೆದು (ಮಲ್ಲಿ.ಪು. ೧೧೬-೧೭); ಈ ತಮ್ಮಂದಿರೊಳಿಂತಿಂತು ಕಟ್ಟುವರ್ಪುದು ಪೆಂಪೇ (ಆದಿಪು. ೧೪-೧೩೮); ತಮ್ಮಂದಿರ್ ತಾಯಿಂದಿರ್ ಅಣ್ಣಂದಿರ್ ತಂದೆವಿರ್ (ಭಾಷಾಭೂ. ೪೩ ವಾರ); ನಿನಗೆ ಎಷ್ಟು ಜನ ತಮ್ಮಂದಿರು? (ರೂಢಿ): ಬಾಳಿನಲಿ ಕೈಹಿಡಿದು ನಡೆಸಿದಿರಿ ಜೊತೆಯು ಅಣ್ಣಗಳನು ತಮ್ಮಗಳಿಗೆ ಕಂಡದ್ದು ತೋರಿ ತೆರೆಸಿದಿರಿ ಕಣ್ಣುಗಳನು (ಹೃದಯ. ೭೬-೧೭); ಶಿವಶಿವಾ ಕೌರವನ ತಮ್ಮದಿರವಗಡಿಸಿದರು. (ಕುಮಾ.ಭಾ. ೧೩-೦೯); ಧರ್ಮಸುತ ಸಭೆಯೊಳೊಪ್ಪಿದಂ ತಮ್ಮರೊಡನೆ (ತುರಂಗ. ೨೩-೧).

[ದೇ.೫ ತಮಿ. ತಮ್ಬಿ; ಮಲ. ತಮ್ಬಿ, ತಮ್ಬಾನ್; ತುಳು. ತಮ್ಮಯ್ಯ, ತಮ್ಮೆಯ; ಕೊಡ. ತಂಬಿ, ತಮ್ಮಣೇ; ತೆಲು. ತಮ್ಮುಡು; ಗೊಂಡಿ. ತಮ್ಮುರ್; ಕುಇ. ತಂಬೆಸ]

**ತಮ್ಮಂಗವಮ** (?) (ನಾ). (?) : ತಪ್ಪು ತಲೆಯ ದಂಡ ಉಂಡಿಗೆ ಹಡರಹನು ಕೊಂಬಂಣ ಕೊಡಿದೆ ತಂಮಂಗವಮ ಹಿಡಿವೆ (ಎಕ. IX, ಕಾನಕಾ. ೪೧-೦೩; 1300). [?]

**ತಮ್ಮಗೌಡ** (ನಾ). ಒಬ್ಬಾತನ ಹೆಸರು : ರೇವಂತ ನಡೆಗೌಡ ಸುರಿತಂಣ ಪಿರಿಯ ತಮ್ಮಗೌಡರು (ಎಕ. VII, ಶಿವಮೊ. ೧೧೯-೧೭ : 950).

[ತಮ್ಮ + ಗೌಡ$_1$ (<ಗಾವುಂಡ)]

**ತಮ್ಮಚಿ** (ನಾ). ಒಂದು ಊರಿನ ಹೆಸರು (?) :

**ತಮ್ಮಚಿಯ ಮುದ್ರೆ** = ನಾಣ್ಯಗಳ ಮೇಲೆ ಒತ್ತುತ್ತಿದ್ದ ಒಂದು ಬಗೆಯ ಮುದ್ರೆ : ಕುಳಿಯ ಸುಂಕವ ತಮ್ಮಚಿ[ಯ] ಮುದ್ರೆಯ ಪೊತ್ತ ದೊಳ್ × × × ಕೆ ತಿಂಗಳಿಗೊಂದು ಗದ್ಯಾಣ ಪೊನ್ನುಮಂ ತಮ್ಮಚಿಯ ಮುದ್ರೆಯ ಮೂಱುವೀಸದ ಹತ್ತಡಕೆಯು . . . ಲೆಕ್ಕಂ ಮಾಡಿ ಕುಡುವರ್ (ಸೌಇಇ. XI-ii, ೧೫೦-೩೨ : 1102). [?]

**ತಮ್ಮಟ$_1$** 'ತಂಬಟ' ನೋ.

**ತಮ್ಮಟ$_2$, ತಮ್ಮಡ$_1$** (ನಾ). ಒಂದು ಬಗೆಯ ಬಳ್ಳಿ: (ಮೃಶಿಗ. ೬೨-೧೨೬೪). **ತಮ್ಮಡ$_1$** : 'ತಮ್ಮಡವಳ್ಳಿ' ಪರಾ. [ದೇ.೫ ತಮಿ. ತಮ್ಮತ]

**ತಮ್ಮಟೆ** 'ತಂಬಟ' ನೋ.

**ತಮ್ಮಟ್ಟೆ** 'ತಂಬಟ' ನೋ.

**ತಮ್ಮಡ$_1$** 'ತಮ್ಮಟ$_2$' ನೋ.

**ತಮ್ಮಡ$_2$** (ನಾ). ತಡೆದುದು ; ಅಡ್ಡಿ ; ವಿಘ್ನ : "ತಮ್ಮಡಂ=ತಡೆದುದು" (ಶಮದ. ಪರಿ. ೨). [?./ತಮಿ. ತಮ್ಬಿಟು]

**ತಮ್ಮಡವಳ್ಳಿ** (ನಾ). = ತಮ್ಮಟ$_2$ : "ಕ್ಷಾರಕಿಯೆನಲ್ಕೆ ತಮ್ಮಡ[ಪಾಠಾಂ. ಡಿ] ವಳ್ಳಿ[ಪಾಠಾಂ. ಲ್ಲಿ]"(ಮಂಗರಾ. ೪೪-೫೫). [ತಮ್ಮಡ$_1$ (<ತಮ್ಮಟ$_2$)+ಬಳ್ಳಿ]

**ತಮ್ಮಡಿ$_1$, ತಮಡಿ** (ನಾ). ೧. ಗುರು; ಆಚಾರ್ಯ : ಸ್ವಸ್ತಿ ಶ್ರೀಭಟ್ಟಾರಕ ಥಿಟ್ಟಗಪಾನದಾ ತಮ್ಮಡಿಗಳ ಶಿಷ್ಯರ್ (ಎಕ. II, ೧೯-೧ : ಸು. 700); ಆಟ್ಟುಜ ತಮ್ಮಡಿಗಳ . . . ನಿಸಿಧಿಗೆ (ಎಕ. II, ೧೫-೦ : ಸು. 800); ಶ್ರೀಸಿಂಹನನ್ದಿ ತಮ್ಮಡಿಗಳ್ (ಕೊಪ್ಪಳ. ೭-೦ ; 1010) : ಆದಿಯೊಳು ಕಂಡ ನವಣೆಯ ಕೆಯ್ಯ ತಮ್ಮಡಿಯ ಹೆಸರಲೊಂದು . . . ಗುರು ಮೂರ್ತಿಯಲಿ ಬಳಿಕ್ಕೊಂದಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿ ದನು (ಸಿದ್ಧರಾ. ೩-೪೪). ೨. ಒಡೆಯ ; ಯಜಮಾನ : ತಮ್ಮಡಿಗೆ ಪೊಚಿವ ಶ್ವಾನಂ ದಮ್ಮ[ಪಾಠಾಂ. ವರ್ಮ, ಧರ್ಮ]ಯನೇಕೆ ಬಾಚಲಿ ತ್ತಪುದು ಎಂಬಂತೆ (ಶಂಕಶಂ. ೧೭೮-೧೫). ೩. ಪೂಜಾರಿ ; ಅರ್ಚಕ : "ದೇವಾಜೀವಃ, ದೇವಲ" (ನಾಚಿರಾ. ೬) ; ಪೂಜಿಸುವ ತಮ್ಮಡಿ ಲಿಂಗ ವಾದುದ ಕಂಡೆ (ಮೋಳಿಮಾ. ೨೬೭-೮೯) ; ಕವಾಟಂ ಬಂಧಿಸಿ ಪಿರಿದುಂ ಬೀಯಗವುನಿಕ್ಕಿದರ್ ತಮ್ಮಡಿಗಳ್ (ಉದ್ಭಟ. ೧೧-೫೮) ; ಕಣ್ಣಪನ ಮನದ ವಿರಳಪ್ರಿಯಭಕ್ತಿಯಂ ಮುಗ್ಧಸ್ವಭಾವವನು ಭವಹರಂ ತಾಂ ತಮ್ಮಡಿಗೆ ತೋಱುವೆನೆನುತ (ಬಸವು. ೦೮-೪೫) : ಶ್ರೀಸೋಮೇಸ್ವರನ ತಮ್ಮಡಿ ಕೇತಜೀಯ (ಎಕ. XI, ಹಿರಿಯೂ. ೫೨-೩೬; 1428): ಗುಡಿಯ ಗೋಪುರಮಂ ಕೆಡಪಿ ತಮ್ಮಡಿಯಂ ಜಡಿಯಲು (ವೃಷವಿ. ೩೬-೪ ವ) ; ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ತಮ್ಮಡಿ ಇವರ ಮಾತುಗಳನ್ನು ಕೇಳಿ ಹತ್ತಿರ ಬಂದು (ನಗಗ. ೫೬) ; ತನಗೇ ಇಲ್ಲದ ಮಾರಿ ತಮ್ಮಡಿಗೆ ವರ ಕೊಟ್ಟೀತೇ? (ಗಾದೆ). ೪. ಋಷಿ ; ಮುನಿ : ಇದೇನು ತಮ್ಮಡಿ ನಿನಗೆ ತಪದಲಿ ಖಡ್ಗ ವೇಕೆ (ಕುಮಾ.ಭಾ. ೬-೨) ; ಜಡೆಯ ಹೊತ್ತುದೊ ಸಿಡಿಲು ಶಿವಶಿವ ಪಡಬ ತಮ್ಮಡಿ ಯಾದನೋ (ಕೌಶಿರಾ. ೩-೧೩). **ತಮಡಿ** : ೩. ಮನಪ ಮಡಿಯಾಗಿಡಲು ದಮ್ಮಡಿಯ ತಮ್ಮಡಿ ನಮಗೆ ಬೇಕೀತನಿಗೊ ನಲ್ಕೊರೆಯ ತಮಡಿ (ಗಣೇಶ. ೭೦-೫). [←ತೆಲು. ತಮ್ಮಡಿ]

**ತಮ್ಮಡಿ$_2$** 'ತಮ್ಮಡೆ' ನೋ.

**ತಮ್ಮಡೆ, ತಮ್ಮಡಿ$_2$** (ನಾ). (?) : ಆ ಮುಗುಳನಹಳ್ಳಿಯಲ್ಲಿ ತಮ್ಮಡೆಯಾದಡೆ ಅಣ್ಣನೊಡವೆ ತಮ್ಮಂಗೆ ತಮ್ಮನೊಡವೆಯಣ್ಣಂಗೆ (ಎಕ.IX, ಹನ್ನಹ. ೭೩-೩೧; 1318). **ತಮ್ಮಡಿ$_2$**: ಅನ್ಯಾರೂ ಇಲ್ಲದಿದ್ದಡೆ ಆ ಅಪುತ್ರಿಕದ ನಕಟಿ ದೇವಾಲ್ಯ ಕಿಕ್ಕುವದು ತಮ್ಮಡಿ ಎಂಬ ವಾರ್ತೆ ಇಲ್ಲವೊಡವತಲೆ (ಎಕ. IX, ಹನ್ನಹ. ೭೩-೩೬ ; 1318). [?]

**ತಮ್ಮಣಿ** 'ತಮ್ಮಣೆ' ನೋ.

**ತಮ್ಮಣಿಗೊಳಿಸು** (ಕ್ರಿ). ಸಮಾಧಾನಪಡಿಸು ; ಶಾಂತಗೊಳಿಸು : ನಾನೇ ತಪ್ಪನ್ನು ಒಪ್ಪಿಕೊಂಡಂತಾಗಿ ಅವಳ ಬೇಗುದಿಯ ಮನಸ್ಸನ್ನು ತಮ್ಮಣಿ ಗೊಳಿಸಿದಂತೆಯಾಗಿತ್ತು (ಹೇಮಂತ. ೨೭). [ತಮ್ಮಣಿಗೊಳು + – ಇಸು$_3$]

**ತಮ್ಮಣಿಗೊಳು, ತಮ್ಮಣಿಗೊಳ್ಳು** (ಕ್ರಿ). ಉಪಶಮನಗೊಳ್ಳು; ಶಾಂತತೆ ಹೊಂದು; ಸಮಾಧಾನವಾಗು. 'ತಮ್ಮಣಿಗೊಳಿಸು' ಪರಾ. **ತಮ್ಮಣಿಗೊಳ್ಳು**: ನಟರಾಜನ ಭಾವಸಮಾಧಿಯು ಒಂದಿಷ್ಟು ತಮ್ಮಣಿಗೊಂಡ ಬಳಿಕ ನಸು ಕಣ್ತೆರೆದು ನಿಟ್ಟಿಸಿದರೆ ಮುಂದೆ ನಿಂತ ಗೌರಿ ಮೊರೆಯಿಡುತ್ತಿದ್ದಾಳೆ (ಕಾಳಿಬ. ೧). [ತಮ್ಮಣಿ (<ತಮ್ಮಣೆ) + ಕೊಳು (<ಕೊಳ್$_1$)]

**ತಮ್ಮಣಿಗೊಳ್ಳು** 'ತಮ್ಮಣಿಗೊಳು' ನೋ.

**ತಮ್ಮಣೆ, ತಮಣೆ, ತಮ್ಮಣಿ** (ನಾ). ಶಾಂತಿ; ಸಮಾಧಾನ; ಉಪಶಮನ: ದೇಶದಲ್ಲಿ ತಮ್ಮಣೆ (ಶಾಂತಿ) ಯಿರಲಿಲ್ಲ (ಅಕ್ಕರ. ೦೪೦). **ತಮಣೆ** : ಶಾನಾಗ ತಣಿಯದೆ ಯಾರು ಏನೆಂದರು ತಮಣೆಗೆ ಬರುವುದೆ ಗೋಳು (ಇಂಚಾಪ. ೫೦-೪೪). **ತಮ್ಮಣಿ** : 'ತಮ್ಮಣಿಗೊಳಿಸು', 'ತಮ್ಮಣಿಗೊಳು' ಪರಾ.

**ತಮ್ಮಣಿಯಾಗು** = ಶಮನವಾಗು; ಶಾಂತವಾಗು : ಇವರ ದಂಗೆಗಳು ತಮ್ಮಣಿಯಾದವು (ಇಂಗ್ಲಂಡ. ೨೦೦). [?./ಪ್ರಾ. ಥಂಭಣ./ಸಂ. ಸ್ತಂಭನ]

**ತಮ್ಮತು** 'ತನತ್ತು' ಪರಾ.

**ತಮ್ಮದು** 'ತನತ್ತು' ಪರಾ.

**ತಮ್ಮಲೋಪಾದಿ** (ನಾ). (?) : ಸತ್ತಿಮಂಗಲದ ಸಾಮಿಯ ಸಮ್ಮಸ್ದಂ ಮಾರಯ್ಯನುಂ ಪುಣಿಸೆಯಮ್ಮನುವಿಟ್ಟು ತಮ್ಮಲೋಪಾದಿಗೊಟ್ಟರ್ (ಎಕ. IX, ಹೊಸಕೋ. ೧೧೧-೭ ; 997). [?]

**ತಮ್ಮಿನುಗ** (ನಾ). ತಂಪಾದ ಬೆಳಕಂ ಅಥವಾ ಕಾಂತಿಯುಳ್ಳವನಂ; ಚಂದ್ರ : ಕೆಂಗದಿರ ತಮ್ಮಿನುಗ ಮರಗೂಳ (ಮಲ್ಲಾರಿ. ೨-೪೧).

[ತಂ$_1$ (<ತಣ್$_2$) + ಮಿನುಗು$_2$ + – ಅ$_7$]

**ತಮ್ಮಿಸು** 'ತಣ್ಪಿಸು' ನೋ.

**ತಮ್ಮುಟುಕಾಐ** (ನಾ). ತಮ್ಮಟೆ ಬಾರಿಸುವವನು : 'ಅಮೃತಪಡಿ ನಂದಾ ದೀಪ್ತಿ ನೈವೇದ್ಯ ಸ್ಥಾನಿಕ ಹಸಟು ತಂಮುಟುಕಾಐರಿಗೆ ಸಂದು ಬಂದು (ಎಕ. VIII, ಸೊರಬ. ೩೭೯-೧೯ ; 1533).

[ತಮ್ಮುಟು$_0$ (<ತಂಬಟ) + – ಕಾಐ]

**ತಮ್ಮುತು** 'ತನತ್ತು' ಪರಾ.

**ತಮ್ಮುತ್ತು** 'ತನತ್ತು' ಪರಾ.

**ತಮ್ಮುಳಿ** (ನಾ). ಒಬ್ಬಾತನ ಹೆಸರು (?) : ಬಾಗೆಯೂರ ಬಲ್ಲಹನೇೞ್ ನೊಳ್ಳಿಯಾನ್ ವೈರಿಗಳ್ ಸಮಪದರುಳ್ ಕೊಪ್ಪುಳಪೂರಬಾಳಿಯೊಳ್ವೊಣ್ಣ ದಿಕ್ಕಿಜ್ಜಿಯ ತಮ್ಮುಳಿ ಪಡೆಯುಳಿಱಿದು ಸತ್ತನ್ (ಎಕ. XVI, ತುರುಕೊ. ೯೩-೧೪.; ಸು. 780). [ ? ]

**ತಮ್ಮೆ** (ನಾ). ೧. ಕಿವಿಯ ಹಾಲೆ, ಮೂಗಿನ ತುದಿ ಮುಂತಾದ ಮೂಳೆಯಿರದ ಸ್ಥಳ. ೨. (ಕುದುರೆ, ದನ ಮುಂತಾದುವುಗಳನ್ನು ಕಟ್ಟಿ ಹಾಕಲು ಬಳಸುವ) ಹಗ್ಗದ ಕುಣಿಕೆ. ೩. ದನಗಳ ಗಂಗೆದೊಗಲು : (ಕಿ). [ ದೇ.ಶ: ತೆಲು. ತಮ್ಮೆ ]

**ತಮ್ಮೆಗಿಡ** (ನಾ). ೧. ಒಂದು ಬಗೆಯ ಗಿಡ ; "ಉದ್ದಾಲಕ" (ಶಂಡಿಕ). ೨. ಒಂದು ಬಗೆಯ ಪೊದೆ. P ಇದರ ಬೇರನ್ನು ಔಷಧಿಗಾಗಿ ಉಪಯೋಗಿಸುತ್ತಾರೆ. [ ತಮ್ಮೆ₀ + ಗಿಡ (<ಗಿಡು) ]

**ತಯಾರಿ** 'ತಯಾರು' ನೋ.

**ತಯಾರಿಕೆ** (ನಾ). ೧. ಅಣಿಮಾಡುವಿಕೆ ; ಸಿದ್ಧಪಡಿಸುವಿಕೆ : ಅಜಯ . . . ಬಾಂಬ್ ತಯಾರಿಕೆಯ ಕೆಲಸದಲ್ಲಿ ನಿರತನಾಗುತ್ತಿದ್ದ (ಅಕ್ಕಾಹ. ೧೩೮); ಉಪಕರಣಗಳ ತಯಾರಿಕೆಯ ಹಕ್ಕನ್ನು ತಮಗೆ ವರ್ಗಾಯಿಸ ಬೇಕೆಂದು ಬೇಡಿಕೆ ಬಂದಿತು (ಸಸ್ಕಳ. ೯೪). ೨. ತಯಾರಾದ ವಸ್ತು : ಇದು ಟಾಟಾ ಕಂಪನಿಯ ತಯಾರಿಕೆ (ರೂಢಿ). [ ತಯಾರು + – ಇಕೆ ]

**ತಯಾರಿಸು** (ಕ್ರಿ). ಸಿದ್ಧಪಡಿಸು ; ಸಜ್ಜುಗೊಳಿಸು : ದೊಡ್ಡ ಒಲೆಯಾದರೆ ಯಾವುದೇ ಅಡುಗೆಯನ್ನೂ ಅದರಲ್ಲಿ ತಯಾರಿಸಬಹುದು (ಅಡುಸೌ. ೦೭); ಒಂದು ಕಾವಡಿಯನ್ನು ತಯಾರಿಸಿ ಹೊರಟನು (ಸುಧಾ. ೫೭); ಚಹಾ ತಯಾರಿಸಿಕೊ (ಮಹಾಕ್ಕಾ. ೦೪). [ ತಯಾರು + – ಇಸು ]

**ತಯಾರು**, ತಯಾರಿ, ತಯ್ಯಾರಿ (ನಾ). ಸಿದ್ಧತೆ ; ಸಿದ್ಧಪಡಿಸುವಿಕೆ ; ಏರ್ಪಾಡು ; ಸಜ್ಜು ; ಅಣಿ. **ತಯಾರಿ** : ಇನ್ನೊಂದು ಗ್ಲಾಸು ಎತ್ತಿ ಕುಡಿಯುವ ತಯಾರಿಯಲ್ಲಿದ್ದರು (ದೀಪಹ. I, ೦೫೯). **ತಯ್ಯಾರಿ** : ಮೊದಲು ಚಹಾ ಫಳಾರದ ತಯ್ಯಾರಿ ನಡೀಲಿ (ಧನಂಜ. ೫೭).

**ತಯಾರಾಗು** = ೧. ಸಿದ್ಧವಾಗು ; ಅಣಿಯಾಗು : ಸಂಗಡಿಗರೊಡನೆ ತಯಾರಾಗಿ ಬನ್ನಿರಿ (ನಡದಾ. I, ೪೩೮); ಅವಳು ತಿರುಗಿ ಹೊಡೆಯಲು ತಯಾರಾಗುವವರೆಗೂ ಹೊಡೆಯುತ್ತಿರುವುದೇ ಮೇಲು (ಹುಚ್ಚುಹು. ೦೫). ೨. ನಿರ್ಮಾಣವಾಗು ; ಉತ್ಪನ್ನವಾಗು : ಭ್ರೂಣವು ತಯಾರಾಗುವುದು (ಸಸ್ಕಳ. ೦೮). **ತಯಾರುಮಾಡಿಸು, ತಯ್ಯಾರುಮಾಡಿಸು**=ಸಿದ್ಧವಾಗುವಂತೆ ಮಾಡು ; ರಚಿಸುವಂತೆ ಮಾಡು ; ನಿರ್ಮಾಣಮಾಡಿಸು : ಬೆಳೆದು ಬದಲಾಯಿಸುತ್ತಿರುವ ಕನ್ನಡಕ್ಕೆ ತಕ್ಕ ವ್ಯಾಕರಣವೊಂದನ್ನು ತಯಾರುಮಾಡಿಸಿಕೊಡುವ ಕೆಲಸವು ನಮ್ಮ ವಿದ್ಯಾಪ್ರಚಾರ ಇಲಾಖೆಯವರ ದೃಷ್ಟಿಯಲ್ಲಿದೆ (ಸಾಹಿಕ. ೫೮); ಕೋಟೆಯನ್ನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗೆಸಿ ತಯ್ಯಾರುಮಾಡಿಸಿ (ರಾಜೇಂದ್ರ. ೨). **ತಯಾರುಮಾಡು** = ೧. ಸಿದ್ಧಮಾಡು; ಸಜ್ಜುಮಾಡು ; ಅಣಿಗೊಳಿಸು : ಶ್ರೀಪಾದರಾಜರು ದ್ವೈತಮತ ಪ್ರಚಾರಮಾಡಲು . . . ಭಾಗವತರ ತಂಡವೊಂದನ್ನು ತಯಾರು ಮಾಡಿದರು (ಜಗದಾ. ೮೧); ಮೈಸೂರಿನಿಂದಲೇ ತಯಾರುಮಾಡಿ ತಂದಿದ್ದ ಚಿರೋಟಗಳನ್ನೂ . . . ಎಲ್ಲರಿಗೂ ಹಂಚಿದರು (ಮೂಲಾನ. ೦೨೩). ೨. ಉತ್ಪಾದಿಸು ; ಉತ್ಪನ್ನಮಾಡು : ಇಂತಹವರು ಇಲ್ಲಿಯೇ, ಹೀಗೆಯೇ ಅದನ್ನು ತಯಾರುಮಾಡಿ ಇಂಥವರ ಮೂಲಕವೇ ಮಾರಿರುವರೆಂಬುದು ತಿಳಿಯದು (ಹಡಪ್ಪ. ೧೧).

[ ←ಹಿಂ. ಮರಾ. ತಯಾರ್, ತಯಾರೀ, ತಯ್ಯಾರ್, ತೈಯಾರೀ ; ಪಾರ. ತಯ್ಯಾರ್, ತಯ್ಯಾರೀ ; ಅರ. ತೈಯಾರ್ ]

**ತಯಿಮಾಸ** 'ತ್ರೈಮಾಸ' ನೋ.

**ತಯ್ಯಾನ** (ನಾ). (?) : ಸಡಗರದಿ ಬಹರಗ್ರ ವೈಮಾನ ತಯ್ಯಾನ ತುಡುಕು ತಿಹವೇಣ್ಣಿಸೆಯ ಸಿಂಗರದ ಭಂಗರದೊಳ್ಪಿದೆ ಮಧುಬಲಿ ಬಂಧನ (ಚಿಕಮು. ೪೭-೨೯). [ ? ]

**ತಯ್ಯಾರಿ** 'ತಯಾರು' ನೋ.

**ತರ್**, ತರು₁ (ಕ್ರಿ). ತಂದ (ಭೂತಕೃ), ತಂದು (ಭೂತನ್ಯೂ), ತರ್ಪ, ತಹ₁, ತಾಪ₁ (ವರ್ತಕೃ), ತಾ₁, ತಾರ್ಪ (ವಿಧ್ಯರ್ಥ). ೧. ತೆಗೆದುಕೊಂಡು ಬರು: ಪದಿಂಬರ್ ತರ್ಪ ಪೂಱಿಯ ನೊರ್ವನೆ ತರ್ಪಂ (ವಡ್ಡಾರಾ. ೭೭-೪); ಪೇರಡವಿಯೊಳ್ ಪಣ್ಫಲಂಗಳ ನಱಸಿ ತನ್ನಿಮೆಂದು ಪೇೞ್ವುದುಂ (ಧರ್ಮಾಮೃ. ೨-೧೮೩); ಕಾರಂ ತಾರರ್ ; ಬಾರಂ ಬಾರರ್ (ಛಾಪಾಠೂ. ೨೨೭ ಉದಾ); ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡಿಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೧೧-೧); ಹೊಳಲ ಹೊಱಸೂಲದಲಿ ರಿಪುಗಳ ಸೆಳಸುವೆನು ತಾ ವೀಳೆಯುವನು (ಕುವ್ಯಾಭೀ. ೧-೭). ೨. ಕರೆತರು ; ಕರೆದುಕೊಂಡು ಬರು : ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ (ಶವಿರಾ. ೨-೦೨೮); ನಾಳಿನೋಲಗದೊಳ್ ತಂದು ಕಾಣಿಸು (ಪಂಪಭಾ. ೯-೨೮ ವ); ಆಕೆಯಂ ತರ್ಪುದನುಱಿಯೆ ಬಟ್ಟೆಕ್ಕಿಲ್ಲ ಬೇಱೊಂದುಪಾಯಂ (ಕಾದಂಪೂ. ೬೫೯); ಅಪ್ಸರಗಣಿಕೆಯರು ಕೋಮಳನ ತಂದರು ವಾಸವನ ಸಿಂಹಾಸನದ ಹೊರೆಗೆ (ಕುವ್ಯಾದ್ರೋ. ೬-೬೩); ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಸಾನಿರುದ್ಧನ ತಹೆನು (ಜೋಹಕ. ೩೦-೧೧); ನಾಲ್ಕೆಂಟು ದಿನದೊಳು ಕಂತುಸನ್ನಿಭನ ನಾ ತಹೆನು (ಕಂನವಿ. ೯-೦೯೩). ೩. ಕೊಡು ; ನೀಡು ; ಚಿಂತಿಸದಿರ್ ತಾ ತೋಱು ನಿನ್ನೀ ಬರೆದ ಪಟಮನುತ್ಪಲ್ಲವಂಕೇಜನೇತ್ರೇ (ಅದಿಪು. ೩-೪೪); ಎನಗೆ ತರಲಾಱದಿರ್ದೊಡಂ ನಿಮುಗಪ್ಪನಿತಾಹಾರವ ನಿಂದಿನೊಂದು ದಿವಸಕ್ಕಮಱಸಿಕೊಳ್ಳಿಂ (ಪಂಚತಂ. ೦೪೨-೧); ಒನಕೆಯಂ ತಾ ಶಿರದೊಳಾಂ ಸುತ್ತಿದಪೆನೆಂಬಾ ನರನವೊಲು ಆಯಿತ್ತು (ಲಕಪು. ೨೦-೨೧); ಅಮಲ ಸುಮತಿಯಂ ತಾಯೆನಗೆ ತಾಯೆ (ಕ್ರಮಿಭಾ. ೦-೪). ೪. ವಿಸ್ತರಿಸು ; ಚಾಚು : ಕಯ್ಯುಗೆ ಕರವಂ ತರಲಾಱದೆ (ಗದಾಯು. ೪-೩೦). ೫. ಎತ್ತು; ಹೊರಕ್ಕೆ ತರು: ಎಳೆಯಂ ವಿಕ್ರಮದಿಂ ತರಲ್ ಮಹೀಧರಂ ಮುನ್ ಪಂದಿಯಾದಂತೆ (ಪಂಪಭಾ. ೮-೫೫). ೬. ಉಂಟುಮಾಡು : ಮುದಿತ ಸುರಾನಂದ ಬಾಷ್ಪೋದಬಿಂದೂತ್ಕರ ಮಂಬಂತಾಗೆ ತಂದತ್ತರಲ ಮಟಿಗಳಂ ಪುಷ್ಪಮೇಘಪ್ರತಾನಂ (ಆದಿಪು. ೦೪-೦೦೮); ಬವರವಾದರೆ ಹರನ ವದನಕೆ ಬೆವರ ತಹೆನು (ಕುವ್ಯಾದ್ರೋ. ೪-೫೭). ೭. ನಿಶ್ಚಯಿಸು ; ನಿರ್ಧರಿಸು : ಅತ್ತ ಮನಂ ತರಲೆವೇಡ (ಸಮುಪ. ೩-೮೧); ಈ ಧರ್ಮಮಂ ಪತ್ತುವಿಡಿಸಿ ಮದೀಯ ಧರ್ಮದೊಳೆ ಪತ್ತಿಸುವೆನೆಂಬ ಬಗೆಯಂ ತಂದು ಸೆಟ್ಟಿಗಿಂತೆಂದು (ಧರ್ಮಾಮೃ. ೧-೧೧೯); ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುವ್ಯಾದ್ರೋ. ೭-೩೩). ೮. ಮದುವೆ ಮಾಡಿಸು ; ಸಂಬಂಧ ಬೆಳೆಯುವಂತೆ ಮಾಡು: ಆತನ ತಂಗೆಯಂ ಜ್ಯೋತಿರ್ಮಾಲೆಯಂ ನಿಮ್ಮ ಮಗನರ್ಕಕೀರ್ತಿಗೆ ತರ್ಪುದು (ಶಾಪುಂಪು. ೩೦-೧೫). ೯. ಮದುವೆ ಮಾಡಿಕೊಳ್ಳು ; ಸಂಬಂಧ ಬೆಳೆಸು : ಎರಡನೆಯ ಹಿಡಿಂಬಿಯನೆಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ (ಗದಾಯು. ೨-೯). **ತರು₁** : ೧. ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾವಿಚ. ೨೨); ಮರಿಯಾನೆ ಬೆಳ್ಳಿಹೊರೆ ತರುವುದೆಂಬಂತೆ (ಕಾಲೂರ. ೭೩-೦೩೦). ೨. ಎಲೆ ನಾರಿ ನೀನಾತನ ತರುವನಕ ಸಲೆ ಸೈರಿಸದೆನ್ನ ಮನಸು (ಕಂನವಿ. ೯-೦೩೦); ಅದೇ ದೇವರು ನನ್ನನ್ನು ಇಲ್ಲಿಗೆ ತಂದನೆಂದು ತಿಳಿದುಕೋ (ಮುಂಬಯಿ. ೪-೭೮). ೩. ತಾರಕ್ಕ ಬಿಂದಿಗೆ ನಾ ನೀರಿಗ್ಹೋಗುವೆ ತಾರೇ ಬಿಂದಿಗೆಯ

(ಪುರಂದ. ೧-೪೯ ಪಲ್ಲವಿ) : ಇಲ್ಲಿ ತಾ ಅದನ್ನು ನಾವಿಬ್ಬರೂ ಸರಿಯಾಗಿ ಹಂಚಿಕೊಂಡು ಬಿಡುವಾ (ಮುಂಬಯಿ. ೪-೩೦) ; ಮಾತು ಬಲ್ಲವ ಮಾಣಿಕ ತಂದ, ಮಾತು ಅರಿಯದವ ಜಗಳ ತಂದ (ಗಾದೆ). ೧೦. ಕೊಂಡುಕೊಳ್ಳು: ತನಗೆ ಹೇಗೋ ದೊರೆತ ದುಡ್ಡು ತರುವ ಪಡಿಪದಾರ್ಥ ಅದು ಗುರು ಲಿಂಗ ಜಂಗಮಕ್ಕೆಂದೂ ಅರ್ಪಿತವಾಗಬಾರದು (ಷಟ್ಸ್ಥಲ. ೦೬೩ ಕೃಷ್ಣಾವತಿ) ; ದುಡ್ಡಿದ್ದರೆ ಅದನ್ನೂ ತರಬಹುದಿತ್ತು (ರೂಢಿ).

ತಂದಿಕ್ಕು = ೧. ಸಂಪಾದಿಸಿಕೊಡು; ತಂದುಕೊಡು: ತಾವಿರ್ಬರುಂ ಕಿಡಿದು ತಂದಿಕ್ಕಿದೆಂಜಲೆವುಟುವಂ ತಿಂದು (ಆದಿಪು. ೩-೩೪ ವ) ; ಇನ್ನುಮೆ ನೆನ್ನೊಡಲೊಳಿರ್ದೀ ಪ್ರಾಣಮುಳ್ಳನ್ನಮೇವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದಿಕ್ಕು (ಗದಾಯು. ೯-೨೯) ; ಕಂದಮೂಲಫಲಂಗಳಂ ಪೆಱರ್ ತಂದಿಕ್ಕೆ ತಿಂದು ಅನಂದಮನಸ್ಕರಾಗಿ ನಿಂದ ತಪೋಧನರುಮಂ (ಶಂಚಶಂ. ೦೧೯-೦೦). ೨. ತೆಗೆದುಕೊಂಡು ಬಂದು ಬಡಿಸು,-ನೀಡು : ವೋನದಿಂದುಮುಣ್ಬುದು ನಾವೇನಂ ತಂದಿಕ್ಕಿದೊಡಂ (ಧರ್ಮಾಮೃ.೦-೦೬೩). ೩. ಎಸೆ ; ಬಿಸುಡು ; ಕೆಡವು : ಈ ದೊರೆಯನುಮಳವಟೆಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ (ಆದಿಪು. ೦೪-೦೧೨) : ಇಂತನ್ನಯದಿಂದೀ ಪಟುವಿನೊಳೆನ್ನರಸನನಿಂತು ಬಿದಿಯ ತಂದಿಕ್ಕುವುದೇ (ಪಂಪಭಾ. ೨-೩೨). ೪. ತಂದು ಸೇರಿಸು ; ಕೂಡಿಸು ; ಬೆರೆಸು : ಮುಖದರ್ಪಣಕ್ಕೆ ತಂದಿಕ್ಕಿದ ರನ್ನದ ಹಿಡಿ ಸುಂದಯುಮೋನೆನೆ . . . ಕಂಬುಕಂಧರಮೆಸೆಗುಂ (ಮಲ್ಲಿಪು. ೩-೭೩) ; ಸಕ್ಕದಮಂ ಪೇಟಿಸ್ಕೊಡೆ ನೆಟಿ ಸಕ್ಕದಮಂ ಪೇಟ್ಗೆ ಸುದ್ದಗನ್ನಡದೊಳ್ತಂದಿಕ್ಕುವುದೇ ಸಕ್ಕದಮಂ (ಧರ್ಮಾಮೃ. ೦-೪೨). ೫. (ಜಗಳ, ವಿರಸ ಮುಂತಾದುವನ್ನು) ಉಂಟುಮಾಡು : ಆ ಕೊರಮ ಅವರಿಬ್ಬರ ನಡುವೆ ತಂದಿಕ್ಕಿದ (ರೂಢಿ).

ತಂದಿರಿಸು = (ಸಮೀಪಕ್ಕೆ) ತಂದು ಇಡು ; ತೆಗೆದುಕೊಂಡು ಬಂದು ಇಡು : ವೆಲೆಯ ಕರುವಾಡು ಕಾಂಚನಕಲಶತತಿಯಿನೆಸೆದುದು ಕನಕಾದ್ರಿ ಯನಲ್ಲಿ ಕಡೆದು ತಂದಿ[ಪಾಠಾಂ. ಕಂಡ]ರಿಸಿದವೋಲ್ (ಕಾದಂಪೂ. ೩೦೪) ; ಮಂಗಳದ್ರವ್ಯಂಗಳಂ ಕೊಡೆ ತಂದಿರಿಸಿ (ನಂಪಿಪ. ೩-೩೯) ; ಬೆಟ್ಟದ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತನೆಗಳಗ್ರದಲಿ ಚಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟಿರ್ದುವು (ಮೋಹತ. ೨೦-೮). ತಂದೀ=ತಂದುಕೊಡು : ಕಾಣಿಕೆಯ ತಂದಿತ್ತರು ಗೀರ್ವಾಣಫಣಿನರರಾಜರು (ತೊರೆರಾ. ೦-೭-೨) : ಕಂಗೊಳಿಸುವ ಮಾದಳವಣ್ಣ ತಂದಿತ್ತು (ಮೋಹತ. ೪-೩೦). ತಂದುಕೊಡು, ತಂದುಕುಡು = ತೆಗೆದುಕೊಂಡು ಬಂದು ಕೊಡು ; ಒದಗಿಸು : ತಂದೆ ತಾಯ್ಗಳು ಮೃಗಗಳಾದವು ಬಂಧು ಬಳಗವು ಖಗಗಳಾದುವು ತಂದು ಕೊಟ್ಟವರಾದರಾ ಮೃಗಗಳು ಕಿರಾತಂಗೆ (ಸಾಳ್ವಭಾ. ೩-೩೦) ; ಅಂಜನಚೋರಂ ಘುಟಿಕಾಪ್ರಯೋಗದಿಂದದೃಶ್ಯರೂಪದಿಂ ಪೋಗಿ ಕಳ್ದು ತಂದು ಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದಱಿಂದ (ಧರ್ಮಾಮೃ. ೨-೦೦೮). ತಂದುಕೊಳ್, ತಂದುಕೊಳು, ತಂದುಕೊಳ್ಳು = ೧. ಕರೆದುಕೊಳ್ಳು ; ಬರಮಾಡಿಕೊಳ್ಳು : ತನಗಱಿಕೆಯ ವಿಟ್ಟುವನಿಂತು ತಂದುಕೊಂಡರು ಮೊಳರೇ (ಶಾಂತಿಪು. ೩-೭೨) ; ಮುಂಗುರುಳಗರ ಕಣ್ಣನೊಳೊತ್ತಿ ಜಲವನು ಹಿಂಗದೆ ತಂದುಕೊಂಡಾಗ ಅಂಗನೆ ಪುಸಿಗೆ ದುಃಖಿಸುತ (ಕಂಸವಿ. ೬-೦೬೬). ೨. ತಾಳು ; ಹೊಂದು ; ಪಡೆ : ತಂದೆ ನೀನಹನೆಂಬ ಹಮ್ಮನು ತಂದುಕೊಳದಿರು (ತೊರೆರಾ. ೦-೯-೩೯). ೩. ಮದುವೆ ಮಾಡಿಕೊಳ್ಳು ; ಮನೆ ತುಂಬಿಸಿಕೊಳ್ಳು : ಮಾವನ ಮಗಳೆ, ತಂದುಕೊಂಡೇನು ತೆರ ಹೇಳೆ (ಹಳ್ಳಿಪಾ. ೫೨). ತಂದುಹಾಕು=೧. ಸಂಪಾದನೆ ಮಾಡು ; ಗಳಿಸಿಕೊಡು: ಹತ್ತು ಜನರ ಸಂಸಾರಕ್ಕೆ ತಂದುಹಾಕುವವ ಒಬ್ಬನೇ ಆದರೆ ಬಹಳ ತೊಂದರೆ (ರೂಢಿ). ೨. (ಜಗಳ, ವಿರಸ ಮುಂತಾದುವನ್ನು) ಉಂಟು ಮಾಡು ; ಕಲ್ಪಿಸು ; ಉತ್ಪತ್ತಿಮಾಡು : ಎನಗೂ ನಿನಗೂ ಹಗೆಯಿಲ್ಲ, ಎನ್ನೆಡೆ ನಿನ್ನೆಡೆ ತಂದುಹಾಕಿದವರೆ ಹಗೆ (ಸಾಗರೊ. ೫೯) : ತಂದುಹಾಕಿ ತಮಾಷೆ ನೋಡಿದ (ರೂಢಿ). ತಂದೊಡ್ಡು = ೧. ಈಡುಮಾಡು ; ಗುರಿಮಾಡು : ವನಿತೆಯುಮಂ ನಂಟರುಮಂ . . . ತೊಱೆದು ತಪಕಂ ತನುವಂ ತಂದೊಡ್ಡಿ (ಧರ್ಮಾಮೃ. ೬-೬೯). ೨. ಉಂಟುಮಾಡು ; ಕಲ್ಪಿಸು : ಆಗ ಮನೋವ್ಯಥೆಯನ್ನುಂಟುಮಾಡುವ ಸನ್ನಿವೇಶಗಳನ್ನು ತಂದೊಡ್ಡಬೇಕು (ಶಿಲ್ಪದ. ೦೦೯). ತರವೇಳ್, ತರಹೇಳು = ೧. ತರುವಂತೆ ಹೇಳು ; ತೆಗೆದುಕೊಂಡು ಬರುವಂತೆ ಹೇಳು : ಸಾರಥಿಯಪ್ಪುದಪ್ಪ ನೆನಗೀತನೆ ಪೋ ಪೆಱರೇವರಿಂ ನೆರಂಬಾರೆನೆನುತ್ತೆ ತನ್ನ ರಥಮಂ ತರವೇಳ್ದು (ಪಂಪಭಾ. ೮-೯೮); ಅದು ಪೊಱಗಾಗೆ ನೀನೇನಂ ತರವೇಳ್ದೊಡಂ ತಂದಿತ್ತಪೆನಿದೊಂದು ಮಾತ್ರಂ ಬೇಡ (ಧರ್ಮಾಮೃ. ೨-೧೧೮) ; ತರವೇಳ್ ಮಾಣಿಕ್ಯಭಂಡಾರವಂ (ಕಾವ್ಯಾವ. ೪೦೩). ೨. ಕರೆತರುವಂತೆ ಹೇಳು ; ಕರೆದುಕೊಂಡು ಬರುವಂತೆ ಹೇಳು : ತರವೇಳ್ದು[ಪಾಠಾಂ. ಟ] ವಿಜಯಪರ್ವತಗಜಮಂ (ಆದಿಪು. ೧೨-೫೬) ; ಎನ್ನ ಮಗನನಂತಕವುರದಿಂ ತರವೇಳ್ಪುದು (ಅಜಪು. ೦೦-೧೫) ; ಕನಸಿಂದದಂ ನೆರೆದವನಂ ನೆನಸಿಂ ನೆರೆದಪ್ಪೆನೆಂದು ತರವೇಳ್ದಪೆ ಕಾಂತನೆರ (ಅಗವಿ. ೦೭-೦೧೨) ; ತರವೇಳ್ ಸಾಳುವ ಮೇಗನಂ ತೊಗರನೂ ಹೊನ್ನಾಳನಂ ಜೂಗನಂ (ನಳಚಂ. ೬೬) ; ಇತ್ತ ಸವರಿಗೆ ನೇಮವನು ಮುನಿಪೋತ್ತಮನ ತರಹೇಳೆ(ತೊರೆರಾ.೦-೩-೩೪). ತರಪೋಗು=ತರಲು ಹೋಗು ; ತೆಗೆದುಕೊಂಡು ಬರಲು ಹೋಗು : ಸಮಿತ್ಕುಶವುಂ ತರಪೋಪ ಧೌತವಲ್ಕಲವಸನಲುಂಬುದಕ್ಷಮಣಿಯುಂ ಸಮೇಖಿ ವ್ಯವಸಾಯಮೆತ್ತಲುಂ (ಕಾದಂಪೂ. ೨೫೯). ತರುಬರು = (ಊಟ) (ಸಾಮಾನು ಮೊದಲಾದುವನ್ನು) ಕೊಂಡು ತಂದು ಒದಗಿಸು ; ವಹಿವಾಟು ನಡೆಸು: ಜಯಂತನು ಮನೆಯ ತರುಬರುವ ವ್ಯವಸ್ಥೆಯನ್ನು ಮಾಡುತ್ತಿದ್ದನು (ಜಯಂತ. ೦೫೩); ಮನೆಯಲ್ಲಿ ತರುಬರುವ ಸಣ್ಣ ದೊಡ್ಡ ಕೆಲಸಗಳನ್ನೆಲ್ಲ ಅವನೇ ಮಾಡುತ್ತಿದ್ದನು (ಸಂಚಿತ್ರ. ೨೪) ; ತರುಬರೋಣ ಹೆಂಡತಿ ಅಡಬಲ್ಲಳು, ತಲೆಕೆರೆದುಕೊಂಡು ಉಣಬಲ್ಲಳು (ಗಾದೆ).

ತಾರಮ್ಮಯ್ಯ = ಸಣ್ಣಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ ಮತ್ತು ಆಗ ಹೇಳುವ ಹಾಡು : ಕೈದು ತಾರಮ್ಮಯ್ಯಕ್ಕೆ ತೊಡಲ ನುಡಿಯ ತಿಲ್ಲಾಣ (ಕಾಯ್ಕಾ ಲಿ. ೦೦೯-೩). ತಾರಮ್ಮಯ್ಯ ಮಾಡು = ೧. ತಾರಮ್ಮಯ್ಯಹಾಡು : ಏನೋ ಸಮಯ ಎಂದು ಸಹಾಯ ಕೇಳಿದರೆ ತಾರಮ್ಮಯ್ಯ ಮಾಡಿಬಿಟ್ಟರು (ರೂಢಿ). ೨. ನಟಿಸು ; ಸೋಗುಹಾಕು. ತಾರಮ್ಮಯ್ಯ ಹಾಡು = ನಕಾರ ಸೂಚಿಸು; ಇಲ್ಲವೆಂದು ಕೈಯಾಡಿಸು: 'ಹಣಕ್ಕೀ ಕಷ್ಟವಾಗಿದೆಯಪ್ಪಾ, ನೋಡೋಣ ತಡೆ" ಎಂದು ತಾರಮ್ಮಯ್ಯ ಹಾಡಿದರು (ಮುಕ್ತ. ೦೭೨). ☞ ಈ ಧಾತು ಹಲವು ಶಬ್ದಗಳ ಜೊತೆಗೆ ಸೇರಿ ಸಂಯುಕ್ತಧಾತುಗಳಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆಯಾಗುತ್ತದೆ. ಉದಾ: ಎಯ್ದೆತರ್, ಇಱಿತರ್, ನಡೆತರ್, ಬೀೞ್ತರ್, ಮಂಸಂದರ್ ಇತ್ಯಾದಿ. [ದೇ.೫ ತಮಿ. ಮಲ. ತರು; ತೆಲು. ತೇರ್]

ತರ್₁ (ನಾ). (ಭಯ ಅಥವಾ ಕೋಪದಿಂದ) ನಡುಗುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ತರಗುಟ್ಟು', 'ಥರ್₁' ಪರಾ.

ತರತರ₁ (ದ್ವಿರುಕ್ತಿ) : ಅದನ್ನು ಕೇಳಿ ತರತರ ಎಂದು ನಡುಗಿದಳು (ರೂಢಿ).

ತರ್₂ (ನಾ). ಸುಂಕ; ತೆರಿಗೆ : ತಿಬುನರಯಂಗಲ್ಲ ಕೊಯ್ದಲೆಯ ಹೇಱಂಗೆ ವೀಸಪೊಂದು ತರ (?ಕೊಟ್ಟರ್) (ಮುಂಬಯಿ. XI, ೨೩೪-೨೬ ; 1144). [☞ ಇದು 'ತೆರ' ಎಂಬುದರ ಅಪಲಿಪಿತವಿರಬಹುದು ]

ತರ್₃, ಥರ್₃ (ನಾ). ೧. ಸಾಲು ; ಓಳಿ ; ಕ್ರಮ ; ಪಂಕ್ತಿ : "ತರ ಪರಿವಿಡಿಯೆನಲ್ಕಿವು ಪರಿಯರ್ಥದೊಳ್" (ಕಶಬ. ೪೪) ; ತರದಿಂ ದೆಯ್ವದ

ಮೊಗದೊಳ್ ಕರದೊಳ್ ತೊಡೆಯೊಳ್ ಪದಂಗಳೊಳ್ ದ್ವಿಜರೂ ಭೂಪರುಮಂತೆ ವೈಶ್ಯರುಂ ಶೂದ್ರರುಮೋಜೆಯಿನೊಗೆದರೆಂಬರಿನ್ನವು ವುಸಿಗಳ್ (ಸಮಪ. ೧೧-೫೯) ; ಇಂತು ತರದಿಂ ಸ್ವಪ್ನಂಗಳನೀರೆಂಟಂ ನೃಪ ಕುಲತಿಳಕನ ಸಿದ್ಧಾರ್ಥನರಸಿ ಕಂಡಳ್ನಲವಿಂ (ವರ್ಧಪು. ೧೩-೬೩) ; ತರದೆ ಪಾಱಿದುವು ಬೆಳ್ವಕ್ಕಿ ನೂರ್ಳ್ದಿಗೆದಂತೆ (ಅನಂಪು. ೯-೧೬ ರಗಳೆ): ಹರಿಸದೆ ಸಗ್ಗದ ಜತಿಗಳ್ ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ (ಅಭ್ಯಕಾ. ೧೬೫). ೨. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು : ತರವಲ್ಲದ ಕಾರ್ಯಮ ಕೆಗಳ್ದಡೆ ಸುರನರನಾಗಲೋಕ ಮೆಚ್ಚುವುದೇ (ತೊರವೆ. ೭-೫೦) ; ಇವಳು ನಮ್ಮೊಡೆಯಂಗೆ ತರವಾದವಳ್ (ದೇವೀಮ. ೫-೭೩) ; ಕಯ್ಗೆ ಬಾರದ ಬೇಂಟೆಗಿಂದು ಕಯ್ ತುಡುಕುವುದೆ ತರವಲ್ಲ (ಅಂತಿಗೊ. ೩-೭೭). ೩. ಅಂತಸ್ತು ; ಯೋಗ್ಯತೆ ; ದರ್ಜೆ : ಬರಿಸಿ ಋಷಿಗಳನವರವರ ತರವಱಿದು ಕೊಡಿಸಿದನು (ಕುವ್ಯಾಅ. ೩-೩೭). ೪. ಮನೋಹರತೆ ; ಸೌಂದರ್ಯ : ಮುನ್ನ[ಂ] ಕೆಯ್ಗೆ[ಯ್ಯುತಿರ್ದ] ತರದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು (ಪಂಪಭಾ. ೩-೪೪ ವ) ; ತವತವಗೆ ಸಿದ್ಧ ಕನ್ಯಾನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಾಳಿಪೊಲೆಸೆಯೆ ಪರೆದು ಕಣ್ಗೊಳಿಪುವು ತರದಿಂ ತುಱುಗಿ ಮಿಱುಪ ತಾರಾನಿಕರಂ (ಕಾದಂಪೂ. ೫೮೦) ; ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ (ಅಭ್ಯಕಾ. ೫೭). ಥರ$_2$: ೨. ದೊರೆಗಳೊಲುಮೆ ಉಂಟೆಂದೆಲ್ಲರೊಳು ಹಗೆ ಥರವಲ್ಲ [ಪಾಠಾಂ. ದೊರೆ ಎನ್ನ ಬಲವು ಸುಸ್ಥಿರ ವೆಂದೆಲ್ಲರ ಹಗೆ ತರವಲ್ಲ] (ಪುರಂದ. ೨-೪೫-೨) ; ಥರವಲ್ಲದ ಮಾತು ಮರಾ ಏರಿದರೂ ಆದೀತೇ ? (ಗಾದೆ). ೩. ಬೊಕ್ಕಸದಿ ತರಿಸಿದಂ ಧನಕನಕಮಣಿಗಳಂ ದಿಕ್ಕುದಿಕ್ಕಿನ ಧರಣಿಸುರರಿಗಂ . . . ಅವರವರ ಥರವನರಿತು ಇತ್ತನು (ತುರಂಗ. ೯೧-೩೦).

ತರಂತರ, ತರತರ$_2$, ಥರಥರ$_2$ (ದ್ವಿರುಕ್ತಿ): ೧. ಸಾಲು ; ಪಂಕ್ತಿ ; ಕ್ರಮ : ನವದೂರ್ವಾಂಕುರಮಂ ಪಲ್ಲವಮಂ ಪೂಗೊಂಚಲಂ ತರಂತರದಿಂ ನೀಡುಮಪ್ಪೊಲ್ಮಣಿಕಿರಣಂ ಪೊಣ್ಮುವಿನಂ ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೨) ; ಮುತ್ತು ಪಚ್ಚೆ ಪವಳಂ ವಜ್ರಂ ಸುನೀಲಂ ತರಂತರದಿಂ ಸಾಲಿಡೆ (ಪುಷ್ಪಪು. ೯-೫೪) ; "ತರತರವೆಂದು ಪಂಕ್ತಿಯೊಳ್" (ಕರ್ಣಾನಿ. ೦೨) ; ನೆಲದಾಕಾಶದೆಡೆಯೊಳಂಬುಗಳಂ ತರತರದಿಂದೆಚ್ಚು ಸೋಪಾನಂ ಮಾಡಿ (ಪಂಪಭಾ. ೭-೩೮ ವ) ; ಕಾಮುರ್ಕವ ತುಡುಕಿ ತರತರದಲ್ಯೆತಂದು ಬಿಲ್ಲಿನ ತಿರುವ ತೊಡಿಸಲು (ಸಂಭಪ. ೧೯-೨೮) ; ವರ ಸಣ್ಣಕ್ಕಿಯೋಗರ ತೊವ್ವೆ ಪಳಿದ್ಯವ ತರತರದಲಿ ಬಡಿಸಿದರು (ತೋಹಪ. ೩-೩೦). ೨. ಸಮೂಹ ; ಗುಂಪು ; ರಾಶಿ : ಸುರಿವ ಖಂಡದ ರಕುತಧಾರೆಗೆ ತರತರದಿ ದಾಯ್ದೆಗೆದು ಶಾಕಿನಿಯರ ಸಮೂಹವು ಬಳಿಯಲ್ಯೆದಿತು ಪಾರ್ಥನಂದನನ (ಕುವ್ಯಾದ್ರೋ. ೩-೯೧) ; ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ ತರತರದೊಳು ಕವಿತರುವ ಸರಸಕಟಾಕ್ಷವವೆಸಗಿಯೆನ್ನೊಳು (ಹದಿಬ. ೦-೫೧) : ಧುರದೊಳಗೆ ಬಿಲುಗಾಱರೊಗ್ಗಿನ ಹರಿಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಾಂತು ಕೃತಾಂತನಾಲಯವ ಥರಥರದಿ ತೀವಿದರು ರುಧಿರದ ಹರಹು ಹೇರಾಳಿಸಿತು ಚೂಣಿಯೊಳು (ಕುವ್ಯಾಭೀ. ೪-೪೬). ೩. ಅಂತಸ್ತು ; ದರ್ಜೆ ; ಮಟ್ಟ : ಕೊಟ್ಟನು ಬಂಗಾರವ ಬಲುಸುರುಳಿನ ಪಟ್ಟೆಯ ಕರಿತುರಂಗಗಳ ಕೊಟ್ಟನವರ ತರತರವಱಿದವನಂತೆ (ಹಾಮುವಿ. ೭-೪೮). ತರದೆ = ನಿರಂತರವಾಗಿ ; ಒಂದೇ ಸಮನೆ : ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯುಂ ಪವಜದಳನಯನೆ ಸಮೆದಪಳೆನೆ ಸುರಿದುವು ತರದೆ ತೋರ ಕಣ್ಬನಿದುಱುಗಲ್ (ಕಾದಂಉ. ೨೯೨). [ದೇ.೩ ತಮಿ. ಮಲ. ತುಳು. ತೆಲು. ತರ]

ತರ$_4$ 'ಥರ$_2$' ನೋ.

ತರ$_5$ (ನಾ). ಜವ ; ವೇಗ : "ರಯಂ ಜವಂ ರಂಹಸಂ ತರ ಸ್ಯದಮೆನೆ ವಾಜಮೆನಲೋಟವಕ್ಕುಂ" (ಮಂಗರಾ. ೮೦-೦೨); "ತರ–ತರಸ್=ವೇಗ" (ತದ್ಭಕೋ. ೦೭) : ತರದೇಂ ಬರ್ಪುದೆ ತೊಟ್ಟನಿಲ್ಲಿಗೆ ಮಹೀಭೃತ್ಕಂತುವಂ ದೇವಿ ಮಯ್ಗರೆದಾತಂ ಬರವೇಟ್ಕುಮೆಂದಿರದೆ ನಿನ್ನಂ ತಂದೆ (ಕುಸುಮಾ. ೧೩-೯೭). [ಸಂ. ತರಸ್]

ತರ$_6$ 'ತರಹ' ನೋ.

ತರಂಗ (ನಾ). ೧. ಅತ್ತಿತ್ತ ಅಲೆಯುವುದು,–ಚಲಿಸುವುದು. ೨. ನೀರು, ವಿದ್ಯುತ್ತು, ಶಬ್ದ ಮೊದಲಾದುವುಗಳ ತೆರೆ,–ಅಲೆ: "ವೀಚೀ, ಭಂಗಃ, ತರಂಗಃ – ಈ ೩ ತೆರೆ" (ಹಲಾಯು. ೧೦೮-೩೧) ; "ವಳಿಯೆನೆ ತರಂಗಮಾದು ಕಾಂ" (ಕವಿಕಂ. ೯೦) : ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ (ಪಂಪಭಾ. ೧೪-೩೧) ; ಜಳಧಿ ತರಂಗತಾಟಿತ ಮಹೀಪತಿ ಚಕ್ರಧರಂ ತಪಂಬಡಲ್ (ಅಜಿಪು. ೧೧-೧) ; ಒದೆವ ಮಂದರವನು ತರಂಗದಲುದಧಿ ಹೊಯ್ವಂದದಲಿ ಹೊಕ್ಕವು ಕುದುರೆ (ಕುವ್ಯಾಶ. ೧೧-೮) ; ಉಚ್ಚಳಿತ ತರಂಗಪ್ರಪಾತದಿಂ ಚಲಿಯಿಪ ಪಾಂಗಳಮಡೆ (ರಾಜಶೇ. ೦೨-೭೪) ; ಪುಲ್ಮನೆ ಯೊಳಿರ್ದ ಸೀತಾದೇವಿ ತಾನುತ್ಕಂಠೆ, ನೋಡುತಿರ್ದಳ್ ತರಂಗೋಲ್ಲಾ ಸಮಂ (ಶ್ರೀರಾಮಾ. ೩೩೧-೭). ೩. ಭಾಗ ; ಪ್ರಕರಣ ; ಅಧ್ಯಾಯ : ಆ ಒಂದು ಸಾಹಸದ ಸೋಲು–ಗೆಲವುಗಳನ್ನು ಈ ಪ್ರಬಂಧದ ತರಂಗ ತರಂಗ ಗಳಲ್ಲಿ ಯಾರಾದರೂ ಕಾಣಬಹುದು (ಸಾಂದಸ 1, ಮೊದಲಮಾತು). ೪. ಕುದುರೆಯ ಒಂದು ಬಗೆಯ ಗತಿ ; ನಾಗಾಲೋಟ. ೫. [ಛಂದ] ಪ್ರತಿಪಾದದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಸಮವೃತ್ತ: ಪಾವಕಂ ತ್ರಿದಿವ ಪಾವಕಂ ದಿವಿಜ ಪಾವಕಂ ಸುರಪ ಪಾವಕಂ . . . ಧಾವಿಸಿಂತಿದನೆ ಪೀವರಸ್ತನೆ ತ[ಪಾಠಾಂ. ತು]ರಂಗಮಂ (ಛಂದೋಂಬು. ೨-೦೫೦). [ಸಂ. ]

ತರಂಗಭಂಗ (ನಾ). ಅಲೆಗಳು ಒಡೆಯುವಿಕೆ,–ಚೂರಾಗುವಿಕೆ : ಸುಧಾರ್ಣವಮೆಸೆದತ್ತು ರತ್ನವಳಯಾಂಚಿತ ತುಂಗತರಂಗಭಂಗದಿಂ (ಮಲ್ಲಿಪು. ೦೨-೧೩೦). [ತರಂಗ + ಭಂಗ]

ತರಂಗಮಾಲೆ (ನಾ). ಅಲೆಗಳ ಸಾಲು : ಕರಿಮಕರಂಗಳುಚ್ಚಳಿತ ಭಂಗುರ ತುಂಗತರಂಗಮಾಲೆಯುಂ ಖರರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು (ಕಾವ್ಯಸಾ. ೭೮ ಶೂದ್ರಕ).

[ತರಂಗ + ಮಾಲೆ]

ತರಂಗರೇಖೆ (ನಾ). ಅಲೆಯ ಆಕಾರದಲ್ಲಿ ಅಂಕುಡೊಂಕಾಗಿ ಇರುವ ರೇಖೆ,–ಗೆರೆ : ಸಂದೇಹಗ್ರಸ್ತವಾದ ಅಕ್ಷರವನ್ನೋ ಪದವನ್ನೋ ಪಂಕ್ತಿ ಗಳನ್ನೋ ನಿರ್ದೇಶಿಸಲು . . . ಅವುಗಳ ಕೆಳಗೆ ಒಂದು ತರಂಗರೇಖೆಯನ್ನು ಎಳೆದಿರುತ್ತಾರೆ (ಕನ್ನಸಂ. ೨೧೮). [ತರಂಗ + ರೇಖೆ]

ತರಂಗಲಹರಿ (ನಾ). ಅಲೆಗಳ ಸಾಲು,–ಪರಂಪರೆ: ಒಂದೇ ತರಂಗಲಹರಿ ಯಲ್ಲಿ ಬರುವ ಜಾತಿಯಾವು (ಮೂಕಿಳಾ. ೩೨-೨).

[ತರಂಗ + ಲಹರಿ$_1$]

ತರಂಗಲೇಖೆ (ನಾ). ಅಲೆಯ ತಂದಿ : ತಡೆಯದೆ ಚಿತ್ರವೇತ್ರಧರೆಯುಂ ರಥಮಂ ಕ್ಷಿತಿಪಾಂತರಕ್ಕದಂ ನಡೆಯಿಸಿದಳ್ ಸವಿಾರಣಸಮುತ್ಥವಿಲೋಲ ತರಂಗಲೇಖೆ ಚೆಲ್ವಿಡಿದ ಸರೋರುಹಾಂತರಕೆ ಮಾನಿತಮಾನಸರಾಜ ಹಂಸಿಯುಂ ನಡೆಯಿಸುವಂತೆ ಸುಂದರನತಾಂಸೆಯನಲ್ಪಕಪೋಲಮಾಂಸೆಯುಂ (ಶಾಂತಿಪು. ೫-೧೧೨). [ತರಂಗ + ಲೇಖೆ]

ತರಂಗವಾದ (ನಾ). [ವಿಜ್ಞಾ] ಬೆಳಕು ಅಲೆಗಳ ಮೂಲಕ ಪ್ರಸರಿಸುವು ದೆಂಬ ವಾದ : ತರಂಗವಾದವೂ ಬೆಳಕು ಪ್ರಸರಿಸುವಾಗ ಅನುಸರಿಸುವ ನಿಯಮಗಳನ್ನು ಸಾಧಿಸಲು ತಕ್ಕ ತಳಹದಿಯಾಗಿದೆ (ಭೌತವಿ. ೨೦೧).

[ತರಂಗ + ವಾದ$_3$]

**ತರಂಗವಿಕ್ಷೇಪ** (ನಾ). ಅಲೆಗಳ ತುಯ್ದಾಟ,–ಕ್ಷೋಭೆ: ನಕ್ಷತ್ರಮಾಲೆಗಳು . . . ನೀಲಾಂಬರದಲ್ಲಿ ತೇಲಾಡುವುದಾದರೆ ಅದಾ ಸಾಗರದ ತರಂಗ ವಿಕ್ಷೇಪದ ಸ್ವರೂಪಕ್ಕೆ ಹೋಲುವುದು (ಶಪಾಕುಂ. ೧೮). [ ತರಂಗ + ವಿಕ್ಷೇಪ ]

**ತರಂಗಾಭ** (ಗು). ಅಲೆಗಳಂತಿರುವ : ಸಾರಸಾರಸನಾದಾಮಸಾರಸಾರ ನಿತಂಬೆಯಂ ತಾರಾತಾರಾತರಂಗಾಭಾಕಾರತಾ ರ ಮ ಣೀ ೯ ಯ ಯ ಂ (ಶವಿರಾ. ೨-೧೩೦). [ ಸಂ. ]

**ತರಂಗಿಣಿ** (ನಾ). ೧. ತೆರೆಗಳಿಂದ ಕೂಡಿದುದು ; ಹೊಳೆ ; ತೊರೆ; ನದಿ : "ಹ್ರದಿನಿ ತರಂಗಿಣಿ . . . ಧುನಿ ತೊಱೆ" (ವಸ್ತುಕೋ. ೨೩-೦೧) : ನಿರವದ್ಯ ನಿಖಿಲ ವಿದ್ಯಾತರಂಗಿಣೀಸಂಗದಲಿ ತೋಱುವ ಸುಚಿಯಂತಿರೆ . . . ಗಂಭೀರ ನಾಭಿಮಂಡಲಮಸೆಗುಂ (ಶಾದಂಪೂ. ೬೩೬) ; ಸೀತಾ ತರಂಗಿಣೀತರಂಗೋತ್ತರೆಯುಂ ನೀಲಾಚಲ ವಿಚಿತ್ರರತ್ನಕಟಕಮುಂ . . . ತನಗೆ ಸಹಜಾಭರಣವಾಗೆ (ಮಲ್ಲಿಪು. ೩-೨೩ ವ); ನವೀನ ನಿಜಭಕ್ತಿತರಂಗಿಣಿ ಮಾಱುತುಬ್ಬರಂಬರಿಯುತುಂ (ಶಂಪಾಶ. ೬) ; ಲಕ್ಷ್ಮಣದೇವನೆಸೆದನಯ್ . . . ನೆರೆಯೇರ್ದ ಮಳೆಗಾಲದ ಮಹಾ ತರಂಗಿಣಿಯ ಧೀರ ಶೈಲಿಯಲಿ (ಶ್ರೀರಾಮಾ. ೨೬-೬೮೮). ೨. [ಸಂಗೀತ] ಒಂದು ರಾಗದ ಹೆಸರು : ತರಂಗಿಣಿ–ಚಾರುಕೇಶಿ (ಸಂಗೀಶಂ. ೪೭). [ ಸಂ. ತರಂಗಿಣೀ ]

**ತರಂಗಿತ** (ಗು). ಅಲೆಗಳಿಂದ ಕೂಡಿರುವ; ತೆರೆಗಳಿದ್ದಿರುವ ; ಅಲೆಅಲೆ ಯಾಗಿರುವ : ದೂರದ ತರಂಗಿತ ದಿಗಂತದಲಿ ಚೈತ್ರರವಿ ಮುಗಿಲ ನೆತ್ತಿಗೆಂಟಿನಲಿ ಮುಳುಗುವೋಲಂತೆ (ಶ್ರೀರಾಮಾ. ೧೪-೩೬೮). [ ಸಂ. ]

**ತರಂಗಿಸು** (ಕ್ರಿ). ೧. ಅಲೆಯಂತೆ ಚಲಿಸು,– ಸಂಚಲವಾಗು : ಮತ್ತಂ ವಳಿವಕ್ರತೆಯನೀವ ವಹಣಿ ತರಂಗಿಸುವ ತಿರುವು ಸುಳಿಗೊಳ್ವ ಹೆಂಪು ಇಂಪಂ ಕಱಿವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ವಾಡುವ ಗಾಯಕರೊಳಂ (ಗಿರಿಳ. ೨-೧೦೫ ವ); ಘನಮೃದುತರ ಮೃದಂಗಗತಿ ರಯಿಸಲು ತರಂಗಿಸುವ ತಾನಮಾನಂಗಳ ಸುಗೀತಂಗಳು (ಸೌಂದಪು. ೦-೪೦). ೨. (ಆಲಂ) ಸಂದಣಿಸು ; ದಟ್ಟಯಿಸು : ಕಿಲಬಲದೊಳ್ ತುರುಂಗಬಲಂ ತರಂಗಿಸೆ ಪದಾತಿಬಲಂ ಪಡಿಸಲಿಸೆ (ಸಂಚಿರ. ೦೨-೦೪) ; ತರಂಗಿವ ತನು ಕಾಂತಿಯಿಂದ ಶೃಂಗಾರರಸ ತಾನೆ ಸ್ತ್ರೀರೂಪನಾಂತ ಬೆಡಂಗಿನೋಳಿರ್ದಳಾ ಕನ್ನೆ (ಧರಿಇ. ೫೮-೯೬). [ ತರಂಗ + – ಇಸು$_{3}$ ]

**ತರಂಗು** (ನಾ).=ತರಂಗ ೨ : "ತರಂಗ–ತರಂಗು; ದಂಡ–ದಂಡು" (ಶಮದ. ೨೭೮ ವೃತ್ತಿ); "ತರಂಗು – ತರಂಗ = ನೀರ ತೆರೆ" (ತದ್ಭಕೋ. ೧೬). [ <ಸಂ. ತರಂಗ ]

**ತರಂಗೊಳ್** (ಕ್ರಿ). ೧. ಸಾಲುಗೊಳ್ಳು ; ಕ್ರಮವನ್ನು ಹೊಂದು : ತರಂಗೊಂಡಿಕ್ಕಿದ ಹೊಸ ಹೊಂಗೇದಗೆಯೆಸಳ್ಗಳ್ (ಜಯಶಾ. ೫-೬). ೨. ಸಾಲುಗೊಳಿಸು ; ಕ್ರಮಪಡಿಸು : ಎಣಿಸಿ ತರಂಗೊಂಡು ನಕ್ಷತ್ರಮಂ ಪೇಳಾರಾನುಂ ಬಲ್ಲರೆ (ಎಳ. VII, ಶಿವಮೊ. ೬೪-೮೬ ; 1112). ೩. ಒಟ್ಟು ಗೂಡು ; ಗುಂಪುಗೂಡು ; ಮೇಲೆ ಮೇಲೆ ಒದಗು : ವಿತತ ಪ್ರಾಚ್ಯಾದ್ರಿಪೀಠಾಗ್ರಮದರುಣಶಿಲಾವೃತ್ತಲಿಂಗಂಬೊಲಿಂಬಾಯ್ತು ತರಂ ಗೊಂಡೇಟ್ಗೆಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ (ಜ ಗ ವಿ. ೦೬-೦೦೪) ; ಅಖಿಲವಿಮಾನ ತರಂಗೊಂಡು ತಡೆಯದೆ ನೊಂಕೆ (ಧರಿಇ. ೫೭-೮೫). ೪. ಮನೋಹರವಾಗು ; ಸುಂದರವಾಗು : ಇದೇಲಾವನ ವೊಡ್ಡುಗೊಂಡ ಕದಳೀಕಾಂಡಂ ತರಂಗೊಂಡ ಚೂತದ ಸಾಲ್ (ಶಂಕಾಮಾ. ೦-೦೦೦).

**ತರತರಗೊಳ್ಳು** (ದ್ವಿರುಕ್ತಿ) : ದಂಡಧರ ಸೇನಾಧಿಪರು ಉದ್ದಂಡ ರಾಜರು . . . ತಂಡತಂಡದಿ ನಮಿಸಿ ತರತರಗೊಂಡು ಕುಳಿತಿರೆ (ಬಿಜ್ಜಪು. ೬೬-೦೩). [ ತರ$_{3}$ + ಕೊಳ್$_{1}$ ]

**ತರಂಗೊಳಿಸು** (ಕ್ರಿ). ಕ್ರಮಪಡಿಸು ; ಓರಣಗೊಳಿಸು : ತೆಗೆದು ತರಂ ಗೊಳಿಸಿದ ಪಂಚವಣ್ಣಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ . . . ವೈಢೂರ್ಯದ ಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಜಶೇ. ೮-೫ ವ). [ ತರಂಗೊಳ್ + – ಇಸು$_{3}$ ]

**ತರಂಟು** 'ತಱಂಟು' ನೋ.

**ತರಂಡ$_{1}$** (ನಾ). ನೀರಿನ ಮೇಲೆ ಹೋಗುವ ಸಾಧನ; ತೆಪ್ಪ; ದೋಣಿ: ಎಸೆವ ವಾರ್ಧಿಯಂ ನೋಡುತುಂ ಕೊಂಡಾಡುತುಂ ತರಂಡದ ಮೇಲವ ರ್ಪೋಗುತಿರೆ (ಶದ್ಯಶಾ. ೧೦-೦೭೬) ; ಕುಲುಷಜಲಮುತ್ತರಿಪೊಡವದಿರ ಲಲಿತಪದಧೂಳೀತರಂಡಂಗೊಳದೆ ಶಕ್ತನೆ ಮಾನವಂ ದುರ್ವಾರನವಂದ್ಯ ದೃಶಂ (ವಿವೇಧ. ೦೨-೬). [ ಸಂ. ]

**ತರಂಡ$_{2}$** (ನಾ). ಒಂದು ಬಗೆಯ ಸಸ್ಯ (?) : "ಗ್ರಂಥಿಫಲಾ – ತರಂಡ" (ಓಷಧಿ. ೪೬). [ ? ]

**ತರಂಬಿಡಿ, ತರವಿಡಿ, ಥರಂಬಿಡಿ, ಥರವಿಡಿ** (ಕ್ರಿ). ೧. ಸಾಲುಹಿಡಿ ; ಕ್ರಮವನ್ನು ಹೊಂದು : ದೆಸೆದೆಸೆಯೊಳ್ ತರಂಬಿಡಿದು ಪಾಱುವ ವೀರರ ಸೆಕ್ಕೆ (ಎಳ. VII, ಶಿಕಾರಿ. ೨೪೨-೨೨ ; 1108). ೨. ಚೆಲುವಾಗು ; ಮನೋಹರವಾಗು : ಎಡ್ಡವಾದ ಪದ್ದಳೆಯ ಕಿಱುನನೆಯ ಕೊನೆ ತರಂಬಿಡಿದು ತೋಱಿ ಮುಱಿಯಂ ಧಾರೆಗಳನಳವಡಿಸಿದ ಕಿಂಕಿರಾತದೆಸಟ ಕಂಕಣಂಗಳುಮಂ (ಜಗವಿ. ೬-೦೬ ವ) ; ಪರಿವಿಡಿಯಿಂ ತರಂ[ಪಾಠಾಂ. ದಿತ್ತರಂ]ಬಿಡಿದು ಕಂದರ್ಪನಂ ಪಿಂದುಗಳೆವಂದವಂ ತಳೆದು ನಿಂದ ರಾಜ ಪುತ್ರರಿಂ (ರಾಜಶೇ. ೫-೦೯ ವ). **ತರವಿಡಿ:** ೧. ತರವಿಡಿದು ಹಡಪದಾರತಿಯ ಮಜ್ಜನದಿ ಸಿಂಗರದ ಭೂಷಣ ಯಕ್ಷಕರ್ದಮದ . . . ನೆರವಿಗಳ್ಸಹಿತ ಪುಷ್ಪಕವೇಱಿ (ಲತಿಚಂ. ೦೩-೬); ಕುರುಬಲನಿಕರ ತಳಿತುದು ತರವಿಡಿದು ಕಳನೊಂದು ಮೂಲೆಯಲಿ (ಕುಮಾರಭಾ. ೨-೯). ೨. ಚಿಮ್ಮುವ ಚಾಮರದ ತರವಿಡಿದ ಸೀಗುರಿಗಳ ವಿಡಾಯಿಯ ನೊಸಲ ಬಾಸಿಗದ . . . ರಾಜ ಕುಮಾರಕರು ನಡೆತಂದರೊಲವಿನಲಿ (ತೊರವೆರಾ. ೧-೦೬-೪೦). **ಥರಂಬಿಡಿ :** ೧. ಸಿರಿ ಸತಿಯರ ಸಾಲ್ವಿಡಿದಿಹ ಸರ್ವಾಮರನಿಚಯದ ಮುಂದೆ ಥರಂ ಬಿಡಿದಿಪ್ಪ ದಿಶಾಧಿಪರಂ ಬಳಸಿದ ಮನುಮುನಿತತಿಯಿಂ ಸಭೆಯೊಪ್ಪಿದುದು (ವೀರೇಶ. ೧-೦೫). **ಥರವಿಡಿ:** ೧. ಅಂಗಣದ ವೀಧಿಗಳ ಥರವಿಡಿದಂಗಡಿಯ ಪುಣ್ಯೋಪಕರಣದ ತುಂಗರಚನೆಯ ರಾಜಮಾರ್ಗದ ವರಪತಾಕೆಗಳ . . . ಈಕ್ಷಿಸುತ ನಡೆದರು (ನಿಘಗ. ೦೦-೩೬-೩೦).

**ತರತರಂಬಿಡಿ** (ದ್ವಿರುಕ್ತಿ) : ೧. ಸಾಲಾಗು ; ಕ್ರಮವಾಗಿರು ; ಓಳಿ ಗೊಳ್ಳು: ಗಜಘಟಾಫಳಕ ಕರಿಮಕರ ಕೈಗೈದ ಬಿಳಿಯ ಚಮರಿಗಳು ನೊರೆ ತರತರಂ[ಪಾಠಾಂ. ಥರಥರಂ] ಬಿಡಿದ [ಪಾಠಾಂ. ಬಿಡದೆ, ವಿಡಿದ] ಛಟ್ಟುಗಳು ತೆರೆತೆರೆಯ ಬಳಗ (ಸೋಮಲಿ. ೫-೩೧) ; ಮಹಾವಿಭವದಿಂ ಪರಿಪರಿಯ ಬಣ್ಣದಾರತಿಗಳಂ ಹೊನ್ನ ಹರಿವಾಣಂಗಳೊಳ್ ತುಂಬಿಸಿ ತರತರಂಬಿಡಿದು ನಡೆತಂದು . . . ನಿವಾಳಿಸಿ ಬಿಸುಟು ತೂಪಿಱಿದು (ಚಿಲಿಪು. ೫-೧೯). ೨. ಮನೋಹರವಾಗು; ಚೆಲುವಾಗು: ಮತ್ತಮಾಸ್ಥಾನಮೆಂಬ ನೀರ್ ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದುಗುಡಿಸಿದ ರತ್ನರಾಶಿಗಳೆ ಮೆಂಬಂತೆ ಮಣಿನಿಕರಖಚಿತ ಮಕುಟಕೋಟಿಗಳ್ ಮೆಱೆಯೆ (ಗಿರಿಳ. ೨-೦೦೫ ವ). [ ತರ$_{3}$ + ಪಿಡಿ$_{1}$ ]

**ತರಂಬೆಱು** (ಕ್ರಿ).=ತರಂಬಿಡಿ ೧: ನೆರೆನೆರೆದು ತರಂಬೆತ್ತು ಭರ್ಮಹರ್ಮ್ಯಂ ಗಳೊಳ್ಮೊರ್ಮೆಯಿಂ ನೋಳ್ಪ ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರುಂಗಮಂ ಕರತಳಾಸ್ಫಾಳನಂಗೆಯ್ದು (ರಾಜಶೇ.೦೩-೬೬ ವ). [ ತರ$_{3}$ + ಪೆಱು$_{1}$ ]

**ತರಕಟ** 'ತಱಕಟ' ನೋ.

**ತರಕಟಾಲು** (ಗು). ಕೆಲಸಕ್ಕೆ ಬಾರದ; ಉಪಯೋಗವಿಲ್ಲದ: ತರಕಟಾಲು, ಕ್ಷುದ್ರ,–ಮನುಷ್ಯ (Sorub. ೩೦೪ನಿ.) ; ಅದು ನಿಮ್ಮ ತರಕಟಾಲು ಗಡಿಯಾರದ ಹಾಗಲ್ಲ (ಸಾಹೇಬ್. ೯೯೩). 'ತಱಕಟ' ಪರಾ.
[ ←ತೆಲು. ತರಕಟ, ತಱಕಟ = ವ್ಯರ್ಥ, ಪೊಳ್ಳು ]

**ತರಕಲು** (ನಾ). ೧. ಒರಟಾದಂದು ; ನಯವಿಲ್ಲದಂದು. ೨. ಕಲ್ಲು, ಮರಳುಗಳ ಸಣ್ಣ ಕಣ. ೩. (ಧಾನ್ಯಗಳ) ನಂಚ್ಚು; ತರಿ; ರವೆ: (*).
ತರಕಲು ತರಕಲು (ದ್ವಿರುಕ್ತಿ) : ಅವರು ಆ ಕಡ್ಡಿಯನ್ನು ಪೆಟ್ಟಿಗೆಯ ಮೇಲೆ ತರಕಲು ತರಕಲಾಗಿದ್ದ ಕಡೆ ಸ್ವಲ್ಪ ತಿಕ್ಕಿದರು (ಕೇಳು. ೯೮) ; ಅವರ ಮೈಯೂ ಮೊಸಳೆಯ ಚರ್ಮದಂತೆ ತರಕಲು ತರಕಲು (ನಮ್ಮೂರು. ೩೮)... [ ತರಕು + – ಅಲು (< – ಅಲ್₄). / ತೆಲು. ತರಕಲು ]

**ತರಕಷ್** 'ತರಕಸ' ನೋ.

**ತರಕಷಿ** 'ತರಕಸ' ನೋ.

**ತರಕಸ**, ತರಕಷ್, ತರಕಷಿ (ನಾ). ೧. ಬಾಣದ ಕೋಶ ; ಬತ್ತಳಿಕೆ : ತರಕಸ ಸಿಂಗಾಡಿ ಕೂರಂಬು ಬೇಡೆಯ ಕರವಾಳು (ಕಂಪ್ರಸಾ. ೨೦-೫೯) ; ಸರಳು ತುಂಬಿದ ತರಕಸ ಸಿಂಗಾಡಿಗಳಿರದೆ ಸಾಸಿರ ಬಂಡಿಗಳಲಿ ಪರಿಪೂರ್ಣದಲಿ ಬರುತಿರ್ದುವು (ಕೆಂನವಿ. ೦೦-೩೭) ; ಬೆನ್ನ ಬಳಿಯ ತರಕಸ (ಬತ್ತಳಿಕೆ) ಗಳನ್ನು ಪುಡಿಮಾಡಿದರು (ಕರ್ಣಾಚ. ೦೪೭). ೨. ಅಂಬು; ಬಾಣ: ಆದಜ ಮೇಲಿದ್ದ ಬಲ್ಲಹಂಗೆ ಬಲ್ಲಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಷುಂಕಬಂ. ೬೪) ; ತರಕಸ ಸಿಂಗಾಡಿ ಕರದೊಳು ಬಲ್ಲೆಯ ತುರಗದ ಮೇಲೆ ಕತ್ತಿಗಳು . . . ಠೌಳಿಯನಾಂತುರವಣಿಸಿತು ರಾವುತರು (ಅಂಜಿತ. ೬-೭೦). ೩. ಬಿಲ್ಲು; ಧನುಸ್ಸು : ಪೊನ್ನ ಬತ್ತಳಿಕೆಯಂ ಬೆನ್ನೊಳ್ಕಳೆದು ತರಕಸ ಮನೆದವರೊಳ್ತೊಡರ್ಚೆ (ರಾಜಶೇ. ೬-೦೦ ವ). **ತರಕಷ್**: ೨. ಮೊದಲು ತರಕಷ್ ಕಮಾನ್ ಲಡಾಯಿ ಆಯಿತು (ಚಿಕ್ಕದಾ. ೩೭). **ತರಕಷಿ** : ೨. ಅನಂತರ ರಾಜಭೂವರರು ಖಾಸಾ ಆನೆಗಳಿಗೆ . . . ಸವಡೋಲು ಹಾಕಿಸಿ ತರಕಷಿ ಕಮಾನುಗಳನ್ನು ಆ ಸವಡೋಲಿನಲ್ಲಿಡಿಸಿದರು (ಬಖೈರು. ೦೩).
[ ←ಹಿಂ. ತರಕಸ್, ತರಕಶ್, ತೀರಕಸ್ ; ಮರಾ. ತರಕಸ್, ತರಕಶ್, ತರ್ಕಶ್ ; ಪಾರ. ತರ್‌ಕಶ್, ತೀರ್‌ಕಶ್ ]

**ತರಕಾರಿ**, ತರ್ಕಾರಿ₁ (ನಾ). ೧. ಕಾಯಿಪಲ್ಯ ; ಅಡುಗೆಗಾಗಿ ಬಳಸುವ ಸಸ್ಯ, ಕಾಯಿ ಮೊದಲಾದಂವು : ಮಾರುಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು . . . ಕೊನೆಗೆ ಬೇಯಿಸುವುದಷ್ಟೆ (ಆಡುಗಾ. ೦೨) ; ರಾಧಾಬಾಯಿ ತರಕಾರಿ ತರಲೆಂದು ಕೆಲಸದ ಆಳಿನ ಜೊತೆಗೆ ಮಾರ್ಕೆಟಿಗೆ ಹೋದರು (ವಾತ್ಸಲ್ಯ. ೨೫) ; ತರಕಾರಿ ತೋಟಗಳನ್ನು ಮಾಡಬೇಕಾದರೆ ನೀರು, ಗೊಬ್ಬರ ಇವುಗಳ ವಸತಿ ಚೆನ್ನಾಗಿರಬೇಕು (ವ್ಯವಮ. ೫೯). ೨. ತರಕಾರಿಯನ್ನು ಬೇಯಿಸಿ ಮಾಡಿದ ಪಲ್ಯ : ತರಕಾರಿ ಊಟಕ್ಕೆ ಸೊಗಸು ಕೊಡುತ್ತದೆ (ರೂಢಿ). **ತರ್ಕಾರಿ₁**: ೧. ತರ್ಕಾರಿ ತರಲು ಚಿಲ್ಲರೆ ತೆಗೆದುಕೊಳ್ಳಲು ಅಂಗಿಯ ಜೇಬಿಗೆ ಕೈಹಾಕುತ್ತಾನೆ (ನಡೆದಾ. I, ೩೦೨). [ ←ಪಾರ. ಹಿಂ. ಮರಾ. ತರಕಾರೀ ]

**ತರಕಿ**, ತರಕ್ಕಿ(ಗು). ೧. ಬಲವಾದ; ಹೆಚ್ಚಿನ; ಮೇಲಾದ: ದುರುಳ ದೈತ್ಯರ ಕೊಂದು ನಾರಿಯರಿಗೊಲಿದು ನೀ ಸರಕು ಮಾಡದೆ ಜಾಂಬವಂತನೊಡನೆ ತರಕಿ ಯುದ್ಧವ ಮಾಡಿ ತಪ್ಪದೆ ಮುರಹರಾ ಕೌಸ್ತುಭ ಸ್ಯಮಂತಮಣಿ ಮುದ್ದು ಕನ್ನಿಕೆಯ ಕರಗ್ರಹಣವನೆ ಮಾಡಿ (ಶ್ರೀಕೃಷಾ. ೦೪). **ತರಕ್ಕಿ** : (ನಾ). ೨. ಏಳಿಗೆ ; ಅಭಿವೃದ್ಧಿ ; ಉನ್ನತಿ : ನಿಮ್ಮ ತರಕ್ಕೀ ಸಲುವಾಗಿ ನಾನೇಸ್ವತಃ ನಿಮ್ಮನ್ನು ರಿಕಮೆಂಡ್ ಮಾಡಿ ಕಳಿಸೀನಿ(ಜೀದಾನ. ೬೨).
[ ←ಮರಾ. ತರಕೀ ; ಪಾರ. ಅರ. ಹಿಂ. ತರಕ್ಕೀ ]

**ತರಕು**, ದರಕು, ದರಗು₂, ದೊರಗು (ನಾ). ೧. ಒರಟಾದುದು; ನಯವಿಲ್ಲದುದು. ೨. ತರಿತರಿಯಾದುದು; ನಂಚ್ಚು : (*). **ದರಕು** : ೧. 'ದರಕಂದನಿ' ಪರಾ. **ದರಗು₂** : ೧. 'ದರಗುನಾಲಗೆ' ಪರಾ. **ದೊರಗು**: ೧. ಒರಟಾದ ನೆಲ ಇಲ್ಲವೆ, ದೊರಗಿನ ಮೈಯುಳ್ಳ ಪದಾರ್ಥ (ಬಾಬಕ್ಯ. II, ೮೦೯) ; ಪಾತ್ರೆ ಒರಸುವ ವಸ್ತ್ರ ದೊರಗಾಗಿ ಟವಲಿನಂತೆ ಇರಬೇಕು (ಆಡುಗಾ. ೪೭).
ತರಕುತರಕು (ದ್ವಿರುಕ್ತಿ) : ಹಿಟ್ಟು ತರಕುತರಕಾಗಿದೆ (ರೂಢಿ).
[ <ತಱು₃. / ತಮಿ. ತರಿಚು; ಮಲ. ತರಿಸು; ತುಳು. ದೊರಗ್ ]

**ತರಕ್ಕಿ** 'ತರಕಿ' ನೋ.

**ತರಕ್ಕು** (ನಾ). ಒಂದು ಬಗೆಯ ಭೂಮಿ (?) : ಮುಕ್ಕಣ್ಣ ಕತ್ತುಮಣುಮ್ಮನೆಯುಮ್ಮಾಟುಮ್ಪಟ್ಟಿಯುಮ್ನರಕ್ಕುಮಬ್ ಒಡೆಲನ್ (ಮ್ಯಆರಿ. ೦೯೪೨, ೩೦-೫೪.; 610). [ ? ]

**ತರಕ್ಷು** (ನಾ). ೧. ಹುಲಿಯ ಜಾತಿಗೆ ಸೇರಿದ, ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಪ್ರಾಣಿ; ಕಿರುಬ. ೨. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ, ತರಕ್ಷುಃ, . . . ಮೃಗಾರಿಃ – ಈ ೭ ಹುಲಿ" (ಹಲಾಯು. ೩೮-೬೩) ; ವಾಯಸಗೃಧ್ರಸಂಕುಳವೃಕಪ್ರಕರೋರು ತರಕ್ಷುಋಕ್ಷ ಗೋಮಾಯು ನಿಕಾಯಮಂ ತಣಿಪಿ (ಶಂಕಕಂ. ೬೦-೦೦೬) ; ಎರಲೆಯ ಕೋಡಿಂ ಕಣ್ಣಂ ತರಕ್ಷು ತುಱಿಸಿದುವು ನೆಱೆದು ಸಿಂಗದ ಮಱಿಗಳ್ ಶರಭದ ಕೆಲದೊಳ್ ನಲಿದುವು ನಿರವದ್ಯಚರಿತ್ರನಿರ್ದ ಋಷ್ಯಾಶ್ರಮದೊಳ್ (ಮಲ್ಲಿಕಾ. ೦೪-೦೯); ತರುಣ ವನಹರಿಣಯುಗವಂ ತರಕ್ಷು ಪಿಡಿವಂತೆ ಚಂಡಕರ್ಮಂ ಪಿಡಿದಂ (ಚುಕೋಕೀ. ೧-೪೭); ಕನಲ್ಕೆಯಿಂ ನೋಡಿ ಕಡಂಗಿ ಗರ್ಜಿಪ ತರಕ್ಷುಗಳೊಪ್ಪುಗುಮಾ ವನಾಂತದೊಳ್ (ರಾಜಶೇ. ೩-೬೩). [ ಸಂ. ]

**ತರಗ** 'ತಱಗು' ನೋ.

**ತರಗಡಿ** (ಕ್ರಿ). ಸಾಲನ್ನು ಕಡಿ; ಗುಂಪಿನಿಂದ ಬೇರೆಮಾಡು: ಪಿಂಕೊಂಡು ಬಹ ಸೇನೆ ತರಗಡಿದು ಕರಗಡಿದು ನೂಂಕಿದರು (ಜನಮು. ೩೯-೨೫).
[ ತರ₃ + ಕಡಿ₃ ]

**ತರಗಡೆ** (ನಾ). ಕೊರತೆ ; ನಷ್ಟ ; ಹಾನಿ : ಅಪಹಾರಃ, ಅಪಚಯಃ – ೨ ಹಾನಿಯ ಪೆಸರು. ಕೊಯಿಲು, ಕಸುಗೊಳ್ಳುವಿಕೆ, ತರಗಡೆ ಬರುವಿಕೆ (ಸಿದ್ಧಾಂತಿ. ೩೦೦). [ <ತಱಕಟ ]

**ತರಗತಿ** (ನಾ). ೧. ವರ್ಗ ; ಇಯತ್ತೆ; ಕ್ಲಾಸು : ಕೊನೆಯ ತರಗತಿಯವರೆಲ್ಲಾ ನುಗ್ಗಿ ಖುರ್ಚಿಗಳನ್ನು ಆಕ್ರಮಿಸಿ . . . ಕಲ್ಲುಗಳನ್ನು ತೆಗೆದುಕೊಂಡು ಹೊಡೆಯಲಾರಂಭಿಸಿದರು (ರಾಯಚೆ. ೬೬) ; ಪ್ರಥಮ ಮಧ್ಯಮ ತರಗತಿಯ ಪಾಠಗಳನು ಮನೆಯೊಳಿ ಹೇಳಿದರೆನಗೆ (ಇಂಪಾಹ. ೧೪-೫೮). ೨. ಮಟ್ಟ ; ದರ್ಜೆ : ಸಲಕರಣೆಗಳು . . . ಒಳ್ಳೆಯ ತರಗತಿಯವುಗಳಾಗಿರಬೇಕು (ಆಡುಗಾ.೩೨): ಬಿ. ಎ. ಪರೀಕ್ಷೆಯಲ್ಲಿ ಅತಿಉಚ್ಚ ತರಗತಿಯಲ್ಲಿ ಉತ್ತೀರ್ಣನಾದನು (ಸಸ್ಯಳ. ೯೫). ▶ಇದನ್ನು 'ತರ+ಗತಿ' ಎಂಬ ಸಂಸ್ಕೃತ ಶಬ್ದಗಳಿಂದ ರೂಪಿಸಿಕೊಂಡಿರಬಹುದು. ತರ = ತರಣ, ಗತಿ = ಗಮನ. [ ?. / ತೆಲು. ತರಗತಿ ]

**ತರಗಬರಗ** 'ತಾಱಗಬೀಱಗ' ನೋ.

**ತರಗಾರ** (ನಾ). ಇಟ್ಟಿಗೆ ಕೆಲಸ ಮಾಡುವವನು ; ಉಪ್ಪಾರ : ಗೋಡೆಯನ್ನು ತರಗಾರರು ಕಟ್ಟುತ್ತಾರೆ (ಮುಂಬಯಿ. ೪-೦೦೮) ; ಅವಳ ಗಂಡ ರುದ್ರಪ್ಪ ತರಗಾರ (ಬಂದಜೀ. ೬೯). [ ? + – ಗಾರ (< –ಕಾಱ) ]

**ತರಗು₁** 'ತಱಗು' ನೋ.

**ತರಗು₂**, ತರುಗು (ನಾ). ೧. ದಳ್ಳಾಳಿ ; ಸುಂಕ ; ವಟ್ಟ: 'ತರಗುಪೇಟೆ' ಪರಾ. ೨. ದಳ್ಳಾಳಿ ವ್ಯಾಪಾರ ನಡೆಸುವ ಸ್ಥಳ : ಹಳೇ ತರಗಿಗೆ ಬಂದು ಯಾರನ್ನು ಕೇಳಿದರೂ ಹೇಳುತ್ತಾರೆ (ಶಾಯಿಕ. ೮೨).
ತರುಗು : ೩. ಸೋಡಿ ; ರಿಯಾಯಿತಿ : "ತರುಗು, ವಟ್ಟ, ದಳ್ಳಾಳಿ" (Discount. ಪಾರಿನಿ. ೩೦).

**ತರಗಿನಂಗಡಿ** = ದಳ್ಳಾಳಿ ಅಂಗಡಿ; ವ್ಯಾಪಾರದ ವಹಿವಾಟಿನ ಮೇಲೆ ರುಸುಮು ತೆಗೆದುಕೊಳ್ಳುವ ಅಂಗಡಿ: (∗). **ತರಗಿನ ಪೇಟೆ** = ಮಾರುವ ಸ್ಥಳ; ಅಂಗಡಿ ಬೀದಿ : ವಿಪಣಿ, ಪಣ್ಯವೀಥಿಕಾ – ೨ ಅಂಗಡಿಬೀದಿ, ತರಗಿನ ಪೇಟೆ, ಮಾರ್ಕೆಟ್ಟು, ಮಾರುವ ಕೇರಿ (ಸಿದ್ಧಾಂತಿ. ೮೮).

[ ದೇ.೫ ತಮಿ. ಮಲ. ತರಕು; ತೆಲು. ತರಗು, ತರುಗು, ತಱುಗು ]

**ತರಗುಗುಡಿಸು** (ಕ್ರಿ). ೧. ಒಣಗಿದ ಎಲೆಗಳನ್ನು ಗುಡಿಸು; ಕಸಕಡ್ಡಿಗಳನ್ನು ಗುಡಿಸು : ಅವನು ತರಗುಗುಡಿಸುತ್ತಿದ್ದಾನೆ (ರೂಢಿ). ೨. (ಆಲಂ) (ಮನೆ ಕಟ್ಟುವ ಸಂದರ್ಭದಲ್ಲಿ) ಭೂಶುದ್ಧಿಮಾಡು : ಯಲೆಯೂರವಳಿತವದರವನಹಳಿ ಗ್ರಾಮವನು ನಿನಿಗೆ ಪುತ್ರಪೌತ್ರಿಕೆ ನಡದು ಬರುವಂತ ತರಗು[ಗು]ಡಿಸಿ ಕಟ್ಟಿಸಿದ ದಸೆಗೌಡನ ಹಳಿ (ಎಕ. XII, ಶಿರಾ. ೯೩–೦೦ : ೧); ಅವರು ತರಗುಗುಡಿಸಿ ಮನೆ ಕಟ್ಟಿದಾಗ ಯಾವ ತರಹ ಮನೆ ಕಟ್ಟಿದರೋ ಅದೇ ತರಹ ಮನೆಗಳಲ್ಲಿ, ಬಹುಶಃ ಅದೇ ಮನೆಗಳಲ್ಲಿ, ಈಗಲೂ ಇದ್ದಾರೆ ಎಂದು ಹೇಳಬಹುದು (ಜನ್ನಾ.ಕು. ೭).

[ ತರಗು₁ (<ತಱಗು) + ಗುಡಿಸು₁ (<ಗುಡಿಯಿಸು) ]

**ತರಗುಟ್ಟು** (ಕ್ರಿ). (ಕೋಪ ಅಥವಾ ಭಯದಿಂದ) ನಡುಗು; ಕಂಪಿಸು: ತರಗುಟ್ಟುತ್ತಾ . . . ಅವರ ಮನೆಯ ಋಣಾನುಬಂಧ ಹರಿಯಿತು ಎಂದು ಮನಸ್ಸಿನಲ್ಲಿ ತೀರ್ಮಾನಿಸಿಕೊಂಡಳು (ಕೊನೆಕೇ. ೦೯೯). 'ಥರಗುಟ್ಟು' ಪರಾ.

**ತರತರಗುಟ್ಟು** (ದ್ವಿರುಕ್ತಿ) : ಅವನು ಹೆದರಿಕೆಯಿಂದ ತರತರಗುಟ್ಟಿದ (ರೂಢಿ). **ತರತರಗುಟ್ಟಿಸು** = ಬಹಳವಾಗಿ ನಡುಗಿಸು : ಅನೇಕ ವಿಷಯಗಳನ್ನು ಸಂಗ್ರಹಿಸಿಕೊಂಡು ಬಂದಿದ್ದ ನಬತೋಲ್ ತರತರಗುಟ್ಟಿಸುವಂಥ ಸುದ್ದಿ ತಂದಿದ್ದನು (ಪುನರು ೩೪೫). [ ತರ₁ + ಕುಟ್ಟು₁ ]

**ತರಗುಪೇಟೆ** (ನಾ). ದಳ್ಳಾಳಿ ವ್ಯಾಪಾರ ನಡೆಯುವ ಪೇಟೆ,–ಮಾರುಕಟ್ಟೆ : ಹೊಸ ತರಗುಪೇಟೆಗಳ ಮಂಡಿವರ್ತಕರು (ಚಾಮಿಚಾಂ. ೦೯೯).

[ ತರಗು₂ + ಪೇಟೆ₂ ]

**ತರಗೆಲೆ** 'ತಱಗೆಲೆ' ನೋ.

**ತರಚಲು** (ನಾ). ತರಚಿಕೊಂಡುದಂ ; ಪರಚಿದುದು: ಏನಾದರು ಗೀಚುಗಳು ಛಾಯೆಗಳು ತರಚಲುಗಳು (ಗ್ರಾಮೂಕ. ೩೯).

[ ತರಚು₁ (<ತಱಚು) + – ಅಲು (< – ಅಲ್₂) ]

**ತರಚೀಟಿ** (ನಾ). ಕರೆಚೀಟಿ; ಅಪ್ಪಣೆ ಚೀಟಿ : ಹಾಟಿತಸು ಕಂಠದಲುಸುರ ಪರಿಪಾಟಿ ತಪ್ಪಿತು ಮೃತ್ಯುವಿನ ತ[ಪಾಠಾಂ. ಥ, ದ, ಧ]ರಚೀಟಿ ಹಿಡಿದನೊ ಹೇಳೆನಲು ಮಲಗಿದನು ಮೈಮಱೆದು (ಕುಮಾವ್ಯಾಗ. ೬–೧೨).

[ ? + ಚೀಟಿ₂ (<ಚೀಟು₂) ]

**ತರಚು₁** 'ತಱಚು' ನೋ.

**ತರಚು₂** 'ತಱಾಚು' ನೋ.

**ತರಜಿಗತ್ತರಿ** (ನಾ). (ಕುದುರೆಗೆ ತೊಡಿಸುವ) ಒಂದು ಬಗೆಯ ಆಭರಣ: ನೆತ್ತಿಯ ಬೆಳ್ಗೞಯ ನೊಸಲ ಕನ್ನಡಿಯ ಠೇವಂತಮಾಲೆಯ ಗಗ್ಗರದ ತರಜಿಗತ್ತರಿಯ ಪೊರ್ಕುಳ ಘಂಟೆಯ . . . ತುರಗಸಂಘಾತದಿ (ರಾಜಶೇ. ೬–೧೧ ವ). [ ? ]

**ತರಟ** (ನಾ). ಬೋಳುತಲೆಯುಳ್ಳವನು : ಅವನೊಬ್ಬ ತರಟ (ರೂಢಿ).

[ ತರಟು (<ತಱಟು) + – ಅ₇ ]

**ತರಟು** 'ತಱಟು' ನೋ.

**ತರಟುತಲೆ** 'ತಱಟುದಲೆ' ನೋ.

**ತರಟುದಲೆ** 'ತಱಟುದಲೆ' ನೋ.

**ತರಟೆ** 'ತಱಟೆ₂' ನೋ.

**ತರಡಿ** (ನಾ). (ಉಕ) ಚಿಕ್ಕ ತಟ್ಟೆ; ಸಣ್ಣ ತಬಕ: ವಿಜಯಾಬಾಯಿ ಎದ್ದು ಒಳಗೆ ಹೋಗಿ ಒಂದು ತರಡಿಯಲ್ಲಿ ಅಂದೇ ತಯಾರಮಾಡಿದ ಗುಲಾಬ ಜಾಮ ಮತ್ತು ಚಕ್ಕಲಿ ತೆಗೆದುಕೊಂಡು ಬಂದಳು (ಕ್ಷಿತಿಜ. ೬೦).

[ ←ಮರಾ. ಥರಡೀ ]

**ತರಡಿಗೆ** (ನಾ). (?) : ಪಡುವಲು ತೆಂಕಣದ ಕಲ್ಲಯ ಬಂಡೆರ ಬಡಗಲು ಪಡುವಲು ಕರಿಯ ತರಡಿಗೆ ಮೂಡಲು ಬಡಗಲು ಬೀಚನ ಮರಡಿ . . . ಬಂಡೆ ತೆಂಕಲು ಯೀ ಚತುಸೀಮೆ (ಎಕ. X (8), ಮಾಲೂರು. ೦೪೬–೦೦ : 1498). [ ? ]

**ತರಡು** 'ತರುಡು' ನೋ.

**ತರಣ₁** (ನಾ). ತ್ರಾಣ; ಶಕ್ತಿ; ಸಾಮರ್ಥ್ಯ: "ತ್ರಾಣ – ತರಣ" (ಶಮದ. ೨೫೪ ಪ್ರಯೋ); "ತರಣ – ತ್ರಾಣ = ಶಕ್ತಿ, ಆಧಾರ" (ಶಬ್ದಕೋ. ೧೭); ಅಂದಿನ ಮಹಿರಾವಣ ರಾವಣ ಕುಂಭಕರ್ಣಾದ್ಯರ ಸೊರ್ಕುಂ ಜೆರ್ಕುಂ ನಿಮ್ಮವರ ತರಣದ ನೆಲೆಯಂ ಪೇಳವೆ ! (ರಾಮಾಶ್ವ. ೧೧೨–೧೯). [ <ಸಂ. ತ್ರಾಣ ]

**ತರಣ₂** (ಗು). ೧. ದಾಟಿಸುವ ; ಪಾರುಗಾಣಿಸುವ : ಪ್ರಬಲಭಕ್ತಿಷಂಡಂ ಸುಗುಣಮಣಿಕರಂಡಂ ಭವಾಂಬುಧಿತರಣ ತರಂಡಂ (ಶಬ್ದಾರಾ. ೦–೧೯). (ನಾ). ೨. ದಾಟುವಿಕೆ ; ಪಾರಾಗುವಿಕೆ. 'ತರಣಪಣ್ಯ' ಪರಾ. ೩. (ನೀರನ್ನು) ದಾಟುವ ಸಾಧನ ; ಹಡಗು, ದೋಣಿ, ಹರಿಗೋಲು ಮೊದಲಾದುವು : ಸಕಲ ಭಯಹರನೆ ನಿನ್ನಭಯಕರಂ ಸಂಸಾರವಾರ್ಧಿತರಣಂ ಶರಣಂ (ವಸ್ತುಕಂ. ೧೬–೦೨೦). [ ಸಂ. ]

**ತರಣಕ** (ನಾ). ದಾಟುವವನಂ ; ಪಾರಾಗುವವನಂ ; ಅತಿಕ್ರಮಿಸುವವನು : ಧೃತಮಾನಮಾನಸರ್ಕುಪಿತಮುಖರ್ಕರ್ಶವಿರ್ತತರಣತರಣಕರ್ಚಂಡಭುಜಬಲಯುತರ್ನರ್ತಕಕ್ಷ್ಮಕ್ಷ್ಮಗಳ್ಕಡುಪಿಂದೆ ಕಾದಿದರ್ (ಕೃಮಿಭಾ. ೨೨–೩೦). [ ಸಂ. ]

**ತರಣದ್ರೋಣಿ** (ನಾ). (ನೀರನ್ನು) ದಾಟಿಸುವ ದೋಣಿ; ಹರಿಗೋಲು: ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧರೋಧಸ್ವಿನೀತರಣದ್ರೋಣಿ . . . ವಾಣಿ (ಶಂಪ್ರಶು. ೦–೦೨). [ ತರಣ₂ + ದ್ರೋಣಿ ]

**ತರಣಪಣ್ಯ** (ನಾ). ದಾಟಿಸುವುದಕ್ಕಾಗಿ ಕೊಡುವ ಕೂಲಿ ; ದೋಣಿಗೆ ಕೊಡುವ ಕೂಲಿ : ನಾವಿಕರ್ಗೆ ತರಣಪಣ್ಯಮನಿತ್ತು ಮನ್ನಿಸಿ ಇರ್ವರುಮನುಕೂಲದೆಡೆಯ ಪುಳಿನದೊಳಿೞಿದರ್ (ರಾಮಾಶ್ವ. ೩೦–೯).

[ ತರಣ₂ + ಪಣ್ಯ ]

**ತರಣಿ** (ನಾ). ೧. ದಾಟುವಿಕೆ ; ಹಾಯುವಿಕೆ. ೨. ದಾಟುವ ಸಾಧನ ; ದೋಣಿ ; ಹರಿಗೋಲು ; ಹಡಗು : "ತರಣಿ ಯಾನಪಾತ್ರಂ" (ವಸ್ತುಕೋ. ೨೩–೦೦) ; ಪ್ರಬಲವಾದ ಜಲಪ್ರವಾಹದ ವೇಗವು ತರಣಿಯನ್ನು ರಸೂಲಪುರದ ನದಿಯ ಮಧ್ಯಭಾಗಕ್ಕೆ ಹೊಡೆದುಕೊಂಡು ಹೋಯಿತು (ಕಪಾಕುಂ. ೮). ೩. ಸೂರ್ಯ ; ರವಿ ; ಭಾನು : "ರವಿ ಮಾರ್ತಂಡಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೦೦–೩೪) ; ಸನ್ನೆಯಾಯಿಕೋದ್ಯಕ್ತಿಮಿರ ತರಣಿಯಾ ಬಂಧನೀ ಬಂದನೀ ಬಂದನ್ (ಎಕ. II, ೦೪೦–೧೪೬ : 1145) ; ನರಸಿಂಗಮೊನೆಯರ್ ಶಾವೆ ಕೈಗೊಟ್ಟು ತರಣಿಯುಂ ಪೂರ್ವಾದ್ರಿಗೇಱುಸುವ ಮಾಳ್ಕೆಯಿಂ (ನಂಜರಾ. ೫–೭೪) ; ತರಣಿ ತೇಜಂಗೆಡದಿರಗ್ಗಿ ಬಿಸುಪಾಜದಿರು (ಹಹಶಾ. ೨–೩೦) ; ತರಣಿ ದೂರದೊಳಿಹನು ; ಕಿರಣ ನಮಗೆಟಕುವುದು (ಮಂಕುಕ. ೨೦೯). ೪. ಒಂದು ಬಗೆಯ ಅಸ್ತ್ರ ; ಸೂರ್ಯಾಸ್ತ್ರ : ಅರಸನೆಚ್ಚಾ ಸರ್ಪಬಾಣವ ಗರುಡಬಾಣದಿ ತಮಕೆ ತರಣಿಯ (ಕೌಶಿರಾ. ೨೨–೩೦). ೫. ಒಂದು ಬಗೆಯ ಸಸ್ಯ : ತರಣಿ, ರಾಯಬೋರೆ (ವೃಕ್ಷಾಗಿ. ೨೦–೩೮೪) : ಪಾಪಟೆ, ಪಾಮಟೆ, ತರಣಿ, ಸೂಳೆಬೊಟ್ಟುಗಿಡ (ವೃಕ್ಷಾಗಿ. ೬೦–೦೨೦೩).

ತರಣಿಯ ತನಯ=ಸೂರ್ಯನ ಮಗ ; ಕರ್ಣ : ತರಣಿಯ ತನಯನ ನೆನೆದಾಸ್ಮರಣದೇ ಕಣ್ಗಣ್ಮುವೆನ್ನ ಶೋಕಮಹಾಸಾಗರಮಂ ತವೆ ಪೀರ್ದುದು ಕೌಶರ ಮಶೆಕ್ಕೋಪಾಗ್ನಿ ಬಾಡಬಾಗ್ನಿಯ ತೆಱದಿಂ (ಗದಾಯು. ೫-೩೭). [ ಸಂ. ]

**ತರಣಿಕರ** (ನಾ). = ತರಣಿಕಿರಣ : ತರಣಿಕರೋತ್ಕರಾಹತಿಗೆ ತಕ್ಕ ತಮಂ ನೆಱೆ ಬಂದು ತನ್ನಸಾವರಿಸಿದುದು (ಕುಸುಮಾ. ೨-೫೮) [ ತರಣಿ + ಕರ$_3$ ]

**ತರಣಿಕಾಂತ** (ನಾ). ಸೂರ್ಯಕಾಂತ ; ಸ್ಫಟಿಕ : " ತರಣಿಕಾಂತಮಿನಾಶ್ಮ ಮೆಂದೆನಲ್ ಸ್ಫಟಿಕಮಕ್ಕು " (ಮಂಗರಾ. ೩೧-೩). [ ತರಣಿ + ಕಾಂತ$_2$ ]

**ತರಣಿಕಿರಣ** (ನಾ). ಸೂರ್ಯಕಿರಣ : ತರಣಿಕಿರಣಕ್ಕೆ ಭುಗಿಲೆಂದುಱಿವ ಮಾಣಿಸಾನುವಿಂದಮೋಸಱಿಪೆಡೆಯೊಳ್ (ಚಂದ್ರಪ್ರ. ೧೦-೩೭). [ ತರಣಿ + ಕಿರಣ$_1$ ]

**ತರಣಿಕುಲ** (ನಾ). ೧. ಹಡಗುಗಳ ಗುಂಪು,-ಸಮೂಹ. ೨. ಸೂರ್ಯ ವಂಶ; ರವಿಕುಲ: ತರಣಿಕುಲಾಗ್ರಗಣ್ಯ ಬಿಡದಾಲಿಸು (ಉದ್ಭಟ. ೬-೦೦೯). ೧, ೨ : ತರಣಿಕುಲರಥಘನಹರಿದ್ವಿರದಾತುಳವನಚರಾಗ್ರಪದಬಲದಿಂದಂ ಧರಣೀಶಂ ರಾವಣನಪೊಲ್ ಸುರಗಣವರವರದ ಶರಧಿಕರಮೆಸೆದಿರ್ಕುಂ (ಹವಿಜ್ಞಾರ. ೦-೪೦). [ ತರಣಿ + ಕುಲ ]

**ತರಣಿಜ** (ನಾ). ೧. ಸೂರ್ಯನ ಮಗ ; ಕರ್ಣ ; ತರಣಿಜನಂತೆ ದಾನ ಗುಣದಿಂ ರಘುವಂಶಜನಂತೆ ಸತ್ಯದಿಂ . . . ಅಮರನೀತಿ ಸಮಾಖ್ಯದ ಭಕ್ತ ನೊಪ್ಪುವಂ (ಪ್ರಭುವಿ. ೯-೫). ೨. ಸುಗ್ರೀವ : ಮುನ್ನ ನೊಂದವರಳು ಕುವರು ದಿಟ ಎನ್ನ ಪತಿ ತರಣಿಜನ ನುಡಿಸುವೆ ಹರನ ಹೊಣೆಗೊಡುವೆ (ಶಾರಿರಾ. ೭-೩). ೩. ಶನಿ. ೪. ಯಮ. [ ಸಂ. ]

**ತರಣಿನಂದನ** (ನಾ). = ತರಣಿಜ ೨ : ತರಣಿಯಂತಿಹ ರತುನಪದಕವ ತರಣಿನಂದನಗಿತ್ತ ಮಾಣಿಕವಿರಚಿತಾಂಗವನಿತ್ತನಂಗದಗೆ (ಶಾರಿರಾ. ೪೪-೫೨). [ ತರಣಿ + ನಂದನ ]

**ತರಣಿಪ್ರಭ** (ನಾ). ಸೂರ್ಯನಂತೆ ಕಾಂತಿಯುಳ್ಳವನು,-ತೇಜಸ್ವಿ ; ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಪುರಸ್ಕರಿಸಿದಂ (ಜಗವಿ. ೨-೯೨). [ ಸಂ. (ತರಣಿ + ಪ್ರಭಾ + –) ]

**ತರಣಿಬಾಣ** (ನಾ). ಸೂರ್ಯಬಾಣ ; ಸೂರ್ಯಾಸ್ತ್ರ : ಕೆರಳಿ ಕೋದಂಡ ದಲಿ ರಘುಪತಿ ತರಣಿಬಾಣವ ಹೂಡಿ ತೆಗೆದಿಸೆ . . . ಬೆಳಕು ಪಸರಿಸಿತು (ಶಾರಿರಾ. ೦೯-೨೭). [ ತರಣಿ + ಬಾಣ ]

**ತರಣಿವೀಥಿ** (ನಾ). ಪೂರ್ವಪಶ್ಚಿಮವಾದ ಬೀದಿ ; ಸೂರ್ಯಬೀದಿ : ಎರಡು ಬಾಗಿಲ ಸೂತ್ರದಲಿ ವಿಸ್ತರಿಸಿದಂಗಡಿ ಸೋಮವೀಥಿಯು ತರಣಿ ವೀಥಿಯಲವರವರ ಪಾಳೆಯಕೆ ಮುರಿವುಗಳ ಸುರರು ಸ್ಪೃಶ್ಯಸಬಾರದಿನ್ನೀ ನರರುಗಳ ಪಾಡೇನು (ಕುಮಾ್ಯಭಾ. ೦೦-೪೮). 'ಸೋಮವೀಥಿ' ಪರಾ. [ ತರಣಿ + ವೀಥಿ ]

**ತರಣಿಸುತ** (ನಾ). ಸೂರ್ಯನ ಮಗ ; ಶನಿ : ಗುರುರವಿಗಳುತ್ತುಂಗ ಭಾಗೆಯಲಿರಲು ತರಣಿಸುತ ಜೂಕದಲಿ ಮೆಱೆದಿರೆ . . . ಪುತ್ರೋದಯ ಗಳಾದವು ಭೂಪ ದಶರಥಗೆ (ಶಾರಿರಾ. ೦-೭೭). [ ತರಣಿ + ಸುತ ]

**ತರಣೋಪಾಯ** (ನಾ). ದಾಟುವ ಉಪಾಯ ; ಪಾರಾಗುವ ಹಂಚಿಕೆ: ಅವರೊಡನೆ ಸಹಕಾರವಾಗಲೀ " ರಾಜಿ " ಯಾಗಲೀ ಸಾಧ್ಯವಿರಲಿಲ್ಲ ಸಾಧಿಸಿದರೆ ಅದು ಕೇಶವನೊಡನೆ ಸಾಧಿಸಬೇಕು. ಇದೇ ತರಣೋಪಾಯ ವೆಂದು ಅವರಿಗೆ ಮನವರಿಕೆಯಾಯಿತು (ಕಮುಜೀ. ೩೪೩). [ ತರಣ$_2$ + ಉಪಾಯ ]

**ತರತಮ** (ನಾ). ಹೆಚ್ಚು ಕಡಮೆ ; ಮೇಲು ಕೀಳು ; ತಾರತಮ್ಯ : ತರತಮವಾಗಿ ಯೋಗಿತತಿ ಯೋಗವಿಭೇದದೆ ನಿಟ್ಟಿಪ . . . ಮಹಾತ್ಮನೆ (ಜಗವಿ. ೭-೯೦) : ವಾಚಕರ ತರತಮಗಳನ್ನರಿತು ಗ್ರಂಥಗಳನ್ನಾಯ್ದುಕೊಳ್ಳ ಬೇಕು (ಗ್ರಂಥಾಲ. ೦೦). [ ಸಂ. ]

**ತರತಮಭಾವ** (ನಾ). ನ್ಯೂನಾಧಿಕ್ಯ ; ತಾರತಮ್ಯ : ಕೂಡಿ ನುಡಿವಡೆ ಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ (ಶಮದ. ೮೪೦). [ ತರತಮ + ಬಾವ$_2$ ]

**ತರತರ$_1$** 'ತರ$_1$' ಪರಾ.

**ತರತರ$_2$** 'ತರ$_2$' ಪರಾ.

**ತರತರ$_3$** 'ತರಹ' ಪರಾ.

**ತರತರನೆ** (ಅ). ಗಡಗಡನೆ : ಛಳಿಯಿಂದ ಅವನು ತರತರನೆ ನಡುಗುತ್ತಿದ್ದಾನೆ (ರೂಢಿ). [ <ತರ$_1$ + – ಅನೆ$_1$ ]

**ತರತರಿಸು$_1$** (ಕ್ರಿ). ನಡುಗು ; ಕಂಪಿಸು : ಹಱಿಯ ಹೊಯ್ಲಿನೊಳುಮರಗಿರಿ ತರತರಿಸೆ (ಕೂರರಾ. ೩-೭-೮) : ಎಡವುತೆ ಪೂರ್ಣಕುಂಭಗಳ ಭೃಂಗಾರವ ಕೆಡವುತ ತರತರಿಸುತೆ ಬಿರ್ದು ಒಡೆವುತೆ ಗಳಿಗೆವಟ್ಟಲ ಪಾರ್ವರ ಮೇಲೆ ಕೆಡೆದನು ಮೂರ್ಛೆವೋದವನಂತೆ (ಪ್ರಭುಲಿ. ೯-೨೫). [ <ತರ$_1$ + – ಇಸು$_2$ ]

**ತರತರಿಸು$_2$** (ಕ್ರಿ). ವಿಧವಿಧವಾಗಿರು : ಫಲ್ಲಿಸಿ ಗಟ್ಟಿಯ ಕಟ್ಟಿದ ಪಿರಿಯ [ಯು]ರು ಪುಲ್ಲಿಗೆಗಳು ತರತರಿಸೆ (ಸೋಮಶ. ೩-೫೭). [ <ತರ$_2$ + – ಇಸು$_2$ ]

**ತರತರೀತ** (ನಾ). ೧. ಸೊಗಸಾದುದು ; ತಾಜಾ : ನಮಗೆ ತರತರೀತ ಬೇಕು (ಕಕ್ತ್ಯ. ೩೦೮). ೨. ಚಟುವಟಿಕೆಯುಳ್ಳದು ; ಲವಲವಿಕೆ ಯುಳ್ಳದು : ಜಳಕಾ ಬಗೀಹರಿಸಿ, ಅಷ್ಟ ಉಂಡ ಅಡ್ಡಾಗರಿ ತರತರೀತ ಆಗತೀರಿ (ದೀಪಹ. I, ೦೩೫). [ ←ಮರಾ. ತರತರೀತ್ ]

**ತರತ್ತರಂಗ** (ನಾ). ಚಲಿಸುತ್ತಿರುವ ಅಲೆ : ಭಾಸ್ಕರತನೂಜೆಯುನುಭಯತಟ ನಿಕಟಕುಸುಮನಿವಹ ತತ್ಪರಾಗಪಟಳ ಪಿಶಂಗತರತ್ತರಂಗಸರೋಜೆಯಂ ಮೆಚ್ಚಿ ಪೊಗಟ್ಟು ಜಲಕ್ರೀಡೆಯಾಡಲ್ ಬಗೆದು (ಪಂಪಭಾ. ೫-೫೮ ವ). [ ಸಂ. (ತರತ್ + ತರಂಗ) ]

**ತರತ್ತರಂಗೆ** (ನಾ). ಚಲಿಸುತ್ತಿರುವ ಅಲೆಗಳುಳ್ಳವಳು ; ಉಕ್ಕುತ್ತಿರುವ ತರಂಗಗಳುಳ್ಳವಳು ; ನದಿ : ಗಂಗೆಗೆ ಶಫರೋಚ್ಛಲಿತ ತರತ್ತರಂಗೆ ಗೊರ್ವಳೆ ಬಂದಳ್ (ಪಂಪಭಾ. ೦-೯೦). [ ಸಂ. ತರತ್ತರಂಗಾ (ತರತ್ + ತರಂಗ + –) ]

**ತರತ್ತರಳ** (ಗು). ಚಲಿಸುವ ; ಕಂಪಿಸುವ ; ಚಂಚಲವಾದ : ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಮುಜ್ಜ್ವಲ ಮುಕ್ತಾ ಭರಣಂ ತರತ್ತರಳ ತಾರೋದಾರ ಛಾಭಾರಮಂಗಲತಾ ಲಾಲಿತ ಸಾಂದ್ರ ಚಂದನರಸಂ ಬೆಳ್ದಿಂಗಳೆಂಬೊಂದು ಪಂಬಲ ಬಂಬಲ್ಗೆ[ಡೆ]ಯಾಗೆ ಬೆಳ್ಪಸದನಕೆ ಕಣ್ಗೊಟ್ಟಿತಾ ಕಾಂತೆಯಾ (ಪಂಪಭಾ. ೧-೦೩೭). [ ಸಂ. ತರತ್ತರಲ (ತರತ್ + ತರಲ) ]

**ತರತ್ತಾರನೇತ್ರ** (ನಾ). ೧. ಚಂಚಲವಾದ ಗುಡ್ಡೆಯಿರುವ ಕಣ್ಣು. ೨. ಅಂತಹ ಕಣ್ಣುಗಳುಳ್ಳವನು : ಘನಕೋಪಾಟೋಪಮಂ ತಾಳ್ದರುಣತರ ತರತ್ತಾರನೇತ್ರಂ ತತಸ್ಪಂದನಯುಕ್ತೋಷ್ಠಂ . . . ಭೋಂಕನೆ ಬಂದಂ (ರಾಜಶೇ. ೫-೧೩೦). [ ಸಂ. (ತರತ್ + ತಾರ + ನೇತ್ರ) ]

**ತರದೂದು, ತದರ್ೂದು** (ನಾ). ೧. ಸಜ್ಜು ; ಏರ್ಪಾಟು ; ಸಿದ್ಧತೆ ; ತಯಾರಿ : ಅಳು ಬಹಳ ತರದೂದಿನಿಂದ . . ತಗಾದೆ ತಪ್ಪಿಸಿಕೊಂಡು . . . ಓಡಿಹೋದನು (ಕಥಾಮಂ. IV, ೬೮) : ತಮ್ಮ ಇಷ್ಟ ಈಡೇರು ವುದಕ್ಕೆ ತಕ್ಕ ತರದೂದನ್ನು ಮಾಡುತ್ತಿದ್ದರು (ಮುಸುಗಿ. ೫೨) : ನನಗೆ

ಬಹಿಷ್ಕಾರ ಹಾಕಿಸಬೇಕೂಂತ ತರದೂದು ನಡೆಸುತಾ ಇದಾರೇಂತ ಹೇಳು (ಶೂಂಗಲ್. ೨೨); ಹೀಗೆ ಕೆಲಸದ ತರದೂದಿನಲ್ಲಿರುವಾಗ ಒಂದು ವಿಶೇಷ ಘಟನೆ ಜರುಗಿತು (ಇ ಬ ದಾ. ೦೨೯). **ತರ್ದೂದು**: ೨. ಅವಸರ; ಜರೂರು: ಅವರು ತರ್ದೂದಾಗಿ ಹುಣಸೂರಿಗೆ ಹೋಗವ್ರೆ (ಸರ್ವಮಂ. ೧೩). [←ಅರ. ತರದ್ದುದ್; ಹಿಂ. ತರದ್ದುದ್; ಮರಾ. ತರತೂದ್, ತರದೂದ್]

**ತರದೆವಾಡಿ** 'ತರ್ದವಾಡಿ' ನೋ.

**ತರನದಿ** (ನಾ). ದಾಟಬೇಕಾದ ನದಿ: ಉರಗವು ಗಜ ಹಯ ಸಿಂಹವು ಚರಿಸುವ ಪಥದೊಳಗೆ ತಾವು ಬೆದರದೆ ಬೇಗಂ ಹರಿಯನು ನೆನೆಯುತ ವನದೊಳ್ ತರನದಿಗಳ ದಾಂಟಿ ಭರದಿ ಬಂದರು ವನದೊಳ್ (ಹಮಹ. ೭೩). [ಸಂ. ತರನದೀ]

**ತರನ್ಮಣಿ** (ನಾ). (?) : ಕಿಱಿದೆಂದನಱಿವೞ್ದುಂದುಱದ ನರಂ ಚಿಂತಿತಾರ್ಥದಿ ತರನ್ಮಣಿಯಂ ಕಿಡಿದೆಂದುಱದನ ತೆಱದಿಂ ಬಱಿದಾಗದೆ ಬಯಸಿದರ್ಥಮಂ ಪಡೆದಪನೆ (ಶ್ರೀಪದಾ. ೦೧). [?]

**ತರಪಡಿ** (ನಾ). ಅಡಕೆಯಲ್ಲಿರುವ ಧೂಳು, ಚೂರುಗಳ ತೂಕವನ್ನು ಸರಿತೂಗಿಸುವುದಕ್ಕಾಗಿ ಕೊಡುವ ಹೆಚ್ಚಿನ ಭಾಗ: ಗೇಣದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ವೋಲೆಗ್ಗೊಳಗ, ಲಾಭಸರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಹಂಬಹಂ. ೦೦).

[ತರ? + ಪಡಿ₁]

**ತರಪಣ್ಯ** (ನಾ). = ತರಣಪಣ್ಯ. [ಸಂ.]

**ತರಪು** (ನಾ). ವಜ್ರವನ್ನು ಹೋಲುವ ಒಂದು ಬಗೆಯ ಕಡಮೆ ಬೆಲೆಯ ಬಿಳಿಯ ಹರಳು: (ಕ).

[ದೇ.: ತಮಿ. ತರುಪ್ಪು, ತಱುಪ್ಪು; ತೆಲು. ತರುಪು, ತಱುಪು]

**ತರಪೇತಿ** 'ತರಬೇತು' ನೋ.

**ತರಪೇತು** 'ತರಬೇತು' ನೋ.

**ತರಪೇತುಕೇಂದ್ರ** (ನಾ). (ಯಾವುದಾದರೊಂದು ವಿಷಯದಲ್ಲಿ) ಶಿಕ್ಷಣವನ್ನು ಕೊಡುವ ಕೇಂದ್ರ,–ಸಿದ್ಧಪಡಿಸುವ ಸಂಸ್ಥೆ: ಅವನು ತರಪೇತು ಕೇಂದ್ರದಲ್ಲಿ ಶಿಕ್ಷಣ ಪಡೆದು ಬಂದಿದ್ದಾನೆ (ರೂಢಿ).

[ತರಪೇತು (<ತರಬೇತು) + ಕೇಂದ್ರ]

**ತರಫ್** 'ತರ್ಫೆ' ನೋ.

**ತರಫು, ತರ್ಫಿ, ತರ್ಫು** (ನಾ). ೧. ನಿಟ್ಟು; ದಿಕ್ಕು; ಪಕ್ಷ. 'ಚೌತರಫು' ಪರಾ. ೨. ಗುಂಪು; ಬಣ: (ಕ). ೩. ದೇಶದ ಒಂದು ಭಾಗ; ಜಿಲ್ಲೆ: (ಕ). **ತರ್ಫಿ**: ೨. ಮುನಿಸೀಪಾಲಿಟಿ ಮತದಾರ ತರ್ಫಿಯಿಂದ ಅನಿಲನು ಆ ಕಾರಕೂನನ ಮೇಲೆ ಕೇಸುಹಾಕಿದನು (ಅಹನಾ. ೮೦): ಇಸೋಪನು ಮುಂದೆ ಬಂದು, ತನ್ನ ಒಡೆಯ ತರ್ಫಿಯಿಂದ ... ಹೇಳಿದನು (ಇಸೋಕ. ೯). **ತರ್ಫು**: ೧. ಪ್ರಜೆಗಳ ತರ್ಫಿನಿಂದ ಕರಿಸಿಕೊಂಡ ಪ್ರತಿನಿಧಿಗಳನ್ನು ಕೂಡಿಕೊಂಡು ರಾಜ್ಯವನ್ನು ಸಾಗಿಸಿದರು (ಮುಂಬಯಿ. ೬೦೩೦); ಕೋರ್ಟಿನಲ್ಲಿ ಪೋಲೀಸು ತರ್ಫು ಕೇಸನ್ನು ನಡೆಸಿದ ಇನ್‌ಸ್ಪೆಕ್ಟರು ಚನ್ನಮರಾಜರವರು ಹೇಳಿದರು (ಕಬನ. ೩೮೩).

[←ಅರ. ಹಿಂ. ಮರಾ. ತರಫ್, ತರ್ಫ್]

**ತರಫೆ** 'ತರ್ಫೆ' ನೋ.

**ತರಬರ** (ನಾ). ಆತುರ; ವೇಗ (?): ತರಬರದೊಳು ವೈಷ್ಣವರನು ಮೆರವಿಗೊಂಡಿರದ್ಯೆತಂದೊಡನೆನ್ನ ಕರೆದೊಯ್ಯು (ಕನಾಕ. ೩೩೬).

[?]

**ತರಬಿಯಾತ್ತು** 'ತರಬೇತು' ನೋ.

**ತರಬೇತಿ** 'ತರಬೇತು' ನೋ.

**ತರಬೇತು, ತರಪೇತಿ, ತರಪೇತು, ತರಬಿಯಂತ್ತು, ತರಬೇತಿ, ತರ್ಬಿಯತ್ತು** (ನಾ). ಶಿಕ್ಷಣ; ತಿದ್ದುವಿಕೆ; ಪಳಗಿಸುವಿಕೆ; ಸಿದ್ಧಗೊಳಿಸುವಿಕೆ: ಅನುಭವಶಾಲಿಗಳಾದ ಒಬ್ಬ ವೈದ್ಯರನ್ನೂ, ಉತ್ತಮ ತರಬೇತು (Training) ಪಡೆದ ಸೂಲಗಿತ್ತಿಯನ್ನೂ ಗೊತ್ತುಮಾಡಬೇಕು (ಗೃಹವಿ. ೧೦೨). **ತರಪೇತಿ**: ವಸ್ತುತಃ ನಿಸ್ವಾರ್ಥತೆಯ ಸಾಧನೆಗೆ ಅದು ಉತ್ತಮ ತರಪೇತಿಯನ್ನು ಕೊಡಬಲ್ಲದೆಂಬುದನ್ನು ಹಿಂದೂಧರ್ಮವು ... ತೋರಿಸಲು ಯತ್ನಿಸುತ್ತಿದೆ (ಕತ್ಯಾ. ೫೭೮); ಆತನಿಗೆ ಕೆಲವು ಅರ್ಹತೆಗಳಿರಬೇಕು: ಸೂಕ್ಷ್ಮದೃಷ್ಟಿ, ಹೆಚ್ಚಿನ ಲೌಕಿಕಜ್ಞಾನ ... ಮುದ್ರಣದಲ್ಲಿ ತರಪೇತಿ ... ಮತ್ತು ಎಲ್ಲಾ ವಿಷಯಗಳ ಅರಿವು (ಮುದ್ರಕ. ೨೯). **ತರಪೇತು**: "ಅವನ ತರಪೇತೇ ಇರಬೇಕು" ಎಂದು ... ಹೇಳುತ್ತಾರೆ (ಗೋಕುರ. ೬೦); ನೀವೆಲ್ಲ ಮುಂದೆ ನಮ್ಮ ದೇಶದ ನಾಯಕರಾಗುವವರು. ಈಗಿನಿಂದಲೇ ಅದಕ್ಕೆ ತರಪೇತು (ಅನಾಮಿ. ೫೨). **ತರಬಿಯತ್ತು**: ಜ್ಞಾಪಕಶಕ್ತಿಯ ತರಬಿಯತ್ತಿಗೆ ಕೋಷ್ಟಕಗಳ ಅಭ್ಯಾಸವೂ ಅರ್ಥರಹಿತವಾದರೂ ... ಪದ್ಯಗಳ ಕಂಠಪಾಠವೂ ಆರಂಭವಾದುವು (ಶಿಕ್ಷದ. ೦೨೩); ಅನುವಂಶೀಯತೆ, ಪರಿಸ್ಥಿತಿ ಮತ್ತು ತರಬಿಯತ್ತು ಈ ಮೂರರ ಸಂತತವಾದ ಪ್ರಭಾವದಿಂದ ಪ್ರತಿಯೊಬ್ಬರ ವ್ಯಕ್ತಿತ್ವವೂ ಬೆಳೆಯುತ್ತದೆ (ಕ್ರ ಯೂ ಶಿ. ೦೬). **ತರಬೇತಿ**: ಜೋಸೆಫ್‌ಹೂಕರನ ಸಸ್ಯವಿಜ್ಞಾನದ ವಿದ್ಯಾಭ್ಯಾಸ ಮತ್ತು ತರಬೇತಿ, ತಂದೆಯ ವನಸ್ಪತಿಗಳ ಸಂಗ್ರಹದಿಂದ ಪ್ರಾರಂಭವಾಯಿತೆನ್ನಬಹುದು (ಸಸ್ಯಕ. ೮); ಅಧ್ಯಾಪಕತರಬೇತಿಗೆ ಸೇರುವ ಯೋಚನೆ ಮಾಡಿದ (ತ್ಯಾಗಮ. ೧೮೮); ನಾಳಿನಿಂದಲೇ ನಮ್ಮ ತರಬೇತಿ ಆರಂಭವಾಯಿತೆಂದೇ ತಿಳಿಯಿರಿ (ಅಹನಾ. ೧೬) **ತರ್ಬಿಯತ್ತು**: ಬಹಳ ಬಗೆಯಿಂದಾ ನಮಗೆ ತರ್ಬಿಯತ್ತು ಮಾಡಿದರು (ರಾಜೇಂದ್ರ. ೦೦೮).

**ತರಬೇತಾಗು, ತರಪೇತಾಗು** = ತರಪೇತಿಯನ್ನು ಹೊಂದು; ಶಿಕ್ಷಣವನ್ನು ಪಡೆ: ತರಬೇತಾದವರು ೩೦–೪೦ಜನ (ಸಸ್ಯಕ. ೫೯); ಈ ರೀತಿ ತರಪೇತಾದ ಮಾರ್ಕೊಪೋಲೊನನ್ನು ಖಾನನು ಕಳುಹಿಸಿಕೊಟ್ಟನು (ಪ್ರವಾಇ. II, ೭): ವೃತ್ತಿಶಿಕ್ಷಣಶಾಲೆಯಿಂದ ಹೊರಬಿದ್ದವರೆಲ್ಲರೂ ತಕ್ಷಣ ಕಾರ್ಯ ಆರಂಭಿಸುವಷ್ಟು ತರಪೇತಾಗಿರುವುದಿಲ್ಲ (ಶಿಕ್ಷದ. ೮೭೬). **ತರಬೇತುಕೊಡು, ತರಪೇತಿಕೊಡು** = ಶಿಕ್ಷಣವನ್ನು ಕೊಡು: ನಂಜರಾಜನೇ ... ಸೈನ್ಯಕ್ಕೆ ತರಬೇತು ಕೊಟ್ಟು ಯುದ್ಧಕ್ಕೆ ಸಿದ್ಧಪಡಿಸುತ್ತಿದ್ದನು (ಶ್ರೀರಾಯ. ೧೦೬): ಸಾಹಿತ್ಯ, ನಟನಾಕೌಶಲ್ಯದಲ್ಲಿ ತರಬೇತು ಕೊಟ್ಟವರು ನಮ್ಮ ರಾಯರು (ಬೆಂದಜೀ. ೦೦೮); ಅವರಿಗೆ ತರಬೇತು ಕೊಡುತ್ತಿದ್ದ ಆಸ್ಪತ್ರೆಗಳು ಕೂಡ ಸುಸಂಘಟಿತವಾಗಿದ್ದವು (ಮಾಹಪಾ. ೩೩); ಅನೇಕ ಕಾರ್ಯಾಲಯಗಳನ್ನು ಇಡಿಸಿ ಕೆಲಸವಿಲ್ಲದವರಿಗೆ ತರಪೇತಿ ಕೊಡಿಸಿದೆವು (ಪ್ರತಾಪ. ೯೦). **ತರಬೇತುಗೊಳಿಸು, ತರಬಿಯತ್ತುಗೊಳಿಸು** = ತರಬೇತುಮಾಡು: ಮಗನನ್ನು ಬಟ್ಟೆ ಹೊಲಿಯುವುದಕ್ಕೆ ತರಬೇತುಗೊಳಿಸಿದ್ದ (ತ್ಯಾಗಮ. ೫೫); ಮಾಧವರಾಯರ ಉಪದೇಶವೂ, ಸಹವಾಸವೂ ದೇಶಕ್ಕಾಗಿ ದುಡಿಯಲು ತರಬೇತುಗೊಳಿಸಿತು (ಕು ರು ಆ. ೧೪೨); ಅಪರಾಧಿಯನ್ನು ಉಳಿಸುವುದಕ್ಕಾಗಿ ಈ ವಕೀಲರು ಸುಳ್ಳು ಹೇಳುವ ಸಾಕ್ಷೀದಾರರನ್ನು ... ತರಬಿಯತ್ತುಗೊಳಿಸುತ್ತಿರುತ್ತಾರೆ (ಮಾಕನಾ. ೯೫). **ತರಬೇತುಮಾಡು, ತರಪೇತುಮಾಡು, ತರಬಿಯತ್ತುಮಾಡು** = ತಯಾರು ಮಾಡು; ಸಿದ್ಧಮಾಡು; ಪಳಗಿಸು: ಅವರನ್ನು ತರಬೇತುಮಾಡಲು ಮೈಸೂರು ಸರ್ವಪ್ರಯತ್ನವನ್ನೂ ಮಾಡಬೇಕು (ದಾದಾನ. ೧೪೭); ತರಬೇತು ಮಾಡಿದರೆ ... ಮಗುವನ್ನು ಬೆಳೆಸುವ ಕೆಲಸ ಸುಲಭವಾಗುತ್ತದೆ (ಗೃಹವಿ. ೧೧೫): ಆತನಿಗಾಗಿಯಾದರೂ ಆಕೆಯನ್ನು ತರಪೇತುಮಾಡಬೇಕು (ಕಂಕಣ. ೭೯); ಕಾಶೀಬಾಯಿಯವರು ... ಸ್ತ್ರೀಯರನ್ನು ತರಪೇತು ಮಾಡುವುದರಲ್ಲಿ ರಾಣಿಗೆ ಸಹಾಯಮಾಡುತ್ತಿದ್ದರು (ಝಾರಾಪ. ೧೮೯);

ಅವನು ನಮ್ಮ ಟೀಮನ್ನು ಎಷ್ಟು ಚೆನ್ನಾಗಿ ತರಪೇತು ಮಾಡಿದ ಎಂದರೆ ಶಾಲೆಯ ಎಲ್ಲಾ ಟೀಮುಗಳನ್ನೂ ನಾವೇ ಗೆದ್ದು ಜಯಭೇರಿ ಹೊಡೆದುಬಿಟ್ಟೆವು (ಶಾಲಮ. ೨೨೦): ಅವನ ನಾಟಕಗಳಲ್ಲಿ ಆಗಿಂದಾಗ ಜಂಕೆಯ ಬೇಟೆ, ಕುದುರೆಗಳನ್ನು ಸಾಕಿ ತರಬಿಯತ್ತು ಮಾಡುವುದು . . . ಅಲ್ಲಗಳೆಯಬುವಂಥಾದ್ದಲ್ಲ (ಷೇಕ್ಸ್‌ಪಿ. ೭).

[ ←ಅರ. ತರ್ಬಿಯತ್; ಹಿಂ. ತರಬಿಯತ್; ಮರಾ. ತರಬೇಜ್ ತರಬೇತ್, ತರಬೇದ್ ]

**ತರಮು** (ನಾ). (ಉಕ) ಕಂದಾಯ : ಅವನು ತರಮು ಕಟ್ಟಿ ಬರಲಿಕ್ಕೆ ಹೋಗಿದ್ದಾನೆ (ರೂಢಿ).

[ ←ಅರ. ಮರಾ. ತರವ್ = ಕಂದಾಯ ಹಾಕಲು ಆಸ್ತಿಯನ್ನು ಬೆಲೆ ಕಟ್ಟುವುದು ]

**ತರಲ, ತರಳ** (ಗು). ೧. ಅತ್ತಿತ್ತ ಚಲಿಸುವ; ಕಂಪಿಸುವ; ಚಂಚಲವಾದ; ಅಸ್ಥಿರವಾದ: ದುಃಖದ ಹೊರ ಉಬ್ಬರವು ಹೀಗೆ ತರಲವಾಗುತ್ತ ಹೋಗುವದೇನೋ ನಿಜವೇ (ಕಾಳರಾ. ೩). ೨. ಹೊಳೆಯುವ ; ಮಿಂಚುವ ; ಮಿರುಗುವ. 'ತರಲತೆ' ಪರಾ. ೩. ದ್ರವರೂಪವಾದ; ದ್ರವೀಭೂತವಾದ. ೪. ಕಾಮುಕನಾದ ; ವಿಷಯಲಂಪಟನಾದ. (ನಾ). ೫. ಬೆರಗು ; ವಿಸ್ಮಯ ; ಆಶ್ಚರ್ಯ : ತರಲಾ[ಪಾಠಾಂ. ಳಾ]ರ್ಥದಲ್ಲಿ ಬೆಳ್ಳಳಮಕ್ಕಂ (ಶಮದ. ೩೧೨). ೬. ಎಳೆವಯಸ್ಸಿನವನು ; ಬಾಲಕ ; ಹುಡುಗ : "ಚಂಚಲಃ ಹಾರಮಧ್ಯಮಣಿ ಬಾಲಕರುಂ ತರಲಾಭಿಧಾನ" (ನಾನಾರ. ೬೪). ೭. ಹಾರದ ಮಧ್ಯದಲ್ಲಿರುವ ಮಣಿ,-ರತ್ನ ; ಪದಕ: "ಹಾರಮಧ್ಯದ ರತ್ನನಾಯಕಂ ತರಲ[ಪಾಠಾಂ. ಳ]ಮದು" (ಮಂಗರಾ. ೦೦೦-೨೪); ಮಿರುಗುವ ಕೆಂಬರಲ ತರಲದಂತಿರೆ ಸಸಿಗಲ್ (ದಮುಕ್ತ. ೧-೯೦). ೮. [ಛಂದ] ಪ್ರತಿಪಾದದಲ್ಲಿ ಹತ್ತೊಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ. **ತರಳ**: ೧. ತರಳಕಟಾಕ್ಷಮಾಲೆಯೊ ಸಿತೋತ್ಪಲಮಾಲೆಯೊ ಕಯ್ಯ ಮಾಲೆಯೊ (ಕುಬ್ಜಪು. ೨-೫೯); ವಿದ್ಯಾಧರನ ಜನ್ಮಸ್ಥಾನವಾದತ್ರಿಸಮ ತರಳಗಂಭೀರಸದ್ಗೇಹವಾದತ್ರೆನಿಸಲ್ಕಿಂತಳ್ಕ ನಾನಾಮಹಿಮೆಯೊಳೆಸೆಗುಂ ಚಾರುಕರ್ಣಾಟದೇಶಂ (ಎಕ. VIII, ತೀರ್ಥಹ. ೨೩೦-೦೫; 1408): ಆ ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯಮಂ, ತರಳ ಚಂಚಲಚಿತ್ತದಿಂ ಬೀದಿವರಿವುದಯ್ ದೆಸೆದೆಸೆಗೆ (ಶ್ರೀರಾಮಾ. ೯೬-೯೬೩). ೨. ತರಳಸ್ಫಾಟಿಕಭಿತ್ತಿರುಚಿರವಂ . . . ಪುರಾಣಕೂಪಮನಗಾಧವಂ ಭೀಕರಮಂ ಅಂತಾ ಬಾವಿಯಂ ತೋರಿಸಿ (ಪಂಚತಂ. ೯೦-೦೭). ೫. "ತರಳಂ ಚಂಚಲರೂಪಂ" (ವಸ್ತುಕೋ. ೦೨೭-೩೩). ೬. ತರಳನಪೂರ್ವಿಗಂ . . . ವರವಿಪ್ರಂ (ಗಿರಿಳ. ೯-೯೦); ಮನೆಯವರೆಯ್ದೆ ಕರಕರಿಪ ದುಃಖವನು ತರಳ ನಿನ್ನಂ ನೋಡಿ ಮರೆದು ಪರಿಣಾಮಮಂ ಧರಿಸುತಿಪ್ಪೆನ್ನ ಗೋಣಂ ಕೊಯ್ದ (ಹರಿಶ್ಚ. ೦೩-೨೪); ತರಳರರ್ಜುನ ಸಾತ್ಯಕಿಗಳಿವರಿರಿಗೆ ಪಂಥವರೇತಕೆ (ಕುಮಾ.ದ್ರೋ. ೦೩-೦೫); ನರಸಿಂಹನ ಜಯಂತಿಯಲಿ ಜನಿಸಿದೀ ತರಳನು ನರಸಿಂಹನೃಸೆ (ಕಂಸವಿ. ೪-೬೭); ಈ ತರಳ ಬಟ್ಟಿಯಣ್ಣನು . . . ಆನೆಗಳ ಹಿಂಡು ಹಿಂಡುಗಳನ್ನೂ, ಕೊಳೆಯನ್ನೂ ತಂದನಂತೆ (ಸವತಿ. XII, ಪ್ರಸ್ತಾವನೆ). ೭. "ತರಳಂ ಹಾರೋಪನದ್ಧ ಮಧ್ಯಮರತ್ನಂ" (ವಸ್ತುಕೋ. ೦೨೭-೩೩): "ಹಾರದ ನಡುವೆಯಿದ್ದ ನಾಯಕರತ್ನವು ತರಳಂ ಎನಿಸುಗು" (ನಾಚಿರಾ. ೦೨೩): ತರಳಮನಾಂತ ಚಂದನದಲಂಕೃತಿ ಭಾವವನಾಂತ ವಸ್ತುವಿಸ್ತರ ಕೃತಿ (ಚಂದ್ರಪ್ರ. ೩-೫೯); ೮. ಸುರವ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂಗಳಿಂ ಪರದೊಳೊಪ್ಪೆ ಹಿಮಾಂಶು ಶೇಖರನಿರ್ದು ವಿಶ್ರಮಣಂ ದಿಶಾಕರಿಯೊಳಾಗಿರೆ ಸಂದುದಿಂತಿದು . . . ತರಳಂ ಕವೀಂದ್ರಜನಸ್ತುತಂ (ಛಂದೋಂಬು. ೨-೦೨೧). ೯. ಮಗ ; ಸಂತ : ತಾಯಿ ಮಾರಿಯಾದರೆ ತರಳನೆಲ್ಲಿ ಹೋದಾನು ? (ಗಾದೆ). [ ಸಂ. ]

**ತರಲತೆ, ತರಳತೆ** (ನಾ). ೧. ಕಂಪಿಸುವಿಕೆ ; ಚಂಚಲವಾಗಿರುವಿಕೆ ; ಚಾಂಚಲ್ಯ : ಸರಳತರೋಷ್ಣನಿಶ್ವಸಿತಮಾರುತನಿಂದೆ ನಿಜೋತ್ತರೀಯದೊಳ್ ತರಲ[ಪಾಠಾಂ. ಳ]ತೆಯಂ ನಿಯೋಜಿಪ ನೆಗಟ್ಟೆಗೆ ಕಾರಣಮೇನೊ ಕಾಮಿನೀ (ಚಂದ್ರಪು. ೩-೫೪). ೨. ಹೊಳೆಯುವಿಕೆ ; ಪ್ರಕಾಶ ; ಮಿರುಗುವಿಕೆ. **ತರಳತೆ**: ೧. ನೀಂ ಭವ್ಯನ್ಪೆ ಮತ್ತಿನ ಮಿಥ್ಯಾಚಿನ್ಹಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಂತನಪ್ಪೈ (ಆದಿಪು. ೩-೭); ಅನ್ಯರ್ವರಿಧವಿಸಿದೊಡಂಜುವುದ ಸ್ವೈರಣೆ ತರಳತೆಯ ನೋಡುತ್ಸಾಹಮಂಬಧ್ರೂರ್ತರ್ (ಕಾದಂಪೂ. ೩೬೬); ಕರೆದು ತಳ್ಳುವ, ತಳ್ಕಿರಿಸು ತೊಳಗೆ ಕಚ್ಚಿಡುವ ತರಳತೆಯದೇಂ ತಂತ್ರ ? (ಮಂಕುಳ. ೧೭೯).

[ ಸಂ. ತರಲತಾ ]

**ತರಲಾಕ್ಷಿ, ತರಳಾಕ್ಷಿ** (ನಾ). ೧. ಚಂಚಲವಾದ ಕಣ್ಣು. ೨. ಚಂಚಲವಾದ ಕಣ್ಣುಗಳುಳ್ಳವಳು ; ಚಂಚಲಾಕ್ಷಿ : ಲಿಪಿಯುನೆತ್ತಿ ವಾಚಿಸಿಕೊಂಡ ತರಲಾ[ಪಾಠಾಂ. ಳಾ]ಕ್ಷಿ ಶಾಸನದಕೆ ಮತ್ತೊಂದಭಿಪ್ರಾಯಮಂ ತಿಳಿದಳ (ಜೈಮಿಭಾ. ೩೦-೨೬). **ತರಳಾಕ್ಷಿ**: ೧. ತರಳಾಕ್ಷಿದ್ವಂದ್ವಂ (ಲೀಲಾವ. ೨-೪೬). ೨. ತರಳಾಕ್ಷಿಯನಾ ಕಾದಂಬರಿಯಂ . . . ಚಿಂತಿಸುತುಮಿರ್ದಾಯಿರುಳನ ದೆಂತಾನುಮುವನಿಪಾಲಂ ಕಳೆದಂ (ಕಾದಂಬ. ೦೮೩); ಅಲರ್ಗಣೆಯ ನರ್ಚಿಸಿದ ವಿಚಕಿಲಮಾಲೆಯನಾಂತ ಪೂರ್ಣಕುಂಭದ ಚೆಲ್ವಂ ಗೆಲೆವಂದುದಿಲ್ಲ ಕುಚಮಂಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ (ರಾಜಶೇ. ೩-೫೯).

[ ಸಂ. ತರಲಾಕ್ಷೀ (ತರಲ + ಅಕ್ಷಿ + –) ]

**ತರಲಾಪಾಂಗ, ತರಳಾಪಾಂಗ** (ನಾ). ಚಂಚಲವಾದ ಕಡೆಗಣ್ಣು ; ಕಡೆಗಣ್ಣ ನೋಟ : ತರಲಾಪಾಂಗವಿಲಾಸಸ್ಫುರಿತಮೆ ರೆಕ್ಕಣೆಕೆಯಾಗೆ ನಲ್ಲಳ ಮುನ್ನಂ ಬರೆದತನುಚರಿತವಿಗಾಗಳ್ ಬರೆದಂತಿರ್ದಪುದು ಮನ್ಮನಃಪುಸ್ತಕದೊಳ್ (ಆದಿಪು. ೪-೦೪) ; ತರಲಾಪಾಂಗದಿನಾ ನೃಪಾಲತಿಲಕಂ . . . ನಿರಂತರಮುದ್ಯಾನವಿನೋದಮಂ ಸಲಿಸುವಂ (ಅಜಿಪು. ೨-೦೮). **ತರಳಾಪಾಂಗ**: ಪರುಷಾಳಾಪವಪ್ಪುಮತಿನಿಷ್ಠುರವೀಕ್ಷಣಮುಖವಿಕಾರವಂ ಮರಸಿರೆಯುಂ ತರಳಾಪಾಂಗವುಮಾಕೆಯ ದರಹಸಿತವುಮುಮರಿಯೆ ವೇಟ್ಟು ಮೆಚಕವನಿರ್ದಯೊಳ್ (ಕವಿರಾ.೩-೧೦೯); ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೂಪಂದದಿಂ (ಲೀಲಾವ. ೭-೧೪); ತರುಣಿಯರ ತನುಪರಿಮಳದ ಸೋಂಕಿನಲಿ ಸುತ್ತಲುಪರಿಮಳಿಸಿದುದು ತರುಸುತರಳಾಪಾಂಗರೋಚಿಯಲಿ ಮುರಿದುದಾ ಮರಗತ್ತಲೆಯ ವ್ಯಸಿರಿ (ತೊರರಾ. ೧-೩-೯೩). [ ಸಂ. (ತರಲ + ಅಪಾಂಗ) ]

**ತರಲಾಯತಾಕ್ಷಿ, ತರಳಾಯತಾಕ್ಷಿ** (ನಾ). = ತರಲಾಕ್ಷಿ ೨ : ಚಿಂತಾತರಳತ್ವಮಂ ತೋರ್ಪುದಂತದರಿಂ ತರಲಾ[ಪಾಠಾಂ. ಳಾ]ಯತಾಕ್ಷಿ ನಿರ್ಹೇತುಕಮಪ್ಪ ಖೇದಮಂ (ಚಂದ್ರಪ್ರ. ೩-೬೫): ಲಾವಣ್ಯಕಾಂತಿಯಿಂ ದಿಕ್ತಟವ ಬೆಳಗುತ್ತ ನಿನ್ನ ನಡೆಮುಖವಿರಲು ತರಲಾಯತಾಕ್ಷಿ (ಧನ್ಯಾಲೋ. ೦೦೪). **ತರಳಾಯತಾಕ್ಷಿ**: ಇಂದುಕರಶ್ಚುತ ಚಂದ್ರಕಾಂತ ಪುತ್ರಿಕೆಯೊಸರ್ವಂತೆ ಝುಮ್ಮಗೆ ಬೆಮರ್ತಿರವಿಂ ತರಳಾಯತಾಕ್ಷಿಯಾ (ಶಾಂತಿಪು. ೮-೯೬). [ ಸಂ. (ತರಲ + ಆಯತ + ಅಕ್ಷಿ + –) ]

**ತರಲಿತ, ತರಳಿತ** (ನಾ). ಅಲ್ಲಾಡುವುದು ; ಚಲಿಸುವುದು ; ಚಂಚಲವಾದುದು: "ತರಲಿ[ಪಾಠಾಂ.ಳಿ]ತಂ ಪ್ರೇಂಖಿತಂ ಲುಳಿತಮಲ್ಲಾಡುವುದು" (ಮಂಗರಾ. ೧೩೪-೩೨). **ತರಳಿತ**: "ಪ್ರೇಂಖೋಳಿತಂ, ತರಳಿತಂ, ಪ್ರೇಂಕಿತಂ, ಲುಳಿತಂ – ಈ ೪ ಅಲ್ಲಾಡುವುದು". (ಹಲಾಯು. ೧೨೩-೭೧).

[ ಸಂ. ]

**ತರಲೆ$_1$, ತರಳ$_1$** (ನಾ). ೧. ಕಾಟ ; ಹಿಂಸೆ; ತಂಟೆ ; ಪೀಡೆ ; ಜಂಜಾಟ: ಈ ಒಣ ತರಲೆ ಏಕೆ ಕಟ್ಟಿಕೊಳ್ಳುತ್ತೀ ಅಪ್ಪ ? (ಕಾಮಿಕಾಂ. ೫): ಹೋದ ಮರುದಿನವೇ ತರೆತುಂಬ ತರಲೆ ತುಂಬಿಕೊಂಡು ಕಟ್ಟಮೋರೆ

ಮಾಡಿಕೊಂಡು ಹಿಂದಿರುಗುತ್ತಿದ್ದ (ಬಾಗಿನ. ೨೮); ಸಂಸಾರ ಅಂದ್ಮೇಲೆ ತರಲೆ ತಾಪತ್ರಯ ಇದ್ದೇ ಇರುತ್ತೆ (ಹೊಸಕ್ಷ. ೯೩). ೨. ಅಪ್ರಯೋಜಕ ವಾದುದು; ನಾಡಾಡಿಯಾದುದು: ಅವನ ಬ್ಯಾಟಿಂಗು ಸಹ ಅಂಥ ತರಲೆಯಲ್ಲ (ಜ್ಞಾಮಿಸ್ಸೀ. ೧೬೬); ಮನೆಯ ಕಡೆ ತರಲೆ ಹೊಲದ ಕಡೆ ಪುರಲೆ (ಗಾದೆ). ೩. ಆಧಾರರಹಿತವಾದ ದೂರು; ಪಿಸುಣು; ಚಾಡಿ: ಅರಸರ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು (ಗಾದೆ). ೪. ತರಲೆಮಾಡುವ ಸ್ವಭಾವದವನು; ತಂಟೆಕೋರ: ಆ ತರಲೆಯ ಸಹವಾಸ ಮಾಡಬೇಡ (ರೂಢಿ). ತರಳೆ$_1$: ೪. "ಶುದ್ಧ ತರಳೆಗಳು" ಎಂದು ರಾಮಣ್ಣನವರು ಒಂದೇ ಮಾತಿನಲ್ಲಿ ಉತ್ತರ ಕೊಟ್ಟರು (ಕಳಕು. ೦೦೪).

[ ದೇ.॥ ತುಳು. ತರಳೆ ]

ತರಲೆ$_2$, ತರಳೆ$_2$ (ನಾ). ಅಕ್ಕಿಯ ಗಂಜಿ; ಅಂಬಲಿ. ತರಳೆ$_2$: "ಯವಾಗೂ . . . ತರಳಾ, ವಿಲೇಪಿಕಾ – ಈ ೫ ಗಂಜಿ" (ಹಲಾಯು. ೫೩–೦೬೫).

[ ಸಂ. ತರಲಾ ]

ತರಲೆಅರ್ಜಿ, ತರಳೆಅರ್ಜಿ (ನಾ). ತಂಟೆ, ತಕರಾರುಗಳಿಂದ ಕೂಡಿದ ಅರ್ಜಿ: ಒಂದೋ ಎರಡೋ ಮೂಗರ್ಜಿ ತರಲೆಅರ್ಜಿ ಬೋರಂಟ ಬಿಟ್ಟಿತಾಯ್ತು (ಮುನಿಮೂ. ೧೦೫). ತರಳೆಅರ್ಜಿ: ಶ್ಯಾನುಭೋಗನೂ ಸಹ ರೈತರಿಗೆ ವಿರೋಧವಾಗಿ ಬೇಕಾದಂತೆ ತರಳೆಅರ್ಜಿಗಳನ್ನು ಬರೆಯುತ್ತಿದ್ದನು (ಗರುಡಾ. ೦೦೩). 'ಮೂಗರ್ಜಿ' ಪರಾ.

[ ತರಲೆ$_1$ + ಅರ್ಜಿ$_2$ ]

ತರಲೆಕಾರ (ನಾ) ತರಲೆಯನ್ನುಂಟುಮಾಡುವವನು; ತಂಟೆಕೋರ: "ದ್ರಾಘಿಕಃ, ದ್ರಾಘನಃ, ದ್ರಾಘಮಾಣಃ – ಈ ೩ ತರಲೆಕಾರನುಂ, ನಿಡಿಯನುಂ" (ಅಕಳ್ಕ. ೯೩). [ ತರಲೆ$_1$ + – ಕಾರ$_1$ (< ಕಾಜ) ]

ತರಲೆತನ (ನಾ). ತರಲೆಮಾಡುವ ಸ್ವಭಾವ; ಕಿಡಿಗೇಡಿತನ: ಹಳ್ಳಿಗಳು ಏಳಿಗೆಯಾಗಬೇಕಾದರೆ, ಇಂಥ ತಂದಿಟ್ಟು ತಮಾಷೆ ನೋಡುವ ತರಲೆತನ ತಪ್ಪಬೇಕು (ಪವ್ಯಾಳಿ. ೪೪). [ ತರಲೆ$_1$ + – ತನ ]

ತರಲೆವ್ಯವಹಾರ (ನಾ). ತಂಟೆ, ತಕರಾರುಗಳಿಂದ ಕೂಡಿದ ಕಾರ್ಯ ಭಾರ,–ವಹಿವಾಟು: ಯಾವುದೋ ತರಲೆವ್ಯವಹಾರ, ಪಾನು ಸಿಕ್ಕಿಕೊಂಡು ಒದ್ದಾಡಬೇಕಾಗಿದೆ (ರೂಪಸ. ೨೬೩). [ ತರಲೆ$_1$ + ವ್ಯವಹಾರ ]

ತರಲೇಕ್ಷಣ (ನಾ). ಚಂಚಲವಾದ ಕಣ್ಣು: ನಮ್ಮಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖದರ್ಪಣದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಚ್ಚಿದಳೆರಟ್ಟಿರದಿಂ ತರಲೇಕ್ಷಣಂಗಳಂ (ಪುಂರಾಮಾ. ೯–೦೦೨). [ ಸಂ. (ತರಲ + ಈಕ್ಷಣ) ]

ತರವಂಗಿ 'ತರುವಂಗಿ' ನೋ.

ತರವರ (ನಾ). ತೀಕ್ಷ್ಣತೆ; ತೀವ್ರತೆ (?): ಕಿರಿಯಣ್ಣನರ್ಥೋಪಾರ್ಜನೆಯಿಂ ಮನದೆರಕದಿನಾ ದಶಪುರಕೆ ತರವರನಾದ ಬೇಸಗೆಯೊಳು ಬಂದೊಂದು ಮಿರುಪ ದೈವದ ಶಾಲೆಯೊಳು ಮಲಗಿರಲು (ಪ್ರಭುಂಜ. ೩–೦೫೬).

[ ? ]

ತರವರಿ (ಕ್ರಿ). (ಯೋಗ್ಯತೆಯಲ್ಲಿ) ವ್ಯತ್ಯಾಸವನ್ನು ತಿಳಿ,–ತಾರತಮ್ಯವನ್ನು ತಿಳಿ: ತರವರಿತು ಇಹಪಾತ ಶಾಸ್ತ್ರಿಗ ದುರುಳನಡೆಗೈನೆಂದು ಪಹಿಸತಿ ಮುರುಕದಲಿ ನಿಪಗಿತ್ತ ರಾಜ್ಯವ ಬಸವನೆನಲರಸು (ಬಾಪು. ೭೦–೩೦); ರಾಜಕುಮಾರಕರ್ ಸಂಭ್ರಮಂ ಮಿಕ್ಕು ಪೊಕ್ಕು ತರವರಿದಿಕ್ಕಿದ ಪೊನ್ನಗದ್ದುಗೆಗಳೊಳುಕ್ಕಿವಂ ಮಿಗೆ ಕುಳ್ಳಿರ್ಪಾಗಳ್ (ದಮಸ್ಕ. ೯–೭ ವ).

[ ತರ$_3$ + ಅರಿ$_2$ (<ಅಱ) ]

ತರವಳಿ$_1$ (ನಾ). ತೆರ; ಪ್ರಕಾರ; ರೀತಿ: ಪರಿಪರಿಯ ವರ್ಣಾಶ್ರಮಂಗಳ ತರವಳಿಯ ಕೇರಿಗಳ ಲಕ್ಷ್ಮೀಕರವನಭಿವರ್ಣಿಸುವಡಸದಳವಾಗಿ ಫಣಿಪತಿಗೆ (ಅನಂರಾ. ೦–೧೭–೩). [ ←ತಮಿ. ತರವಟಿ ]

ತರವಳಿ$_2$ (ಗುಂ). ಕ್ಷುಂದ್ರವಾದ; ಅಲ್ಪವಾದ: ಪರಮಾತ್ಮ ನೀನು ಪರತತ್ವವೆಂದು ಭಾವಿಸಿ ನಿನ್ನ ಬಯಸಿ ಮಿಕ್ಕ ತರವಳಿ ದೈವದಾಸೆಗೆ ಸಿಲುಕಿ ದಾರಿದಪ್ಪುವೆನೆಂತು (ಗೀತಗೋ. ೬೩). [ ? ]

ತರವಾರ, ತಲವಾರ್, ತಳವಾರ್$_2$ (ನಾ). ಕತ್ತಿ; ಖಡ್ಗ: ಕಾಲಭೈರವನ ಹಣೆಗಣ್ಣನಂತೆ ಕಿಚ್ಚಿಡುವ ಪುಲಿಕೇಶಿಯ ತರವಾರದ ಧಾರೆಯಿಂದ ಪಲ್ಲವೇಂದ್ರನ ಕೆಚ್ಚೆದೆ ಬಾಡಿಹೋಯಿತು (ಅರಕ್ಷ. ೦೨). ತಲವಾರ್: ಫೋಲಿ ಸಾಂಬಾ ತಲವಾರ್ ಪೆಟ್ಟು ತಿಂದು ಗೌಡರ ಕೇರಿ ತಾಲಿಂನಲ್ಲಿ ಸಾಯುತಾ ಬಿದ್ದಿದ್ದಾನೆ (ಕಲಿನ. ೨೭೩); 'ತಲವಾರ್' ಶಬ್ದಕ್ಕೆ ಒಂದು ವಿಶೇಷ ಅರ್ಥವಾಗುತ್ತದೆಂಬುದನ್ನು . . . ತಿಳಿಸಿದಿ (ಭಾರತಿ. ೦೫). ತಳವಾರ್$_2$: ತಿಗುಳರ ಪಡೆಯುಂ ಕೂಡೆ ಬೆಂಕೊಂಡ ಗಂಡಂ ತಳವಾರಲು ತಳ್ತ ಭೂಪಾಳರ ಹೆಡತಲೆಯುಂ ಧೊಪ್ಪೆನಲು ಹೊಯ್ದ ಗಂಡಂ(ಎಕ. IV, ಸಾಗಮೂ. ೬೭–೦೦ : 1145).

[ ←ಹಿಂ. ಮರಾ. ತರವಾರ್, ತಲವಾರ್ / ಸಂ. ತರವಾರಿ]

ತರವಾರಿ (ನಾ). = ತರವಾರ: "ತರವಾರಿ ಮಂಡಲಾಗ್ರಂ . . . ಅಡಾಯುಧಮಸಿಕ್ಕು" (ಮಂಗರಾ. ೮೫–೩೭); ತದ್ವಧೂದ್ಯಗುತ್ಪಳಕಳಕುಟುಮಳಿತಪ್ರದ x ದು ರವಿಮಂಡಳಮೊ ತರವಾರಿ ಪೆಮ್ಮೆಗಭೂಪಾಳಕನ (ಸೌಇಇ. XI–ii, ೦೨೯–೧೭ : 1088); ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂಪಾಮಾ. ೦೩–೩೦); ಕದನದೊಳಂದು ನಿನ್ನ ತರವಾರಿಯ ಬಾಯಿಗೆ ಮೆಯ್ಯನೊಡ್ಡಲಾಱದೆ ನಳಿದಿನ್ನುವಂತದನೆ ಜಾನಿಸಿ ಜಾನಿಸಿ (ಎಕ. II, ೨೯೦–೨೩ : 1176); ಚಾಪವಿದ್ಯೆಯುಂ ಚಾರಣ ಚೂರಣಾದಿ ತರವಾರಿಯ ವಿದ್ಯೆಯನಾಗಮಂಗಳಂ . . . ಈತನಲ್ಲದಿಳೆಯೊಳ್ ಮಿಗೆ ಬಲ್ಲವರಾರ್ (ಪಕಳು. ೧೦–೯೩).

[ ಸಂ. ]

ತರವಿಡಿ 'ತರಂಬಿಡಿ' ನೋ.

ತರವೀಸ, ತಾರವಿಸ (ನಾ). ಒಂದು ಬಗೆಯ ನಾಣ್ಯ ಮತ್ತು ಅದರ ಬೆಲೆ: ನೂರಯಿಪ್ಪತ್ತು ವರಹ ತರವೀಸ ಉಳಿಯದೆ ನಂಮ ಅರಮನೆಗೆ ಸಾಕಲ್ಯವಾಗಿ (ಎಕ. VI, ಕೊಪ್ಪ. ೨೦–೭ : 1691 ?). ತಾರವಿಸ: ಮುವತ್ತು ವರಹಂನು ತಾರವಿಸ ಪುಳಿಯದೆ ಸಲ್ಲಿಸಿಕೊಂಡೆವಾಗಿ (ಮ್ಯಾಆರಿ. ೦೯೩೦, ೦೦–೦೯; 1585). [ ←ಪಾರ. ತರ್ವೀಜ್ ]

ತರಸ$_1$ (ಗು). ೧. ಚಲಿಸುವ; ಸಂಚರಿಸುವ: "ತ್ರಾಸ – ತರಸ" (ಕಮುದ. ೨೩೪ ಪ್ರಹೋ). (ನಾ). ೨. ಭಯ; ಹೆದರಿಕೆ; ಅಂಜಿಕೆ: "ತರಸಂ ತ್ರಾಸದೊಳಂ" (ಕರ್ಣಾನಿ. ೯೨); "ತರಸ – ತ್ರಾಸ = ಭಯ, ಆಯಾಸ" (ಕದ್ಯಕೋ. ೧೭). [ <ಸಂ. ತ್ರಾಸ ]

ತರಸ$_2$ (ನಾ). ಮಾಂಸ; ಬಾಡು; ಅಡಗು: "ಪಲಲಂ, ಜಾಂಗಲಂ . . . ತರಸಂ – ಈ ೮ ಮಾಂಸ" (ಹಲಾಯು. ೦೦೪–೪); ಹಿಂಸಾಜನ್ಯಂ ತರಸಂ ಅದಂ ತಿನ್ನುದಾರ್ಗಮಹಿತನಲ್ತು (ನೀತಿಮಂ. II, ೨೦೪). [ ಸಂ. ]

ತರಸು (ನಾ). ಸಾಗುವಳಿಯಿಲ್ಲದುದಂ; ಬಂಜರು. 'ತರಸಂಭೂಮಿ' ಪರಾ. [ <ತರಕು ]

ತರಸುಭೂಮಿ (ನಾ). ಸಾಗುವಳಿಯಿಲ್ಲದ ಭೂಮಿ; ಪಾಳುಬಿದ್ದ ಭೂಮಿ; ಬಂಜರು: (೬).

[ ತರಸು + ಭೂಮಿ ]

ತರಸ್ವಿ (ಗುಂ). ೧. ವೇಗವಾದ; ಶೀಘ್ರವಾದ. (ನಾ). ೨. ವೇಗಶಾಲಿ; ಚುರುಕಾದವನು: "ತರಸ್ವಿನ್, ತ್ವರಿತಃ, ವೇಗಿನ್, ಪ್ರಜವೀ, ಜವನಃ, ಜವಃ– ೬ ಜಾಗ್ರತೆಯೂ, ತ್ವರೆಯೂ, ವೇಗವೂ ಉಳ್ಳವನು" (ಸಿದ್ಧಾಂತಿ. ೨೨೨). ೩. ಕೆಚ್ಚುಳ್ಳವನು; ಧೈರ್ಯಶಾಲಿ; ಶೂರ; ಧೀರ. ೪. ಚಾರ; ದೂತ; ಹರಿಕಾರ. ೫. ಗರುಡ. [ ಸಂ. ತರಸ್ವಿನ್ ]

ರಾಜಗೃಹಕ್ಕೆ ಮಿಕ್ಕ ಗಜದಂತಚಯಂಗಳುಮಂ ಚಮೂರ ಕೃಷ್ಣಾಜನ ವನ್ಯವಸ್ತುಚಯಮಂ ಬಿದಿರಕ್ಕಿಯುಮಂ ತಱುಂಬಿ . . . ತದ್ವೃಷಭದತ್ತನ ಗೇಹದೊಳಂದು ಕಂಡೆ ನಾನೀ ಜನಸಂಸ್ತುತ ಪ್ರತಿಯುಗಂಗಳನರ್ಚಿಪ ಸಜ್ಜನಂಗಳಂ (ನೇಮಿಪು. ೧-೭೩) ; ಕೆಲವು ದಿವಸಕ್ಕೆ ಭವದೇವಂ ಬಂದು ಸುಕಾಂತನಂ ಕೊಲ್ವೆನೆಂದು ತಾನುಪಾರ್ಜಿಸಿ ತಂದ ಧನವೆಲ್ಲಮಂ ಕೊಟ್ಟು ಭೃತ್ಯರಂ ತಱುಬಲದಂ ಸುಕಾಂತಂ ಕೇಳ್ದು ಭವದೇವನಂಜಿಕೆಗೆ ಪುರಮಂ ಬಿಟ್ಟು (ಪುಣ್ಯಾಸ್ರ. ೬-೪೩ ವ) ; ಸುಕಾಂತನಂ ಕೊಲ್ವೆನೆಂದು ಶಾನಾರ್ಜಿಸಿ ತಂದ ದ್ರವ್ಯದಿಂ ಪಲಂಬರ್ವೀರ ಭಟರಂ ತಱುಬಿ ರಾತ್ರಿಯೊಳು ಸುಕಾಂತಂ ತನ್ನಿರ್ದ ಮನೆಯಂ ಮುತ್ತೆ (ಪುಣ್ಯಾಸ್ರ. ೧೧-೫೨).
[ ದೇ.॥ ತಮಿ. ತಱುಗು = ತಡೆಯಲ್ಪಡು ; ತೆಲು. ತಱುಮು, ತಱುವು ]

**ತಱುಂಬು$_2$**, ತರಂಬು$_2$, ತರುಂಬು$_2$, ತಱುಂಬೆ, ತಱುಪು$_1$, ತಱುಬು$_2$(ನಾ). ೧. ತಡೆಯುವಿಕೆ ; ಪ್ರತಿಭಟನೆ : "ತಱುಂಬೆಂದು ತಡೆವುದು" (ಶಶಸಾ ೨೩-೪೮೦). ೨. ಭಾರವಾದ ಕಲ್ಲುಗಳನ್ನು ಎತ್ತಲು ಉಪಯೋಗಿಸುವ ಕೋಲು ; ಸನ್ನೆಕೋಲು : "ತಱುಂಬು–ಗತಿಸ್ತಂಭೇ (ಅಡ್ಡಗಟ್ಟು) ಶಿಲೋದ್ವಹನ ದಾರೌ ಚ (ಸನ್ನೆಯ ಕೋಲು)" (ಶಮಣಿ): "ಗತಿಸ್ತಂಭದೊಳ್ ಸಿಲೆಯನೆತ್ತುವ ಮರದೊಳುಂ ತಱುಂಬಕ್ಕು" (ಶಬ್ದಮಂ. ೦೦೨). ೩. (ನದಿಯ ನೀರು ತಂದು ನೂಕಿರುವ) ಮರಳುರಾಶಿ: ಕಾಡಾನೆಗಳ ಕೋಡೇಱಿಂದಿಡಿದು ಕಳೆದ ಖರ್ಜೂರದ ಕಡಿಗಳಂತೆ ತಡಿದಡಿಯ ತಱುಂ[ಪಾಠಾಂ. ಱುಂ]ಬಿನೊಳ್ ಬಿಸಿಲಂ ಕಾಯ್ವ ಮೊಸಳೆವಿಂಡಿನ ಪಸರಂಗಳೊಳಂ (ಚಂದ್ರಪು. ೫-೪೦ ವ) ; ತಱುಂಬಿನೊಳ್ ಬಿಟ್ಟ ಮೀನಂತೆ ಮಿಡುಮಿಡುಕಿ (ಜೀವಸಂ. ೧೦೩-೪೭ ವ). **ತರುಂಬು$_2$** : ೪. ಅಡ್ಡಿ ; ತೊಂದರೆ. 'ತರುಂಬುವಡು' ಪರಾ. **ತರುಬು$_2$**: ೨. ತರುಬಿಲ್ಲದ ಒಡ್ಡನು, ಬಿರಿಸಿಲ್ಲದ ಹುರಿಯು (ಗಾದೆ). **ತಱುಂಬೆ** : ೩. ತಪೋಧನರಾಹಾರದಾನಕ್ಕಮ್ಮಾಟ ಕೂಟಕ್ಕಂ ತಱುಂಬೆಯ ಪೊಲದ ಹಗರಣಿಗನ ಬಾಗಿಂ ಪಡುವಣ ದೆಸೆಯಲಿ ದಿನಗುಣಿಗನ ಮೂಱು ಮತ್ತರು (ಸೌಇಇ. IX-1, ೧೬೫-೪೨ ; 1099). **ತಱುಪು$_1$** : ೩. ವಿಳಸಲ್ಲತಿಕಾಗ್ರಹಮಾಳೆ ಮಂಗಳಾಸ್ಪದ ಪುಲಿನಸ್ಥಲಂ ಪುದಿದ ಕೆಂಪಿನ ಶಾಲಿಯ ಕೆಯ್ವೊಲಂಗಳಿಲ್ಲದ ತಱುಪುಂ ತಱುಂಬುನೆಲನುಂ ಪರಿಭಾವಿಪೊಡಿಲ್ಲದೆಲ್ಲಿಯುಂ (ಶಾಂತೀಶ್ವ. ೧-೦೦೧). **ತಱುಬು$_2$** : ೨. ರಕ್ಕಸ ಕಿಂಕರರು ಬೊಬ್ಬಿಱಿದು ಬಲುಸನ್ನೆಗಳಲುಕ್ಕಿನ ತಱುಬುಗಳಲಿಕ್ಕಿದರು ತೇರಿಗೆ ತಗ್ಗಲವನಿತಲ (ತೊರರಾ. ೫-೭-೬). [ <ತಱುಂಬು$_1$ ]

**ತಱುಂಬುನೆಲ** (ನಾ). ಮರಳಂ ಭೂಮಿ ; ಉಸುಕು ನೆಲ (?): ಮದನ ವಿಹಾರ ಭೂಮಿಯೆನಿಸಿರ್ಪ ವನಾವಳಿ ವಾರಿಜಾಕರಂ ವಿದಳಿತ ಪುಷ್ಪರಾಜ . . . ಪುದಿದ ಕೆಂಪಿನ ಶಾಲಿಯ ಕೆಯ್ವೊಲಂಗಳಿಲ್ಲದ ತಱುಪುಂ ತಱುಂಬು ನೆಲನುಂ ಪರಿಭಾವಿಪೊಡಿಲ್ಲದೆಲ್ಲಿಯುಂ (ಶಾಂತೀಶ್ವ. ೦-೧೦೦).
[ ತಱುಂಬು$_2$ + ನೆಲ$_1$ ]

**ತಱುಪು$_1$** 'ತಱುಂಬು$_2$' ನೋ.

**ತಱುಪು$_2$** (ನಾ). ಕಡೆಗಂದಿಯಾದ ಹಸು ಅಥವಾ ಎಮ್ಮೆ. 'ತಱುಪೆರ್ಮೆ' ಪರಾ. [ ?. /ತಮಿ. ತಱುವು=ಕಡಮಯಾಗು ]

**ತಱುಪೆರ್ಮೆ** (ನಾ). ಕಡೆಗಂದಿ ಎಮ್ಮೆ : ನೆಱೆಪೊರಸುಗೆ ಕಾವಲಿಯುಂ ಕಿಱುಕುಸಲೆಯ ಬೇರೊಳಕ್ಕೆ ಕೊಳಗುಳಿಕಲೆಯೊಳ್ ತಱುಪೆರ್ಮೆಯ ಪಾಲಂ ಬಟಕಿರೆದಟ್ಟೊಡೆ ಮೃದುವೆನಿಪ್ಪ ಪಾಲವುಗಕ್ಕುಂ (ಲೋಕೋಪ. ೮-೯) ; ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮಮರ್ದಮಪ್ಪನಂ ಮಱುಗಿಸಿ . . . ಮಾಡ್ಬುದು ಕ್ಷೀರದುಂಡೆಯಂ (ಲೋಕೋಪ. ೮-೧೧) ;
[ ತಱುಪು$_2$ + ಎರ್ಮೆ ]

**ತಱುಬಿಸು** (ಕ್ರಿ). (?) : ಅಟಲಪಡಿಯ ಜ ೧ ತಱುಬಿಸಿಕೊಂಡು ಉಂಬ (ಬೊಂಕಶಾ. ೧೯೪೮, ಕುಮಟ. ೦೦೦-೬ ; ?). [ ? ]

**ತಱುಬು$_1$** 'ತಱುಂಬು$_1$' ನೋ.

**ತಱುಬು$_2$** 'ತಱುಂಬು$_2$' ನೋ.

**ತಱುಬುಲ್ಲು** (ನಾ). ಒಂದಂ ಬಗೆಯಂ ಹುಲ್ಲು; "ಕುಡುಂಗಕ"(ನಾಚಿರಾ. ೬).
[ ? + ಪುಲ್ಲು (<ಪುಲ್) ]

**ತಱುಮಿಂಡಿ** 'ತುಱುಮಿಂಡಿ' ನೋ.

**ತಱುವಾಣ** (?). (?) : ಧುರದೊಳ್ ಗುಂಡಪಮಾತ್ರಂ ನರಮೇಧವ ಮಾಡದುಳವನೆಂದೆನಲಾ ಭೀತರು ಮರನನೇಱಿ ಹೂವಿನ ತಱುವಾಣ ತಱುವಾಣ ಎನುತ್ತಮಿರ್ದ್ದರದೇನೋ (ಎಕ. V, ಬೇಲೂರು. ೩-೯೦ ; 1397 ?). [ ? ]

**ತಱುವಾಯ್**, ತರುವಾಯ್ಯ$_1$, ತರುವಾಯಿ, ತರ್ವಾಯ್ಯ$_1$, ತರ್ವಾಯಿ, ತಱುವಾಯ$_1$, ತಱುವಾಯಿ, ತಱುವಾಯು (ನಾ). ೧. ಕ್ರಮ ; ಪರಿವಿಡಿ : "ತಱುವಾಯೆಂದುಂ, ಪಾಟಿಯೆಂದುಂ ಕ್ರಮಂ" (ಕಶಸಾ. ೨೩-೫೦೯); ತಱುವಾಯಿಂದಾ ಯುಗಳಂಗಳೊಳೆ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ ದೀರ್ಘಕ್ಕೆ ದೀರ್ಘಂ ಪರಮಾದೊಡಂ . . . ಸವರ್ಣ ಸಂಜ್ಞೆ ವರ್ತಿಸುಗುಂ (ಶಮದ. ೭ ವೃತ್ತಿ) ; ತಱುವಾಯಿಂ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು (ಶಮದ. ೧೦ ವೃತ್ತಿ) ; ಕ್ರಮದ – ತಱುವಾಯಿಂದೆ (ಶಮದ. ೧೦ ಟೀಕೆ). ೨. ಅನಂತರದ ಸಮಯ ; ಮುಂದಿನ ಸರದಿ : ಆ ತಱುವಾಯಲಿ [ಪಾಠಾಂ. ಅನಂತರಂ] . . . ವನಪ್ರತೋಳಿಕಾದ್ವಾರಮಂ ಪೊಕ್ಕು (ಚಂದ್ರಪು. ೭-೬೩ ವ) ; ರಾಯಕಟಕಪಿತಾಮಹನ ತಱುವಾಯ ಲಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮ್ಯಾದ್ರೋ. ೦ ಸೂಚನೆ) ; ನೀವು ಕಟಕಾಚಾರ್ಯ ಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹೆವ ನೀವಿಂದು ತೇಜೋದ್ಭವಯದಲಧಿಕರಲೆ ನಾವು ತಱುವಾಯವರು (ಕುಮ್ಯಾಶ. ೧-೨೦); ಇಳೆಯ ಮೇಲೆ ಕೌಂತೇಯನ ಮಹಾಧ್ವರದ ವಾಜಿಗಳ್ಬೆರುಗಿ ತಱುವಾಯೊಳಿಲ್ಲಿಗೆ ಬಂದೊಡಾವು ಕಟ್ಟಿದೆವು (ಜೈಮಿಭಾ. ೩೨-೩) ; ಕೃಷ್ಣಾಚ್ಯುತರೆಂಬ ರಾಯರ್ಕಳವರ ತಱುವಾಯಿಂ ಮುದದೊಳೆಳೆಯಂ ಪೊಱೆದ ಸದಾಶಿವರಾಯಂಗೆ (ಚಳಸಂ. ೨-೧). ೩. ಸಮಯ ; ಅವಕಾಶ ; ಪ್ರಸಂಗ : ಇಲ್ಲಿ ಭಯ ಬೇಡಾವ ರಣವಿದು ತಲ್ಲಣಕೆ ತಱುವಾಯ ದೀವಿಗೆ ಪಲ್ಲವಿಸಿದರೆ ತಳಿತುದೇ ಭುಜಶೌರ್ಯ ಕುರುಬಲಕೆ (ಕುಮ್ಯಾದ್ರೋ. ೧೫-೩೯). **ತರುವಾಯ್ಯ$_1$** : ೧. "ಕ್ರಮಃ – ತರುವಾಯಂ" (ಕಾಶಕ್ಕ. ೪೦). **ತರುವಾಯಿ** : ೧. "ತರುವಾಯಯನಲು ತರ ಪರಿವಿಡಿಯೆನಲ್ಕಿವು ಪುಪರಿಯರ್ಥದೊಳ್" (ಕಶರ.೪೪). **ತರ್ವಾಯ್ಯ$_1$**: ೨. ಉದಿತ ಧರ್ಮದ ನೆಲೆಯನುರ್ವೀಶ ನೀತಿಗಳ ನಿಶ್ಚಯವನೈದೆ ಸಾಂಗೋಪಾಂಗವಮಾಗಿ ಬರಿಸಿ ತರ್ವಾಯೊಳಾ ಕುಮಾರರ್ಗೆ ಮುನಿನಾಥಂ ಧನುರ್ವೇದಮಂ ಶಿಕ್ಷಿಗೈದು (ಜೈಮಿಭಾ. ೧೯-೫೪); ಧರ್ಮದಿಂದಮೆ ರಾಜ್ಯ ಪರಿಪಾಲನಂಗೆಯ್ದು ವೈಕುಂಠಯಾತ್ರೆಯಂ ಮಾಡಿದನಾ ತರ್ವಾಯದೊಳ್ (ದಿವ್ಯಸ. ೬-೨೮ ವ) ; ಆ ತರ್ವಾಯದ ಹಾಡೇ ನಿಜವಾದ ರಾವಣ (ಸುವರ್ಣ. ೪೩). ೪. (ಹೇಳಿದ ಪಾಠವನ್ನೇ) ಪುನಃ ಪುನಃ ಹೇಳುವುದು; ಸಂತೆ ಹೇಳುವುದು ; ಪುನಃ ಪುನಃ ಪಠಿಸುವುದು : ತರ್ವಾಯಕ್ಕೆ ಸಿಕ್ಕಿದಲ್ಲಿ ವೇದಾಂತಿಯಾದ ಆಗುಚೀಗೆಯನಾಡಿಹೆನೆಂದು ಆಗಮಿಕನಾದ (ಶಿವಮಂ. ೪೪) ; ಕೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ ಕೂಳು ವೀಳೆಯ ವಿತ್ತು ಮುದದಿ ಆಳುಗೊಳಿಸಿ ಪ್ರತಿದಿವಸದಿ ತರ್ವಾಯ ಹೇಳುವ ವಿಬುಧರೊಪ್ಪಿದರು (ಮೋಹತ. ೩-೩೭) ; ಯಜುಃಶಾಖೆ ಅಧ್ಯಯನಕೆ . . . ಗ ೧೨ ಆ ತರ್ವಾಯ ಕೌಶಿಕಗೋ ಆಪಸ್ತಂಭ × × × ಭಟ್ಟರಿಗೆ . . . ಗ ೧೨ (ಎಕ. VIII, ತೀರ್ಥಹ. ೧೯-೦೦೦ ; 1573). ೫. ಪುನಃ ಅದನ್ನೇ ಮಾಡುವುದು; ಪುನರಾವೃತ್ತಿ : ಸರ್ವರೊಳಗೆ ಮುತ್ತೈದೆಯಾಗಿರ್ದು

ವೈಧವ್ಯವನಾಂತು ಬಾಳುವೆನೆ ಗರ್ವದ ನುಡಿಯಲ್ಲ ತನಗೆ ತನ್ನಾಳ್ದನ ತರ್ವಾಯ ಮಾಡೆಂದಳಳುತ (ಮೋಹತ. ೮-೩೬). **ತರ್ವಾಯಿ:** ೪. ಆ ಗೋತ್ರದ ಆ ಗ್ರಾಮದ ತಿರುಮಲಭಟ್ಟರ ಪುರುಷೋತ್ತಮ ಭಟ್ಟರಿಗೆ ಶಾಸ್ತ್ರದ ತರ್ವಾಯಿಗೆ ಕಾರಗಡೇಲಿ ಗ ೧೮ (ಎಕ. VIII, ತೀರ್ಥಹ. ೧೯-೧೦೪ ; 1673). **ತಱುವಾಯು1:** ೧. 'ತಱುವಾಯಗೊಳ್' ಪಠಾ. **ತಱುವಾಯಿ :** ೧. "ಪಾಟ್ ತಱುವಾಯಿ ಕ್ರಮವಮದು" (ಕವಿಕಂ. ೨೦೮). 'ತಱುವಾಯಿಗೊಳ್' ಪಠಾ. **ತಱುವಾಯು :** ೧. "ಪರ್ಯಾಯಂ" (ನಾಚಿರಾ. ೬).

[ದೇ.೫ತಮಿ. ತಱುವಾಯ್,ತರುವಾಯ್; ತೆಲು. ತರುವಾಯಿ,ತರುವಾತ]

**ತಱುವಾಯ್1** 'ತಱುವಾಯ್' ನೋ.

**ತಱುವಾಯ್2**, ತರುವಾಯ್2, ತರುವಾಯೆ, ತರ್ವಾಯ್2 (ಅ). ಅಮೇಲೆ ; ಆ ಬಳಿಕ : ರಾಯ ಕಟಕಾಚಾರ್ಯನಾ ತಱುವಾಯ ಸೇನಾ ಪಟ್ಟವನು ರಾಧೇಯನಲಿ ರಚಿಸಿದನು ಮುದದಲಿ ಕೌರವರ ರಾಯ (ಕುವ್ಯಾಕ. ೧ ಸೂಚನ) ; ಸಮರದಲಿ ಗುರು ಗಾಂಗೇಯ ಕರ್ಣ ದ್ರೌಣಿಗಳ ತಱುವಾಯ ಲೆಕ್ಕಕೆ ಸಂದನೈ ಮಱು ಪೂತು ಪಾಯ್ಕೆನುತ (ಕುವ್ಯಾಕ. ೨೦-೩೫). **ತರುವಾಯ್2:** ತರುವಾಯ ಹೇಳ್ವೆ (ಜ್ಞಾನಸಿಂ. ೧-೧೭) ; ಕಾಯಿಗಳನ್ನು ಒಣಗುವ ತನಕ ಗಿಡದ ಮೇಲೆ ಬಿಡುತ್ತಾರೆ. ತರುವಾಯ ಅವನ್ನು ಕೊಯ್ದು . . . ಮಾರಾಟಕ್ಕೆ ಕಳುಹಿಸುತ್ತಾರೆ (ಮುಂಬಯಿ. ೪-೪೦). **ತರುವಾಯೆ:** ಶ್ರೀಮಂತರು ನಿವೃತ್ತರಾದ ತರುವಾಯೆ-ದಳವಾಯಿ ತನವಂ ಕೊಡಿಸಬೇಕೆಂದೂ (ಬಿಟ್ಟಿಅ. ೨೨-೬). **ತರ್ವಾಯ್2 :** ಆ ತರ್ವಾಯ ವೈಶ್ವದೇವವಂ ಮಾಡಿ (ಬಿಳಿಸ. ೪೧) ; ಯೋಗ್ಯೋಪಚಾರಂಗೈದು ತರ್ವಾಯಯಾಸನವನಿತ್ತು ಕುಳ್ಳಿರಿಸಿ (ಹೋಲಿಬ. ೧-೩೨).

[ <ತಱುವಾಯ1 ]

**ತಱುವಾಯಗೊಳ್**, **ತರ್ವಾಯಗೊಳ್**, **ತಱುವಾಯಿಗೊಳ್** (ಕ್ರಿ). ಕ್ರಮವಾಗಿರು ; ಸಾಲಾಗಿರು : ತಱುವಾಯ[ಪಾಠಾಂ. ಯಿ]ಗೊಂಡು ಕುಳ್ಳಿಹಲ್ಲಿ ಸಂಸ್ಥಾಯ ಎನಿಸುಗು (ನಾಚಿರಾ. ೬). **ತರ್ವಾಯಗೊಳ್ :** ಗೀರ್ವಾಣ ಯಕ್ಷ ಗುಹ್ಯಕ ಸಿದ್ಧ ಸಾಧ್ಯ ಗಂಧರ್ವ ಕಿಂಪುರುಷ ಕಿನ್ನರರ ತರ್ವಾಯಗೊಂಡು ಮೇಲೇಳುಲೋಕದೊಳಿಪ್ಪ ಸರ್ವರ ರೂಹ ತೋಱಿ ದಳು (ಮೋಹತ. ೩೦-೧೧). **ತಱುವಾಯಿಗೊಳ್ :** ಮೇಲಿನ 'ನಾಚಿರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ತಱುವಾಯ1 (<ತಱುವಾಯ್) + ಕೊಳ್1 ]

**ತಱುವಾಯಿ** 'ತಱುವಾಯ್' ನೋ.

**ತಱುವಾಯಿಗೊಳ್** 'ತಱುವಾಯಗೊಳ್' ನೋ.

**ತಱುವಾಯು** 'ತಱುವಾಯ್' ನೋ.

**ತಱಿ3** 'ತಱಿ1' ನೋ.

**ತಱಿಕಾಡು** 'ತಟಿಕ್ಕಾಡು' ನೋ

**ತಱಿಯ1** 'ತಱಿ3' ನೋ.

**ತಱಿಯ2** (ನಾ). ತರಿಭೂಮಿ (?) : ಸಂಭು ಮೇಳೇಶ್ವರದೇವರಿಗೆ ಹೊಲಸ್ಥಳಕಂ ೩೦ ಗದ್ದೆ ಸ್ತ ಹೊಲವೇರಿಯ ಕೆಯಿ ಕೊ ೬ ತಱಿಯದ ಹಾಳಕೆಯಿ ಕೊ ೧೪ ಕಂಬಹಾಳ ಕೆಯಿ ಕೊ ೬ ಹತ್ತಿಯಹಾಳ ಕೆಯಿ ಕೊ ೪ (ಮೈಅರಿ. ೧೯೨೮, ೧೭-೫೪ ; ಸು. 1200). 'ತರಿ5' ಪಠಾ.

[ ? ]

**ತಱಿದಾರಿ** (ನಾ). (?) : ತಲ್ಲಿಗ ಸೋಯಿ ಸೆಟ್ಟಿ ತಾನೂರಕಯ್ಯಲು ಅಱು ಹೊಂಗೆ ಬ್ಯವಹಾರವಾಗಿ[ಮಾಡಿದ]ಗುಗುವಿನ ದಶಕದ ತಱಿದಾರಿಯಿಂದ x x x ವಟುಕಂ ಗಿರ ೧೦೦ಮಂ ತೋಟಕ್ಕೆ ಕೊಟ್ಟನ್ (ಕಇ. I. ೩೩-೩೨ ; 1246). [ ? ]

**ತಟ್1**, **ತಳ್1** (ಕ್ರಿ). ತಳಿತ1, ತಳ್ತ1, ತಟ್ಟಿ (ಭೂತಕೃ), ತಳುತು, ತಳ್ತು1, ತಟ್ಟು (ಭೂತನ್ಯೂ). ೧. ಸೇರು ; ಕೂಡು; ಒಡಗೂಡಂ : ಶ್ರೀತಟ್ಟುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂಪ್ರೀತಿಯನಾವನನಗಲಳ್ ನೀತಿನಿರಂತರನುದಾರನಾ ನೃಪತುಂಗಂ (ಕವಿರಾ. ೧-೧) ; ಪಸರಿಸಿ ನೀಳ್ದ ತನ್ನ ಜಸದೊಳ್ ವೆಱನೊರ್ವನ ಕೀರ್ತಿ ತಟ್ಟು ರಂಜಿಸೆ (ಪಂಪಭಾ. ೧೪-೩೯) ; ಎರಡುಂ ವಿದ್ಯಾಧರಶ್ರೇಣಿಯೊಳೆಡೆ ಯೆಡೆಯೊಳ್ ಜೈನ ಚೈತ್ಯಾಳಿ ತಟ್ಟಂಬರಮಂ ತಟ್ಟೈಸಿ ನಾನಾ ಮಣಿ ಕಿರಣಗಣ ಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೧೦೭) ; ವಿಸರುಹದಂತೆ ಕೇಸರಮನಾಂತುದು . . . ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಚುಚೋಚ. ೩-೭೮); ಪೂಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಿಂಚರದಲ್ಲಿ ತಟ್ಟು . . . ಎಲರಲ್ಲಿ ತೀಡುವುದು ಮೆಲ್ಲನೆ ಮೆಲ್ಲನೆ ರಯ್ಯಮಂಬಿನಂ (ಕಬ್ಬಿಕಾ. ೩೩). ೨. ಬಿಗಿ ; ಬಂಧಿಸು ; ಅಪ್ಪು : ನಾಗಶಯ್ಯೆಯೊಳ್ ನಾಗಿಣ ನಾಗಬಂಧ ದೊಳ್ ತಟ್ಟು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ೪-೧೭) ; ಬಲ ದೇವಂ . . . ತಮ್ಮಂ ಸಯೆ ಬಳ್ಳಿಯುಂ ನಿಗಳಮುಂ ತಟ್ಟಂದುವುಂ ಬಳ್ಳಿಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹ ಶೃಂಖಲೆ ಪಾಱೇಟ್ ತಪೋವನಕ್ಕೆ ತಳರ್ದು (ಶಾಂತಿಪು. ೪-೧೦೮). ೩. ಹೊಂದಿಕೊಳ್ಳು ; ಹೊಂದಿಕೆಯಾಗಿರು ; ಅನುರೂಪವಾಗಿರು : ಸಮಸಂಸ್ಕೃತಂಗಳೊಳ್ ತಟ್ಟ[ಪಾಠಾಂ. ಸಯ್ಪು]ಮರ್ದಿರೆ ಕನ್ನಡಮನಱಿದು ಪೇೞ್ಗೆ (ಕವಿರಾ. ೧-೫೦) ; ಬಗೆ ಪೊಸತಪ್ಪುದಾಗಿ ಮೃದುಬಂಧ ದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕು ಮಾರ್ಗದೊಳೆ ತಟ್ಟುದು ತಟ್ಟೊಡೆ ಕಾವ್ಯಬಂಧಮೊಪ್ಪುಗುಂ (ಪಂಪಭಾ. ೧-೮) ; ತ್ರಿದಶ ಮರುದಿಂದ್ರ ಪುರಚಂದ್ರಸಲಿಲಂಗಳ್ ತುದಿಯೊಳಿರೆ ತಟ್ಟು ಹರರಲ್ಲಿ ಯತಿ ನಿಲ್ಕುಂ (ಛಂದೋಂಬು. ೨-೦೫೮). ೪. ದಟ್ಟೈಸು ; ಇಟ್ಟಣಿಸು ; ಸಾಂದ್ರವಾಗು ; ಗಾಢವಾಗು : ಕೊಂಕಿದ ಕೊಂಕು ತದ್ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ ತಟ್ಟಿರಟ್ಟಿಡಿಯ ಪೂಮರದಿಂ ಕಟ್ಟೂಗಳತ್ತಮಿತ್ತಂ ಕವಿದಲ್ಲಿ ಮೆಲ್ಲನಗೆ (ಆದಿಪು. ೧-೬೦). ೫. ಅಂಟು ; ತಗುಲು ; ಹತ್ತು : ನೆತ್ತರ್ ತಟ್ಟ ಬಲ್ಲಲೆಯ . . . ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩ ಸೂಕ್ತಿ); ಕ್ಷತ್ರತೇಜಂ ಹಿಮಮಳುರ್ವಪೊಲಬ್ಬಂಗಳಂ ಗರ್ವಮದ್ಯೊವಿಪರಂ ತಟ್ಟಳ್ಳೆ ಕೊಂಡತ್ತದು (ಶಾಂತಿಪು. ೧೧-೧೧೧). **ತಳ್1 :** ೧. ಮಲೆಕನ್ನನೊಲಿದಂತೆ ನಿಂದಿಸಲ್ಕೆನ್ನ ಸತ್ಕುಲದ ಕುಂದಂ ನೋಡ ನಿನಗಲ್ಲ ಮದನಹರ ಜಲಜ ಸಂಭವಗರಿದು ತತ್ತಡೆಲೆ ಮುನಿಪ ಕೇಳೆಂದನು ಹರಿಶ್ಚಂದ್ರನು (ಹಕಾ. ೮-೩೮) ; ಮಡುವಿನಲಿ ತಳುತಿರಲಿಕಂದಿರನಡಿಗೆಱಗಿ ಶ್ರೀ ಗರುಡದೇವರ ಝುಡಿತೆಯಲಿ ಕಳುಹಿದನು ಬಂದನು ಕದ್ರುವಿನ ಮನೆಗೆ (ಸಂಭಪ. ೫-೫೮) ; ರುಧಿರಾಂಭೋನಿಧಿಯೊಳಂಭೋಧಿ ತಳ್ತುದು (ಉತ್ತರಾ. ೫-೨೨); ಸಹಜಾತರಾದ ನಿಮ್ಮೈವರೊಳ್ ತಾ ತಳ್ತಿರದೆ ವಿರೋಧಿಸಿದನೆಮ್ಮಯ್ಯಂ (ಕೃಮಿಭಾ. ೨-೩೯). ೪. ರವಿಕರ ಕೆದಗುದದಿಡಿಡಿದು ಸುತ್ತಿ ಮುತ್ತಿ ಕವಲಿಱಿದು ಕವಿವ ಲತಾಂತಜಾಳದ ತಳ್ತ ನೆಳಲಿಂ ಕಳ್ತಲಿಸುವ ಓಲಗ ಸಾಲೆಯೊಳ್ (೧೮೪. ೭-೧೧ ಪ) : ಬಾಲಕಿಗುರುಳವರು ನುಣ್ಣುರುಳ ತಳಿತ ನೀಲದ ಕುರುಳವರಾ ಕುವರಿಯ ಬಳಿವಿಡಿದೈದಿತೊಗ್ಗಿನಲಿ (ಮೋಹತ. ೨೪-೧೧). ೬. ನೆಡು ; ನಾಟು : ನರನ ಕುದುರೆಯ ಮೇಲೆ ಸಿಂಧದ ಹರಿಯ ತನುವಿನ ಮೇಲೆ ತಳಿತವು ಶರನಿಕರ (ಕುವ್ಯಾದ್ರೋ. ೩-೫೦) ; ಎಸಲು ಕಣೆ ಮುಕ್ಕುರುಕಿದವು ಹೊಸ ಮಸೆಯ ಧಾರೆಯ ತೋರಕಿಡಿಯಲಿ ಮುಸುಕಿತರಸನ ತೇರು ತಳಿತವು ಮೆಯ್ಯೊಳಂಬುಗಳು (ಕುವ್ಯಾದ್ರೋ. ೫-೨೧).

ತೞ್ತಪ್ಪು, ತಳ್ತಪ್ಪು = ಗಾಢವಾಗಿ ಆಲಿಂಗಿಸು: ಸರ್ವಾಂಗವನೆನ್ನಂಗಂಗಳೊಳ್ ಮೆಯ್ಗರೆದುವೆನಿಸಿ ಮಯ್ಯಾರೆ ತೞ್ತಪ್ಪಿ (ಕಾದಂಉ. ೫೩೩): ಶಾಂತಲಾದೇವಿ ಬಮ್ಮಲದೇವಿಯನ್ನು ತನ್ನ ಎರಡೂ ತೋಳುಗಳಿಂದ ತಳ್ತಪ್ಪಿ ಕರೆದುಕೊಂಡಳು (ಸವಶಿ. ೦೦೦). ತೞ್ತಿಡಿ = ದಟ್ಟವಾಗಿ ಕವಿ ; ಗಾಢವಾಗಿ ಆವರಿಸು : ತಮಾಲವನಂಗಳ ಮರ್ವು ಪರ್ವಿ ಕರ್ಮುಡುಗಳೊಳೆಯ್ದೆ ಮಾರ್ತೊಳಗೆ ನೀಲಸರೋಜವನಂಗಳಲ್ಲಿ ತೞ್ತಿಡಿದಿರೆ ಕಾಳಗತ್ತಲೆ ತಗುಳ್ದಿರುಳಾದುದೆ ಗೆತ್ತು (ಕಾದಂಪೂ. ೬೩೯). ತೞ್ತಿಡು = ಒಂದಕ್ಕೊಂದು ಹೆಣೆ ; ತಳಕುಹಾಕು : ಎರಡು ಕೆಯ್ಯಂ ತೞ್ತಿಟ್ಟು ಮಾಱ್ಪುದುಂ . . . ಎಂದಿವು ಮೂವತ್ತೆರಡು ದೋಷಂಗಳಪ್ಪುವು (ಷಸಾರ. ೬೮೬-೧೬). ತೞ್ತಿರು = ೧. ಕೂಡಿರು ; ಹೊಂದಿರು : ತಳಿರಿಂ ತೞ್ತಿತ್ತ ಶೋಕದ್ರುಮವೆಳಗೊನರಿಂದೊಂದಿತಿಮ್ಮಾವು (ಕಾದಂಉ. ೬೫೦) ; ಪರಮಾಳೋಚನದೊಳ್ . . . ನಿಬಿಡಕಾಯೋತ್ಸರ್ಗದೊಳ್ ಶುದ್ಧಿ ತೞ್ತಿರೆ (ಸುಕುಮಾ. ೪-೧೫). ೨. ತಟ್ಟಿರು ; ತಾಗಿರು ; ತಗುಲು : ಮದನದಾವದಹನಂ ತೞ್ತಿರ್ದಪುದಿಲ್ಲ ನಿನ್ನನದಱಿಂದುಪದೇಶಂಗೆಯ್ಯುತಿರ್ಪುದಿದು ಸುಖಮಲ್ತೆ (ಕಾದಂಪೂ. ೮೪೯): ೩. ಬೆರೆತಿರು ; ಲೀನವಾಗಿರು: ಅಕ್ಷಯಸುಖದೊಳ್ ತೞ್ತಿರು ನೀಂ ಸುರುಳ್ದಿರ್ಪ ಮರುಳ್ತನಮಿನ್ನೇಕೆ ದೇವಜನ್ಮಾಟವಿಯೊಳ್ (ಅಜಿಪು. ೬-೭೮) : ಜಿನಪಾದಾಂಭೋಜದೊಳ್ತೞ್ತಿರೆ ಮತಿ (ಧರ್ಮಾಮೃ. ೦-೫); ತೞ್ತಿರ್ದನಿಂದ್ರಪ್ರತಿಮಂ ಲೀಲಾವತೀದೇವಿಯ ಹೃದಯದೊಳ್ (ಲೀಲಾವ.೧೪-೯೬). ತೞ್ತಿಮೆ, ತಳಿತೆವೆ=ದಟ್ಟವಾದ ರೆಪ್ಪೆಗೂದಲು,-ಕಣ್ಣೆವೆ : ಬಳ್ವಳ ನೀಳ್ದ ಕಣ್ಮಲರ ತೞ್ತಿಮೆಯಿಂ ಕರೆಗಣ್ಮಿ . . . ಬಾಷ್ಪಜಳಮಂ ಕಳೆದು (ಪಂಪಭಾ. ೬-೬೮) : ತೞ್ತಿಮೆದುಱುಗಲಿನಿಱಿದುವು ಮಿಗೆ ಬಾಷ್ಪವಾರಿ ಧಾರಾಪೂರಂ (ಕಾದಂಪೂ. ೮೩೦) ; ಅಳಕನಿಚಯದ ಕುಂಭಿನೊಸಲಿನ ತಳಿತೆವೆಯ ನಿಡುಹುಬ್ಬುಗಳ (ಕುವ್ಯಾಭೀ. ೩-೭೭). [ದೇ.॥ ತಮಿ. ತೞುವಲ್, ತೞು=ಅಪ್ಪಿಕೊಳ್ಳುವಿಕೆ ]

△ ತೞ್₂ 'ತಳ್₂' ನೋ.

**ತಱತಱ, ತತ್ತಳ₁, ತತ್ತಱ, ತಳತಳ, ತಳಥಳ, ತಳ್ತಳ, ತೞ್ತಱ (ನಾ).** ೧. ತೀವ್ರವಾಗಿ ಕುದಿಯುವುದನ್ನು ಅನುಕರಿಸುವ ಶಬ್ದ. 'ತಱತಱಗುದಿ' ಪರಾ. ೨. ಹೆಚ್ಚಾಗಿ ಪ್ರಕಾಶಿಸುವುದನ್ನು ಅನುಕರಿಸುವ ಶಬ್ದ : ಗಟಗಟ, ಕವಕವ, ಛಱಿರ್, ಛಟಿರ್, ತಱತಱ . . . ಖಱಿಲನೆ, ದುಧುಮ್ಮನೆ ಇತ್ಯಾದಿ (ಶಬ್ದಾಡಿ. ೫೨). 'ತಱತಱನೆ', 'ತಱತಱಿಸು' ಪರಾ. ತತ್ತಳ₁ : ೨. ತತ್ತಳ ಸೀರೆಯನುಟ್ಟು ಮುತ್ತಿನ ರತ್ನ ಮಾಣಿಕವ ತೊಟ್ಟು (ಎಲಕಾ. ೧೩೬-೭). ೩. ಕಕ್ಕಾಬಿಕ್ಕಿ ; ತಬ್ಬಿಬ್ಬು; ಗಾಬರಿ; ಗೊಂದಲ ; ದಿಗ್ಭ್ರಮೆ: ಬಿತ್ತಿದರು ಕುರುಪತಿಗೆ ಭಯವನು ತತ್ತಳದ ತವಕದಲಿ ರಾಯನ ಮೊತ್ತದಕ್ಷೋಹಿಣಿಯ ಮಾರ್ಬಲ ಸಹಿತ ಹೊಱವಂಟ (ಕುವ್ಯಾಅ. ಓರಿಇ. ೨೫-೫) : ತತ್ತಳದ ಬೇಟದೊಳ್ಬೆಂಡಾಗಿ ವಿಷಯ ನಿಂದಿರ್ದಳಾತನ ಪೊರೆಯೊಳು (ತ್ರಿಮಿಭಾ. ೩೦-೨೩) ; ಸುತ್ತದೆ ಪಲಬಗೆಯ ತೀರ್ಥಯಾತ್ರಾದಿಗಳಂ ಗೊತ್ತಿನ ಹಾಲಾಸ್ಯದೊಳಂ ತತ್ತಳವಂ ಬಿಟ್ಟು ಮುಕ್ತಿಯ ಪಡೆದನವಂ (ಹಾಲಾಸ್ಯ. ೧-೧-೭೧). ತತ್ತಱ: ೧. 'ತತ್ತಱಗುಂದಿ' ಪರಾ. ತಳತಳ: ೧. 'ತಳತಳನೆ' ಪರಾ. ೨. ರಕ್ತಾಶೋಕಪಲ್ಲವದಂತೆ ತಳತಳ ತೊಳಗುವ [ಪಾಠಾಂ. ತೊಳತೊಳಗುವ]ಕರತಳ ಪಲ್ಲವಂಗಳ್ (ಪಂಪಭಾ. ೨-೩೯ ವ). 'ತಳತಳಿಸು' ಪರಾ. ೪. ತೊಳಲುವುದನ್ನು ಅಥವಾ ಸಂಕಟಪಡುವುದನ್ನು ಅನುಕರಿಸುವ ಶಬ್ದ : ಬಡವರನ್ನು ಯಾಕೆ ಸುಮ್ಮನೆ ತಳತಳ ಅನ್ನಿಸುತ್ತೀ ? (ರೂಢಿ). ೫. ಸೂರ್ಯೋದಯಂ; "ಉದಯ" (ಚತುನಿ. ೬. I, ೨೩). ತಳಥಳ: ೨. 'ತಳಥಳಿಸು' ಪರಾ. ತಳ್ತಳ: ೨. 'ತಳ್ತಳಗಂದಿ' ಪರಾ. ತೞ್ತಱ : ೧. 'ತೞ್ತಱಗುದಿ' ಪರಾ.

ತತ್ತಳಮಾಡು = ಗಾಬರಿಯಿಂದ ಮಾಡು ; ಗಡಿಬಿಡಿಯಿಂದ ಮಾಡು (?) : ನಿತ್ಯಕರ್ಮವ ಮಱೆದರು ದೇವಪೂಜೆಯ ತತ್ತಳ ಮಾಳ್ಪರು ತಪದ ಚಿತ್ತವನೊಡೆದರು ಸನ್ಮುನಿವರರು ದಂಡೆತ್ತಿ ಮನ್ಮಥ ಬಹ ಭರಕೆ (ಮೋಹತ. ೬-೨೮). ತತ್ತಳವಾಗು = ತಳಮಳಗೊಳ್ಳು; ಕಾತರಗೊಳ್ಳು : ಗಳರವಗಳ ಮಾಳ್ಪ ಬಗೆದರೆ ಹಲುಬುವ ಕೊಳರ್ವಕ್ಕಿ ಕೆಲವು ಲಾವುಗೆಯ ಬಳಸದ ದನಿಗೇಳ್ದ ಮುನಿಗಳ ಚಿತ್ತ ತತ್ತಳವಾದುದೇನ ಹೇಳುವೆನು (ಮೋಹತ. ೭-೧೬).

**ತಱತಱಗುದಿ, ತತ್ತಱಗುದಿ, ತಳ್ತಳಗುದಿ, ತೞ್ತಱಗುದಿ (ಕ್ರಿ).** ತೀವ್ರವಾಗಿ ಕುದಿ; ಜೋರಾಗಿ ಮರಳು; ಕತಕತನೆ ಕುದಿ: "ತಱತಱಗುದಿ, ತೞ್ತಱಗುದಿ—ಎಂಬಿವು ಕಾಸುವ ರಸದ್ರವ್ಯಾನುಕರಣಂಗಳ್" (ಶಮದ. ಪರಿ. ೧). ತತ್ತಱಗುದಿ : ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ತಱಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೦-೧೫೩) ; ತತ್ತಱಗುದಿದುವು ಭವನ ದೀರ್ಘಿಕಾಚ್ಛಜಲಂಗಳ್ (ಶಾಂತಿಪು. ೩-೧೦೬) : ತತ್ತಱಗುದಿದು ಕಾಯ್ದು ಕಾಯ್ಗೊಡದೆಣ್ಣೆಯೊಳರ್ದಿ (ಅಜಿಪು.೦೧-೧೦ ವ). ತಳ್ತಳಗುದಿ : ತಳ್ತಳಗುದಿದೆಣ್ಣೆಯೊಳ್ ಬಟಲೆ ತೆಗೆವುದುಂ (ಸುಕುಮಾ. ೦೧-೪೬ ವ). ತೞ್ತಱಗುದಿ : ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [ ತಱತಱ + ಕುದಿ₁ ]

**ತಱತಱನೆ, ತಳತಳನೆ, ತಳ್ತಳನೆ (ಅ).** ೧. ಹೆಚ್ಚಾದ ಕಾಂತಿಯಿಂದ ಕೂಡಿ ; ತಳತಳಿಸುತ್ತ ; ಪ್ರಕಾಶಮಾನವಾಗಿ : ಪಂಚಪಾಂಡವರ ತಲೆಗಳಂ ಕೊಂಡು ತಱತಱನೆ ನೇಸರ್ಮೂಡುವಾಗಳ್ ಬಂದು (ಗದಾಯು. ೯-೩೨ ವ) ; ತಱತಱನೆ ನೇಸರ್ಮೂಡಿದುದು ಮಿಱ್ತು ಮೂಡುವ ತೆಱದಿಂ (ಶಮದ. ೧೯೩ ಪ್ರಯೋ). ತಳತಳನೆ : ೧. ತಳತಳ[ಪಾಠಾಂ. ಥಳಥಳ]ನೆ ಕಾಹೇಱಿದದಱಲಿ ನಲಿದು ಛತ್ರೀಸಾಯುಧಂಗಳಿನಲಘುಮತಿಯಲಿ ವೀರಗೆಲಸವನಾಚರಿಸಿ (ಬಸಪು. ೫೩-೫೪): ತಳತಳನೆ ತೊಳಪ ರದನದ ಬೆಳಗಂತಃಸ್ಥಿತ ಕೃಪಾಸುಧಾಂಭೋನಿಧಿಯುಗ್ಗಳಿಸಿ ತೆರೆಮಸಗಿದಂತಿರೆ ಜಳರುಹರಿಪುಮೌಳಿ ತಾಪಸಂಗಿಂತೆಂದಂ (ಶಬಶಂ. ೨-೧೧೪). ೨. ಕೊತಕೊತನೆ ; ಕತಕತನೆ ; ತೀವ್ರವಾಗಿ : (ಕ). ತಳ್ತಳನೆ : ೨. ತಳ್ತಳನೆ ಕುದಿವ ಕರ್ಬೊನ್ನ ಕಾಯ್ಗೊಂಡೆಣ್ಣೆಯೊಳ್ ಬಟಲೆ ತೆಗವುವರುಂ (ಆದಿಪು. ೫-೮೫ ವ). [ ತಱತಱ + - ಅನ್₁ ]

**ತಱತಱಿಸು, ತಂಥಳಿಸು, ತತ್ತಳಿಸು, ತತ್ಥಳಿಸು, ತಳತಳಿಸು, ತಳತ್ತಳಿಸು, ತಳಥಳಿಸು, ತಳದಳಿಸು, ತಳ್ತಳಿಸು, ತಱತ್ತಱಿಸು (ಕ್ರಿ).** ೧. ಹೆಚ್ಚಾಗಿ ಹೊಳೆ,-ಪ್ರಕಾಶಿಸು; ತೇಜೋಮಯವಾಗಿರು: ಉರಿಯುರುಳಿಯಂತಪ್ಪ ಕಣ್ಣಿಂ ಕೃತಾಂತನಂತಾಕಾರವಾಗಿ ತಱತಱಿಸಿ ಪೊಳೆವ ಕತ್ತಿಗೆಯುಂಬೆರಸು ಪೊಱಮಟ್ಟು ಕೀರ್ತಿಗೆಯೆಂಬುಗ್ರ ದೇವತೆ . . .ಬೆಸನಂ ಬೇಡೆ (ಪಂಪಭಾ. ೮-೪೨ ವ); ಸಿಡಿಲ ಬಳಗಮನೊಳಕೊಂಡಂತೆ ತಱತಱಿಸಿ ಪೊಳೆವ ಕೆಯ್ದುಗಳ್ ತೀವಿದ. . .ಪಸುರ್ಪೊನ್ನ ರಥಮನೇಱಿ (ಪಂಪಭಾ. ೧೨-೫೩ ವ) : ಪೊಱಗಣೊಳಗಣೆರಡುಂ ಲೇಶ್ಯಾಶುದ್ಧಿಯಂ ತಾಳ್ದಿ ತಱತಱಿಸಿ . . . ಮಣಿಕುಟ್ಟಿಮಭೂವಿಭಾಗದೊಳಮಮಿತವಿಕ್ರಮದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ (ಶಾಂತಿಪು. ೯-೩೩ ವ). ತಂಥಳಿಸು : ೧. ಮೊಳಗಿದುದು ರಣಭೇರಿ ಗರ್ಭಕಲಿತ ಘೋರವರೂಥವೇರಿದ ಹೊಳೆಹೊಳೆದು ಚಲಿಸುವ ಮಯೂರಧ್ವಜನ ಟೆಕ್ಕೆನಲಿ ಛಲವದದ ಚತುರಂಗಬಲ ತಂಥಳಿಸಿ ನಡೆದುದು (ಅನಂರಾ. ೬-೫-೩). ತತ್ತಳಿಸು : ೧. ಗಂಧಾದಿ ಪಂಚ ತನ್ಮಾತ್ರೆಗಳು ನಿತ್ಯವೊಂದೊಂದಕ್ಕೆ ನಾನಾಪ್ರಭೇದದಿಂ ಬೇಱೆ ಬೇಱೆರುತಿಪ್ಪವು ಪ್ರತ್ಯಕ್ಷಮೆನಿಸಿತೋದೊಂದೆಱೆಳವೆಲ್ಲವುಂ ತತ್ತಳಿಸಿದೊಂದೆ ರೂಪಿನೊಳಿರುತಿಪ್ಪವು (ಲಶಿಚಂ.೫೩-೪೬). ೨. ಗಾಬರಿಗೊಳ್ಳು; ಹೆದರು; ನಡುಗು : ಬೆದಱಿದಳು ಮಾಯೆಯಪ

ಪ್ಪುತ್ತು ತತ್ತಳಿಸಿತ್ತು ಕದಲಿದಂ ಕಾಲಂ (ಲಶಿಜಂ. ೩೦-೧೨). **ತತ್ಥಳಿಸು :** ೧. ಮುತ್ತಿನಾ ತುರಾಯಿ ಅಂಗಿ ಮುಂಡಾಸು ತತ್ಥಳಿಪ ತಾಳಿ ವಜ್ರತಾಳಿ ಚೌಕುಲಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ೪೦-೪). **ತಳತಳಿಸು :** ೧. ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಟಿಯೊಂದು ಮಟಿಯೊಳಿರ್ದರಲಿ ಮಹೋಜ್ಜ್ವಳ ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱುತ್ತಾಗಳ್ (ಕಾವ್ಯಸಾ. ೧೦೫೦ ಪೂರ್ವ್ವಕ); ಬೆಳಗುವ ಮಂಗಳ ದೀಪಾವಳಿಗಳ ಬೆಳಗತ್ತಮಿತ್ತಮುಚ್ಚೊತ್ತಿದವೋಲ್ ತಳತಳಿಸಿ ಬೆಳಗೆ ಬೆಳಗನೆ ಪೊಳೆತಂತೊಪ್ಪಿದುವು ತೊಳಪ ರನ್ನದ ಕೇರ್ಗಳ್ (ಆದಿಪು. ೪-೩೪); ನವಯುವ್ವನರಾಗರಸಾರ್ಣವದೊಳ್ ತಳತಳಿಸಿ ಪೊಳೆವುತಿರ್ದವು ಮುತ್ತುಂ ಪವಳಮುಮೆನೆ ಕಣ್ಗೊಳಿಪುವು ಯುವತಿಯ ಸುಲಿಪಲ್ಲು ಮೆಸೆವ ಬಿಂಬಾಧರಮುಂ (ಕಾದಂಉ. ೦೫); ತಳತಳಿಪ[ಪಾಠಾಂ. ಕಳಕಳಿಪ]ರನ್ನದೆನೆ ಶತಯೋಜನಂಗಳಿಂಬಳತೆ (ಜಬಪು. ೨೯-೯). ೩. ತೀವ್ರವಾಗಿ ಕುದಿ,- ಮರಳು : ಶ್ರವಣವಿವರಕ್ಕೆ ಲೋಹದ್ರವಮಂ ತಳತಳಿಸಿ ಕಾಯ್ದುದಂ ಬಟ್ಟಂತಾ ಯುವತಿ ಕಡುನೊಂದು (ಮಹಾನೇ. ೦೭-೨೨). **ತಳತ್ತಳಿಸು:** ೧. ಪೊಟಲೊಳಗೊಪ್ಪ ಕನ್ನಡಿಯ ಕಂಚಿನ ತೋರಣದೋಳಿಗಳ್ ತಳತ್ತಳಿಸೆ ವಿಚಿತ್ರಕೇತುತತಿಗಳ್ ಮಿಳಿರ್ದಾಡೆ (ಪಂಪಭಾ. ೩-೭೪) ; ಪೊಳೆದೆಸೆವ ರತ್ನದ ರ್ಪಣದೊಳಗೆ ತಳತ್ತಳಿಪ ತರಣಿಕಿರಣಾವಳಿವೊಲ್ (ಕಾದಂಪೂ. ೪೩೪) ; ತಳ್ಪೊಯ್ದು ತರಳನಯನದ ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ (ಸುಕುಮಾ.೦೧-೦೪); ಕಲ್ಪಲತೆಗೆ ಪಾಸಟಿಯಾದಳ್ ನಳನಳಿಸುವ ಜಿನಶಿಶುವಂ ತಳೆದು ತಳತ್ತಳಿಪ ಹರಿಯ ವರವಧುವಾಗಳ್ (ವರ್ಧಪು. ೧೩-೯೭). **ತಳಥಳಿಸು :** ೧. ತಳಥಳಿಪ ಪದಾರ್ಥಮನೇಂ ಕಾಣ್ಬನೆ ದೋಷದೃಷ್ಟಿ ದುರ್ಮತಿ (ಶಬ್ದಾನು. ೧೯೦ ಪ್ರಯೋ). **ತಳದಳಿಸು :** ೧. ಪುರು ಪರಮೇಶ್ವರನ ದೂತನಂ ಕಾಣ್ಬವೊಲಾ ಭರತಂ ಕಂಡಂ ಕೆನ್ನೆಯ ನರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭-೭೧) ; ತಳದಳಿಸಿ ತೊಳಗಿ ಬೆಳಗುವ. ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ತಳೆದೆಸೆವ ತಾಣದೀವಿಗೆಗಳಂ (ಶಾಂತಿಪು. ೬-೧೦೭) ; ತಳದ[ಪಾಠಾಂ. ತ, ಥ]ಳಿಸಿ ಪೊಳೆಯೆ ಸೀತೆಯ ಚಳನಯನಂ ಖಚರ ಚಕ್ರವರ್ತಿಯ ಚಿತ್ತಂ ಕೊಳ ದೊಳಗೆಳವಾಟ ತೆಱಂಬೊಳೆವಂತೆ ಕಲಂಕಿ ಕದಡಿದತ್ತಾಕ್ಷಣದೊಳ್ (ಪಂಪಾರಾಮಾ. ೯-೭೯). **ತಳ್ತಳಿಸು :** ೩. ಎಱೆವರ್ ತಳ್ತಳಿಸಿ ಕುದಿವ ಲೋಹದ್ರವಮಂ (ವರ್ಧಪು. ೧೧-೨೧). **ತಟತ್ತಟಿಸು :** ೧. ತಟತ್ತಟಿಸಿ ಬೆಳಗೆ ಕೆಯ್ದಾವಿಗೆಗಳ್ (ಪಂಪಭಾ. ೪-೫೩) ; ಬೆಳಗುವ ಸೊಡರ್ಗಳ ಬೆಳಗುಮನಿಳಿಸಿ ತಟತ್ತಟಿಸಿ ಪೊಳೆಯೆ ತಮ್ಮಯ ಬೆಳಗಗ್ಗಳಿಸಿ ತಟತ್ತಟಿಸಿ ವಿದ್ಯುದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್ (ಪಂಪಭಾ. ೧೦-೪೭). 'ಥಳಥಳಿಸು' ಪರಾ. [ ತಟತಟ + - ಇಸು$_{3}$ ]

**ತಟತ್ತಟಿಸು** 'ತಟತಟಿಸು' ನೋ.

**ತಟಪಟ** (ನಾ). ಒಂದು ಅನುಕರಣ ಶಬ್ದ. 'ತಟಪಟನೆ' ಪರಾ.

**ತಟಪಟನೆ** (ಅ). ತೀವ್ರವಾಗಿ ; ಕತಕತನೆ : ಪಟುಗಟಿದ ಪಾಪಮಂ ಕೈಗಟಿದ ತಪೋನಳನೆ ಸುಡುಗುಮೊಟ್ಟಿದ ಕಿಚ್ಚಿಂ ತಟಪಟನೆ ಪುಳ್ಳಿಯೊಳಗಣ ಪುಟು ಬೇಗಂ ಬೇಗುವಂಗ್ಗ ಬೇಗುವೆ ದುರಿತಂ (ಅರ್ಧನೇ. ೪-೦೨೯). [ ತಟಪಟ + - ಅನೆ$_{1}$ ]

**ತಟಲ್, ತಳಲು$_{3}$, ತಳಿಲು$_{1}$** (ನಾ). ಬಲಿತ ಕಾಯಿ ; ಒಣಗಿದ ಕಾಯಿ : "ತಟಲ್=ಮುತ್ತ ಕಾಯ್" (ಶಮದ. ಪರಿ. ೧) : "ತಟಲೆಂದು ಮುತ್ತ ಕಾಯ್" (ಕಶಸಾ. ೫-೭೯) ; ಪಂಚಾಕ್ಷರೋಚ್ಚಾರಣ ಕಾಲ ಪರ್ಯಂತಂ ತಟಲೊಳಗಣ ಬೀಜದಂತೆ ದ್ರವ್ಯಮನೋವಾಕ್ಕಾಯದೊಳೊಂದದೆ (ಪುಷ್ಪಪು. ೧೪-೫೧ ವ). **ತಳಲು$_{3}$ :** ಹೊಲದವರೆಯ ನೆಟ್ಟು ಸೊಡಗೆಯ ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ (ಮೋಳಿಮಾ. ೨೭೫-೮೦೭) ; ಆ ದಾರಿಯಲ್ಲಿ ಉದ್ದಕ್ಕೂ ಹತ್ತುಮಾರು ಇಪ್ಪತ್ತುಮಾರಿಗೊಂದರಂತೆ ಕೊಬ್ಬರಿ ತಳಲುಗಳು ಬಿದ್ದಿರುತ್ತಿದ್ದುವು (ಗರುಡಾ. ೦೦೦). **ತಳಿಲು$_{1}$ :** ಹೊಲಕ್ಕೆ ಹೋಗಿ ಅವರೆ ತಳಿಲು ಆಯ್ದುಕೊಂಡು ಬಂದಳು (ಅನಾಮಿ. ೩೧).

**ತಟಿ, ತಳಿ$_{4}$** (ನಾ). ೧. ಮರದ ದಿಮ್ಮಿ ; ಕೊರಡು ; ದಪ್ಪನಾದ ಮರದ ತುಂಡು : "ತಟಿ=ಸ್ಥೂಲ ದಾರು ; (ಸತ್ತ್ವಾರ್ಥದೊಳ್ ಕುಳಂ)" (ಶಮದ. ಪರಿ. ೧); ಗಿಡುವಂ ಪಿತ್ತಲನೋಣಿಗೇರಿಡುಕುಱಿಂ ಪ್ರಾಕಾರಮಂ ನುರ್ಗಿದಂಗಡಿಯಂ ಬೇಲಿಯನಿಕ್ಕಿಸಿರ್ದ ತಳಿ[ಟಿ]ಯಂ ನೀರ್ದಾಣಮಂ . . . ಆಟಿದೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ (ಸೂಕ್ತಿಸು. ೮-೧೩೫). 'ನೂಂಕುದಟಿ' ಪರಾ. ೨. ಆನೆಗಳು ಹೋರಾಡುವುದಕ್ಕಾಗಿ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕಿದ ಬೇಲಿ ; "ಆನೆಗಳನ್ನು ಗುದ್ದಾಡಲಿಕ್ಕೆ ಬಿಡುವ ಸ್ಥಳ" (ಶ್ರಶಬ್ದ) : ತನ್ನ ಮನೆಯಂಗಣದೊಳ್ ಸೆಂಡಾಡುವ ತಟಿಯುಮಾನೆಯ ನೇಱುವ ವಿನೋದಂ ವೈಹಾಳಿ ಮೊದಲಾಗೊಡೆಯ ವಿನೋದಸ್ಥಾನಂ ಗಳೆಲ್ಲಮಂ ಮಾಡಿಸಿ (ವಡ್ಡಾರಾ. ೪೫-೩೧) : ತೋರದೆರೆ ಮುಱಿಯೆ ಮೂಡುವ ವಾರಣಮಂ ಪೋಲ್ತುದದಸಿ ನಿಡುಗಯ್ಯುಂ ಭಂಡಾರಿಸಿ ಮೆಡಱಿದ ತಟಿಯಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡು ವಿಭವಮಂ (ಅರ್ಧನೇ. ೫-೧೧೩) : ಸ್ತಂಬೇರಮನೆಂಟುಮನೊತ್ತಂಬದೆ ದಿಗಧಿಪರೋಳೀಟ್ಟುಕೊಂಡವನದಟುಂ ಕಂಬಕ್ಕಂ ತಟಿಗಂ ತೊಡೆಗಂ ಬೀದಿಗಮಳವಡಲ್ ಖಳಂ ಶಿಕ್ಷಿಸಿದಂ (ಜಗವಿ. ೧೧-೮೨) ; ಜಗಜಟ್ಟಿ ಗಳಖ್ಖಡಂಗಳೊಳ್ ಮರಳದೆ ಪಾರ್ವಶಕ್ತಿ ತಟಿ[ಪಾಠಾಂ. ಳಿ, ಲಿ] ಯೊಳ್ ನಡೆಪೋರ್ವ ಮದದ್ವಿಪಂಗಳೊಳ್ ಪುರುಡಿಸೆ ಸುತ್ತಲುಂ ಪೊಱ ಪೊಟಲ್ಮೆಟಿಗುಂ ವಿಜಯೋತ್ಸವಂಗಳಂ (ಅನಂಪು. ೧-೮೯) : (ಸೂಕ್ತಿಸು. ೪-೮೫ ನೋ) ; ತಟಿಯೊಳ್ ಚೌದಂತನನ್ನಾನೆಗೆ ಮಲೆದೊಡೆ ವೈಹಾಳಿ ಯೊಳ್ ದಿಗ್ಗಜಂ ಬೆಂಬಟಿಯೊಳ್ ಕಾಲ್ಗೋದೊಡೆ (ಅನಂಪು. ೨-೩೦). "ಆನೆ ಹೋರಲಿಕ್ಕಿದ ಸ್ಥಳಂ" (ಪದ್ಯಸಾ. II, ೦೫೪ ಟಿಪ್ಪಣಿ) ; ಗರುಡಿಯ ಬಳಸಿಂ ಬಿಜ್ಜೋದರಗಳದಿಂದಾನೆ ಹೋರಲಿಕ್ಕಿದ ತಟಿಯಿಂ (ಶಮದ. ೧೦೭ ಪ್ರಯೋ) ; ತ[ಪಾಠಾಂ. ಕ]ಟಿಯೊಳ್ ಪೋರ್ವ ಮದಾಂಧ ಸಿಂಧುರ ಚಯಂ ವಾಹ್ಯಾಳಿಗೈತರ್ಪ ಶಾಕಳ ವಾಹಾವಳಿ . . . ಮನಂಗೊಳಿಕುಂ ತನ್ನಗರೀಬಹಿಃಪುರವನಪ್ರಾಂತಪ್ರದೇಶಂಗಳೊಳ್ (ಧರ್ಮನಾ. ೨-೪೮). ೩. ಶತ್ರುಗಳು ಕೋಟೆಯನ್ನು ಮುತ್ತದಂತೆ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕುವ ಬೇಲಿ: ವರವೇಲಿ ತಟ್ಟೆ ತಟಿ ಗೋಪುರ ವಾಳ್ವಱಿ ಪಡಿ ತವಂಗವಂಕದ ತಳನೋವರಿ ಸೀಯಬಾರವಂತಃಪುರ ಮುಯ್ಯಾಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೬-೨೩). **ತಳಿ$_{4}$ :** ೧. ಕಳನ ಚೌಕದ ಸುತ್ತಲೊಟ್ಟಿಸಿ ತಳಿಗಳನು ಬಹಳಾಗ್ನಿಯನು ಕೈ ಕೊಳಿಸಿದರು ದಹಿಸಿದರು ಬಹಳಾಕ್ಷೋಹಿಣೀಭಟರ (ಕುಮ್ವಾಗ. ೦೨-೨೩) : ತೊಲೆ ತಳಿ ವರನೂಲ ಹರಿಗೆ ಬದ್ದರ ಬಂಡಿ ಬಲೆ ಹಗ್ಗ ಮರುಳ ಕೈ ಕವಣೆ ಹಲಗೆ ಸಬಳ ದಸಿ ಹಾವಿನ ಹೇಳಿಗೆ ಸಲೆ ಮೆಱೆದವು ದುರ್ಗದೊಳಗೆ (ಕುರಾಸಾಂ. ೪೨-೩೭) ; ಪಾಳೆಯಗಳ ಸಂರಕ್ಷಣೆಗಾಗಿ ಅಲ್ಲಲ್ಲಿ ದೊಡ್ಡ ದೊಡ್ಡ ತಳಿ(ಮರದ ದಿಮ್ಮಿ)ಗಳನ್ನು ಸುತ್ತಲೂ ನಿಲ್ಲಿಸಿ ಅವುಗಳಿಗೆ 'ಮುಳುವೇಲಿ'ಗಳನ್ನು ಬಿಗಿಯುತ್ತಿದ್ದರು (ಕರ್ನಾಜ. ೫೮). ೨. ತಳಿಯ ದಾಟುವ ಕರಿಯಂ ಘಳಿಲನೆವಿಡಿದುಗಿಯೆ (ಎಕ. VIII, ನಗರ. ೩೫-೪೫ : 1077). ೩. ಜಕ್ಕೆಯ ನಾಯಕಂ ಮೊನೆಯಿಟ್ಟಗೊಂಡನಾಯಕರ ಮೇಲೆವಾಯಲು ತಳಿಯ ಮಱಿವಿಡಿದು ಹಡಿಕಟ್ಟಿದಾಳೆಚ್ಚು ಗೂಡಂಬುಗೊಂಡು ಕೆಡಹಲ್ (ವ್ಯಾಅರಿ. ೧೯೪೧, ೪೨-೧ : 13ನೆಯ ಶತ) : ಥಗೆಯ ತಳಿ ಮುಱಿದುದು ಮನೋರಥದಗಳು ತುಂಬಿತು ನರನ ಮನ ಬುದ್ಧಿಗಳು ನೆಱೆ ಸಿಲುಕಿತ್ತು ಹರುಷೋತ್ಸವದ ದಾಳಿಯಲಿ (ಕುಮ್ವಾಅ

೬-೦೦೦) : ತಳಿ ನಡೆಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಸಿ ಕೋಟೆಯ ಲಗ್ಗೆಯೊಳು ಹತ್ತಿದರು ಕಳಕಳರವ ಮಸಗೆ ಬಲದೊಳು (ಕುರಾಸಾಂ. ೯೩-೨) : ತಳಿ ಬೇಲಿ ಬದ್ದರಗಳಂ ಮುರಿದು ಕೊಂಡೊಯ್ಯ ನೊಳಪೊಕ್ಕು (ಜಲಪು. ೩೦-೧೨). ೪. ಬೆಂಕಿ ; ಕೆಂಡ : ತಳಿರ ತಗಡಿನ ಮನೆಗಳಲಿ ತಳಿಗಳ ಶಿಖಾಸೇವೆಯಲಿ ನೆನೆದನು ಬಳಿಕ ಭರತನೃಪಾಲನಾ ಭಾಸ್ಕರಕುಲೋತ್ತಮನ (ಕೊರರಾ. ೬-೨-೩). ೫. ಬೇಲಿ: ಕೆಲದೊಳ್ಳೆ ಗಾವುದದೊಳಿಕ್ಕಿದ ತಳಿಯ ಮಧ್ಯದೊಳಖಿಳ ವಸ್ತ್ರಾವಳಿಯನೊಟ್ಟಿದರು (ಕುವ್ಯಾಸ. ೬-೦೯) ; ತಳಿಯ ಮುರಿದು ಕರಿಪತಿ ಕದಳೀವನದೊಳಗೆ ಪೋಗಲು ಕಲಭಗಳು ಬಳಿಸಲುವಂತಾ ರಾಮನಿರದ ಬಲದೊಳಪೊಕ್ಕುದಾ ಪರಿವಾರ (ಕುರಾಸಾಂ. ೪೦-೩೬).

**ತಟಿಕಿಕ್ಕು** 'ತಟ್ಕಿಕ್ಕು' ನೋ.

**ತಟಿಕು** 'ತಟ್ಕು' ನೋ.

**ತಟಿಗೋಂಟೆ** (ನಾ). ಒಂದಂ ಬಗೆಯ ಕೋಟೆ ; ಮರದ ದಿಮ್ಮಿಗಳಿಂದ ಮಾಡಿದ ಕೋಟೆ (?) : ನಿಶಿತ ಶರಕೋಟಿಯೊಳ್ ತಳಿ[ಟಿ]ಗೋಂಟೆ ಯನಿಕ್ಕಿ (ಪಂಪಭಾ. ೧೨-೦೮ ವ) ; ಕೋಂಟೆಗೆ – ತಟಿಗೋಂಟೆ, ಧೂಳಿ ಕೋಂಟೆ, ಹತ್ತುಗೋಂಟೆ, ಹೆಡಗೆಗೋಂಟೆ (ಶಮದ. ೨೯೮ ಪ್ರಯೋ).
[ ತಟಿ + ಕೋಂಟೆ ]

**ತಟುಂದಾಟಿ** (ನಾ). ಒಂದು ಬಗೆಯ ಪೊದೆ; ಅಗ್ನಿಮಂಥ; ನರುವಲು: ನಂದಪ್ಪೊಲಯನೇರಿನಂದಪೊಲೆಯನೇರಿಯಿ[ಂ]ಮೇಲಯೇರಿ ತಟುಂದಾಟಿ [ತ]ಟುಂದಾಟಿ ಅಡುಂಬು ಅಡು[ಂ]ಬಿನಿಂದಂ ವಾಯುವ್ಯ[ದ] ಕೋಣ ಪರೆಯು ಉಟಿಂದಿ(ಎಇ.X, ೬೭-೭೭; ಸು. 892). [ ←ತಮಿ. ತಟುತಾಟ್ಟಿ ]

**ತಟಿ, ಚಳ್ಳಿ, ಚಳೆಯ್ಯ, ತಳ್ಳಿ** (ನಾ). ೧. ಒಂದು ಬಗೆಯ ಕೊಡೆ.– ಛತ್ರಿ,–ಸತ್ತಿಗೆ : "ತಳಿ–ಧಾರಣೇ ; ಆತಪತ್ರ ಭೇದೇ ಚಟಂ (ತಟಿ)" (ಶಮಧಾ) ; ಕೊಡೆ ತಟಿ ತಳ್ತ ಸೀಗುರಿ ಕರೀಂದ್ರ ಘಟಾಳಿ ತುರಗಂ ಸೈನ್ಯಮುರ್ಕುಡುಗದೆ ಬರ್ಪ ನಾಯಕ ಬಲಂ (ಆದಿಪು. ೯-೯೨) ; ಒತ್ತಿದ ತಳ್ಕೆತ್ತಿದ ತಟಿ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ . . . ಬಂದರರಸಿಯರರೆಬರ್ (ಪಂಪಭಾ. ೩-೩೯) ; ಸುಟಿಗಳ್ನೀರ್ದಿಗುರಿಯವೋಲ್ಸುಳಿದುವು ತೆರೆ ತೆರೆಯನಟ್ಟಿದುವು ಬೆಟ್ಟದ ಬೆಂಬಟಿಯಂ ಬೆಟ್ಟಟ್ಟುವವೋಲ್ತಟಿ ತಳ್ತವೊಲಿರ್ದುವೊಗೆದ ಮಣಿಕಿರಣಂ ಗಳ್ (ಪಂರಾಮಾ. ೧೨-೯೦); ಕೊಡೆಯ ತಟಿಯ ಸೀಗುರಿಯ ಚೌಕಸತ್ತಿಗೆಯ ಮುತ್ತಿನ ಝಲ್ಲರಿಯ ಮೊತ್ತಮಂ (ಚಂದ್ರಪು. ೧೨-೮೩ ವ) ; ತಳಿತ ತಟಿಯ ನೆಟಲೊಳು ಬಂದು ತನ್ನಯ ನಿಳಯವನೊಳಪೊಗುತಿರಲು (ಅಂಚಿಜ. ೦೦-೨೩೩). 'ಪೀಲಿದಟಿ' ಪರಾ. ಚಳ್ಳಿ: ೨. ಮಂದುವೆ ಮುಂತಾದ ಮಂಗಳಕಾರ್ಯಂಗಳ ಮೆರವಣಿಗೆಯಲ್ಲಿ ನಾಲ್ಕು ಮೂಲೆಗೂ ನಾಲ್ಕು ಜನ ಹಿಡಿದುಕೊಂಡುಹೋಗುವ ಬಿಳಿಯ ಬಟ್ಟೆಯ ವಿತಾನ; (ಎಣಪ್ಪು. I, ೦೦). ಚಳೆಯ್ಯ : ೧. ಎತ್ತಿದ ಚಳ[ಳಿ]ಯ ವೃತ್ತತೆಯ ನೋಳ್ಪೊಡೆ ಕಣ್ಣಾ ಕುತ್ತಿದುವೇನ ಬಣ್ಣಿಸುವೆ ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ಮೋಹತ. ೦೦-೬೭). ೨. ಧಾರೆಗೆ ಹೊತ್ತಾಯಿತು ಚಳೆಯ ಹಿಡಿದು ವರನನ್ನು ಕರೆತನ್ನಿ (ರೂಢಿ). ತಳ್ಳಿ : ೧. "ಸಿತಚ್ಛತ್ರದೊಳ್ ತಳೆಯಕ್ಕು" (ಕಶರ. ೪೩) : ಮದನಮದಮರ್ದನನ ಬರವಿಂಗೆ ಕೂಡೆ ನೆಗಪಿದ ತಳಿಗ[ಪಾಠಾಂ. ೪ಗ್ಗ]ಳೆನಿಸಿರ್ದವಾ ಮೇಘ (ಸಿದ್ಧರಾ. ೩-೩೨); ಕರಿಣಿಗಳು ತಳೆ ಮಾಡಿ ಪಲ್ಲವವಿಡಿವವಾತಪಜಾಲ ಬಳಸಿದುದೆಂದು ಕೇಸರಿಗೆ (ವರ್ಧಜ. ೯-೨೮): ಮಾರುತ ಪರಿಮಳದಾಲವಟ್ಟ ವನಿಕ್ಕೆ ಅರವೆ ತಳೆ ಛತ್ರವಿಡಿಯೆ (ಅಮುಸಾಂ. ೩-೩೩).

ತಟಿಯವರ್=ಛತ್ರಿಹಿಡಿಯುವವರು ; ಸೇವಕರು : ಪ್ರಸಾದಮನ್ನು ಇಜ್ಜಣಮಟಿಯೆ ನರಗನಿಟಿಯೆ ತನ್ನಟಿಯನುಂ ತನ್ನ ಮಕ್ಕಳುಂ ತನ್ನೊಕ್ಕಲುಂ ಪ್ರಜೆಯುಂ ತಟಿಯವರುಂ ಪೆರ್ಮಾಡಿಯ ಬೆಸ ದೊಳಿಟಿದು ನರಗನೊಳಿಟಿದು ಕಾದಿ ಸತ್ತರ್ (ಎಕ. VI, ಕಡೂರು. ೦೯೭-೭ ; 972). [ ದೇ.ಶ ತಮಿ. ತಟ್ಟಿ ; ಮಲ. ತಟ ]

**ತಟಿಕಾಡು** 'ತಟಿಕ್ಕಾಡು' ನೋ.

**ತಟಿಕ್ಕಾಡು, ತಲಕಾಡು, ತಳಕಾಡು, ತಳೆಕಾಡು, ತಱಿಕಾಡು, ತಟಿ ಕಾಡು** (ನಾ). ಒಂದು ಊರಿನ ಹೆಸರು ; P ಈಗಿನ ಮೈಸೂರು ಜಿಲ್ಲೆಯ ತಲಕಾಡು : ಕಾರ್ತ್ತಿಗೆ ಪುಣ್ಣಮೆ ಅನ್ದು ತಟಿಕ್ಕಾಡು ಇರ್ಪ್ಪತ್ತಯ್ವರ್ಕಂ ಸಿನ್ದರಸರುಂ ದೇವಸತ್ತಿ ಅರಸರುಂ (ಎಕ. III, ತಿರುಮ. ೧-೪: 726). **ತಲಕಾಡು:** ತಲಕಾಡ ಹನ್ನು × × ವರು ಮದ್ದೂರ ಗಣೆಯರುಂ (ಎಕ III, ನಂಜನ. ೧೨೨-೨೭ : ? ಕೃಶಾ) ; ಶ್ರೀ ಸಾಕ್ಷಿನಾಂ ತಲಕಾಡು ಹನುವನು (ಇಆ. VIII, ೧-೩ ; ? ಕೃಶಾ). **ತಳಕಾಡು :** ಮತ್ತಂ ಚಕ್ರಗೊಟ್ಟ ತಳಕಾಡು ನೀಲಗಿರಿ ಕೊಂಗು ನಂಗಲಿ ಕೋಳಾಲಂ ತೆರೆಯೂರು ಕೊಯತೂರು (ಎಕ. II, ೧೩೨-೨೬ : 1123) ; ತಳಕಾಡು ಗಂಗವಾಡಿ ನೊಳಂಬವಾಡಿ ಕೊಂಗು ನಂಗಲಿ ಬನವಸೆ . . . ಇಂತೀ ಸಮಸ್ತ ದುರ್ಗ್ಗಂಗಳಂ (ಎಕ. VII, ಶಿವಮೊ. ೪೦-೫೩ : 1180). **ತಳೆಕಾಡು:** ಹೊಯ್ಸಳದೇವರಾಜ್ಯಂ ತಳೆಕಾಡ ಪಟ್ಟಣವ್ ಆ ಪುರದಜುಸಾಯಿ ರಮುವ್ . . . ನಗರೀಶ್ವರ ದೇವರ್ಗೆ ಕೊಟ್ಟ ಧರ್ಮವ್ (ಮೈಆರಿ. ೦೯೦೩, ೨೦-೭ : 1147) ;ತಳೆಕಾಡು ನಾಡು ಕೊಂಡ ಭುಜಬಳವೀರ ಗಂಗಂ (ಮೈಆರಿ. ೦೯೨೬, ೪೧-೨೦ ; 1173). **ತಱಿಕಾಡು :** ಶ್ರೀ ಕಾಲಾವಿಗ್ನುರ ವಡಿಗಳ ಶಿಷ್ಯರ್ ತಱಿಕಾಡ ಪೆಱ್ಪಡಿಯ ಮೊದೆಯ ಕಲಾಪಕದ ಗುರವಡಿ ಗಳ್ಮೆರ್ಪ್ಪತ್ತೊನ್ದು ದಿವಸಂ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೩೩-೨ ; ಸು. 700). **ತಟಿಕಾಡು :** ತಟಿಕಾಡಾ ಮೇಗೆಟ್ಟನ್ದು ಪೆರ್ಮ್ಮಾನಡಿಗಳಾ ಬೆಸದೆ ಮಹಾರಾಜಪ್ಪುಲಿನಾಡಾ ನೆಱಿಯಲ್ವೇಟಿನ್ದೆ (ಸೌಇಇ. IX-I, ೨೦-೪ : 9ನೆಯ ಶತ) ; ತಟಿಕಾಡ ಮಹಾನಗರಮುಂ ಪಟ್ಟಣವಸನ್ತರ ಮಣ್ಟಯ್ಯನು ಇಪ್ಪತ್ತು ಅಯ್ವರು (ಎಕ. XIV, ತಿರುಮ. ೨೦೯-೬ ; ಸು. 933). [ ? ]

**ತಟಿದುಱುಗಲ್** (ನಾ). ಕೊಡೆಗಳ ನೆರವಿ ; ಸತ್ತಿಗೆಗಳ ಸಂದಣಿ : ಸಿವಿಗೆ ತಟಿದುಱುಗಲೊಡನಿಕ್ಕುವ ಕುಂಚಂ ಲೀಲೆವಡೆದು ಚೆಲ್ವೆಸೆದುದು ಷಣ್ಣವತಿ ಸಹಸ್ರಾಂತಃಪುರಮುವಯುವದೊಳೆ ಭರತ ಚಕ್ರವರ್ತಿಯ ಕೆಲದೊಳ್ (ಆದಿಪು. ೧೧-೩೯) : ಕಿಕ್ಕಿಱಿಗಿಱಿದ ತಟಿದುಱುಗಲ ನಡುವೆ ಪೊನ್ನರಥಮನೇಱಿ ನಿಂದಂ ಭೂರಿಶ್ರವಂ (ಪಂಪಭಾ. ೧೦-೫೭ ವ).
[ ತಟಿ + ತುಱುಗಲ್ (<ತುಱುಂಗಲ್) ]

**ತಟಿವಿಡಿ, ತಳೆವಿಡಿ** (ಕ್ರಿ). ಬಿಳಿಯ ಕೊಡೆ ಹಿಡಿ ; ಛತ್ರಿಯನ್ನು ಹಿಡಿ : ಗಟಿಯಿಸುವ ತಮಂ ಮೂಡಲ್ ಪೊಟಿಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಟರೆ ಧರೆಗರ್ಧನಾರಿಯು ತಟಿವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭-೭೨). **ತಳೆವಿಡಿ :** ಮಳೆ ಕೊಡುವ ಬೆಟ್ಟಗಳ ಮೊಲೆಯುಂಡು ಹಸುರೆಲೆಯ ತಳೆವಿಡಿದು ನೆಲದ ದಾರಿಯ ನೋಳ್ಪ ಚೆಲುವೆ (ಕಾಲೂರ. ೨೩-೭). [ ತಟಿ + ಪಿಡಿ$_1$ ]

**ತಟ್ಕಯಿಸು** 'ತಟ್ಕೈಸು' ನೋ.

**ತಟ್ಕಯ್ಸು** 'ತಟ್ಕೈಸು' ನೋ.

**ತಟ್ಕಿಕ್ಕು, ತಳುಕಿಕ್ಕು, ತಟಿಕಿಕ್ಕು** (ಕ್ರಿ). ತಳಕುಹಾಕು ; ಜೋಡಿಸು; ಹೊಂದಿಸು ; ಅಳವಡಿಸು : ಆಕೆಯ ರೂಪಾತಿಶಯಮಂ ಪೇಟ್ವಡೆ . . . ನಖನಿಕಾಯಂಗಳ್ಗೆ ತಾರಾವಳಿಗಳ ತೋರವೆಳಗುಗಳಂ ತಟ್ಕಿಕ್ಕಿದಂತೆ (ಪುಣ್ಯಾಸ್ರ. ೨-೩೨ ವ). **ತಳುಕಿಕ್ಕು :** ಬೆಳಗು ಬೆಳಗಂ ಹಳಚಿದಂತಾಯ್ತು ಭಯಜ್ಞಾನ ತಳು[ಪಾಠಾಂ. ೪]ಕಿಕ್ಕಿ ಕಳೆಯಲಳವಟ್ಟುದುಭಯಜ್ಞಾನ (ದೀಕ್ಷಾಬೋ. ೦೯೩-೦೮); ಪದಕೆಚಗಲಂದು ಬಿಗಿಯಪ್ಪಿ ಕರದಿಂ ಕರವ

ತಳುಕಿಕ್ಕಿ ಇಂದುಧರ ನಡೆತಂದನರವನೆಗೆ (ಂಶಿಜಿಂ. ೯-೨೯): ಮತ್ತೆ ಹೂವಿನ ಮಳೆಗಳಾತನ ನೆತ್ತಿಯಲಿ ಸುರಿದವು ಮುರಾಂತಕನತ್ತ ಕಿರುಗಿದನವನಿವನ ಕರತಳವ ತಳುಕಿಕ್ಕಿ (ಕುವ್ಯಾಗ. ೮-೪೨) ; ಮತ್ಕರತಳ ದೊಡನೆಯಂತಕನು ನಿಜ ಕರತಳವ ತಳುಕಿಕ್ಕಿ(ಶಿಮ್ಯಅ. ೬-೭೦). ತಟಿಕಿಕ್ಕು: ಪೊಡರ್ಪ ದಾಡೆಗಳ್ ಪಿರಿದಳವಟ್ಟ ಮೀಸೆ ತಟಿಕಿಕ್ಕಿದ ಪುರ್ವುಡಿದಿರ್ದ ಮೆಯ್(ಪುಷ್ಯಾಸ್ಯ. ೮-೧೧).

[ ತಟ್ಕು + ಇಕ್ಕು ]

**ತಟ್ಕಿಸು, ಠಕ್ಕಿಸು, ತಕ್ಕಿಸು₂, ತರ್ಕಿಸು₁, ತಳ್ಕರಿಸು, ತಳ್ಕಿಸು, ತೆಕ್ಕಿಸು** (ಕ್ರಿ). ೧. ಅಪ್ಪು ; ಆಲಿಂಗಿಸು : ಪಡಗೊಡೆಯ ಪಲಗೆಯೊಂದಂ ಪಿಡಿದಬಲೆಯನೆನ್ನ ಕೌಂಕುಟೊಳ್ ತಟ್ಕಿಸಿಕೊಂಡೆಡೆವಿಡದೆ ಪುಣ್ಯದಿಂದಂ ತಡಿಗೆಯ್ದಿದಂ (ದಳಕು. ೨-೮೪) ; ಎನ್ನಂ ತನ್ನಿರ್ಕೆಯ್ಯಿಂ ಕರಂ ತಟ್ಕಿಸಿ (ದಳಕು. ೦೫-೬೨). **ಠಕ್ಕಿಸು:** ೨. ಒಡ್ಡು ; ಅಡ್ಡವಾಗಿ ಹಿಡಿ; ಮುಂದಕ್ಕೆ ಚಾಚು : ತೊಲತೊಲಗೆನುತುಂ ಹರಿಗೆಯ ಠಕ್ಕಿಸಿ ಸಲೆ ಕೂರಸಿಯಂ ಚಿಮ್ಮುತ್ತಂ ಬಂದು (ಕುಮುರಾ. ೮-೪೫). **ತಕ್ಕಿಸು₂ :** ೧. ಬಿಸುಡದಿರು ಬಿಸುಡದಿರು ಬೇಡಬೇಡಕಟಕಟ ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತಕ್ಕಿಸಿಕೊಂಡು (ಹಕಾ. ೦೨-೩೭); ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರವಶೆಯಾದಲೀನ ಬಣ್ಣಿಸುವೆ (ಶಂನವಿ. ೯-೧೭೭); ತಕ್ಕಿಸಿದನ್ನೆವರಂ (ಕುರಂಗ. ೨೬-೧೫). ೩. ನೆಡು ; ನಾಟು ; ಚುಚ್ಚು : ತರಣಿಜಂ ಕಡು ಮುಳಿದು ಖಾತಿಯಿಂದ ಮಕ್ಕಳ ಶಿರೋಮಣಿಗೆ ತೆಗೆದೆಸಲ್ಕಣೆ ಶಿಶುವ ತಕ್ಕಿಸಿತು (ಕುರಂಗ ೫೦-೩೩). **ತರ್ಕಿಸು₁ :** ೪. ತಾಕು ; ತಗುಲು : ಮುಟ್ಟು : ನೆಗೆದುರಿ ಭುಭುರ್ಗಿಲ್‌ಭುಗಿಲೆನುತುಮಗುರ್ವಿಸಿ ಪರ್ವಿ ನೀಳ್ದ ನಾಲಗೆಗಳ ತಕ್ಕೆ ತರ್ಕಿಸೆ ನಭಸ್ಥಲಮಂ (ಮಹಾನೀ. ೦೬-೨೯). ೫. ಜೋಡಿಸು; ಜೊತೆ ಮಾಡು; ಸೇರಿಸು : ತನ್ನ ಪುತ್ರಂಗೆ ತಾನೆ ಗುರು ವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು ಎನ್ನ ತಂದೆಯೇ ಎನಗೆ ಗುರುವೆನ್ನುವ ಗುರುದ್ರೋಹಿಯ ಮುಖವ ನೋಡಲಾಗದು ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ ಅವರಿಬ್ಬರ ತರ್ಕಿಸಿ ಕಟ್ಟಿ ಹೊತ್ತಿಸಿ ನೊಂದಿಸಿ ಸುಡುವ ನಮ್ಮ ಕೂಡಲ ಚನ್ನ ಸಂಗಮದೇವಾ (ಚನ್ನವ. ೨೫-೩). **ತಳ್ಕರಿಸು :** ೧. ಕರುವು ಬಂದಿದಿರ ಹುದು ಮೋಹನದ ರೂಪಿನಲಿ . . . ಕರೆದು ತಳ್ಕುವ, ತಳ್ಕರಿಸುತೊಳಗೆ ಕಿಚ್ಚಿಡುವ ತರಳತೆಯದೇಂ ತಂತ್ರ ? (ಮಂಕುಳ. ೧೬೯). **ತಳ್ಕಿಸು :** ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾಸ. ೬-೨೨) ; ತಳ್ಕಿಸುವ ಪ್ರೀತಿಯಿಂ ತವಕಿಸಿ ನಿಗುರ್ವ ತೋಳ್ (ಚಬಪು. ೦೯-೩೨). **ತೆಕ್ಕಿಸು :** ೧. ಕುಡಿಯಲ್ಕಣಮಾಜಿದೊಡಂ ಕುಡಿಸಿದನೊಡನುಂಡವಂಗವಂ ತೆಕ್ಕಿಸಿ ಕೊಂಡಡವುವನ ವಿಷಮದಿಟಿಗುಂ (ಖಮದ. ೫-೫೪) ; ಒಬ್ಬಳನು ಮುದ್ದಿಡುತ ಒಬ್ಬಳನು ತೆಕ್ಕಿಸುತ ಮತ್ತೊಬ್ಬಳನು ಬಳಸುತಾ (ಸನಲ್ಲ. ೩೫-೫). [ ತಟ್ಕು + - ಇಸು₃ ]

**ತಟ್ಕಿಜಿ** (ನಾ). ತಾಗಿ ಇರಿಯುವಿಕೆ; ಸಂಘಟ್ಟನ (?): ತಕ್ಕುಂ ತಗುಳ್ದು ಕಾಯ್ದೊದವೆ ಕೋಟ್ಕಳ ತಳ್ಕಿ [ಟ್ಕಿ] ಜಿಯಿಂದೆ ಕೆಂಡಮಲ್ಲೊಕ್ಕರೆ ತೇನತೇನಮವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ ನಿಜ ಭುಜಾರ್ಗಳಮಗ್ಗಳೆಯಾಗಿ ಸಾರ್ಚಿ ಕೈಯಿಕ್ಕಿಸಿ ಪಿಂಗಿಪಂ ಪಿಡಿದು ಪಿಂಗಿಸುವಂತಿರೆ ಜಂತ್ರದಾನೆಯಂ (ಅನಂಪು. ೬-೦೨).

[ ತಟ್ಕು + ಇಜಿ₄ ]

**ತಟ್ಕು, ತಕ್ಕು₄, ತಳಕು₃, ತಳುಕು₃, ತಳ್ಕು₆, ತಟೀಕು** (ನಾ). ೧. ಒಂದಕ್ಕೊಂದು ತಳುಕು ಹಾಕಿಕೊಂಡಿರುವುದು; ಹೆಣೆದುಕೊಂಡಿರು ವಿಕೆ ; ಹೆಣಿಕೆ ; ಜೋಡಣೆ : ಎಲೆವಳ್ಳಿಯ ತಟ್ಕಿನಿಂ ಮನಂಗೊಳಿಪ ಕೌಂಗಿನ ಮರಂಗಳೊಳಂ (ಕಾದಂಪೂ. ೯೭). ೨. ಅಪ್ಪುಗೆ ; ಆಲಿಂಗನ : ತೊಳಗುವ ಹಾರಮುನಾಗಳ್ತಳೆವಂತಿರೆ ನೆಲಕಿ ಬೀಟ್ಕಿನಂ ಪಿಡಿದಕ್ಷಾವಳಿಯಂ ಕೊರಲೊಳ್ತಳೆದಾಂ ತಳೆದು ಮುನಿಪತಿಯ ತೋಳ ತಟ್ಕಿನ ಸುಖಮಂ (ಕಾದಂಪೂ. ೭೭೦); ಕಡಲೊಳ್ ನೇಸಜಿನಟ್ಟಲುಂ ಪೊಡವಿಯಂ ನುಗ್ಗೊತ್ತಲುಂ ಕೊಂಕಿ ಘೀಳಿಡೆ ತಟ್ಕಿಂ ದೆಸೆಯಾನೆಯಂ ಮುಟಿಯಲುಂ . . . ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಬ್ಬಿಕಾ. ೦೫೨). **ತಕ್ಕು₄ :** ೩. ಗಜಾರೋಹಣದ ಒಂದು ರೀತಿ (?) : ತವ್ಕು ತಕ್ಕಿನ ಮಾಜಿಮಂ ತಕ್ಕುಗಳುಮನಡರಿಯುಂ ತೊಡರಿಯುಂ ನುಡಿದುತೆ ತಂತವ್ಯಾನೆಯೊಳ್ಪನ ಮುಮಂ ಬಿನ್ನಣಮುಮಂ ಮೆಜಿದು (ಶಾಂತಿಪು. ೩-೨೭ ವ) : ತಕ್ಕು ತಗುಳ್ದು ಕಾಯ್ದೊದವೆ . . . ಮೊಗಂಬೊಕ್ಕ ಗಜಂಗಳಂ ನಿಜಭುಜಾರ್ಗಳ ಮಗ್ಗಳೆಯಾಗೆ ಸಾರ್ಚಿ (ಅನಂಪು. ೬-೧೨). **ತಳಕು₃ :** ೧. ಅದು ಕೇವಲ ಒಂದೆರಡು ದಿನಗಳ ಜೋಡಲ್ಲ; ದೇಹಗಳೆರಡರಲ್ಲಿಯೂ ಜೀವವಿರುವ ತನಕ ಒಂದಾಗಿರುವ ತಳಕನ್ನು ಹಾಕಬೇಕಾಗಿತ್ತು (ಚಂದುಟಿ. ೪೫). ೪. ಪರಸ್ಪರ ಸಂಬಂಧ : ಕೌಟುಂಬಿಕ ಸಂಬಂಧಗಳಿಗೂ ಕೌಟುಂಬಿಕ ಸುಖದುಃಖಗಳಿಗೂ ತಳಕು ಇರುವುದರಿಂದ (ಕುಟುಂಬ. ೦೫); ಇಂತಹ ಕ್ಷುದ್ರ ಜೀವನಕ್ಕೆ ಮತ್ತೆ ಎಂತೆಂತಹ ಆಶೆಗಳ ತಳಕನ್ನು ಹಾಕಿರುವೆ (ಅಂತರಾ. ೪೦). ೫. ಸ್ಪರ್ಧಿಗಳ ಜೋಡು, –ಜೊತೆ : ಎಂಟು ಹತ್ತು ತಳಕುಗಳ ಕುಸ್ತಿ ಮುಗಿಯಿತು (ಗ್ರಾಮಾಯ. ೨೬೧). ೬. "ಕೂಡಿಸುವುದು ; ಪೋಣಿಸಿ ಕಟ್ಟುವುದು" (ಜಾನಕೋ. ೬೫). **ತಳುಕು₃ :** ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾಸ. ೬-೨೨); ಕಂಡು ಬಿಗಿಯಪ್ಪಿ ಕರದಿಂ ತಳುಕನಿಕ್ಕಿ (ಸೌಂದಪು. ೫-೫೦): ತಳುಕಿನ ಕನಕಲತೆಗಳಂತೆ ತೋಳ್ಗೊಡೆ ಬಳಿಕೊಂದಜಿಯೊಂದಜಿಯೊಳ್ ತಳೆದು ಪುಳಕಿತಮಪ್ಪಂತೆ (ಶೋಹತ. ೨೭-೪೩). ೭. ಸಿಕ್ಕು ; ತೊಡಕು : ನಕಲಿಯಿದು ನಿಜವೆಂದು ಮೋಸ ಹೋದೀರಯ್ಯ ನೀವಿವರ ಬಲೆಯ ತಳುಕಿಗೆ ಬೀಳದಿರಿ (ಕೋಗಿಲೆ. ೭೦-೩೯). ೮. ಹೆಣಿಕೆಯ ತೋರಣ : ವರಚಿತ್ರಪತ್ರಂಗಳೆಸೆವ ಮಣಿಮಾಲೆಗಳು ತರದಿಂದ ಕ[ತ]ಳುಕು ದಂಡಾವಳಿಗಳಂತಿವೇ ಸ್ಫುರಿಸಿಯೊಪ್ಪುತ್ತಿರ್ದವಾ ಮರುಳ ಕಂಕಣ ಮುವಿರ್ದಲ್ಲಿ ಮೂಜು ಸುತ್ತು (ವೀಶೈಪು. ೮-೨೦-೪೭) ; ಸತ್ಕರಿಹ ಸದನಗಳು ಭಿತ್ತಿಯಿಲ್ಲವು ಪರುಷ ಮುತ್ತು ಬಿಗಿದಿಹ ತಳುಕು ಸುತ್ತಲೆಸೆದಿಹವು (ಶರಲೀ. ೩೦-೩). ೯. ಒಂದು ಬಗೆಯ ಸರ,–ಹಾರ : ತಳುಕು ಕಡಗ ಕಂಕಣ ಝಣಝಣಿಸಲು ತುಳುಕಿದರ್ ಗಂಧೋದಕವ (ಮೋಹತ. ೧೪-೫೦). **ತಳ್ಕು₆ :** ೧. ಅಲರ್ಗಳ ಗೊಂಚಲೆಜಗಿಸದ ಲತೆಲತೆಗಳಡರದ ತಳ್ಕನಿಂ ಚಿಗುರದಿಮ್ಮಾವು (ಕೃಮಿಥಾ. ೩-೩). ೮. ಸಸಿಗಲ್ಲ ಕೊತ್ತಳಗಳಗಣಿತದ ವೈಡೂರ್ಯದೆಸಕಮಾಂತಿರುವ ಕಿಱುವಾಗಿಲುಗಳಡಿಗಡಿಗೆ ವಸುರನ್ನ ತಿಂತಿಣಿಗಳಂತಿರುವ ತಳ್ಕುಗಳಲೆಸೆದುವಾ ಪಾಲಕಗಳು (ಶಂಕಾರಾ. ೫-೨-೪). **ತಟೀಕು :** ೧. 'ತಟೀಕಿಕ್ಕು' ಪರಾ.

**ತಳಕುಹಾಕು, ತಳುಕುಹಾಕು** = ೧. ಸೇರಿಸಿ ಕಟ್ಟು: ಉಳಿದ ನಾಲ್ಕೆಂಟು ಕುದುರೆಗಳನ್ನು ತಳಕುಹಾಕಿ ಮುಂದೆ ಬಿಟ್ಟರು (ಮೇದಮ. ೧೨೬). ೨. ಒಂದಕ್ಕೊಂದು ಗಂಟುಹಾಕು ; ಸಂಬಂಧ ಕಲ್ಪಿಸು : ಕುಮಾರ ವ್ಯಾಸನ ಕಾಲದೊಡನೆ ಇವನ ಕಾಲವನ್ನು ತಳಕುಹಾಕಬೇಕಾಗಿಲ್ಲ (ಕಸಾಚ. ೨೩೪); ವಿಶ್ವಾಸಕ್ಕೂ ವ್ಯವಹಾರಕ್ಕೂ ತಳಕುಹಾಕಲು ಮನಸ್ಸಾಗಲಿಲ್ಲ (ಹಂಗೀತ. ೧೫೧) ; ನಿನ್ನ ಲಗ್ನಾನೂ ಅದನ್ನೂ ತಳಕುಹಾಕಿ ನಿಂತಾರ ಅವರು (ಹಮಜೀ. ೨೪೭) : ಆ ಗುಣವನ್ನಿಲ್ಲಿ ತಳುಕುಹಾಕಿ ಸಮಾಧಾನಕ್ಕೆ ಬರುವುದು (ನನ್ನಜೂ. ೩೦). **ತಳುಕಾಗಿ ನಿಲ್ಲು**=ಒಗ್ಗಟ್ಟಾಗಿ ನಿಲ್ಲು; ಹೊಂದಿಕೊಂಡು ನಿಲ್ಲು ; ಒತ್ತಾಸೆಯಾಗಿ ನಿಲ್ಲು (?) : ೬೨ ವೃತ್ತಿಯ ಮಹಾಜನಂಗಳು ಹಿರಿಯ ಮಹಾ × × × ಲು ತಂಮೊಳಡಂಬಟ್ಟುಯೆಂದಿಂಗೆವೊ ತಳುಕಾಗಿ ನಿಂದರು (ಎಕ. VI, ತರೀಕೆ. ೫೫-೩೦ : 1291). **ತಳುಕಿನ ಸರ,**

**ತಳಿಕಿನ ಸರ** = ಒಂದು ಬಗೆಯ ಸರ : ಅವಳು ಹೊಸದಾಗಿ ಮಾಡಿಸಿದ ತಳುಕಿನ ಸರ ಚೆನ್ನಾಗಿದೆ (ರೂಢಿ); ತಳಿಕಿನ ಸರ, ಮುತ್ತಿನ ಸರ, ಅಡ್ಡೆಳೆಸರ ಮೊದಲಾದ ಹಾರಗಳನ್ನು . . . ಆ ವನದಲ್ಲಿರುವ ಬ್ರಾಹ್ಮಣರಿಗೆ ಕೊಟ್ಟು (ಶ್ವಾಳ. ೨೦೦). [ ದೇ.॥ ತಮಿ. ತಟುಕು = ಅಪ್ಪಿಕೊಳ್ಳು ]

**ತಟ್ಟಿ, ತರ್ಕೈ$_1$, ತರ್ಕೆ, ತಳಿಕೆ$_1$, ತಳ್ಕೆ, ತೆಕ್ಕೆ$_1$, ತೆರ್ಕೆ** (ನಾ). ೧.ಅಪ್ಪುಗೆ; ಆಲಿಂಗನ : "ತಟ್ಟಿಯೆಂದಾಲಿಂಗನಂ" (ಕಕಶಾ. ೨೦-೪೧೮); "ಅಪ್ಪುಗೆ ತಟ್ಟಿಗಂ ಪೆಸರು" (ಶಬ್ದಮಂ. ೭೬); ಕೂಟದೊಳುಣ್ಮಿದ ಬೆಚ್ಚ ತಟ್ಟಿಯೊಳ್ ಕೂಟ ಸುಖಂಗಳಂ ಪಡೆದನೇಂ ಚದುರಂ ಗಳ ಬದ್ದೆದಲ್ಲಟಂ (ಪಂಪಭಾ. ೩-೮೨); ನಾನೊಲ್ದ ತಂಗೆ ಕೆಡೆದೊಲ್ದಣ್ಣನೊಲ್ಮೆಯಾ ತಟ್ಟಿಯೊಳ್ ಪಟ್ಟು (ಅಂಶಿಗೂ. ೪-೩೯). 'ತಟ್ಟಿಗೆಯ್', ತಟ್ಟಿಗೊಳ್' ಪರಾ. **ತರ್ಕೈ$_1$**: ೧.ಚೆನ್ನಮಲ್ಲಿಕಾರ್ಜುನ ಒಂದಿರುಳಗಲಿದಡೆ ತ[ಪಾಠಾಂ. ತ]ರ್ಕೈ ಸಡಿಲಿದ ಜಕ್ಕವಕ್ಕಿಯಂತಾದೆನವ್ವಾ (ಮಹಾದೇ. ಬ. ೧೪೨-೩೨೩); ಜಕ್ಕವಕ್ಕಿಗಳೆಲ್ಲ ತರ್ಕೈಯನುಳಿದು . . . ಪೋದವು ದಿಕ್ಕುದಿಕ್ಕಿಗೆ ತಮತಮಗಾಗ (ಅಂಜಚ. ೭-೦೪೩); ಆ ಮಹಾವಜ್ರಾಯತ ಪ್ರೋದ್ದಾಮದಾಯಸ ಭೀಮತನು ನಿರ್ನಾಮವೆನೆ ನುಗ್ಗಾಗಿ ಬಿದ್ದುದು ನೃಪನ ತ[ಪಾಠಾಂ. ತೆ]ರ್ಕೈಯಲಿ (ಕುಮ್ವಾಗ. ೧೧-೩೯); ಚುಂಬನಕೇನಿಚ್ಛೆ ತರ್ಕೈಗಾವುದು ಸವಿದಂಬುಲ ಮೇನವಮಾಡುವುದು (ಭರತ. ೧೦-೨೮); ಚೂತವಮಾ ಮಲ್ಲಿಗೆಯನಪ್ಪಿದುದು ಬೇಗದೊಳ್ ಕುರುವಕಂ ಮಾಧವಿಯ ತರ್ಕೈಗೊಳಗಾದುದು (ಜಬಪು. ೧೧-೨೩); ಸೊಕ್ಕು ಜವ್ವನೆಯ ತರ್ಕೈಯ ಸವಿಯಂದದೆ ಸಕ್ಕರೆ ಚಿಲುಪಾಲಿನಂತೆ ಅಕ್ಕಟೆಂದಲಿ ಕೇಳುವರಿಗತಿ ಹರುಷವ ಮಿಕ್ಕಿಸಗುವುದೀ ಕಾವ್ಯ (ಕಂಸವಿ. ೦-೦೭). ೨. ಎರಡು ತೋಳುಗಳ ಹಿಡಿತ: ಇಕ್ಕಿದ ಹೆಜ್ಜೆಯ ತೆಗೆಯದು ಮೊನೆಗೆ ನಿಲ್ಲದು ತರ್ಕೈಗೆ ಬಾರದು (ಸವಣ. ೨೦೩-೯೨೪); ತರ್ಕೈಗೆ ಸಿಕ್ಕಿದ ಚಾವಡಿಗಂಬ . . . ಎಂತಹ ಗರ್ವಿಷ್ಠನಾದರೂ ಬಗ್ಗಿ ಹೋಗಬೇಕಾದ ತಗ್ಗಿನ ಬಾಗಿಲು (ಕಳಮ. ೧). ೩. ಗುಂಪು ; ಸಮೂಹ: ಉನ್ನತ ಮಣಿರಥಪ್ರತತಿಯ ತರ್ಕೈಗಳ್ಗವಧಿ ಮುನ್ನಿಲ್ಲ (ಜಬಪು. ೨೬-೭). ೪. ಒಂದೆಡೆ ಸೇರುವಿಕೆ ; ಸೇರುವೆ (?) : ಒತ್ತುವ ಕೋಡ ಕಾಳೆ ಕುಣಿಮೋಜಿಗೆ ಬಾಜಿಪ ಜುಂಜೆ . . . ಕಿಱುನಾಯ್ಗಳ ಪಿಂಡ ತರ್ಕೈ ಮತ್ತೊತ್ತುವ ಗರ್ಜಿತಂ ಮಱೆವ ಬೆಟ್ಟದ ಬೇಡರ ಪಳ್ಳಿವಳ್ಳಿಯೊಳ್ (ಸೂಕ್ತಿಸು. ೩.೨೦೦). **ತರ್ಕೆ**: ೧. ರಂಭೆಯೂರ್ವಸಿ ತಿಲೋತ್ತಮೆ ಮೇನಕಾಸ್ತ್ರೀಯರುಂ ಬಿಡದೆಯೋಲೈಸೆ ಸಕಲ ವೈಭವಗಳೊಳು ಕುಂಭಕುಚೆಯರ ತರ್ಕೆಯಿಂದ ಕೈಲಾಸದೊಳು ಸ್ವೈತಿರ್ಪನೆಂದನಾರ್ಯಂ (ಗುರುಚಾ. ೬-೭೦). **ತಳಿಕೆ$_1$**: ೧. 'ತಳಿಕೆಬೀಳು' ಪರಾ. **ತಳ್ಕೆ**: ೧. "ಆಲಿಂಗನಂ ತಳ್ಕೆಯೆನಿಪುದು" (ಕಕರ. ೪೩); ನೆನೆವೊಡೆ ನಿಲ್ಕದ ಈಕ್ಷಿಪೊಡೆ ಸಿಲ್ಕದ ಕೀರ್ತಿಪೊಡೊಲ್ಲದ ಶಕ್ಯಮೆಂದೆನಿಸದ ಕೂಡಲುಜ್ಜುಗಿಸೆ ತಳ್ಕೆಗೆ ಸಲ್ಲದ ದಿವ್ಯಲಿಂಗವುಂ (ವೃಷವಿ. ೨೩-೨೬); ಪ್ರಾಣಕಾಂತರ ತಳ್ಕೆ ಸಡಿಲಿ (ವಚಕಾ. ೭೩); ನೆಲಬಾನ ತಳ್ಕೆಯಲಿ ನೇಸರನು ಬಿಡುಗಣ್ಣನಾಗುತಿರಲು (ಭಾವಜೀ. ೧-೩); ಇರುತಿಹುದು ಬರಿ ಮೂರು ದಿನದ ಬಾಳ್ಕೆ . . . ಮತ್ತೆ ಕಾದಿಹುದದೋ ! – ಚಿತೆಯ ತಳ್ಕೆ! (ಕವಿಕಾ. ೩೪-೬). **ತೆಕ್ಕೆ$_1$**: ೧. ಫಲಿತ ಶಾಳೀವನದ ಮುತ್ತಿದ ಗಿಳಿಗಳೋ ತಾವರೆಯ ತೆಕ್ಕೆಯೊಳಿಳಿದ ಮುಱಿದುಂಬಿಗಳೊ ವೃಷಸೇನನ ಶರಾವಳಿಯೊ (ಕುಮ್ವಾಶ. ೨೦-೧೧); ಹರುಷದಲಿ ಮುಂಡಾಡಿ ತೆಕ್ಕೆಯಲಿರಿಸಿ ಮುದ್ದಿಪ ವರ ಜನನಿ ಜನಕರಿಗೆ . . . ಪರಮಾನಂದಗೊಡುತಿಹನು (ಸಾಕ್ಷ್ಯಾ. ೩೩-೧೧೪); ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು . . . ಐತರಲು (ಜಬಪು. ೧೯-೮). ೨. ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು (ಅನಪಂ. ೨೭೫ ೧೨೦೩); ಬಿಡದೆ ತೆಕ್ಕೆಯೊಳಲ್ಲಮನ ಬಯಲೊಡಲ ಬಂಧಿಸಲೆಂದು ಬಿಗಿಯಲು ಹಿಡಿಹಿಗ್ಗಿಲ್ಲದೊಡವರು ಬೆಱಗಾಗಿರ್ದರದ ಕಂಡು(ಪ್ರಭುಲೀ. ೧೩-೦೪) : ಅರರೆ ಸಿಂಹದ ತೋಳ ತೆಕ್ಕೆಯು ಕರಿಯು ಸೆಳೆವಂದದಲಿ . . . ಧರಣೀಪಾಲನ ತೆಗೆದು ಭೀಮನ ಬರಿಯನೆಚ್ಚನು (ಕುಮ್ವಾಕ. ೧೪-೨); ಅವನ ತೆಕ್ಕೆಯಲಱಿಯದಕಟಾ ರವಿಕುಲೇಶನು ಸಿಲುಕೆ (ಜಾಶಿರಾ. ೭-೬೨); ನೆಲದ ಆಧಾರದಲಿ ನಿಂತು ಹರಿಯುವ ನೀರು ನೆಲದೊಡಲ ಕೊರೆದು ಮುಕ್ಕಿತು ಒಂದೆ ತೆಕ್ಕೆಯಲಿ ಇಕ್ಕೆಲದ ಬಾಳು–ಬದುಕು (ಸಂಲಮು. ೧೪-೧೪). ೩. ಬರಸಿಡಿಲ ಬಳಗದಂತೆ ಕುಳಿಕಾಹಿಯು ಕಡುಪಿನಂತೆ ನೆಲಮುಕ್ಕನ ತೆಕ್ಕೆಯಂತೆ ಇರ್ದ ಅಸಂಖ್ಯಾತ ದೈತ್ಯನಾಯಕರ (ಜಗವಿ. ೧೫-೧೫ ಪ); ನಿಪ್ಪಸರ ಕವಿಗಳ ತೆಕ್ಕೆಗಳಿಂ ತಿಱುಪಾಡೋದುತೆ (ತಿರುನಾ. ದೇ. ೦೧೧-೨೧); ವಾರಣಾವಳಿಗಳ ಪದಾತಿಯ ತೇರ ತೆಕ್ಕೆಯನಿಕ್ಕಿದನು ಪ್ರತ್ಯೇಕ ಸಾವಿರವ(ಕುಮ್ವಾಶ. ೩-೫೭); ಮಿಕ್ಕು ಶತಸಾವಿರದ ಕಂಬದ ತೆಕ್ಕೆಗಳ ತನಿವೆಳಗಿನಲಿ ಕಣ್ಣಿಕ್ಕಲಸದಳ ಪೆಂಬವೊಲು (ತೊರರಾ. ೫-೨-೬೧); ಎಷ್ಟು ಸಸಿಗಳನ್ನು ಬೆಳಸುತ್ತೀರೋ ಅಷ್ಟೆಲ್ಲಕ್ಕೂ ಒಂದೊಂದು ತೆಕ್ಕೆ ಕೆಲಸ ನಿಮಗೆ ಬೀಳುತ್ತದೆ (ಗಾಳಿಪ. ೧೦೫). ೫. ಸುತ್ತಿಕೊಂಡಿರುವಿಕೆ ; ಸಂರಳಿಯಾಗಿರುವಿಕೆ : ಭೀಮನ ಕಳಕಳಕೆ ಕಿವಿಯೊಡೆದು ತಿಳಿದುದು ನಿದ್ರೆ ಮುಱಿದಿಕ್ಕೆಯ ಮಹೋರಗನ ತೆಕ್ಕೆ ಸಡಲಿತು (ಕುಮ್ವಾಅ. ೧೩-೩೩). ೬. (?) : ತನ್ನನ್ನು ಮಿಕ್ಕು ಬದುಕುವೆನೆಂಬ ಕಾಲನ ತೆಕ್ಕೆ ಕಂಟಕ ತನ್ನ ಧನುವಿಗೆನುತ್ತ ಬೊಬ್ಬಿಱಿದ (ನಿಭಾಗ. ೪-೧೨-೧೩). **ತೆರ್ಕೆ**: ೩. ವಾಜಿರಾಜಿಗಳ್ ತೆರೆಗಳ ತೆರ್ಕೆಯಂತೆ ಕವಿತಂದುವು (ಪಂರಾಮಾ. ೪-೫೫): "ಪರಂಪರೆ" (ಪಂರಾಮಾ. ಕೋಶ). ೬. (ಒಂದರೊಡನೊಂದು) ಸೇರಿರುವಿಕೆ,–ಕೂಡಿರುವಿಕೆ : ಬೞಿದ ಬೆಱಗಾಗಿ ತುಱುಗೆಮೆಯ ತೆರ್ಕೆಯೊಳ್ ಬಂಬಳಿಪ ಕಣ್ಬನಿಗಳೊಸಱಿ ಮಸುಳನಾದ ದಿಟ್ಟಿಯಂ ಬಳ್ಳಿನಿಂ ನಿಲಿಸಿ (ವರ್ಧಪು. ೪-೬೨ ಪ).

**ತೆಕ್ಕೆತೆಕ್ಕೆ** (ದ್ವಿರುಕ್ತಿ) : ಇರ್ವರುಮೋರೊರ್ವರೊಳ್ ತೆಕ್ಕೆತೆಕ್ಕೆಯಿಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿಚ್ಛೇದದಿಂ ತೊಱೆದು (ಶಾಂತಿಪು. ೭-೭೦ ಪ); ಅವನೀಶನಾಜ್ಞೆಯಿಂದಾ ನಂದನಕೆ ಹೋದ ಯುವತಿಯರ ವಿರಹದಿಂದಾ ತಂತಮ್ಮ ಭವನದಂಗಣದಗ್ರಶಾಲೆಯೊಳ್ತೆಕ್ಕೆತೆಕ್ಕೆ [ಪಾಠಾಂ. ತೆಟ್ಟೆತೆಟ್ಟೆ] ಯೊಳು ನಿಂದು (ಸಮ್ಯಕ್ತಾ. ೩-೨); ದಿಕ್ಕುದಿಕ್ಕಿನೊಳು ನಿಲಿಸಿದರು ಜಾನರ ತೆಕ್ಕೆತೆಕ್ಕೆಯ ಪೌಜುಗಳನು (ಕುರಾಸಾಂ. ೪೩-೩೭). **ತೆಕ್ಕೆಗೊಂದಿಸು** = ಅಪ್ಪುಗೆಗೆ ಅಳವಡಿಸು ; ಅಪ್ಪಿಕೊಳ್ಳು : ಗಗನಮಂ ತೆಕ್ಕೆಗೊಂದಿಸಿದರುಂಟೆ (ಜೈಮಿಭಾ. ೨೬-೨೧). **ತೆಕ್ಕೆಹಾಕು, ತೆಕ್ಕೈಹಾಕು** = ೧. ಆಗಡು ಪ್ರಾಣಿಯನ್ನು, ಪಳಗಿಸಿದ ಅಥವಾ ಸಾಧುವಾದ ಪ್ರಾಣಿಯೊಂದಿಗೆ ಕಟ್ಟು : (ಕ). ೨. (ಪ್ರಾಣಿಗಳ) ಹಗ್ಗಗಳನ್ನು ಸೇರಿಸಿ ಕಟ್ಟು : ಅವೆರಡಕ್ಕೂ ತೆಕ್ಕೆಹಾಕಿ ಕಟ್ಟಿದ್ದಿದ್ದರಿಂದ ಅವು ಒಂಟೆಗೆ ಒಂದೊಂದು ಪಕ್ಕದಲ್ಲಿ . . . ನೇತಾಡುತಿದ್ದವು (ಪಚಭಾ. ೩೪೭). ೩. (ಹಾವುಗಳು) ಒಂದಕ್ಕೊಂದು ಕೂಡಿರು ; ಅಪ್ಪಿಕೊಂಡಿರು : ಹಾವುಗಳು ತೆಕ್ಕೆಹಾಕಿಕೊಂಡಿವೆ (ರೂಢಿ). [ <ತಟ್ಟು ]

**ತಟ್ಟಿಗೆಯ್, ತಳ್ಕೆಗೆಯ್, ತೆಕ್ಕೆಗೆಯ್, ತೆಕ್ಕೆಗೈ**(ಕ್ರಿ). ೧. ಅಪ್ಪಿಕೊಳ್ಳು; ತಬ್ಬಿಕೊಳ್ಳು ; ಆಲಿಂಗಿಸು : ತನ್ನ ಮನದೆಱಕದಿನಿಯಳಂ ಕಂಡು ನಸುನಕ್ಕು ಮುಟ್ಟೆ ಸಾರ್ದು ತಟ್ಟಿಗೆಯ್ಯೆ ನುಣ್ಗಲ್ಲಮನಲುಗಿ (ರಾಮಾಶ್ವ. ೪೯-೦). **ತಳ್ಕೆಗೆಯ್** : ತವಕದಿಂದಂ ತಳ್ಕೆಗೆಯ್ವೊ ಬರಿಕೆಯ್ಯ ತೋಳ್ಗಳ ನೀಟ (ಜಬಪು. ೧೯-೩೭). ೨. ತೋಳುಗಳಲ್ಲಿ ಬಲವಾಗಿ ಹಿಡಿ; ತಬ್ಬಿಹಿಡಿ : ಪಿಡಿಯ ಕರಾಗ್ರಮುಂ ಬಿಡಿಸುತಾಂಕೆ ಬಿದಿರ್ಚುವ ತಟ್ಟಿಗೆಯ್ಯೆ ಮೆಯ್ಗೊಡಪ ತೆರಳ್ಚುವ . . . ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶಬಶಂ. ೪-೭೩). **ತೆಕ್ಕೆಗೆಯ್** : ೧. ಚೆಂದುಟಿವಾಯುನೀಂಟ ನಳಿತೋಳೆಡೆಯೊಳ್ ಸಲೆ ತೆಕ್ಕೆಗೆಯ್ದು (ಕಾವ್ಯಸಾ. ೫೭೪) ; ಕಲಿವಂತರಪಹರಿಸಿದರು ಮಾಗಿಯ ಬಟ್ಟಮೊಲೆವೆಣ್ಗಳ ತೆಕ್ಕೆಗೆಯ್ದು (ಮೋಹತ. ೪-೪೭). **ತೆಕ್ಕೆಗೈ** : 'ತೆಕ್ಕೆಗೈಸು' ಪರಾ. [ ತಟ್ಟಿ + ಕೆಯ್$_1$ ]

**ತಟ್ಕೈಗೊಳ್, ತಕ್ಕೆಗೊಳ್, ತೆಕ್ಕೆಗೊಳ್, ತೆಕ್ಕೆಗೊಳ್ಳು, ತೆರ್ಕೆಗೊಳ್** (ಕ್ರಿ). ೧=ತಟ್ಕೈಗೆಯ್ ೧: ಮುಳಿದು ವಿಯುಕ್ತ ವಲ್ಲಭಜನಂ ತಳುವಿಲ್ಲದೆ ತಟ್ಕೈಗೊಂಡುದು . . . ಏನಳವಿಗಳುಂಬಮೋ ಪುದಿದ ಮಾಗೆಯ ಶೀತ ವಿಜೃಂಭಪಾತನಂ (ಕುಸುಮಾ. ೭-೨೦). ೨. ಹಿಡಿ : ಇದಿರ್ವಂದರಸಿಯ ಸರಸಿಜ ಮೃದುಕರಮಂ ತಟ್ಕೈಗೊಂಡು ಪಕ್ಕಗೆ ವಂದು (ಜಿಕವಿ. ೩-೧೦೭). ೩. ಸೇರಿರು; ಜೋಡಣೆಯಾಗಿರು: ಫಣಗಣ ವಿವಿಧಾಲಂಕೃತಂ ತಟ್ಕೈಗೊಂಡಿರ್ದ ಪತತ್ರಂ ತನ್ನೊಳೊಪ್ಪಿರ್ಪಹಿಕುಲರಿಪುವಂ ಸಂತತಂ ಸದ್ವಿಹಂಗಾಧಿಪನಂ ಮಚ್ಚಿತ್ತದೊಳ್ ಭಾವಿಸಿದೆಂ (ದಶಕು. ೯-೮೯). **ತಕ್ಕೆಗೊಳ್**: ೧. ತಕ್ಕೆಗೊಂಡೆನ್ನ ಪೀಡಿಸಬೇಡ ಕಡು ಶೈತ್ಯವಕ್ಕೆಯೊಳಿರಿಸು (ಮೋಹತ. ೨೭-೫೯); ಕುವರ ಕಂಗೆಟ್ಟು ಬಿದ್ದಪನೆಂದು ತಕ್ಕೆಗೊಂಡವಳ ನುಣ್ಣೊಲೆಯ ಬಲ್ಪಿಡಿದ (ಮೋಹತ. ೩೧-೨೭). **ತೆಕ್ಕೆಗೊಳ್** : ೧. ರಾಹು ತೆಕ್ಕೆಗೊಂಡಪೊಲಳವಟ್ಟು ರಂಜಿಪುದು ಕೇಳ್ ಮುಡಿ ಪಂಕರುಹಾಕ್ಷಿಯೊರ್ವಳಾ (ಧರ್ಮಾಮೃ. ೭-೨೦೨); ಜಗವ ಮೋಹಿಸುತಿಹ ಕಾಮನ ತೆಕ್ಕೆಗೊಂಡಿರ್ದ ಕೋಮಲತರ ಬಾಹುಗಳಿಂದೆ (ಮೋಹತ. ೧೦-೨೬). **ತೆಕ್ಕೆಗೊಳ್ಳು** : ೧. ಪ್ರೇಮ ಪರವಶರಾಗಿ . . . ಪತಿಗಳನ್ನು ಮೇಲೆ ಮೇಲೆ ತೆಕ್ಕೆಗೊಳ್ಳುತ್ತಿದ್ದಾರೆ (ಶ್ರೀರಾಪ. ೯). ೪. ಇಟ್ಟಣಿಸು; ಸಂದಣಿಸು:ಗುಜುಗುಜುಗುಟ್ಟುತಂ ಬೀದಿಬೀದಿಯೊಳ್ ಮನೆಮನೆಯೊಳಂ ತೆಕ್ಕೆತೆಕ್ಕೆಗೊಂಡೆಲ್ಲರುಂ ಘನತರದೆ ವಿಹ್ವಲಾನ್ವಿತರಾಗಿರಲ್ಕೆ (ಪಾಸೋಪು. ೪-೧೭೮); ಮುಂಚೂಣಿಯ ಒಂದೊಂದು ಗಾಡಿಯಲ್ಲಿಯೂ ಆರಾರು ಜನ ರುಗ್ಣ ಕೈದಿಗಳು ಇರುಕಿರುಕಿ ತೆಕ್ಕೆಗೊಂಡಿದ್ದರು (ಪುನರು. ೫೫೫). **ತೆರ್ಕೆಗೊಳ್** : ೪. ಅಗೆ ಮೂಡುವಂದದಿಂ ತೆರ್ಕೆಗೊಂಡು ಕಿಱುಮನೆಯ ಸೆಲೆಗಳಿಡಿಕಿಱಿದಿರೆ (ವರ್ಧಪು. ೧೧-೩). [ತಟ್ಕೆ + ಕೊಳ್₁]

**ತಟ್ಕೈಯ್ಸು** 'ತಟ್ಕೈಸು' ನೋ.

**ತಟ್ಕೈಸು, ತಕ್ಕಯಿಸು, ತಕ್ಕವಿಸು, ತಕ್ಕೆಯಿಸು, ತಕ್ಕೈಸು, ತರ್ಕಯಿಸು, ತರ್ಕವಿಸು, ತರ್ಕೆಯಿಸು, ತರ್ಕೈಸು, ತಳ್ಕಯಿಸು, ತಳ್ಕವಿಸು, ತಳ್ಕೈಸು, ತಟ್ಕಯಿಸು, ತಟ್ಕಯ್ಸು, ತಟ್ಕೈಯ್ಸು, ತೆಕ್ಕೆಯಿಸು, ತೆಕ್ಕೆಯ್ಸು, ತೆರ್ಕೆಯ್ಸು** (ಕ್ರಿ). ೧. ಕೂಡಿಕೊಂಡಿರು; ಒಳಗೊಳ್ಳು: ಆಯತ ಯದುವಂಶ ಕುಲಶ್ರೀಯಂ ತಟ್ಕೈಸಿದದಟರತಿರಥರವರತ್ಯಾಯತ ಭುಜಪರಿಘನಾರಾಯಣಬಲದೇವರೆಂಬರಂಬುಜವದನೇ (ಪಂಪಭಾ.೩-೫೬); ಬಾಳುಮತ್ತಪರಂ ಬೆರಸು ಮಿಂಚಂ ತಟ್ಕೈಸಿದ ಕಾರ ಕಾರ್ಮುಗಿಲಂತೆ ತಿಱ್ಱನೆಯ್ತರ್ಪ ದಮಿತಾರಿಯಂ ನೋಡಿ (ಶಾಂತಿಪು. ೪-೫೩ ವ); ಪದೆಪಂ ಕೆಯ್ತದೊಳುಂಟು ಮಾಡಿ ನಯಮಂ ವಾಗ್ವೃತ್ತಿಯೊಳ್ ತೋಱಿ . . . ಎಸಕದೊಳ್ ಮೆಲ್ಪಂ ಪಳಂಚಲ್ಚಿ ಕಣ್ಬದಿರೊಳ್ ಕಾಮಿನಿ ಕಾಮರಾಗರಸಮಂ ತಟ್ಕೈಸಿ ತಳ್ಪೊಯ್ದು ಮೇಳದೊಳಂ ಪೊಕ್ಕನಸುಂ ಮನಂಗೊಳಿಸಿದೊಳ್ ನಾನಾ ಪ್ರಕಾರಂಗಳಿಂ (ಸುಕುಮಾ. ೭-೧೦). ೨. ಅಪ್ಪು; ಆಲಿಂಗಿಸು: ಎರಡು ಕೊಂಬುಗಳುಮಂ ತಟ್ಕೈಸಿಯಾದಮಾನುಂ ಬಿಗಿದಪ್ಪಿಕೊಂಡು ಸತ್ತಳ್ (ವಡ್ಡಾರಾ. ೩೫-೧೭); ಕೊಂತಿ ಬಂದು ಕರ್ಣನ ಕಳೇವರಮಂ ತಟ್ಕೈಸಿಕೊಂಡು ಪಾಂಡವರಯ್ವರುಮನಲ್ಲಿಗೆ ಬರಿಸಿ (ಪಂಪಭಾ. ೧೪-೮ ವ); ಕಾಲ ಮೇಲೆ ಮುಟ್ಟಿದ ವಿನಯಾಭಿರಾಮನಂ ತೆಗೆದು ತಟ್ಕೈಸಿ ಪರಸಿ (ಕಾದಂಬ. ೨೭೫); ಜನಾರ್ದನನಾ ಮಂದರಮಂ ತಟ್ಕೈಸಿದ ಭುಜಪರಿಘಂಗಳಿನೆನ್ನನೊಲ್ದು ತಟ್ಕೈಸುಗುಮೇ (ಜಗವಿ. ೫-೭೨); ಪಟ್ಕೆ ತಟ್ಕೈಸಿದಂ[ಪಾಠಾಂ. ಬಳ್ಕೆ ತಟ್ಕೈಸಿದಂ, ಪಟ್ಕೈಸಿದಂ]= ತಡಕೆಯ್ಕಂ ಮಾಡಿದಂ (ಶಮದ. ಪರಿ. ೦); ಪುಷ್ಪಕದಿಂ ನೆಲಕ್ಕಿಟಿದು ತನ್ನಿಪ್ಪತ್ತು ತೋಳ್ಗಳಿಂದಾ ಗಿರಿಯಂ ತಟ್ಕೈಸಿ ಅಳ್ಳಾಡಿಸೆ (ಧರ್ಮಪ. ೯-೩೮ ವ); ಗಟ್ಟನಟ್ಟಿಱಿಂ ಬಿಗಿಬಿಗಿದು ತಟ್ಕೈಸುತ್ತುಂ(ಜಿಕವಿ. ೭-೦೫೬ ವ). ೩. ತಬ್ಬಿ ಹಿಡಿ; ಇರುಕು: ಕರಿದಂತಂಗಳನಾಂತು ಪೀಲಿವೊಱೆಯಂ ತಟ್ಕೈಸಿ ಗಂಧೇಭ ಬಂಧುರ ಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬಟಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೧೭೯). ೪. ತಾಕು; ತಗುಲು; ಮುಟ್ಟು: ಎರಡುಂ ವಿದ್ಯಾಧರ ಶ್ರೇಣಿಯೊಳೆಡೆಯಡೆಯೊಳ್ ಜೈನ ಚೈತ್ಯಾಳಿ ತಳ್ತಂಬರಮಂ ತಟ್ಕೈಸಿ ನಾನಾಮಣಿಕಿರಣಗಣಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೧೧೭). ೫. ಅರಳಿಸು; ವಿಕಾಸಗೊಳ್ಳುವಂತೆ ಮಾಡು: ತ್ರಿಲೋಕೀದೀಪಂ ತಟ್ಕೈಸುಗಸ್ಮನ್ಮತಿ ಕುಮುದಿನಿಯಂ ನೇಮಿಚಂದ್ರಂ ಜಿನೇಂದ್ರಂ (ಲೀಲಾವ. ೧-೦). ೬. ಮಡಿಸು; ಬಾಗಿಸು: ಗೆಂಟಾದುದೆ ಪೋದಪ್ಪುದಿನ್ನೆಚ್ಚಪೆನೆನುತೆ ನೃಪಂ ತೀವಿ ತೊಟ್ಟಾರೆ ತಟ್ಕೈಸಿದ ಮುಂಗಾಲ್ ಪೊಕ್ಕ ಪಿಂಗಾಲ್ ನೆಗೆದುಡುಗಿದೊಡಲ್ ಬಿಟ್ಟ ಕಣ್ ಸೆಟ್ಟ ಕರ್ಣಂ ಪದವಿಟ್ಟ್ಯದಾಜಿನೇಟು ಸರಳಿಸಿದುದು ಭೀತಾಂತರಂಗಂ ಕುರಂಗಂ (ಸೂಕ್ತಿಸು. ೩-೦೨೯). ೭.ಸಂತೈಸು; ಶಮನಗೊಳಿಸು; ಸಮಾಧಾನಪಡಿಸು; ತಲೆ ನೇವರಿಸು: ಅಟಲನೆರ್ದೆಯೊಳ್ ತಿಣ್ಣಂ ತಟ್ಕೈಸಿ ಪುತ್ರವಿಮೋಹದಿಂದೆಟವಿ ತನುವಂ . . . ಅಟುತುಂ (ಕಾವ್ಯಾವ. ೮೦೫). **ತಕ್ಕಯಿಸು**: ೨. ಮುಂದಿರ್ದ ವಾಗೀಶನಂ ತಕ್ಕಯಿಸಿ ನಲಿದು (ವಾಗೀರ. ದೇ. ೨೭೫-೧೪); ನಕ್ಕು ವಾಸುಗಿ ಭೀಮಸೇನನ ತಕ್ಕಯಿಸಿ ಕೈದಣಿಯೆ . . . ಮನೆಗೆ ನಡೆಯೆಂದು (ಸಂಭಪ. ೦೭-೨೩). **ತಕ್ಕವಿಸು**: ೨. ಪವನಸುತನೇ ಬಾ ಎನುತ ತಕ್ಕವಿಸಿದನು (ಕುವ್ಯಾಗ. ೧೧-೪೨). **ತಕ್ಕೆಯಿಸು**: ೨. ಸಕ್ಕರೆಯ ಕೊಡನ ತುಂಬಿ ಹೊಱಗೆ ಸವಿದರೆ ರುಚಿಯುಂಟೆ ತಕ್ಕೆಯ್ಸಿ[ಪಾಠಾಂ.ಕೈಸಿ]ಭುಜ ತುಂಬಿ ಲಿಂಗಸ್ಪರ್ಶನವ ಮಾಡದೆ ಅಕ್ಕಟಾ ಸಂಸಾರ ವ್ಯಥಾ ಹೋಯಿತ್ತಲ್ಲಾ (ಬಸವ. ೫೧೮); ಪೊಡವಡುತ ತಕ್ಕೆಯ್ಸು[ಪಾಠಾಂ. ತಕ್ಕೈಸು, ತರ್ಕೈಸು]ತಂ ಕೈವಿಡಿದು ಕುಣಿವುತ ತಣಿವುತಂ (ಬಸಪು.೫೯-೨೪); ತವಕದಿಂದಿದಿರೆದ್ದು ಜನಕನನವನಿಪತಿ ತಕ್ಕೆಯ್ಸಿ[ಪಾಠಾಂ. ಕ್ಕೈಸಿ] . . . ನಿಲಿಸಿದನು ಸಿಂಹಾಸನಾರ್ಧದಲಿ (ತೊರರಾ. ೧-೧೬-೦೭). **ತಕ್ಕೈಸು**: ೨. ಪರಸಿ ತಕ್ಕೈಸಿಕೊಂಡು ಮಹಾವಿಭೂತಿಯಿಂದರಮನೆಗೊಡಗೊಂಡು ಬಂದು (ಧರ್ಮಾಮೃ. ೧೩-೦೭೦); ತತ್ಪಿತೃವ್ಯಂ ಧರಾಧೀಶ್ವರನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಕ್ಕೈಸಿದಂ ಪ್ರೀತಿಯಿಂದಂ (ವರ್ಧಪು. ೦-೪೧); ತಕ್ಕೈಸಿ ಮುಂಡಾಡಿ ಸೊಕ್ಕೇಱಿ ನೋಡುತಂ (ಮಹರ. ದೇ. ೭೩-೫) ತೆಗೆದಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ (ಕುವ್ಯಾದ್ರೋ. ೧೫-೨). ೭. "ಅದೆಲ್ಲಾ ಅರ್ಧದಿನದಲ್ಲಿ ಸರಿಹೋಗೋದಲ್ಲ ಪುಟ್ರಂಗು-ಕಾಲಬೇಕು-ತಾಳಬೇಕು, ತಾಳ್ಮೆಬೇಕು" ಎಂದು ತಕ್ಕೈಸಿದೆ (ವೃದ್ಧವಿ. ೫೭); ಬಾಗಿ ಬಿನ್ನೈಸುತಿಹ ಪಣ್ಗೊನೆಗಳು! ತೂಗಿ ತಕ್ಕೈಸುತಿರಲುಯ್ಯಲೆಗಳು! (ಕವಿಶಾ. ೪೭-೬). ೮. ಅಪ್ಪಿಕೊಳ್ಳುವಂತೆ ಮಾಡು: ಪರನಾರಿಯರ ಸಂಗವಿಲ್ಲಿ ಉಕ್ಕು ಎಱಿದ ಸತಿಯರ ತಕ್ಕೈಸುವರಲ್ಲಿ (ಪುರಂದ. ೨-೩೯-೦); ನಡುಗುವರ್ಜುನದೇವನನು ತೆಗೆದಡಿಗಡಿಗೆ ತಕ್ಕೈಸಿ ಭೀತಿಯ ಬಿಡಿಸಿ . . . ನಡಸಿದನು ಕಾಳೆಗಕೆ (ಕುವ್ಯಾಭೀ. ೬-೪೮). **ತರ್ಕಯಿಸು**: ೨. ಅರ್ಕೇಂದು ಸಂಪದಂಗಳನಿರ್ಕೊಳ್ವ ಕರಂಗಳಿಂ ನಭೋವಲ್ಲಭೆಯಂ ತರ್ಕಯಿಸಿ ನಾಲ್ಕುದೆಸೆಯೊಳಮಿರ್ಕುಂ ವಿಂಶತಿ ಸಹಸ್ರ ಸೋಪಾನಂಗಳ್ (ಮಲ್ಲಿಪು.೦೪-೧೧೮); ಸೋಲಕಾರ್ತಿಯರ್ ಕಣ್ಸೋಲಮಂ ಕಾಣ್ಕೆಗೊಟ್ಟು . . . ರಾಗರಸದೊಳ್ಮುಳುಗುತ್ತುಂ ತೇಪೆಕಾರ್ತಿಯರ್ ತೆಪ್ಪಂಬಿಡಿವಂತೆ ತಾಪದಿಂ ಮೃಣಾಳನಾಳದ ಪೊರಳಿಯಂ ಪೊರಳ್ದು ತರ್ಕಯಿಸಿಯುಂ (ಅರ್ಧನೇ. ೫-೨ ವ). **ತರ್ಕವಿಸು**: ೨. ತಲೆದಡವಿ ತರ್ಕವಿಸಿ ತಂಬುಲವಂ ಬಾಯ್ತುಂಬಲಿಕ್ಕಿಯಂಜದಿರೆಂದು (ಶಂಕಕಂ. ೭೧). ೭. ಇತ್ತಲು ರಾಮನಾ ಕುಂತಳಂಗಳಂ ತರ್ಕವಿಸಿ ಸಂತಾಪಮನಪ್ಪುಕೆಯ್ದು ಹಮ್ಮೈದಂಬೋಗೆ (ಪುಣ್ಯಾಸ್ರ. ೭-೩೦ ವ). **ತರ್ಕೆಯ್ಸು**: ೨. ಪೊಡೆವಟ್ಟ ನಿಜತನೂಜೆಯಂ ಕಲ್ಯಾಣಭೋಗಭಾಗಿಯಾಗೆಂದು ಪರಸಿ ತರ್ಕೆಯ್ಸಿ[ಪಾಠಾಂ. ಕೈಸಿ]ಕೊಂಡು (ಆದಿಪು. ೩-೪೭ ವ); ಅರಸಂ ಕರತಳತಾಡನ

ಪುರಸ್ಸರಂ ದೇವ ಬನ್ನಿಮೆಂದೊಲವಿಂದೊಡ್ಡಿರೆ ಕೈಯನೊಲ್ಲದೆನ್ನಯ ಕೊರಲಂ ತರ್ಕೆಯ್ಪ[ಪಾಠಾಂ. ತಟ್ಕೈಪ] ತನಯನೆಂದಾದಪನೋ (ಚಂದ್ರಪು. ೩-೪೬) ; ಮೃದುಮಧುರಾಂಚಿತೋಕ್ತಿಗಳಿಂದ ಬೋಧಿಸಿ ತರ್ಕೆಯ್ಸಿ [ಪಾಠಾಂ. ತಕ್ಕವಿಸಿ, ತಳ್ಕೈಸಿ] ತಾಂ ಕಂದನಂ ಪೊಡವಡಿಸಿ ಕೊಂಡು (ಬಸಪು. ೪-೬೮). **ತರ್ಕೈಸು :** ೨. ಅಂಭಶ್ಶೀಕರಂಗಳ್ಪಸರಿಸೆ ಏಚಲದ್ವೀಚಿಹಸ್ತಂಗಳಿಂ ಮೆಲ್ಲಗೆ ತರ್ಕೈಸಿತ್ತು ಪೂರ್ವಾಬ್ಧಿಯನಖಿಳ ನದೀ ಖ್ಯಾತ ಸೀತಾಪ್ರವಾಹಂ (ಮಲ್ಲಿಪು. ೨-೧೦) ; ಗೆಜ್ಜೆಗಳುಲಿಗೊದವಿದ ಕಂಕಣದುಲಿಗಳೆಸೆಯೆ ಬರ್ಪಾತ್ಮಜನಂ ಮದಧಿಪನೆನ್ನಂ ತರ್ಕೈಸಿದ ತೋಳಂ ತೆಗೆದದೆಂದು ತಟ್ಕೈಸುಗುಮೋ (ಅರ್ಧನೇ. ೧-೧೦೩); ಚಕ್ರಪಕ್ಷಿಯುಗಂಗಳ್ ತರ್ಕೈಸಲ್ ತಮಮಾಗಳ್ ಬರ್ಕಟಬಯಲಾದುದು (ಗಿರಿಕ. ೫-೫) ; ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಗಿದು ತರ್ಕೈಸಿ ಬಸಿಱಿಂ ಬಗಿದು ಹೊಕ್ಕು ಬೆರಸಿ ತಲ್ಲೀಯವಪ್ಪೆನು (ಸಿದ್ಧರಾ. ೨-೫೫). ೪. ಪಟುಪಟಹರಟನಮಾಶಾತಟಮಂ ತರ್ಕೈಸೆ . . . ವಿಶಾಲ ಸ್ಫಟಿಕ ಶಿಲಾತಳಕೆ ವಿಜಯಿ ಬಿಜಯಂಗೆಯ್ದಂ (ವರ್ಧಪು. ೦೫-೬). ೯. ಗುಂಪುಗೊಳ್ಳು; ಸಂದಣಿಸು: ತರ್ಕೈಸಿ ಸುರಿವ ತೆಱದಿಂದುರ್ಕಂಬುಗಳೆಱಗಿ ರೋಮರೋಮಕ್ಕೆ . . . ನಾಂಟಿದುವರಾತಿಭಟರವಯವಮಂ (ಜಗವಿ.೬-೮೧). **ತಳ್ಕಯ್ಸು :** ೧. ಪರಿಪೂರ್ಣ್ಣೇಂದು ಪ್ರಭಾ ವಿಭ್ರಮದೊಳಮದ್ರ್ವ ಗಂಗಾಪಗಾಸ್ಫಾರ ರುಗುವಿಸ್ತರಮಂ ತಳ್ಕಯ್ಸಿ ದುಗ್ಧಾರ್ಣ್ಣವ ನವರುಚಿಯಂ ತಾಳ್ದಿ ನೀಳ್ದಪ್ಪುದಾದಂ . . . ವಿಯನ್ಮಂಡಪಾಗ್ರಂಬರೆಗಂ ಶ್ರೀ ವಿಷ್ಣುದಂಡಾಧಿಪ ವಿಪುಳಯಶಃಕಲ್ಪವಲ್ಲೀವಿಳಾಸಂ (ಎಕ. V, ಬೇಲೂರು. ೧೬-೩೦ ; 1186). **ತಳ್ಕವಿಸು :** ೨. ತೆಗೆದು ತಳ್ಕವಿಸಿದ ರಾಗಳಾತನಂ ರಘೂದ್ವಹಂ ಪಸರಿಸಿದಂ ಸ್ವಭಾವಹಂ (ಕುಮುರಾ. ೪-೯೮ ರಗಳೆ). **ತಳ್ಕೈಸು:** ೨. ಬಂಡಿಯೊಳು ಬರ್ದುಂಕಿ ಕುಳ್ಳಿರ್ದ ಮಗನಂ ಕಂಡೆತ್ತಿ ತಳ್ಕೈಸಿ (ನಂಬಿರ. ೨-೫೬) ; ಅಳ್ಕಿ ಪುಳಿಂದಂ ಕಾಣಾತೆ ತಳ್ಕೈಸಿಯೆ ಕೊಂಡು ಶುನಕನೆರಡುಂ ಕಡಿಯಂ ಕಾಳ್ಕಿರ್ಚು ತಗುಳ್ದ ತೆಱದಿಂ . . . ನೊಂದು ಬೆಂದು ಬಳಲುತ್ತೆಂದಂ (ಗಿರಿಕ. ೦-೧೦೬) ; ಅಖಂಡಹರ್ಷದಿನೆತ್ತಿ ತಳ್ಕೈಸಿ ಮೊಲೆಯೂಡೆ (ಪದ್ಮರಾ. ೧-೯). ೬. ಸುಜನನುತ ಚರಿತ್ರಂ ಭವಾಂಬುಧಿ ವಹಿತ್ರನೆಂದೆನಿಪ ಗೌರಾರ್ಯ ಚಿಚ್ಚಂದ್ರಮಂ ತಳ್ಕೈಸುಗೆಮ್ಮ ಮತ್ಯುತ್ಪಲಿ ನಿಯಂ (ಪದ್ಮರಾ. ೦-೨೪). **ತಟ್ಕಯಿಸು:** ೨.ಬೀಯುಗನನಟ್ಕಱಿಂ ತಟ್ಕಯಿ [ಪಾಠಾಂ. ಟ್ಕೈ]ಸಿ ತತ್ಕರ ಪ್ರಸಭಾಕೃಷ್ಟ ನಿಕಟ ವಿಷ್ಟರೋಪವಿಷ್ಟಂ (ವರ್ಧಪು. ೫-೪೫ ವ). **ತಟ್ಕಯ್ಸು :** ೨. ನಿಜಾವರಜನ ಕಳೇವರಮಂ ತಟ್ಕಯ್ಸಿ[ಪಾಠಾಂ. ಕೈಸಿ]ಕೊಂಡು (ನೇಮಿಪು. ೦೪-೯೮ ವ). **ತಟ್ಕೆಯ್ಸು :** ೨. ಆಭರಣಕ್ಕಾಭರಣಂ ಜಿತಸ್ಮರನ ರೂಪೆಂದೀಕ್ಷಿಸಲ್ ತನ್ನ ಸಾಸಿರ ಕಣ್ಣೆಯ್ದದೆ ಕೋಟಿ ಕಣ್ಗೆ ಬಯಸುತ್ತುಟ್ಕುರ್ತು ತಟ್ಕೆಯ್ಸುತುದ್ಧರಿಸಿರ್ದಂ ಹರಿ ಕಾಂಕ್ಷಿಸುತ್ತೊಲವಿನಿಂ ಶ್ರೀಭವ್ಯರತ್ನಾಕರಂ (ಪುಷ್ಪಪು. ೧೧-೬೫). **ತೆಕ್ಕೆಯಿಸು :** ೯. ಎಕ್ಕೆ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾ ಸೀಗೆ ಮರಗಳು . . . ತೆಕ್ಕೆಯಿಸಿತಾರಣ್ಯದಿ (ಗೋಪಾಲ. ೬). **ತೆಕ್ಕೆಯ್ಸು:** ೪. ಬಳಸುತ್ತಂ ಕೀರ್ತಿಸುತ್ತಂ ಸುಳಿದು ಸುಳಿದು ತೆಕ್ಕೆಯ್ಸಿರಲ್ (ಮೈಅರಿ. ೧೯೩೬, ೨೮-೨೬ ; 1148). **ತೆರ್ಕೆಯ್ಸು :** ೪. ಬಳಸುತ್ತುಂ ಕೀರ್ತಿಸುತ್ತುಂ ಸುಳಿದು ಸುಳಿದು ತೆರ್ಕೆಯ್ಸಿರಲ್ ಕೂಡೆ ಶೇಷೋಜ್ಜ್ವಳ ಕಾಯಂ ತೀವಿದಾ ಪೇಳಿಗೆವೊಲಿರೆ ಸರೋಜಾತಜಾಂಡಂ . . . ವಿಷ್ಣು ಪೆತ್ತಂ ಬೆಡಂಗಂ (ಎಕ. V, ಹಾಸನ. ೫೩-೧೫ ; 1170). [ ತಟ್ಕೈ + – ಇಸು₃ ]

**ತಟ್ಗಿಯೂರ್** (ನಾ). ಒಂದು ಊರಿನ ಹೆಸರು : ಶ್ರೀ ಪುರುಷ ಪೃಥಿವೀ ರಾಜ್ಯಗೆಯೆ ವ್ಯಾಳಕಟ್ಟಾಡರ ತಟ್ಗಿಯೂರಾಳ . . . ಪಣಪುಲ್ಲು ಇದಕೆ ಸಾಕ್ಷಿ (ಎಕ. IV, ಗುಂಡ್ಲುಪೇ. ೮೬-೨ ; ಸು. 750).

[ ತಟ್ಗಿ₀ + ಊರ್ ]

**ತಟ್ಗಿಸು, ತಗಿಸು, ತಗ್ಗಿಸು, ತರ್ಗಿಸು, ತಳ್ಗಿಸು. ಸಗ್ಗಿಸು** (ಕ್ರಿ). ೧. ತಗ್ಗುವಂತೆ ಮಾಡು ; ಕುಸಿಯಿಸು : ತಾಳಲಾಗದ ತೀವ್ರತರ ಕಷ್ಟಂಗಳಿರದೆ ತಟ್ಗಿಪುದು ತಾನವನ ಕೊರಲನ್ (ಬದ್ಧಕಾ. ೪೯-೦೦೬೦). ೨. ಕೀಳು ಮಾಡು : ನಿಱಿವಿಡಿದುಟ್ಟ ಪಟ್ಟುಡೆಯಂದಿನ ತ್ರಿವಿಕ್ರಮ ಮೂರ್ತಿಯ ತೆಳ್ಪಿನ ಪೊಗರ ನಿಗರದೊಳ್ಪುಡೆಯಂ ತಟ್ಗಿಸಿ ಕಟ್ಗಿಸಿ ಮುಟ್ಗಿಸೆ (ರಾಮಾಶ್ವ. ೧೩೯-೦೪). ೩. ದಮನ ಮಾಡು ; ಹತ್ತಿಕ್ಕು ; ಶಮನಗೊಳಿಸು : ತನುಗುಣರಾಜಿಯಂ ಬಿಡದೆ ತಟ್ಗಿಸಿ ಪೆರ್ಚಿಸಿ ಸದ್ವಿವೇಕಮಂ ಘನಮೆನೆ ಪೂರ್ಣಸೌಖ್ಯದಿರವಂ ಪಡೆವಂತೆ . . . ಧರಣೀಶನೊಪ್ಪಿದಂ (ಉದ್ಭಟ. ೧೧-೨೦). **ತಗಿಸು :** ೧. ಈ ಸಮರವನ್ನು ಮುಗಿಸು ಸೊಕ್ಕಿದವರನು ತಗಿಸು (ಗೀವಿಂ. ೨೦-೧೨). **ತಗ್ಗಿಸು :** ೧. ಕವಿತಪ್ಪ ತುರಗದುರವಣೆಯಾನಂದೀಕ್ಷಿಸುತೆ . . . ತಿರುಗಿ ಛಟಲನೆ ಹೊಡೆದು ತಗ್ಗಿಸುತೆ ನುಗ್ಗಿಸುತೆ (ಇಹರ. ದೇ. ೪೨-೧೮) ; ಚರ್ಮರತ್ನದ ಬಲುಮ ತಗ್ಗಿಸುವೆನೊಂದಿರುಳ್ ನಿದ್ರೆಯ ಹಂಬಲನೊಲ್ಲದಿರ್ದೊಡೆನುತಗ್ಗಲಿಸಿ ದುರುಕ್ತಿಯನುಸಿರ್ದಂ (ದಶಕು. ೮-೧೮೨) ; ಕೆರಳಿದನು ಕಲಿಭೀಷ್ಮನರ್ಜುನ ನುರವಣೆಯ ಗೆಲುವರೆ ಮುರಾರಿಯ ಭರವಸವ ತಗ್ಗಿಸಿದಡಲ್ಲದೆ ಕಾದಲರಿ ದೆನುತ (ಕುವ್ಯಾ.ಭೀ.೬-೨೩); ಮುರಿದೇಳ್ವ ಕೆಂದೂಳ್ಗಳಾಗ ತರಣಿ ಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯ ತಗ್ಗಿಸಿತು (ಕಂನವಿ. ೧೬-೨೮) ; ಕ್ಷಣಕಾಲ ತಲೆ ತಗ್ಗಿಸಿಕೊಂಡೇ ಇದ್ದನು (ಚಂಗಾಳ. ೬೮). ೩. ತಕ್ಷಣದೊಳ್ ಮಸಗಿದ ಶೂಲೆಯನವ ತಗ್ಗಿಸುಗುಂ ಮುಟ್ಗಿಸುವ ತೆಱದಿ ನುದಕಂ ಶಿಖಿಯಂ (ಲೋಕೋಪ. ೯-೮); ರೂಪಿನಲಿ ಸೊಬಗಿನಲಿ ಶೌರ್ಯಾ ಟೋಪದಲಿ ಕುಂದಿಲ್ಲ ಮನ್ಮಥತಾಪವನು ತಗ್ಗಿಸಲು ತಕ್ಕವನಹನು (ತೊರರಾ. ೩-೪-೧೬) ; ಇನ್ನು ಮೇಲೆ ರೈತರಿಗೆ ಸರಾಗ ಮಾಡಿಕೊಟ್ಟರೆ ಅರಮನೆಯ ಕೆಲಸ ಕೆಟ್ಟು ಹೋಗುವದೆಂದು ಪರ್ಯಾಲೋಚನೆ ಮಾಡಿ ರೈತರನ್ನು ತಗ್ಗಿಸುವ ನಿಮಿತ್ಯವಾಗಿಯೂ (ಚಾಮವಂ. ೦೨೨). ೪. ಕಡಮೆ ಮಾಡು; ಕುಂದಿಸು: ತರತರದೆ ಪಿಂಛಾತಪತ್ರಂ ಪಿರಿದು ತಮಮಂ ಮಾಡೆ ಶಸ್ತ್ರೋತ್ಕರ ಕಳಿತ ತೀವ್ರಾಂಶು ತಗ್ಗಿಸೆ ರವಿನಿವಹದಂತೆ . . . ತೋಱಿತ್ತು ಚತುರಂಗಂ (ಕುಮುರಾ. ೩-೨೮). **ತರ್ಗಿಸು :** ೩. ಸಿಡಿಲಂ ಜೇಱೀಳಿ ಹೊಯ್ವಂ ಬಿಡೆ ಬೆದರಿಸುವಂ ಸಿಂಗಮಂ ಕಾಳನಂ ಕಣ್ಗಿಡೆ ಬಾಹಾಗರ್ವ್ವದಿಂ ತಗ್ಗಿರ್ಸುವಂ . . . ಎಕ್ಕಲ ಕ್ಷೋಣಿಪಾಳಂ (ಎಕ. VIII, ಸೊರಬ. ೧೩೮-೩೧; 1145); ಆ ಕೊರ್ಬಂ ತರ್ಗಿಸುವೆನವರ್ಗಳಂ ಕರೆಯೆಂದಂ (ದಶಕು.೧೦-೧೨೨). **ತಳ್ಗಿಸು :** ೩. ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರ ಫಣಿಲೋಕಮಂ ಪಿಳಿದು ನಾಕಮನೋಡಿಸಿ ನಿಂದ ವೀರರಂ ಧುರದೊಳೆ ತತ್ತಱಿಂದಱಿದು ತಳ್ಗಿಸುತಪ್ರತಿಮಪ್ರತಾಪಭಂಗುರಭುವನತ್ರಯಂ . . . ಜಿತಾರಿ ತಾರಕಂ (ಗಿರಿಕ. ೬-೫). **ಸಗ್ಗಿಸು :** ೫. ಸೋಲಿಸು ; ಮಣಿಯುವಂತೆ ಮಾಡು: ರಾಜಕುಮಾರನನ್ನು ಮೂರು ದಿನದಲ್ಲಿ ಹಾಕಿದ್ದನ್ನು ತಿನ್ನುವ ಸ್ಥಿತಿಗೆ ಸಗ್ಗಿಸಿದನು (ಸಜ್ಜಕ. VIII, ೮೬).

**ತಟ್ಗಿಸಿಕೊಳ್** = ಹತ್ತಿಕ್ಕಿಕೊಳ್ಳು ; ಉಪಶಮನ ಮಾಡಿಕೊಳ್ಳು : ಅಂತಸ್ತಾಪದಿಂದಾದ ಕೋಪವಂ ತಟ್ಗಿಸಿಕೊಂಡು (ದಶಕು. ೪-೧೬ ವ).

[ ತಟ್ಗು + – ಇಸು₃ ]

**ತಟ್ಗು, ತಗ್ಗು₁, ತಗುರ್₁, ತಳ್ಗು, ತೆಗ್ಗು₁, ಸಗ್ಗು** (ಕ್ರಿ). ೧. ಕುಗ್ಗು ; ಕುಸಿ ; ಕ್ಷೀಣವಾಗು : "ತಟ್ಗು – ಕ್ಷೀಣತ್ವೇ" (ಶಮಧಾ): "ತಟ್ಗುಬಟ್ಗನೆ ಕುಸಿವುದು" (ಸಂಜೀವ. ೬) ; ಉಡಿದಿರ್ದಚ್ಚುಱಿದೀಸು ತಟ್ಗಿದ ನೊಗಂ ಜೀಱಿಟ್ಟ ಚಕ್ರಂ ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱಿದ ಮಡಂ ನುಗ್ಗಾದ ಕೀಲ್ . . . ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೧) : ಅಂತಾ ಸಂಗ್ರಾಮದೊಳ್ ತನ್ನನುಜತನುಜಜಾಮಾತೃವರ್ಗಂ

ಪಡಲ್ಪಟ್ಟಂತಾಗಳ್ ಮೊಟ್ಟಿ ತಟ್ಟಿರ್ಪುದುಂ (ಶಾಂತಿಪು. ೫-೫೮); ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತಟ್ಟಿದುದಕ್ಕುಂ ಮಂದನಿಂ ಮಂದಿರ ಮತಿಬಳರಾದಂದವರ್ (ಜಾತಕತಿ. ೪-೧೨) : ಜೀವದಯಾಪರಂ ಪರಮದೀಕ್ಷೆ ಯದಂ ತಳೆಯಲ್ಕೆ ನೀವಿದಂ ದೇವಿಳಯಂ ಸಮಂತಿಟಿಯಮಿಟ್ಟೊಡೆ ಶೇಷ ಫಣೌಘವಾತ್ಮಕಂಠಾವಧಿಯಾಗೆ ತಟ್ಟಿದಪುದಾ ಕಮಠಾಧಿಪ ಖರ್ಪರಂ ಸ್ವರಕ್ಷೇವಧಿಯಾಗೆ ಮಟ್ಟಿದಪುದೇನಿದು ಸಚ್ಚರಿತಾನುರೂಪಮೋ (ಚಂದ್ರಪು. ೨-೫೩). ೨. ಬಾಗಂ; ಬಗ್ಗು : ನೀಡಿ ಕರಾಗ್ರದೊಂದಳವಿಗೊಯ್ಯನೆ ಬಾರದೆ ಪೂದುಱುಂಗಲಿಂ ನಾಡೆ ವಿರಾಜಿಸಿರ್ಪ ನೆಳೆಗೊಂಬೆಲರಿಂ ತೊನೆದಟ್ಟು ತಟ್ಟಿ ತೂಗಾಡಿದೊಡಂತದಂ ಪಿಡಿದುಕೊಂಡಲರಂ ನೆಱೆ ಕೊಯ್ದು ಕಾಂತೆ ಕೈಗೂಡಿಸಿತೆನ್ನ ವಾಂಛಿತಮನೀ ಮಳಯಾನಿಳನೆಂದು ಪೆರ್ಚಿದಳ್ (ಕುಸುಮಾ. ೫-೧೧೧). ತಗ್ಗು$_1$ : ೧. ತನ್ನ ನಿಶಿತನಾರಾಚ ಪರಂಪರಾಭಿಘಾತದೊಳ್ ತಗ್ಗಿ ನುರ್ಗುನುಱಿಯಾಗಿ ಕೆಡೆದ ತೇರ ಪಲಗೆ ಗಳೊಳ್ ಮೆಯ್ಗರೆದನೆಗೆತ್ತು ಬೆದಂಕಿ ನೋಡಿಯುಂ (ಗದಾಯು. ೬-೨೮ ವ); ಕಡಂಗಿ ಘಟಾವಳಿ ತಾಗಿ ಮತ್ತೆ ನಿತ್ತರಿಸದೆ ಭೀತಿಯಿಂ ಪೆಳಱೆ ಬಾಯಿವಿಡೆ ಕಿಂಕರಯೂಥಮಗ್ಗಿ ತಗ್ಗಿರೆ . . . ಸಂಗರ ರಂಗಭೂಮಿಯೊಳ್ಪರಿದುದು ಭಾಪ್ಪು ಭಾಪ್ಪು ಮಱು ಭಾಪ್ಪೆನಲಂಣನ ಗಂಧವಾರಣಂ (ಎಕ. VIII, ಸಾಗರ. ೦೮೯-೨೬ ; 1042) ; ಕೋಪಗಿಚ್ಚು ಭುಗಿಲೆಂದು ಜಪ ಜಾಱಿ ತಪ ತಗ್ಗಿ ಮತಿ ಗತವಾಗಿ (ಹದಶಾ. ೬-೧); ವೀರಸೇನಾಪತಿಯ ಸನ್ನೆಗೆ ಭೂರಿಬಲ ಹಬ್ಬಿದುದು ದಿಕ್ಕುಗಳೋರೆ ಹಿಗ್ಗಿದವಮಮ ತಗ್ಗಿದರಹಿಪ ಕೂರುಮರು (ಕುವ್ಯಾಖ್ಯ. ೮-೧೧) ; ವಾಮನನೇಱಲುದಯಮಹಾದ್ರಿ ತಗ್ಗಿದುದಿಲ್ಲ ಪೂರ್ವದಲಿ (ಕೊರಿರಾ. ೪-೧೨-೨೫) ; ಮಾಯದ ಸಂಸಾರ ಮಮಕಾರ ತಗ್ಗಿತು ಇನ್ನೇನಿನ್ನೇನೂ (ಪುರಂದ. ೨-೬೯-೧) ; ಆತನ ಕಾಂತಿಯು ಥಟಕ್ಕನೆ ತಗ್ಗುತ್ತದೆ (ಜ್ಯೋತಿರ್ವಿ. ೬೦). ೨. ತುಱುಗಿದ ಕಾಯ್ಗಳ ಭರದಿಂ ನೆಱೆ ತಗ್ಗಿ ವಿಲಂಬಿಸಿರ್ದ ಮಾದಲಂ (ಪಾರ್ಶ್ವಪು. ೧-೧೦೮) ; ಕವಿಯಲೌಕುವರೌಕಿದರೆ ತಗ್ಗುವರು ತಗ್ಗಿದರೊಡನೊಡನೆ ಜಾಱುವರು ಜುಣುಗುವರ್ಯೆದೆ ತವಿದಾಡಿ ದರು ಸಬಳಿಗರು (ಕುವ್ಯಾಖ್ಯ. ೪-೪೩). ೩. ನೆಗ್ಗು ; ನಗ್ಗು : ಘನಮಪ್ಪಾಸರೆ ಮೇಲೀ ಮುನಿಯಂ ಕೊಂಡುಯ್ದು ನೆಟ್ಟನಪ್ಪಳಿಸುವೆನೋ ತನು ನೆಱೆ ತಗ್ಗಿಯು ನುರ್ಗಪ್ಪನೆಗಂ ವೇಗಣ್ಗೆ ನೆಗಪಿ ನೆಲಕಿಕ್ಕುವೆನೋ (ಧರ್ಮಾಮೃ. ೮-೧೦೭) ; ಕಮಠನಪರಾಂಗಂ ತಗ್ಗೆ (ರೇವಣ. ೦೦-೫). ೪. ಶಾಂತವಾಗು ; ಉಪಶಮನವಾಗು ; ವಾಸಿಯಾಗು ; ಗುಣವಾಗು : ಮದೀಶ್ವರನ ದೇಹಕ್ಕೆ ಸಂಕಟವಾಯ್ತಲಾ ಈ ಹುಗುಳುಗಳು ನೆಗೆದು ಎಂದು ತಗ್ಗುವವು (ಬಸವು. ೧೩-೨೪) : ಶಂಕರನ ಹೂಂಕರಣೆಯಲಿ ತಳಿ ತುರಿ ತಗ್ಗಿತಲ್ಲಲ್ಲಿ (ಕುವ್ಯಾಖ್ಯ. ೬-೪೬) ; ಮನದ ಮೊಕ್ಕಳವಾದ ಮುನಿಸು ನಸು ತಗ್ಗದೆ . . . ರಣಕ್ಕುಜ್ಜುಗವನೆ ಮಾಡಿಸಿದಂ (ಜಯುಕಾ. ೬-೧೧) ; ಬೆಳ್ಳಿಯು ಜ್ವರವು ತಗ್ಗಿ ಎದ್ದು ಓಡಾಡತೊಡಗಿದಳು (ಕಾಲೂರ. ೧೨ ಕಥಾಸಾರ). ೫. ಸೊರಗು; ಖಿನ್ನನಾಗು; ನಿರುತ್ಸಾಹಗೊಳ್ಳು; ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕ್ಕೆ (ಪುರಂದ. ೧-೧೨೨ ಅನುಪಲ್ಲವಿ); ಸಿರಿಗುಬ್ಬನೆಡಱಿಗೆ ತಗ್ಗನಾತ್ಮಜ್ಞಾನಿ (ಭರತ. ೬-೨೬) ; ಸುರಪತಿಗೆ ಸಕಲಸಿರಿಯಿತ್ತು ಗಿರಿಜೆಯು ತಮ್ಮನಂ ಕಾಯ್ದನೆನುತ ಲುಬ್ಬಿ ವರಮುನೀಶಂ ದಾಶರಥಿ ಜಾಮದಗ್ನಿಯರೋಳಿರದೆ ಕಡುನೊಂದು ವಡಬಾಗ್ನಿಯಿಂದಳ್ಕುತಂ ಓರಿದು ಭಂಗವನಾಂತೆನೆನುತಬ್ಧಿ ತಗ್ಗಿ ತಾಂ ಹೆಚ್ಚು ಕುಂದಿನೊಳೆಸೆದುದು (ಚಲಪು. ೨-೫). ೬. ದೈನ್ಯವನ್ನು ತಾಳು ; ವಿನಮ್ರನಾಗು : ಪಲ್ಗಿರಿದು ತಗ್ಗಿ ತಲೆಗರೆದು ಬೆರಳಂ ಕಚ್ಚಿ ಕಾಲ್ಗೆಱಗಿ ಕುಗ್ಗಿ ಕಿಂಕರತೆಯಿಂ ನೆಱೆ ಪೆಚ್ಚಿ (ಬಸರ. ೬-೨೬). ೭. ಮಣಿ ; ಸೋಲು; ವಶವರ್ತಿಯಾಗು : ಕಲ್ಲಿನಾಥನ ಭದ್ರಮದಕರಿ ಖುಲ್ಲ ಹುಲು ಮಂಡಳಿಕನಾನೆಗದೇಕೆ ತಗ್ಗು[ಪಾಠಾಂ. ಕ್ಕು]ವುದು (ಬಸಪು. ೨೦-೪೦) : ಈ ಬಾಣಗಳಿಂದ ಇವರು ತಗ್ಗುವರಲ್ಲ (ಸಾಗಂಧಿ. ೩೪೯-೨). ತರ್ಗು$_1$ : ೧. "ತರ್ಗು[ಪಾಠಾಂ. ಕುಟ್ಟು] ಆಕುಂಚನೇ" (ಶಮಧಾ. ಮ.) : ನೆಲಂ ಮೊಟಗೆ ಕಂಪಿಸೆ ಬಾಯ್ವಿಡೆ ಬೆಟ್ಟು ಬೀಱೆ ಮಂದಿರಮುಡಿದಟ್ಟಿ ತರ್ಗೆ ನದಿಯಿಂ ಸ್ರವಣಂ ಪೊಱಪೊಣ್ಮೆ . . . ಘನಾಗಮದೊಳ್ ವಿನಿಂದಿತಂ (ಲೋಕೋಪ. ೪-೬೪) ; ಕುಸಿದು ಕುಸಿದಡಿ ಮಿಡುಕದೆ ಸುಗಿದಗಿದು ಮುರ್ಗಿ ತರ್ಗುವ ಪದದೊಳ್ (ಸುಕುಮಾ. ೫-೧೪); ಪಾಳಾಸಂ ಪಱಿಯೆ ಪೊಱಮಟ್ಟು ನೆರವಿ ಯನುರವಣಿಸಿ ಪಾಯ್ದು ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆ ಯೊಳ್ ನಿಳಿಲ್ ನಿಕ್ಕೊಂದು ತರ್ಗಿ ನುರ್ಗಿ ಕರ್ಬೆ ಕೊಡಹುವ ನಟ್ಟನ ಗೋವಂ ದನಿದೋಱೆ (ಗಿರಿಕ. ೨-೧೦೫ ವ) ; ಧನುವಂ ಕೊರೆದೆತ್ತಿ ತನ್ಮೌರ್ವಿಯನಟನಿಗೆ ಹಸ್ತಾಗ್ರದಿಂದೆತ್ತಿ ಭೂಭೃತ್ಕೃತನಯಂ ಕಾಯ್ದಾನ ದಾರ್ದೇಱಿಸುವ ಸರಭಸಕ್ಕುರ್ವಿ ತರ್ಗಿತ್ತು (ಶಾಂತೀಶ್ವ. ೩-೯೫) ; ನಡೆ ವಾಗಳ್ ಧಾತ್ರಿ ತರ್ಗ[ಪಾಠಾಂ.ಗ್ಗ]ಲ್ ಕಡುಮುಳಿದಧಟಂ ಕೋಡಿಡಲ್ಬೆಟ್ಟು ಪಿಟ್ಟಾಗೊಡೆಯಲ್ . . . ರೊಂಕಿಡುತಂ ಕಾಡೆಮ್ಮೆವಿಂಡೊಳ್ ಮೆಱೆ ದುದು ಕಡುಪಿಂ ಸ್ಥೂಲಕಾಯಂ ಲುಲಾಯಂ (ಕೃಪುವಿ. ೨೬-೬೪) ; ಕುಲ ಗಿರಿಗಳೊಲ್ ದಿಶಾಕರಿಗಳೊಲ್ ಬರ್ಪ ಭರಕೆಳೆ ತರ್ಗೆ . . . ನಡೆತಂದತ್ತು ಶುಂಡಾಲಸೈನ್ಯಂ (ಚಲಪು. ೪೬-೩೪). ೨. ಫಲಭರದೆ ತರ್ಗುಗುಂ ತರು (ಶಾಕುಂತ. ೬೪-೧೧೨). ೪. ಕಚ್ಚನೆ ಕಂದಿತ್ತತ್ತಮಿತ್ತಂ ಮಿಗೆ ಮಸಗುವ ಕೋಪಂ ಕರಂ ತರ್ಗಿ ಕುರ್ಗಿತ್ತೆನಿಪಂದಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ (ರಕ್ಷಾಶ. ೬೨) ; ತವೆ ದುಶ್ಶಾಸನಭೀತಿ ತರ್ಗೆ ಭರದಿಂದಂ ಭೀಷ್ಮಕವರ್ಗೀದಯಂ ನವೆದಾಟಂಬುಗೆ . . . ಮಾಧವ ನಿಂದಿರ್ಪುದಿರಾಜನೇಂ ಮೆಱೆದನೋ ತಾಂ ಧರ್ಮರಾಜ ಖ್ಯಾತಿಯಂ (ಚಳವಿ. ೨-೮೬). ತಳ್ಗು : ೫. ಇರದಿಱಿಯ ಕಣ್ಗೆಟ್ಟು ತಳ್ಗುವರ್ ಮುಳ್ಗು ವರ್ ಭರಿಕೈಯ ಪೆಟ್ಟನಿಂದಳ್ಕುವರ್ ಬಳ್ಕುವರ್ (ಚಲಪು.೨೮-೨೬). ತೆಗ್ಗು$_1$: ೧. ಅವನ ಸೊಕ್ಕು ತೆಗ್ಗಿತು (ರೂಢಿ). ಸಗ್ಗು : ೧. ಕಾಲಿಟ್ಟ ಒತ್ತಡಕ್ಕೆ ನೆಲ ಸಗ್ಗಿದ ಅನುಭವದ ಜೊತೆಗೆ ಕೆಳಗಣ ಮಂಜು ಬಿರಿದ ಸದ್ದು ಕೇಳಿ ಬಂದಿತ್ತು (ಬಳಜೀ. ೯೨). ೭. ಸಸಿನೆ ಸಗ್ಗದ ಸೌಧಮುಕ್ತಾಕಲಶಮಿದುವೊ . . . ರಸಿಕರಾಮೋದಗೊಳುಮವ್ಯತಕಲಶವೊಯೆನಲ್ಕೆರದುದ್ಯಂದವ ಬಿಂಬವು (ವಂಕಾರಾ. ೫-೬-೦೪) ; ಮೆದುಮಾತಿಗೆ ಸಗ್ಗಲಿಲ್ಲ, ಬಿರುಸು ಮಾತನೇ ಆಡೋಣಾಂತೆ (ಚಕರಾ. ೩೬೮).

ತಟ್ಟಿನಡೆ, ತಗ್ಗಿನಡೆ=ಬಾಗಿ ನಡೆ; ವಿನಯದಿಂದ ವರ್ತಿಸು : ತಟ್ಟಿ ನಡೆದೊಡೆ ರುದ್ರನ್ ಒಲ್ಲದೆಯ ಮಾಣನ್ (ಅಕ್ಕವ್ಯಾ. ೫೦-೯೯೯) ; ತಟ್ಟಿ ನಡೆವುದನ್ ಕಲ್ತಿಲ್ಲ ನೀನ್ (ಬಧ್ಮಪ್ರ. ೧೮-೩೬೪) ; ಆದರೆ ತಗ್ಗಿ ನಡೆಯ ಬೇಕು (ಭೂಪಾಠ. ೩೪).

[ದೇ.೩ ತಮಿ. ತಾಟ್ ; ಮಲ. ತಾಟು, ತಾಟ್ಟ, ತಾಕ್ಕ, ತಾಕ್ಕು ; ತುಳು. ತಗ್ಗು ; ಕೊಡ. ತಾರ್ ; ತೆಲು. ತಗ್ಗು, ಸಗ್ಗು, ಪ್ರಗ್ಗು ]

ತಟ್ಟಿ 'ತಟ್$_1$' ಪರಾ.

ತಟ್ಟಟ 'ತಟತಟ' ನೋ.

ತಟ್ಟಟಗುದಿ 'ತಟತಟಗುದಿ' ನೋ.

ತಟ್ಟು 'ತಟ್$_1$' ಪರಾ.

ತಟ್ಟಲ್, ತಪ್ಪಲ್$_2$, ತಪ್ಪಲು$_1$, ತರ್ಪಲ್, ತಳ್ಪಲ್ (ನಾ). ಬೆಟ್ಟದ ಮಗ್ಗುಲು ; ಪರ್ವತದ ಕಿಬ್ಬಿ ; ಸಾನು ; ಪ್ರಸ್ಥ : " ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮುಂತದು ತಟ್ಟಲ್ " (ವಸ್ತುಕೋ. ೨೮-೨) ; " ತಟ್ಟಲೆಂದು ಸಾನು " (ಕಕಸಾ. ೫-೬೮) ; ಸುಲಿಪಲ್ ತಟ್ಟಲ ತಾರಕಾವಯವಮಂ . . . ಪೋಲ್ತತ್ತು ತಳಪ್ರಹಾರಿಯ ಶಿರಂ ಹೇಮಾ ದ್ರಿಯಾಕಾರಮಂ (ಕಾವ್ಯಸಾ. ೫೨೫ ಶೂದ್ರಕ) ; ಪರ್ವತದ ತಟ್ಟ[ಪಾಠಾಂ. ಪ್ಪ]ಲೊಳಾದಮಾನುಂ ಗುಂಡಿತಪ್ಪ ರಸದ ಬಾವಿಯಂ ಪೊಡೆನಾರ್ಪುದಂ

ಮನಂಗೊಂಡಿರೆ ಚಲ್ಲಕಾರ್ತಿಯರ್ ಬಡಿಸಿ (ಪುಣ್ಯಾಸ್ರ. ೩-೪೯): ಮೂಱು ಬಗೆಯ ತಾಳಿಲಯೆರಡು . . . ಸಾಸವೆ (ಬೊಂಕಶಾ. ೧೯೪೦, ಕುಮುಟ. ೦೦೩-೨೭ : 1476); ರಾಜಾನ್ನದ ಕೂಳಿಕ್ಕಿ ತೊಯೆ ತುಪ್ಪವೆಱೆದು ತಾಳಿಲ ವಿಡೆ (ನೇಮಿಸಂ. ೨೯-೧೪೩); ತಾಳಿಲ ಕೊಣಬು ಪುಡೆಯ ಮುಂತಾದ ಮೇಲೋಗರವನನುವಮಾಳ್ಪುದು (ಸೂಶಶಾ. ೫-೩೭); ಕಲಸುಮೇಲೋಗರ ತಾಳಿಲ ಮುಂತಾದ ಪಂಚಭಕ್ಷಕ್ಕೆ ಅಕ್ಕಿ ಹಾನೆ ೨ (ಎಇ. VIII, ೦೬೩-೨೯ ; 1586). [ <ತಾಳಿಸು₂ + – ಇಲು₂ (<–ಇಲ್₃) ]

**ತಾಳಿವಜ್ರ** (ನಾ). ಒಂದು ಬಗೆಯ ಆಭರಣ : ತಾಳಿವಜ್ರ ತಾಳಿಬೌಕುಳಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ४೦-४).
[ ತಾಳಿ₁ (<ತಾಲಿ₁) + ವಜ್ರ ]

**ತಾಳಿಸಪತ್ರ** 'ತಾಳೀಸಪತ್ರ' ನೋ.

**ತಾಳಿಸಪತ್ರೆ** 'ತಾಳೀಸಪತ್ರೆ' ನೋ.

**ತಾಳಿಸು₁** (ಕ್ರಿ). ನಿಲ್ಲಿಸಂ; ತಡೆಹಿಡಿ : ಸರಗೊಡ್ಡಿ ಬೇಡುವ ತಾಳಿಸಲ್ಲಯ್ಯ ಕುದುರೆಯ (ನಾಪಡ. ೧೦೦). [ ತಾಳ್₁ + – ಇಸು₃ ]

**ತಾಳಿಸು₂** (ಕ್ರಿ). ತುಪ್ಪ ಅಥವಾ ಎಣ್ಣೆಯಲ್ಲಿ ಬೇಯಿಸಂ,–ಬಾಡಿಸು,–ಹುರಿ : ಕಾಯ್ದು ಕಾವಲಿಗಳೊಳ್ ಪೆರ್ವರ[ಪಾಠಾಂ. ಮೊರ್ವರ] ನಾಗೆ ತಾಳಿಸುವರುಂ (ಆದಿಪು. ೫-೮೫ ವ) ; ಮತ್ತ್ರಮಾವಿನ ಘೃತದಿಂದೆ ತಾಳಿಸಿ ರಸಾಯನವಮಾಗಡುಗೆ (ಲೋಕೋಪ. ೮-೩೧) : ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೦೦-೪೭) ; ಎಣ್ಣೆಯೆಱೆದು ತಾಳಿಸುವರುವಯ್ಯ (ಸಾನಂಪ. ೬-೦೬೧ ರಗಳೆ): ಭವ್ಯಕಲ್ಪದ್ರುಮಫಲಂಗಳನವ್ಯಯಾವ್ಯತದಿಂದ ತಾಳಿಸಿ (ಬಸಪು. ೮-೩೮) : ಘಟ್ಟಿವೆಣಸುಳ್ಳಿ ಮೊದಲಾದ ಸಂಭಾರಗಳನಿಟ್ಟು ತಾಳಿಸಿದ ಪುಡಿಗಳನದಱೊಳು[ಱ] ತುಂಬಲಿಟ್ಟು (ಸೂಶಶಾ. ४-೦೯) : ಕುದಿವೆಣ್ಣೆ ಯಲಿ ಹಾಯ್ಕಿಸಿ ತಾಳಿಸೀ ಪಾಪಿಯನು (ಕೃಷ್ಣಾಕ. ೯-೫೪).
[ ದೇ.೩ ತಮಿ. ಮಲ. ತಾಳಿತ್ತು, ತಾಳಿಪ್ಪು ; ತೆಲು. ತಾಳಿಂಚು ]

**ತಾಳಿಸು₃** (ಕ್ರಿ). ತಾಳೆ ನೋಡು ; ಹೋಲಿಸು : ನೀವು ಭಾರತೀಯರು ಕಾವ್ಯದಲ್ಲಿ ಓದಿದ್ದನ್ನು ಇಲ್ಲಿ ಖುದ್ದು ಕಾಣಲು, ತಾಳಿಸಿ ನೋಡಲು ಬರುತ್ತೀರಿ (ಹೊಸಕ್ಷಿ. ೨೦೨). [ ತಾಳ್₃ + – ಇಸು₃ ]

**ತಾಳೀತರು** (ನಾ). = ತಾಳೆಮರ : ಪೇರೀಳೆ ತಾಳೀತರು ತೆಂಗುಂ ಕೌಂಗು . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ರಾಜಶೇ. ೨-೩೭).
[ ಸಂ. ತಾಲೀತರು (ತಾಲೀ + ತರು) ]

**ತಾಳೀಫಳ** (ನಾ). ತಾಳೆಮರದ ಹಣ್ಣು : ಶೋಣಾಂಶುಮನ್ನಂಡಳಮಂ ತಾಳೀಫಳಂಗೆತ್ತಳಸಿ ತುಡುಕುಗುಂ ಬಾಲಶಾಖಾಚರಂಗಳ್ (ರಾಜಶೇ.೬-೨೦).
[ ಸಂ. ತಾಲೀಫಲ (ತಾಲೀ + ಫಲ) ]

**ತಾಳೀಸಪತ್ರ** 'ತಾಳೀಸಪತ್ರೆ' ನೋ.

**ತಾಳೀಸಪತ್ರೆ, ಚಾಳೀಸಪತ್ರ, ತಾಳಿಸಪತ್ರ, ತಾಳಿಸಪತ್ರೆ, ತಾಳೀಸಪತ್ರ, ತಾಳೇಶಪತ್ರೆ, ತಾಳೇಸಪತ್ರ, ತಾಳೇಸಪತ್ರೆ** (ನಾ). ಒಂದು ಬಗೆಯ ಔಷಧಿ ಸಸ್ಯ : " ಪತ್ರುಕ, ಪತ್ರುಕಾ – ಈ ಯೆರಡುಂ ತಾಳೀಸಪತ್ರೆ " (ಓಷಧಿ. ೯೦); ತಾಳೀಸಪತ್ರೆ, ಮೆಣಸು ಇಂತಿವೆರಡಂ ಸಮಭಾಗವಂ ಒಂದು ಭಾಗವೆಂದು ಯೋಚಿಸಿಕೊಂಡು (ವಿವ್ಯವಿ. ೩೮). **ಚಾಳೀಸಪತ್ರೆ** : ಚಾಳೀಸ ಪತ್ರೆ ಗ ೧ ತೂಕ, ಮೆಣಸು ಗ ೧ ತೂಕ . . . ಇವೆಲ್ಲವಂ ಕೂಡಿ ಚೂರ್ಣವ ಮಾಡಿ (ವಿವ್ಯವಿ. ೨೦೦). **ತಾಳಿಸಪತ್ರ** : " ಕಾಸಘ್ನಃ – ತಾಳಿಸಪತ್ರ, ತಾಱ " (ಓಷಧಿ. ೨೯). **ತಾಳಿಸಪತ್ರೆ** : ಗೊರಜಿ, ಈಚಲಿ, ಚರಿಜಲಿ, ತಾಳಿಸಪತ್ರ (ವೃಶಿಗಿ. ೩೭-೭೩೭). **ತಾಳೀಸಪತ್ರ** : "ತಾಳೀಸಕಂ, ತಾಳೀಸ ಪತ್ರಂ – ಈ ಯೆರಡುಂ ತಾಳೀಸಪತ್ರ" (ಓಷಧಿ. ೭೭): "ನೀಲಂ – ತಾಳೀಸ ಪತ್ರ, ಕಾಚಲವಣ " (ಓಷಧಿ. ೮೮). **ತಾಳೇಶಪತ್ರೆ** : (ವೃಶಿಗಿ. ೧-೦). **ತಾಳೇಸಪತ್ರ** : "ಕರಿಣಾ–ಚವ್ಯ, ಗಜಹಿಪ್ಪಲಿ, ಪರಿಪತ್ರ, ತಾಳೇಸಪತ್ರ, ಲವಂಗಪತ್ರ" (ಓಷಧಿ. ೨४). **ತಾಳೇಸಪತ್ರೆ** : ಶುಂಠಿ, ಹಿಪ್ಪಲಿ, ತಾಳೇಸ ಪತ್ರೆ . . . ಲವಂಗ ಇವುಗಳನ್ನು ಸಮಾಂಶವಾಗಿ ಅರೆದು ಜೇನುತುಪ್ಪ ಗೂಡಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕಶ್ಯ. ೮೭).
[ ←ಹಿಂ. ತಾಲೀಶಪತ್ರ್ ; ಮರಾ. ತಾಲೀಸಪತ್ರ್ ]

**ತಾಳು₁** 'ತಾಳ್₁' ನೋ.

**ತಾಳು₂** 'ತಾಳ್₂' ನೋ.

**ತಾಳು₃** 'ತಾಳ್₃' ನೋ.

**ತಾಳು₄** 'ತಾಲು' ನೋ.

**ತಾಳುಂತಟ್ಟುಂ, ತಾಳುತಟ್ಟು** (ಅ). ದಿಕ್ಕಾಪಾಲಾಗುವಂತೆ : ದಂತಿ ಗಳೊಡ್ಡಿನ ಕಾಲ್ಗಾಪಾಂತೊಂದಱೊಳೊಂದು ಪೊಯ್ದು ತಾಳುಂತಟ್ಟುಂ (ಮಹಾನೇ. ೧೨-೫೩). **ತಾಳುತಟ್ಟು** : ಪುಷ್ಪಶರ ಸಂತತಿಯಿಂ ಬಿಡದಟ್ಟು ತಾಳುತಟ್ಟಾಗೆ ತಗುಳ್ದು (ಧರ್ಮಾಮೃ. ೦೩-೦೦೫). [ <ತಾಳುಂತಟ್ಟು ]

**ತಾಳುಂತಟ್ಟುಂಬೊಯ್** (ಕ್ರಿ). ಸಿಕ್ಕಾಪಟ್ಟೆ ಹೊಡೆ, – ಬಡಿ : ತಾಳುಂ ತಟ್ಟುಂಬೊಯ್ದರ್ ಗೋಟಿಯಲರ್ (ಹಂರಾಮಾ. ೦೩-೬೪).
[ ತಾಳುಂತಟ್ಟುಂ + ಪೊಯ್₁ ]

**ತಾಳುಕುಪ್ಪೆ** (ನಾ). ಧಾನ್ಯಗಳಿಂದ ಬೇರೆಮಾಡಿದ ದಂಟುಗಳ ರಾಶಿ,– ಗುಂಪು : (ಕ). [ ತಾಳು₂ (<ತಾಳ್₂) + ಕುಪ್ಪೆ₁ ]

**ತಾಳುಗೆ** 'ತಾಲುಗೆ' ನೋ.

**ತಾಳುತಟ್ಟು** 'ತಾಳುಂತಟ್ಟುಂ' ನೋ.

**ತಾಳುತಳ** (ನಾ). ಅಂಗುಳಿನ ಕೆಳಭಾಗ : ಕೋಮಳ ತಾಳು[ಪಾಠಾಂ. ಲು] ತಳಸಂಘಟ್ಟಮಾತ್ರ ಕ್ಷೋದನೀಯವೋದಕಮುಮಂ (ಆದಿಪು. ೦೦-೨೭ ವ).
[ ತಾಳು₄ (=ತಾಲು) + ತಳ (=ತಲ) ]

**ತಾಳುತುದಿ** (ನಾ). ತಳದಿಂದ ತುದಿ; ಕೊನೆಮೊದಲಂ : ತಾಳುತುದಿಯಾಗಿ ವಿಚಾರಿಸಿ ನಿಶ್ಶಂಕೆಯಾಗುವಂತೆ ದೃಢಮಾಡಿಕೊಳ್ಳುವುದು (ಚಟ್ಟಅ. ೦೮೩-೦೯). [ ತಾಳು₂ (<ತಾಳ್₂) + ತುದಿ ]

**ತಾಳುಬೀಳು** 'ತಾಳೆಬೀಳು' ನೋ.

**ತಾಳುಮೆ** 'ತಾಳ್ಮೆ' ನೋ.

**ತಾಳುರೋಗ** 'ತಾಲುರೋಗ' ನೋ.

**ತಾಳುವಂಶ** (ನಾ). ಕುದುರೆಯ ತಾಲುಪ್ರದೇಶದಲ್ಲಿರುವ ಅಡ್ಡಗೆರೆ,– ರೇಖೆ : ಆ ತ(ಥ)ರಗಳ ಮೇಲ್ರೇಖೆಗೆ ಖ್ಯಾತಂ ತಾಂ ತಾಳುವಂಶ ಮೆಂಬಭಿಧಾನಂ (ಅಶ್ವಶಾ. ೯-೬). [ ತಾಳು₄ (= ತಾಲು) + ವಂಶ ]

**ತಾಳುವನ** (ನಾ). ತಾಳೆಯ ಮರಗಳ ಕಾಡಂ ; ತಾಲವನ : [ಉ]ದಯ ತಾಳುವನ ಬಡಗ ತಯಿಪಾಡಿಯ ಒಳಗೆ (ಸೌಇಇ. IX-II, ४೭೩-೨೭ : 1467). [ ತಾಳು₃ (<ತಾಳ್₃) + ವನ ]

**ತಾಳುವಾರ** 'ತಾಳ್ವಾರ' ನೋ.

**ತಾಳೆ₁** 'ತಾಟ' ನೋ.

**ತಾಳೆ₂** 'ತಾಳ್₃' ನೋ.

**ತಾಳೆ₃** (ನಾ). ಹೊಂದಾವಣೆ ; ಮೇಳ ; ಹೊಂದಿಕೆ : ನಮ್ಮ ಇಂದ್ರಿಯಗಳ ಜ್ಞಾನಕ್ಕೂ ವಸ್ತುವಿನ ಯಥಾರ್ಥಸ್ವರೂಪಕ್ಕೂ ತಾಳೆ ತಪ್ಪಿದಾಗ ನಮ್ಮ ಜ್ಞಾನ ಸುಳ್ಳಾಗುತ್ತದೆ (ತತ್ತ್ವಶಾ. ೩೨೭).

**ತಾಳೆಮಾಡು** = ತಾಳೆನೋಡಂ : ಬ್ರಾಹ್ಮಿಲಿಪಿಯನ್ನು ಗ್ರೀಕ್ ಲಿಪಿಗಳೊಡನೆ ತಾಳೆಮಾಡಿ ನೋಡಿ (ದ್ರಾವಿವಿ. ೩४). **ತಾಳೆಯಾಗು** = ಹೊಂದಾಣಿಕೆಯಾಗು; ಮೇಳವಾಗು : ನಕ್ಷೆಯ ಸರಹದ್ದು ಗುರುತಿಗೂ ಭೂಮಿಯ ಮೇಲೆ ಕಾಣುವ ಗುರುತಿಗೂ ತಾಳೆಯಾದ ಮೇಲೆ (ಭೂಮಿಅ. ೩೮). [ ←ಮರಾ. ತಾಳ್, ತಾಳಾ./ಸಂ. ತಾಲ ]

**ತಾಳೆಗರಿ** (ನಾ).=ತಾಲಪತ್ರ.೩ : ಲಿಪಿಕಾರರು ತಾಳೆಗರಿಯ ಮೇಲೆ ಹಿಂದೆ ಬರೆಯುತ್ತಿದ್ದ ಕಾಲದಲ್ಲಿ ಕಬ್ಬಿಣದ ಕಡ್ಡಿಯನ್ನು . . . ಲೇಖಣಿಯಾಗಿ ಬಳಸುತ್ತಿದ್ದರು (ದ್ರಾವಿಪಿ. ೩೯); ನಮ್ಮೂರಿನಲ್ಲಿ ಎಲ್ಲಿ ನೋಡಿದರೂ ಲಿಪಿ, ಶಾಸನಗಳು, ತಾಳೆಗರಿಗಳು ಹೇರಳವಾಗಿ ಬಿದ್ದಿವೆ (ದಾಯಳ. ೬).
[ ತಾಳ್೩ (<ತಾಳ್೩) + ಗರಿ (<ಗಱ) ]

**ತಾಳೆಛತ್ರ** (ನಾ). ತಾಳೆಯ ಗರಿಗಳಿಂದ ಮಾಡಿದ ಕೊಡೆ : ಕೆಲವರ ಅಡಿಗೆ ಪಾತ್ರಗಳು, ಮಳೆಗೆ ಹಿಡಿಯುವ ತಾಳೆಛತ್ರಗಳು ಎಲ್ಲ ಇದ್ದ ಸ್ಥಳವನ್ನೆಲ್ಲ ಆಕ್ರಮಿಸಿದ್ದುವು (ಕಳ್ಳರೂ. ೩೯). [ ತಾಳ್೩ (<ತಾಳ್೩) + ಛತ್ರ೨ ]

**ತಾಳೆದನಿ** (ನಾ). ತಾಳೆಯ ಮರದೆಲೆಗಳ ಧ್ವನಿ,-ಶಬ್ದ : ಒಗೆದೊಂದು ತಾಳೆದನಿಗೇಳ್ದ ಗಜವ್ರಜದಂದಮಾಗೆ (ಕಾದಂಪೂ. ೩೩).
[ ತಾಳ್೩ (<ತಾಳ್೩) + ದನಿ೨ ]

**ತಾಳೆನೋಡು** (ಕ್ರಿ). ಪರಸ್ಪರ ಹೋಲಿಸಿ ನೋಡಂ,-ಹೊಂದಿಸಿ ನೋಡಂ : ಆಸ್ತಿವಂತ ತನ್ನ ಖಾತೆಯ ಲೆಕ್ಕವನ್ನು ತಾಳೆನೋಡುತ್ತಾನೆ (ನಿಬಂಧ. II, ೨೮೦); ಹಣವನ್ನು ಎಣಿಸಿ ಲೆಕ್ಕದ ಪ್ರಕಾರ ತಾಳೆನೋಡಿದಾಗ ಆನಂದನ ಎದೆ ಒಡೆಯಿತು (ಮರಳ. ೬೦); ಗಡಿಯಾರದ ಮುಳ್ಳು ತಾಳೆ ನೋಡಿಕೊಂಡು (ಹಂಗೂಲಿ. ೮೨). [ ತಾಳ್೩ + ನೋಡು ]

**ತಾಳೆಬೀಳು**, ತಾಳುಬೀಳು (ಕ್ರಿ). ಮೇಳ ಹೊಂದಂ ; ಸರಿಹೋಗು : (*). **ತಾಳುಬೀಳು :** ಅವರೊಂದು ಕನ್ನಡದ ಉಪನ್ಯಾಸವನ್ನು ಕೊಡುವುದಕ್ಕೂ ತಾತ್ಕಾಲಿಕವಾಗಿದ್ದ ಅವರ ನೌಕರಿ ಹೋಗುವುದಕ್ಕೂ ತಾಳುಬಿತ್ತು (ಕಯಾತ್ರ. ೪). [ ತಾಳ್೩ + ಬೀಳು$_1$ (<ಬೀೞ್$_1$) ]

**ತಾಳೆಬೆಲ್ಲ**, ತಾಟಿಬೆಲ್ಲ (ನಾ). ತಾಳೆಮರದ ರಸದಿಂದ ತಯಾರಿಸಿದ ಬೆಲ್ಲ : (*). **ತಾಟಿಬೆಲ್ಲ :** (*). [ ತಾಳ್೨ (<ತಾಳ್೩) + ಬೆಲ್ಲ ]

**ತಾಳೆಮರ**, ತಾಟಿಮರ, ತಾಟಮರ, ತಾಟ್ಮರ (ನಾ). ತಾಳೆಯ ಮರ ; ತಾಳಮರ: "ತೃಣರಾಜಾಹ್ವಯಃ, ತಾಳಃ – ೨ ತಾಳೆಮರದ ಹೆಸರು" (ಸಿದ್ಧಾಂತಿ. ೦೩೩); ತಾಟನುಂಗು ಮರ, ತಾಳೆಮರ (ಮೃಣಿಗಿ. ೦೩-೨೩೪); ತಾಳೆಮರ ಉದ್ದವಾದರೆ ಕೋಳಿಗೆ ಬಂದದ್ದೇನು? (ಗಾದೆ). **ತಾಟಿಮರ :** ಉತ್ತಾರ ಕೊಟ್ಟದು ತಾಟಿಮರ ೫೦ಕೆ ಗ ೧ (ಎಳ. VIII, ತೀರ್ಥಹ. ೬-೦೫೫; 1723). △ **ತಾಟಮರ :** "ತೃಣರಾಜ, ತಾಲ" (ನಾಚಿರಾ. *); ಅದಱ ತದನನ್ತರ ಚೈಕೋಲ ತಾಟಮರ ಅದಱ ತದನಾನ್ತರ ಮಟ್ಟಱಿಯ ಕುರಟಿಗೊಣ್ಡ (ಸೌಇಇ. IX-1, ೪೦-೨೫ : 11ನೆಯ ಶತ). △ **ತಾಟ್ಮರ :** [ನೀ]ಟ್ಟ ತಾಟ್ಮರದವೊಲಪ್ಪೊಡಲ್ (ಶಂಶಧಾ. ೦೨-೬).
[ತಾಳ್೨(<ತಾಳ್೩) + ಮರ$_1$]

**ತಾಳೆಯೋನ್** (ನಾ). ಒಬ್ಬಾತನ ಹೆಸರು (?) : ಪೆರಿಯವನ್ ಕೋಲ್ಲಳಾಂ[ತು] ಭಳ್ದನ್ ಎಳಾ ಆಲಕ್ಕೊವಾಡಿ ತಾಳೆಯೋನ್ ವಿಾ × ನೆಯ್ಮ ಇಕ್ಕಿಸಿ ಸತ್ತಾನ್ (ಸೌಇಇ. IX-1, ೨-೦೦ ; ಸು. ೯ನೆಯ ಶತ). [ ? ]

**ತಾಳೆಯೋಲೆ** 'ತಾಳೋಲೆ' ನೋ.

**ತಾಳೆಲೆ** (ನಾ). ತಾಳೆ ಮರದ ಎಲೆ: ಸಿಡಿಲಿನುಜುಟೆಯ ತಾಳೆಲೆಯೊಳು ಮಾಡಿದ ಕೊಡೆ ತಾಳಲಾವುದೇನು (ಕಂಸವಿ. ೦೮-೦೫).
[ ತಾಳ್೨ (<ತಾಳ್೩) + ಎಲೆ$_1$ ]

**ತಾಳೆವಾಲೆ** 'ತಾಳೋಲೆ' ನೋ.

**ತಾಳೆವೋಲೆ** 'ತಾಳೋಲೆ' ನೋ.

**ತಾಳೆಸೊಪ್ಪು** (ನಾ). ಒಂದು ಬಗೆಯ ಸಸ್ಯ : "ಇಂದಿರಾ-ತಾಳೆಸೊಪ್ಪು, ಹಾವುಮೆಕ್ಕೆ" (ಓಷಧಿ. ೦೩). [ ತಾಳೆ ? + ಸೊಪ್ಪು೩ ]

**ತಾಳೆಹಣ್ಣು**, ತಾಟಪಣ್, ತಾಟವಣ್ (ನಾ). ತಾಳೆಯ ಹಣ್ಣು ; ತಾಳಹಣ್ಣು : ತಾಳೆಹಣ್ಣು ತಾನೇ ಬಿದ್ದರೂ ಬಾಳದ ಮುರವಗೆ ಬಾಯ ಮುಚ್ಚಿತು (ಗಾದೆ). △ **ತಾಟಪಣ್ :** ಚೆನ್ನರ ಸಂದ ಚೆನ್ನವೊಂಗರ ತಲೆ ತಾಟವಣ್ ಕೆದಱಿದಂತೆ ನಿರಂತರವಾಜಿರಂಗದೊಳ್ ಪರೆದಿರೆ (ಶಂಶಧಾ. ೮-೦೦೬). △ **ತಾಟವಣ್ :** ಕಡಿದು . . . ತಾಟ[ಪಾಠಾಂ. ಟಿ]ವಣ್ಣ ಬಣ್ಣಕ್ಕೆಣೆಯಾದ ಚಂಚುಪುಟದಿಂದವೆ (ಕಾದಂಪೂ. ೦೩೬).
[ ತಾಳ್೨(<ತಾಳ್೩) + ಹಣ್ಣು೨(<ಪಣ್೩) ]

**ತಾಳೆಹಾಕು** (ಕ್ರಿ). = ತಾಳೆನೋಡು : ಹೀಗೆ ಅನೇಕ ವಿಷಯಗಳನ್ನು ತಾಳೆ ಹಾಕಿಕೊಂಡು ರಾಜರ ಮನಸ್ಸು ಶ್ರೀದೇವಿಯಲ್ಲಿ ಅನುರಕ್ತವಾಗಿರಬಹುದು (ಶ್ರೀರಾಯ. ೩೪); ಲೆಕ್ಕವನ್ನು ಮಾಡಿದ್ದು ಸರಿಯಾಗಿದೆಯೋ ಎಂದು ತಾಳೆ ಹಾಕಿ ನೋಡಬೇಕು (ಶಿಕ್ಷದ.೩೩೩).
[ ತಾಳ್೩ + ಹಾಕು(<ಪಾಯ್ಚು$_1$) ]

**ತಾಳೆಹೂ** 'ತಾಟಿ ಹೂ' ನೋ.

**ತಾಳೆಹೆಂಡ** (ನಾ). ತಾಳೆಮರದಿಂದ ತಯಾರಿಸಿದ ಹೆಂಡ : (*).
[ ತಾಳ್೨ (<ತಾಳ್೩) + ಹೆಂಡ ]

**ತಾಳೇಬಂದು** (ನಾ). ಜಮಾಖರ್ಚು ಪಟ್ಟಿ; ಆಯವ್ಯಯ ತಖ್ತೆ: ಆ ಕಂಪನಿಗಳ ಸಾಧಾರಣ ವಸ್ತುಸ್ಥಿತಿಯನ್ನು ಅವುಗಳ ತಾಳೇಬಂದುಗಳ (Balance sheets) ಪರಿಶೀಲನದ ಮೇಲಿಂದ ತಿಳಿದುಕೊಳ್ಳುವರು (ದ್ಯಾಂಕೆಕ್ಕ. ೦೦೬); ಬೆಳಗಾವೀ ಜಿಲ್ಲೆಯ ದಪ್ತರಿನಲ್ಲಿ ಈಗಿನ ಲೆಕ್ಕದ ಪದ್ಧತಿಗೆ ಹೊಂದುವಂಥ ತಾಳೇಬಂದು . . . ದೊರಿಯುತ್ತದೆ (ಕಥಾಗಿ. ೩೪೦). [ ←ಮರಾ. ತಾಳೇಬಂದ್ ]

**ತಾಳೇಶಪತ್ರೆ** 'ತಾಳೀಸಪತ್ರೆ' ನೋ.

**ತಾಳೇಸಪತ್ರ** 'ತಾಳೀಸಪತ್ರೆ' ನೋ.

**ತಾಳೇಸಪತ್ರೆ** 'ತಾಳೀಸಪತ್ರೆ' ನೋ.

**ತಾಳ್ಯಿಸು** (ಕ್ರಿ). ತಾಳವನ್ನು ಸೂಚಿಸು : ಕಡೆಗಂಗಳ ಕೊನೆಯೊಳು ತಾಳ್ಯಿಸಲು[ಪಾಠಾಂ. ಕೊನೆಯೊಳ್ಮೇಳೈಸಲ್] (ಭೃಂಗೀಶ. ಹ. ೪೬೮-೦೦).
[ ತಾಳ್೨ (= ತಾಲ) + - ಇಸು೩ ]

**ತಾಳೋದ್ಘಾಟನಿ** (ನಾ). ಅಗುಳಿಯನ್ನು ಕಳಚುವುದು ; ಒಂದು ಕಳ್ಳವಿದ್ಯೆ : ತಾಳೋದ್ಘಾಟನಿ ವಿದ್ಯಾಮಂತ್ರ . . . ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ (ವಡ್ಡಾರಾ. ೦೨೨.೦೬). [ ಸಂ. ತಾಲೋದ್ಘಾಟನೀ (ತಾಲ + ಉದ್ಘಾಟನೀ) ]

**ತಾಳೋಲೆ**, ತಳಲೆ, ತಳಾಲೆ, ತಾಳೆಯೋಲೆ, ತಾಳೆವಾಲೆ, ತಾಳೆವೋಲೆ (ನಾ). ೧. (ಮುತ್ತೈದೆತನದ ಸೂಚಕವಾಗಿ) ಸ್ತ್ರೀಯರು ಧರಿಸುವ ಕರ್ಣಾಭರಣ ; ತಾಳೆಗರಿಯಿಂದ ಮಾಡಿದ ಓಲೆ: ನಿಕ್ಕುವದಿಂ ತಾಳೋಲೆಯ ನಿಕ್ಕುವವರ್ಪಲರೊ ನೋಡ ಪೊನ್ನೋಲೆಯನಂತಿಕ್ಕುವ ವರ್ಪಲರೊ(ಧರ್ಮಾಮೃ. ೦-೨೦೦); ಪಾದಕ್ಕೆ ಎರಗಿ ಸೆರಗೊಡ್ಡಿ ಬೇಡುವೆ ತಾಳೋಲೆ ಗೈದೆತನಗಳ (ನಾಪದ. ೨೦೦). **ತಳಲೆ :** ೨. ತಾಳೆಗರಿ, ಅಡಕೆಯ ಹಾಳೆವೊದಲಾದುವುಗಳಿಂದ ಮಾಡಿದ ಟೋಪಿ:ತಲೆಮೇಲೆ ಹಾಳೆಯ 'ತಳಲೆ' (ನಿಸದು. ೨೪). **ತಳಾಲೆ :** ೨. "ನೋಡಲ್ಲಿ, ನಿನ್ನ ತಳಾಲೆ ತೇಲಿ ಹೋಗ್ತಾ ಇದೆ." ತೇಲಿ ಹೋಗುತ್ತಿದ್ದ ತನ್ನ ಹಾಳೆಟೋಪಿಯನ್ನು ಹಿಡಿದೆತ್ತಿಕೊಳ್ಳಲೆಂದು ಓಂಚಲು ಒಂದು ಹಾಸುಬಂಡೆಗೆ ಹಾರಿ . . . ತಳಾಲೆಯನ್ನು ತಂದಳು (ಮಲೆಮ. ೦೬೦); ತಳಾಲೆ ತೆಗೆದುಬಿಡೆ; ನಿನ್ನ ಮುಖದ ಅಂದಾನೇ ಕೆಡಿಸ್ತದೆ (ಮಲೆಮ. ೬೬೩). **ತಾಳೆಯೋಲೆ :** (*). **ತಾಳೆವಾಲೆ :** ೩. ತಾಳೆಮರದ ಗರಿ : ತಾಳೇಮರದ ಹೆಸರು . . . ಬಹುಮುಂದಿ ತಾಳೇವಾಲೇ ಮರವೆನ್ನುವರು (ಸಿದ್ಧಾಂತಿ. ೦೩೩). **ತಾಳೆವೋಲೆ:** ೩. ತಾಳೆವೋಲೆಗಳೞುವುವ ಲಿಪಿ ಭೇದವ (ಜಿನರಾ. ೬-೭೩).
[ ತಾಳ್೨ (<ತಾಳ್೩) + ಓಲೆ ]

**ತಾಳ್ಕೆ** (ನಾ).=ತಾಳಿಕೆ$_1$ ೩ : "ಧರಣಂ, ಧಾರಣಂ . . . ಧಾರ್ಯಂ ಈ ೬ ತಾಳ್ಕೆ" (ಕಾಶಕ್ಕ. ೦೨೮). [ ತಾಳ್$_1$ + – ಕೆ ]

**ತಾಳ್ಕೆವಂತ** (ನಾ). ಸಹನೆಯಿಂದ ಕೂಡಿರುವಾತ; ತಾಳ್ಮೆಯುಳ್ಳವನು : "ವೃಷ್ಟಃ, ವೃಷ್ಟವಾನ್. . . ಮರ್ಷಣಃ, ಈ ೬ ಹುಸಿಗನುಂ, ತಾಳ್ಕೆ ವಂತನುಂ" (ಕಾಶಕ್ಕ. ೨೦೪). [ ತಾಳ್ಕೆ + – ವಂತ ]

**ತಾಳ್ಗಿಯ್** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ಕೆಳೆಗೊಳ್ಗುಂ ನೆವಮಿಲ್ಲದೆಲ್ಲ ಜಗಮುಂ ತಾಳ್ಗಿಯ್ಯುಗಮಾ ದೈವಮುಂ ತಳಿರ್ವಣ್ಣಂ ಚಿಕದೇವರಾಯನ ದಯಾಂಕುರಂ ಕಟಾಕ್ಷಾಂತದೊಳ್ (ಚಿಕವಿ. ೩-೦೦೬).
[ ತಾಳ್$_1$ + ಕೆಯ್$_1$ ]

**ತಾಳ್ಪು$_1$** (ಕ್ರಿ). ೧. ಹೊಂದು; ಪಡೆ : ಸಮಾಧಿಯೊಳೆ ಮುಡಿಪಿ ತಾಳ್ದಿದನ್ನಿತಮರೇನ್ದ್ರಭೋಗಮಂ (ಎಕ. III, ಮೈಸೂರು. ೬-೩ ; ಸು. 750); ದಾನಾಸುಮೋದ ಪ್ರಭಾವದಿಂದುಪಶಮಭಾವಮಂ ತಾಳ್ದಿ (ಆದಿಪು. ೩-೨ ವ) : ತಾನುಂ ತ್ರಿಖಂಡಮಂಡಲಾಧಿಪತ್ಯಮಂ ತಾಳ್ದಿ ಪೌದನಪುರಮಂ ಪೊಕ್ಕು (ಶಾಂತಿಪು. ೩-೬೪ ವ) ; ದಕ್ಷಿಣಬಾಹುದಂಡದೆ ಜಯಶ್ರೀಕಾಂತೆಯಂ ತಾಳ್ದಿ (ಗದಾಯು. ೯-೩೯) ; ಚರಿಯಿಪ ಖಗಮೃಗಕುಳಮಾ ಪರಮಮುನೀಶ್ವರ ತಪಃಪ್ರಭಾವದಿನತ್ಯಾದರಮಂ ತಾಳ್ದಿ ಪರಸ್ಪರ ವಿರೋಧಮಂ ಬಿಸುಟವು (ಸುಕುಮಾ. ೮-೬೨); ಶಾಂತರಸಮಂ ಕಾರುಣ್ಯಮಂ ತಾಳ್ದಿ (ಶಂರಾಮಾ.೦-೩). ೨. ಧರಿಸು ; ತಳೆ : "ತಾಳ್ದು–ಧಾರಣೇ" (ಶಮುಧಾ) ; ತದಾಜ್ಞೆಯಂ ನಿಜ ಕಿರೀಟದೊಳ್ ತಾಳ್ದಿದಂದದಿಂ ಸೊಗಯಿಸಿದರ್ (ಆದಿಪು. ೧೩-೭೯) : ಇತ್ತ ಸರ್ವದಯಿತೆ ಗರ್ಭಮಂ ತಾಳ್ದಿ ಸಾಗರದತ್ತಂ ಕಂಡು (ಜಾಪುಂಪು. ೧೦೧-೧೪); ಅಂಗನೋಚಿತ ರಸಾಲಂಕಾರಮಂ ತಾಳ್ದಿದೊಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ (ಗದಾಯು. ೦-೭); ದಿವಮಂ ಮುಟ್ಟಿದ ಪೆಂಪು ಭೂವಲಯಮಂ ತಾಳ್ದಿರ್ದ ಧೈರ್ಯೋದಯಂ (ಮಲ್ಲಿಪು. ೧-೬೮) ; ವಿಜಯಶ್ರೀಯಂ ಭುಜದೊಳು ತಾಳ್ದಿದಜೇಯ (ಎಕ. VIII (೩), ಸೊರಬ, ೩೮೭-೩ : 1201). ೩. ಸಹಿಸು ; ತಡೆದುಕೊಳ್ಳು ; ತಾಳಿಕೊಳ್ಳು : ಅರಿಗನಂ ಕಾಣುತ್ತೆ . . . ತಾಳ್ದಲರಿದೆಂದಿರ್ಕಚ್ಚೆಯಂ ಕಟ್ಟಿದಳ್ (ಪಂಪಭಾ. ೪-೩೮); ದೇವಕೃತಂಗಳುಮಂ ಸ್ವಾಭಾವಿಕಮುಮನ ಜಿತ ನೀನೆ ತಾಳ್ವಿದೆ (ಅಜಿಪು. ೮-೧೭) ; ಇಂತೀ ಪದಿನಾಲ್ಕುಮನತ್ಯಂತು ದೃಢಹೃದಯನಾಗಿ ತಾಳ್ದಿರ್ದಂಗೋರಂತೆ ನಿರಂತರಸೌಖ್ಯಂ ಭ್ರಾಂತಿಲ್ಲದೆ ಕೂಡುಗಲ್ಲಿ ಸಂದೆಯುಮುಂಟೇ (ಧರ್ಮಾಮೃ. ೧-೮೨). ೪. ಕೈಕೊಳ್ಳು ; ತೆಗೆದುಕೊಳ್ಳು: ಮತ್ತೆಂತತಿಶಯದೆ ಮಹಾಪುರುಷವ್ರತಮಂ ತಾಳ್ದುವಳು ದಾರಚರಿತಕ್ರಮದಿಂ (ಕವಿಹಾ. ೩-೧೬೨) : ಮುನ್ನಿನ ರಾಜ್ಯಲೀಲೆಯಂ ನೆನೆಯದೆ ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮಂ (ಅಜಿಪು. ೩-೨) ; ಸುಷೇಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯಂ ತಾಳ್ದಿದಂ (ಸುಕುಮಾ ೧೦-೩೧). ೫. ಹಿಡಿದುಕೊಳ್ಳು ; ಹಿಡಿ : ಮಗುಳ್ವಿನಿಲ್ಲಿಗೆ ಬರ್ಪುದುಂ ತನುವಿನೊಳ್ ಪ್ರಾಣಂಗಳಂ ದೇವಿ ತಾಳ್ದುಗುಮೋ (ಕಾದಂಬ. ೩೭೮). ೬. ಹೊರು ; ಹೊತ್ತುಕೊಳ್ಳು: ಜಲಧಿತರಂಗತಾಟಿತ ಧರಾತಲ ಭಾರಮಿದೆತ್ತ ಬಾಲನೆತ್ತಳವಿನಿತುಂಟೆ ತಾಳ್ದಲಿದನೆಂಟ್ಟಜಿಯಿಂ ಕೊಳಲೆಂದು ವೈರಿಗಳ್ ತಳರ್ದಪರ್ (ಆದಿಪು. ೪-೮೪).

**ತಾಳ್ದುಕೊಳ್** = ಸಹಿಸಿಕೊಳ್ಳು ; ಸೈರಿಸು : ತಾಳ್ದುಕೊಳಲರಿದಪ್ಪ ಪತನಕ್ಕೆ ಪಕ್ಕಪ್ಪ ಪಾಡಿಂದೆ ಉಟಿಪಲ್ಕುಮಾಣವು (ಬಬ್ಬೂರು. ೪೮-೦೦೩೩).

**ತಾಳ್ದು$_2$** 'ತಾಳ್$_1$' ಪರಾ.

**ತಾಳ್ಮೆ, ತಾಳಿಮೆ, ತಾಳುಮೆ** (ನಾ). ೧. ಸಹನೆ ; ಸೈರಣೆ ; ತಾಳುವಿಕೆ : ತೊನೆಯಲ್ ತಾಳ್ಮೆಯನಾಂತಮಂ ಬೆರೆತೊಡಂ ನಿರ್ಗರ್ವಿ (ಸೋಮೇಶ. ೩೨); ತಾಳ್ಮೆ ಇರಲಿ ಪ್ರಯತ್ನವನ್ನು ನಿಲ್ಲಿಸಬೇಡ (ಶಾಲಮ. ೨೨೩) ; ಜ್ವರದ ತಾಪದಿಂದ ಜರ್ಜರಿತನಾದ ಆನಂದ ತನ್ನೆಲ್ಲ ತಾಳ್ಮೆಯನ್ನು ಕಳೆದುಕೊಂಡಿದ್ದ (ಶೀಮೋಡ. ೧) : ತಾಳ್ಮೆ ಇದ್ದ ಪುರುಷನಲ್ಲಿ ಬೀಳು ಇದ್ದರೆ ಬಾಳ್ಯಾನು (ಗಾದೆ). **ತಾಳಿಮೆ** : ೧. ತಾಳಿಮೆಗುಂಟೆ ಹಳವೆ (೧೪ವಿಂ. ೩೦-೯೪). ೨. ಸಾವಕಾಶ ; ತಡ : ತಾಳಿಮೆಯ ಮಾಡದಿರೆಂದು ಆ ಕ್ಷಣ ಕಳ್ಳಿಬಡಿಗೆಯ ತಂದು (ಕಾರನಿ. ೩-೧೩). **ತಾಳುಮೆ** : ೧. ತಾಳುಮೆಯು ಶಮದಮವು ಸಹಜವು (ಜ್ಞಾನಸಿಂ. ೧೭-೩೧); ತವಕದಿಂ ಕೇಡು ತಾಳುಮೆಯುಳುಮೆಯಿದ ನರಿದು ಸವಿನಯದಿಪೊಲಿಸಿಕೊಂಬೊದು (ನವಮೋ. ೯-೨೦) ; ಆತುರದಿನ್ ಅಡುಗೆ ಪಕ್ಕಹುದೆ ? ತಾಳುಮೆಯ ಪರಿಪಾಕ (ಮಂಕುಕ. ೭೮೧).
[ ತಾಳ್$_1$ + – ಮೆ$_1$ ]

**ತಾಳ್ಮೆಗೆಡು** (ಕ್ರಿ). ಸೈರಣೆಯನ್ನು ಕಳೆದುಕೊಳ್ಳು; ತಾಳ್ಮೆ ಇಲ್ಲದಂತಾಗು: ಆಗ ಭೀಮನು ತಾಳ್ಮೆಗೆಟ್ಟು ಕೈ ಕೈ ಹಿಸಿಕಿಕೊಳ್ಳುತ್ತ . . . ಎಂದನು (ವಚಭಾ. ೨೯೮) ; ಅದುವರೆಗೂ ಮೌನವಾಗಿದ್ದ ಜೈಗೋಪಾಲ್ ತಾಳ್ಮೆ ಗೆಟ್ಟು ಗಡಬಡಿಸಿದ (ಅಶ್ವಾರ್ಥ. ೦೧೮) ; ಅವರು ಬುದು ತಲುಪಿದುದೇ ತಾಳ್ಮೆಗೆಟ್ಟವರ ಹಾಗೆ (ಮೂರುದಾ. ೨೬೦). [ ತಾಳ್ಮೆ + ಕೆಡು$_1$ ]

**ತಾಳ್ಮೆತಪ್ಪು** (ಕ್ರಿ). = ತಾಳ್ಮೆಗೆಡು: ತಾಳ್ಮೆತಪ್ಪಿದರೆ ಅಪಯಶಸ್ಸು ಬರುತ್ತದೆ (ಭಾರದ. ೧೦೩). [ ತಾಳ್ಮೆ + ತಪ್ಪು$_1$ ]

**ತಾಳ್ಮೆವಂತ** (ನಾ). ತಾಳ್ಮೆಯುಳ್ಳವನು; ಸಹನೆ ಇರುವವನು: "ಕ್ಷಂಪನ್, ಕ್ಷಂಪಃ, ಕ್ಷಂಪಕಃ, ಈ ೩ ತಾಳ್ಮೆವಂತು" (ಕಾಶಕ್ಕ. ೨೩೮).
[ ತಾಳ್ಮೆ + – ವಂತ ]

**ತಾಳ್ವ** 'ತಾಳ್$_1$' ಪರಾ.

**ತಾಳ್ವಾರ, ತಾವಾರ, ತಾಳವಾರ$_1$, ತಾಳುವಾರ** (ನಾ). ೧. ಮನೆಯ ಮುಂದಿನ ತಗ್ಗಾದ ಅಂಗಳ; ಇಳುಕಲಾದ ಅಂಗಳ: (೩). **ತಾವಾರ**: ೨. ಒಪ್ಪಾರು ಮನೆ ; ಒಪ್ಪಾರು ಗುಡಿಸಲು : ಕ್ರೈಸ್ತ ಪೂಜಾಗೃಹದ ಪಶ್ಚಿಮ ಪಾರ್ಶ್ವದಲ್ಲಿಯ ಹೊರಕೋಣೆ, ತಾವಾರ (Ante-chapel. ಇಂಕನಿ); (ದನಕರುಗಳನ್ನು ಕಟ್ಟುವುದು, ಮೊ. ಕ್ಕೆ ಉಪಯೋಗಿಸುವ) ಗುಡಿಸಿಲು ; ಜೋಪಡಿ ; ಕೊಟ್ಟಿಗೆ ; ಗಾಡಿಖಾನೆ ; ಸಾಮಾನನ್ನು ಶೇಖರಿಸಿಡುವ ಕರ್ಮ ಶಾಲೆಯಾಗಿ ಉಪಯೋಗಿಸುವ ಮನೆ; ಪಟ್ಟಡಿ; ತಾವಾರ"(Shed. ಇಂಕನಿ.). **ತಾಳವಾರ$_1$** : ೧. "ರಥ್ಯಾ, ಪ್ರತೋಳೀ, ವಿಶಿಖಾ ೩ ಊರೊಳೊಗಿರುವ ಮುಖ್ಯವಾದ ಚಾವಡಿ ಜಗಲಿ, ಬೀದೀಜಗಲಿ, ತಾಳವಾರ, ಕೈಸಾಲೆ, ಜಗಲಿ" (ಸಿದ್ಧಾಂತಿ. ೮೮). **ತಾಳುವಾರ** : ೨. ತಗಡು ಬಡಿದ ತಾಳುವಾರಂಗಳಿಂ (ಸೌಗಂಧಿ. ೧೩೧-೮).
[ ದೇ.೫ ತಮಿ. ಮಲ. ತಾಟ್ವಾರ ; ತೆಲು. ತಾಳ್ವಾರ, ತಾಳುವಾರ ]

**ತಾಳ್ವೆ** (ನಾ). = ತಾಳ್ಮೆ ೧: "ಕ್ಷಾಮಯಿಕಿ, ಕ್ಷಾಮಣಂ, ಕ್ಷಾಮಣೀಯಂ–ಈ ೩ ತಾಳ್ವೆ" (ಕಾಶಕ್ಕ. ೦೦೮). [ ತಾಳ್$_1$ + – ವೆ ]

**ತಾಱ್$_1$** 'ತಾಱು$_1$' ನೋ.

**ತಾಱ್$_2$, ತಾರ್, ತಾಱು$_4$** (ನಾ). ಒಳಿತು ಕೆಡಕುಗಳ ಸೂಚನೆ; ಶಕುನ: "ಶಕುನ ಶೋಷಣಗಳೊಳ್ ತಾಱ್ನಿಕ್ಕುಂ" (ಶಬ್ದಮಂ. ೦೦೭); ಸೀರ್ಗಳ್ ಸೀರ್ಗಳ್ ತಾರ್ಗಳ್ (ಕಮದ. ೪೧). **ತಾರ್** : ತುರುವಿಂದು ಬಲವಂದು ತಾರ್ಗಳಂ ಬರೆಯುತಿರೆ (ಕಾಲೂರ. ೩೯-೯೮). **ತಾಱು$_4$** : "ತಾಱು – ಶೋಷಣೇ, ಶಕುನೇ ಚ" (ಶಮುಧಾ) ; ಸರಾಗದಿನೊಲಿದು ದಂಪತಿ ತಾಱ [ಪಾಠಾಂ. ತರವ]ನಿತ್ತವು ಕರಿಯ ಹಕ್ಕಿಗಳು ಸುಳಿದವೆಡದಲಿ ಹಂಗ ಬಲದಲಿ (ತೊರರಾ. ೧-೬-೬).

**ತಾಱನಾಡು** (ನಾ). ಒಂದು ಸ್ಥಳದ ಹೆಸರು : ದಂಣಾಯಕರು ತಾಱನಾಡು ಹದಿನಾಡು ಕುನಾಡನು . . . ರಾಜ್ಯಂಗೆಯುತ್ತಮಿರಲು (ಎಕ. III, ತಿರುಮ. ೩೧-೩೦ ; 1196). [ ತಾಱ ? + ನಾಡು ]

**ತಾಱಲ್** (ನಾ). ೧. ಒಣಗಿರುವುದು ; ಶುಷ್ಕವಾದುದು ; ಸೊರಗಿ ಹೋಗಿರುವುದು: ತಾಱಲಾದುವು ತನು ಕೂಟ ನೀರ ದೆಸೆಯಿಲ್ಲದೊಡಲ್ಗಳ ಸೊತು ತಾಳ್ದುವಂ (ಆದಿಪು. ೯-೮೯). ೨. ಕುರುಚಲು ಗಿಡಗಳ ಗುಂಪು ; ಪೊದರು : ಪೊಸಗಾರೊಳ್ಗಾಱಲೊಳ್ ಕಣ್ಣರೆಮುಗುಟ್ದಿರೆ . . .

ನಿಂದುದು ವನಮಹಿಷೀವೃಂದಂ (ಮಲ್ಲಿಪು.೮-೯೯); ನಿಂದಿರ್ದುದೋರೊಂದೆಡೆ ಯೊಳ್ ತಾಱಲ್ಗಳೊತ್ತಂಬಿಡಿದು ಮೃಗವ್ಯಾಗ್ರವೃಂದವೋರಂದದಿಂದಂ (ಚಂದ್ರಪು. ೪-೪೭): ಸಿಂಹ ಕಿಶೋರಂ ನಡುಸೂಲೊಳ್ಸಿರ್ಕಿ ಕಣ್ಣಂ ತೆಱೆ ದಿಭಪತಿಯಂ ತಾಱಲೊಳ್ಕಂಡು ಕಾಯ್ಪಿಂ ನಡು ಪಾಯ್ದು (ಅನಂಪು. ೧೨-೬೨): ತಾಱಲೊಸರ್ದಾಣ ಮಹಾಗ್ರಹಂ ತೊಱೆ ಕೊಳಂ ಪುಲ್ವಟ್ಟೆ ಗಳ್ ಕಾರ್ಮುಕಂ (ಜೂಕ್ತಿಸು. ೩-೨). ೩. (ಕುರಂಚಲುಗಿಡಗಳಿಂದ ಕೂಡಿದ) ಪ್ರದೇಶ; ತಪ್ಪಲು; ಕಿಬ್ಬಿ: ಕರುಣಾಧ್ವನಿ ಪೊಂಪುಱ ಮಾದುದು ಗಿರಿಯ ಪಿರಿಯ ತಾಱಲೊಳಾಗಳ್ (ಶಾಂತಿಪು. ೯-೮೨); ಪೆಸರ್ವಡೆದುವು ಸೌಗಂಧಿಕಮೆಂಬ ದದಱ ತಾಱಲೊಳ್ ಕಿಸುಗಲ್ಗಳ್ (ಚಂದ್ರಪು. ೧೨-೯೯): ಆ ವರಾಹಸಂದೋಹವಿರ್ದ ಶಾಲೆ[ಲಿ]ಯ ತಾಱ ಲೊಳ್ (ಶಾಂತೀಶ್ವ. ೩-೮೭ ವ). [ ತಾಱು₁ + – ಅಲ್₂ ]

**ತಾಱಲ್ವಿಡಿ** (ಕ್ರಿ). ಪೊದೆಯನ್ನು ಹಿಡಿ; ಹೊದರನ್ನು ಸೇರು: ತಾಱ ಲ್ವಿಡಿದು ಗೋರಿವರಿದುಮೆನೆ ಕುನುಂಗಿ ಕೆಲ್ಲಯಿಸಿ ನೋಟ್ಪ ತರಳಲೋಚ ನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ (ಅನಂಪು. ೬-೧೬ ವ).
[ ತಾಱಲ್ + ಪಿಡಿ₁ ]

**ತಾಱವಱು** 'ತಾಱುವಾಱು' ನೋ.

**ತಾಱೆ**, ತಾರಿ₁, ತಾರೆ₁, ತಾಱೆ₁ (ನಾ). ೧. ಒಂದು ಬಗೆಯ ಮರ; ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ತಾರೆ, ಅಳಲೆ, ನೆಲ್ಲಿ ಎಂಬ ತ್ರಿಫಲ ಗಳಲ್ಲಿ ಒಂದು; ಕಲಿದ್ರುಮ; ಈ ತಾರೆಮರದಲ್ಲಿ ಕಲಿಪುರುಷನು ವಾಸಿಸುತ್ತಿರುವನೆಂಬ ನಂಬುಗೆಯಿದೆ: "ತಾಱೆಯಲಿ ಭಂಡಿಯಲಿ . . . ಅಕ್ಷಮೆನಿಸಿಕ್ಕು" (ಮಂಗರಾ. ೧೪೫-೩೦); ತಾಱೆ ಹೊನ್ನೆ ಕುಟಜಂ . . . ಪನಸು ನಿಂಬಂ (ಕಾವ್ಯಸಾ. ೧೦೧೪೦ ಪೂರ್ವ); ತಾಱೆಯ ಕಳವಿನ ಮರಂಗಳು ಮೇರೆ (ಕರ್ಣಾಇ. IX-I, ೧೦೯-೪೩; 1067); ಪಾದರಿ ತಾಱೆ ತಂಡಸು . . . ಕವುಂಗಿವನ್ನಾವು (ಪಾರ್ಶ್ವಪು. ೦೨-೩೮); ತಾಱೆ ತೇಗು ತಱೆ ತಂಡಸಿ ಬೊಬ್ಬುಲಿ (ಪುಣ್ಯಾಸ್ರ. ೩-೭೪); ಕಡಪೊಡವೆಕ್ಕೆ ಕಕ್ಕೆ ತಱೆ ತಾಱೆ . . . ತಡಸೀಳೆ ಬಾಱೆ (ಧರ್ಮಾಪ. ೩-೯೬); ನೆಲ್ಲಿ ನೇಱಲು ತಱೆ ತಾಱೆ ಕಡವ ಕನ್ನೆಲ್ಲಿ ಹಲಸು (ಕುರಾಹಾಂ. ೨೬-೩೩). ೨. (?): ಮೂಡಣ ಪಳ್ಳ ಅದಱ ತೆಙ್ಕಣ ದೆಸೆ [ಮಣ್ಣಗೆಱೆ]ಗೂಟ್ಟಂ ತಾಱೆಯಂ ಕೊ[ತ್ತೂರ್]ಗು ××× ಎಯ ಕೆಱೆಗೊಟ್ಟಂ (ಕರ್ಣಾಇ. XI-I, ೯-೨೯; 862); ಬ್ರಹ್ಮದೇವಂಗೆ ಗದ್ದೆ ತಾಱೆಯಿಂದಿಬ್ಬಡಗಲು ನಟ್ಟ ಕಲ್ಲಿಂದ ಮೂಡಣ ನಿವೇಸನ (ಎಕ. XII, ತಿಪಟೂ. ೪೨-೪೦; 1229). **ತಾರಿ₁**: ೧. ತಾರಿ . . . ದೊಡ್ಡ ಮರ (ಕಭಾಗ. ೪೦). **ತಾರೆ₁**: ೧. "ವಿಭೀತಕಃ . . . ಭೂತಾವಾಸಃ, ಕಲಿದ್ರುಮಃ ಓ ತಾರೆಯ ಮರ" (ಸಿದ್ಧಾಂಕಿ. ೧೦೦); ತಾರೆಯು ಸೀಗೆ ಬೇಲ ಬಗುನಿಯು (ನವಮೋ. ೮-೯); ಮುತ್ತುಗ ತಾರೆ ಮುಂತಾದ ಹೆಮ್ಮರಗಳು ವತ್ತಾಗಿ ತೋರ್ದವಾ ವನದಿ (ಸೌಗಂಧಿ. ೨-೩೪); ಸ್ವಲ್ಪ ಮುಂದೆ ಹೋಗಲು ಹಣ್ಣುಬಿಟ್ಟದ್ದ ಒಂದು ತಾರೆಯ ಮರ ಕಾಣಿಸಿತು (ವಚಭಾ. ೧೪೧). **ತಾಱೆ₁**: ೧. "ಕಲೀ, ಅಕ್ಷಃ, ವಿಭೀತಃ–ಈ ೩ ತಾಱೆ" (ಹಲಾಯು. ೧೧೦–೪೬೪); ಎರಟ್ಟಿ ಪುಣುಸೆಎ ಮೂಡಾಯೋಡಿ ನೀರಿಟ್ಟವೆ ತಾಱೆಎ (ಎಕ. XVI, ಗುಬ್ಬಿ. ೭೩-೫೨: 733); ತಾಱೆಯ ಮಾವಿನ ಮುಳ್ಮರನ ಪಾಲ್ಮರಂಗಳ ಸುರಗೇಹಾವಳಿಯ ಮರಂ ಕರವಮಶುಭಾವಹ ಮಕ್ಕುಂ ಗೃಹಕ್ಕೆ ಗೃಹಶಲ್ಯಂಗಳ್ (ಶಿವೀಕೋಪ. ೩-೯); ಉಜ್ವಲವಾಗಿ ತಾನುರಿವ ತಾಱೆಯ ತೆಂಗಿನೆಕ್ಕೆಯ ಮಾವಿನಿಂಧನಮಂ . . . ತರಿಸಿ (ಧರ್ಮಾಮೃ. ೯-೧೭೧); ಅರನೇಱಲ್ಮಾಱೆ ತುಂಬುರ್ತದುಕಳಲಿಲವು ನೆಲ್ಲಿ (ಗಿರಿಕ. ೧-೭೨): ತರತರದಿಂ ಶೋಭಿಸುವ ತಾಱೆಯಿಂದ . . . ಕಾನನಂ ಕಣ್ಗೆಸೆದುದು (ರಾಘವ.೦೭-೩೪); ಗಂಧಕದ ತೈಲವನು ಕುಂದದಲಿ ರಸಕಿತ್ತು ಕಂದಿದ ತಾಱೆಯೊಡಗೂಡೆ ಹೇಮ ತಾ ಮುಂದೆ ಬಂದಕ್ಕು (ಸರ್ವಜ್ಞ.೦೯೬೭).

**ತಾಱೆಯಕಾಯಿ**, **ತಾರೆಯಕಾಯಿ** = ತಾಱೆಗಾಯ್: ದಿನವರದಕ್ಕೆ ತಾಱೆಯ ಕಾಯ ಪ್ರಮಾಣಾಹಾರವಾಗಿ (ಪುಣ್ಯಾಸ್ರ. ೧೧-೬ ವ); "ಅಕ್ಷಫಲಃ – ತಾರೆಯಕಾಯಿ" (ಒಹಧಿ. ೬).
[ ದೇ.೩ ತಮಿ. ತಾನ್ರಿ, ತಾನಿ; ಮಲ. ತಾನ್ನಿ; ತುಳು. ದಾಂಡಿ; ತೆಲು. ತಾಡಿ, ತಾಂಡ್ರ ]

**ತಾಱೆಗಬೀಱೆಗ**, ತರಗಬರಗ, ತಱಬಱೆಕ, ತಾರಗಬೀರಗ (ನಾ). ಅಸ್ತವ್ಯಸ್ತವಾದುದು; ತಾರುಮಾರು: ಎಲ್ಲಂ ಬಱೆ ತಾಱೆಗಬೀಱೆಗ [ಪಾಠಾಂ. ತಾಱೆಗೆಬೀಱೆಗ]ವೆತ್ತಱತತ್ತಱವೆಕ್ಕಸಕ್ಕಮುಸ್ತಂಭ್ಯಸ್ತಂ (ಗಿರಿಕ. ೦-೨೩). **ತರಗಬರಗ**: ತರಗಬರಗ ಎಕ್ಕಸಕ್ಕ ಅಸ್ತವ್ಯಸ್ತವಾಗುವುದು (ಸಾಹಿವಿ. ೫೦). **ತಱಬಱೆಕ**: ಅಱೆಯದ ಬಾಲಂ ಬೀದಿಯ ಹಱೆಮಣ್ಣಂ ಮಾಡಿದೊಂದು ಹಾಪೆಯ ತೆಱದಿಂ ತಱಬಱೆಕಂ ವಿಕಟಾಕೃತಿ ನೆಱೆ ನಿಮ್ನೋರನಿವೃತಹುಂಡಸಂಸ್ಥಾನಂಗಳ್ (ಶಾಂತೀಶ್ವ. ೯-೧೦೭). **ತಾರಗಬೀರಗ**: ತಮಿಳಿನಲ್ಲಿರುವಂತೂ . . . ತುಂಬಾ ಅಸ್ತವ್ಯಸ್ತ 'ತಾರಗ ಬೀರಗ'ವಾದದ್ದು ಎಂದು ಅರ್ಥವಂತೆ (ಛಾಪಾಶಾ. ೮೭). [ ? ]

**ತಾಱೆಗಾಯ್**, ತಾರಿಕಾಯಿ, ತಾರೆಕಾಯಿ, ತಾಱೆಕಾಯಿ(ನಾ). ತಾರೆಯ ಮರದ ಕಾಯಿ: ರುದ್ರಾಕ್ಷಿಯಂ ತಾಱೆಗಾಯೆಂದು ಶುನಕನ ಕೊರಲೊಳು ಧೀರನಿವ ಕಟ್ಟಿದನು (ಪ್ರಭುಪು. ೩-೧೨೦). **ತಾರಿಕಾಯಿ**: ಅಳಲೆಕಾಯಿ, ತಾರಿ ಕಾಯಿ ಹಾಂಗು ಹತ್ತಿಯ ಕಾಳು, ಇವುಗಳ ಮಜೂರಿ (ಮುಂಬವ್ಯಾ. ೧೮ ಪ್ರಸ್ತಾವನೆ). **ತಾರೆಕಾಯಿ**: ಕೊತ್ತುಂಬರಿ, ಕೊಡಸಿಗೆಬೇರು . . . ತಾರೆ ಕಾಯಿ, ನೆಲ್ಲಿಚಟ್ಟು . . . ಸಮದಿಂ ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಸಕವ್ಯ. ೬೩); ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ (ವಿಷಚಿ. ೨೦-೩). **ತಾಱೆಕಾಯಿ**: ಕಲ್ಕದ್ರವ್ಯ . . . ತಾಱೆಕಾಯಿ–ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೈದ್ಯಸಾ. II, ೩೩).
[ ತಾಱೆ + ಕಾಯ್₄ ]

**ತಾಱೆಗೆ** (ನಾ). ಒಣಗುವಿಕೆ; ಬಾಡುವಿಕೆ: ಬೇಡಿಗೆ, ಮೂಡಿಗೆ, ತಾಱೆಗೆ, ಮಾಱೆಗೆ, ಪೊಲಿಗೆ (ಶಬ್ದಾನು. ೩೬೩ ಪ್ರಯೋ). [ <ತಾಱು₁ + – ಗೆ ]

**ತಾಱೆಸು**, ತಾರಿಸು₁ (ಕ್ರಿ). ೧. ಒಣಗಿಸು; ಬಾಡಿಸು: ಎಳೆಯ ಬಾಳೆಯ ಸುಳಿಯನನಲಜ್ವಲನದುಬ್ಬಟೆ ತಾಱೆಸಿ[ಪಾಠಾಂ. ಕಾರಿಸಿ]ದವೊಲು ಬಳಲಿದ ಬಲೆಯ ಕಂಡು (ನಳಚ. ೩-೨). **ತಾರಿಸು₁**: ೨. ಶಕ್ತಿಗುಂದುವಂತೆ ಮಾಡು; ಸಾರವಿಲ್ಲದಂತೆ ಮಾಡು: ಶೂರನಹ ವೈರಿಯನು ದೂರದಲೆ ತಾರಿಸುವ ಸಾರವಹ ನಿಮ್ಮ ಮಂತ್ರಗಳ ಕಂಡು (ದೀಲೀಪ. ೧-೩೦).
[ ತಾಱು₁ + – ಇಸು₃ ]

**ತಾಱು₁**, ತಾರು₁, ತಾಱ್₁ (ಕ್ರಿ). ೧. ಸೊರಗು; ಬಡಕಲಾಗು: ಭೀಮನಾರ್ದೊರ್ದೆದೀಡಾಡಿದೊಡೆ . . . ಪಾಱೆ ತಾಱಿದ ಪೆರಾನೆಯೊಡಲ್ಗಳಭ್ರತಳದೊಳ್ ಸಿಲ್ಕಿರ್ದುವು (ಪಂಪಭಾ. ೧೧-೬೭); ವ್ರತಮಂ ಪೇೞ್ದೊಡೆ ನೋಂತು ತಾಱೆದೊಡಲುಂ ಚಕ್ರೇಶನಾಜ್ಞಾಧಿಪಂ ಸುತನಂ ಪೇೞ್ದೊಡೆ ಚಕ್ರವರ್ತಿ ಕಟಕಕ್ಕಾರಾಧ್ಯೆಯಾಗಿರ್ದೆ (ಆಜಿಪು. ೧೨-೮); ಬ್ರಹ್ಮಚಾರಿಯ ತಾಱೆದೊಡಲುಮಂ ಒಳಗಡಂಗಿದ ಕಣ್ಣುಮಂ ಮಾಯಾ ಸಂಯಮಮುಮಂ ಮನದೊಳ್ ಮೆಚ್ಚಿ (ಧರ್ಮಾಮೃ. ೬-೪೩); ಎನಿತಾನು ಮಱಸಿ ಕಾಣದೆ ತನು ತಾಱೆ (ಅನಂಪು. ೧೨-೬೧); ಕಾಳಿಕೆಯ ಪೋಱೆಯ ತಾಱೆದೊಡಲುಗಳ . . . ದೇವರಿಂದ್ರನನಱಸಿ ಕಂಡರು (ಕುಮಾವ್ಯ. ೬-೧೨). ೨. ಬತ್ತು; ಒಣಗು; ಬಾಡು: "ತಾಱು – ಶೋಷಣೇ, ಶಕುನೇ ಚ" (ಕವಮಾ); ಮಾಸಿ ತಾಱೆದ ಕುರುಳ್ಗಳುಂ (ಗದಾಯು. ೯-೩): ತಾಱುವ ತಾಳ್ಗಳುಮಗುರ್ವಿಸಲ್ ಕಾಡಕೋಣನೆಯ್ದುದುದಱಲಂ (ಜಗವಿ. ೦೭-೬೮); ತಾಱೆತಂತಃಕರಣ ಕಾಮನ ಕೂರುಗಣೆ ಕಾಲಿಕ್ಕಿದವು (ಕುಮಾವ್ಯವಿ. ೨-೧೩).

೩. ಕುಗ್ಗು ; ಕುಂದು ; ಮ್ಲಾನವಾಗು: ಕಾಱ್ ತಲ್ಲಣಿಸಿ ಬೀಳುತ ಕ್ಷುಧೆಯಡಸಿ ಬಾಯಾಱ್ (ಅಂಜಚ ೯-೦೭೭) ; ಕಾಱಿದಾನನದಿಳಿದ ಹುಬ್ಬಿನ . . . ವೃದ್ಧರನು ತೋಱಿದನು (ಉವ್ಯಾ.ಅ. ೦೫-೧೦) ; ಭೋಗಿಗಳು ಬೀಗಿದರು ತಾಱಿದುದು ವಿಯೋಗಿವ್ರಾತವತಿಭಯದಲಿ (ಸಾಂಗತ್ಯ. ೦೦-೭). ೪. ಕಡಮೆಯಾಗು ; ಕ್ಷೀಣಿಸು: ನೂಱು ಗಾವುದ ಮತ್ತೆ ಕ್ರಮದಿ ಕಾಱ್ ತಗ್ಗಿತು ನೋಡೆ ಪಗಡೆಯ ಕಾಯುಂತೆ ತೋಱುತಿದ್ದುದು ವೃಷಭಾದ್ರಿ (ಭರಚ. ೩೭-೬೦) ; ಬರ್ದು ಕೆಲಸಾರ್ದುದು ಕೈವೆ ಕಟಲ್ದುದುಬ್ಬರಂ ತಾಱಿತು (ಚಳವಿ. ೬-೨೦೯). ೫. ಬೇಯು ; ಬೆಂದುಹೋಗು (?) : ಸರಸ್ವಟಾಕದ ಶಫರಾಳಿ ಕುತ್ಸಿಸರ ವಿಮಾನವೊಲಿರ್ದುದು ಕಾಱ್ ತಳ್ತುವರ್ಗದ ಪಟುವಗ್ನಿಯುಂಡುಱಿದ ಕಾಂಡವದಂತೆವೊಲಿರ್ದುದಾವಗಂ (ಚಂದ್ರಪ್ರ. ೯-೭೯). ೬. (?) : ಸರ್ವ ಸುರರಂದು ನಗಜಾಧಿಪಂಗಗಿದು ಸುಗಿದು ತಾಱುವರುಯೆಂದಱಿಯೆ ಪೋಕ್ಷಂ(ಶಾನಂಚ.೨-೯೯). ತಾರು₁: ೧. ಪರರ ಕಣ್ಣಂಜಲಿರದಿನಿತು ಮಿಗೆ ತಾಗೆ ತನು ತಾರುಗುವೆನುತ್ತ (ಉಮಾಪ್ರ. ೪-೧೦೯); ಅವಳು ತುಂಬ ತಾರಿಹೋಗಿದ್ದಾಳೆ (ಪುನರು. ೪೦೦). ೨. ಕೆರೆಯ ಅಂಗಳದಂತೆ ತಾರಿವೆ ಹಸುಳೆಯಂಗಳು (ದ್ರಾ. ಕ್ಷ ದಾ. ೫೮-೫). ೩. ಮಾರಿ ದಳಲಿನೆದೆಯಾರಿದೆ ಸ್ವೆಸದೆ ತಾರಿದೆ (ಇಂದ್ರಕೀ. ೯) ; ಶೋಕದಿಂದ ಮನಸ್ಸು ತಾರಿದರೂ ಅವನು ಕರ್ತವ್ಯವನ್ನು ಬಿಟ್ಟು ಕದಲಲಿಲ್ಲ (ಧೀಮ್ಕಚ. ೨೪). ೪. ಮೂಡಿದರುಣಾಭ್ರದೋಲ್ ತೋರುತಿಹ ತಾರುತಿಹ ಭೀಕರದೊಳ್ಕಿದ ದಳವು (ಚಿನಮು. ೨೫-೪). ತಾಱ್₂ : (೬).

ತಾರವೊಯ್, ತಾರಹೊಯ್=ಉಸದೆಬಡಿ : ಸಾರಥಿಯ ತಾರವೊಯ್ದನು (ತುರಂಗ. ೫೭-೬೦) ; ತಾರಹೊಯ್ದನು ಕೆಡೆದವಾನೆಗಳು (ತುರಂಗ. ೫೦-೪).

ತಾರಮುರಿ = ಭಂಗಿಸು ; ಭಗ್ನಗೊಳಿಸು : ಜೋನಗ ಬೇನಬೊಂಟರಂ ತಾರಮುರಿದವರನವ್ವಳಿಸಿ (ತುರಂಗ. ೧೯-೬೦).

[ ದೇ.: ಮಲ. ತಾಱು.; ತೆಲು. ತಾಱು, ತಾರು ]

ತಾಱು₂, ತಾರ್₂ (ನಾ). ಒಣಗಿದಂದಂ ; ಶುಷ್ಕವಾದಂದಂ: 'ತಾಱುಗುಂಡೆ' ಪರಾ. ತಾರ್₂: ಒಣಗಿ ತಾರವಾದ ಸಿಬಿರಿನ ಪೆಂಡಿಯನ್ನು ತೆಗೆದು (ದೀಪಚ. II, ೩).

ತಾರ ಗೋಟಡಿಕೆ = ಒಣಗಿ ಗಟ್ಟಿಯಾದ ಗೋಟಡಕೆ : (೬).

[ <ತಾಱು₁ ]

ತಾಱು₃(ನಾ).೧. ತೆಂಗು, ಅಡಕೆ, ಉತ್ತುತ್ತೆ, ಬಾಳೆ ಮೊದಲಾದುವುಗಳ ಗೊಂಚಲು,–ಗೊನೆ. ೨. ಗುಂಪು ; ಸಮೂಹ : ಚಂಪಕದ ಮಾಲೆಯನು ಮಾಱುವ ನೆವದಿ ಪಿಡಿಯಲಳಿಗಳು ಕಂಡು ತಾಱುಬೇಱಾಗಲೋಡಿದವು (ಅನಂಚ. ೦-೦೬೩) ; ಜಾಱದುಂದದಿ ಸೂತ್ರಿಸಿದಂತೆ ನಡಸಿದರ್ತಾಱುಬೇಱಾಗದಂದದಲಿ (ಅನಂಚ. ೬-೭೬). 'ತಾರ್ಗೂಡಂ', 'ತಾರ್ಗೊಳ್' ಪರಾ. [ ದೇ.: ತಮಿ. ತಾಱು ]

ತಾಱು₄ 'ತಾಱ್₂' ನೋ.

ತಾಱು₅ (ನಾ). ಅಸ್ತವ್ಯಸ್ತತೆ ; ಗೊಂದಲ : 'ತಾಱುಂತಟ್ಟುಂ' ಪರಾ.

[ ? ]

ತಾಱು₆ (ನಾ). ಒಂದಂ ಬಗೆಯಂ ಭೂಮಿ : ಮೂಗಣ್ಣಾಗ ಭತ್ತಂ ಪೊಕುಳಿಮಕ್ಕಿಯ ಪಲಸಿನ ಕಾಱನಿತ್ತರೆ (ಎಕ. VI, ಚಿಕ್ಕಮ. ೭೫-೯: 1060 ?); ತೋಟಗರಿತ್ತರ್ವರ್ಷಂಪ್ರತಿ ಕಂಡಗೆಯಂ ಸ್ಥಿರತರ ತಾಱಿಂಗೆ ರಂಗಭೋಗಕ್ಕೆಂದುಂ (ಕಇ. I, ೩೦-೩೬ : 1222) ; ಮೂಡಲರಿಯ ತಾಱು ಹನ್ನೆರಡು (ಕಇ. III, ೬-೨೯ : 1343); ತೆಂಗಿನ ತಾಱಿಂದ ಪಡುವ ಬಡಗ (ತಶಿಇ. ೦೯೩೦, ಕುಂದಾಪುರ. ೫೩೬-೪೪ : 1871) ; ಮೂಲದ ಜವಳಿಯ ತಾಱಗಡಿಯಿಂದಂ ಬಡಗಲು (ತಶಿಇ. IX-ii, ೪೨೪-೪೫ : 1436). 'ತಾಱುವಾರಿ' ಪರಾ. [ ? ]

ತಾಱುಂಗಾಮಲೆ (ನಾ). ಸೊರಗಿಸುವ ಕಾಮಾಲೆ ರೋಗ : ಸಂತಾಪವೆನಿಸುವುದುಗ್ರತಾಪವೆನಿಸುವುದು ತಾಱುಂಗಾಮಲೆ (ಶಾನಂಚ. ೫-೦೩).

[ ತಾಱು₁ + ಕಾಮಲೆ (<ಕಾಮಾಲೆ) ]

ತಾಱುಂಗೊಡು (ಕ್ರಿ). (?) : ಅಳ್ಕೆಗೊಂಬನೊಳ್ ತೆಱಂದಿಱಿದು ತಾಱುಂಗೊಟ್ಟು ನಿಡುಸರಮನಿಟ್ಟು . . . ತುಂಬಿ ತಿಳಿದು ಬಳಿದ ಬಂಡಂ ಗಂಡುದುಂಬಿಯುಂ ತಾನುಮುಂಡು (ಲೀಲಾವ. ೦೦-೫೪ ವ).

[ ತಾಱು? + ಕೊಡು₁ ]

ತಾಱುಂತಟ್ಟು, ತಾರುತಟ್ಟು, ತಾಱುತಟ್ಟು, ತಾಱುಥಟ್ಟು, ಥಾಱುಥಟ್ಟು (ನಾ). ಗುಂಪು ; ಸಮೂಹ : ದಟ್ಟಣೆ : ಸೇನಾಭಟರ್ಭೋಂಕನೆ ತಾಱುಂತಟ್ಟುವೀಟರ್ (ಶಾಂತೀಶ್ವ. ೩-೧೫) : ಕೊಂಚವೆಟ್ಟಂ ತಟ್ಟುಱದಂತೆ ತಾಱುಂತಟ್ಟಾಗಿ ಕೆಡಪಿ ಮಟ್ಟಿಡುವುದುಂ (ಚಳಪಂ. ೪೭-೭). ತಾರುತಟ್ಟು: ಅರಿಗಂ ಗೆಲಲಾರದಮರರ ತಾರುತಟ್ಟನೆ ಬಡಿದು (ರಾಮಾಶಂ. ೬-೯-೪೫) ; ಪಾಳೆಯ ಕಂಡ ಕಂಡ ಕಡೆಗೆ ತಾರುತಟ್ಟಾಗಿ ಚೆದುರಿ ಹೋಗುತ್ತದೆ (ಸಂಜುಂಚ. ೯೭) ; ತಲೆಕೆದರಿಕೊಂಡು ತಾರುತಟ್ಟಾಗಿ ಓಡಿಹೋದರು (ಕರ್ಣಾಟಜ. ೦೩೦). ತಾಱುತಟ್ಟು : ವನಮೃಗರಾಜಿಗಳ್ . . . ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ ತಮ್ಮೊರ್ದೆಯಾಱ್ ತಾಱುತಟ್ಟಿನಲಸುವಿಂದಗಲ್ದುವು (ದಕಳು. ೪-೨೩) ; ತಾಱುತ[ಪಾಠಾಂ. ಥ]ಟ್ಟನ ಹೆಣದ ಮೆದೆ ಹೇರಾಳ ರಂಜಿಸಿತು (ಉವ್ಯಾದ್ರೋ. ೦೦-೬) ; ನಳನೃಪಾಲನ ಶರಹತಿಗೆ ನೆಱಿಮುಗ್ಗಿ ಕೆಡೆದುದು ತಾಱುತ[ಪಾಠಾಂ. ಥ]ಟ್ಟನಲಿ (ನಳಚ. ೯-೩೫) ; ಆ ಸೇನೆಯಂ ತಾಱುತಟ್ಟಾಗಿ ಕೆಡಹಿದರೊಂದು ನಿಮಿಷದೊಳ್ (ಜೈಮಿಭಾ. ೨೦-೪೪) ; ವೈರಿಣಿಗಳ ಸೀಳಿ ತಲೆಯ ಕೆದಱಿಕೊಂಡು ತಾಱುತಟ್ಟಾಗಿಯೋಡಿದರು (ಅಂಸವಿ. ೦೫-೯೬). ತಾಱುಥಟ್ಟು : ತೋಱ್ ಕಳೆವುದು ತಾವು ಹೇಳದ ತಾಱುಥಟ್ಟನ ಮಾತದೆಲ್ಲವನೆನಲಿಕಂತೆಂದ ತಾಱುಥಟ್ಟನು ಹೇಳ್ವ ನೀಱರು ತೋಱ್ ನುಡಿಯರು (ಸಂಭಚ. ೩-೮); ತಾಱುಥಟ್ಟಿಗೆ ಕೆಡೆದವಾನೆಗಳು (ಉವ್ಯಾಭೀ. ೮-೪೪) ; ತನಿಚೂಣಿ ಮಸಗಿತು ತಾಱುಥಟ್ಟನಲಿ (ಉವ್ಯಾಶ. ೨-೦೩) ; ವಿಮಾಱಿದನು ಸುರರಾಜ ಜಿತುವಿನ ತಾಱುಥ[ಪಾಠಾಂ. ತ]ಟ್ಟನ ಕದನವನು (ತೊರರಾ. ೬-೪೭-೪೭) ; ಕಂಡರು ದೂರದಲಿ . . . ಖಗಕುಲವೇಱಿದೆಳೆಗೊಂಬುಗಳ ತಳಿರ್ಗಳ ತಾಱುಥಟ್ಟನ ಹಸುರೆಲೆಯ ತಂಪಿನ ಮಹಾವಟವ (ಏಕಾಗ. ೪-೩-೨೫) ; ತುಱುಗಿದ ಹಯಂ ತಾಱುಥಟ್ಟಾಯ್ತು (ಜೈಮಿ. ೪೩-೨೭). ಥಾಱುಥಟ್ಟು : ಅಲರ್ಗಣ್ ಬೆಂಡೇಱ್ ರೋಮಾಂಚನದೊದವಿನಿತುಂ ಥಾಱುಥಟ್ಟಾಗೆ (ರಕಚ. ೦-೧೭).

[ ತಾಱು₃ + ತಟ್ಟು₂ ]

ತಾಱುಂತಟ್ಟುಂ, ತಾಱುಂತಟ್ಟುಂ (ಅ). ಅವ್ಯವಸ್ಥೆಯಾಗಿ ; ಚೆಲ್ಲಾಪಿಲ್ಲಿಯಾಗಿ : ತಾಱುಂತಟ್ಟುಂ ಬರ್ದ ಕಾಮುಕಜನಕ್ಕೆ (ಲೀಲಾವ. ೩-೨೦) ; ಹುಲ್ಲೆಡೆ ಹೆಲ್ಲವಾಗಿ ತಾಱುಂತಟ್ಟುಂ ಬೀಟುತ್ತಿರೆ (ಕುಸುಮಾ. ೦೪-೨೯ ವ). ತಾಱುತಟ್ಟುಂ : ಬಗೆಗೆಟ್ಟು ತಾಱುತಟ್ಟುಂ ಪರಿದು (ಉಲಾಕಾಂ. ೩೦-೧೦೯). 'ತಟ್ಟುಂತಾಱುಂ' ಪರಾ.

[ ತಾಱು₅ + ತಟ್ಟು₂ ]

ತಾಱುಂತಟ್ಟುಗುತ್ತು (ಕ್ರಿ). ಗುಂಪುಗುಂಪಾಗಿ ಹೊಡೆ,–ಇರಿ : ತಾಱುಂತಟ್ಟುಗುತ್ತುತ್ತೆ ಬಳ್ಳೆಯೊಳಡ್ಡಂ ಬರುತಿರ್ಪ ಕೊಂಕಣಿಗರಂ ಕೀನಾಶಲೋಕಕ್ಕೆ ನಿಶ್ಚಯದಿಂದೆಯ್ದಿಸುತುಂ (ಎಕ. VIII, ಸೊರಬ. ೦೫೨-೦೭ : 1380). [ ತಾಱುಂತಟ್ಟು + ಕುತ್ತು₁ ]

ತಾಱುಂತೀರು (ನಾ). ಚೆಲ್ಲಾಪಿಲ್ಲಿ ; ಅಸ್ತವ್ಯಸ್ತತೆ : ಸರ್ವಾಂಗದೊಳೆಡೆದೆಱಪಿಲ್ಲದೆ ಕೊಂಡು ತೋಱುವ ಬಲ್ಲೇಱುಗಳ ನೆಱವಣೆಯಿಂ ತಾಱುಂತೀಱಾ[ರಾ]ಗಿ ಬೀಟ್ದು ಸತ್ತ ಕುದುರೆಗಳ ಬಳಗಂ (ಚಾರಪು. ೦೫-೧೦೯ ವ). [ ತಾಱು₆ + ತೀರು₂ ]

**ತಾಱುಂಬರಿ** 'ತಾಱುಂಬಟ್' ನೋ.

**ತಾಱುಂಬಳಿ** 'ತಾಱುಂಬಟ್' ನೋ.

**ತಾಱುಂಬಟಿ**, ತಾರುಂಬಳಿ, ತಾಱುಂಬರಿ, ತಾಱುಂಬಳಿ (ನಾ). ೧. ಅಸ್ತವ್ಯಸ್ತವಾದುದಂ : ಹಂತಿದಪ್ಪಿ ತಾಱುಂಬಟಿಯುಂ ತೆರಳ್ದ ಕುರುಳ್ (ಚಂದ್ರಪ್ರ. ೯-೬೩). ೨. ಸುತ್ತುಮುತ್ತು ; ಎಲ್ಲಕಡೆ : ಅಳಿಗಳ ಬಳಗಂ ತಾಱುಂಬಟಿಯುಂ ಬರುತಿರೆ (ಕುಸುಮಾ. ೩-೭೯). **ತಾರುಂಬಳಿ** : ೧. ಮನೆಯ ಒಡೆಯನು ಅಕಾಲಮರಣ ಹೊಂದಿದ ಕೂಡಲೆ ಉಳಿದವರತಾರುಂಬಳಿಯು ಎಷ್ಟು ಆಗುತ್ತದೆ (ಚರಿತಂ. ೬೮): ತಾರುಂಬಳಿಯಿಂದ ದೊಮ್ಮಳಿ ಸುತ್ತ ಹೋಗಿ, ಕಯ್ಯುದ್ದಗಳ್ಗೆರಗುವರು (ಮಂತ್ರಕ. ೧೫೩-೧೪). **ತಾಱುಂಬರಿ**: ೧. ಕೊಳೆ ಸುಡು ತಾಱುಂಬರಿಯೆಂಬವು ಪದದ ಮೊದಲೊಳಿರಲಶುಭಕರಂ (ಕವಿಜ. ೩-೩೨). **ತಾಱುಂಬಳಿ**: ೧. ತಾಱುಂಬಳಿ[ಪಾಠಾಂ. ಟಿ] ಬಿಟ್ಟ ಚಂಚು ಬೆಮರಿಂ ಕಡೆಗೆನ್ನೆಗೆ ದಾನಲಾದ ಬೊಟ್ಟು (ಕಮುದ. ಸ. ೦೮೩ ಪ್ರಯೋ).

[ ತಾಱು₆ + ಬಟ್₂ ]

**ತಾಱುಂಬಟಿಗೊಳ್** (ಕ್ರಿ). ಹರಡು ; ವ್ಯಾಪಿಸು : ಹಂಸಮಂಡಳಿ ತಾಱುಂಬಟಿಗೊಳ್ವ ತಾವರೆಗೊಳಂ (ಅನಂತಪು. ೧-೯೪).

[ ತಾಱುಂಬಟಿ + ಕೊಳ್₁ ]

**ತಾಱುಂಬಟಿಯಂ** (ಅ). ದಿಕ್ಪಾಪಾಲರಾಗಿ ; ಎಲ್ಲಕಡೆಗೆ : ಅಲರ್ಗೆ ಫಲಕೆ ಪರಿದತ್ತಳವೆಂಡಿರ ನೆರವಿ ನಲಿದು ತಾಱುಂಬಟಿಯಂ (ಚಂದ್ರಪ್ರ. ೭-೯೮).

[ <ತಾಱುಂಬಟ್ ]

**ತಾಱುಕುಂಡ** 'ತಾಱುಗುಂಡೆ' ನೋ.

**ತಾಱುಗುಂಡೆ**, ತಾಱುಕುಂಡೆ (ನಾ). ಒಣಗಿದ ಕುಂಡೆ : ದುರುಳಕಾಲನ ಬಾಯನೊಡೆದಾಕರಿಸಿ ತಾಟಿಸಿ ಅವಧಿ ವಿಧಿಗಳ ತಾಱು[ಪಾಠಾಂ. ಱ] ಗುಂಡೆಗಳ [ಪಾಠಾಂ. ಕುಂಡೆಗಳನುಱಿದೆ] (ಬಸವಪು. ೪೭-೧). **ತಾಱುಕುಂಡೆ**: ತ್ರೈವಿದ್ಯರಂ ತಂದು ತಾಱುಕುಂಡೆಯ [ಪಾಠಾಂ. ಚಾಟುಗುಂಡಿಯನ] ಹಾಯಿಸಿ (ಸೋಮೇಶ. ೬-೪೩). [ ತಾಱು₃ + ಕುಂಡೆ₁ ]

**ತಾಱುತಟ್ಟು** 'ತಾಱುಂತಟ್ಟು' ನೋ.

**ತಾಱುತಟ್ಟುಂ** 'ತಾಱುಂತಟ್ಟುಂ' ನೋ.

**ತಾಱುಥಟ್ಟು** 'ತಾಱುಂತಟ್ಟು' ನೋ.

**ತಾಱುಮಾಱು**, ತಾರುಮಾರು₁, ತಾಱುವಱು, ತಾಱುವಾಱು (ನಾ). ೧. ಚಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ವಾರುವಗಳು . . . ಕೇರಿ ಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಱುಮಾಱಾಗಿಯೋಡಿದವು (ಕಂನವಿ. ೦೩-೯೦). **ತಾರುಮಾರು₁** : ೧. ತಾರುಮಾರಾಗಿ ತೂರುಬೀಳುತಿರುವ ರಾಕ್ಷಸ ಸ್ತ್ರೀ ಪುರುಷರಂ ನೋಡಿ (ಸೌಗಂಧಿ. ೨೯೦-೦೯) ; ಮರಾಟೆಯವರಿಗೆ ದಿಕ್ಕು ತೋಚದಂತಾಗಿ ತಾರುಮಾರಾಗಿ ಪಲಾಯನ ಮಾಡಿದರು (ಒಡೆಳ. ೪೮) ; ಈಗ ಎಲ್ಲವೂ ತಾರುಮಾರಾಯಿತು (ಭಾರವೀ. ೬೩): ಕಲ್ಪವೃಕ್ಷಗಳ ಚಿಗುರು ಎಲೆಯ ತೂರಾಡು ತಾರುಮಾರು(ಕವೀಪೆ. ೦೬-೬೩). ೨. ಅಸಂಬದ್ಧತೆ ; ಅಸಾಂಗತ್ಯ : ಊರು ಹೆಸರು ಮುಂತಾದ್ದನ್ನು ವ್ಯತ್ಯಸ್ತವಾಡಿ ತಾರುಮಾರಾಗಿ ಬರೆದರು (ಪುರಾವಿ. ೭). ೩. ಗಜಿಬಿಜಿ ; ಗೊಂದಲ: ತಾರುಮಾರು ಮಾಡುವವನನ್ನು ಯಾರು ತಾನೇ ನಂಬ್ಯಾರು? (ಗಾದೆ). **ತಾಱುವಱು** : ೧. "ತಾಱುವಱಾದುದಸವಸಂ" (ವಸ್ತುಕೋ. ೦೦೬-೩೩); ತಾಱುವಱಾಗೆ ಜಯಂ ಜೊಮ್ಮೇಱುವ ಚೆಂಟಣಸುವರಸನರಸನ ವಿರಸಂ(ಶಾಂತಿಪು. ೨-೧೦); ಭೀಕರ ಗದಾಘಾತದೊಳಂ ಜಾಱಿ ಪಱಿವಱಿದು ತಾಱುವಱಾದ [ಪಾಠಾಂ. ತೂಱುಪಾಱಾದ] ಕಾಂಭೋಜಾವಳಿಗಳ ತುರುಷ್ಕ ತುರಂಗಮಂಗಳಡಿಯೊಳ್ (ಗದಾಯು. ೬-೨೮ ವ) ; ತಾಱು[ಪಾಠಾಂ. ತಾಱು]ವಱಾದ ಕೇಶಮನುಗುರ್ವೊನೆಯಿಂ ತೆಗೆದೊತ್ತಿ (ಲೀಲಾವ. ೩-೦೩೬) : ತಾಱುವಱಾದ ಸೂಸುಗುರುಳಂ ತವೆ ತಿರ್ದುವ . . . ತೊಂಡೆವಾಯ್ಗೆ ನಱುದಂಬುಲಮಂ ಕುಡುಕಿಕ್ಕುವಂದವಂ ತೋಱಿ (ಧರ್ಮನಾ. ೩-೧೩೨). **ತಾಱುವಾಱು**: ೩. ಜೀವನುವೆಂಬತ್ತುನಾಲ್ಕುಲಕ್ಷ ಯೋನಿಮುಖದೊಳಗೊಂದಾ ಮನುಷ್ಯನದಱಿೞಿಂತಾನುತಾಱುವಾಱಾಗಿ ಬಂದಲ್ಲಿ (ಜೀವಸಂ. ೯-೯ ವ).

[ ದೇ.॥ ತಮಿ. ಮಲ. ತಾಱುಮಾಱು ; ತುಳು. ತಾರುಮಾರು ; ತೆಲು. ತಾಱುಮಾಱು ]

**ತಾಱುವಾರಿ** (ನಾ). ಒಂದು ಬಗೆಯ ಭೂಮಿ (?): ಅಕ್ಕಿ ಸಹ ಹನ್ನೆರಡು ಮುಡಿ ತಾಱುವಾರಿಯ ಬಗೆಯ ಬೆಟ್ಟನ ಒಳಗೆ ಆಱುಮುಡಿ (ಸೌಇಇ. IX-II, ೪೬೪-೨೦ ; 1472). 'ತಾಱು₄' ಪರಾ. [ ? ]

**ತಾಱುವಾಱು** 'ತಾಱುಮಾಱು' ನೋ.

**ತಾಱುಹಂಗ** (ನಾ). ಶಕುನದ ಪಕ್ಷಿ ; ಹಂಗ : ಕರಿಯ ಹಕ್ಕಿಯ ತಾಱುಹಂಗನ ವಾಮದುಡಿಕೆಗಳ ನರಿಗಳೊದಱಿದವಿದಿರಿನಲಿ (ಕುವ್ಯಾಸ. ೦೩-೨). [ ತಾಱು₄ (<ತಾಱ್₂)+ಹಂಗ ]

**ತಾಱಿ₁** 'ತಾಱ್' ನೋ.

**ತಾಱಿ₂** (ನಾ). (?) : ಕಮ್ಮಳೆಯ ತಾಱಿಯಗೊಡಲ ಮೂಡನ ಮಯ್ಯ ಕಂಬ ನೂಱುಱುವತ್ತು (ಎಕ. VI, ಚಿಕ್ಕಮ. ೨೨-೪೩ ; 1178). [ ? ]

**ತಾಱಿಕಾಯಿ** 'ತಾಱುಗಾಯ್' ನೋ.

**ತಾಱಿಲೆ** (ನಾ). ಒಣಗಿದ ಎಲೆ ; ತರಗೆಲೆ : ಪಾದಪದಲಕ್ಷ್ಮಿ ಬಿದಱಿ ಸೂಱಿಗೊಟ್ಟಂದದೆ ಪರಳ್ಗಾಯಿ ಮುಂತಾದ ತಾಱಿಲೆ ನೆಲಕುದುಱಿದುವು (ಮೋಹತ. ೪-೪೩). [ ತಾಱು₁ + ಎಲೆ₁ ]

△ **ತಾಟ್₁** 'ತಾಳ್₂' ನೋ.

△ **ತಾಟ್₂** 'ತಾಳ್₃' ನೋ.

△ **ತಾಟ** 'ತಾಳ್₃' ನೋ.

**ತಾಟಕೆಱಿ** (ನಾ). ಒಂದು ಕೆರೆಯ ಹೆಸರು : ಆ ಕೆಱಗೆ ಐಯ್ಯಗ್ಣ್ಣಾಗ ಮಣ್ಣು ಕೊಟ್ಟಯ ತಾಟಕೆಱಿ ಆ ಕೆಱಗೆ ಐಯ್ಯಗ್ಣ್ಣಾಗ ಮಣ್ಣು (ಎಕ. XII, ಶಿರಾ. ೨೪-೪೮ ; ೨೦೦). [ ತಾಟ ? + ಕೆಱಿ ]

△ **ತಾಟಪಣ್** 'ತಾಳೆಹಣ್ಣು' ನೋ.

△ **ತಾಟಮರ** 'ತಾಳೆಮರ' ನೋ.

**ತಾಟಲಿಯ** (ನಾ). ಒಬ್ಬಾತನ ಹೆಸರು : ವಾರಬದಿಗದಾಲನುಂ ತೆಳ್ಳನುಂ ತಾಟಲಿಯನುಂ ವೇಟಲನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ.III ನಂಜನ. ೦೩೯-೬ ; 915 ?). [ ? ]

△ **ತಾಟವಣ್** 'ತಾಳೆಹಣ್ಣು' ನೋ.

**ತಾಟಿವಡುಗುಡ್ಡಿ** (ನಾ). ಒಬ್ಬಾತನ ಹೆಸರು : ಆತ್ರೇಯಗೋತ್ರ ವೊಡೆಯ ತಾಟಿವಡುಗುಡ್ಡಿಗಳ ಮಗಂ ಪುಳ್ಳಿಯಯ್ಯ ಮಾಡಿಸಿದ ತೂಮ್ಬು (ಎಕ. X(೩), ಮುಳಬಾಗಲು. ೦೬೧-೩ ; ಸು. 10ನೆಯ ಶತ). [ ? ]

△ **ತಾಟು** 'ತಾಳ್₂' ನೋ.

**ತಾಟುಗಿ** (ನಾ). (?) : ಬೇರುಗಿ, ಬೇರುಗಿತಿ ; ತಾಟುಗಿ, ತಾಟುಗಿತಿ (ಶಬ್ದಾನು. ೦೯೩ ಪ್ರಯೋ). [ ತಾಟುಗ₀ + -ಇ₂ ]

**ತಾಟುಗಿತಿ** (ನಾ). (?) : ಬೇರುಗಿ, ಬೇರುಗಿತಿ; ತಾಟುಗಿ, ತಾಟುಗಿತಿ (ಶಬ್ದಾನು ೦೯೩ ಪ್ರಯೋ). [ ತಾಟುಗ₀ + -ಇತಿ₁ (< -ಇತ್ತಿ) ]

**ತಾಟಿ³**, ತಾಳಿ₁ (ನಾ). ಕೇದಗೆ ; ತಾಳೆಗಿಡ : (೩). **ತಾಳಿ₁** : "ಖರಃ - ತಾಳಿ" (ಓಷಧಿ. ೪೩) ; ಬಿದೆಕಾರು ಮೂಱ ಇ ತಿಳ ೨ ತಾಳೆ ಆ ಮರ ಬಿದೆಕಾರು (ಸೌಇಎ. ೦೯೩೦, ಮಂಗಳೂರು. ೩೩೮-೮ ; 1228) ; ತಾಳಿಯ ಹೂವಿನ ಸಳೊಯನೆ ಸುಲಿದಿಂಪುವಾಳೆಯ ಹಣ್ಣನಾ ರಾಯಾ ಲಾಲಿತ ಪ್ರತಿಮೆಯ ಭುಜ ಮುಟ್ಟಿ ಮೆದೆಗಟ್ಟಿ ಧಾಳಿಪಂತಭಿಷೇಕಗೈದಾ (ಭರತ. ೦೬-೬೪).

[ ದೇ.॥ ತಮಿ. ತಾಟ್ಟಿ ]

**ತಾಟಿಹೂ**, ತಾಳೆಹೂ (ನಾ). ಕೇದಗೆ ಹೂ: (೬). **ತಾಳೆಹೂ:** "ಕೇತಕಿ–ತಾಳೆಹೂ" (ಓಷಧಿ. ೪೦) ; ಕೇತಕೀಪುಷ್ಪ ಅಂದರೆ ತಾಳೆಹೂವನ್ನು ಧರಿಸಿದಲ್ಲಿ (ಸಕವೈ. ೪೪) ; ತಾಳೆಹೂ ಗರುವಲಿಯ ಬೆನ್ನಟ್ಟಿ ಚುಚ್ಚುವುದು (ಕಾಲೂರ. ೧೦೩-೨೩೪) ; ತುರುಬು ಇಲ್ಲದವಳಿಗೆ ತಾಳೆ ಹೂವೇ ? (ಗಾದೆ).

[ ತಾಟಿ + ಹೂ₂ (<ಪೂ₂) ]

**ತಾಟಿಜಿಯ** (ನಾ). ಒಬ್ಬಾತನ ಹೆಸರು : ವಿಕ್ರಮಾದಿತ್ಯಕೊಂಗ್ಗೊಲ್ಲೊದು [ಪ]ನ್ನೆಸೆಲುಸ್ತಾರು ತಾಟಿಜಿಯುರ್ಗೆ ಎರೆಕಾಡು ಇಪ್ಪತ್ತೈಮತ್ತರು (ಸೌಇಇ. IX-I, ೪೭-೭ ; ಸು. ೯ನೆಯ ಶತ). [ ? ]

**ತಾಟ್ಟುವಾಯ** (ನಾ). ಒಬ್ಬಾತನ ಹೆಸರು : ಬೆಳ್ಗಲ್ಗೊಲುಡು ಪಶ್ಚಿಮಾಯನ್ನಿಶಿ ಪೊನ್ನೆವಿ ತಾಟ್ಟುವಾಯುರಾ ಕಲ್ (ಎಕ. IV, ನಾಗಮಂ. ೮೩-೩೩; 776). [ ? ]

**ತಾಟ್ನಿಲ್ಲ** (ನಾ). ಒಂದು ವಂಶದ ಹೆಸರು (?): ಪೊದಲ್ನಾಡಬುವತ್ತುವ ನಾಳೆ ತಾಟ್ನಿಲ್ಲರ x x x ಕಾಮನ್ನೆಯರಾ ಶ್ರೀ ಕಣ್ಣಯ್ಯ ತುಬುಗೊಣ್ಡಲ್ಲಿ . . . ಸತ್ತ (ಎಕ. X, ಶ್ರೀನಿವಾ. ೫೦-೭ ; 800 ?). [ ? ]

△ **ತಾಟ್ಟುರ** 'ತಾಳೆವ ರ' ನೋ.

.ತ್ರಿ' ನೋ.

**ತಿ₂** (ನಾ). ಮೂರು ಎಂಬ ಸಂಖ್ಯೆ: "ತಿ–ತ್ರಿ=ಮೂರು" (ತದ್ಭಕೋ. ೧೭): ತಿಗೆ–ತ್ರಿಗುಣಂ–ತಿಗುಣಂ, ತ್ರಿಶರಂ–ತಿಸರಂ, ತ್ರಿಶೂಲಂ–ತಿಸುಳಂ (ಶಮದ. ೨೯೦ ಪ್ರಯೋ). [ <ಸಂ. ತ್ರಿ ]

**ತಿಂಕಚಿರ** (ನಾ). ಒಂದು ಮನೆತನದ ಹೆಸರು (?): ತಟಂಕಮಿದು ತಿಙ್ಕಚಿರ ನೆಟಿದಕಳತಿಯಾ ಅಕಳಿ ಸಮುದೊಯ ತಟಾಕ (ಎಕ. XVI, ಪಾವುಗ. ೦೨-೩ : 754). [ ? ]

**ತಿಂಗಣಿ**, ತಿಂಗಿಣಿ (ನಾ). ತೊಟ್ಟಿಲ ಮೇಲಿನ ಅಥವಾ ಹಂದರ ಮೊದಲಾದುವುಗಳ ವಿತಾನದಲ್ಲಿ ಇಳಿಬಿಡುವ ಒಂದು ಅಲಂಕಾರದ ಗೊಂಡೆ,–ಕುಚ್ಚು : ಇಂಗಡಲೆಂಬ ಸೆಜ್ಜೆವನೆಯೊಳ್ ತೆರೆದೊಟ್ಟಿಲ ಮೇಲೆ ಕೆಂಬರಲ್ದಿಂಗಣಿಗಟ್ಟಿದಂತುದಯಶೈಲಶಿಖಿಂಡದೊಳಿಂದುಮಂಡಲಂ (ಮಲ್ಲಿಪು. ೭-೨೯); ಮಾಣಿಕದ ತಿಂಗಣಿಯಂ ಮಾಣದೆ ಕಣ್ಣೆಳಗು ಬಳಸೆ ಮುತ್ತಿನ ಸುತ್ತಂ ಮಾಣಿಕದ ಮೇಲೆ ಮಕ್ಕಳ ಮಾಣಿಕಮಡಿಗಡಿಗೆ ತೊಟ್ಟಿಲೋಳ್ ಪುಟ್ಟಿಸುಗುಂ (ಅನಂಪು. ೭-೪); ಶಿಲ್ಪಿಗಳ ಕಲ್ಪವತಿಯು ಅಭಿಷೇಕಮಂಡಪವನ್ನು ಸಮೆದಿದ್ದನೆಂದಮೇಲೆ ಕೇಳುವದೇನು ? ಮುತ್ತಿನ ಸೂಸಕ, ಮರಕತದ ತಿಂಗಣಿ . . . ರನ್ನದ ರಂಗವಲ್ಲಿ ! (ಶಾಹಿಸಂ. ೩೭). **ತಿಂಗಿಣಿ :** ಕೋದ ಮುತ್ತಿನ ಸೂಸಕದೊಳಂ ಚೆಂಬೊನ್ನ ತಿಂಗಿಣಿಯೊಳಂ ಚೀನದ ದೇವಾಂಗದ ನೇತ್ರದ ಮೇಲ್ಕಟ್ಟನೊಳಂ . . . ವಿಚಿತ್ರಾಂಶುಕ ವಿವಿಧ ಧ್ವಜಂಗಳೊಳಂ ಬಹು ವಿಧ ನೂತ್ನ ರತ್ನ ತೋರಣಂಗಳೊಳಂ ನೆಟಿದು (ಪುಷ್ಪಪು. ೮-೫೦ ವ). [ ? ]

**ತಿಂಗಣಿಗೆ** (ನಾ). = ತಿಂಗಣಿ : ಅದಲ್ಲದೆಯುಮಪವರ್ಗಲಕ್ಷ್ಮಿಯ ಲಾಸ್ಯ ಪೂಜಾಕುಸುಮಂಗಳಂತೆ ಮಧ್ಯರಂಗದೊಳೆಸೆವ ಪೊಸಮುತ್ತಿನ ಸೂಸಕದ ಪೊನ್ನ ತಿಂಗಣಿಗೆಯು ನೆಟಲ ತುಟುಗಲಿಂ ವಿರಾಜಿಸುವ ಪೂಜಾಗೃಹದಿಂ (ಮಲ್ಲಿಪು. ೨-೭೪). [ <ತಿಂಗಣಿ ]

**ತಿಂಗಣಿಮಾರ** (ನಾ). ಒಬ್ಬಾತನ ಹೆಸರು : ಕಕ್ಕರ ಮದಲೂರೆಟಿದು ತೊಟುಗೊಣ್ಡೊಡ ತಿಙ್ಗಣಿಮಾರ ಶ್ರೀಮೇಟ್ ತಿಙ್ಗಣಿಯೂರುಳ್ಳಗಿ . . . ಪಲರನೆಟಿದು ಸಗಮೇಟಿದನ್ (ಎಕ. X, ಶಿಡ್ಲಘ. ೩೨-೪ ; ಸು. 870 ?). [?]

**ತಿಂಗಣಿಯೂರ್** (ನಾ). ಒಂದು ಊರಿನ ಹೆಸರು: ಕಕ್ಕರ ಮದಲೂರೆಟಿದು ತೊಟುಗೊಣ್ಡೊಡ ತಿಙ್ಗಣಿಮಾರ ಶ್ರೀಮೇಟ್ ತಿಙ್ಗಣಿಯೂರುಳ್ಳಗಿ . . . ಪಲರನೆಟಿದು ಸಗಮೇಟಿದನ್ (ಎಕ. X, ಶಿಡ್ಲಘ. ೩೨-೪ ; ಸು. 870 ?).

[ ತಿಂಗಣಿ₀ + ಊರ್ ]

**ತಿಂಗಳ್**, ತಿಂಗಳು (ನಾ). ೧. ಚಂದ್ರ ; ಪೆರೆ : "ಜೊನ್ನೊಡಲಂ . . . ಕಟ್ಟಲೆವಣೆ, ತಿಂಗಳ್–ಈ ೨೦ ಚಂದ್ರನ ಪೆಸರ್" (ಕಶಸಾ. ೩-೨೩) ; "ಮೃಗಾಂಕನೊಳ್ ತಿಂಗಳ್" (ಕರ್ಣನಿ. ೨೦) ; ನಗೆಯೆಂಬ ನೆವದ ಬೆಳಗೀ ಮೊಗಮೆಂಬೀ ನೆವದ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತಮ್ಮಾಕ್ಷಜಂ (ಕವಿರಾ. ೩-೨೩); ತಿಂಗಳ ತಣ್ಣದಿರ್ಗಳೊಳ[ಮಿರ್ಪಟಿಯದ] ಸಿರಿಕಂಡದಣ್ಪನೊಳವಡೆವಿಡ ದಾಲಿನೀರ್ವನಿಗಳಂ ಸಿಂಪಿಸುವ ನೀಜೊರಂಪಂಗಳೊಳಂ (ಕಾದಂಬ. ೫೯೮); ತಿಂಗಳ ಬಿಂಬಮಂ ಹಿಳಿದು ಪಿಂಡೆ ಪಳಚ್ಚನೆ ಸೋರ್ವ ಸೋನೆಯಂತೆ . . . ಏಂ ಸೀಯನುಣ್ಮೆದುದೊ ಗೇಯದ ಮೆಲ್ಲುಲಿ (ವಿರೂಪಾ. ೭೫) ; ಎಳೆವಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳ್ಗಾದ ರೂಪೊ (ಭರತ. ೨-೭೭) ; ಅಂಗಜನ ಕಣೆಗಳಂ ಬೀಟ್ ನೋಟಂ ಮೊಗಂ ತಿಂಗಳಂ ವಿಡಾಟ್ (ಶಬಪು. ೫-೦೦). ೨. ಚಂದ್ರನ ಬೆಳಕು ; ಇಂದು ಕಾಂತಿ : ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚಿವೆ ಗಡಂ ಕೊಂಡುಗ್ಗಿಯುಂ ಸುಗ್ಗಿಯೊಳ್ (ಆಡಿಪು. ೬-೨೮) ; ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಕಾ.೧೭); ತಿಂಗಳ ಸೊಂಪು ಪುಷ್ಪಬಾಣದ ಪೊದೆ ರಾಗದಾಗರವಮನಂಗನ ಕೈಪಿಡಿ ನಲ್ಲಳೊಲ್ಮೆಯೆನ್ನದ ಪೆಡತೆಂಬುದೇ ಮಧುರ ಮಾಧವ ನಿನ್ನಯ ವಾಗ್ವಿಳಾಸಮಂ (ಧರ್ಮನಾ. ೧-೭೧) ; ಲವಲಿಯ ತನಿವಣ್ಣಗೆಣೆಯೆನೆ ತೋರ್ಪುದು ತಾನಿಂದು ತಿಂಗಳಾಭರಣ ವನದ ಚಕೋರದ ಸವಿದುತ್ತಿ ದಾವುದು ಹರಿಣವಿಲ್ಲದ ಶೀತಕಿರಣ (ಇಂಜಾಪ. ೧೭೯-೩೧). ೩. ಚಂದ್ರನು ಭೂಮಿಂಗೆ ಒಂದು ಸುತ್ತು ಬರುವ ಕಾಲದ ಅವಧಿ; ಸಾಮಾನ್ಯವಾಗಿ ಮೂವತ್ತು ದಿನಗಳು : ಉಗ್ರಸೇನ ಗುರುವಡಿಗಳ್ ಒನ್ದು ತಿಙ್ಗಳ್ ಸನ್ನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೫-೨ ; ಸು. 700) ; ಇಂತು ವರ್ಷಾಕಾಲದ ನಾಲ್ಕು ತಿಂಗಳೊಳಂ ಮರ್ದನಾಡಿ (ವಡ್ಡಾರಾ. ೧೭೦-೨೭); ಅವಧಿಯನೊಂದು ತಿಂಗಳೆಡೆಯಿಟ್ಟು (ಆದಿಪು. ೧೨-೪೩); ಒಂದು ತಿಂಗಳ್‌ವಿಹರಣ ವಿಧಿಯಂ ಮಾಣ್ದು ಬಂದಜಿತನಾಥಂ ಧ್ಯಾನವಿಧಾನದಿಂ ಕರ್ಮಂಗಳಂ ಕಿಡಿಸಿದಂ (ಅಜಿಪು. ೮-೨೮ ವ) ; ಮತ್ತಮೊಂದೆರಡು ತಿಂಗಳ್ ವಿಶೇಷಮಾಗಿ ನೋಂತು ಕೊಟ್ಟಪೆಂ (ಧರ್ಮಾಮೃ. ೦-೦೮೨) ; ತಿಂಗಳೇಳಟ ಗರ್ಭದಲಿ ರಘುವುಂಗವನನಗಲಿದಳು (ತೊರರಾ. ೮೩-೮). **ತಿಂಗಳು :** ೧. ತಿಂಗಳ ಸೂಡಿದ ಅಭವನು ಭವಭಂಗಿತರಿಗಾರಿಗೂ ಗೋಚರಿಸನು ನೋಡಾ (ಸಿದ್ಧೇವ. ೧೨೨-೩೭೭) ; ತಿಂಗಳುವೊಡನುರ್ಕುವ ಬೆಳ್ದಿಂಗಳುಂ (ಚಕವಿ. ೭-೨೫) ; ತೊಳೆದ ಬಾನೊಳಗೆ ಒಂಟಿಮೋಡದ ನೆರಗೆ ನುಸುಳಿದ ತಿಂಗಳು (ಇಂಗೀತ. ೦೨-೯) ; ಮುಳುಗುವ ನೇಸರೊ ಮೂಡುವ ತಿಂಗಳೊ (ಅನಿಕೇ. ೩೦-೦೩). ೨. ತಿಂಗಳಿಗೆ ತಂಪಿಹುದೆ ಸಾಗರಕೆ ನೆಂಪಿಹುದೆ (ಗೀವಿಂ. ೨೨-೩೪). 'ಬೆಳುದಿಂಗಳು' ಪರಾ. ೩. ಕೇತು ವಿಲಗ್ನದೊಳಿರೆ ಪುಟ್ಟಿದ ಮನುಜ ನೊಂದು ತಿಂಗಳು ಬಾಟ್ಗುಂ (ಜಾತತಿ. ೭-೧೦) ; ಒಂದು ತಿಂಗಳು ಪಲವು ಮನ್ನಣೆಯಿಂದ ಮನ್ನಿಸಿ ತನ್ನ ಸೇನಾವ್ಯಂದವನು (ಕುವ್ಯಾಸ. ೩-೨೩) ; ನರಪತಿವೊಂದು ತಿಂಗಳು ವನದೊಳಗೆ ವಿಹರಿಸಿ (ಜೀವಂಸಾಂ. ೦೮-೬೨) ; ಮೇರ ತಿಂಗಳು ನಾಲ್ಕಟಿಣಿಕೆಯ ಕಾಲ ಸವೆದುದು (ತೊರರಾ. ೪-೭-೫) ; ನಿದ್ದೆಯ ಕಾಣದೆ ತಿಂಗಳಾರಾಗಿತ್ತು (ಇಂಜಾಪ. ೪೫-೦೩).

**ತಿಂಗತಿಂಗಳು**, ತಿಂಗಳ್ತಿಂಗಳು, ತಿಂಗಳ್ದಿಂಗಳ್ (ದ್ವಿರುಕ್ತಿ) : ಅವುಗಳಿಗೆ (ತೆಂಗು) ತಿಂಗತಿಂಗಳಿಗೆ ಹೊಸ ಹೂವು ಬಿಟ್ಟು ಇಪ್ಪತ್ತು ಇಪ್ಪತ್ತೈದು ಕಾಯಿ ಆಗುತ್ತವೆ (ಮುಂಬಯಿ. ೨-೫೦) ; ಧಾರಾಪೂರ್ವಕಂ ಮಾಡಿ ಗುಡಿಕಲ್ಲ ೨೪ಟ ಸ್ಥಳದ ಹೆಜ್ಜುಂಕದಲ್ಲಿ ತಿಂಗಳ್‌ತಿಂಗಳಿಗೆ ಕೊಟ್ಟ ಗದ್ಯಾಣ ೧ (ಸೌಇಇ. IX-I. ೨೭೯-೨೦ ; 1166) ; ಮುದ್ರಾವಣದ ಸುಂಕದೊಳಗೆ ತಿಂಗಳ್ದಿಂಗಳ್ಗೆ ಹತ್ತು ಹತ್ತು ದ್ರವ್ಯಮಂ ಬಿಟ್ಟಂ (ಎಇ. XXVIII, ೫-೫೬ ;

1082). ತಿಂಗಳಂ ಸೂಡಿದವ = ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ ; ಶಿವ : ತಿಂಗಳಂ ಸೂಡಿದವನ ಸರ್ವೋತ್ತುಂಗವಾಹನ ವಿಶ್ವೇಶ್ವರನ ಗಣಪುಂಗವರ್ಗೇಱುವ ಮಹಾಸಿಂಹಾಸನಂ ಬಸವ (ಬಸಪು. ೧-೩೨). ತಿಂಗಳ ಜೂಟ = ತಿಂಗಳಂ ಸೂಡಿದವ : ತಿಂಗಳ ಜೂಟಗೆ ಸುರಸತಿಯರು ತಂದ ಮಂಗಳಜಲಕುಂಭದಂತೆ (ಮೋಹತ. ३೪-೩೦). ತಿಂಗಳಣುಗ = ಚಂದ್ರನ ಮಗ ; ಬುಧ : "ತಿಂಗಳಣುಗನೆನೆ ಬುಧನನಿಕ್ಕು" (ಶಕರ. ೪೬). ತಿಂಗಳ ಧರ = ತಿಂಗಳಂ ಸೂಡಿದವ : ತಿಂಗಳಧರನ ಪೂಜಿಸು ಮನವೆ (ಸಿದ್ಧವ. ೪. ೯೮-೩೨೮); ತಿಂಗಳಧರ ಧವಳಾಂಗ ಗಂಗಾಧರ (ಸೌಂದರ್ಯ.೧-೧೦). ತಿಂಗಳ ಪಕ್ಷ= ತಿಂಗಳಲ್ಲಿಯ ಹದಿನೈದು ದಿವಸ: ತಿಂಗಳ ಪಕ್ಷಗಳನ್ನು ಹೇಳದೆ ವರ್ಷಋತು ಎಂಟನೆಯ ಪಕ್ಷ ಎಂದು ಮೊದಲಾಗಿ ಋತುಪಕ್ಷಗಳನ್ನು ಹೇಳಿದ (ಕರ್ಣಾಟ. ೮). ತಿಂಗಳ ಬೆಳಕು, ತಿಂಗಳ ಬೆಳಗು = ಚಂದ್ರನ ಬೆಳಕು; ಬೆಳುದಿಂಗಳು : ಶರಣನೆಂದು ವಚನಂಗಳ ಹಾಡಿದರೆ ತಿಂಗಳ ಬೆಳಕಿನ ಸಿರಿಯಂ ಕಂಡು ನಾಯಿ ಹರುಷಂಗೊಂಡು ಬಳ್ಳಿಟ್ಟು ಬೊಗುಳಿದಂತಾಯಿತು (ಖಸವ. ೩೬) ; ತಳತಳಿಸಿ ಬೆಳಪ ತಿಂಗಳಬೆಳಗಂ ಕವರ್ವಂತೆ ಮೆಱೆವ ಮೆಯ್ಸೊಗಿಂ (ಕಬ್ಬಿಗ. ೬೩) ; ತಿಂಗಳ ಬೆಳಗಿನ ದಾರೆಯ ಸಂಗಡಮನೆ ಮೆಱೆಯುತಿರ್ಪ ಗಂಜಯನಾಗಳ್ ತೆಂಗಿನ ತಿಳಿವಟ್ಟಲೊಳಾತಂಗೆಱೆದರ್ (ದಶಕು. ೦೨-೦೨೫). ತಿಂಗಳ ಮಾವ = ಚಂದ್ರನಿಗೆ ಅಕ್ಕರೆಯಿಂದ ಸಂಬೋಧಿಸುವ ಹೆಸರು : ಅಂಗನೆ ರೂಪಿಂದ ತಿಂಗಳಮಾವನ ತಂಗಿ (ಅಂಜಿಹ. ೪-೯) : ತಿಂಗಳಮಾವನು ಬಾನಿನಂಗಳದೊಳು ಮೂಡಿ ಬಂದಿರುವನು ಹೇಗೆ (ಚಂದ್ರವೀ. ೧೬೬-೬೦). 'ಚಂದಮಾಮ' ಪರಿ. ತಿಂಗಳ ಲೇಖೆ = ಚಂದ್ರನ ಕಲೆ : ತಿಂಗಳ ಲೇಖೆಯಂ ಬಿಡದೆ ಗೂಡಿದವಂಗೆ ಮಹೇಶ್ವರಂಗೆ . . . ಸುಧೂಪವಮಂ ಮಿಗೆ ಸಮರ್ಪಿಸಿದಂ (ಉದ್ಭಟ. ೧೧-೮೫). ತಿಂಗಳುಗಟ್ಟಳೆ, ತಿಂಗಳುಗಟ್ಟಲೆ, ತಿಂಗಳುಗಟ್ಲೆ = ೧. ಹಲವು ತಿಂಗಳುಗಳ ವರೆಗೆ : ತಿಂಗಳುಗಟ್ಟಳೆ ಉಪದೇಶ ಮಾಡಿದರೂ ಅವನು ಸಿಗರೇಟಿನ ಚಟವನ್ನು ಬಿಡಲಿಲ್ಲ (ರೂಢಿ) ; ತಿಂಗಳುಗಟ್ಟಲೆಯಾದರೂ ಮಲೇರಿಯಾ ಜ್ವರ ಗುಣವಾಗುವುದಿಲ್ಲ (ರೂಢಿ). ೨. ಪ್ರತಿ ತಿಂಗಳು : ಸಂಬಳದಲ್ಲಿ ಐವತ್ತು ರೂಪಾಯಿ ತಿಂಗಳುಗಟ್ಲೆ ಕೂಡಿಸಿ ಸಾಲಾ ಹರಿಸಬೇಕೆಂದು ಆಲೋಚನೆ ಮಾಡಿದ್ದೇನೆ (ಕಥಾಮಂ. IV, ೫). ತಿಂಗಳು ತುಂಬು = (ಗರ್ಭಿಣಿಗೆ) ನವಮಾಸ ತುಂಬು : ಆಕೆಗೆ ತಿಂಗಳು ತುಂಬಿದೆ (ರೂಢಿ). ತಿಂಗಳುವಾರು = ತಿಂಗಳುಗಳ ಮೇರೆಗೆ ; ತಿಂಗಳಿಗೆ ಇಂತಿಷ್ಟು ಎಂದು : ಆಯಾ ತರಗತಿಗಳಿಗೆ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೊಂಡು ವರ್ಷಾಂತ್ಯದಲ್ಲಿ ಪೂರೈಸಿದರೆ ಉಪಾಧ್ಯಾಯರ ಕೆಲಸ ಮುಗಿಯಿತು (ಶಿಕ್ಷದ. ೧೨೮). ತಿಂಗಳೊಪ್ಪತ್ತು = ಸುಮಾರು ಒಂದು ತಿಂಗಳು ; ಹೆಚ್ಚುಕಡಮೆ ಒಂದು ತಿಂಗಳು : ಮತ್ತೆ ತಿಂಗಳೊಪ್ಪತ್ತು ಕಳೆಯುವುದರೊಳಗಾಗಿ ಫಲಿತಾಂಶ ಹೊರಬಿತ್ತು (ಭೀಮಸಾ. ೦೮). [ ದೇ.೫ ತಮಿ. ಮಲ. ತಿಙ್ಙಳ್ ; ತುಳು. ತಿಂಗೊಳು; ಕೊಡ. ತಿಂಗ ; ಕುಇ. ತಿಂಗಳ್ ]

ತಿಂಗಳರೆ (ನಾ). ಚಂದ್ರನ ಅರ್ಧಭಾಗ ; ಅರ್ಧಚಂದ್ರ : ಹೊನ್ನ ಬಣ್ಣದ ಮೈವೆಳಗು . . . ಚಿನ್ನಮಾಣಿಕದುಟಿ ಬಗಸೆಗ[ಣ್] ತಿಂಗಳರೆ ನೊಸಲು (ಸಾಳ್ವಭಾ. ೪-೬). [ ತಿಂಗಳ್ + ಅರೆ₃ ]

ತಿಂಗಳವರೆ (ನಾ). ಬಿತ್ತಿದ ಒಂದು ತಿಂಗಳಿಗೆ ಕಾಯಿಬಿಡುವ ಒಂದು ಬಗೆಯ ಅವರೆ : ತಿಂಗಳವರೇ, ಕೋತಂಬರಿ, ಹಸೀಮೆಣಸಿನಕಾಯಿ ತಕ್ಕೊಂಡು ಬಾ (ರಕ್ತಾಕ್ಷಿ. ೨೦). [ ತಿಂಗಳು (<ತಿಂಗಳ್) + ಅವರೆ₁ ]

ತಿಂಗಳಿಗೆ (ನಾ). ಹಣೆಗೆ ಹಚ್ಚಿಕೊಳ್ಳುವ ಬೊಟ್ಟು; ತಿಲಕ : "ತಿಂಗಳಿಗೆ ಯೆಂದು ತಿಲಕಂ" (ಕಶಸಾ. ೬೩-೯೦೨); "ಜಾಳಿಯ ತಿಂ[ಪಾಠಾಂ. ದಿಂ]ಗಳಿಗೆ ಯೆನಲ್ ನೇರಬೊಟ್ಟಿಗೆ ಪೆಸರ್" (ಕಬ್ಬಿಗ. ३೬). [ ? ]

ತಿಂಗಳು 'ತಿಂಗಳ್' ನೋ.

ತಿಂಗಳುಬೆಳಕು (ನಾ). ಚಂದ್ರನ ಪ್ರಕಾಶ ; ಬೆಳುದಿಂಗಳು : ತಿಂಗಳು ಬೆಳಕಿನ ಇರುಳಿನಲಂದು ಅಮ್ಮನು ಕೆಲಸದೊಳಿರುತಿರೆ ಕಂಡು (ಕಪಪು. ೩-೧೦) ; ತಿಂಗಳುಬೆಳಕೆಂದರೆ, ಪ್ರಾತಃಕಾಲದ ಬ್ರಾಹ್ಮೀಮುಹೂರ್ತದಲ್ಲಿಯೂ ಭೂದೇವಿಗೆ ಕ್ಷೀರಾಭಿಷೇಕವನ್ನೆಸಗುವಂತಿತ್ತು (ನಾಡೋಜ.೩೮೪).
[ ತಿಂಗಳು (<ತಿಂಗಳ್) + ಬೆಳಕು₂ (<ಬೆಳಗು₂)]

ತಿಂಗಳೋಡು (ನಾ). (ಕರಾ)ಸೌರಮಾನ ತಿಂಗಳ ಮೊದಲನೆಯ ದಿನ : ಈವತ್ತು ತಿಂಗಳೋಡು, ಹಣ ಯಾರಿಗೂ ಕೊಡಬೇಡ (ರೂಢಿ).
[ ತಿಂಗಳು (<ತಿಂಗಳ್) + ಓಡು ?. / ತುಳು. ತಿಂಗೊಡೆ]

ತಿಂಗಳ್ಗಲ್ (ನಾ). ಚಂದ್ರಕಾಂತ ಶಿಲೆ : ಗಲ್ಲಲನೆ ಕರಗುವಾಲಿಯಕಲ್ಗಳ ಪೋಲ್ ಕರಗಿ ಪರಿವ ಜೊನ್ನದ ತಿಂಗಳ್ಗಲ್ಲಗೊಸರದನೆ ಕಳೆದೈಕಿಲ್ಗೊಳನೆನೆ ಕುಳಿರ್ದುದಾ ಜಳಂ ತಿಳಿಗೊಳದಾ (ಅರ್ಧನೇ. ೫-೦೦೯)
[ ತಿಂಗಳ್ + ಕಲ್₃ ]

ತಿಂಗಳ್ವಕ್ಕಿ (ನಾ). ಬೆಳುದಿಂಗಳನ್ನೇ ಆಹಾರವಾಗಿ ಉಪಯೋಗಿಸಿಕೊಳ್ಳುವುದೆಂದು ಭಾವಿಸಲಾದ ಒಂದು ಬಗೆಯ ಪಕ್ಷಿ; ಜೊನ್ನವಕ್ಕಿ; ಚಕೋರಪಕ್ಷಿ : ತಿಂಗಳ್ವಕ್ಕಿ, ತೇನೆ, ತನ್ನೆಣೆವಕ್ಕಿಯಂ ಕರೆದು ಕೂಗುತ್ತೆ (ಶ್ರೀರಾಮಾ. ३೬೧-೯೦೦). [ ತಿಂಗಳ್ + ಪಕ್ಕಿ₁ ]

ತಿಂಗಿಣಿ 'ತಿಂಗಣಿ' ನೋ.

ತಿಂಗುಳ್ (ನಾ). ೧. ಆಹಾರಕ್ಕಾಗಿ ಸಾಕಿರುವ ಕಂಗಿ. ೨. ತಿನಿಸು ; ಆಹಾರ : "ಅವಿಷಂ – ಆಹಾರಂ (ತಿಂಗುಳ್)" (ನೀತಿವಾ. ३೮-೫೫) ; ತನುವಂ ನಂಬಿರ್ದು ಕೆಟ್ಟಂ ಜವಂಗೆನ್ನಂ ತಿಂಗುಳ್ ಮಾಡದೀಗಳೆ ಜಿನಶ್ರೀದೀಕ್ಷೆಯಂ ತಾಳ್ದುವೆಂ (ಧರ್ಮಾಮೃ. ೦೦-೨೮೬) ; ಸವಿಗಂಡರಸಿ ಬಾಣಸಿನ ಮನೆಯೊಳ್ ಕಟ್ಟಿದ ಪೋಂತಂ ತಿಂಗುಳ್ವಮಾಡಿದಳದಂ (ಯಶೋಚ. ೩-೬೮). [ ತಿನ್ + ಕುಳ್₃ ]

ತಿಂಗುಳ್‌ದಿನ್ (ಕ್ರಿ). ಆಹಾರವನ್ನು ತಿನ್ನು,-ಉಣ್ಣು : ದೂಱಲಱಿಯನು ಸುಭಟರಿಗೆ ಮನ ಬೇಱೆ ನುಡಿ ಬೇಱಾಯ್ತು ಸಮರದೊಳೇಱ ತಿಂಗುಳ್‌ದಿಂದು ದಣಿದುದು ನಮ್ಮ ಬಲವೆಂದ (ಕುಮಾರಭಿ. ೬-೮).
[ ತಿಂಗುಳ್ + ತಿನ್ ]

ತಿಂಟೆ 'ತಿಟ್ಟು₃' ನೋ.

ತಿಂಡಿ (ನಾ). ೧. ತಿನಿಸು ; ಆಹಾರ ; ಖಾದ್ಯ : ತೆಮ್ಮಲಿನ ತಿಂಡಿಗಳ್ ಹಸುರೆಲೆಯ ತಟ್ಟೆ (ಕಾಲೂರ. ೬೩-೦೦೬) ; ತಿವಾರಿ ತಿಂಡಿಯನ್ನು ಅಣಿ ಮಾಡುವ ಕೆಲಸದಲ್ಲಿ ತೊಡಗಿದ (ಧಾರಿಣಿ. ೬) ; ಹಸುಬೆಯಲ್ಲಿದ್ದ ತಿಂಡಿಯ ಗಂಟು ದಾರಿಯುದ್ದಕ್ಕೂ ಅವನಿಗೆ ಜ್ಞಾಪಕ ಬರುತ್ತಿತ್ತು (ಕಳಹು. ೪) ; ನಿಮಗೋಸುಗವಾಗಿಯೇ ತಿಂಡಿಗಳನ್ನು ತಯಾರಿಸಹೇಳಿದೆ (ಕಾಲಯಾ. ೧೧). ೨. (ಉಕ) ತುರಿಕೆ ; ನವೆ ; ತೀಟೆ : ಕ್ಯಾಪಿಟಲ್ಲು ಏನು ? ಟ್ಯಾಟವನ್ನು ಬಾಂಬು, ತಲೆ ತುಂಬ ತಿಂಡಿ, ಹೇನು! (ಸೂರ್ಯಪಾ. ೫೨-೨); ಸಹನೆ ಸಹಾನುಭೂತಿಗಳನ್ನು ಕಂಡರೆ ಮೈಯಲ್ಲ ಕೆರೆಯುವಷ್ಟು ತಿಂಡಿಯೇಳುತ್ತಿತ್ತು (ಕಾಲಚ.೫೦) : ಜನರು ತಮ್ಮ ನಾಲಗೆಯ ತಿಂಡಿಯನ್ನು ಹೀಗೇಕೆ ತೀರಿಸಿಕೊಳ್ಳಬೇಕೋ (ಮೂರುದಾ. ೧೩೦). ೩. (ಆಲಂ) ಸೊಕ್ಕು ; ಗರ್ವ : ನಿನಗೆ ತಿಂಡಿ ಜಾಸ್ತಿಯಾಗಿದೆ (ರೂಢಿ).

ತಿಂಡಿತಿನಿಸು = ಆಹಾರ; ಖಾದ್ಯ : ತಿನ್ನಲು ತಿಂಡಿತಿನಿಸು, ಕುಡಿಯಲು ಎಳನೀರು (ತೀಮೋದ. ೫೦). ತಿಂಡಿತೀರ್ಥ=ಆಹಾರ ಮತ್ತು ಪಾನೀಯ: ತಿಂಡಿತೀರ್ಥ ಆಟಪಾಟಾದಿಗಳಿಗೆ ಬೇಕಾದ ಸಮಸ್ತ ವಸ್ತುಗಳೂ ಅಲ್ಲಿ ಸಿದ್ಧವಾಗಿವೆ (ಜೀವಾತ್ಮ. ೨೦೨) ; ಸಂತೋಷದಿಂದಲೇ ಗೋದಮ್ಮ ತಿಂಡಿತೀರ್ಥ ಬೇಗನೆ ಒದಗಿಸಿಕೊಟ್ಟು ಜೋಯಿಸರಲ್ಲಿಗೆ ಕಳುಹಿಕೊಟ್ಟಳು (ತ್ಯಾಗವು. ೭). [ ದೇ.೫ ತಮಿ. ತಿನ್ಟಿ ; ಕೊಡ. ತೆಲು. ತಿಂಡಿ ]

**ತಿಂಡಿಪೋತ, ತಿಂಡಿಹೋತ** (ನಾ). ಆಹಾರವನ್ನು ಹೋತದಂತೆ ತಿನ್ನುವವನು; ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: ಕೆಲಸಕ್ಕೆ ಬಾರದ ತಿಂಡಿಪೋತ ಎನಿಸಿಕೊಂಡನು (ಶಿರ್ಯಕೀ. ೩೧); ಅಧ್ಯಾಪಕರು ನಮ್ಮನ್ನು ತಿಂಡಿಪೋತರು ಎನ್ನಬಹುದು (ಅಲಮ. ೦೦೪); ತಿಂಡಿಪೋತ ನಂಜೇಲಿಂಗ ಭಟ್ಟನ ಕಥೆಯನ್ನು ಹೇಳಿದೆ (ಇಬದು. ೮). **ತಿಂಡಿಹೋತ:** (೬).
[ ತಿಂಡಿ + ಪೋತ$_1$ (<ಪೋಂತು)./ತಮಿ. ತಿನ್ನಿಪೋತ್ತು$_1$; ತೆಲು. ತಿಂಡಿಪೋತು ]

**ತಿಂಡಿಪೋತತನ, ತಿಂಡಿಹೋತತನ** (ನಾ). ಅತಿಯಾಗಿ ತಿನ್ನುವ ಸ್ವಭಾವ; ಹೊಟ್ಟೆಬಾಕತನ: ಅವನ ತಿಂಡಿಪೋತತನವನ್ನು ನೋಡಿದರೆ ಜುಗುಪ್ಸೆಯಾಗುತ್ತದೆ (ರೂಢಿ). **ತಿಂಡಿಹೋತತನ:** (೬).
[ ತಿಂಡಿಪೋತ + – ತನ ]

**ತಿಂಡಿಬಾಕ** (ನಾ). = ತಿಂಡಿಪೋತ: (೬). [ ತಿಂಡಿ + – ಬಾಕ ]

**ತಿಂಡಿಶ** (ನಾ). ಒಂದು ಬಗೆಯ ಶಾಕ,–ಸಸ್ಯ: ಸವತೆ, ತಿಂಡಿಶ . . . ಇವು ಕಫವಾತಕರ (ಅಷ್ಟಾಂಗ. ೦೩೬). [ ? ]

**ತಿಂಡಿಹೋತ** 'ತಿಂಡಿಪೋತ' ನೋ.

**ತಿಂಡಿಹೋತತನ** 'ತಿಂಡಿಪೋತತನ' ನೋ.

**ತಿಂಡುಕ** (ನಾ). ಒಂದು ಬಗೆಯ ಗಿಡ; ತೂಬರೆ ಗಿಡ: ಕುಪರಥ, ಹಿಗೆ, ತುವುಕಿ, ತಿಂಡುಕ, ಹೊಳೆತುವ್ರಿ, ಬಂಧ (ವೃಜಿ೧. ೩೦–೬೦೩).
[ <ಸಂ. ತಿಂದುಕ ]

**ತಿಂಡೆ** 'ತಿಟ್ಟು$_3$' ನೋ.

**ತಿಂತಿ** 'ತೀಂಟೆ$_1$' ನೋ.

**ತಿಂತಿಡಿ** (ನಾ). ಹುಣಿಸೆಮರ. [ ಸಂ. ತಿಂತಿಡೀ ]

**ತಿಂತಿಡಿಕ** (ನಾ). = ತಿಂತಿಡಿ. [ ಸಂ. ತಿಂತಿಡಿಕಾ ]

**ತಿಂತಿಡೀಕ** (ನಾ). ೧. = ತಿಂತಿಡಿ. ೨. ಮುಖ್ಯವಾಗಿ ಹುಣಿಸೆಹಣ್ಣಿನಿಂದ ತಯಾರಿಸಿದ, ಹುಳಿಯಾದ ಗೊಜ್ಜು ಅಥವಾ ಸಾಂಬಾರು.
[ ಸಂ. ತಿಂತಿಡೀಕಾ ]

**ತಿಂತಿಣಿ$_1$, ತಿಂಥಿಣಿ** (ನಾ). ಗುಂಪು; ಗೊಂದಣಿ; ಸಮೂಹ: "ಬಂಬಲ್, ತುಱುಗಲ್, ಒಟ್ಟಜೆ, ತಿಂತಿಣಿ . . . ಗೊಂದಣಿ–ಈ ೪೦ ಸಮೂಹಂ" (ಶಶಸಾ. ೦೧–೨೨೨); "ಗೊಂದಣಿ ತೆರಳ್ಕೆ . . . ತಿಂತಿಣಿ . . . ತೊಂಬೆಯನೆ ಶ್ರೇಣಿಕಾಖ್ಯಂ" (ಅಭ್ಯಮಂ. ೫೫); ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ (ಶಂಶಥಾ. ೦೦–೩೦); ತಱಗೆಲೆ ಬಳ್ಳಿಯೆಂಬವಱ ತಿಂತಿಣಿಯೊಳ್ಸುರಗಾತಿವೇಗದಿಂದಱಿಯಲೆ ಬಂದುದಿಲ್ಲ ಪಥಮುಂ (ಕಾದಂಪೂ. ೬೨೬); ಗಣ ತಿಂತಿಣಿಯೊಳಗಿರಿಸೆನ್ನನು ಲಿಂಗವೇ (ಬಸವ. ೩೬೬); ಅಂತವರನೊತ್ತಿಟ್ಟ ಮನೆಯನೇವೊಗಳ್ವೆನದು ತಿಂತಿಣಿಯ ಸೂನೆಗಾಱರ ನಿಳಯ ರಕ್ಕಸಿಯ ಮಾಡ ಹಾವಿನ ಹೇಳಿಗೆ (ಹಹಶಾ. ೧೨–೨); ಛತ್ರಚಾಮರದ ತಿಂತಿಣಿ (ದಶಕು. ೮–೨); ಸಂಪಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ (ಕುವ್ಯಾದ್ರೌ. ೪–೪೩). **ತಿಂಥಿಣಿ:** ಪುಣ್ಯ ತಿಂಥಿಣಿಗಳನಂದಗುರ್ವುವರಸಾಡಿದುಪೊಂದೆರಡಾನೆಯಟ್ಟಿಗಳ್ (ಹಂಹಹಾ. ೬೦–೫೬); ಚೆನ್ನಮಲ್ಲಿಕಾರ್ಜುನ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ (ಮಹಾದೇ. ಬ. ೬೮–೦೬೪); ನರ್ತಕರ ವರ್ತಕರ ಮೊತ್ತ ದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬–೨೩); ಕಂತುಹರನವರೊಡನೆ ಹರಹರ ಮಂತಣದಿ ತಿಂಥಿಣಿಯೊಳತಿ ನಿಶ್ಚಿಂತನು (ಸಾನಂಚ. ೭–೬೬). P ಇದು 'ತಿಣಿ'ಯ ದ್ವಿರುಕ್ತಿಯಿರಬಹುದು. [ <ತಿಣ್$_2$ ]

**ತಿಂತಿಣಿ$_2$** (ನಾ). = ತಿಂತಿಡಿ: "ತಿಂತಿಣಿ – ತಿಂತ್ರಿಣಿ – ಹುಣಸೆಮರ" (ತದ್ಭಕೋ. ೫೦). [ <ಪ್ರಾ. ತಿಂತಿಣೀ./ಸಂ. ತಿಂತ್ರಿಣೀ ]

**ತಿಂತಿಣಿಗೊಳ್** (ಕ್ರಿ). ಗುಂಪು ಸೇರು; ಒಟ್ಟುಗೂಡು; ದಟ್ಟಯಿಸು: ದಿತಿಸುತನ ಸೇನಾನೀಕವಡಿಗಡಿಗೆ ಉಲಿದು ತಿಂತಿಣಿ[ಪಾಠಾಂ. ಟಿಂಟಣಿ] ಗೊಂಡು ಸಿಂಹದ ಮೆಳೆಯ ನರಿಗಳು ಕೆಣಕುವಂದದಿ ತಲೆಯ ಬರಹವ ತೊಡೆಯ ಹಳಚಿದರಾಗ ಹರಿಯೊಡನೆ (ಸಂಭಶ. ೮–೧೦೪); ತಿಂತಿಣಿಗೊಂಡೆಸೆ ವ್ಯವತ್ಸಾಱು ಜನಾಂತಂ ನೆಲಸಿಹುವು (ಆದುಶಾ. ೦–೩೩).
[ ತಿಂತಿಣಿ$_1$ + ಕೊಳ್$_1$ ]

**ತಿಂತಿಣಿವಡೆ** (ಕ್ರಿ). = ತಿಂತಿಣಿಸು: ಪಲವುಂ ಪರಿಯ ಪಕ್ಕಿಗಳ ಪರ್ಚಿದ ಸರಂಗಳಂ ಹರಣಂಬಡೆದಂತೆ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ (ಕಬ್ಬಿಗಾ. ೨೦೬). [ ತಿಂತಿಣಿ$_1$ + ಪಡೆ$_1$ ]

**ತಿಂತಿಣಿವಣ್** (ನಾ). ಒತ್ತೊತ್ತಾಗಿ ಸೇರಿರುವ ಹಣ್ಣು; ಗೊಂಚಲು ಗೊಂಚಲಾದ ಹಣ್ಣು: ತಿಂತಿಣಿವಣ್ಣನಾಂತ ಕದಳಂ ಪದವಣ್ಪುದಿದೀಳೆ (ಅಗವಿ. ೨–೧೫); ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬು ವಡೆದ ದಾಳಿಂಬಂಗಳೊಳಂ (ಕಬ್ಬಿಗಾ. ೩೦); ನಾಡೆ ಕೊರ್ವಿ ತಿಂತಿಣಿವಣ್ಣಳಾಂತ ಕದಳಂ (ಜಲಪು. ೦೧–೨೨). [ ತಿಂತಿಣಿ$_1$ + ಪಣ್$_3$ ]

**ತಿಂತಿಣಿವರಿ** (ಕ್ರಿ). ಗುಂಪಾಗು; ಕಿಕ್ಕಿರಿ: ಜನಪದಂ ಧಗೆಯ ಹಬ್ಬಾವಂತೆ ಹೊರಟು ತಿಂತಿಣಿವರಿದು ಬಂತು (ಗೂಡೂಥಾ. ೦೧–೨೭೪).
[ ತಿಂತಿಣಿ$_1$ + ಪರಿ$_2$ ]

**ತಿಂತಿಣಿಸು** (ಕ್ರಿ). ಗುಂಪಾಗು; ಕಿಕ್ಕಿರಿ; ಒತ್ತೊತ್ತಾಗಿ ಸೇರು; ಸಮೂಹವಾಗು: ತಿಂತಿಣಿಪ ನಿಳಯದಿಂ . . . ಒಪ್ಪುವುದಿಳೆಯೊಳೋಷಧಿಪ್ರಸ್ಥಪುರಂ (ಗಿರಿಕ. ೨–೦೦೦); ದಿಶಾಚತುಷ್ಟಯಂ ಪ್ರಣಿಹಿತಿಹೇತಿ ತಿಂತಿಣಿಸಿದಂತೊಡವಂದುದು ಪಣ್ಣದಾನೆ (ಅನಂಪು. ೧೧–೬೪); ತಿಂತಿಣಿಸಿ ಗಗನದೊಳ್ತುಂಬಿಗಳ್ಕಾರಮುಗಿಲಂತೆ ನವಪಾರಿಜಾತದ ಕುಸುಮ ಪರಿಮಳಕೆ ಸಂತತಂ ಮುಸುಕಲ್ (ಕ್ರಮಿಥಾ. ೩೩–೨೦). [ ತಿಂತಿಣಿ$_1$ + – ಇಸು$_3$ ]

**ತಿಂತೆ** 'ತೀಂಟೆ$_1$' ನೋ.

**ತಿಂತ್ರಿಣಿ** (ನಾ). ಹುಣಿಸೆಮರ; ತಿಂತಿಣಿ: ಘನಸಾರ ಖರ್ಜೂರ ಕರ್ಪೂರ ಚೂತ ಪನಸು ತಿಂತ್ರಿಣಿ ಬಿಲ್ವ ಪಾಟಲಾಶೋಕ ಜನನುತ ಮಂದಾರ (ಸೌಗಂಧಿ. ೬–೪೪); ತಿಂತ್ರಿಣೀವೃಕ್ಷದ ಪೊಸಫಲದೊಳ್ಸಾರವಂ ಕಂಡ ಕಾಲಕ್ಕೆ (ಪಂಚಶ. ೯೩–೫೩). [ ಸಂ. ತಿಂತ್ರಿಣೀ ]

**ತಿಂಥಿಣಿ** 'ತಿಂತಿಣಿ$_1$' ನೋ.

**ತಿಂದುಕ** (ನಾ). ತೂಬರೆಗಿಡ ಮತ್ತು ಅದರ ಕಾಯಿ: "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ–೪ ತುಂಬರಗಿಡ, ತೂಬರೇಗಿಡ. ಇದನ್ನು ಜಗಳದ ಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೬); ತಿಂದುಕ ಪೀನಫಲಂಗಳೆ . . . ತಿಂದು (ಕಾವ್ಯಾವ. ೫೨೬); ನಾನಾ ಬಗೆಯ ನಾರುಬೇರುಗಳೂ . . . ಹಣ್ಣುಹಂಪಲುಗಳೂ, ಬೆಳೆಯುತ್ತವೆ. ಉದಾಹರಣೆಗೆ ಅಮ್ರ . . . ತಿಂದುಕ, ಉದುಂಬರ (ಪ್ರವಾಇ. I, ೨೦೫).
[ ಸಂ. ]

**ತಿಂಪು** 'ತಿಣ್ಪು' ನೋ.

**ತಿಂಪುಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು; ಹಗುರವಾಗು; ಅವಮಾನ ಹೊಂದು: ಖಳನ ದೆಸೆಯಿಂ ತಿಂಪುಗೆಟ್ಟವು ಹೇಳಲೇನದನು (ನಿಭಾಗ. ೭–೮–೨೬). [ ತಿಂಪು (<ತಿಣ್ಪು) + ಕೆಡು$_1$ ]

**ತಿಂಬ** 'ತಿನ್' ಪರಾ.

**ತಿಂಬಂಡ, ತಿಂಬಡ** (ನಾ). ತಿನ್ನುವ ಪದಾರ್ಥ; ತಿನಿಸು; ತಿಂಡಿ: ಅಜ್ಜರ್ಕಳ ಮನೆಯಿಂದಂ ಪೊಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಂ[ಪಾಠಾಂ. ಬ, ಬ]ಡಂಗಳುಂ ಬಂದುವು (ವಡ್ಡಾರಾ. ೦೦೬–೨೦). **ತಿಂಬಡ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಿನ್ + ಬಂಡ$_2$./ತಮಿ. ತಿನ್ಪಣ್ಣ; ತೆಲು. ತಿನುಬಂಡ ]

ತಿಂಬಡ 'ತಿಂಬಂಡ' ನೋ.

ತಿಂಬಿಸು (ಕ್ರಿ). ತುಂಬಿಸು; ಭರ್ತಿಮಾಡು: ಜಳಜಾತಿಕಾವಳಯಮನಳುಂಬಮಾಗೆ ತಿಂಬಿಸಿಯುಂ (ಪುಷ್ಪಪು. ೭-೭೯ ವ). [ ತಿಂಬು$_1$ + – ಇಸು$_3$ ]

ತಿಂಬು$_1$ (ಕ್ರಿ). ೧. ತುಂಬು ; ವ್ಯಾಪಿಸು : ಕಂಟಣ್ಣದ ಕುದುರೆಗಳೊಳೊಡಂಬಡೆ ನಿಜರಜತರಥಮಗುರ್ವುರ್ವರೆಯಂ ತಿಂಬೆ[ಪಾಠಾಂ.ತುಂಬೆ]ಕಳಶಧ್ವಜಂ ವಿಳಿರ್ದಂಬರಮಂ ಬಳಸೆ ನಿಂದನಾತಂ ದ್ರೋಣಂ (ಪಂಪಭಾ. ೧೧-೩೪) ; ನಗದ ಮಾರ್ದನಿ ಕಿವಿಗಂ ತಿಂಬಿ (ಶಾಂತಿಪು. ೨-೧೦೨) ; ಸೋವಡಿಂ ಸೊರ್ಕಿಸುತುಂ ಕರೇಣುಕುಳಮಂ ಸಾರ್ದಾರ್ದು ಸಾಮೋದಪಲ್ಲವಮಂ ಮೇವುತೆ ತಿಂ[ಪಾಠಾಂ. ತೀಂ]ಬ ತುಂಬಿಗಳನುದ್ಯದ್ಗಲ್ಲದಿಂದಗ್ರಪಲ್ಲವದೊಳ್ ಸೋವುತೆ ಸೋರ್ವ ದಾನಜಲದಿಂದಂ ಸಲ್ಲಕೀಕಾನನೋದ್ಭವಮಂ ಮಾಡುತು ಮಾಡು ತಿರ್ದುವಗದೊಳ್ ಕೋಡಿಟ್ಟು ಕಾಡಾನೆಗಳ್(ಲೀಲಾವ.೮-೩); ನೀಲದುನ್ಮುಖಮಯೂಖಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ (ಚಂದ್ರಪ್ರ. ೭-೬೩ ವ) ; ತಿಂಬಿ ಗಟಪುವ ಗಿಳಿಗಳೊಡನೆಳಸಿ ಮಾತಾಡಿ (ಪುಷ್ಪಪು. ೨-೪೪) ; ಲೊಕ್ಕಿಯ ಕಷಾಯಮುಂ ಕೆ(ಕು)ಡಿಸುಗುವುಪ್ಪುಂಬುವ ಮೇಣಾ ಮಧುವಿಂ ತಿಂಬಿದ ವಿಷಮಂ(ಖಮದ.೨-೧೪೩). ೨. ತುಂಬಿಸಂ ; ಭರ್ತಿಮಾಡು : "ತಿಂಬು-ಪೂರಣೇ" (ಶಮಧಾ) ; ರುಚಿವೆತ್ತಿರ್ದ ಪಾನವಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಜೆದರಬಲೆಯರ್ ಸಿರ್ಪುಗಳಿಂ (ಸುಕುಮಾ. ೧೧-೩೦) ; ದೆಸೆಯಂ ಪೊಂಬಣ್ಣದಿಂ ತಿಂಬುವ ಕಳಮವನಂ (ಎಕ. XI, ದಾವಣ. ೩೫-೩೫ ; ಸು. 1160) ; ಬಳಸಿದಗಟನೊಗುವಿಗೆ ತಿಂಬಿ ತುಂಬುವರಿಯಿಸಿಯುಂ (ಚಂದ್ರಪ್ರ. ೮-೪೩ ವ) ; ಅಂಬರಮಯ್ದೆ ತಿಂಬಲಿಕ್ಕಿದ ಕಡೆಮುತ್ತಿನೋಳಿಯೆನೆ ಕಣ್ಗೊಳಿಸಿರ್ದುವು ತಳ್ತು ತಾರೆಗಳ್ (ಕುಸುಮಾ. ೪-೧೦) ; ವರ್ಣಮಾಲಿಕೆಯೆಂಬಳ್ ಬಹು ರತ್ನಪ್ರಾಂಶುಪ್ರಸರದಿಂ ಪಲತೆಱದ ವರ್ಣಪೂರಂಗಳಂ ಪರಿಪೂರ್ಣಮಾಗಿ ಬೆಡಂಗುವಡೆಯೆ ತಿಂಬಿಯುಂ (ಶಾಂತೀಶ್ವ. ೧೩-೨೨೯ ವ). 'ತುಂಬು$_1$' ಪರಾ.

△ ತಿಂಬು$_2$ (ಕ್ರಿ). ತಿನ್ನು ; ಭಕ್ಷಿಸು : ಮಣ್ಣು ತಿಂಬುವದಱಿಂದ ಪಾಂಡುರೋಗ ಹುಟ್ಟುವದು (ವೈದ್ಯಸಾ. I, ೩೩೩) ; ಅಶನವಾದರೆ ತಿಂಬುತಿಹನು ಮೂರು ಪಂಚೇರ (ಜ್ಞಾನಸಿಂ. ೨.೧೦); ಬುತ್ತಿ ತಿಂಬುವಗೆ ಲತ್ತೆಯುಂಬುವಗಾದೆ (ಮಹಾವಿ. ೪-೯೪). [ <ತಿನ್ ]

ತಿಂಬೊಡೆ (ನಾ). [ಸಂಗೀತ] ಹಾಡುವ ಒಂದು ಕ್ರಮ (?) : ಮಿಕ್ಕ ತಿಂಬೊಡೆ ತ್ರಿವಳಿಗಳೆಂದೆಂಬ ಸೂಳುಕ್ರಮದಿಂದ ಪಾಡಿದರು (ಶರಶೇಖ. ೭-೩೭). [ ? ]

ತಿಕ, ತಿಗ, ತೀಗ (ನಾ). ೧. ಕುಂಡೆ ; ಗುದ ; ಪೃಷ್ಠಪ್ರದೇಶ ; ಆಸನ ; ಅಂದು:ಘಟ ದೀಪಾಂತರವಾರುತವಾವಿಂದ ಬಂದಿತ್ತೊಂದು ವಿಕಟಾಂಗದ ಕುದುರೆ ಬಾಯಿಗೆ ಹಲ್ಲಣ ತಿಕಕ್ಕೆ ಕಡಿವಾಣ ಹಲ್ಲಿಗೆ ಹಕ್ಕರಿಕೆ (ಸುಂಕಬಂ.೬೪); ಆಸನದ ಪೊಱಗೆ ಪೃಷ್ಠಮದೀಸನಿವಾ ಪೆಸರದಕ್ಕುಮದಱಿಂ ನಡುವಣ ದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾವೆಂದುಂ (ಅಶ್ವಶಾ. ೯-೪೪); ಕುಕುಂದರೌ–ಕುಕುಂದರವೆಂಬ ಪೆಸರ್ವಡೆದಿರುವವು–ಅವು ತಿಕಕ್ಕೆ ಸಮೀಪವರ್ತಿ ಕೂಪಂಗಳು (ಬಾಹಟೀ. ೨-೪-೨೪ ವ) ; ಉದ್ಯೋಗವಿಲ್ಲದ ಬಡಗಿ ಮಕ್ಕಳ ತಿಕ ಕೆತ್ತಿದ (ಗಾದೆ); ತೆಂಗಿನಮರ ಏರುವವನ ತಿಕ ಎಲ್ಲಿ ತನಕ ಹಿಡಿದಾನು? (ಗಾದೆ). ೨. ಮೂರರ ಗುಂಪು : "ತಿಗ(ತಿಕ)–ತ್ರಿಕ = ಮುಕ್ಕೂಟ" (ತದ್ಭಕೋ. ೧೭). ತಿಗ: ೧. "ತ್ರಿಕ – ತಿಗ" (ಶಮದ. ೨೯೦ ಪ್ರಯೋ) ; ತಿಗವೆತ್ತಿ ಕರದೆ ತೊಡೆಗಳನಗಲಿಸಿ (ಮನ್ಮವಿ. ೧೪-೪) ; ತುದಿವೆರಳ ಬೊಬ್ಬೆಗಳ ತಿಗ[ಪಾಠಾಂ. ಹರೆ]ಗಳ ತದಹದಬ್ಬರವಱೆಯಲೀತನನಿದಿರುಗೊಂಡಪ್ಪಿದರು (ತೊರರಾ.೩-೯-೭). ೨. "ತಿಗ(ತಿಕ)–ತ್ರಿಕ– ಮುಕ್ಕೂಟ" (ತದ ಕೋ. ೧೭). ೩. ಬೆನ್ನೆಲುಬಿನ ಕೆಳಭಾಗ ; ಕಟಿಪ್ರದೇಶ : ಅಂತು ಶಿವಂಗೆ ದೂರವಾದನೆಂಬ ಕೋಪದಿಂ ತಿಗದೊಳಿಕ್ಕಿರ್ದ ನಂಜನೆಂಜಲಿಪ ಕುಡುಗೋಲಂ ತೆಗೆದುಕೊಂಡು (ತ್ರಿಷುವಿ. ೧೪-೨೩ ವ). ೪. ಪಗಡೆಯಾಟದಲ್ಲಿ ಮೂರರ ಸಂಕೇತವುಳ್ಳ ಒಂದು ಗರ,–ಮೂರರ ಗರ: ಬಡು ತಿಗ ದುಗ ಪಂಚಯುನೊಡ್ಡ ಡಸಿದ ಚಾರಿಯನೆ ಪೊಯ್ದು ಗುಣಿಸು. . . ಎನಿಪ್ಪ ನುಡಿ ನೆಗಟಲ್ ಲೆತ್ತವಾಡಿದರ್ ದಂಪತಿಗಳ್ (ಉದ್ಭಟ. ೧೧-೦೩); ದುಗನ ಹಾಯಿಕು ತನಗೆ ಹಾಯಿಕು ತಿಗನವೇ[ಪಾಠಾಂ. ಹಾಯ್ಕಿತ್ತಿಗನವಂ]ಬಬ್ಬರದ ಹಾಸಂಗಿಗಳ ಬೊಬ್ಬೆಯ (ಕುಮಾರ.ಸ. ೧೩-೩೦) ; ಎಸೆವ ದಾಯವನೆಸೆವ, ದುಗ ಬೀಳ್ಕೆ, ತಿಗ ಬೀಳ್ಕೆ ! (ಹದ್ಬಿರ. ೪-೩೭). ತೀಗ: ೨. ದುಗಂ, ದೂಗಂ ; ತಿಗಂ, ತೀಗಂ (ಶಬ್ದಾನು. ೩೭೮ ಪ್ರಯೋ). 'ಇರ್ತಿಗ' ಪರಾ. [ <ಸಂ. ತ್ರಿಕ ]

ತಿಕಟ 'ತಿಗಟ' ನೋ.

ತಿಕಟಂ 'ತಿಗಟಂ' ನೋ.

ತಿಕಡಿ, ತಿಗಟಿ, ತಿಗಟೆ (ನಾ). ೧. ತ್ರಿಕೋಣಾಕೃತಿ ; ತ್ರಿಭುಜ : (ಕ). ೨. (ಬ್ರಿಟಿಷರ ಆಳಿಕೆಯಲ್ಲಿ) ಜೈಲಿನಲ್ಲಿ ಅಪರಾಧಿಗಳ ಬೆನ್ನ ಮೇಲೆ ಏಟು ಕೊಡುವಾಗ ಉಪಯೋಗಿಸುತ್ತಿದ್ದ ತ್ರಿಭುಜವುಳ್ಳ ಒಂದು ಸಾಧನ : ನಾಲ್ವರು ವಿದ್ಯಾರ್ಥಿಗಳಿಗೆ 'ತಿಕಡಿ'ಯ ಮೇಲೆ ಹನ್ನೆರಡು ಏಟು ಕೊಡದೇಕೆಂಬ ಕ್ರೂರ ಆಜ್ಞೆ ವಿಧಿಸಿಹೋದರು (ಆಗಸ್ಟ್. ೮೦) ; 'ತಿಕಡಿ'ಯನ್ನು ಹೊತ್ತುಕೊಂಡು ಬರಲು ಅತ್ತ ಕೆಲವರು ಹೋಗುತ್ತಲೂ ಇತ್ತ ಹೊಡೆಯುವ ಬಾರಕೋಲು ಸಿದ್ಧವಾಯಿತು (ಆಗಸ್ಟ್. ೮೦). ೩. ಗಾಡಿ ಹೊಡೆಯುವವನು ಕುಳಿತುಕೊಳ್ಳುವುದಕ್ಕಾಗಿ ಗಾಡಿಯ ಮುಂಭಾಗದಲ್ಲಿ ಅಳವಡಿಸಿದ ತ್ರಿಕೋಣಾಕಾರದ ರಚನೆ ; ಕತ್ತರಿ : ಬಂಡಿಗಾರ ಮತ್ತೆ ತಿಕಡಿಯ ಮೇಲೆ ಕುಳಿತುಕೊಂಡು ಜೋರಾಗಿ ಗಾಡಿ ಓಡಿಸಿದನು (ಪುನರು. ೫೬೨). ೪. ಕಲ್ಲುಂಕೆಲಸದವನಂ ಸಮತಲರೇಖೆಯನ್ನು ಪರೀಕ್ಷಿಸುವ ಒಂದು ಸಲಕರಣೆ ; ಕಲ್ಲುಂಕುಟಿಗನ ಮಟ್ಟಕೋಲು; ಮಟ್ಟಲೆಮಟ್ಟ: (ಕ). ೫. ಕ್ರೈಸ್ತಮತದವರಲ್ಲಿ ಕೆಥೋಲಿಕ್ ಪಂಗಡದವರಂ ತಮ್ಮ ಧರ್ಮದ ಸಂಕೇತವಾಗಿ ಧರಿಸಿಕೊಳ್ಳುವ ಅಡ್ಡಪಟ್ಟಿ ; ಕ್ರಾಸುಂ : ಮಹಾರಾಷ್ಟ್ರದ ರಾಜಾಧಿರಾಜ ರಘೂರಾಯನು ವಜ್ರಖಚಿತವಾದ ತಿಕಡಿಯನ್ನೂ ಒಂದು ಲಕ್ಷ ಘ್ರಾಂಕುಗಳ ದ್ರವ್ಯನಿಧಿಯನ್ನೂ ಕೊಟ್ಟನು (ವಿಕಾಸ. ೩೪) ; ಕ್ರೈಸ್ತರು ಆರಾಧಿಸುವ ವಿಗ್ರಹವನ್ನಾಗಲಿ, ಕ್ರಾಸುಗಳೆಂಬ ತಿಕಡಿಗಳನ್ನಾಗಲಿ, ಮಹಮ್ಮದೀಯರು ನಾಶಪಡಿಸಲಾಗದು (ಪ್ರಗಂಬ. ೧೯೯). ೬. ದಾರ ಅಥವಾ ಹಗ್ಗವನ್ನು ಹುರಿಮಾಡುವಾಗ ಬಳಸುವ ಒಂದು ಕವೆಗೋಲು : (ಕ). ತಿಗಟಿ: ೧. ಅರ್ಜುನನು ಬಾಣದ ತಿಗಟಿ ಕಟ್ಟಿಕೊಟ್ಟು ತರೆದಿಂಬು ಮಾಡಿದನು (ಸುವರ್ಣ. ೪೬). ೪. ನಾನು ಒಂದು ದಿವಸ ಹೊಸಮನೆಯನ್ನು ಕಟ್ಟುವ ಕೆಲಸ ನೋಡಲಿಕ್ಕೆ ಹೋದಾಗ ನನ್ನ ತಿಗಟಿಯನ್ನು ಮನೆಯಲ್ಲಿ ಮರೆತು ಹೋಗಿದ್ದನು (ಮುಂಬಯಿ. ೪-೧೦೬); ಬಾವಿಯ ಸಮೀಪದಲ್ಲಿ ಎತ್ತರ ಮಾಡಿಹೋಗುತ್ತ ಹೋಗುತ್ತ ತಿಗಟಿಯಿಂದ ತೂಗಿ ಸ್ವಲ್ಪುಸ್ವಲ್ಪು ಇಳಿಸುತ್ತ ನೀರಿನ ಕಾವಲಿಯನ್ನು ಚೆನ್ನಾಗಿ ಮಾಡಿಬಿಟ್ಟರೆ (ಕೃಷಿಪ್ರ. ೧೦೦). ತಿಗಟೆ: ೭. ಪೃಷ್ಠಭಾಗ ; ಗುದ ; ಆಸನ ; "ಗುದ ತಿಗಟೆ" (ಬಾಹಟೀ. ೨-೩-೮೨ ವ).

ತಿಕಡಿಹಿಡಿಸು = ಹಿಂಸೆಕೊಡು : ಹೆಣ್ಣಿಗೆ ತಿಕಡಿಹಿಡಿಸಿ ಒಲ್ಲೆ ಅನ್ನು ಬಾವಿಗೆ ಬೀಳುತ್ತೇನೆ ಅನ್ನು ಅಂತ ಹೇಳಿಕೊಟ್ಟು, ಮಾನಸಪ್ಪ ಮಾಡುತ್ತಾರೆ (ಜೀಗೂಳಿ. ೦೭೦).

[ ←ಹಿಂ. ಟಿಕಟೀ. / ಪ್ರಾ. ತಿಕಠ. / ಸಂ. ತ್ರಿಕಾಷ್ಠ ]

ತಿಕಾಳಿ (ನಾ). ಚೀಲದ ಬಂಡಕ್ಕೆ ಹೊಲಿದ ವಸ್ತ್ರದ ತುಂಡು: (ಸ್ವಾಂಡರ್). [ ? ]

**ತಿಕೀಟು** 'ಟಿಕೀಟು' ನೋ.

**ತಿಕ್ಕ** (ಗು). = ತೀಕ್ಷ್ಣ ೧ : " ತೀಕ್ಷ್ಣ – ತಿಕ್ಕ " (ಶಮದ. ೨೬೦ ಪ್ರಯೋ) : " ತಿಕ್ಕಂ ತೀಕ್ಷ್ಣದ ನಾಮದೊಳ್ " (ಕರ್ಣಾನಿ. ೬೩) : " ತೀಕ್ಷ್ಣ – ತಿಕ್ಕ " (ಶಬ್ದಾನು. ೦೬೦ ಪ್ರಯೋ): "ತಿಕ್ಕನೆ[ಪಾಠಾಂ. ಮುರ್ಕನೆ] ತೀಕ್ಷ್ಣಂ "(ಕವಿಶಂ. ೫೪). [ < ಪ್ರಾ. ತಿಕ್ಖ./ಸಂ. ತೀಕ್ಷ್ಣ ]

**ತಿಕ್ಕಲಾಟ** (ನಾ). ತಬ್ಬಿಬ್ಬಾದ ನಡವಳಿಕೆ ; ಭ್ರಮೆಗೊಂಡಿರುವಿಕೆ : (ಕ). [ ತಿಕ್ಕಲು₁ + ಆಟ ]

**ತಿಕ್ಕಲು₁** (ನಾ). ಹುಚ್ಚು ; ಚಿತ್ತವಿಭ್ರಮ ; ಭ್ರಮೆ : ಇಂತಹ ಕಲ್ಪನೆಯ ಪ್ರಾಬಲ್ಯವೇ ಮೆದುಳಿನಲ್ಲಿ ವಿಕಾರವನ್ನುಂಟುಮಾಡಿ ಮನಬಂದಂತೆ, ತಿಕ್ಕಲು ಮಾತುಗಳನ್ನಾಡಿಸುವುದು ಅಸಂಭವವೇನೂ ಅಲ್ಲ. ಇದೇ ದವ್ವ (ಜೀವಾಕ್ರ. ೨೩೦). 'ತಿಕ್ಕಲಾಟ' ಪರಾ.

ತಿಕ್ಕಲುತಿರುಗು = ಹುಚ್ಚು ಕೆರಳು ; ಚಿತ್ತಭ್ರಮೆಯುಂಟಾಗು : ಅವತ್ತು ಅದೇನು ತಿಕ್ಕಲುತಿರುಗಿತ್ತೋ ಏನೋ (ಉಮಾಶಿ. ೮೩).

[ದೇ.॥ ತಮಿ. ತಿಕ್ಕಪ್ಪು, ತಿಯಕ್ಕ ; ತೆಲು. ತಿಕ್ಕ ]

**ತಿಕ್ಕಲು₂**(ನಾ). ಉಗ್ಗುವಿಕೆ; ಬಿಕ್ಕುವಿಕೆ; ಗುಕ್ಕುವಿಕೆ; ಮಾತನಾಡುವಾಗ ತಡವರಿಸುವಿಕೆ : (ಕ). 'ಬಿಕ್ಕಲು' ಪರಾ.

[ ದೇ.॥ ತಮಿ. ಮಲ. ತಿಕ್ಕು ]

**ತಿಕ್ಕಾಟ** (ನಾ). ೧. ಉಜ್ಜುವಿಕೆ ; ಅರೆಯುವಿಕೆ; ಘರ್ಷಣೆ; ತಾಕಲಾಟ: ಆದೊಂದು ನನ್ನ ಪ್ರಕೃತಿಯ ಪೇಚಾಟ; ತಿಳುವಳಿಕೆಯ ತಿಕ್ಕಾಟ (ಪ್ರದ್ಯಾ. ೧೦ ಮುನ್ನುಡಿ) : ಉತ್ಪತ್ತಿಯಾಗುವ ಶಕ್ತಿಯಲ್ಲಿ ಕೊಂಚ ಭಾಗವು ಚಲಿಸುವ ಯಂತ್ರಭಾಗಗಳಲ್ಲಿ ತಿಕ್ಕಾಟದಿಂದ ನಷ್ಟವಾಗಿ (ಶಿಲ್ಪಸಾ. ೨೨೦) ; ನೆಕ್ಲ ದೋವ್‌ನ ಹೃದಯದಲ್ಲಿ ಎರಡು ಭಾವನೆಗಳು ಮೂಡಿ ಪರಸ್ಪರ ತಿಕ್ಕಾಟ ಪ್ರಾರಂಭವಾಗಿತ್ತು (ಪುನರು. ೮೧) ; ಸಕಲಧರ್ಮಗಳ ತವರೂರಾದ ಭಾರತ ವಂತೂ ಭಿನ್ನಭಿನ್ನ ಧರ್ಮಗಳ ತಿಕ್ಕಾಟದ ಒಡಕುಮನೆಯಾಗಿದ (ಧರ್ಮಸಾ. ೨). ೨. ವಿವಾದ; ಜಗಳ ; ಕಲಹ ; ಹೋರಾಟ: ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿದಾನ ವಾಯಿತು (ಆಕ್ಟಾರ್. ೧೧೩) : ಜೀವನದ ತಿಕ್ಕಾಟ ಮುಕ್ಕಾಟಗಳಲ್ಲಿ ಮಾನವನಿಗೆ ಶೃಂಗಾರವು ಸಿಂಪಿಸಲ್ಪಡ್ಡ ಮುತ್ತಿನಂತೆ (ಕನ್ನಜಾ. ೯೦) ; ಮನೆಯಲ್ಲಿ ಇಷ್ಟು ತಿಕ್ಕಾಟ ನಡೆದೂ ಕೂಡ ಬಾಬಣ್ಣ ದೀಪಾವಳಿಗೆ ಅಕ್ಕನನ್ನು ಕರೆದು ಕೊಂಡೇ ಬಂದ (ಅಕೋಳ. ೧೦೩) [ ತಿಕ್ಕು + ಆಟ ]

**ತಿಕ್ಕಾಡು** (ಕ್ರಿ). ಉಜ್ಜು ; ಘರ್ಷಿಸು : ಮರಗಳು ಒಂದಕ್ಕೊಂದು ತಿಕ್ಕಾಡುತ್ತಿವೆ (ರೂಢಿ). [ ತಿಕ್ಕು + ಆಡು₁ ]

**ತಿಕ್ಕಿಸು** (ಕ್ರಿ). ಉಜ್ಜಿಸು : ಮುಸುರೆ ಪಾತ್ರೆಯನ್ನು ಚೆನ್ನಾಗಿ ತಿಕ್ಕಿಸು (ರೂಢಿ). [ ತಿಕ್ಕು + – ಇಸು₃ ]

**ತಿಕ್ಕು** (ಕ್ರಿ). ೧. ಒರೆ ; ತೇಯು : ಎಕ್ಕತೂಳದ ಭಟತತಿಯ ಚಿಕ್ಕಟು ತಿಗುಣಿಯ ತಿಕ್ಕುವಂದದಿ ನೆಲಕಿಕ್ಕಿ ದನರೆಗಳಿಗೆಯೊಳು (ನೇಮಿಸಂ. ೨೯-೩೧): ಹಕ್ಕಿಗಳರಸನು ಮೋರನ ನೆಲಕಿಕ್ಕಿ ತಿಕ್ಕಿತು ಕೂಗಿ ಬೊಬ್ಬಿಡಲು (ಮೋಹತ. ೩೮-೨೯). ೨. ಉಜ್ಜು ; ಒರಸು: ಅಡಿಗಡಿಗೆ ಮೂತ್ರಿಸುಗುಂ ಮೈಮುರಿವುದುಂ ಬೆಚ್ಚುಗುಂ ಮುಖವ ತಿಕ್ಕಿಕೊಂಡಟುಗುಂ (ಬಾಲಚಿ. ೧೨೫-೧೨) ; ಗಟ್ಟಿಗೊಂದುವೆಯ ನಾಲ್ಪಳ್ಳವ ನನೆಹಿ . . . ಬಿಸಿಲೊಳಗೊಣಗಲಿಟ್ಟೊಂದು ಬಳ್ಳವುಪ್ಪನ್ನೆವರ ಚೆನ್ನಾಗಿಯೆ ತಿಕ್ಕಿ ಗಟ್ಟಿಗೆಯ್ದು (ಸೂಪಶಾ. ೧-೯) : ಆಗಳೆ ಕಣ್ಣ ತಿಕ್ಕುತ್ತೊಯ್ಯನೆಯವೊಂದೆರಳ್ಮೊಬ್ಬಿಯೆ (ಧರಚ. ೯-೭೩) ; ಬರ್ದಿಲದ ಪೆರ್ಗಚ್ಚಲಾವು ತಿಕ್ಕುವುದು ಬಾನ್ ಬೆನ್ನ (ಕಾಲೂರ. ೩೭-೪೦). ೩. (ಉಜ್ಜಿ) ಶುಚಿಮಾಡಂ ; ಬೆಳಗು ; ತೊಳೆ : ಮುಸುರೆ ತಿಕ್ಕುವವಳು ನಾಲ್ಕುದಿನಗಳಿಂದ ಬರಲಿಲ್ಲ (ರೂಢಿ). ೪. ತೀಡು ; ನಯಮಾಡು ; ಪಾಲೀಸು ಮಾಡು : ಅಂಬಲೀ ಕುಡಿಯುವವನಿಗೆ ಮೀಸೆ ತಿಕ್ಕುವವನೊಬ್ಬ (ಗಾದೆ). ೫. ಉಜ್ಜಿ ತೆಗೆ ; ಒರಸಿ ತೆಗೆ ; ಅಳಿಸು : ಕಡುತದಲ್ಲು ಮಧ್ಯ ಮೂರು ಪಂಕ್ತಿ ತಿಕ್ಕಿ ಬರದು ಇದ್ದದ್ದನ್ನು ಮಹಾರಾಜರ ಕಡೆಯವರು ತಿಳಿದು (ರಾಜೇಂದ್ರ. ೬೩). ೬. (ಅಲಂ) ನಾಶಮಾಡು : ಇದಿರಾದರೆ ತಿಕ್ಕುವೆನುಯಿಂದ್ರಾದಿ ದಿಕ್ಪಾಲತತಿಗಳಂ (ತುರಂಗ. ೩-೩೪).

ತಿಕ್ಕಿ ತೀಡು = ನಯವಮಾಡು : ನಿನ್ನ ಗಾನದ ಬೆಳಕು ನೆಲಬಾನುಗಳ ತಿಕ್ಕಿ ತೀಡುತಿದೆ (ನೆಲವು. ४೧-೩೧). ತಿಕ್ಕಿಮುಕ್ಕು=೧. ಬಹಳ ತೊಂದರೆ ಕೊಡು ; ನಿರಂತರವಾಗಿ ಕಾಡು : ಎಡೆಬಿಡದೆ ಕಷ್ಟಕೊಡು : ನನ್ನ ತಂದೆ ಜೀವಿಸಿದಷ್ಟು ಕಾಲವೆಲ್ಲ ಸ್ವಂತಕ್ಕೆ ಪಟ್ಟ ಪಾಡು, ಮನೆ ಮಂದಿಗೆಲ್ಲ ಕೊಟ್ಟ ಕಷ್ಟ ತಿಕ್ಕಿಮುಕ್ಕಿದಂತಾಗಿತ್ತು (ಸ್ಮೃತಿಚಿ. ೩೦೫) ; ಸಾವು ಒಮ್ಮೆ ಬಂದು ಮನೆಯಲ್ಲಿ ಕಾಲಿಕ್ಕಿತೆಂದರೆ ತಿರುಗೂಮುರುಗೂ ಆ ಮನೆಯನ್ನೇ ತಿಕ್ಕಿಮುಕ್ಕುತ್ತದೆ (ವೂಪಾಸಾ. ೧೪). ೨. ಹೇಳ ಹೆಸರಿಲ್ಲದಂತೆ ನಾಶ ಮಾಡು,–ಧ್ವಂಸಮಾಡು ; ನಿರ್ನಾಮವಮಾಡು : ಸುರನರೋರಗರೆಂಬ ಬಹಳ ನಿಶಾಟರ ತಿಕ್ಕಿಮುಕ್ಕುವರು (ಮೋಹತ. ೩೩-೧೪) ; ಉಕ್ಕಿದ ಕಡುಗೋಪದಿ ಕೋಲ್ಗಳ ತಿಕ್ಕಿಮುಕ್ಕಿದ ಮುರಹರಾಗ್ರಜನ ಟಕ್ಕಿಸಿ ಹೋದಡೆ ಬಿಡೆನೆಂದು (ಮೋಹತ. ೩೯-೯) ; ಉಳಿದ ಹುಲುದಿವಿಜ ಮನು ಮುನಿಜನರ ತಿಕ್ಕಿಮುಕ್ಕದೆ ಬಿಡುವನೇ (ನವಮೋ. ೨೪-೭೯) ; ರಿಪುವನು ತಿಕ್ಕಿಮುಕ್ಕುವೆನೆನುತ ರಥವನೇರಿದನು (ರಾಮಾಸಂ. ೬-೯-೨೭).

[ ದೇ.॥ ಮಲ. ತಿಕ್ಕು, ತಿರಕ್ಕು ; ತುಳು. ತಿಕ್ಕು, ತಿಕ್ಕ್ ]

**ತಿಕ್ಕುಮುಕ್ಕಾಟ** (ನಾ). ಘರ್ಷಣೆ ; ತಿಕ್ಕಾಟ : ಒತ್ತಾಯದ ಪ್ರಕಾರ ಜನರ ಭಾಷೆಯು ಬೇರೆ ಭಾಷೆಗಳ ತಿಕ್ಕುಮುಕ್ಕಾಟದಲ್ಲಿ ಸಿಕ್ಕುವುದು (ವಿಚಾಸಂ. ೧೪) : ಪೌರ್ವಾತ್ಯ ಸಂಸ್ಕೃತಿಗೂ ಪಾಶ್ಚಾತ್ಯ ಸಂಸ್ಕೃತಿಗೂ ತಿಕ್ಕುಮುಕ್ಕಾಟ ಬಂದಿದೆ (ಸಾಹಿಸಂ. ೨೦೦). [ ತಿಕ್ಕು + ಮುಕ್ಕು₁ + ಆಟ ]

**ತಿಕ್ಕುವರಿ** (ಕ್ರಿ). ತಿಕ್ಕುತ್ತ ಮುಂದಕ್ಕೆ ಸಾಗು ; ನಾಶಮಾಡುತ್ತ ಮುಂದೆ ಹೋಗು : ಎಕ್ಕತುಳದಲಿ ರಕ್ಕಸರ ಸಲೆ ಕಕ್ಕುಲತೆಯೆನೆ ತಿಕ್ಕುವರಿದನು ಚಾಚಿ ನೆಲಪರಿತು (ಮೂಲರಾ. ೩-೧೮).

[ ತಿಕ್ಕು + ಪರಿ₂ ]

**ತಿಕ್ತ** (ಗು). ೧. ಕಹಿಯಾದ. ೨. ಹರಿತವಾದ ; ಚೂಪಾದ. ೩.(ಅಲಂ) ಮನಸ್ಸನ್ನು ನೋಯಿಸುವ ; ಅಪ್ರಿಯವಾದ : ನೆನಪಿದೆಯೆ, ಜೀವಿತೇಶ್ವರಿ, ಸ್ವಯಂವರದ ಆ ತಿಕ್ತಕಥೆ ? (ಶ್ರೀರಾಮಾ. ೨೧೩-೬೬). ೪. (ಅಲಂ) ಉಗ್ರವಾದ ; ಕಠಿನವಾದ : "ಕಹಿ, ಕಟು, ತಿಕ್ತ, ಮನಸ್ಸಿಗೆ ಹಿತವಲ್ಲದ; ಮನಸ್ಸು ಕೊರೆಯುವ; ವ್ಯಥೆತುಂಬಿರುವ ; ಕಠೋರ, ಉಗ್ರ; ನಿಷ್ಠುರ; ಮನೋವೇಧಕ" (Bitter. ಇಂಕನಿ.) ; ಎನ್ನ ತಾಯ್ಮಧುರ ವಾತ್ಸಲ್ಯದಾ ತಿಕ್ತಕರ್ತವ್ಯಮಂ ಮಾಣ್ದಿಂತುಟಿರಲಿ ? (ಶ್ರೀರಾಮಾ. ೧೦೯-೨೪೮). (ನಾ). ೫. ಆರು ವಿಧವಾದ ರಸ (ರುಚಿ)ಗಳಲ್ಲೊಂದಾದ ಕಹಿ : "ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ " (ವಸ್ತುಕೋ. ೯೪-೧೫) ; " ತಿಕ್ತಮೆನೆ ಕಹಿಯಕ್ಕು " (ಮಂಗರಾ. ೬೩-೫); ತಿಕ್ತ ಕಟು ಕಷಾಯಾಮ್ಲಮಧುರ ಭೇದದಿಂ ರಸ ನಾಮಮಂ ಪಂಚವಿಧಮಕ್ಕುಂ (ಆಚಿಪು. ೧೧-೨ ವ) : ರಸಪಂಚಕನಾಮಕರ್ಮೋದಯಂ ದೇಹಕ್ಕೆ ತಿಕ್ತಕಟುಕ ಕಷಾಯಾಮ್ಲಮಧುರನಾಮೋಪೇತ ಪಂಚರಸಮಂ ಮಾಳ್ಕುಂ (ತತ್ತ್ವಪ್ರ. ೨೯೭); ಜೈನರು ರಸಗಳನ್ನು ಐದೆಂದು ಪರಿಗಣಿಸುತ್ತಾರೆ: ಮಧುರವಾಮ್ಲಂ ಕಟುಕ ಲವಣ ತಿಕ್ತಂ ಕಷಾಯೊದವಿದಿಂತಾಱನಿಪ ರುಚಿಕರಂಗಳು ಸಹಿತ (ಲಕಿಚಂ. ೩೯-೨೯). ೬. ಸುಗಂಧ ; ಒಳ್ಳೆಯ ವಾಸನೆ; ಸೌರಭ್ಯ: "ಕಟು, ತಿಕ್ತ, ಕಷಾಯಮೆಂಬವು ಸೌರಭ್ಯದಲ್ಲಿಯುಂ . . . ವರ್ತಿಸುಗುಂ " (ಹರಾಯು. ೧೩೫-೨೭). [ ಸಂ. ]

**ತಿಕ್ತಕ** (ಗು). ೧. ಕಹಿಯಾದ. (ನಾ). ೨. "ಕಹಿಪಡವಲ ; ಪಡುವಲ ಬಳ್ಳಿ" (ಗಂಗಾವು. ೧೫೨). ೩. ಕಗ್ಗಲಿಮರ ; ಖದಿರ. ೪. ಇಂಗುದೀ

**ತಿಕ್ತಕೆ** (ನಾ). ಒಂದು ಬಗೆಯ ಗಿಡ: "ತಿಕ್ತಕಿ[ಕೆ]ಯೆನಲ್ ಕಾರೆಯಕ್ಕು" (ಮಂಗರಾ. ೪೨-೩೭). [ಸಂ. ತಿಕ್ತಕ]

**ತಿಕ್ತಪರ್ವ** (ನಾ). ಒಂದು ಬಗೆಯ ಬಳ್ಳಿ: "ತಿಕ್ತಪರ್ವಾ-ಚಕ್ರವರ್ತಿ ಸೊಪ್ಪು, ಅಮೃತಬಳ್ಳಿ, ಯಷ್ಟಿಮಧುಕ" (ರುದ್ರನಿ. ೨೫೯). [ಸಂ. ತಿಕ್ತಪರ್ವನ್]

**ತಿಕ್ತಶಾಕ** (ನಾ). ೧. ಕಹಿಯಾದ ಕಾಯಿಪಲ್ಯ; ಕಹಿ ಹಸುರುವಾಣಿ,-ತರಕಾರಿ; "ಕಹಿಪಲ್ಲೆ" (ಗಂಗಾಮು. ೧೫೨). ೨. ಬಸಲೆಗಿಡ: "ವರುಣಃ, ವರಣಃ, ಸೇತುಃ, ತಿಕ್ತಶಾಕಃ, ಕುಮಾರಕಃ– ಈ ಬಸಲೇಗಿಡ; ಮದವಸಲೇ ಗಿಡ; ಉಲಿವಿಂದಿವಸಲೆ" (ಸಿದ್ಧಾಂತಿ. ೦೦೩). [ತಿಕ್ತ + ಶಾಕ$_1$]

**ತಿಕ್ತಾಲಾಬು** (ನಾ). ಒಂದು ಬಗೆಯ ಸಸ್ಯ; ಕಹಿಸೋರೆ: ತಿಕ್ತಾಲಾಬು ಭಾಜನಗತದುಗ್ಧದವೋಲು ಮಿಥ್ಯಾತ್ವಾನಂತಾನುಬಂಧಿ ಉದಯವಶದಿಂ ವಿಪರೀತಾಭಿನಿವೇಶರೂಪಕ್ಕುಮತಿ ಕುಶ್ರುತವಿಭಂಗಮೆಂಬ ಜ್ಞಾನತ್ರಯಂ (ಪಸಾರ. ೫೭೭). [ತಿಕ್ತ + ಅಲಾಬು]

**ತಿಕ್ತೆ** (ನಾ). ಒಂದು ಬಗೆಯ ಸಸ್ಯ; ಕಟುಕರೋಹಿಣಿ: "ತಿಕ್ತಾ–ಕಟುಕ ರೋಹಿಣಿ; ಗಂಡಲೀ" (ರುದ್ರನಿ. ೨೫೯). [ಸಂ. ತಿಕ್ತಾ]

**ತಿಗ** 'ತಿಕ' ನೋ.

**ತಿಗಟ, ತಿಕಟ, ತಿಗಡ$_2$, ತಿಗುಡ, ತಿಡ್ಡ, ತ್ರಿಗುಟ** (ನಾ). ಉದ್ದ; ಮುಂದೆ ಮತ್ತು ಹಿಂದೆ: ಅಡ್ಡಮುಂ ತಿಗಟಮುಂ ತಾಱುಂತಟ್ಟುಮಿದಿರುಂ ಬಱಿಯುಂ ಬಿಟ್ಟುಂ ಬಟಲದೆ (ಲೀಲಾವ. ೬-೫೫ ವ); ಹರನ ಮುಂದಡ್ಡಮುಂ ತಿಗಟಮುಂ ಪರಿವಾಡಿ (ಅನಾರ. ದೇ. ೧೮೪-೨೩). 'ತಿಗಟಂ' ಪರಾ. **ತಿಕಟ**: 'ತಿಕಟಂ' ಪರಾ. **ತಿಗಡ$_2$**: 'ತಿಗಡಂ' ಪರಾ. **ತಿಗುಡ**: 'ತಿಗುಡಂ' ಪರಾ. **ತಿಡ್ಡ**: "ಸೊಟ್ಟ, ಅಂಕು, ಡೊಂಕು, ಒಂಕು, ಕೊಂಕು, ಕುಡು, ಅಡ್ಡ, ತಿಡ್ಡ" (ಕಂಸುಹು. ೯೧); ಅಂತಿದಿರುಂ ಬಱಿಯುಂ ಪಾಸು ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಡ್ಡ[ಪಾಠಾಂ. ತಿಗಟ] ಮುಂ ಪರಿದು (ಗದಾಯು. ೬-೨೮ ವ). 'ಅಡ್ಡತಿಡ್ಡ$_1$' ಪರಾ. **ತ್ರಿಗುಟ**: ಪುಟವೇಳುತಡ್ಡಮುಂ ತ್ರಿಗುಟಮಂ ಪರಿದಾಡಿ ನ ಟ ನ ಂ ತಿ ರು ಗ್ಗ ಡಿ ಸಿ ಕುಣಿಕುಣಿದು ಕೊಂಡಾಡಿ (ಪುಷ್ಪರ. ಹ. ೫೨೩-೧). [?]

**ತಿಗಟಂ, ತಿಕಟಂ, ತಿಗಡಂ, ತಿಗುಡಂ, ತ್ರಿಕಟಂ** (ಅ). ಉದ್ದವಾಗಿ; ಮುಂದಕ್ಕೆ ಮತ್ತು ಹಿಂದಕ್ಕೆ: ಘೋಳ್ಳನೆ ಸಭೆ ನಗೆ ಪಲ್ಲಂ ಕಿರಿವುತ ಅಡ್ಡಂ ತಿಗಟಂ ವಿಸಟಂಬರುತಂ (ಭ್ರಂಗೀರ. ಹ. ೪೭೩-೮). **ತಿಕಟಂ**: ಮುಂದಕ್ಕುಬುಬೆಂದೋಡಿ ನಿಲುತ್ತಂ ಹಿಂದಕ್ಕೆಯ್ತಂದರ್ತಿಗೆ ನಿಲುತಂ ನಡುವಡ್ಡಂ ತಿಕಟಂ [ಪಾಠಾಂ. ತಿಗಟ, ತಿಗಟಂ, ತಿಗಡ, ತಿಗಡಂ, ತಿಗುಡಂ] ಪರಿದಾಡುತೆ (ತಿರುನಾ. ಹ. ೧೦೭-೨೦). **ತಿಗಡಂ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಿಗುಡಂ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತ್ರಿಕಟಂ**: ತೂಗಾಡುತೆ ಮಡಕೆಗಳಂ ಬಾಜಿಸಿ . . . ಅಡ್ಡಂ ತ್ರಿಕಟಂ ಬಲಿವುತೆ ಬಾಜಿಸಿ (ಕುಂಬಾರ. ಹ. ೨೫೫-೧೩). [<ತಿಗಟ]

**ತಿಗಟ** 'ತಿಕಡಿ' ನೋ.

**ತಿಗಟು** 'ತಿಗುಡು$_1$' ನೋ.

**ತಿಗಟೆ** 'ತಿಕಡಿ' ನೋ.

**ತಿಗಡ$_1$** 'ತಿಗುಳ' ನೋ.

**ತಿಗಡ$_2$** 'ತಿಗಟ' ನೋ.

**ತಿಗಡಂ** 'ತಿಗಟಂ' ನೋ.

**ತಿಗಡಿ** (ನಾ). ವಂಚನೆ; ಮೋಸ; ಕಪಟ: (ಶ). 'ತಾರಾತಿಗಡಿ', 'ತಿಗಡಿಬಿಗಡಿ' ಪರಾ. [←ಹಿಂ. ತಿಕಡಮ್; ಮರಾ. ತಿಗಡ...ಏನ ಮಾಲು]

**ತಿಗಡಿಬಿಗಡಿ** (ನಾ). ೧. (ಮಾತಿನಲ್ಲಿ) ಅಸಂಗತತೆ; ಅಸಂಬದ್ಧತೆ: (ಸ್ಕಾಂಡರ್). ೨. ಮೋಸ; ವಂಚನೆ; "ಠಕ್ಕತನ" (ಜಾನಕೋ. ೩೭). ತಿಗಡಿಬಿಗಡಿ ಮಾತಾಡು = ಅಸಂಬದ್ಧವಾಗಿ ನುಡಿ: (ಸ್ಕಾಂಡರ್). [←ತುಳು. ತಿಗಡಿಬಿಗಡಿ]

**ತಿಗಡು$_1$** (ಕ್ರಿ). ಹೊಡೆ; ಬಡಿ: ತಿಗಡ[ಪಾಠಾಂ. ಗಿದ]ಲೊದಱುವ ಪರಿಗೆಗಳ ಗೌಱಿಗವ ಹೆಗ್ಗಹಳೆಗಳ . . . ಮಹಾಧ್ವನಿ ಬಗಿದುದೈ ತಾವರೆಯ ತನಯನ ಕರ್ಣಕೋಟರವ (ಕುಮಾವ್ಯಾಭೀ. ೨-೪). [<ತೀಡು$_2$?]

**ತಿಗಡು$_2$** 'ತಿಗುಡು$_1$' ನೋ.

**ತಿಗಡು$_3$** 'ತಿಗಡೆ$_2$' ನೋ.

**ತಿಗಡೆ$_1$** 'ತಿಗುಡು$_1$' ನೋ.

**ತಿಗಡೆ$_2$, ತಿಗಡು$_3$, ತಿಗುಡು$_2$, ತಿಗುಡೆ** (ನಾ). ೧. ಔಷಧಿಗೆ ಉಪಯೋಗವಾಗುವ ಒಂದು ಬಗೆಯ ಬಳ್ಳಿ ಮತ್ತು ಅದರ ಗಡ್ಡೆ; ರೇಚನಿ: "ಕುಟಕಿ ತಿಗಡೆ" (ಅಶಾನಿ. ೬-೩೫); "ಕುಂಭಧಾತ್ರೀ–ತಿಗಡೆ–ಕುಪ್ಪಸಗಿಡಕೆ, ನೆಲಗಡವು" (ಓಷಧಿ. ೩೬); ತಿಗಡೆ ಕುಂಠಿ ಶಿವೆ ಬೆಲ್ಲವೆಂಬ ಮದ್ದುಗಳ . . . ತಿಂಗೆ ಮಾಡುಗುಮುದಾರ್ಗಮಧಿಕಂ ವಿರೇಕಮಂ (ಕಲ್ಯಾಣಕ. ೯-೩೫); ತಿಗಡೆ ಧಾತಕಿಯೆಲೆ ಹಿಂಗು ಬೀರಕಯುಂಗ (ಸಾಳ್ವಸಾಂ. ೦೨). ೨. ಒಂದು ಬಗೆಯ ಮರ: ತಿಗಡೆ ಪಥ್ಯೋರ್ವೀರುಹಾಶೋಕೆ ಪಾದರಿ ನೇಱಿಲ್ ಕುಶೆ ಕಾಶೆಯೆಂಬಿವಱಿಂ ಳಾದುದಂತರ್ದರ್ಕತ್ರಲುತ್ತರದೆೞ್ ಹಸ್ತಯುಗಕ್ಕೆ ಪಂಚಪುರುಷಂ ಗುಣ್ಯಾದೊಡಕ್ಯುಂ ಜಳಂ (ಕಲ್ಯಾಣಕ. ೫-೨೦). **ತಿಗಡು$_3$**: ೧. "ಐರಾವತೀ–ಕಲ್ಲತಿ, ತಿಗಡು, ಭೇಳ" (ಓಷಧಿ. ೧೮). **ತಿಗುಡು$_2$**: ೧. ಪಟಗಣ, ಸೊನೆಪಟ್ಟೆ, ತಿಗುಡು (ಪ್ರುಶಿಗಿ. ೫೮-೧೧೭೪). **ತಿಗುಡೆ**: ೧. ಇಂಗಿನೆಲೆ ಮುಸ್ತೆಯುಳಿಲೆ ಲವಂಗಂ ಬಜೆ . . . ತಿಗುಡೆ ವಿಳಂಗಂ ಪಿಪ್ಪಲಿಯೆ ಮರಿಚ ಸೈಂಧವಲವಣಂ (ಅಶ್ವಶಾ. ೬-೪೪); ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ ಅರ[ದು]ದಂ ಕೊಡಲು ವಿರೇಚನವಹುದು (ವಿಷಚಿ. ೨೦-೪). ೨. "ಭೂರಿಫೇನ–ಸಮಗಾ? ತಿಗುಡು" (ಓಷಧಿ. ೦೧೨). [ದೇ.೫ ತುಳು. ತಿಗಡಿ; ತೆಲು. ತೆಗಡ./ಸಂ. ತ್ರಿಕಟ.]

**ತಿಗಡೆಹಿಪ್ಪಲಿ** (ನಾ). ಒಂದು ಬಗೆಯ ಔಷಧ ದ್ರವ್ಯ: "ಮಹಾಶ್ಯಾಮಾ–ಹೊನ್ನಾವರೆ, ತಿಗಡೇಹಿಪ್ಪಲಿ" (ಓಷಧಿ. ೧೧೪). [ತಿಗಡೆ$_1$ (<ತಿಗುಡು$_1$) + ಹಿಪ್ಪಲಿ]

**ತಿಗಣ** 'ತಗುಣೆ' ನೋ.

**ತಿಗಣೆ** 'ತಗುಣೆ' ನೋ.

**ತಿಗಮರಿ** 'ತಿಗಮಾರಿ' ನೋ.

**ತಿಗಮಾರಿ, ತಿಗಮರಿ** (ನಾ). [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ಬಗೆ; ಸೊಂಟದ ಚಲನವಲನಗಳ ಮೂಲಕ ಮಾಡುವ ಒಂದು ಬಗೆಯ ಅಭಿನಯ: ಮತ್ತಂ ದಿಂಡು ಮುಂಡಾಸಮೊ . . . ತಿಗಮಾರಿ ಮೊಳೆಯಂ ಮುರಿವ ನಡುವಂ ಮೊಸಳೆವರಿ ಜಲಶಯನ ಚ್ಯುತಂ ಮತ್ಸ್ಯ ಪುಟಂ ಲಂಕಾದಹನಮೆಂಬ ಪಲವುಂ ತೆಱದ ಕರಣಂಗಳಿಂ (ಧರ್ಮಾಪ. ೨-೨೩ ವ). **ತಿಗಮರಿ**: ಹೊಱಮೊಳೆ ಒಳಮೊಳೆ ತಿಗಮರಿ ಜಲಶಯ ಮಱಿವ ಲಂಕಾದಹನಾದಿ ನೂಱೆಂಟು ಕರಣಗಳನು ಕ್ರಮದಿಂದಲಾ ನಾರೀಮಣಿಗಳು ತೋಱೆ (ಜ್ಞಾನಸಿ. ೯೧-೦೫೩). [?]

**ತಿಗರಿ** 'ತಿಗುರಿ' ನೋ.

**ತಿಗಲು** (ನಾ). ಕಷ್ಟ; ತೊಂದರೆ: ಈ ಉಂಗುರದಿಂದ ಆಗುವ ಕೇಡನ್ನು ತಪ್ಪಿಸಿಕೊಳ್ಳುವುದಕ್ಕೆ ಹೋಗಿ, ಮತ್ತೊಂದು ತಿಗಲಿಗೆ ಖಂಡಿತಾ ಸಿಕ್ಕಿಕೊಳ್ಳುತ್ತೇನೆ (ಮಕಮು. ೭೮೪). [?]

**ತಿಗಳ** 'ತಿಗುಳ' ನೋ.

**ತಿಗಳಾಣ್ಯ** 'ತಿಗುಳಾಣ್ಯ' ನೋ.

**ತಿಗಳಾರಿ** (ನಾ). ತಮಿಳು ಲಿಪಿ : ತಿಗಳಾರಿ, ಗ್ರಂಥಲಿಪಿ, ನಾಗರಿ ಲಿಪಿಗಳನ್ನುಳಿದು, ಕನ್ನಡಅಕ್ಷರವಿರುವ ಓಲೆಗಳನ್ನೆಲ್ಲ ತಿರುವಿಹಾಕಿದ (ಯುಕ್ಷಬ. V ಮುನ್ನುಡಿ). [ <ತಿಗುಳ ]

**ತಿಗಳಿ** 'ತೇವಮಳು' ನೋ.

**ತಿಗಳಿತ್ತಿ** 'ತಿಗುಳಿತ್ತಿ' ನೋ.

**ತಿಗಳು** 'ತಿಗುಡು₁' ನೋ.

**ತಿಗುಂಡ** (ನಾ). ೧. ಮೂರು ಅಗ್ನಿಕುಂಡ. ೨. ನೀರಿನ ಮೂರು ಹೊಂಡ,–ಜಲಾಶಯ : "ತಿಗುಡುಂ – ತ್ರಿಕುಂಡಂ" (ಶಬ್ದಾನು. ೩೭೬ ಪ್ರಯೋ). [ <ಸಂ. ತ್ರಿಕುಂಡ ]

**ತಿಗುಡ** 'ತಿಗಟ' ನೋ.

**ತಿಗುಡಂ** 'ತಿಗಟುಂ' ನೋ.

**ತಿಗುಡು₁**, ತಿಗಟು, ತಿಗಡು₂, ತಿಗಡೆ₁, ತಿಗಳು, ದಿಗುಡು (ನಾ). ಮರ ಮೊದಲಾದ ವನಸ್ಪತಿಯ ಸಿಪ್ಪೆ ; ತೊಗಟೆ ; ಚಕ್ಕೆ : "ತ್ವಗ್ವಲ್ಕಲಂ ವಲ್ಕಮೆನೆ ಮರದ ತಿಗುಡಕ್ಕು" (ಮಂಗರಾ. ೩೨-೩) ; ನೆಗಟ್ಟಿದ್ದಿರ್ದು ಪಾಲ್ಮರಂಗಳ ತಿಗುಳ್ಗಳಿಕ್ಕಿದ ಕಷಾಯಜಳದಿಂದಿಂದ್ರಂ ವಿಗತಕಷಾಯಂಗೆ . . . ಮಾಡಿದಂ ಮಜ್ಜನವಂ (ಅಜಪು. ೪-೬೯); ಒರ್ಮರದ ತಿಗುಡು ಮತ್ತೊಂದು ಮರನನೇಂ ಪತ್ತುಗುಮೇ (ಶಂರಾಮೂ. ೧೪-೧೭) ; ವಿಕಸ್ವದ ಹೊಱಗಣ ಹೊರೆಯ ತಿಗುಡಂ ಕೆತ್ತಿ ಕಂಬವ ಶುದ್ಧೈಸಿ (ಸರ್ವವ. ೧೧೯-೬೧೬) ; ಪರಿವತಿಸಾರಂ ಪಿರಿದಾಗಿರೆ ಹೂಲಿಯ ಬೇರ ತಿಗುಡನೆಮ್ಮೆಯ ಮೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮಲುವುದು (ಕಲ್ಯಾಕಾ. ೪-೦೫) ; ಈ ಬೇರಿನ ತಿಗುಡಂ ಮೊಲೆಹಾಲಲ್ಲಿ ತೇದು ಹಚ್ಚಲು ತಿಮಿರಗಣ್ಣು ಮಾಣ್ಗುಂ (ವಿವ್ಯವಿ. ೦). **ತಿಗಟು :** ತೋರ ಹುನಿಗಲ ತಿಗಟು ಬಜೆ ವಿಳಂಗಸಾರ ಭದ್ರಮುಸ್ತೆಇವಂ . . . ಪೂಸುವುದು (ಬಾಲಚ. ೧೩೯-೧೨). **ತಿಗಡು₂ :** ಸಾವೆಪಂದು ಕಾಯುಮಂ ತಿಗಡುಮಂ [ಪಾಠಾಂ. ಪಣ್ಣುಮಂ ಕಾಯುಮಂ]ತಿಂದು (ಧರ್ಮಾಮೃ. ೧೨-೨೦೪) ; ಮರ ತಿಗಡು ಹಗಿನ ಮೊದಲಾದವಱಲ್ಲಿಯು ಗಂಧವನಱಿವುದು ಆಚಾರಲಿಂಗದಲ್ಲಿಯು ಗುರುಲಿಂಗ (ಆದವ. ೫-೧೨) ; ಕಾಚತೊಂಡೆಯ ಬೇರು . . . ಮೊಳಗದ ಬೇರಿನ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ . . . ನಸ್ಯಮಾಡಲು ಹದಿನಾಲ್ಕು ಬಗೆ ಮೊಲನಾಗರ ವ್ಯಾಧಿ ಗುಣವಹುದು (ವಿವ್ಯವಿ. ೯೯). **ತಿಗಡೆ₁ :** [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು] ಅಣಲೆ ತಿಗಡೆಯಿಂ ಬಸಿಱೊಡೆವುದು (ಧರ್ಮಾಮೃ. ೯-೧೦೮). **ತಿಗಳು :** ಎಲವದ ಹಗಿನು, ಬೆಲ್ಲವತ್ತ್ರದ ಹಣ್ಣಿನ ತಿಗಳು . . . ಇವಂ ಸಮಾನಂಗೊಂಡು ನಸುಬಿಸಿಯಂ ಮಾಡಿ (ವಿವ್ಯವಿ. ೩೩). **ದಿಗುಡು :** "ದಿಗುಡು = ತಿಗುಡು, ಮರದ ತೋಟೆ" (ಗಂಗಾಸು. ೧೬೩).

**ತಿಗುಡು₂** 'ತಿಗಡೆ₂' ನೋ.

**ತಿಗುಡೆ** 'ತಿಗಡೆ₂' ನೋ.

**ತಿಗುಣ** (ನಾ). ೧. ಮೂರರಷ್ಟು ; ಮುಮ್ಮಡಿ : "ತಿಗುಣ–ತ್ರಿಗುಣ= ಮುಮ್ಮಡಿ" (ಶಬ್ದಕೋ. ೧೭) : ಪೂರ್ವಪದಂ ತದ್ಭವ ಪಾದುದರ್ಕೆ . . . ತ್ರಿಗುಣ-ತಿಗುಣ (ಶಮದ. ೨೮೯ ಪ್ರಯೋ); ಹೊಗಳಲನುಪವು ಸೈನ್ಯವಿಂತೀ ದುಗುಣವಂಧಾಸುರನ ಸೇನೆಗೆ ತಿ[ಪಾಠಾಂ. ತ್ರಿ]ಗುಣವಿದು ರಾವಣನ ಮೋಹರಕೆನುತ (ಕುವ್ಯಾವಿ. ೬-೬೧). ೨. ಮೂರುಸಲ ; ಮೂರು ಬಾರಿ : ಅಂತಿದಿರುಂ ಬಟಿಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಗಟ[ಪಾಠಾಂ. ತಿಡ್ಡ]ಮುಂ ಪರಿದು (ಗದಾಯು. ೬-೨೮ ವ) ; ದುಗುಣ ತಿಗುಣಂ ಪ[ಪಾಠಾಂ. ತಿ]ಱಿದು ದೆಸೆವಲಿಗೆಯ್ವ (ಅನಂಪು. ೧೪-೭ ವ). [ <ಪ್ರಾ. ತಿಉಣ./ಸಂ. ತ್ರಿಗುಣ ]

**ತಿಗುಣಂಗೊಳ್** (ಕ್ರಿ). ಮೂರುಪಾಲಷ್ಟು ಆಗು ; ಮುಮ್ಮಡಿಯಾಗು: ತಕ್ಕು ತಗುಳ್ದು ಕಾಯ್ದೊಪ್ಪದವೆ ಕೋಟ್ಕಳ ತಳ್ಕಱಿಯಿಂದೆ ಕೆಂಡಮಲ್ಲೊಕ್ಕಿರೆ ತೇಸತೇನಮವತಂ ಬಿಗುಣಂ ತಿಗುಣಂಗೊಳಲ್ ಪೊಗಂಬೊಕ್ಕ ಗಜಂಗಳಂ . . . ಪಿಂಗಿಪಂ (ಅನಂಪು. ೬-೧೨). [ ತಿಗುಣ + ಕೊಳ್₁ ]

**ತಿಗುಣಿಸು** (ಕ್ರಿ). ಮೂರರಷ್ಟು ಮಾಡು ; ತ್ರಿಗುಣಿಸು : ಸಂಗಳಿಸಿದ ಪುಣ್ಯಪ್ರಭಾವವಂ ತಿ[ಪಾಠಾಂ. ತ್ರಿ]ಗುಣಿಪವೋಲ್ (ಚಂದ್ರಪು. ೯-೫೩). [ ತಿಗುಣ + – ಇಸು₃ ]

**ತಿಗುಣೆ** 'ತಗುಣೆ' ನೋ.

**ತಿಗುರಿ**, ತಿಗರಿ, ತಿಹುರಿ (ನಾ). ಕುಂಬಾರನ ಚಕ್ರ ; ಕುಲಾಲ ಚಕ್ರ : "ಚಕ್ರಮೆನೆ ತಿಗುರಿ" (ಮಂಗರಾ. ೧೦೩-೮) ; "ತಿಗುರಿಯೆಂದು ಕುಲಾಲಚಕ್ರಂ" (ಕಶಸಾ. ೩೦-೬೩೩); "ತಿಗುರಿಯೆ ಕುಲಾಲಚಕ್ರಂ" (ಕವಿಕಂ. ೨೪೯); ಅವು ತಿಗುರಿಯಂದದಿಂ ತಿರಿದುದು (ಶಂರಾಮೂ. ೪-೧೦೬) ; ಕಳಕಳರವದಿಂ ಬಟ್ಟದಿರುಂ ಬಟಿಯುಂ ಪಾಸುಂ ಪೊಕ್ಕುಂ ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ಧರ್ಮಾಮೃ. ೬-೧೦೪): ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱಿತು (ಚಂದ್ರಪು. ೭-೪೯) ; ಕುಂಬಾಱರ ತಿಗುರಿಯೊಳಿಟ್ಟೆಂಬಿನೊಳಂ ತಿರಿಪೆ (ಖಮದ. ೨-೧೯೦) ; ಕೋಲಿಂದಾಡುವ ತಿಗುರಿಯವೋಲಂತಿರೆ (ಕಾವ್ಯಸಾ. ೧೧೧೩) ; ಅರ್ಜುನನ ತೇರಿರದೆ ತಿಱ್ಱನೆ ತಿಗುರಿಯಂತೆ ತಿರುಗಿತದನೇ ನಂಬೆನದ್ಭುತವನು (ಕೃಮಿಥಾ. ೧೩-೫). **ತಿಗರಿ :** ಕುಲಾಲನು ತಿಗರಿಗೆ ಮಣ್ಣು ಮಾಡಿ ಕೋಲಿನಿಂದ ತಿರುಹೆ ಮನದಲ್ಲಿ ನೆನೆದು ಕೈಯಲ್ಲಿ ಹಿಡಿದಲ್ಲಿ ಹಲವು ರೂಪಿನ ಭಾಂಡಗಳಾಗುವ ಹಾಗೆ (ಮೋಕ್ಷಮಾ. ೧೨೧-೪೭೪ ಅರ್ಥ) ; ವೇಗದಿಂದ ತಿರುಗುವುದೊಂದು ತಿಗರಿಯ ದಂಡಿಯ ಮೇಲೆ ನಾವು ಏನನ್ನಾದರೂ ಇಟ್ಟರೆ, ಅದು ಹೊರಗೆ ಚಿಮ್ಮಲ್ಪಡುತ್ತದೆ (ಚಿಕ್ಕಶಿಶ್ಯಾ. ೫೨); ತಿಗರಿ ತಿರುಗಿಸುತ್ತ ಗಡಗಿಯನ್ನು ನಗುನಗುತ್ತ ಮೂಡಿಸುತ್ತಿದ್ದ ಮಲ್ಲಪ್ಪ ಇವನೇ ಏನು? (ರಾಜಾದೇ. ೯೪) ; ಅದನ್ನು ಕುಂಬಾರನು ತಿಗರಿಯ ಮೇಲೆ ಹಾಕಿ, ಪಾತ್ರಗಳನ್ನು ಮಾಡಿ ಆವಿಗೆಯೊಳಗೆ ಸುಡುತ್ತಾನೆ (ಮುಂಬಯಿ. ೧-೯). **ತಿಹುರಿ :** ಭರದಿ ತೆಱಂದಿರಿವಾ ತಿಹುರಿಯ ಮೇಲಿರದಿಟ್ಟು ಕುಂಬಱಗೋಲಾ ಪರಿಯೆಸೆ ಗಜವೆಡೆಯಾದಶ್ವನ ಮೇಲೆ ಪಿರಿದೊಪ್ಪಿದನು ವಾಹಕನು (ಶ್ರೀಪಾಲ. ೧-೧೨).

[ದೇ.ಶ ತಮಿ. ತಿಕಿರಿ; ತುಳು. ತಗೊರಿ]

**ತಿಗುರಿಕ್ಕು** (ಕ್ರಿ). ಪರಿಮಳದ್ರವ್ಯವನ್ನು ಲೇಪಿಸು ; ಪರಿಮಳವಸ್ತುವನ್ನು ತೀಡು : ಗಂಧಕತ್ತುರಿಯಿಂದೆ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಖ್ಯದಲಿ (ಮೋಹತ. ೨೬-೩); ತಿಗುರಿಕ್ಕಿ ಭೂಷಣಗೆಯ್ಯಲೆಳಸೆ (ವಂಕಾರಾ. ೧-೨೧-೩೧) ; ಮುದದಿ ಕುಂಕುಮರಸವ ಹದಮಾಡಿ ಹಸ್ತದೊಳ್ಪಟ್ಟಲಂ ಪಿಡಿದು ಬೇಗ ಪದ ಮಸ್ತಕಾದಿ ಸಂಹನನದೊಳ್ತಿಗುರಿಕ್ಕಿ ಮದವಳಿಗರಂ ಮಾಡಿ (ಸಿದ್ಧಕಾ. ೧೧-೧೦). [ ತಿಗುರು₂ (<ತಿಮಿರ್₂) + ಇಕ್ಕು ]

**ತಿಗುರಿಡು** (ಕ್ರಿ). = ತಿಗುರಿಕ್ಕು : ಪರಿಮಳಿಪ ಕುಂಕುಮಂದ ತಿಗುರಿಟ್ಟು ಮಾಂಗಲ್ಯ ವಿರಚನೆ (ರೇವಣ. ೯೫-೩೦). [ ತಿಗುರು₂ (<ತಿಮಿರ್₂) + ಇಡು₁ ]

**ತಿಗುರಿದಿರುಗಿಸು** (ಕ್ರಿ). ಕುಂಬಾರನ ಚಕ್ರವನ್ನು ತಿರುಗಿಸುವಂತೆ ತಿರುಗಿಸು : ವಿಲಯಾನಿಲನ ಯಿಮ್ಮಡಿಗ ಪೆರ್ಚಿ ಪೊರೆದೆದ್ದು ಸುತ್ತಿ ವಿಮುತ್ತಳವ ತಿಗುರಿದಿರುಗಿಸುತೆ ತಾರಾಳಿಯಾದುರೆ (ನವಮೋ. ೬-೬). [ ತಿಗುರಿ + ತಿರುಗಿಸು ]

**ತಿಗುರಿದಿರುಪು** (ಕ್ರಿ). = ತಿಗುರಿದಿರುಗಿಸು : ಅನಂತಾಬ್ಧಿಮೊಂದು ಭೂಮಿಯಂ ತಿಗುರಿದಿರುಪಿಯುಂ (ಜಗವಿ. ೯-೫೩ ವ). [ ತಿಗುರಿ + ತಿರುಪು₁ (<ತಿರಿಪು₁) ]

**ತಿಗುರಿಸು** (ಕ್ರಿ). ೧. (ಸುಗಂಧದ್ರವ್ಯವನ್ನು) ಪೂಸು,– ಅನುಲೇಪಿಸು,– ಹಚ್ಚು : ಗೋರೋಚನಾದಿ ಗಂಧಂಗಳಿನಾ ಪೊಗರೊಗುವರಲ್ದ ಪೊಸಮಲ್ಲಿಗೆ ಸೌಸವಮುಳ್ಳ ತನುಗೆ ಮಿಗೆ ತಿಗುರಿಸಿದರ್ (ವಿಷ್ಣುಪು. ೫-೮-೫೭). ೨. (ಸುಗಂಧದ್ರವ್ಯವನ್ನು) ಪೂಸುವಂತೆ ಮಾಡು,– ಹಚ್ಚುವಂತೆ ಮಾಡು : ಅವನ ಕರಾಬ್ಜದ ಪರಿಮಳವನು ನಿನ್ನ ಜವಳಿ ಮೊಲೆಗಳ ಮಧ್ಯದಲ್ಲಿ ತವೆ ತಿಗುರಿಸಿಕೊಂಡು (ಕಂಸವ. ೬-೧೩೪).

[ ತಿಗುರು$_2$ (< ತಿಮಿರ್$_2$) + – ಇಸು$_3$ ]

**ತಿಗುರು$_1$** 'ತಿಮಿರ್$_1$' ನೋ.

**ತಿಗುರು$_2$** 'ತಿಮಿರ್$_2$' ನೋ.

**ತಿಗುರೇಱಿಸು** (ಕ್ರಿ). (ಸುಗಂಧದ್ರವ್ಯವನ್ನು) ಪೂಸು,–ಲೇಪಿಸು : ಮಸೆಗಣೆಯ ಬತ್ತಳಿಕೆ ತಿಗು[ಪಾಠಾಂ.ವಿ]ರೇಱಿಸಿದ ಮೈ ಕತ್ತುರಿಯ ತಿಲಕದ ನೊಸಲಿನಾತನ ನೋಡು ಗರುಡಿಯ ಜಾಣ ದ್ರೋಣನನು (ಕುಮಾವ್ಯಾ. ೩-೮). [ ತಿಗುರು$_2$ (< ತಿಮಿರ್$_2$) + ಏಱಿಸು ]

**ತಿಗುಳ, ತಿಗಡ$_1$, ತಿಗಳ** (ನಾ). ತಮಿಳು ಮಾತನಾಡುವವನು ; ಅರವ : "ತಿಗುಳ ದ್ರಾವಿಡನಕ್ಕು" (ಮಂಗರಾ. ೧೧೨-೭) ; "ತಿಗುಳನೆನೆ ದ್ರವಿಡ" (ಕಕರ. ೪೭) ; ತಳಕಾಡು ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ (ಎಕ. XII, ಗುಬ್ಬಿ. ೩೪-೧೪ ; 1134) ; ಕಾವೇರಿಯ ಕಾಲನಾ ತಿಗುಳ[ಪಾಠಾಂ. ಟ]ನೇಂ ಕಡಗೊಂಡನೊ ಬಡ್ಡಿಗೊಂಡನೋ (ಕವಿರ. ಮ. ೧೭೮ ಪ್ರಯೋ); ಕನಡಿಗಳಿಗೆ ಗ ೧೦ ತಿಗುಳರು ತೆರ್ಯುವ ಗ ೬೫ (ಎಕ. XV, ಬೇಲೂರು. ೨೮೪-೭೦; 1279); ನಿರುಪಮ ವೀರರೊದಗಿತು ತಿಗುಳ ರಾವುತರು (ಕುಮಾವ್ಯಾ. ೪-೬೫) ; ನಗೆಮೊಗದರಸಗೆ ಕೈಮುಗಿದೊಲಿದನು ತಿಗುಳರರಸನೊಂದು ಕಡೆಗೆ (ಭರತೇ. ೨೨-೦೯) ; ಕತ್ತಲೆಮನೆಯ ಹೊಕ್ಕಱಿಯದ ತಿಗುಳಗೆ ಮತ್ತೆ ಕೊಡಾ ವೀಳೆಯವನು (ನಾಗಳು. ೧೭-೨೦); ಕಾಳಕೂಟದ ವಿಷವು ಚೇಳು ನಂಬಿದ ಹಗೆಯು ಹಾಳೂರ ಚುಚಿಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೧೩೮೫). **ತಿಗಡ$_1$ :** ಎಲೆದೋಟಗಳನ್ನು ಬಹುಶಃ ತಿಗಡರೇ ಮಾಡುತ್ತಾರೆ (ಮುಂಬಯಿ. ೫-೧೯೪). **ತಿಗಳ :** ಬಟಕಳದೊಳಗೆ ಮುಂಡವಳಿಯ ಗ್ರಾಮದ[ತಿಗ]ಳ ನಾಗಮನೆಯ ವಾಮನ ಉಪಾಧ್ಯಾಯರ ಮಗ (ಕಇ. I, ೫೮-೮ ; 1446) ; ತಿಗಳರುಡುಗೆಯುಟ್ಟು ಸೊಗಸು ಚೆಪ್ಪಗಳಿಟ್ಟು ಅಗಿಲು ಚಂದನ ಗಂಧ ಧರಿಸಿ . . . ಸೊಗಸುದೋರಿ ನಗುತ ಬಂದಳು ರಾಜನಾಸ್ಥಾನಕೆ (ಸೌಂದಕಾ. ೩-೨೫).

ತಿಗುಳಮಾರಿ=ತಮಿಳರಿಗೆ ಮೃತ್ಯುದೇವತೆಯಂತಿರುವವನು; ಇಱುವಬೆಡಂಗ ಸತ್ಯಾಶ್ರಯನ ಒಂದು ಬಿರುದು : ತಿಗುಟ(ಳ)ಮಾರಿ ಶ್ರೀಮತ್ ಸತ್ಯಾಶ್ರಯದೇವ(ಂ) (ಎಇ. XVI, ೭೪-೪ ; 1007).

[ ದೇ.೫ ತಮಿ. ತಿಕಳ ; ತೆಲು. ತಿಗುಳ ]

**ತಿಗುಳನಾಡು** (ನಾ). ತಮಿಳುದೇಶ : ತಿಗುಳನಾಡ ಸೆಱೆಯಂ ತಾನೊಂದಿದತಿದುಃಖದೊಳಿ ಬೆಂದು ನಿಲಲಿನ್ನರಿದೆಂದು (ಧರ್ಮಾಮೃ. ೧-೧೭೭) ; ತೆಲುಗಾಣೆಯ ತೇರಬೀದಿ ತಿಗುಳನಾಡು ತಿಳಿದೆಡೆಯಾಡುವ ದಾರಿ (ಕುರಾಸಾಂ. ೫-೪೭). [ ತಿಗುಳ + ನಾಡು ]

**ತಿಗುಳಾಣ್ಯ, ತಿಗಳಾಣ್ಯ** (ನಾ). ತಮಿಳುನಾಡು,—ದೇಶ : ಅಗಲದಾರ್ಯಾಖಂಡದೊಳಗುಳ್ಳ ನೃಪರೊಳು ತಿಗುಳಾಣ್ಯದರಸನ ನೋಡು (ಭರತೇ. ೫೩-೧೦೫) ; ಸಂಭ್ರಮದಿ ತಿಗುಳಾಣ್ಯದಿಂ ಬಂದ ವೀರೇಶನೆಂಬವರಿಗೊಲಿದು ಅಂಬಕವನಿತ್ತಾ ತ್ರಿಯಂಬಕ ಸಿದ್ಧೇಶ ಶರಣಾಗು (ಮಡಿಕಾ. IV, ೧೦೦೫ ಸಿದ್ಧೇಶ್ವರ ಕೃತಿ). **ತಿಗಳಾಣ್ಯ:** ಚತುರ್ದಿಕ್ಕು ಐವತ್ತಾರು ದೇಶದಲ್ಲೂ ಹೆರೋಗಟಾ ಮಾರೋಪೇಟೆ ತಿಗಳಾಂಣ್ಯಾ ಮಗಳಾಂಣ್ಯದಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ (ಎಕ. XVI, ಗುಬ್ಬಿ. ೬೩-೬೫ ; ಸು. 1672). 'ತೆಲುಗಾಣೆಯ' ಪರಾ. [ < ತಿಗುಳ ]

**ತಿಗುಳಿ** (ನಾ). ಒಂದು ಬಗೆಯ ಸೀರೆ : ದಂಡಾವಳಿಯ ಚಾಪಗಂಟೆಯು ಬೊಂಬೆಗಣ್ಣ ಚಿತ್ರಾವಳಿಯ ಸರಹುವ್ವ ಪೊಪ್ಪುಳಿಯು ತಿಗುಳಿ ರಾಗಾವಳಿಯ . . . ನೇತ್ರಾವಳಿಯು ಮುಖ್ಯ ನಾನಾವಿಧದ ಸೀರೆಗಳ (ನವಮೋ. ೧೭-೬೦). [ ? ]

**ತಿಗುಳಿತ್ತಿ, ತಿಗಳಿತ್ತಿ** (ನಾ). ತಮಿಳರವಳು; ಅರವ ಹೆಂಗಸು: ತಿಗುಳಿತ್ತಿಯರು . . . ಆಲಿಂಗನ ಮೊದಲಾದ ರತಿಯಲ್ಲಿ ಬಂಧುಗಳಲ್ಲಿಯು ಪ್ರೀತಿ ಉಳ್ಳವರು (ಸಾಗಂಧಿ. ೪೯೫-೧೪). **ತಿಗಳಿತ್ತಿ:** ತಿಗಳಿತ್ತಿ ಬಾಯಿ ಕಣಕಬೇಡ, ಬಗುಳೋ ನಾಯಿ ಬಡಿಯಬೇಡ (ಗಾದೆ).

[ ತಿಗುಳ + – ಇತ್ತಿ ]

**ತಿಗುಳು** (ನಾ). ತಮಿಳರ ಮಾತು ; ತಮಿಳು ಭಾಷೆ : ನಾಗರ ಕಂಪಡ ತಿಗುಳಾರ್ಯ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ ೧ಕ್ಕೆ ಗದ್ಯಾಣಂ ಆಱು (ಎಕ. III, ತಿರುಮ. ೨೭-೩೪; 1290) ; ಆದು ತಿಗುಳಿನೊಳು ಪುಳಿಚ್ಚುತ ಬದನೆಗಾಯೆ ದು ಪೆಸರನೊಲವಿಂ ಕರೆವುದು (ಸೂಪಶಾ. ೪-೦೫); ಪಾರಿಸಿಯಾಂಧ್ರ ಮರಹಾಟ ಕರ್ಣಾಟ ಹಳೆಗನ್ನಡ ತಾಸಲ್ಲ ತಿಗುಳು ಸಕ್ಕಜ ನಾಗರದ ಲಿಪಿಯು ಈ ನರರ ಲಿಖಿತದೊಳಗೊಂದಕ್ಕೆ ಸಮನಿಸದು (ಜೋರಬ. ೩-೨೯). [ ತಿಗುಳ + – ಉ$_4$ ]

**ತಿಗ್ಮ** (ಗು). ೧. ಉಷ್ಣವಾದ; ಬಿಸಿಯಾದ; ತೀಕ್ಷ್ಣ; ಪ್ರಖರ: 'ತಿಗ್ಮಕರ' ಪರಾ. ೨. ಹರಿತವಾದ; ನಿಶಿತವಾದ; ಚೂಪಾದ: 'ತಿಗ್ಮಾರಿ' ಪರಾ. ೩. ಉಗ್ರವಾದ ; ಕ್ರೂರವಾದ. (ನಾ). ೪. ಉಷ್ಣತೆ : "ತೀವ್ರಂ, ತಿಗ್ಮಂ, ಖರಂ . . . ಪಟು–ಈ ೭ ಉಷ್ಣರಶ್ಮಿ" (ಹಲಾಯು. ೮-೪೧). ೫. ಸೂರ್ಯ. [ ಸಂ. ]

**ತಿಗ್ಮಕರ** (ನಾ). ೧. ಉಷ್ಣವಾದ ಕಿರಣ. ೨. ಉಷ್ಣವಾದ ಕಿರಣಗಳನ್ನು ಉಳ್ಳವನು; ಪ್ರಖರಕಿರಣ ; ಸೂರ್ಯ : ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳ್ (ಆದಿಪು. ೭-೩೭) ; ಅಶೇಷಮಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ದ ಕೌಶಿಕನಯನಂಗಳಂ . . . ಏಕೆಯೊ ಮಾಡಿದನಬ್ಜವಿಷರಂ (ಪಂಪಾಮಾ. ೧-೬೦). [ ತಿಗ್ಮ + ಕರ$_3$ ]

**ತಿಗ್ಮತೆ** (ನಾ). ೧. ಉಷ್ಣತೆ; ಪ್ರಖರತೆ: ಚಂಡಕರದ್ಯುತಿ ಪುಗದು ಪೊಕ್ಕೊಡಂ ತಿಗ್ಮತೆಯಂ ಬಿಡುವುದದು ಮತ್ಪ್ರತಾಪದಿನಲ್ತೆ (ಚಂದ್ರಪು. ೫-೬೨). ೨. ಹರಿತವಾಗಿರುವಿಕೆ ; ಮೊನಚಾಗಿರುವಿಕೆ. ೩. ಕ್ರೂರತೆ.

[ ಸಂ. ತಿಗ್ಮತಾ ]

**ತಿಗ್ಮಪ್ರಭೆ** (ನಾ). ಪ್ರಖರವಾದ ಕಾಂತಿ ; ತೀಕ್ಷ್ಣವಾದ ಪ್ರಕಾಶ,– ಹೊಳಪು : ಅಭಿಷೇಕವೃಷ್ಟಿಸೂಚಕಮುಭಯಪ್ರತಿಸೂರ್ಯಬಿಂಬಮೊಗೆದುವು ತಿಗ್ಮಪ್ರಭೆ ಪಾರ್ಶ್ವದೊಳೆಸೆದಿರ್ದುವು ಶುಭಾಸನಂ ಸಿಂಹಪೀಠದೆರಡುಂ ಕೆಲದೊಳ್ (ಮಲ್ಲಿಪು. ೧೨-೧೦೨). [ ತಿಗ್ಮ + ಪ್ರಭೆ ]

**ತಿಗ್ಮಮರೀಚಿ** (ನಾ). ೧. ತೀಕ್ಷ್ಣವಾದ ಪ್ರಭೆ. ೨. = ತಿಗ್ಮಕರ ೨ : ಕುಮುದದಮನಲರ್ಚಿ ಹಿಮರುಚಿಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿಗ್ಮಮರೀಚಿಯನದು ಮಸುಳಿಸಿತು (ರಾಜಶೇ. ೯-೨೦).

[ ತಿಗ್ಮ + ಮರೀಚಿ ]

**ತಿಗ್ಮರುಕ್ಕಾಂತಿ** (ನಾ). ಸೂರ್ಯನ ಬೆಳಕು,–ಪ್ರಭೆ : ಆ ತಿಗ್ಮರುಕ್ಕಾಂತಿ ತೀವಿದುದೆತ್ತಲ್ ಬಹುತೇಜದಿಂ (ವಿಷ್ಣುಪು. ೮-೮೪).

[ ಸಂ. (ತಿಗ್ಮರುಚ್ + ಕಾಂತಿ) ]

**ತಿಗ್ಮರುಚಿಮ್ಮಾಲಿ** (ನಾ). ಉಷ್ಣವಾದ ಕಿರಣಗಳ ಮಾಲೆಯುಳ್ಳವನು ; ಸೂರ್ಯ : ಅನುಂ ಕಾಯೆನೆಂದಾದವೆ ಕರುಣಿಸಿದಂತೆಯ್ದೆ ಸಂಕೋಚಿಸಿ ತ್ರೊಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ಕಾಯ್ದ ಪೊನ್ನೀರ್ಗ ಎಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಚಿಮ್ಮಾಲಿಬಿಂಬಂ (ಕಾದಂಬ. ೩೭೪). [ ಸಂ. ತಿಗ್ಮರುಚಿಮ್ಮಾಲಿನ್ ]

**ತಿಗ್ಮರುಚಿ** (ನಾ). =ತಿಗ್ಮಕರ ೨: ಉದಯಗಿರಿಶೇಖರನಾದ ತಿಗ್ಮರುಚಿಮರೀಚಿನಿಕುರುಂಬಚುಂಬಿತಾಂಭೋಜವನಲಕ್ಷ್ಮಿಯೊಡನೆ ಲಬ್ಧಪ್ರಬೋಧೆಯಾಗೆ (ಸುಕುಮಾ. ೯-೧೧೫ ವ). [ ತಿಗ್ಮ + ರುಚಿ ]

**ತಿಗ್ಮರೋಚಿ** (ನಾ). = ತಿಗ್ಮಕರ ೨: ಇಭ್ಯಕುಲಾಂಬರ ತಿಗ್ಮರೋಚಿಯುಂ ತನಯುನನಂದೆ ಪೆತ್ತ್ರವೊಲದೇನನುರಾಗವುನಪ್ಪುಕೆಯ್ದುಳೊ (ಸುಕುಮಾ. ೧೧-೪). [ ತಿಗ್ಮ + ರೋಚಿ ]

**ತಿಗ್ಮಾಂಶು** (ನಾ). = ತಿಗ್ಮಕರ ೨ : "ತರಣಿ . . . ತಿಗ್ಮಾಂಶು ಮಾರ್ತಾಂಡ ನಕ್ಕುಂ" (ಮಂಗರಾ. ೧೦-೧) ; ಪ್ರತಾಪನಿಲಯಂ ತಿಗ್ಮಾಂಶುವಿಂ ಸತ್ಕಲಾಚತುರಂ ಚಂದ್ರನಿನಾದಪಂ ನಿನಗೆ ನೇತ್ರಾನಂದನಂ ಸಂದನಂ (ಪಂಪಾಭಾ. ೩-೯೧). [ ತಿಗ್ಮ + ಅಂಶು ]

**ತಿಗ್ಮಾರಿ** (ನಾ). ತೀಕ್ಷ್ಣವಾದ ಚಕ್ರವನ್ನುಳ್ಳವನು; ವಿಷ್ಣು: ಪುರುಷೋತ್ತಮಂಗೆ ಜಗದಾತ್ಮಕಂಗೆ ತಿಗ್ಮಾರಿಗೆ ನಮಿಸುವೆಂ (ವಿಷ್ಣುಪು. ೫-೧೬೫). [ ಸಂ. ತಿಗ್ಮಾರಿನ್ ]

**ತಿಚುಕ** (ನಾ). ಒಂದು ಬಗೆಯ ಹಕ್ಕಿ : ಚಿಲಿಮಿಲಿಗ ಕೆಂಬೂತ ತಿಚುಕ ಮರಕುಟಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ಕುರಂಗ. ೦೬-೩೭).' ಕೀಚಕ್ಕಿ' ಪಠಾ. [ ? ]

**ತಿಚಿ** (ನಾ). ಮೂರು ಋಕ್ಕುಗಳು : ಕೊಡೆ ಗುಡಿ ತೋರಣಂ . . . ತಿಚಿ ಮಂಗಳಗೀತನಾದಮೆಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜ ನಾ ನು ರಾಗಮಂ (ಕಾವ್ಯಾವ. ೬೩೨). [ <ಸಂ. ತೃಚ ]

**ತಿಜಣೆಯೂರ್** (ನಾ). ಒಂದು ಊರಿನ ಹೆಸರು : ಕಸ್ವಳ್ಳಿಯ ರಾಜಿಗದೊಳ್ತ × × ಚ್ಛನ್ ಕವಿತ್ತೂರನ್ ಪಸುವಳಿ ಧನುವಟ್ಟ ಕೊಸ್ಸು ಬಿಟ್ಟಾರ್ ಅವರ್ಗ್ಗೆ ಕೊಟ್ಟೊದು ತಿಜಣೆಯೂರ ನೀಡು (ಎಕ. IX(೩), ಹೊಸಕೋ. ೦೬೯-೪ ; ಸು. 900). [ ತಿಜಣ್$_{0}$ + ಊರ್ ]

**ತಿಜೂರಿ** 'ತಿಜೋರಿ' ನೋ.

**ತಿಜೂರಿವರ್ಗ** (ನಾ). ಶ್ರೀಮಂತರ ವರ್ಗ ; ಧನಿಕರ ಮಂಗಡ : ತಿಜೂರಿ ವರ್ಗವಿರುವ ತನಕ ಮಜೂರಿಯ ದುಃಖ ತಪ್ಪಿದ್ದಲ್ಲ (ಸಮುಜೀ. ೯೮೫). [ ತಿಜೂರಿ (<ತಿಜೋರಿ) + ವರ್ಗ ]

**ತಿಜೋರಿ, ತಿಜೂರಿ** (ನಾ). ೧. ಬೆಳ್ಳಿ, ಬಂಗಾರ, ಹಣ ಮೊದಲಾದ ಅಮೂಲ್ಯ ವಸ್ತುಗಳನ್ನಿಡುವ ಭದ್ರವಾದ ಕಬ್ಬಿಣದ ಪೆಟ್ಟಿಗೆ,-ಬೀರು : ಎಲ್ಲವನು ಎಣಿಸಿಟ್ಟ ಬೆಳ್ಳಿಯ ತಿಜೋರಿ (ನ ಲ ಮು. ೭೫-೪) ; ಈ ವಾರದೊಳಗಾಗಿ ರಕಮು ಬಡ್ಡಿ ಸಹಿತ ನನ್ನ ತಿಜೋರಿ ಸೇರಬೇಕು (ಹೊಸಬಿ. ೫೧) ; ಗುಮಾಸ್ತ ಅವರ ಎದುರಲ್ಲೇ ಇದ್ದ ದಪ್ಪಬಾಗಿಲಿನ ಭದ್ರಬೀಗದ ತಿಜೋರಿಯ ಬಾಗಿಲನ್ನು ತೆಗೆದ (ರಕ್ತರೂ. ೧೦೭) ; ನಾವು ಮುತ್ತು ರತ್ನಗಳನ್ನು ತಿಜೋರಿಯಲ್ಲಿ ಇಡುತ್ತಿದ್ದಂತೆ ಆಗ ಚಹದ ಪುಡಿಕೆಗಳನ್ನು ಭದ್ರವಾಗಿ ಇಡುತ್ತಿದ್ದರಂತೆ ! (ಪತ್ರಿಕಾ. ೦೩). **ತಿಜೂರಿ:** ೧. ತಿಜೂರಿಯೊಳಗಿನವು ಬೆಳ್ಳಿ ಬಂಗಾರ ಎಲ್ಲಾ ಒಯ್ದು ನಿಮ್ಮ ರಂಭಾಗೆ ಕೊಡಿರಿ (ತಿತಿಶ್ರೀ. ೬೯). ೨. ಭಂಡಾರ ; ಬೊಕ್ಕಸ ; ಖಜಾನೆ: ಸರಕಾರದ ತಿಜೂರಿಯನ್ನು ತುಂಬಲು ಮತ್ತೆ ಬೇರೆ ಕಂದಾಯವನ್ನು ಕೊಡಬೇಕೋ (ಸಮುಜೀ. ೨೩೭).

[ ←ಹಿಂ. ಮರಾ. ತಿಜೋರೀ. / ಇಂ. Treasury ]

**ತಿಟತಿಟ, ತಿಟಮಿಟ** (ನಾ). (ಉಕ) ಬಹಳ ಬಿಗಿಯಾದುದು ; ಹತ್ತೆಯಾದುದು : ಮಟಮಟ ಮಧ್ಯಾಹ್ನ ತಿಟತಿಟ ಕುಪ್ಪಸ (ಗರತಿ. ೬೮). **ತಿಟಮಿಟ:** ಗುಲಾಬಿಬಣ್ಣದ ಜರದ ಕಡ್ಡಿಯ ರವಕೆ ತಿಟಮಿಟಿಯಾಗಿ ಅಂಟಿಕೊಂಡಿದ್ದರಿಂದ (ಮುಕ್ತಿಮು. ೦೪) ; ಹೂವಿನ ಟೊಪ್ಪಿಗೆಯನ್ನು ಹಾಕಿಕೊಂಡು ತಿಟಮಿಟಿಯಾದ ಚಲ್ಲಣ ಧರಿಸಿದ ಹುಸೇನಿಯು . . . ಒಮ್ಮೆ ಗಟ್ಟಿಯಾಗಿ ಚೀರಿಸಿದನು (ರಂಗರೋ. ೧೪೦). [ ? ]

**ತಿಟಮಿಟ** 'ತಿಟತಿಟ' ನೋ.

**ತಿಟುವಟ** (ನಾ). ವಹಿವಾಟು (?) : ತೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರ ತೊಂಬೇ ಅಷ್ಟು (ಗಾದೆ). [ ? ]

**ತಿಟ್ಟು$_{1}$** 'ತಿಟ್ಟು$_{3}$' ನೋ.

**ತಿಟ್ಟು$_{2}$** (ನಾ). ೧. ಕುಂಚದಿಂದ ಬರೆದ ಚಿತ್ರ,-ನಕ್ಷೆ,-ಭಾವಚಿತ್ರ : " ತಿಟ್ಟುಮನೆ ತೀಡುವುದು " (ಕವಿಕಂ. ೨೩೧) ; ತದೀಯ ಸಿತಕೇತು ಪಟಂ ಬರೆದಿಟ್ಟ ತಿಟ್ಟದೊಪ್ಪುವ ಪಟದಂತೆ ನಿಶ್ಚಳಿತವಾದುದು ವೇಗ ಮರುತ್ಪ್ರಯೋಗದಿಂ (ಶಾಂತಿಪು. ೪-೭೦) ; ತಿಟ್ಟುವ ಲಕ್ಷಿಸುವುದು ಲೆಕ್ಕಣಿಕೆಯಲ್ಲವೆ ಆ ತಿಟ್ಟು ಲೆಕ್ಕಣಿಕೆಯ ಲಕ್ಷಿಸಬಹುದೇ (ಪ್ರೋಲಿಮಾ. ೧೨೭-೪೯೪) ; ಇದು ನವಯೌವನ ರಸಚಿತ್ರದ ತಿಟ್ಟಂ . . . ಎಂಬಂದದಿನೆಸೆದುದು ನಿಸದಮುವಳ ಕೊಡಗೂಸುತನಂ (ವರ್ಧಪು. ೯-೨೦) ; ಭಾರತಿ ಮನದಟ್ಟಿಯಿಂ ಬರೆವ ತಿಟ್ಟುಮನಲ್ ಪಟಚಿತ್ರವೊಂದು ಚಿತ್ರತೆವಡೆದಿರ್ದುದು (ಕು ಸು ಮಾ. ೧೨-೭೪); ಬಳಿಕಂಗೋದ್ಭವನಾ ತಿಟ್ಟುಮನತಿಚತುರರು ಬಿನ್ನಣಿಸುತೆ ಬರೆದು (ಜಯಂಕಾ. ೩-೧೩) ; ಪಟ್ಟಣವಾಸಿಗರೂರುಗರೊಡನೊಂದು ಬಟ್ಟೆಯೊಳಗೆ ಹೋಗುವಾಗ ಸಟ್ಟಾಟವಾಡುತ ಹೋಹಂತೆ ಮೋಹದ ತಿಟ್ಟುವಿಹುದು ( ಭರತ. ೫-೧೦೦ ). ೨. ಮಡಿಯಚ್ಚಿನ ಗೊಂಬೆ, - ಪುತ್ತಳಿ, - ಸಾಲಭಂಜಿಕೆ: ಮೃತ್ತಿಕೆಯ ತಿಟ್ಟದಿಂದ ಮಾಯಣದ ಕರುವಿಟ್ಟು ಆ ಘಟವ ಲಕ್ಷಿಸಲಿಕ್ಕಾಗಿ . . . ಮಧ್ಯದಲ್ಲಿ ನಿಂದ ತಿಟ್ಟದಂತೆ (ಪ್ರೋಲಿಮಾ. ೨೮೩-೫೫) ; ತಳಿರ್ಗಯ್ಯೊಳರರೆ ರಂಜಿಸುವ ಪೂಚೆಂಡಿನಿಂ ಸಿಂಗರಕ್ಕಿಟ್ಟ ತಿಟ್ಟಮೆಂಯಿಂದೆನಿಸಿ (ಪದ್ಮರಾ. ೫-೪೨). [ ದೇ.॥ ತೆಲು. ತಿಟ್ಟ ]

**ತಿಟ್ಟು$_{3}$** (ನಾ). ೧. ನಿಯಮ ; ಕಟ್ಟಳೆ ; ನಿಬಂಧನೆ; ಕಟ್ಟುಪಾಡು : ಈ ಬೇದಿಗೀತನಿಟ್ಟುದೆ ತಿಟ್ಟಂ (ಚಿಕವಿ. ೭-೧೨೫). ೨. ದೃಢನಿಶ್ಚಯ ; ದೃಢ ನಿರ್ಧಾರ : ನಿಮ್ಮ ಸುಭವ ನಿಮ್ಮ ತಿಟ್ಟವೆಂಬುದು ಪರಬೊಪ್ಪುವ ತುಡುಕಿ ತೂಗುತಿದೆ (ಭರತ. ೭೦-೫೮) ; ಕಟ್ಟದಿರೊಲು ಕಣ್ಗೆಸೆಯಲವನ ನೋಡಿ ತಿಟ್ಟುವ ನೆನೆದು ತಾನಿಂತು (ನಾಗಕು. ೩೨-೧೧೧). ೩. ಏರ್ಪಾಡು; ವ್ಯವಸ್ಥೆ ; ಅಚ್ಚುಕಟ್ಟು ; ಓರಣ : ನಿಷ್ಪಾಪವಿಧಿಗೆ ತಿಟ್ಟುವಾಗಿಟ್ಟ ದಾರಿ (ಪದ್ಮರಾ. ೬-೮೫) ; ನಿಮ್ಮ ತಂಗಿಯುದೇನ ಮಾಡಿದಳೆನಿತಲ್ಲ ನಮ್ಮ ಸೋದರನ ತಿಟ್ಟಗಳು ಹಮ್ಮನಾಡಿದಿರಿ ಸಾಕೆಂದು ರಾಣಿಯರಾಡಿ ತಮ್ಮೊಳಿಷ್ಪರ್ತಿ ಮಾಡಿದರು (ಭರತ. ೩೬.೪೫). ೪. ಹಂಚಿಕೆ ; ಉಪಾಯ ; ತಂತ್ರ : ಖಳರೆನಿಸುವಾ ಹುಲಿಯ ಭೃತ್ಯರು ಒಳಗೆ ತಾವೊಡಗೂಡಿ ಬಾದಾಗಳೆ ನರಿಯ ಕೆಡಿಸುವರೆ ತಿಟ್ಟವನೊಡ್ಡಿದರು (ತಿಮ್ಮಶಾಂ. ೪-೨೫). 'ದಿಟ್ಟು$_{2}$' ಪಠಾ. [ ದೇ.॥ ತಮಿ. ಮಲ. ತಿಟ್ಟ ]

**ತಿಟ್ಟನೆ** (ಅ). ರಭಸವಾಗಿ; ವೇಗವಾಗಿ: " ತಿಟ್ಟನೆ ಬಟ್ಟನೆಯೆಂಬಿವಜಿಗೊಳ್ ಭ್ರಮಾರ್ಥಂ " (ಶಬ್ದ. ೩೦೭) ; ಘೋರಸಂಸಾರಮಹೋಗ್ರಾರಣ್ಯದೊಳ್ ತಿಟ್ಟನೆ ತಿರಿದು ಕರಂ ಸೇದೆಗೆಟ್ಟಿರ್ದು (ಸುಕುಮಾ. ೧೨-೩) ; ಅಟ್ಟುಂಬುದಕ್ಕೆ ನೆಲಹೊಲನ ಕಾಣದೆ ತಿಟ್ಟನೆ ತಿರುಗಿ (ಪ್ರೋಲಿಮಾ. ೦೮೧-೭೭೯) ; ಮರುದ್ವಿಮಾನಪ್ರಕರಂ ತಿಟ್ಟನೆ ತಿರಿಯೆ (ಜಗವಿ. ೧೨-೪೫) ; ದೂರಿಸುತೆ ವ್ಯವಹಾರದಿಂದೆ ತಿಟ್ಟನೆ ತಿರುಗಿ (ಬಂಡೋರ. ಹ. ೫೦೪-೦೯) ; ಸುರಗಿರಿಯ ಬಿಲ್ಲಾಗಿ ಮಾಡಿ ನೆಲನಂ ತಾಳಿದುರಗನಂ ತಿರುವಾಗಿ ಬಲಿದು ಕಮಲಾಕ್ಷನಂ ಶರವಾಗಿ ತೊಟ್ಟು ತಿಟ್ಟನೆ ತಿರುಗುವಾ ಪುರವನಿಸುವಂದು ಸಂಧಾನಿಸಿ (ಸೌಂದಪು. ೬-೩೦). 'ತಿಜ್ಜನೆ' ಪಠಾ. [ ? + - ಅನೆ$_{2}$ ]

**ತಿಟ್ಟುಮಿಡು** 'ತಿಟ್ಟುವಿಡು' ನೋ.

**ತಿಟ್ಟುವಡು** (ಕ್ರಿ). ಓರಣವಾಗು; ಅಚ್ಚುಕಟ್ಟಾಗು : ಬಟ್ಟ ಪೊಂಬರಿವಾಣದಂಚಿನೊಳಗೆ ಸಾಲುಬಟ್ಟಲು ಕೆಲವು ಬಟ್ಟಲೊಳು ಇಟ್ಟ ಮಾಣಿಕದ ಸೋಟಿಗೆಗಳೆಸೆಯೆ ತಿಟ್ಟುವಟ್ಟು ತಿಂತಿಣಿಯೊಳೊಪ್ಪಿದನು (ಭರತ. ೪-೭೩).

[ ತಿಟ್ಟು$_{3}$ + ಪಡು$_{1}$ ]

**ತಿಟ್ಟವಣೆ** (ನಾ). ಹಂಚಿಕೆ ; ಉಪಾಯ (?) : ಧೃಷ್ಟದನುಜರ ಕೊಲುವರೆ ಉದು [ಒಂದು] ತಿಟ್ಟವಣೆಯು ಮನದೊಳಗೆ ಯೋಚಿಸುತ ಕಮಲಭವಾ (ದೇವೀಮ. ೧-೬೫). [ ತಿಟ್ಟು₃ + -ಅಣೆ₄ ]

**ತಿಟ್ಟವಿಕ್ಕು** (ಕ್ರಿ). ಚಿತ್ರುಬರೆ ; ಚಿತ್ರಿಸು : ತಿಟ್ಟವಿಕ್ಕಲು ತಿದ್ದಲರಿದೆನಿಸುವ ವ್ಯಯ ಕಟ್ಟಾಯವೇಱುವ ಪ್ರಾಯ ಕಟ್ಟಾಣಿ ಹೆಂಗಳೆಸೆದರು (ಭರತ. ೧೨-೫೯). [ ತಿಟ್ಟ₂ + ಇಕ್ಕು ]

**ತಿಟ್ಟವಿಡು, ತಿಟ್ಟಮಿಡು** (ಕ್ರಿ). ೧. = ತಿಟ್ಟವಿಕ್ಕು : " ತಿಟ್ಟವಿಡು– (ತಿಟ್ಟ + ಇಡು) ಚಿತ್ರಪ್ರಾರಂಭೇ " (ಕಮಧಾ) ; ಅಪಗತ ಪಾಕಸತ್ತ್ವ ಮಪಸಾರಿತಮಾರುತಮಾಗಿ ತಿಟ್ಟವಿಟ್ಟುಪವನದಂತುಟಾದುದು ಬನಂ ಜನಚಂದ್ರ ತಪಃಪ್ರಭಾವದಿಂ (ಶಾಂತಿಪು. ೧೧-೧೦೭) ; ನಗೆಮೊಗವನು ತಿಟ್ಟವಿಡುತಿರಲಾ ಕಾವ ನಗುತ ತನ್ನಿಕ್ಕುಚಾಪವನು ಮಿಗೆ ಜೇವಡೆಗೆಯ್ದು ಬಗೆಗೆ ಲೆಕ್ಕಣಿಕೆಯು ಬೆಗಡುಗೊಂಡೀಡಾಡಿದಳು (ಅಂಜನ. ៩-೧೧) ; ಪಳಿಕಿನ ವಿಶಾಲಪಟ್ಟದ ಮೇಲೆ ನೂಲುವೊಯ್ದು ತಿಟ್ಟವಿಟ್ಟಿಕ್ಕೆಗೆಯ್ದು (ಪುಷ್ಪಪು. ೧೪-೨೯ ವ) ; ಚಿಟ್ಟೆ ನೀ ನೆನವೊಳೆನ್ನೆಳವೆಯನಳಂಬಂ ತಿಟ್ಟವಿಡೆ ಕಣ್ಮಲೆವ್ವದವ್ಮುಯ ಕುಟುಂಬಂ (ಗಿರಿವಿಂ. ೧-೮). ೨. ಬೊಂಬೆಯನ್ನು ತಯಾರಿಸು ; ಗೊಂಬೆಯನ್ನು ಮಾಡು : ನೆಟ್ಟನೆ ಮೂಱು ಲೋಕದೊಳುಳ್ಳ ರೂಪಿನಿಂ ತಿಟ್ಟವಿಟ್ಟನೊ ಬದಿಯನಿಸಿ ಕಟ್ಟಾಣಿಮುತ್ತು ವಿಶಾಲಲೋಚನೆಯೆಂಬ ಪಟ್ಟದರಾಣಿಯಾ ನೃಪಗೆ (ನಾಗಕು. ೨-೮೮) ; ತಿಟ್ಟವಿಟ್ಟ ಪಾಪೆಯೆನೆ ಮೂಗುವಟ್ಟಿರ್ದರ್ (ರಾಮಾಶ್ವ. ೧೧-೧೯). ೩. ಚಿತ್ರದಂತೆ ಮೂಡು,–ಸ್ಪಷ್ಟವಾಗು : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟತು (ಪ್ರಭುಲೀ. ೬-೪). **ತಿಟ್ಟಮಿಡು** : ೧. ಬರೆಯಲೆಂದು ಬಟ್ಟಗೆವಲಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ(ಆದಿಪು. ೪-೬೩ವ); ಇದರಂದಕ್ಕಬ್ಬಜಂ ಕೂಡ ಬಟ್ಟಗೆಯಂ ತಿಟ್ಟಮಿಡಲ್ಕಿದೇನ್ನೆರದ (ಎಕ. V, ಅರಕೆ. ೯೯-೮ ; 1079) ; ಬಟ್ಟಗೆವಲಗೆಯೊಳಾಗಳೆ ದಿಟ್ಟಗೆ ನೇರ್ವಟ್ಟು ತೋಱೆ ನೆಟ್ಟನೆ ಭೂಪಂ ತಿಟ್ಟಮಿಡಲ್ ಬಗೆವುದು . . . ಅಂತು ಸಂಸಾರವೈಚಿತ್ರ್ಯಂ ತನ್ನ ಚಿತ್ತಭಿತ್ತಿಯೊಳ್ ತಿಟ್ಟಮಿಟ್ಟಂತು ನಿಲೆ (ಪಾರ್ಶ್ವಪು. ೪-೭೦ ವ). [ ತಿಟ್ಟ₂ + ಇಡು₁ ]

**ತಿಟ್ಟು₁** (ಕ್ರಿ). ೧. ತೆಗಳು ; ಬಯ್ಯು ; ನಿಂದಿಸು : " ತಿಟ್ಟು–ಭರ್ತ್ಸನೇ (ಬಯ್ಯು), ಉನ್ನಸಭೂಮೌ ಚ " (ಕಮಧಾ) ; ಸಂತರ್ ತಮ್ಮಂ ಖಳರ್ ಮನವಂದುತು ತಿಟ್ಟೆ ಮೂಗುವಟ್ಟಂತಿರ್ಪರ್ (ನೀತಿಮಂ. I, ೧೮೫) ; ಘಟ್ಟಿಗರಾಗಿಹ ತಿಟ್ಟದ ರಿಪುಗಳ ದಟ್ಟಿಸಿ ಕೊಲ್ಲುವ ಪಟ್ಟದ ಕತ್ತಿಯನೊಪ್ಪಿಸಿ ಕೊಳ್ಳೀಗ (ಹಮಜ. ೪೬) ; ಆ ಬ್ರಹ್ಮನ ತಿಟ್ಟ . . . ಸಿಗ್ಗಿನೊಳಿ ಸಾವತ್ರಲ್ಮನಂ ಮಾಡುವಂ (ಸಂಸಪ. ೦೫-೦೩); ನನ್ನ ತಿಟ್ಟಿ ನುಡಿದ ನುಡಿಯಾಗಳುಂ ನನ್ನ ಯೆರ್ದೆಯೊಳಗೆ ನೆಲೆಗೊಂಡಿರ್ಪುದು (ಸೌನಂದ. ೭-೧೮). ೨. ಕಡೆಗಣಿಸು ; ಕೀಳುಮಾಡು ; ಮೀಱು : ಘನತೇಜಂ ತಿಟ್ಟೆ ತಿಗ್ಮಾಂಶುವಂ (ಪುಷ್ಪಪು. ೪-೮೦).

[ದೇ.೫ ತಮಿ. ತೆಲು. ತಿಟ್ಟು]

**ತಿಟ್ಟು₂** (ನಾ). ಬಯ್ಗುಳು ; ತೆಗಳಿಕೆ ; ನಿಂದೆ : " ತಿಟ್ಟು–ಬೈಗುಳ್ " (ಕಮರ. ಪರಿ. ೨) ; " ತಿಟ್ಟಿನ ಬೈಗುಳೊಳ್ " (ಕರ್ಣಾನಿ. ೨೯) ; " ತಿಟ್ಟಿನ ತಾಂ ಬೈಗುಳಕ್ಕು " (ಕವಿಕಂ. ೦೩೨). [ <ತಿಟ್ಟು₁./ತಮಿ. ತಿಟ್ಟು ]

**ತಿಟ್ಟು₃, ಚಿಟ್ಟೆ₃, ತಿಂಟೆ, ತಿಂಡೆ, ತಿಟ್ಟ₁, ತಿಟ್ಟೆ, ತೀಂಟೈ, ದಿಂಟೆ, ದಿಂಡೆ₁, ದಿಡ್ಡೆ₁, ದೀಂಟ, ದೀಂಟೆ** (ನಾ). ೧. ಎತ್ತರವಾದ ಪ್ರದೇಶ ; ತೆವರು ; ದಿಬ್ಬ ; ದಿಣ್ಣೆ ; ಉನ್ನತಭೂಮಿ : ಸರಸಿಯ ನಡುವಣ ತಿಟ್ಟಿನ ಕಳಹಂಸನ ಕೆಲದೊಳ್ ಬೆಳೆದೊಱಗಿದ ಬೆಳರ್ದಾಮರೆಯಂತೆ (ಜಯನೃ. ೧೧-೩೫) ; ಭರದಿಂದಾ ಕೊಂಡದ ತಿಟ್ಟಿಗೆ ಬಂದು (ನೇಮಿಸಂ. ೮-೧೧೧); ಅವನ ಕೈಕಾಲು ಬಿಗಿದು ಕಟ್ಟಿ ಹರಿವ ಹೊಳೆಯೊಳ್ ಬಿಡಿಸಲಾ ದೈವವಶದಿನವನುರುಳ್ದೊಂದು ಮಳಲ ತಿಟ್ಟಿಗೆ ಸೇರಲು (ಕಮನಕಾ. ೫೧-೧೫); ಸೈನ್ಯ ಬರುವ ದಾರಿಯಲ್ಲಿ ಪಳ್ಳ ತಿಟ್ಟುಗಳ ಸಂಮಾಡಿ (ಸೌಗಂಧಿ. ೫೧-೧೫) ; ತೊಟ್ಟಿಲ ಹೊತ್ಕೊಂಡು ತೌರ ಬಣ್ಣಾ ಉಟ್ಕೊಂಡು . . . ತೌರೂರ ತಿಟ್ಹತ್ತಿ ನಿಂದು ನೋಡ್ಯಾಳೋ (ಹಳ್ಳಿಪ. ೯೨). ೨. ದಡ : ತೀರ ; ಅಂಚು : ನದಿಯೆರಡು ತಿಟ್ಟೊರಸಿರಲ್ (ಭೈರವೇ. ೩-೧೯೩). ೩. ಸಮೂಹ ; ರಾಶಿ : ಮೇಲ್ಮಟ್ಟುಗಳ ತಿಟ್ಟುಗಳ ಬಹು ಚಿತ್ರವತ್ರದಿಂದ (ಹರಿಂ. ೭-೭). **ಚಿಟ್ಟೆ₃** : ೪. (ಎತ್ತರವಾದ) ಜಗಲಿ,–ಕಟ್ಟೆ : ಊಟವಾದ ಮೇಲೆ ಒಟ್ಟೊಬ್ಬರಾಗಿ ಅಗ್ರಹಾರದ ಬ್ರಾಹ್ಮಣರು ಮನೆಯ ಚಿಟ್ಟೆಯ ಮೇಲೆ ನೆರೆಯುತ್ತಾರೆ (ಸಂಸ್ಕಾರ. ೩) : ನೀವು ಹಾಳೆಗಳನ್ನೆಲ್ಲಾ ಕಟ್ಟಿ, ಕೊಟ್ಟಿಗೆ ಚಿಟ್ಟೆಯ ಮೇಲೆ ಸೇರಿಸಿಡಿ (ಬಾಳಿವ್ರ. ೧೭೩). **ತಿಂಟೆ** : ೧. ಪರಿವ ಬಜ್ಜೆವೊನಲ್ಗಳುಮಂ ಮಣಲ ತಿಂಟೆಯ ನುಣ್ಪುಮಂ ದರಿಯ ನೆಟಲ ತಣ್ಪುಮಂ . . . ಅರ್ತಿಯೊಳ್ ನೋಡುತ್ತಂ ಬರೆ (ಬಂಹರಿ. ೩-೮ ವ) ; ಆ ನೀರ ತಡಿಯೊಳು ಸಣ್ಣವಪ್ಪ ಮಣಲ ತಿಂಟೆಯೊಳಂದಡಿ ವಜ್ಜೆಯಂ ಕಂಡಿದು ನಿಪರೀತಮೆಂದು (ಬಂಹರಿ. ೩-೮ ವ) ; ಮಳಲ ತಿಂಟೆಯೊಳು ನಳಿನಮಂದಿರದೊಳು ಪೊಳೆವ ಲತಾಭವನದೊಳು (ಅಂಜನ. ೧೫-೧೧). ೪. ಜೂದಿನ ತಿಂ[ಪಾಠಾಂ. ತೀಂ] ಟೆಯ ನೆಲಸಿರ್ಪ ತಾಣಂ (ಪಾರ್ಶ್ವಪು. ೩-೭೦) ; ಜೂಜಿನ ತಿಂಟೆಗೆ ಪೋಗಿ ಪ್ರಧಾನರಪ್ಪ ನಾನಾ ಮಂಡಳಿಕ ಸಾಮಂತರೊಡನೆ ಜೂಜಾಡಿ (ಪುಣ್ಯಾಸ್ರ. ೭-೩೬ ವ). **ತಿಂಡೆ** : ೧. ಸೀಯಮಂಗಲದ ಪೊಲ ಮೇರೆ ಇಸಾನದ ದೆಸ ನಡುಗಲ್ಲೆ ಅಮ್ಮಲ ತಿಣ್ಡೆಯಿನ್ನಂಕಾಯ್ ಪೇರೊಟ್ಟಿಯೆ (ಎಕ. X(8), ಚಿಕ್ಕಬ. ೦೦೬-೬೬ ; 850). **ತಿಟ್ಟ₁** : ೧. ಬೆಟ್ಟದಿಂದುಬ್ಬಿ ಭೂಮಿಗೆ ಸಿಂಧುನದಿ ಬೀಳ್ವ ತಿಟ್ಟದೊಳ್ಕೆಳಗೆ ಪ್ರತಿಮೆಯು ಬಿಟ್ಟ ಜಡೆಯ ಮೇಲೆ ಬೀಳ್ವ ಗಂಗಾಂಬುವ ನಿಟ್ಟಸಿದನು ನರನಾಥ (ಭರತ. ೩೬-೪೮). **೫.** ಎತ್ತರವಾದ ಪೀಠ,–ಆಸನ : ನಟ್ಟನಡುವಗಲ ಮಾರ್ತಾಂಡನೇಱಿದ ರಥದ ತಿಟ್ಟವೋ ಭೂಮಂಡಲದ ನಡುವೆ ಪೊಳೆವ ಪೊಂಬೆಟ್ಟವೋ (ಜಬಪು. ೩೭-೩೩). **೬.** ಮೇಲುಭಾಗ : ಮುಂಗಾರ ಸಿಡಿಲ ಮೊಟಗಂ ಕೇಳ್ದು ಸುರುಂಟು ಮಣಂಬೆಯ ತಿಟ್ಟದಂತೆ (ರಾಮಾಶ್ವ. ೩೫-೫). **ತಿಟ್ಟೆ** : ೧. ಈ ಚತುಸ್ಸೀಮೆಯ ವೊಳಗೆ ಉಳಂಥಾ ಬೆಟ್ಟು ತಿಟ್ಟೆ ಹಕ್ಕಲು ಹಡಲು ಹೊಲನು . . . ನಡದು ಬಹುದು (ಸೌಇಇ. IX-11, ೪೧೭-೯ ; 1377) : ನುಣ್ಮಳಲ್ದಿಟ್ಟೆ ಪೊಱವಾಱ ಬಟ್ಟ ಪೊಱವಾಱುಗಳ ಬಲನೆಮರ್ . . . ಬರುತಿರ್ದರು (ಜಬಪು. ೩೭-೪೨) ; ಹೊನಲೊಳು ಪರಿತಂದು ಮಳಲ ತಿಟ್ಟೆಯೊಳು ನಿಂದಾಗ (ಜ್ಞಾನಚ. ೧೭-೭). ೪. ಜೂದಿನ ತಿಟ್ಟೆಯಲ್ಲಿ ಬೆರೆವೆಣ್ಗಳ ಕೇರಿಗಳಲ್ಲಿ ನಿಚ್ಚಲುಂ . . . ಸಮಾಚರಿಸುತ್ತಮಿರ್ದನತ್ಯಾದರದಿಂದೆಸಲ್ ಖಳನವಂ (ಪುಣ್ಯಾಸ್ರ. ೪-೩೭) ; ನಿನಗೆ ದಣುವಾಗುತ್ತಿದೆ. ಇಲ್ಲಿ ತಿಟ್ಟೆಯ ಮೇಲೆ ಕುಳಿತುಕೊ (ನಿಷ್ಮಾಮ. ೮೭). ೭. (?) : ಕೋಗಿಲೆಯು ಬಾಗಿ [ಲ್ಗಾ]ಪಿನರಂತೆ ಪುಗಿಲ್ಪುಗಿಲೆನೆ ಉಯ್ಯಲು ಹಬ್ಬೆಯಾಡುವರಂತೆ ತಿಟ್ಟೆಯೊಳಾಡೆ ಹಿಂದೋಳಂ ಮಹದಾನಿಯ ಕೀರ್ತಿಯಂತೆಲ್ಲಾ ದೆಸೆಯೊಳ ಮೆಸೆಯ ಬಂದ ಸುಗ್ಗಿಯೊಳ್ (ಬಂಹರಿ. ೫-೫ ವ). **ತೀಂಟೈ** : ೪. ಮೇಲಿನ 'ತಿಂಟೆ' ಉಲ್ಲೇಖದ 'ಪಾರ್ಶ್ವಪು' ಪ್ರಯೋಗದ ಪಾಠಾಂತರವನ್ನು ನೋಡಿ. **ದಿಂಟೆ** : ೧. ದಿಂಟೆಗಳೊಳಂ ದೇಗುಲಂಗಳೊಳು ವಿಹಾರಂಗಳೊಳಂ ಇರ್ದು (ವಡ್ಡಾರಾ. ೧೨೩-೨೫) : ತೊಱೆಯೆರಡುತಡಿಯ ಬಳಿಯ ಮಳಲ ದಿಂಟೆಯಂತೆ (ಧರ್ಮಾಮೃ. ೧೩-೧೮೭) ; ನುಣ್ಮಣಲ ದಿಂಟೆಯೊಳು ತಳಿರ ಹಸೆಯಂ ಹಾಸಿ (ಚನ್ನರ. ೮೨-೩) ; ಇಂತೀರೊಡು ಗೋಂಟಿಯ ಸನಿಯದ ದಿಂಟೆಯೊಳ್ (ಚಿಕವಿ. ೫-೩೪). **ದಿಂಡೆ₁** : ೧. ಪಡುವಯ್ನಡದು . . . ತೆಂಕೈ ದಿಣ್ಡೆಯಿನ್ ಪಡುವಯ್ಯೋಡಿ ಪೋದ ಒಟ್ಟಿ (ಎಕ. X(8), ಚಿಕ್ಕಬ. ೬೬-೧೮ ; ಸು. 850); ಖಂಡೆಯವನು ಜಡಿದು

. . . ತುಂಡಿಸಿ ಬೇತಾಳಶಿರವ ದಿಂಡೆಯು ಮರಕೆ ಕಟ್ಟಲು (ಹಮಜ. ೩-೭೬). ೪. ಬೀದಿವೀದಿಗಳೊಳ್ ಜೂಜಿನ ದಿಂಡೆಯೊಳ್ . . . ಅವಿನೀತರ್ ನೀತಿಗೆಟ್ಟಾಡುವರ್ (ಸುಕುಮಾ. ೨-೬). ದಿಡ್ಡಿ$_1$ : ೧. ಬಂದೊಂದು ದಿಡ್ಡಿಯನೇಱ ತಾವೆಲ್ಲರು ನಿಂದು ನೋಡಿದರು ಪಾಳಯವ (ನಾಗಕು. ೧೬-೩೨). ದೀಂಟು : ೧. ದೀಂಟು [ಪಾಠಾಂ. ಟಿ] ಗುಳಿಗಳನಱಿಯ ದೇಳುತ್ತೆ ಬೀಳುತ್ತೆ . . . ಅಂಬಿಕಾಭವನಮಂ ಸಾರ್ದನು (ಜೈಮಿಭಾ. ೩೦-೫೪). ದೀಂಟೆ : ೧. ತೊಱೆಯ ಮಣಲ ದೀಂಟೆಗಳ ನುಣ್ಪುಮಂ (ಬಂಹರಿ. ೨-೪೨ ವ). ೪. ಕೇಸರಿಯ ದಾಡೆಯ ಜೂದಿನ ದೀಂಟೆ [ಪಾಠಾಂ. ದಿಂಟೆ] ಪೀಲಿಯಿಂ ಪೊದೆಸಿದ ಪಂದರಾಳಿಯಲರಾನೆಯ ಮುತ್ತಿನ ರಾಸಿ (ಅರ್ಧನೇ. ೩-೫೦).

[ ದೇ.॥ ತಮಿ. ತಿಟ್ಟು, ತಿಟ್ಟೈ ; ಮಲ. ತಿಟ್ಟು, ತಿಟ್ಟ ; ತುಳು. ತಿಟ್ಟೆ, ಚಿಟ್ಟೆ ; ತೆಲು. ತಿಟ್ಟ ]

**ತಿಟ್ಟುವಾಯ್** (ನಾ). ತೆಗಳುವ ಬಾಯಿ ; ಪರದೂಷಣೆಯಲ್ಲಿ ಆಸಕ್ತಿಯುಳ್ಳ ಬಾಯಿ : ತಿಟ್ಟುವಾಯ ಅಶ್ಲೀಲನೊ, ಕಯ್ಗನಿಸಿನ ಶಸ್ತ್ರಾಡಂಬರನೊ–ಆವುದಕ್ಕೂ ಹೇಸದ ಪಿಶಾಚವತಾರನೇ ಆಗಿರು (ಚಿಟ್ಟಿಅ. ೧೭೫-೩). [ ತಿಟ್ಟು$_1$ + ಬಾಯ್ ]

**ತಿಟ್ಟೆ** 'ತಿಟ್ಟು$_3$' ನೋ.

**ತಿಡ್ಡ** 'ತಿಗಟ' ನೋ.

**ತಿಣ** (ನಾ). ಹುಲ್ಲು ; ತೃಣ : "ತೃಣ–ತಿಣ" (ಶಮದ. ೨೬೮ಪ್ರಯೋ) : "ತಿಣವೆಂದು ತೃಣ" (ಕಶಸಾ. ೩೦-೬೬೮) ; "ತೃಣ–ತಿಣ" (ಶಬ್ದಾನು. ೦೫೮ ಪ್ರಯೋ). 'ತಿಣಂಗಿಱು' ಪರಾ. [ <ಸಂ. ತೃಣ ]

**ತಿಣಂಗಿಱು** (ಕ್ರಿ). ಹುಲ್ಲಿಗೆ ಸಮವಾಗಿ ಭಾವಿಸು ; ಅತಿ ನಿಕೃಷ್ಟವಾಗಿ ಕಾಣು : ನಿಸದದಿಂದವನಂ ತಿಣಂಗೆತ್ತು ಬಿಟ್ಟು (ಪಾಶೋಪು. ೯-೧೬೯).

[ ತಿಣ + ಗಿಱು ]

**ತಿಣಕು** 'ತಿಣುಕು$_1$' ನೋ.

**ತಿಣಾತುರ್ಯ** (ನಾ). ಆಹಾರದಲ್ಲಿ ಆಸಕ್ತಿ (?) : ಹಸಿವು ತೃಷೆವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧವಿರಹಿತನಾಗಿ ಗುಣಾವಗುಣವ ವಿಚಾರಿಸದೆ ತಿಣಾತುರ್ಯ ಮುಕ್ತ್ಯಾತುರ್ಯ ಸ್ವಯಿಶ್ವಾತುರ್ಯವೆಂಬ ವುಂಬಲಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದ ನಿಂದೆಗೋಡದ ಉಭಯವನೇನೆಂದು ಅಱಿಯದ (ಷಡಗೋ. ೦೦೩-೦೨೫). [ ? ]

**ತಿಣಿ$_1$** (ಕ್ರಿ). ೧. ಒಟ್ಟಿಗೆ ಸೇರು ; ಒಂದುಗೂಡು ; ಬೆರೆ ; ಗುಂಪುಗೂಡು : "ತಿಣಿ–ಸಂಕೀರ್ಣೇ (ಬೆರಸು)" (ಶಮಧಾ). ೨. ಚಿಂತೆಗೊಳಗಾಗು ; ಕಳವಳಿಸು (?) : ದಣಂದಣರನೆ ಪೊಯ್ವ ಮಹಾನಿಸ್ಸಾಣದ ಬಲ್ದನಿಯಂ ಕೇಳ್ದು ಎಣಿಸಿದರೆರ್ದೆಗೆಟ್ಟರ್ ಭಯಯುಕ್ತರ್ ಪೆಣನಾದರ್ ಪೆಂಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕ ಬಲದವರು (ಜಯುಕಾ. ೬-೦). ೩. (?) : ತಣಿಪಾಶೆ ಮಾತನಾಡುತ ಮಣಿವರು ಮೊದಲೊಳಗೆ ಬರಲು ವೈದ್ಯನ ಜನರುಂ ತಿಣಿವರು . . . ತಣಿಯಾಗಲು ನೋಡರವನ ಧನಭಯದಿಂದಂ (ನೀತಿಸಾ. ೮೪೨).

[ ದೇ.॥ ತಮಿ. ತಿಣಿ, ತಿಳ್ಳಿ ]

**ತಿಣಿ$_2$** (ನಾ). ಗುಂಪು ; ಸಮೂಹ : ಬಡವ ಬಲ್ಲಿದ ಬುಧ ಯಾಚಕರೆನ್ನದೆ ತಡಗ ತಡಗ ಜವುಳಿಗಳ ತೊಡವು ಪೆಟ್ಟಿಗೆ ಪೆಟ್ಟಿಗೆಗಳ ತಿಣಿಯಿತ್ತು ಒಡನೆ ಶರ್ಕರೆಯ ತಿದ್ದಿಸಿದ (ಜ್ಞಾನಚ. ೩೬-೦೩೪). 'ತಿಂತಿಣಿ$_1$' ಪರಾ.

[ <ತಿಣ್ಣ$_1$ ]

**ತಿಣಿಕಿಸು** (ಕ್ರಿ). ಒದ್ದಾಡುವಂತೆ ಮಾಡು ; ಕಷ್ಟಪಡಿಸು ; ಬಳಲಿಸು : ಟಿಪ್ಪುವನು ತಿಣಿಕಿಸುತ ಕಾದಾಡತೊಡಗಿದರು (ವಿಜಧ. ೭೩).

[ ತಿಣಿಕು$_1$ (<ತಿಣುಕು$_1$) + – ಇಸು$_3$ ]

**ತಿಣಿಕು$_1$** 'ತಿಣುಕು$_1$' ನೋ.

**ತಿಣಿಕು$_2$** 'ತಿಣುಕು$_2$' ನೋ.

**ತಿಣಿವು** (ನಾ). (?) : ಕಾಲ್ಗಳ ಕಪ್ಗಳ ತುರಗದ ಕಾಲ್ಗಳ ತಿಣಿವುಗಳೊಳಲ್ಲಿ ಬಂಚಿಸುತಟ್ಟಿಗಂ ಗೆಲ್ಗುಮನೆ ನೆಗಟ್ದಿ ಮಾರ್ಗ್ಗದೆ ಗೆಲ್ಗುಮೆ ಪಿಣಿದಲ್ಲಿ ಕೀರ್ತಿನಾರಾಯಣನಂ (ಎಕ. II, ೧೩೩-೧೪೭ ; 982). [ ? ]

**ತಿಣುಕಾಟ** (ನಾ). ತಿಣುಕುವಿಕೆ ; ಒದ್ದಾಟ ; ಕಷ್ಟಪಡುವುದು : (ಕ).

[ ತಿಣುಕು$_1$ + ಆಟ ]

**ತಿಣುಕಾಡು** (ಕ್ರಿ). ಬಹಳ ಕಷ್ಟಪಡು,–ಒದ್ದಾಡು : ಆಮೇಲೆ ಕರ್ಣನ ಕವಚವನ್ನು ಸೀಳಿ ಹೊಗಳುಗೊಂಡ ಸೂರ್ಯಕುಮಾರನೂ ತಿಣುಕಾಡುವಂತೆ ಬಾಣಪ್ರಯೋಗವನ್ನು ಮಾಡಿದನು (ವ್ಯಾಸಜಿ. ೩೯೨).

[ ತಿಣುಕು$_1$ + ಆಡು$_1$ ]

**ತಿಣುಕು$_1$, ತಿಣಕು, ತಿಣಿಕು$_1$** (ಕ್ರಿ). ೧. ಭಾರವನ್ನಾಗಲಿ, ನೋವನ್ನಾಗಲಿ ತಾಳಲಾರದೆ ಒದ್ದಾಡು,– ಆಯಾಸಪಡು ; ಮುಲುಕು : ಕಣ್ ತುಮುಟಿ ಪೆರ್ಚಿಡೆಯಿಂ ಮಣಿ ಸೂಸೆ ಬೇಸಱಿಂ ತಿಣುಕಿದನಾನಲುವ್ಮಳಿಸಿ ಶೇಷನಶೇಷ ಮಹೀವಿಭಾಗಮಂ (ಶಂಪಧಾ. ೯-೯೯) ; ತಿಣು [ಪಾಠಾಂ. ಣಿ] ಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುವ್ಯಾಅ. ೧-೧೬) ; ಅನಿಲಜ . . . ಬೊಬ್ಬಿಱಿದು ತಿವಿದನು ತಿಣುಕಲಿ ಸುರೇಂದ್ರ (ತೊರರಾ. ೬-೨೭-೩೯) ; ಧರಣಿಯ ಪೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಇಂಚಾಹ. ೧೦೪-೬). ೨. ಅಪಾನವಾಯುವನ್ನು ಬಿಡು ; ಹೂಸು ; ಹುರಿಕೆಬಿಡು : "ತಿಣುಕು (ತಿಣಕು)–ಅಪಾನವಾಯೌ" (ಶಮಧಾ). ತಿಣಕು : ೧. ಮಲಗಿರುವ ಹಾವನ್ನು ಕೆಣಕಬೇಡ ಕಚ್ಚಿ ವಿಷ ಕಾರಿದರೆ ತಿಣಕಬೇಡ (ನಾದಲೀ. ೬೫-೦೨) ; ರಾಯರ ಹೆಂಡತಿ ಹೆತ್ತರೆ ಊರೆಲ್ಲ ತಿಣಕಬೇಕೋ ? (ಗಾದ). ತಿಣಿಕು$_1$ : ೧. ಎಲ್ಲಿ ಇಣಿಕಿದರೂ, ತಿಣಿಕಿ ನೋಡಿದರು ತನ್ನಸಗಲಲೆಡೆಯಿಲ್ಲ ಎಂದರಿದು . . . ನಿಶ್ಚಿಂತ ನಿವಾಸಿಯಾಗಿದ್ದುದೇ ಶರಣನ ಸುಜ್ಞಾನ (ಮೋಳಿಮಾ. ೪ ಪ್ರಸ್ತಾವನೆ).

[ ದೇ.॥ ತುಳು. ತೀಂಕು ; ತೆಲು. ತಿನುಕು ; ಮಲ್ತೊ. ತಿಂಕ್ ]

**ತಿಣುಕು$_2$, ತಿಣಿಕು$_2$** (ನಾ). ಅತಿಕಷ್ಟ ; ತೊಂದರೆ ; ಹೆಣಗಾಟ : ಗೆಡೆವಚ್ಚುಗೊಂಡು ಪಾಂಡವರನಕಾರಣಂ ಕೆಣಕಿದೀ ಪೊಸ ಪೊಟ್ಟುಱೊಳಾದ ಕಿಚ್ಚು ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ಪುತ್ತ ಪೋಕುಮೇ (ಶಂಪಭಾ. ೨-೮೭) ; ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರೀಗಳ್ ಪೋದೊಡಮೇನ್ ತಿಣುಕಾಗದೆ ಪೋದುಪುದೇ ನಮ್ಮ ನೃಪತಿಗವು ತವುದಲೆಯೊಳ್ (ಶಂಪಭಾ. ೬-೧೮). ತಿಣಿಕು$_2$ : ಉತ್ತರಭರತದೊಳಾದಾಪತ್ತಂ ನೀನಱಿಯೆಯಕ್ಕುಮಿತಿಂ ಬಲಮಂ ಮುತ್ತಿ ಚಿಲಾತಾವರ್ತರ್ ಸುತ್ತಲುಮೋಸಾಡಿ ಪಿರಿದು ತಿಣಿಕಂ ತಂದರ್ (ಆದಿಪು. ೧೪-೭೦). [ <ತಿಣುಕು$_1$ ]

**ತಿಣುಱು** (ಕ್ರಿ). ಕಟ್ಟು ; ನಿಲ್ಲು ; ತಡೆ : ಮೂಱು ಝಾವದ ಶೂಲೆಗೆ ಹೊಟ್ಟೆ ಬಾವುದು ನಿಲಲಾಱದೆ ನಡುಗುವುದು. ವಿಾಱಿದರೆ ಬೀಳುವುದು ಮೂತ್ರ ತಿಣುಱುವುದು (ಅಶ್ವವೈ. ೧೧-೨೫ ಟೀಕು) : ಕೆಡವಡೆ ಮೇಳ್ವಡಂ ಪಡುವಡಂ ಭರಣಂ ತಿಣುಱುತ್ತಮಿಪ್ಪಡಂ ಚರಣವನಾವಗಂ ಬಡಿವಡಂ ಪೆರತೆನಿತು ಶೂಲೆ ತೋಱಿತೆಂದಱಿ (ಅಶ್ವವೈ. ೧೧-೯೭).

[ ದೇ.॥ ತಮಿ. ತಿಣಱು ]

**ತಿಣ್ಣ** (ನಾ). ೧. ಒಜ್ಜೆ ; ಹೊರೆ ; ಭಾರ : "ಬಿಣ್ಪೆಂದುಂ ತಿಣ್ಣಮೆಂದುಂ ಭಾರಂ" (ಕಶಸಾ. ೨೭-೫೭೭) ; "ಭಾರಮದು ತಿಣ್ಣ ಬಿಣ್ಪುಂ" (ಕವಿಕಂ. ೨೨೫) ; ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೇಂ (ಶಂಪಭಾ. ೩-೪೭) ; ಮೇದಿನಿಯು ತಿಣ್ಣವನಿಳುಹಲೋಸುಗರ ಆಹವದೊಳರ್ಜುನನ ರಥದೊಳು

ವಾಹಕನು ತಾನಾಗಿ (ಕುಮಾ.ಭೀ. ೩-೯೩) ; ಭೂಮಿಯು ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ತೊರಾ. ೬-೨-೨೦) ; ಸಣ್ಣವನೆನಬೇಡ ಹರಿ ತನ್ನ ಪೆತ್ತವಳಣ್ಣನ ಮಡುಹಿ ಮೇದಿನಿಯ ತಿಣ್ಣವನಿಳುಹಿದ (ಮೋಹತ. ೧೨-೧೬) ; ಪೆಣ್ಣವದಿಂ ಪಾತಕದಿನಿತೊಂದು ತಿಣ್ಣವುಂ ಪೊಱುವೊಡೆಂದೇಂ ಬಿದಿ ಮಾಡಿದನೇ (ರಾಮಾಶ್ವ. ೧೩-೨೬). ೨. ದೊಡ್ಡದು ; ಸ್ಥೂಲವಾದುದು ; ದಪ್ಪವಾದುದು ; ತೋರವಾದುದು : ಸಣ್ಣಂ ನಡು ತಿಣ್ಣಂ ಮೊಲೆ . . . ಬಣ್ಣಿಸಲರಿದಬ್ಜಜಂಗವಾಕೆಯ ರೂಪಂ (ಕಾವ್ಯಸಾ. ೨೮೧ ಕೊದ್ರಸ) ; ತಿಣ್ಣವಾದಾನೆಸಮ್ಮದ ಹೊದಿಕೆಯಿಂ . . . ವಿಶ್ವನಾಥು ಪ್ರಸನ್ನನಾದು (ಪದ್ಮರಾ. ೭-೩೫). ೩. ಅಧಿಕವಾದುದು ; ಹೆಚ್ಚಾದುದು ; ಆಧಿಕ್ಯ : ಬಱುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ಯಾಗಳ್ (ಕಾದಂಪೂ. ೧೯೭) : ನಿಮಗಂ ಪುಣ್ಣ ಬೇನೆ ತಿಣ್ಣಮದಱಿಂ ಮೇಲೆ ಕ್ಷುಧಾಪೀಡೆಯಾದುದಪ್ಪೊಡೆ ಶರೀರವುಂ ಸಂಹರಿಸಲ್ಬಾರದು (ಪಂಚತಂ. ೧೪೪-೬) ; ನಿನ್ನ ಗುರು ಹೇಳನೇ ತನ್ನ ಸುತರಳಲ ತಿಣ್ಣವುಂ (ಹಡಕಾ. ೮-೯) ; ಮುಚ್ಚುಮಱೆಯೇ ಕಣ್ಣ ತಿಣ್ಣದ ಕಿಚ್ಚುದೋಱದೆ ನಮಗೆ (ತೊರಾ. ೬-೨-೩೨) ; ದುಃಖದ ತಿಣ್ಣವೆನಗಾಯಿತು (ನಿಭಾಗ. ೭-೪-೪). ೪. ತುಂಬಿದುದು ; ಪೂರ್ಣವಾದುದು ; ಮುಂದಣ್ಕೊಪ್ಪುವ ಪಳದಿಯ ಬಣ್ಣಂ ಸಂದಿರ್ಪುದು ಕರ್ಣಿಕೆಯದು ತಿಣ್ಣಂ (ಹಾಲಾಸ್ಯ. ೧-೧-೨೦ ರಗಳೆ). ೫. ಶ್ರೇಷ್ಠವಾದುದು ; ಹಿರಿಮೆ ; ದೊಡ್ಡತನ : ತಿಣ್ಣವೆನಿಸುವ ಭಕ್ತಿ ಕಣ್ಬಿಱಿದ ಪರಿಯೊಳಿರೆ (ಕಾರಿರ. ದೀ. ೨೮೯-೨೨) ; ನೇರಿಳೆರಸದಿಂದ ತಿಣ್ಣವೆಂದೆನಿಸಿದ ನಿಸ್ಸಂಗರಾಗಶೇಷವನು ತಳೆದ ಆ ಗೋದೆಯ ಕೂಲದೊಳು (ಗಾಥಾಸ. ೪೯-೮೯). ೬. ಗಟ್ಟಿ ; ಬಿರುಸಾದುದು ; ದೃಢವಾದುದು : ಕೊಂಬಿಟ್ಟಿದ ಮರದಿಂದಗ್ಗಳಂ ತಿಣ್ಣಮಾದಂ (ಶಮದ. ೨೪೨ ಪ್ರಯೋ). ೭. ಕಷ್ಟ ; ಕಠಿನವಾದುದು ; ಪ್ರಯಾಸಕರವಾದುದಂ : ಅಣ್ಣನಾಜ್ಞಾಭಂಗಕಿದು ತಾ ತಿಣ್ಣವೀ ದೇವಿಯರ ನುಡಿ (ತೊರಾ. ೩-೯-೧೩) ; ಸಣ್ಣನಡುವಿನ ಚೆಲ್ವಿನತ್ತಿಗೆಯ ವಂಗಿದಿರ್ನಡೆದು ಮನ್ಮಥಯುದ್ಧಕೆ ತಿಣ್ಣವೆನ್ನದೆ ನಿಂದಳ್ (ಭಾವಚಿಂ. ೬-೨೪); ಲಜ್ಜಿಸುವ ತಿಣ್ಣಮಂ ಬಿಡಿಸಿ . . . ಪ್ರಚ್ಛನ್ನ ಸಂಭೋಗಿಗಳ್ ಕಣ್ಗೆಸೆದರು (ಶಿಬಪು. ೧೦-೫೯) : ಹೀಗೆ ಮೂರುವಿಧದ ಮುನಿಷಿಗಳನ್ನು ಅವರ ಯೋಗ್ಯತಾನುಸಾರವಾದ ಸಂಬಳವನ್ನು ಕೊಡುವುದು ತಿಣ್ಣವಾಗಿತ್ತು (ಮುಸುಗ. ೩೫). ೮. ಪ್ರಬಲನಾದವನು ; ಬಲಿಷ್ಠ ; ಶಕ್ತಿಸಂಪನ್ನ : ಕಣ್ಣಿತ್ತು ನುತಿಗೈದು ಕಣ್ಣ ಪಡೆದು ಮತ್ತಾ ಕಣ್ಣಿತ್ತು ಬಳಿಕದ ಪಡೆದು ಕಣ್ಣ ಮೂಗಳವ ಮುಕ್ಕಣ್ಣನಿಂ ಪಡೆದನು ತಿಣ್ಣನೀತನಿಗೆ ತೋಡಹುದೆ (ಭೈರವೇ. ೪-೭೫).

[ ದೇ.॥ ತಮಿ. ತಿಣ್ಣ ; ಮಲ. ತಿಣ್ಣ, ತಿಣ್. / ಪ್ರಾ. ತಿಣ್ಹ. / ಸಂ.ತೀಕ್ಷ್ಣ ]

**ತಿಣ್ಣಂ** (ಅ). ೧. ಹೆಚ್ಚಾಗಿ ; ಅಧಿಕವಾಗಿ ; ವಿಶೇಷವಾಗಿ : ಮುನ್ನಂ ರಘುಕುಲದಹನೋಗ್ರೇಷುವಿಂ ಕಾಯ್ದು ತಿಣ್ಣಂ ಕುದಿಗೊಂಡಟ್ಟಿತ್ತು (ಎಕ. X, ಮುಳಬಾ. ೩೮-೧೩ ; ಸು. ೨೨೦) : ಎಣ್ಣೆಯಂ ತಿಣ್ಣಮೆಱೆಯದಿರ್ (ವಡ್ಡಾರಾ. ೭೭-೩) ; ನಿಜವಿಜಯಸಿಂಧುರಮುಮಂ ತಿಣ್ಣಂ ನೂಂಕಲುಮವುಂಕಲುಂ ಬೆಸಸಿ (ಆದಿಪು. ೧೪-೯೪ ವ) ; ಪೊಱಮುಯ್ವಂತಾಗೆ ತಿಣ್ಣಂ ತೆಗೆನೆಱೆದಿಸೆ . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೪-೪೨) ; ಕಣ್ಣಂ ರಸನೆಯನೆರ್ದೆಯಂ ತಿಣ್ಣಂ ದಣಿಯಿಸುವ ಪಲವು ಪೂವಿಂ ಕಾಯಿಂ ಪಣ್ಣಿಂದೆಸೆವಿಮ್ಮಾವಿರೆ ಪಣ್ಣಾವಿನಂ ಬಾರ್ತೆಯಿಲ್ಲದೀ ನೇಱಿಲೊಳೇಂ (ಶಬ್ದಾನು. ೪೭೪ ವ್ಯಾಖ್ಯಾ). ೨. ದಟ್ಟವಾಗಿ ; ನಿಬಿಡವಾಗಿ: ಪಡಿಗಳನಮರ್ಚೆ ಬಿಲ್ಲುಂ ಕುದುರೆಯುಂ ಕಾಲಾಳುಂ ನಾಯ್ಗಳುಮಂ ತಿಣ್ಣಮಿರಿಸಿ (ಪಂಪಭಾ. ೫-೪೭ ವ) ; ಸ್ನೇಹಾಭ್ಯಂಗಮುಮನುಳ್ಳ ಮೆಯ್ಯನೆ ರಜಂ ತಿಣ್ಣಂ ತಗುಳ್ವಂತೆ (ಜೀವಸಂ. ೧೪೦-೧೪) ; ತಿಣ್ಣಮೆನಲಂಶುಪರಿಯಲ್ನುಣ್ಣಿಸಿದೆಳೆಸಂಜೆಗೆಂಪದಂಟಿರಲೆಸೆವಕ್ಷುಣ್ಣರುಚಿವಡೆದುಡುಗಳೆನೆ ಪೊಣ್ಣುಗುರ್ಗಳೆವೆಸೆದುವಾಂತು ಲಾಕ್ಷಾರಸಮುಂ (ಉದ್ಭಟ. ೫-೫೩). ೩. ರಭಸವಾಗಿ ; ತೀವ್ರವಾಗಿ ; ವೇಗವಾಗಿ : ಅನಿಬರುಂ ಬಾಳ್ಗಿ[ಟ್ಟಿ] ಮೇಲ್ವಾಯ್ದೊಡರ್ಬಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೋರ್ಸೂಱೊಳೆಚ್ಚಾಗಳ್ (ಪಂಪಭಾ. ೧೨-೧೪೫). ೪. ಸ್ಥಿರವಾಗಿ ; ಚಾಂಚಲ್ಯವಿಲ್ಲದೆ : ಚಂಚಲನಾಗದೆ ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ (ಧರ್ಮಾಮೃ. ೭-೪೪) ; ಅಣ್ಣನ ಮಾತಂ ಮನದೊಳ್ ತಿಣ್ಣಂ ತಳೆದು (ಯಶೋಚ. ೧-೫೦). ೫. ಗಟ್ಟಿಯಾಗಿ ; ಬಿಗಿಯಾಗಿ ; ಭದ್ರವಾಗಿ : ಕಣ್ಣಂ ತಿಣ್ಣಂ ಮುಚ್ಚಿಕೊಂಡಿರ್ಪ ಕಾರಣಮಾವುದು (ಪಂಚತಂ. ೧೭೩-೧೭).

**ತಿಣ್ಣಮಾಗು** = ೧. ಭಾರವಾಗಂ: ನಿನಗೆ ನೀರ್ತೀವಿರ್ದ ಪೊಂಗಳಸಮಿದು ತಿಣ್ಣಮಾಗದು (ಜ್ಞಮಿಭಾ. ೩೪-೨). ೨. ಅತಿಶಯವಾಗು ; ಹೆಚ್ಚಾಗು : ವಿಷಮುವಿಷಸದೃಶವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು (ಸುಕುಮಾ. ೮-೩೬) ; ಆಕೆಯ ಮೇಲೆ ಮೋಹಮುಂ ಸ್ನೇಹಮುಂ ತಿಣ್ಣಮಾಗೆ (ಧರ್ಮಾಮೃ. ೨-೧೧೨) ; ಪಸಿವು ನೀರಟ್ಕೆಯುಂ ತಿಣ್ಣಮಾಗಲ್ (ನೇಮಿಪು. ೧೩-೫೫ ವ). ೩. ಸಾಂದ್ರವಾಗು ; ನಿಬಿಡವಾಗು : ತಾಳುಂತಟ್ಟುಂ ಪೊಯ್ಕ ಕಡಿಖಂಡಮಾದ ಮೆಯ್ಯುಂ . . . ದೆಸೆದೆಸೆಗೆ ತಿಣ್ಣಮಾಗೆ ಸೂಸುವ ಕಣ್ಣಾಲಿಗಳುಂ (ಪಂಪರಾಮಾ. ೧೩-೫೪ ವ) ; ಮಂಗಳವಾಡದ ಮಹಾಶಿವಲಿಂಗ ದಂಷ್ಟ್ರಗಳೊಳಂ . . . ನುಣ್ಣೆಸಳ್ಗಳು ತಿಣ್ಣಮಾಗಿ ತೀವಿರೆ (ಬಸರ. ೬-೮೫).

[ <ತಿಣ್ಣ ]

**ತಿಣ್ಣಂಬೆಱು** (ಕ್ರಿ). ಆಧಿಕ್ಯವನ್ನು ಹೊಂದು ; ಹೆಚ್ಚಾಗು : ಪೆಣ್ಣಂಬೆಯೆಱಿಂಕೆಯ ಪೊಯಿಲಿಂದು ತಿಣ್ಣಂಬೆತ್ತಣ್ಮುವ ನೀರ್ವನಿಯಿಂ ಬಣ್ಣಂಬಡೆಯೆ . . . ಸುಳಿಗೆಲರಾ ಬನದೊಳ್ (ಉದ್ಯದೀ. ೨-೨೧).

[ ತಿಣ್ಣ + ಪೆಱು$_1$ ]

**ತಿಣ್ಣಗೆಡಿಸು** (ಕ್ರಿ). ೧. ಭಾರವನ್ನು ತಗ್ಗಿಸು ; ಹೊರೆಯಿಳಿಸು : ಭೂಮಿಯ ತಿಣ್ಣಗೆಡಿಸಿದನಸುರಮರ್ದನನು (ನಿಭಾಗ. ೧೧-೦-೭). ೨. ದೃಢತೆಯನ್ನು ಕೆಡಿಸು ; ಚಂಚಲಗೊಳಿಸು : ಭರದಿ ತೊಲಗಿಸಿ ಲಜ್ಜೆ ತಿಣ್ಣಗೆಡಿಸುತಮವನನುಱೆ ಕಲೆಯ ತೋಳ್ಗಿಯಾಲಿಂಗಿಸುವ ಬಾಲೆಯಂ ತರವಱಿದು ಚದುರನೊಂದುವ ತೆಱಂಗಂಡು ನಡೆಯರ್ ಮುಂದಕಲ್ಲಿಂದವು (ಚತುಪು. ೧-೭-೩೭). [ ತಿಣ್ಣಗೆಡು + – ಇಸು$_3$ ]

**ತಿಣ್ಣಗೆಡು** (ಕ್ರಿ). ೧. ಭಾರ ಕುಗ್ಗು ; ಭಾರವಿಲ್ಲದಾಗು ; ತೂಕ ಕಳೆದುಕೊಳ್ಳು. ‘ತಿಣ್ಣಗೆಡಿಸು’ ಪರಾ. ೨. (ಆಲಂ) ಶಕ್ತಿಗುಂದು ; ದುರ್ಬಲವಾಗು; ಕ್ಷೀಣಿಸಂ: ಬಣ್ಣವಳಿದಮರ್ದುಣಿಸನುಳಿದು ಜಾಣ್ಣುಡಿಯೆಡಹಿ ತಿಣ್ಣಗೆಟ್ಟು (ಉದ್ಯದೀ. ೪-೪೦) ; ಕಣ್ಣೀರ್ಗಳಂ ಸುರಿವುತಂ ದಂಪತಿಗಳು ಬೆಳರ್ವಣ್ಣಮೆಯ್ಯನ ನೆನೆವುತಾಲೋಚನಂಗೈದು ತಿಣ್ಣಗೆಟ್ಟಿರುವ ಸಮಯದೊಳು (ಪ್ರಭುಪು. ೩-೧೧೨). [ತಿಣ್ಣ + ಕೆಡು$_1$]

**ತಿಣ್ಣಗೊಂಬು** (ನಾ). ದಟ್ಟವಾದ ಕೊಂಬೆ : ತಿಣ್ಣಗೊಂಬಿನೊಳ್ ಬಣ್ಣವಳಿಯದ ಪಣ್ಣಂ ತಿಂದು ತಣ್ಣನೆ ತಣಿದು (ಗಿರಿಜಾ. ೧-೧೨೮ ವ).

[ ತಿಣ್ಣ + ಕೊಂಬು$_1$ ]

**ತಿಣ್ಣಜವ್ವನ** (ನಾ). ೧. ತುಂಬುಜವ್ವನ ; ಪೂರ್ಣಯೌವನ ; ತುಂಬಿದ ಪ್ರಾಯ : ತಿಣ್ಣಜವ್ವನದ ಚಿಂಚಿತಿಯರ ಮೆಯ್ ಕಾರ್ಬಣ್ಣದ ಚೆಲ್ವ ನೋಳ್ಪರಿಗೆ ಹುಣ್ಣಮೆಯಾಳ್ದ ತನ್ನೆಸಕವನವರೆಸಳ್ಗಣ್ಗೊಳು ಸಾರ್ಚಿದಂತಿಹುದು (ಮೋಹತ. ೧೯-೭೨). ೨. ತೋರವಾದ ಮೊಲೆ ; ತುಂಬುಸ್ತನ : ಚಿತ್ರ ಪೆಣ್ಣ ಕಂಡಿನಿತು ಭ್ರಾಮಿಸಿದೆ ತಿಣ್ಣಜವ್ವನವೆತ್ತ ಕೆಳದಿ ಕೇಳ್ ನಿಮ್ಮನು ಕಣ್ಣಾಱೆ ಕಂಡರಿನ್ನೆಂತೋ (ಮೋಹತ. ೩೧-೨೪).

[ ತಿಣ್ಣ + ಜವ್ವನ ]

**ತಿಣ್ಣನೆ** (ಅ). ೧. ಚೆನ್ನಾಗಿ ; ಹೆಚ್ಚಾಗಿ ; ವಿಶೇಷವಾಗಿ ; ಅಧಿಕವಾಗಿ : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟಿತು (ಪ್ರಭುಲಿಂ. ೬-೮). ೨. ರಭಸವಾಗಿ ; ತ್ವರೆಯಾಗಿ ; ಕೂಡಲೆ : ಮುಂದದಿನುಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದಂತು ಮಾಡಿದ್ಯೆ ದೂರ್ತಿಂದಂ (ಧರ್ಮಾಮೃ. ೯-೧೩೬) : ಉಣ್ಣದರೂರೊಳಗಣ ದೇವಿಯರಂ ಸುಣ್ಣಸಿದಸಿಧಾರಾಪೂರ್ವಕದಿಂ ತಿಣ್ಣನೆ ಕೈಗೊಡಿಸಿ ಭೂತಮುಮಂ ಬಿರ್ದುವೊಲೆಯ್ದಿಸುವಂ (ಜಯಚಾ. ೬-೯). ೩. ಬಿಗಿಯಾಗಿ ; ಗಟ್ಟಿಯಾಗಿ; ದೃಢವಾಗಿ : ನಿನ್ನ ಮೋಹವು ಎಂಬ ಉನ್ನತದ ಪಾಶದಲಿ ತಿಣ್ಣನೇ ಬಿಗಿದಿರ್ಪ ನುಸುಳುವರಾರು (ಸುಸಾರ. ೧೫-೩). [ ತಿಣ್ಣ + - ಅನೆ$_1$ ]

**ತಿಣ್ಣಮಾತು** (ನಾ). ತೀಕ್ಷ್ಣವಾದ ಮಾತು ; ಕಠೋರವಾದ ನುಡಿ ; ಉಗ್ರವಚನ : ಕಣ್ಣೊಳುರಿಯ ಸೂಸುತಣ್ಣನಾಡಿದ ಕಡುತಿಣ್ಣಮಾತಿಗೆ ನಸುನಗುತ (ಕೃಷ್ಣಸಾಂ. ೦೨-೧೩೦). [ ತಿಣ್ಣ + ಮಾತು$_1$ ]

**ತಿಣ್ಣಮಿಡು** (ಕ್ರಿ). ಬಲವಾಗಿ ಹೊಡೆ : ಅವನ ಮರೂಥಮನೆ ತಿಣ್ಣ ಮಿಟ್ಟೆಪ್ಪಡೆ (ಪಂಪಭಾ. ೧೨-೧೪೯). [ ತಿಣ್ಣಂ + ಇಡು$_1$ ]

**ತಿಣ್ಣಮೊಲೆ** (ನಾ). ೧. ದೊಡ್ಡ ಮೊಲೆ ; ಪೀನಕುಚ ; ಗುರುಕುಚ : ತಿಣ್ಣಮೊಲೆಗಳ್ಪುದಳೆ ಬೆನ್ನ ಸೋರ್ಮುಡಿಯುಲೆಯೆ (ಕೃಮಿಭಾ. ೮-೧೮). ೨. ಬಿಗಿಯಾದ ಮೊಲೆ ; ಬಿಗಿಯುವ ಕುಚ : ತಿಣ್ಣಮೊಲ ಬಣ್ಣಡರ ಕಾಪ್ಮಂದಗತಿಗಲಸೆ (ಕೃಮಿಭಾ. ೧೮--೩೪). [ ತಿಣ್ಣ + ಮೊಲೆ$_1$ ]

**ತಿಣ್ಣವಡೆ** (ಕ್ರಿ). ಅತಿಶಯವನ್ನು ಹೊಂದು ; ಆಧಿಕ್ಯವನ್ನು ಪಡೆ : ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊಕ್ಕರಿಸುತೊಪ್ಪಿದುವು (ಕಂನವಿ. ೬-೬೭) ; ಕಣ್ಣಸೊಳಗೆ ಖಾನ ಕನಸಿನೊಳಗೆ ಖಾನ ಬಣ್ಣಿಸೆ ಮನದೊಳು ಖಾನ ತಿಣ್ಣವಡೆದ ಖಾನನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವೆಲ್ಲ (ಕಂನವಿ. ೦೧-೩೪). [ ತಿಣ್ಣ + ಪಡೆ$_1$ ]

**ತಿಣ್ಣವಲೆ** (ನಾ). ಮೃಗಗಳನ್ನು ಹಿಡಿಯಲು ಬಳಸುವ ಒಂದು ಬಗೆಯ ಭಾರವಾದ ಬಲೆ: ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ ಪೊಚ್ಚಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೦೮). [ ತಿಣ್ಣ + ಬಲೆ$_1$ ]

**ತಿಣ್ಣವೆಳಗು** (ನಾ). ದಟ್ಟವಾದ ಬೆಳಕು ; ಹೆಚ್ಚಾದ ಬೆಳಕು : ಬಂದುಗೆಯ ಬಣ್ಣದ ತಿಣ್ಣವೆಳಗುಂ ಕಣ್ಣ ಬೆಳಗುಂ ತಮ್ಮೊಳಿರ್ಪುಡಿಸೆ (ಗಿರಿಕ. ೭-೦೧ ವ). [ ತಿಣ್ಣ + ಬೆಳಗು$_3$ ]

**ತಿಣ್ಣಸಂಕಲೆ** (ನಾ). ೧. ಭಾರವಾದ ಸಂಕೋಲೆ ; ಹೊರೆಯಾದ ಬೇಡಿ. ೨. (ಅಲಂ) ಅತಿ ನಿರ್ಬಂಧ ; ಕಟ್ಟೊತ್ತಾಯ : ಕಣ್ಮಲಿವರ ಕಪ್ಪ ದೊಳ್ತೊಡರ್ದು ಶಿಷ್ಯತೆಯಿಂ ಕಲೆಗಲ್ವ ತಿಣ್ಣಸಂಕಲೆಗೆ ಬೆಮರ್ತು ಸುಯ್ವರದೆ ! (ಸಂಸಪ. ೫-೭). [ ತಿಣ್ಣ + ಸಂಕಲೆ ]

**ತಿಣ್ಣೆ** (ನಾ). ಒಂದು ಊರಿನ ಹೆಸರು : ತೆಂಕನೋಡಿ ಕಿಟರ ತಿಂಣೆ ವೆಣ್ಣೆಗಗಾಲನಿ ಎರೀಟ್ಟಿಸೆಣ್ಬಾರಿ ಭೂಮಿನ್ದ ಪೇರೊಟ್ಟಿಯ ತುಟ್ಟಿಲೆ ಎರವಡಿಯ (ಎಕ. III, ನಂಜನ. ೦೨೨-೧೮ : ಕೃಶಾ). [ ? ]

**ತಿಣ್ಣಿತು** (ಗು). ೧. ಭಾರವಾದ. ೨. ದೊಡ್ಡದಾದ. (ನಾ). ೩. ದೊಡ್ಡದು: ತಿಣ್ಣಿತಾದುವು ಮೊಲೆ ಮುಡಿ ಪೊಚ್ಚವಾರ್ಗಳು ಸುಣ್ಣಿತಾದುವು ಕದಪುಗಳು (ನಾಗಕು. ೫-೩೬). [ < ತಿಣ್ಣ ]

**ತಿಣ್ಣಿಸು, ತಿಣ್ಣೈಸು** (ಕ್ರಿ). ೧. ಹೆಚ್ಚಾಗು ; ಉಲ್ಬಣಿಸು : ಸಣ್ಣವನು ಸಲೆ ಮಕ್ಕಳಾಟದಿ ಮಣ್ಣನೊಯ್ಕ ರಸಾತಲಕೆ ಕಡು ತಿಣ್ಣಿಸಲ್ಕಮರರಿಗೆ ಭಯ (ಪ್ರಹ್ಲಾಚ. ೧೫-೬೫). ೨. ತುಂಬು ; ವ್ಯಾಪಿಸು : ನಯನದಿ ತಿಣ್ಣಿಸಿದವಶ್ರುಗಳು (ಜರಾಮೂ. ೩೭-೩೮) : ಕಣ್ಣು ಮಾನ ಕೊಂಬನಿತು ಅವನಿಯ ತಿಣ್ಣಿಸಿಹ ಬಲ (ಜರಾಮೂ. ೨೨೦-೬). ತಿಣ್ಣೈಸು : ೩. ದಪ್ಪವಾಗು ; ದೊಡ್ಡದಾಗು : ಗುಣವತಿಯ ತೆಳ್ವಟ್ಟ [ ತೆಳ್ವೊಟ್ಟೆ ] ನವಮಾಸಂಬರಂ ತಿಣ್ಣೈಸಿರಲ್ (ಮದೀಪು. ೩-೮). [ ತಿಣ್ಣ + - ಇಸು$_3$ ]

**ತಿಣ್ಣೈಸು** 'ತಿಣ್ಣಿಸು' ನೋ.

**ತಿಣ್ಪು, ತಿಂಪು** (ನಾ). ೧. ಭಾರ ; ಹೊರೆ : ಬಲ್ಮೊಲೆಯ ತಿಣ್ಪಿಂಗೆ ನಡು ಬಳ್ಕೆ (ರಾಮಾಶ್ವ. ೯-೧೦). ೨. ದೊಡ್ಡದಾಗಿರುವಿಕೆ ; ದೊಡ್ಡದು : ಕಡೆದು ಮಾಡಿದುವೆನಿಪ ಪೊಚ್ಚವಾಚಿ ತಿಣ್ಪನಿಂ (ಅಜಿಪು. ೪-೭) : ಬಟ್ಟ ಎರ್ದೆಮೊಲೆಯೋಂ ತಿಣ್ಪೊ ಕಾಯ್ಪುವನ ಬಿಸುಪಿಗೇಂ ಬಿದಿರ್ದಾಗಿ ತಂದಿತ್ತ ಕಟ್ಟಳೆಯ ಮೊಗೆಯೋ? (ಕಾಲೂರ. ೧೨೭-೨೭೦). ೩. ಹೆಚ್ಚಳ; ಅತಿಶಯ; ಹಿರಿಮೆ ; ಮಹತ್ವ: ದಿಟ್ಟತೆಮಳ್ಳನ್ನಗಂ ನುಣ್ಪಂ ತಿಣ್ಪುಮನೊಳಕೊಂಡು . . . ಮಾಡಿದ ವಾಹಳಿಗಳ್ ಮನೋಹರಂ (ಶಾಂತಿಪು ೯-೧೪೩ ವ) ; ಸಿಂಪಿಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣ ದೊಳ್ (ಕಾದಂಬ. ೪೬೨); ಮೃಗರಾಜನ ಶಕ್ತಿತ್ರಯದ ಗುಣ್ಪುಮಂ ಬಾಹು ಬಲದ ತಿಣ್ಪುಮನಬಿದಂ ಬಗೆಯೊಳ್ (ಪಂಚತಂ. ೯೬-೯) ; ಪರವೆ ಕೇಕಿಗಳ ತಾಂಡವಮಂ ನುಣ್ಬರದ ತಿಣ್ಪು ಘನಘೋಷಗಭೀರಂ (ಕಾವ್ಯಾವ. ೭೪). ೪. ದೃಢತೆ ; ಸ್ಥೈರ್ಯ : ಕುಲಗಿರಿಗಳ ಬಿಣ್ಪುಮಂ ಧರಾತಳದ ತಿಣ್ಪುಮಂ . . . ಅವರವರ ದೆಸೆಗಳಿಂ ತೆಗೆದೊಂದು ಮಾಡಿ (ಪಂಪಭಾ. ೧-೧೩೯ ವ) ; ಎಳೆಯೊಳು ಸಾದೃಶ್ಯಮಪ್ಪಂದೆಚಿಗವಿಭುಗೆ ಬಿಣ್ಪಿಂಗೆ ಗುಣ್ಪಿಂಗೆ ತಿಣ್ಪಿಂಗೆಳೆ ಪಾರಾವಾರಮಿಂದ್ರಾಚಳಂ (ಎಇ. XVI, ೬೦-೧೪ : 1081) ; ಕನಕಾದ್ರೀಂದ್ರಕ್ಕಮಂಭೋನಿಧಿಗಮವನಿಗಂ ಪೆಂಪಿನೊಳ್ಗಣ್ಪ ನೊಳ್ತಿಣ್ಪಿನೊಳಂತುಂ ತಾನೆ ಪೋ: ಪಾಸಟಿ (ಎಕ. VIII, ತೀರ್ಥಹ. ೧೯೨-೭ ; 1103). ತಿಂಪು: ೩. 'ತಿಂಪುಗೆಡು' ಪರಾ.

[ < ತಿಣ್ಣ + - ಪು$_2$ ]

**ತಿತಯ** (ನಾ). ಮೂರರ ಸಮುದಾಯ ; ಮೂರು : ತದ್ಭಿತೇ- ತಿತಯಂ, ತ್ರಿತಯಂ (ಶಬ್ದಾನು. ೩೭೬ ಪ್ರಯೋ). [ < ಸಂ. ತ್ರಿತಯ ]

**ತಿತವು** (ನಾ). ಒಂದರಿ ; ಜರಡಿ ; ಸಾರಣಿಗೆ. [ < ಸಂ. ತಿತಉ ]

**ತಿತಿ$_1$** (ನಾ). ಸ್ಥಿತಿ : ಉತ್ಪತ್ತಿ ತಿತಿ ಲಯರಹಿತನೆನಿಪ . . . ಶ್ರೀ ಗುರುವೆ (ಬಸಪು. ೭-೧೩); ಸ್ಥಾನ-ತಾಣ ; ಸ್ಥಿತಿ-ತಿತಿ (ಶಬ್ದಾನು. ೧೪೯ ಪ್ರಯೋ).

[ < ಸಂ. ಸ್ಥಿತಿ ]

**ತಿತಿ$_2$** (ನಾ). = ತಿಥಿ : "ತಿತಿ - ೧. ಸ್ಥಿತಿ, ೨. ತಿಥಿ" (ತದ್ಭಕೋ. ೧೭)

[ < ಸಂ. ತಿಥಿ ]

**ತಿತಿಕ್ಷಾನ್ವಿತ** (ಗು). ೧. ಸಹನೆಯಿಂದ ಕೂಡಿದ ; ಸೈರಣೆಯುಳ್ಳ. (ನಾ). ೨. ತಾಳ್ಮೆಯುಳ್ಳವನು; ಸಹನೆಯಿಂದ ಕೂಡಿದವನು: ಮುನಿದೊಡನೆ ಕೆಳರ್ದು ನುಡಿದನುಜನಂ . . . ತಿತಿಕ್ಷಾನ್ವಿತನನಾಕುಳಂ ನುಡಿಗುಮೆಸೆಯೆ ದಶನದ್ಯುತಿಗಳ್ (ಶಾಂತಿಪು. ೩-೯೦) ; ಗುಣಿ ತಿತಿಕ್ಷಾನ್ವಿತ ನಿರ್ಮಲಚರಿತ ನೆರವನಜಿಯಂ . . . ಎನಿಪನಪ್ಪುದು ಕೆಳೆಯಂ (ಪಂಚತಂ. ೨೯೬-೨).

[ ಸಂ. (ತಿತಿಕ್ಷಾ + ಅನ್ವಿತ) ]

**ತಿತಿಕ್ಷು** (ನಾ). ಸಹನೆಯುಳ್ಳವನು ; ತಾಳ್ಮೆಯುಳ್ಳವನು : ತಿತಿಕ್ಷು ಎಂದರೆ ಸಹನಶೀಲನಾಗಬೇಕು (ಭಾತತ್ತ್ವ. ೫೦೬). [ ಸಂ. ]

**ತಿತಿಕ್ಷೆ$_1$** (ನಾ). ತಾಳ್ಮೆ; ಸೈರಣೆ; ಸಹನೆ : "ಕ್ಷಾಂತಿ ತಿತಿಕ್ಷೆ ಸಹಿಷ್ಣುತೆಯು" (ಪಶ್ಚುಕೋ. ೦೧೨-೮) ; ಪ್ರಾರಬ್ಧಸಿದ್ಧಮಾದ ತಾಪತ್ರಯ ಶೀತೋಷ್ಣಾದಿ ದುಃಖಂಗಳಂ ಸೈರಿಪುದೆ ತಿತಿಕ್ಷೆಯಕ್ಕುಂ (ವಿವೇಕ. ೧೫) ; ಶಾಂತಿಯಿಂ ಸುಖ ದುಃಖವುಭಯವನಿಂತು ಸೈರಿಸುವುದೆ ತಿತಿಕ್ಷೆಯು (ಗಗಿತಾ. ೩-೨೫) : ನನಗಿರಲಿ ಆ ಶಿಕ್ಷೆ ! ಶಿಕ್ಷೆಯೆಂದರಿಯದಿರ್ ಶಿಕ್ಷೆಯಲ್ತು, ತಿತಿಕ್ಷೆ (ಶ್ರೀರಾಮಾ. ೭೭೮-೨೮೪). [ ಸಂ. ತಿತಿಕ್ಷಾ ]

**ತಿತಿಕ್ಷೆ$_2$** (ನಾ). ಕುದುರೆಸವಾರಿಯಲ್ಲಿ ಒಂದು ಬಗೆ (?) : ದಾರ ಗತಿ ಲಯ ಪೊಯ್ದು ಕಾಯೆಕ್ಷಂ ತಿತಿಕ್ಷೆ ಓತನೆರಿತುರ(ಗ?) ಸಮಾನಂ . . . ಎಂಬ ಭೇದಂಗಳಿಂದಶ್ವಮನೇಱಲು ರೇಟಿಗನೃಪತಿ ತಾನೆ ಬಲ್ಲಂ (ಮದತಿ. ೧-೨೧). [ ? ]

**ತಿತಿಯ** (ಗು). ಮೂರನೆಯ: ತಿತಿಯಂ, ತೃತೀಯಂ; ಚೌತಂ, ಚತುರ್ತ್ಥಮಿತಿ (ಶಬ್ದಾನು. ೩೭೭ ವ್ಯಾಖ್ಯಾ). [<ಸಂ. ತೃತೀಯ]

**ತಿತ್ತರಬಿತ್ತರಿ** (ನಾ). "ಗಜಬಿಜಿ" (ಕಾನಕೋ. ೩೬). [?]

**ತಿತ್ತಿ** 'ತಿದಿ' ನೋ.

**ತಿತ್ತಿರ** (ನಾ). ಒಂದು ಬಗೆಯ ಹಕ್ಕಿ; ತಿತ್ತಿರಿಹಕ್ಕಿ; ಕವುಜಗ: ಅವನ ಪಂಡಿತಭಾವವನ್ನು ಪ್ರಕಾಶಪಡಿಸುವುದಕ್ಕಾಗಿ ಗೋವು . . . ಜಿಂಕೆ, ತಿತ್ತಿರ, ದೇವತೆ, ನಾಗರಾಜ, ತಪಸ್ವಿ, ಬ್ರಾಹ್ಮಣ ಬಾಲಕರು ಎಂಬ ಹದಿನಾಲ್ಕು ವಿಷಯಗಳನ್ನು ಅವನ ಬಳಿ ತಂದರು (ಬುದ್ಧ.ಜ. ೯೦). [ಸಂ.]

**ತಿತ್ತಿರವಕ್ಕಿ** (ನಾ). = ತಿತ್ತಿರ: "ತಿತ್ತಿರಃ–ತಿತ್ತಿರವಕ್ಕಿ" (ನಾಚಿರಾ. ೧೧೫). [ತಿತ್ತಿರ + ಪಕ್ಕಿ₁]

**ತಿತ್ತಿರಿ, ತುತುರಿ, ತುತ್ತಾರಿ, ತುತ್ತುರಿ, ತುತ್ತೂರಿ** (ನಾ). ೧. ಉದ್ದವಾದ ಒಂದು ಬಗೆಯ ಊದುವ ವಾದ್ಯ; ತೂರ್ಯ: ಬರುದಿನ ಕಹಳೆ ತಿತ್ತಿರಿಗಳಲ್ಲಿಲ್ಲಿ (ಇಹರ. ದೇ. ೩೭-೨೨); ಎಡವಿಡದೆ ಚೀಱಿದವು ಕೋಟಿ ಹೆಗ್ಗಾಳೆಗಳು ಚಿನ್ನತಿತ್ತಿರಿ ಬೊಂಬುಳಿ (ಹರಿಶ್ಚ. ೩-೧೯); ಕಹಳೆಯ ಗೌಱುಗಳ ತಿತ್ತಿರಿಯ ಚಿನ್ನದ ಚೀಱುಗಳ ನಿಡುಗೊಂಬುಗಳ ಚಂಬಕನ ನಿರ್ಘೋಷ ಡೋಱುಗಳೆದುವು (ಶಬರ. ೫. ೨೦-೭); ಹತ್ತು ದಮುಗ ಹತ್ತು ಡೋಳು ಕಹಳೆ ಹತ್ತು ಹತ್ತು ತಿತ್ತಿರಿಯೊಂದು ಭೇರಿ (ಶಬರಸಾಂ. ೯೦-೬೬): ಬೊಂಬುಳಿ ಪಟಹ ಮೃದಂಗ ತಿತ್ತಿರಿ ಕಾಳೆ ಬೆಂಬಳಿಯೊಳು ಗಳಬಳಿಸೆ (ಭರತ. ೪೦-೫೦). **ತುತುರಿ:** ೧. ಕಹಳಾ ಭೇರಿ ನಗಾರಿ ತಮ್ಮಟೆ ತುತುರೀ ಪಣೌರಿ ನೌಪೂರಿಗಳ್ (ಬೀಳವಂ. ೨-೨೭೦); ಕವಿತೆ ಜೀವನ ಸಮರ ಯೋಧರ ತುತುರಿ (೧೪ವಿಂ. ೨೧-೯); ತುತುರಿಯನೂದಿದರೆ ತುಬುಟ ಬಂದೀತೆ? (ಗಾದೆ); ತುತುರಿಗೆ ಮುತ್ತು ಕೊಟ್ಟ ಹಾಗೆ (ಗಾದೆ). **ತುತ್ತಾರಿ:** ೧. ಆ ಕಾಲದಲ್ಲಿ ಕೆಲವರು . . . ಹೆಗ್ಗಾಳೆ ತುತ್ತಾರಿ ಮೊದಲಾದ ವಾದ್ಯಗಳನ್ನು ಮಾಡುತ್ತಲಿರುವವರೂ (ಕೃಷ್ಣಾಶ. ೮೦). **ತುತ್ತುರಿ:** ೧. ಅರೆಚ್ಚರಕೀ ತುತ್ತುರಿ ಬಾನೊಳು ಮೊಳಗುತಿದೆ (ಗಡೀಕ. ೨೪-೩); ವಿಪ್ಲವಮೂರ್ತಿಯ ಕಳ್ಳೊಳಸಂಚನು ತುತ್ತುರಿಯೂದುತ ನೀ ಬಾರ! (ಪಾಂಚಜ. ೨೪-೨೩). ೨. ಗಲಾಟೆ; ಗದ್ದಲ: ತುತ್ತುರಿ ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ ಕಾವ(ವು?) ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಾಳನೀತ (ಸರ್ವಜ. ೪೭-೯೮೪). **ತುತ್ತೂರಿ:** ೧. ತಂಬಟೆ ಹಱೆ ಚಂಬಕ ಮವುರಿ ತುತ್ತೂರಿ ಮುಂಬರಿದೆಸೆವ ನಾನಾವಾದ್ಯಗಳಾಡಂಬರ (ಶಂನವಿ. ೩-೩೮); ತಂಬೂರಿ ತುತ್ತೂರಿಗಳ್ (ಪರ್ಷನ. ೩-೩೧); ದಾಸಯ್ಯನು ಒಂದು ತುತ್ತೂರಿ ಊದಿ ಬವನಾಸಿ ತುಂಬ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಟ್ಟಿಹ. ೬೪).

[ದೇ.॥ ತಮಿ. ತುತ್ತಾರಿ, ತುತ್ತಿರಿ; ಮಲ. ತುತ್ತಾರಿ;
ತುಳು. ತಿತ್ತಿರಿ, ತುತ್ತಾರಿ, ತುತ್ತೂರಿ; ತೆಲು. ತುತಾರ./
ಮರಾ. ತುತಾರೀ. / ಸಂ. ತೂರೀ, ತೂರ]

**ತಿತ್ತಿರಿ₂** (ನಾ). = ತಿತ್ತಿರ: "ಕ್ರಕರ ಕಪಿಂಜಳ ತಿತ್ತಿರಿ ಚಕೋರ ಹಾರೀತ ಕುರವ . . . ಶಾರಿಕಾದಿಗಳ್ ವಿಹಗಜಾತಿಯಕ್ಕುಂ" (ವಸ್ತುಕೋ. ೪೩-೨೦); ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪಕ್ಷಿಗಳನು ಕೊಲುತೆ ಬಹ ಬೇಡರ್ಗೆ ಸಿಕ್ಕದೋಡಿದುದೊಂದೆರಳೆ (ಜೈಮಿಭಾ. ೨೮-೫೨); ಕಂಕಂ ತೊಂಡಿಗಂ ಸೋರೆ ತಿತ್ತಿರಿ ಕೋಕಂ ಪಿಕಳಂ ಬಕಂ ಶಿಖಿ ಶುಕಂ . . . ಚಿಲುಕೂಲಿ ರತ್ನವಿಗ ವಿರ್ಕರ್ಂ ತದ್ವನಾಗೌಘದೊಳ್ (ರಾಜಶೇ. ೫-೩೯); ಗೌಜು ತಿತ್ತಿರಿ ಘೂಕಂ ಶಿಖಿ (ಯಾದವ. ೪-೫೩). [ಸಂ.]

**ತಿತ್ತಿರಿ₃** (ನಾ). ಒಂದು ಬಗೆಯ ಮರ: ಗಿರಿಕರ್ಣಿಕಾ ತಿತ್ತಿರಿಯೆಂಬ ವೃಕ್ಷಗಳು ಫಲವಾಗದೆಯಿರುವ ಮರಗಳು (ಶಾಗಂಧಿ. ೪೨೭-೧೧). [?]

**ತಿತ್ತಿರಿಗಾಳೆ** (ನಾ). ಒಂದು ಬಗೆಯ ಕಹಳೆ: ಕರ್ಣಮಂ ತೆಱೆದು ತಿತ್ತಿರಿಗಾಳೆಯನಾಲಿಸುತ್ತೆ ಪಿಂಡೊಡೆಯದೆ ಕೂಡಿ ಬರ್ಪ ಪಲವಾಕಳನೀಕ್ಷಿಸಿದಂ ನರಾಧಿಪಂ (ಲೀಲಾವ ೫-೧೦೩); ಬೊಂಬುಳಿಯಟ್ಟುಂಗಾಳೆಯ ತಿತ್ತಿರಿಗಾಳೆಗಳ ಕೋಳಾಹಳಮೆತ್ತಂ ಶೀವೃತ್ತಿರೆ (ಶಬರಸಾ. ೮-೩೭); ಲೋಲ ಕರ್ಣವನೆತ್ತಿ ತಿತ್ತಿರಿಗಾಳೆಗಳ ನಿಂದಾಲಿಸುತ . . . ಕಱುಗೂಡಿ ಗೋವನ ಗಾಳಿಗೈತಹ ಗೋವುಗಳ ಸುಕುಮಾರನೀಕ್ಷಿಸಿದ (ಜೀವಂಧ. ೬-೨೩).

[ತಿತ್ತಿರಿ₁ + ಕಾಳೆ (<ಕಹಳೆ)]

**ತಿತ್ತಿರಿವಕ್ಕಿ** (ನಾ). = ತಿತ್ತಿರ: "ತಿತ್ತಿರಃ – ತಿತ್ತಿರಿವಕ್ಕಿ" (ನಾಚಿರಾ. ೧೧೫).

[ತಿತ್ತಿರಿ₂ + ಪಕ್ಕಿ₁]

**ತಿಥಿ** (ನಾ). ೧. ಚಾಂದ್ರಮಾನದ ಒಂದು ದಿವಸ: "ಪಾಡಿವಮುದಾದಿಯನೆ ತಿಥಿ ಪಕ್ಷಕ್ಕೆ ತಿಥಿಯೊಳ್ ಪದಿನಯ್ದಕ್ಕುಂ" (ವಸ್ತುಕೋ. ೦೬-೭); "ನಾಡಿಯಾಱು ವತ್ತಕ್ಕೆ ಒಂದು ತಿಥಿಯಕ್ಕು" (ಸುಂಗರಾ. ೨೦-೯); ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ . . . ನಿಮ್ಮ ಮಾಣದ ನೆನೆವಂಗೆ (ಬಸವ. ೬೧೦); ಅಖಂಡಜ್ಞಾನ ಸತ್ಕ್ರಿಯಾಚಾರಮಯವಾದ ಶರಣಂಗೆ ವಾರ ತಿಥಿ ಲಗ್ನ ವಿಘ್ನಂಗಳಿಲ್ಲ (ಅಖಂಡೇ.೩೧೨-೧೧೨); ಮಾಸಕೆ ಪಕ್ಷವೆರಡು ತಿಥಿ ಮೂವತ್ತುಂ (ಭಾಸ್ಕರ. ೫೨-೨). ೨. ಪಿತೃಗಳು ಗತಿಸಿದ ದಿನ ಮಾತ್ರ ಆ ದಿನದಲ್ಲಿ ಪ್ರತಿವರುಷವೂ ಆಚರಿಸುವ ಶ್ರಾದ್ಧ; ಪಿತೃಕಾರ್ಯ; ತದ್ದಿನ: ತಿಥಿ ಮೇಲೆ ತಿಥಿ ಬರಲೊ ಗೋವಿಂದ (ಗಾದೆ).

**ತಿಥಿಮಾಡು**=೧. ಶ್ರಾದ್ಧ ಮಾಡು. ೨. ಕಷ್ಟಕೊಡು; ಹಿಂಸೆಪಡಿಸು: ಇವತ್ತು ನಿನ್ನ ತಿಥಿಮಾಡಿಬಿಡುತ್ತೇನೆ (ರೂಢಿ). [ಸಂ.]

**ತಿದಂಡಿ** (ನಾ). (ವಾಗ್ದಂಡ, ಮನೋದಂಡ ಮತ್ತು ಕಾಯದಂಡ ಸೂಚಕವಾದ) ತ್ರಿದಂಡವನ್ನು ಹಿಡಿಯುವ ಸಂನ್ಯಾಸಿ.–ಯತಿ: ತಿದಂಡಿ, ತ್ರಿದಂಡಿ; ತಿಗುಂಡಂ, ತ್ರಿಕುಂಡಂ (ಶಬ್ದಾನು. ೩೭೩ ಪ್ರಯೋ).

[<ಸಂ. ತ್ರಿದಂಡಿನ್]

**ತಿದಿ, ತಿತ್ತಿ** (ನಾ). ೧. ಬೆಂಕಿಗೆ ಅಥವಾ ಊದುವ ವಾದ್ಯಗಳಿಗೆ ಗಾಳಿಯನ್ನೂದುವ ಚರ್ಮದ ಸಲಕರಣೆ: "ದೃತಿ ಎಂಬುದು ತಿದಿ" (ಹಲಾಯು. ೦೨೬-೭೯); ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಪಂಪಭಾ. ೧೨-೦೫೧); ತನ್ಮುಖ ಯುಗದಿಂದರುಣಜಳಮುಣ್ಕಿ ತಿದಿಗಳಿಸಿರದೊತ್ತುವ ಕಮ್ಮಱು ಬೊಲಿರ್ದಂ ಭೀಮಂ (ನೇಮಿಪು. ೧೨-೦೫೮); ವಿಶ್ವಾಸಘಗಂ ತಿದಿಗಳೊಳ್ ನಿಂದಿಸುವುದು ಯುದ್ಧದೊಳ್ . . . ಅರ್ಥವಾದಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಶಕು. ೧-೨೨ ವ); ಆಕೆಯ ತಿದಿ ಉಬ್ಬಿದಂತೆ ಉಬ್ಬಿರುತ್ತಾಳೆ (ಮೋಹಿನೀ. ೨೯). ೨. ಚರ್ಮ; ತೊಗಲು: ತಿದಿಯಾಗಿದು ಕೊಟ್ಟಿನೊಡವುಟ್ಟಿದ ಕವಚವನಮರಪತಿಗೆ (ಶಂಪಭಾ. ೦೨-೦೦೯); ಕಳ್ಳರ ಕೊಲ್ಲು ಶಿವ ತಿದಿಯನುಗಿಯೆಂಬ ಕಳಕಳರವವ ಫಲ್ಗುಣೆಯ ಭಟರ ತಿಂತಿಣಿಯೊಳು (ಹರಿಶ್ಚ. ೦೩-೫); ಅಡಿಯಿಂದಂ ತಿದಿಯನುಗಿಯುತ್ತಿರೆಯುಂ ನಡೆಯಱದೆರ್ದೆಯಂ ಬಗಿಯುತ್ತಿರೆಯುಂ (ಬಂಹರಿ. ೧೦-೯ ರಗಳೆ); ಅಹಿತರ ತಿದಿಯ ಸುಲಿವೆವು ಬೆಸಸು ನೇಮವನು (ಕುಮಾವ್ಯಾ. ೨-೪೩); ಎಲವೊ ಕವಿ ಕವಿ ಕೊಲ್ಲು ತಿದಿಯನು ಸುಲಿಯೊ (ನಿಭಾಗ. ೭-೪-೩೬). ೩. ನೀರು, ಎಣ್ಣೆ ಮೊದಲಾದುವನ್ನು ತುಂಬುವ ಚರ್ಮದ ಚೀಲ; ಪಕಾಲಿ: ಡವಿಗೆಯಯೆರಡೂ ತಿದಿಗಳನ್ನು ಇಬ್ಬಿಬ್ಬರು ಬೋಯಿಗಳು ಪಲ್ಲಕ್ಕಿಗಳಂತೆ ಹೊರುವರು (ಕಥಾಗ. ೫೭). **ತಿತ್ತಿ:** ೧. ತಿತ್ತಿಗಳ್ ಮೊರೆಯುತ್ತೇನು ಸಿರಿಕ್ಕವೇ (ಸೋಮೇಶ. ೧೮); ತುತ್ತು ತುತ್ತಿಗೆ ಹೊಟ್ಟೆ ತಿತ್ತಿಯಂತಾಗುವದು ತುತ್ತ ಅರಗಳಿಗೆ ತದೆದಿಹರೆ ಹೆಡೆಹಾವು ಹುತ್ತಬಿಟ್ಟಂತೆ (ಸರ್ವಜ್ಞ. ೨೦೦೪). ೨. ತಿತ್ತಿಯ ಹಿಡಿದ ಮಾದಿಗನಿಗೆ ಹೊತ್ತಿಹ ಮೂಗಿನ ನಾತ ನಿಶ್ಚಯ ಉಂಟೇ ಇತ್ತಣವರಿಗಲ್ಲದೆ (ಮೋಳಿಮಾ. ೪೭-೧೯೩). ೩. ತಿತ್ತಿ ಸಿದ್ದಿಗೆ

ತೊಗಲ್ವೇರಿನೊಳಗೆ ಬಂದತ್ತು ಗಂಗಾಸಾಗರವು (ಶಂರಾಸಾಂ. ೧೯-೧೧); ನೀರಿನ ತಿತ್ತಿಯನ್ನು ತಂದಳು (ದಾಂಅ್. ೫೫೭). ೪. ಚೀಲ; ಮೂಡೆ: ದಿವಿಜರಂ ಮೇಲಕಡರದಂತಿಱಿದಿಱಿದು ನೂಂಕುವರ್ ಹಾಯ್ಕುವರುವುರಿವ ಮದ್ದಿನ ತಿತ್ತಿಯಂ (ಜಲಪು. ೭೨-೪೩). ೫. ಒಂದು ಬಗೆಯ ವಾದ್ಯ: ರಾಗಗಳ ವೇದ್ಯಗಾಣಿಸಿದರು ತಿತ್ತಿ ದಂಡಿಗೆ ಶ್ರುತಿ ಹೃದ್ಯವಾಗಿರೆ ಹೊಸತೆನಿಸಿ (ಭರತ. ೧೨-೪೧). [<ಸಂ. ದೃತಿ]

**ತಿದಿಯುಗಿ** (ಕ್ರಿ). ತೊಗಲನ್ನು ಉಚ್ಚು; ಚರ್ಮವನ್ನು ಸುಲಿ: ಅಂತು ತನ್ನ ಸಹಜ ಕವಚವಮಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡೆ (ಪಂಪಭಾ. ೦-೧೦೨ ವ); ಆಪಾದಮಸ್ತಕಂಬರಂ ವ್ಯತ್ತಿಸಿ ಪತ್ತಿ ತಿದಿಯುಗಿಯು[ಪಾಠಾಂ. ಗುರೊ]ತ್ತೆ ಕೇಸುರಿಯ ಬಣ್ಣವಾಗೆ ಕರವೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ (ಅಜಿಪು. ೧೦-೧೦ ವ); ಕತ್ತರಿಯಿಂದರಿವ ಕಾವಲೆಯೊಳಿಕ್ಕಿ ಕರಿವ ತಿದಿಯುಗಿವ . . . ತತ್ತಱದಱವ ಪಲತೆಱದ ದಂಡನೆಗಳುಂ (ವರ್ಧಪು. ೦೦-೪೭ ವ); ತಿದಿಯುಗಿದು ಕೆದಱ ಕೊಳಗುಂದಿನೆಣ್ಣೆಯೊಳರ್ದಿ ತೆಗೆದು (ಶಾಸ್ತ್ರಟೀ. ೩-೩೭). [ತಿದಿ + ಉಗಿ$_1$]

**ತಿದಿಯುಸಿರ್** (ನಾ). ಚರ್ಮದ ಚೀಲದಿಂದ ಹೊರಹೊಮ್ಮುವ ಗಾಳಿ: ಮೆಯ್ಯಿದಿ ನೀಳ್ದ ಸುಯ್ಯುದಿಯುಸಿರ್ವಿರಹಜ್ವರದೇಟ್ಗೆ ಕಿಚ್ಚು (ಶೃಂಗಾರ. ೪-೫೪); ಉದಯಿಸೆ ಕೋಪವಹ್ನಿಯುರಿಗಣ್ಗಳಗುರ್ವಿಸಿ ನಾಸಿಕಾಗ್ರದಿಂ ತಿದಿಯುಸಿರಂತೆ ತೀಕ್ಷ್ಣಮುಸಿರುಣ್ಮೆ (ಪಂಚಾಸೇ. ೩-೦೪೧).
[ತಿದಿ + ಉಸಿರ್$_2$]

**ತಿದಿಯೂದು** (ಕ್ರಿ). ೧. ತಿದಿಯನ್ನು ಒತ್ತಿ ಗಾಳಿ ಬರುವಂತೆ ಮಾಡು; ತಿದಿಯನ್ನು ಒತ್ತು. ೨. (ಆಲಂ) ಪ್ರೋತ್ಸಾಹಿಸು; ಪುಷ್ಟಿಕೊಡು: ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ. ಅರ್ಧಾಂಗಿ ತಿದಿಯೂದಿದಳು (ಕುರುಕಾ. ೧೫೨). ೩. (ಆಲಂ) ಜೋರಾಗಿ ಅಳು; ಸದ್ದುಮಾಡುತ್ತಾ ಅಳು: ನಿನಗೇನಾಯಿತು ತಿದಿಯೂದಲಿಕ್ಕೆ (ರೂಢಿ).
[ತಿದಿ + ಊದು$_1$]

**ತಿದಿಯೊತ್ತು** (ಕ್ರಿ).=ತಿದಿಯೂದು ೧: ಆಸ್ಯದಿನುಗುವ ರಕ್ತಮುರಿಯೆನೆ ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ (ಭಾಷಾಭೂ. ೧೫೭ ಉದಾ); ಸೈನಿಕನೊಬ್ಬ . . . ಸಾವೋವರ್ (ಬೆಂಕಿಗೂಡಿನ ವ್ಯವಸ್ಥೆಯಿರುವ ರಷ್ಯಾದೇಶದ ಟೀಪಾತ್ರೆ) ನಳಿಕೆಯನ್ನೊಂದು ಕಾಲಿನಲ್ಲಿ ತಿದಿಯೊತ್ತುತ್ತ ನಿಂತಿದ್ದನು (ಪುನರು. ೫೧೦). [ತಿದಿ + ಒತ್ತು$_1$]

**ತಿದ್ಗಡಿ** (ನಾ). (ಮನಸ್ಸನ್ನು) ತಿರುಗಿಸುವಿಕೆ; ತಿದ್ದುವಿಕೆ. 'ತಿದ್ಗಡಿಗೈ' ಪರಾ. [P ಇದು 'ತಿದ್ದುಗಡೆ' ಎಂಬ ಶಬ್ದವನ್ನು ಛಂದಸ್ಸಿಗಾಗಿ ಬದಲಾಯಿಸಿದ ರೂಪವಿರಬಹುದು.]

**ತಿದ್ಗಡಿಗೈ** (ಕ್ರಿ). (ಮನಸ್ಸನ್ನು) ತಿರುಗಿಸು; ತಿದ್ದು: ಮಲ್ಲನುವ ಯುಕ್ತಿಯಲಿ ಗುಣವತಿಗೆಲ್ಲ ತಿದ್ಗಡಿಗೈದು ಸುತ ಗಳದಲ್ಲಿ ಲಿಂಗವ ಕಟ್ಟಿಸಿ ದರಿನ್ನಾಯ್ತು ಕಲ್ಯಾಣ (ಬಿಜ್ಜಳ. ೯೩-೯).
[ತಿದ್ಗಡಿ + ಗೈ (<ಕೆಯ್$_1$)]

**ತಿದ್ದಾಣಿಕೆ** (ನಾ). ತಿದ್ದುವಿಕೆ; ಸರಿಪಡಿಸುವಿಕೆ: ಆದರೆ ಆ ತಿದ್ದಾಣಿಕೆಯಿಂದ ಮೂಲಕೃತಿ ವಿಕಾರಗೊಳ್ಳಬಾರದು (ಸಾಹಿಪ್ರ. ೧೨). 'ಸಾಕಾಣಿಕೆ', 'ಹೊಂದಾಣಿಕೆ' ಪರಾ. P ಇದು ಬಹುಶಃ 'ತಿದ್ದುವಣಿಕೆ' ಆಗಿರಬಹುದು.
[ತಿದ್ದು$_1$ (<ತಿರ್ದು$_1$) + - ಅಣ + - ಇಕೆ]

**ತಿದ್ದಿಕೆ** (ನಾ). ಒಪ್ಪಗೊಳಿಸುವಿಕೆ; ಸರಿಪಡಿಸುವಿಕೆ; ತಿದ್ದುವಿಕೆ: (ಕ).
[ತಿದ್ದು$_1$ (<ತಿರ್ದು$_1$) + - ಇಕೆ]

**ತಿದ್ದಿಸು** 'ತಿರ್ದಿಸು' ನೋ.

**ತಿದ್ದು$_1$** 'ತಿರ್ದು$_1$' ನೋ.

**ತಿದ್ದು$_2$** 'ತಿರ್ದು$_2$' ನೋ.

**ತಿದ್ದುಗಡೆ** (ನಾ). (ಮನಸ್ಸನ್ನು) ತಿದ್ದುವಿಕೆ. 'ತಿದ್ಗಡಿ' ಪರಾ.
[<ತಿರ್ದು$_1$]

**ತಿದ್ದುಗಾರ** (ನಾ). ಸರಿಪಡಿಸುವವನು; ಪರಿಷ್ಕರಿಸುವವನು; ತಿದ್ದುಪಡಿ ಮಾಡುವವನು: ಮೂಲಕ್ಕೆ ಸರಿಯಾಗಿ ನಕಲನ್ನು ತಿದ್ದುವ ಕೆಲವರು ಸಂನ್ಯಾಸಿಗಳೂ ಇದ್ದರು; ಅವರನ್ನು ತಿದ್ದುಗಾರರೆಂದು (Correctors) ಕರೆಯುತ್ತಿದ್ದರು (ಕನ್ನಸಂ. ೨೧).
[ತಿದ್ದು$_2$ (<ತಿರ್ದು$_2$) + - ಕಾರ$_1$ (< - ಕಾಱ)]

**ತಿದ್ದುಪಡಿ** (ನಾ). ಸುಧಾರಣೆ; ತಿದ್ದುಪಾಟು; ಸರಿಪಡಿಸುವಿಕೆ: ನಿಮ್ಮ ತಿದ್ದುಪಡಿಯು ಮೂಲಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾಗುವುದಲ್ಲ! (ನಡರಾ. I, ೫೭೫); ಹಲವು ಪ್ರತ್ಯಂತರಗಳು ಕಾಲಕ್ರಮದಲ್ಲಿ ಲಿಖಿತವಾಗುವಾಗ ತಿದ್ದುಪಡಿಗಳೂ ಹೊಸಪಾಠಗಳೂ ಸ್ವೀಕೃತವಾಗಿ ಮೊದಲು ಬರೆದಿದ್ದುವು ತ್ಯಾಜ್ಯವಾಗುತ್ತವೆ (ಕನ್ನಸಂ. ೬೫): ಭಾಷಾಂತರಕಾರ್ಯವು ಪೂರ್ತಿಯಾಗುವಷ್ಟರಲ್ಲಿ ಭಾರತದ ಸಂವಿಧಾನವು ತಿದ್ದುಪಡಿಯಾಯಿತು (ಭಾರಾವಿ. ೬೮೫೪). [ತಿದ್ದು$_2$ (<ತಿರ್ದು$_2$) + - ಪಡಿ$_3$]

**ತಿದ್ದುಪಡೆ** (ನಾ). ತಿದ್ದುಪಾಟು; ಸರಿಪಡಿಸುವಿಕೆ: ಬರೆದ ಮುಖವನ್ನೇ ಮತ್ತೆ ಬರೆಯಲಾಗಿತ್ತು. ಒಂದರಕ್ಕಿಂತ ಒಂದು ತಿದ್ದುಪಡೆಯಾಗಿದ್ದವು (ರಂಗರೂ. ೧೦೬); ಅವನ್ನೆಲ್ಲಾ ನಾಶಮಾಡಬೇಕೆಂಬುದೇ ನನ್ನ ವಿಚಾರದ ತಿದ್ದುಪಡೆ (ಅಮಗಾಂ. ೧೩); ತಿದ್ದುಪಡೆಯು ಅವಶ್ಯವೆಂದು ರತ್ನಾಕರವರ್ಣಿಯ ಅಭಿಪ್ರಾಯವಾಗಿದೆ (ನವ್ಯಕಾ. ೧೦೫).
[ತಿದ್ದು$_2$ (<ತಿರ್ದು$_2$) + - ಪಡೆ$_6$]

**ತಿದ್ದುಪಾಟು**(ನಾ). ೧.=ತಿದ್ದುಪಡಿ: ಭಕ್ತರಿಗೆ ಧರ್ಮೋಪದೇಶ ಮಾಡುತ್ತ ವೀರಶೈವರ ಆಚಾರ, ವಿಚಾರ, ನಡೆನುಡಿಗಳನ್ನು ತಿದ್ದುಪಾಟು ಮಾಡುತ್ತಿದ್ದರಿ (ಗುರುದ. ೧೯): ವಿಲಾಯಿತಿ ಮೊದಲಾದ ತಿದ್ದುಪಾಟುಳ್ಳ ದೇಶಗಳಲ್ಲಿ ತಾವ್ರುದ ತಗಡುಗಳನ್ನು ಮನೆಗಳ ಮೇಲೆಯೂ ಹೊಚ್ಚುತ್ತಾರೆ (ಮುಂಬಯಿ. ೪-೧೩೬); ಪ್ರಚಲಿತವಿದ್ದ ಲಕ್ಷಣಗಳಲ್ಲಿ ಅಗತ್ಯವಿದ್ದ ತಿದ್ದುಪಾಟುಗಳನ್ನು ಮಾಡಿದನು (ತತ್ವಪ್ರಾ. ೨೯೩). ೨. ಪಳಗಿಸುವಿಕೆ.
[ತಿದ್ದು$_2$ (<ತಿರ್ದು$_2$) + - ಪಾಟು$_2$]

**ತಿದ್ದೋಲೆ** (ನಾ). ಒಪ್ಪೋಲೆ; ಶುದ್ಧಿಪತ್ರ: ತಿದ್ದೋಲೆ; ಶುದ್ಧಿಪತ್ರ (Corrigendum. ಇಂಕನಿ.). [ತಿದ್ದು$_2$ (<ತಿರ್ದು$_2$) + ಓಲೆ]

**ತಿನ್, ತಿನು, ತಿನ್ನು** (ಕ್ರಿ). ತಿಂಬ (ವರ್ತಕೃ). ೧. (ಆಹಾರವನ್ನು) ಸೇವಿಸು; ಭುಂಜಿಸು; ಭಕ್ಷಿಸು; ಉಣ್ಣು: "ತಿನ್ - ಖಾದನೇ" (ಶಮದಿ): ಗೃಹ ಕೋಕಿಲಂಗಳೊಂದೊಂದಂ ಒಂದೊಂದು ಕಾದಿ ತಿನೆ (ಪಾಪುಪು. ೨೦-೧೨); ಪಕ್ಕಿಗಳಲ್ಲಿ ತಿಂದುಬಿದ ನೆಲ್ಲಳ ನುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಗಳಿನಾಯ್ದನಿಗಿಕ್ಕುಪನಟ್ಟಿಱಿಂದೆ (ಕಾದಂಪೂ. ೧೩೬); ತಿಂಬರನಲ್ಲದೆ ಕುಱಿ ಮೆಚ್ಚದು (ಅಜಿಪು. ೨-೬೪); ಅದಱಿನೆನಗಂ ಕೊಲ್ವುದುಂ ತಿಂಬುದುಂ ಧರ್ಮಮಲ್ಲದೆ ಪೆಱತು ಧರ್ಮ ಮಾವುದುಮಿಲ್ಲ (ಪಂಚತಂ. ೬೧-೦೩); ಪಟ್ಟಿರ್ದ ನಾಯ ನಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದದು ತಿನೆ (ಧರ್ಮಾಮೃ. ೨-೫೭); ಹೊಲಸು ತಿಂಬುವನೇ ಹೊಲೆಯ (ಬಸವ. ೫೪೦); ತಿರುಳನು ತಿಂಬಾಸೆ ನಿನಗಿಹುದಾದರೆ ಚಿಪ್ಪನು ಒಡೆಯಲೆ ಬೇಕು (ಇಂಜಾಪ. ೨೧೭-೬೮). ೨. ಕೊಲ್ಲು; ನಾಶಮಾಡು: ನಿಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿ ತಿಂಬುದುಂ ಕನಸುಗಂಡು ಪೇಟ್ಟುಂ (ವಡ್ಡಾರಾ. ೧೧೦-೦೦); ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟಿ ತಿಂಬುವೆ (ಪಂಪಭಾ.೧೧-೨೧); ತಮ್ಮ ಬುದ್ಧಿ ತಮ್ಮನೆ ತಿಂದಿತ್ತು ನಿಮ್ಮನೆತ್ತ ಬಲ್ಲರು (ಅವಹಿಂ. ೬೩-೩೨೪); ಡೊಂಬಿಗರ ಡಾವರಿ ಗರಿವದಿರ ತಿಂಬೇನೀಗಳೆ ತರುಣ ಕೇಳೆನುತಂಬುಜಾಕ್ಷಿಯು ಸಂತವಿಟ್ಟನು

